॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೩೦

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1953

|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೩೦

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1953

# ಮುನ್ನುಡಿ

ಶ್ರೀ ಶಿವರಹಸ್ಯದ ಹನ್ನೆರಡನೆಯ ಅಂಶವು ಸಂಪೂರ್ಣವಾಗಿ ಈ ಭಾಗದಲ್ಲಿ ಅಚ್ಚಾಗಿದೆ. ಇದರಲ್ಲಿ ಪ್ರತಿಯೊಂದು ಅಂಶಕ್ಕೂ ಈಶ್ವರನ ನಾಮಗಳನ್ನೇ ಸಂಕೇತವನ್ನಾಗಿಟ್ಟು ಬರೆದಿರುವರು. ಅದರಂತೆ ಈ ದ್ವಾದಶಾಂಶವು ಈಶಾನ ನಾಮಕವೆನಿಸಿದೆ. ಇದರಲ್ಲಿ ದಾಕ್ಷಾಯಣಿಯು ಪತಿಗಾದ ಅವಮಾನವನ್ನು ತಾಳಲಾರದೆ ಯೋಗಾಗ್ನಿಯಿಂದ ದೇಹತ್ಯಾಗಮಾಡುವುದು. ಅನಂತರ ಪಾರ್ವತಿಯಾಗಿ ಜನಿಸಿ ಪರಶಿವನನ್ನು ವರಿಸಿ ಗಜಾನನ ಮತ್ತು ಷಣ್ಮುಖರನ್ನು ಮಕ್ಕಳನ್ನಾಗಿ ಪಡೆದ ಕಥಾಭಾಗವೇ ವಿಸ್ತಾರವಾಗಿ ವರ್ಣಿತವಾಗಿರುವುದು. ದಕ್ಷಬ್ರಹ್ಮನ ಯಾಗಮಂಟಪದಲ್ಲಿ ಶಿವಪಾರಮ್ಯವನ್ನು ಸಮಸ್ತ ವೇದಗಳೂ, ದೇವತೆಗಳೂ ನಿರೂಪಣ ಮಾಡಿದ ಭಾಗವು ಇದರಲ್ಲಿ ಆಕರ್ಷಕವಾಗಿದೆ. ಮತ್ತು ಸ್ಕಂದಕೃತ ಶಿವಸಹಸ್ರನಾಮಸ್ತೋತ್ರ, ಋಷಿದೇವಗಣಗಳಿಂದ ರಚಿತವಾದ ಸುಬ್ರಹ್ಮಣ್ಯಸಹಸ್ರನಾಮಸ್ತೋತ್ರ ಇವು ಈ ಭಾಗದಲ್ಲಿ ಕಂಡುಬರುವ ವಿಶೇಷಾಂಶಗಳು. ಕಾಶೀಕ್ಷೇತ್ರಕ್ಕೆ ಪ್ರಾಶಸ್ತ್ಯಕೊಡುವುದು, ರುದ್ರಭಾಷ್ಯದ ಅರ್ಥವನ್ನು ವಿವರಿಸುವುದು, ಇವು ಚರ್ವಿತಚರ್ವಣವಾಗಿ ಇಲ್ಲಿಯೂ ಬಂದಿವೆ. ಒಟ್ಟಿನಲ್ಲಿ ಹಿಂದಿನ ಅಂಶಗಳಲ್ಲಿ ಇಲ್ಲದಿರುವ ಹೊಸ ವಿಷಯಗಳು ಈ ಅಂಶದಲ್ಲಿ ಯಾವುವೂ ಹೆಚ್ಚಾಗಿ ಕಾಣುವುದಿಲ್ಲ.

ದ್ವಾದಶಾಂಶಪರಿಪೂರ್ಣವಾದ ಈ ಮಹಾಗ್ರಂಥದಲ್ಲಿ ಆದ್ಯಂತವಾಗಿ ತೋರುತ್ತಿರುವುದು ಶಿವಪಾರಮ್ಯವೊಂದೇ. ಸ್ಕಾಂದಪುರಾಣ, ಶಿವಪುರಾಣ ಮುಂತಾದ ಅನೇಕ ಇತರ ಪುರಾಣಗಳೂ ಶಿವಮಹಿಮೆಯನ್ನು ವರ್ಣಿಸುವುವಾದರೂ, ಇತರ ಕರ್ಮಸ್ವರೂಪ, ಪ್ರಾಸಂಗಿಕವಾಗಿ ದೇವತಾಂತರಗಳ ಪ್ರಾಧಾನ್ಯ, ವ್ರತ, ಕಥೆ, ಉದ್ಯಾಪನೆ ಇವುಗಳಿಗೆ ಬೇಕಾದ ವಿಷಯಗಳು, ಕೆಲವು ಶಾಸ್ತ್ರವಿಚಾರಗಳು ಇವನ್ನು ಆ ಪುರಾಣಗಳಲ್ಲಿ ನೋಡಬಹುದು. ಈ ಶಿವರಹಸ್ಯದಲ್ಲಿ ಮಾತ್ರ ಅಂತಹ ವಿಷಯಗಳೆಲ್ಲಾ ಗೌಣವೆನಿಸಿ, ಶಿವಪಾರಮ್ಯವೊಂದಕ್ಕೆ ಮಾತ್ರ ವಿಶೇಷಸ್ಥಾನವು ಕಲ್ಪಿತವಾಗಿದೆ. ಶೈವಧರ್ಮಪ್ರಚಾರದ ದೃಷ್ಟಿಯಿಂದಲೇ ಈ ಗ್ರಂಥವು ರಚಿತವಾಗಿದೆಯೆಂದರೆ ತಪ್ಪಾಗಲಾರದು. ಗ್ರಂಥಾರಂಭವು ಸಾಮಾನ್ಯವಾದ ಸಂಪ್ರದಾಯ ಧರ್ಮವನ್ನೇ ಅವಲಂಬಿಸಿ ಆರಂಭವಾಗಿ, ವ್ಯಾಸಕೃತವೆಂದೇ ಪ್ರಸಿದ್ಧಿಪಡೆದು,

ಮಹಾಭಾರತದ ಗ್ರಂಥಸಂಖ್ಯೆಯನ್ನನುಸರಿಸಿ, ಲಕ್ಷಗ್ರಂಥಾತ್ಮಕವಾಗಿ ಲಿಖಿತವಾಗಿದೆ. ಆದರೆ ಗ್ರಂಥಶೈಲಿಯನ್ನು ವಿಮರ್ಶಾದೃಷ್ಟಿಯಿಂದ ನೋಡಿದರೆ, ವ್ಯಾಸಕೃತಗಳೆನಿಸಿದ ಇತರ ಗ್ರಂಥಗಳಿಗೆ ಇದನ್ನು ಹೋಲಿಸಲು ಸಾಧ್ಯವಿಲ್ಲ. ಶೈವಧರ್ಮಕ್ಕೆ ಪ್ರಾಶಸ್ತ್ಯ ಕೊಡುವ ಸಂದರ್ಭದಲ್ಲಿ ವೈಷ್ಣವಧರ್ಮದ ಅವಹೇಳನ ಮಿತಿಮೀರಿ ಅಲ್ಲಲ್ಲಿ ಬಂದಿದೆ. ಸರ್ವಮತಸಮನ್ವಯ ವಾದಿಗಳೆನಿಸಿದ ವ್ಯಾಸಮಹರ್ಷಿಗಳಲ್ಲಿ ಈ ಭಾವನೆಯಿತ್ತೆಂದು ಹೇಳಲು ಸಾಧ್ಯವಿಲ್ಲ. ಶ್ಲೋಕಗಳ ರಚನಾಕ್ರಮ ಮತ್ತು ಕಥಾಭಾಗದ ಪುನರುಕ್ತಿ ಇವುಗಳನ್ನು ನೋಡಿದರೆ ಈ ಒಂದೇ ಗ್ರಂಥವು ಅನೇಕ ಕವಿಗಳ ಕೈವಾಡಕ್ಕೆ ಸಿಕ್ಕಿರಬಹುದೆಂದೂ ಹೇಳಬಹುದು. ವ್ಯಾಕರಣನಿಯಮಬದ್ಧವಾಗಿ, ಬಹು ರಮಣೀಯವಾದ ಶಬ್ದಗಳು ಅಲ್ಲಲ್ಲಿ ಕಂಡುಬರುವಂತೆ, ಅಪಶಬ್ದಗಳನ್ನೂ ಅಸ್ತವ್ಯಸ್ತ ವೃತ್ತಗಳನ್ನೂ ಕೆಲವೆಡೆ ನಾವು ಇದರಲ್ಲಿ ನೋಡಬಹುದು. ಮೈಸೂರು ಓರಿಯಂಟಲ್ ಲೈಬ್ರೆರಿಯಲ್ಲಿ ಹಸ್ತಲಿಖಿತ ಪ್ರತಿಯೊಂದನ್ನು ಬಿಟ್ಟರೆ ಸಮಗ್ರವಾಗಿರುವ ಮತ್ತೊಂದು ಪ್ರತಿ ನಮಗೆ ಪರಿವರ್ತನಕಾಲದಲ್ಲಿ ಎಲ್ಲಿಯೂ ದೊರೆಯಲಿಲ್ಲ. ಮದ್ರಾಸಿನ ವಾಣೀನಿಲಯ ಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿರುವ ಶಿವರಹಸ್ಯದ ಎರಡು ಅಂಶಗಳು ಮತ್ತು ಇತರ ಒಂದೆರಡು ಜೀರ್ಣಪ್ರತಿಗಳೂ ದೊರೆತವು. ಅಸಮಗ್ರವಾಗಿ, ಮೂಲದಲ್ಲಿ ಅನೇಕ ವ್ಯತ್ಯಾಸಗಳುಳ್ಳ ಅನೇಕ ಹಸ್ತಲಿಖಿತ ಪ್ರತಿಗಳು ಅಲ್ಲಲ್ಲಿ ದೊರೆತರೂ ನಮ್ಮ ಪರಿವರ್ತನೆಯ ಕಾರ್ಯಕ್ಕೆ ಅವು ಹೆಚ್ಚಾಗಿ ಪ್ರಯೋಜಕವಾಗಲಿಲ್ಲ.

ಇದುವರೆಗೆ ಈ ಶಿವರಹಸ್ಯವು ಗಣಿಯಲ್ಲಿ ಅಡಗಿದ್ದ ರತ್ನದಂತಿತ್ತು. ಸಾಮಾನ್ಯವಾಗಿ ಅನೇಕ ಪ್ರಾಚೀನ ಗ್ರಂಥಗಳಲ್ಲಿ ಶಿವರಹಸ್ಯದ ವಚನಗಳು ಅಲ್ಲಲ್ಲಿ ಉದಾಹೃತಗಳಾಗಿದ್ದರೂ, ಜನಸಾಮಾನ್ಯಕ್ಕೆ ಶಿವರಹಸ್ಯವೆಂದರೆ ಸ್ಕಾಂದಪುರಾಣದ ಶಿವರಹಸ್ಯ ಖಂಡವೆಂದೇ ನಂಬುಗೆ. ಅದಕ್ಕೆ ಕಾರಣ ಈ ಗ್ರಂಥವು ಅಷ್ಟು ಪ್ರಚಾರದಲ್ಲಿಲ್ಲದಿರುವುದೇ. ಅತಿ ವಿಸ್ತಾರವಾಗಿರುವ ಈ ಶಿವರಹಸ್ಯವನ್ನು ಅಚ್ಚು ಹಾಕಿಸುವುದೂ, ಪರಿವರ್ತನಮಾಡುವುದೂ ಶ್ರಮಸಾಧ್ಯ. ಪರಿವರ್ತನೆಗೆ ಕೆಲವು ಗ್ರಂಥಭಾಗವು ಸುಲಭವಾಗಿ ಕಂಡುಬಂದರೂ, ಅನೇಕ ಕ್ಲಿಷ್ಟಪದಗಳೂ, ಭಿನ್ನ ಭಿನ್ನ ವೃತ್ತಜಾತಿಯ ಶ್ಲೋಕಗಳೂ ಸೇರಿರುವುದರಿಂದ ಹಲವು ಗ್ರಂಥಭಾಗವು ಸುಲಭವಾಗಿ ಅರ್ಥವನ್ನು ಸೂಚಿಸಲಾರವು. ಶಿವಸ್ತೋತ್ರರಚನೆಯಲ್ಲಿ ತಾನೇತಾನಾಗಿ ಮೈಮರೆತು ಬರೆಯುವ ಗ್ರಂಥಕರ್ತೃವಿಗೆ ಛಂದಸ್ಸು, ವ್ಯಾಕರಣ ಇವೆಲ್ಲಾ ಅಲ್ಲಲ್ಲೇ ನಿಂತು, ಕೇವಲ ಭಕ್ತಿರಸವು ಮಾತ್ರ ಸ್ತೋತ್ರವಾಹಿನಿಯಾಗಿ ಪ್ರವಹಿಸಿಬಿಡುವುದು. ಇಂತಹ

ಅತಿವಿಸ್ತಾರವಾದ ಈ ಮಹಾಗ್ರಂಥವನ್ನು ಬಹು ಧನವ್ಯಯದಿಂದ ಕರ್ಣಾಟಕ ಭಾಷೆಗೆ ಬರುವಂತೆ ಮಾಡಿದವರು ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುಗಳವರು. ಪ್ರಾಯಶಃ ಇಲ್ಲಿನವರೆಗೆ ಈ ಗ್ರಂಥವು ಯಾವ ಭಾಷೆಯಲ್ಲಿಯೂ, ಯಾವ ಲಿಪಿಯಲ್ಲಿಯೂ ಪೂರ್ಣವಾಗಿ ಅಚ್ಚಾಗಿಲ್ಲ. ಹಲವಾರು ಶ್ರೀಮಂತರು ಇದರ ಮುದ್ರಣಕ್ಕೆ ಸಹಾಯಮಾಡಿ ಪ್ರಾರಂಭಿಸಿರುವರೇ ಹೊರತು ಸಮಾಪ್ತಿಗೊಳಿಸಿಲ್ಲ. ನಮ್ಮ ಶ್ರೀಮನ್ಮಹಾರಾಜರವರ ಅತ್ಯಂತ ಔದಾರ್ಯದ ಫಲವಾಗಿಯೂ, ಪ್ರಾಚೀನ ಶಾಸ್ತ್ರಸಂಪ್ರದಾಯಗಳಲ್ಲಿಟ್ಟಿರುವ ಅಸದೃಶ ಭಕ್ತಿಯ ಕುರುಹಾಗಿಯೂ ಈ ಶಿವರಹಸ್ಯವು ಪರಮೇಶ್ವರಾನುಗ್ರಹದಿಂದ ಇಂದಿಗೆ ಕನ್ನಡಭಾಷೆಯಲ್ಲಿ ಅರ್ಥಸಹಿತ ವಾಗಿ ಪ್ರಕಾಶಗೊಂಡಿತು. ಇಂತಹ ರಹಸ್ಯಭಾಗವನ್ನು ಪ್ರಕಾಶಪಡಿಸಿದ ಶಾಶ್ವತ ವಾದ ಕೀರ್ತಿ ನಮ್ಮ ಮಹಾಪ್ರಭುಗಳಿಗೆ ಮಾತ್ರವೇ ಸಲ್ಲುವುದು.

ನಮ್ಮ ಮಹಾಸ್ವಾಮಿಯವರ ಪ್ರೋತ್ಸಾಹದಿಂದ ಇದುವರೆಗೆ ಸಮಸ್ತ ಮಹಾಪುರಾಣಗಳೂ, ಉಪಪುರಾಣಗಳೂ, ಋಗ್ವೇದ ಮತ್ತು ಇತರ ಸ್ತೋತ್ರಗಳೂ ಕನ್ನಡಭಾಷೆಗೆ ಪರಿವರ್ತಿತಗಳಾಗಿ ಕನ್ನಡಿಗರಿಗೆ ಹೆಚ್ಚಿನ ಗ್ರಂಥಭಂಡಾರವು ದೊರೆತಿದೆ. ಇದರ ಪ್ರಯೋಜನವನ್ನು ಕನ್ನಡಿಗರು ಪಡೆಯದೆ ಹೋದರೆ ಅದು ಪ್ರಜೆಗಳ ದೌರ್ಭಾಗ್ಯವೇ ಸರಿ. ಜನತೆಯಲ್ಲಿ ಆಸ್ತಿಕಧರ್ಮ ಮರೆಯಾಗುತ್ತಾ ಬಂದಿದ್ದರೂ, ಅದು ಅಂಕುರಪ್ರಾಯವಾಗಿ ಆಸ್ತಿಕಮಹನೀಯರ ಕೆಲವರ ಹೃದಯ ದಲ್ಲಿ ಬೇರೂರಿ ನಿಂತಿದೆ. ಮಳೆಬಂದಾಗ ಒಣಗಿದ ಗರುಕೆ ಚಿಗುರಿ ಮನರಂಜಕ ವಾಗುವಂತೆ, ಪ್ರೋತ್ಸಾಹ ದೊರೆತಾಗ ಜನರ ಮನೋಭಾವವು ಆಸ್ತಿಕಮಾರ್ಗಕ್ಕೆ ತಿರುಗುವುದರಲ್ಲಿ ಅನುಮಾನವಿಲ್ಲ. ಆ ಕಾಲದಲ್ಲಿ ಈ ಗ್ರಂಥಗಳು ಒಂದು ನಿಧಿಯಂತೆ ಆಸ್ತಿಕಪ್ರಜೆಗಳ ಆದರಣೆಗೆ ಪಾತ್ರವಾಗುವುವು. ಒಂದು ದೇಶದ ಸಂಪತ್ತಿನಲ್ಲಿ ಭೂಮಿ, ಖನಿಜ, ಜನಬಾಹುಳ್ಯ ಇವು ಹೇಗೋ ಗ್ರಂಥರಾಶಿಯೂ ಹಾಗೆಯೇ. ಇದೇ ಉದ್ದೇಶದಿಂದಲೇ ನಮ್ಮನ್ನಾಳುವ ಪ್ರಭುವರ್ಯರಾದ **ಶ್ರೀಮಜ್ಜಯಚಾಮ ರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾ ಸ್ವಾಮಿಗಳವರು ಕನ್ನಡಭಾಷೆಗೆ ಪ್ರಾಚೀನ ಗ್ರಂಥಗಳನ್ನೆಲ್ಲಾ ಅನುವಾದಗೊಳಿಸಿ ಕನ್ನಡನಾಡಿಗೆ ಮಹೋಪಕಾರ ಮಾಡಿರುವರು. ಇಂತಹ ಆಸ್ತಿಕವರೇಣ್ಯರೂ, ಪ್ರಜಾರಂಜನಚತುರರೂ ಆದ ಶ್ರೀಮನ್ಮಹಾರಾಜರನ್ನೂ, ಅವರ ತನುಜರಾಗಿ ದೇಶಕ್ಕೆ ಯುವರಾಜರೆನಿಸಿರುವ ಶ್ರೀ ಶ್ರೀಕಂಠದತ್ತ ನರಸಿಂಹರಾಜ ಒಡೆಯರನ್ನೂ, ಮತ್ತು

ಅವರ ಕುಟುಂಬವರ್ಗವನ್ನೂ ಪರಮೇಶ್ವರನು ಚಿರಕಾಲ ಆಯುರಾರೋಗ್ಯಾದಿಗಳಿಂದ ಸಂರಕ್ಷಿಸುತ್ತಿರಲಿ ಎಂದು ಸರ್ವೇಶ್ವರನನ್ನು ನಾನು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಶ್ರೀ ವಿಜಯಸಂವತ್ಸರದ
ಜ್ಯೇಷ್ಠ ಶುದ್ಧ ದ್ವಿತೀಯಾ
ಶನಿವಾರ
ತಾ॥ ೧೩—೬—೧೯೫೩.

ಸಜ್ಜನ ವಿಧೇಯ
ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,
ಆಸ್ಥಾನವಿದ್ವಾನ್, ಮೈಸೂರು.

# ಶ್ರೀ ಶಿವರಹಸ್ಯದ ಹನ್ನೆರಡನೆಯ ಅಂಶದ
# ವಿಷಯಾನುಕ್ರಮಣಿಕಾ

---

## ಎಂಟನೆಯ ಅಧ್ಯಾಯ



## ಒಂಬತ್ತನೆಯ ಅಧ್ಯಾಯ



## ಹತ್ತನೆಯ ಅಧ್ಯಾಯ



## ಹನ್ನೊಂದನೆಯ ಅಧ್ಯಾಯ



## ಹನ್ನೆರಡನೆಯ ಅಧ್ಯಾಯ



## ಹದಿಮೂರನೆಯ ಅಧ್ಯಾಯ



## ಹದಿನಾಲ್ಕನೆಯ ಅಧ್ಯಾಯ



## ಹದಿನೈದನೆಯ ಅಧ್ಯಾಯ.



## ಹದಿನಾರನೆಯ ಅಧ್ಯಾಯ

### ಹದಿನೇಳನೆಯ ಅಧ್ಯಾಯ



### ಹದಿನೆಂಟನೆಯ ಅಧ್ಯಾಯ



### ಹತ್ತೊಂಬತ್ತನೆಯ ಅಧ್ಯಾಯ



### ಇಪ್ಪತ್ತನೆಯ ಅಧ್ಯಾಯ



### ಇಪ್ಪತ್ತೊಂದನೆಯ ಅಧ್ಯಾಯ



### ಇಪ್ಪತ್ತೆರಡನೆಯ ಅಧ್ಯಾಯ



### ಇಪ್ಪತ್ತುಮೂರನೆಯ ಅಧ್ಯಾಯ



### ಇಪ್ಪತ್ತುನಾಲ್ಕನೆಯ ಅಧ್ಯಾಯ

## ಮೂವತ್ತೈದನೆಯ ಅಧ್ಯಾಯ



## ಮೂವತ್ತಾರನೆಯ ಅಧ್ಯಾಯ



## ಮೂವತ್ತೇಳನೆಯ ಅಧ್ಯಾಯ



## ಮೂವತ್ತೆಂಟನೆಯ ಅಧ್ಯಾಯ



## ಮೂವತ್ತೊಂಬತ್ತನೆಯ ಅಧ್ಯಾಯ



## ನಲವತ್ತನೆಯ ಅಧ್ಯಾಯ



" ಶ್ರೀ ಪಾರ್ವತೀ ಪರಮೇಶ್ವರಾಭ್ಯಾಂ ನಮಃ "

" ಶ್ರೀರಸ್ತು "

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಪ್ರಥಮೋಽಧ್ಯಾಯಃ

ಭವಾಂತಕಸಭಾಪತಿಪ್ರಿಯಸುತೇಭವಕ್ತ್ರಂ ಪ್ರಭಾ
ವಿಭಾಸಿತವಿಭಾವರೀರಮಣಖಂಡಶುಂಡೋಜ್ಜ್ವಲಂ ।
ಸದಾ ಮದಸುಗಂಡಧೃಗ್ವಿವಿಧ ವಿಘ್ನಷಂಡಾಪಹಂ
ಭಜಾಮ್ಯಭಯಹೇತವೇ ಶಿವಕಥಾಸುಸಂಪತ್ತಯೇ ॥೧॥

॥ ಶ್ರೀ ಸೂತ ಉವಾಚ ॥

ತತಸ್ಸ ತಾರಕಾರಾತಿಂ ಪುರಾರಾತಿಪ್ರಸಾದಭಾಕ್ ।
ಜೈಗೀಷವ್ಯಸ್ತದಾ ನತ್ವಾ ಪುನಃ ಪಪ್ರಚ್ಛ ಷಣ್ಮುಖಂ ॥೨॥

---

## ಶ್ರೀ ಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ಮೊದಲನೆಯ ಅಧ್ಯಾಯ

ಸಂಸಾರದುಃಖನಾಶಕನಾದ ಮತ್ತು ದೇವಸಭಾಪತಿಯೆನಿಸಿದ ಮಹಾದೇವನ ಪ್ರಿಯಪುತ್ರನು, ಗಜವದನನೆನಿಸಿ, ತನ್ನ ಸೊಂಡಲಿನಲ್ಲಿ ಪ್ರಕಾಶಮಾನವಾದ ಚಂದ್ರನನ್ನೇ ಎಳೆಯುತ್ತಿರುವವನಾಗಿ ಮದೋದಕದಿಂದ ಕೂಡಿದ ಗಂಡಸ್ಥಳದಿಂದ ಶೋಭಿಸುತ್ತಾ ವಿಘ್ನನಿವಾರಕನಾಗಿರುವನು. ಇಂತಹ ವಿಘ್ನೇಶ್ವರನನ್ನು ಗ್ರಂಥಾರಂಭದಲ್ಲಿ ಪ್ರಾರ್ಥಿಸಿ, ಶಿವಕಥಾಸಂಪತ್ತನ್ನು ಪಡೆಯುವುದಕ್ಕಾಗಿಯೂ, ಸಂಪೂರ್ಣ ಧೈರ್ಯವನ್ನು ಹೊಂದುವುದಕ್ಕಾಗಿಯೂ ಶರಣುಹೊಂದುತ್ತೇನೆ. ॥೧॥

ಸೂತಮಹರ್ಷಿಗಳು ಈ ರೀತಿ ಮಹಾಗಣಪತಿಯನ್ನು ಪ್ರಾರ್ಥಿಸಿ ಅಲ್ಲಿ ನೆರೆದಿದ್ದ ಋಷಿವರ್ಗವನ್ನು ನೋಡುತ್ತಾ ಅವರಿಗೆ ಮತ್ತೂ ಶಿವಧರ್ಮವನ್ನು

ಶ್ರುತ್ವಾ ಶಿವಕಥಾಸಾರಮಭಿಷೇಕಮಹೋದಯಂ ॥೩॥

॥ ಋಷಯ ಊಚುಃ ॥

ಕಿಮಪೃಚ್ಛತ್ತದಾ ಸೂತ ಜೈಗೀಷವ್ಯೋ ಮಹಾಮುನಿಃ ।
ಷಣ್ಮುಖಂ ತಾರಕಾರಾತಿಂ ಪುರಾರಾತಿಕಥಾನಕಂ ॥೪॥

ತನ್ನಸ್ತ್ವಂ ಶ್ರದ್ಧಧಾನಾನಾಂ ಸಮಾಧಾನೇನ ಚೇತಸಾ ।
ವಕ್ತುಮರ್ಹಸಿ ಶಿಷ್ಯೇಭ್ಯೋ ವಿಶಿಷ್ಯ ಶಿವಸತ್ಕಥಾಃ ॥೫॥

॥ ಶ್ರೀಸೂತ ಉವಾಚ ॥

ಶೃಣುಧ್ವಂ ಸತ್ರಿಣಸ್ಸರ್ವೇಽಪ್ಯಪರ್ಣಾಪತಿವೈಭವಂ ।
ಸ್ಕಂದೇನಾನಂದಮನಸಾ ಜೈಗೀಷವ್ಯಾಯ ಪೃಚ್ಛತೇ ॥೬॥

ಯದುಕ್ತಂ ತತ್ಕಥಾಸಾರಂ ತದ್ವದಾಮಿ ಮುನೀಶ್ವರಾಃ ।
ಏಕಾದಶಾಂಶಂ ಶ್ರುತ್ವೈವಂ ಮುನಿರ್ನತ್ವಾ ಶಿವಾಸುತಂ ॥೭॥

---

ಬೋಧಿಸಲು ಉತ್ಸುಕರಾಗಿ ಹೀಗೆಂದರು.—ಋಷಿಶ್ರೇಷ್ಠರಿರಾ, ಕೇಳಿರಿ. ತಾರಕಾಸುರಧ್ವಂಸಿಯಾದ ಷಣ್ಮುಖಸ್ವಾಮಿಯನ್ನು ಕುರಿತು, ಶಿವಭಕ್ತವರ್ಯನಾದ ಜೈಗೀಷವ್ಯ ಮಹಾಮುನಿಯು ಶಿವಕಥಾಸಾರವನ್ನೆಲ್ಲಾ ಕೇಳಿ ತಿಳಿದುಕೊಂಡಿದ್ದರೂ ಸಹ ಮತ್ತೆ ಈ ರೀತಿ ಪ್ರಶ್ನಿಸಿದನು. ಎಂದು ಸೂತಮಹರ್ಷಿಗಳು ಹೇಳಿದೊಡನೆಯೇ ಅಲ್ಲಿದ್ದ ಋಷಿಜನರೆಲ್ಲಾ ಕುತೂಹಲರಾಗಿ ಸೂತರನ್ನು ಕುರಿತು, ॥೨-೩॥

"ಸೂತಮಹರ್ಷಿಗಳೇ, ಮಹಾಮುನಿಯಾದ ಜೈಗೀಷವ್ಯನು ಕುಮಾರಸ್ವಾಮಿಯನ್ನು ಕುರಿತು ಮತ್ತಾವ ಶೈವಧರ್ಮವಿಚಾರವಾಗಿ ಪ್ರಶ್ನಿಸಿದನು ? ದಯವಿಟ್ಟು ಶಿವಧರ್ಮಶ್ರವಣಕುತೂಹಲಿಗಳೂ ತಮ್ಮ ಶಿಷ್ಯವರ್ಗಕ್ಕೆ ಸೇರಿದವರೂ ಆದ ನಮಗೆ ಆದನ್ನು ವಿಶೇಷ ಅಭಿಮಾನದಿಂದ ತಿಳಿಯುವಂತೆ ಹೇಳಬೇಕು" ಎಂದು ಪ್ರಾರ್ಥಿಸಿಕೊಂಡರು. ಆಗ ಸೂತರು ಹೀಗೆ ಹೇಳಲಾರಂಭಿಸಿದರು. ॥೪-೫॥

ಸತ್ರಯಾಗದಲ್ಲಿ ಭಾಗವಹಿಸಿರುವ ಮಹರ್ಷಿಗಳೇ, ಕೇಳಿರಿ. ಕುಮಾರಸ್ವಾಮಿಯು ಆನಂದಪರವಶನಾಗಿ ಜೈಗೀಷವ್ಯಮಹಾಮುನಿಗೆ ವಿವರವಾಗಿ ಶ್ರುತಪಡಿಸಿದ ಶಿವಕಥಾಸಾರವನ್ನು ನಿಮಗೂ ಈಗ ತಿಳಿಯಪಡಿಸುವೆನು. ಜೈಗೀಷವ್ಯ ಮಹರ್ಷಿಯು ಹನ್ನೊಂದು ಅಂಶಗಳ ಶಿವರಹಸ್ಯವನ್ನೂ ಸ್ಕಂದಸ್ವಾಮಿಯಿಂದ

ಸುಬ್ರಹ್ಮಣ್ಯಂ ಪುನರ್ನತ್ವಾ ಗಣೈರ್ಮುನಿಗಣೈಸ್ಸರೈಃ ।
ಬ್ರಹ್ಮವಿಷ್ಣ್ವಾದಿವಿಬುಧೈಃ ಪೃಚ್ಛತಿ ಸ್ಮ ಕಥಾನಕಂ ॥೮॥

ನಮೋ ನಮಸ್ತೇ ಸೇನಾನೇ ದೀನಾವನಶಿರೋಮಣೇ ।
ದ್ಯುಮಣಿದ್ಯುತಿಸಂಕಾಶ ಮಕುಟೋದ್ಭಾಸಿಮಸ್ತಕ ॥೯॥

ದ್ವಾದಶಾಮಲ ನೇತ್ರಾಬ್ಜ ಪರಹಾಸೈಕಷಣ್ಮುಖ ।
ಭವಭಕ್ತಾನ್ ಕಥಾಸಕ್ತಾನ್ ವ್ಯಕ್ತಶಂಭೋಃ ಕಥಾರಸೈಃ ॥೧೦॥

ಸಂಪ್ಲಾವಯ ಕಥಾವರ್ಷೈರ್ಭಕ್ತಿತರ್ಷಾಂತ್ಸಹರ್ಷತಃ ।
ಮುನೀನ್ ಸುರಗಣೇಂದ್ರಾಂಶ್ಚ ವೀರೋದ್ಧರ ಮಹಾಮತೇ ॥೧೧॥

ಜೈಗೀಷವ್ಯ ವಚಶ್ಶ್ರುತ್ವಾ ನೋಚಾಮುಪಸುಧಿಕ್ಕರಂ ।
ಮಾರಪಾರಾತ್ಮಜೋ ವಿಪ್ರಂ ಉವಾಚ ಪ್ರಣತಂ ಪುರಃ ॥೧೨॥

---

ತಿಳಿದುಕೊಂಡವನಾಗಿ ಮತ್ತೆ ಕುಮಾರಸ್ವಾಮಿಗೆ ವಂದಿಸುತ್ತಾ ಬ್ರಹ್ಮ, ವಿಷ್ಣು ಮುಂತಾದ ಇತರ ದೇವತಾಗಣಗಳೊಡಗೂಡಿ ಹೀಗೆ ಪ್ರಶ್ನಿಸಿದನು. ಹಾಗೆ ಪ್ರಶ್ನೆ ಮಾಡುವಾಗ, ಮುನಿಯು ಶಿವಗಣಗಳಿಂದಲೂ, ಮುನಿಸಮೂಹದಿಂದಲೂ, ಬ್ರಹ್ಮ ವಿಷ್ಣ್ವಾದಿದೇವತೆಗಳಿಂದಲೂ ಕೂಡಿ ಸುಬ್ರಹ್ಮಣ್ಯಸ್ವಾಮಿಗೆ ನಮಸ್ಕರಿಸುತ್ತಾ ಈ ರೀತಿ ಪ್ರಾರ್ಥಿಸಿಕೊಂಡನು. ||೬-೭-೮||

"ದೇವಸೇನಾನಾಯಕನೇ, ದೀನರನ್ನುದ್ಧರಿಸುವ ಮಹಾನುಭಾವನೇ, ಸೂರ್ಯ ಕೋಟಿಕಿರಣಗಳಂತೆ ಹೊಳೆಯುವ ಕಿರೀಟಗಳಿಂದ ಪ್ರಕಾಶಿಸುವ ಶಿರೋಭಾಗವುಳ್ಳ ವನೇ, ಹನ್ನೆರಡು ನೇತ್ರಗಳಿಂದಲೂ, ಆರು ಮುಖಗಳಿಂದಲೂ ವಿರಾಜಿಸುತ್ತಾ ಶಂಕರನನ್ನು ಆನಂದಗೊಳಿಸುತ್ತಿರುವವನೇ, ನಮಗೆ ಶಿವಕಥಾಸಂಬಂಧವಾದ ರಹ ಸ್ಯಾಂಶಗಳನ್ನು ತಿಳಿಸಿ ಶಿವಕಥಾರಸದಿಂದ ಸ್ನಾನಮಾಡಿಸಿ, ಪರಶಿವನ ಭಕ್ತರಾದ ನಮ್ಮನ್ನು ಉದ್ಧರಿಸು. ||೯-೧೦||

ವೀರಶ್ರೇಷ್ಠನೇ, ಇಲ್ಲಿ ಶಿವಕಥಾಶ್ರವಣಲಾಲಸರಾಗಿ ಕುಳಿತಿರುವ ಈ ನಮ್ಮೆ ಲ್ಲರಿಗೂ ಶಿವಕಥಾವೃಷ್ಟಿಯಿಂದ ಸಂತೋಷಗೊಳಿಸು'' ಎಂದು ಅನನ್ಯಶರಣನಾಗಿ ಪುನಃ ಪುನಃ ವಂದಿಸಿ ಬೇಡುತ್ತಲಿರುವ ಜೈಗೀಷವ್ಯಮಹರ್ಷಿಯನ್ನು ನೋಡುತ್ತಾ ಕುಮಾರಸ್ವಾಮಿಯು ಪ್ರೀತಿಯಿಂದ ಅವರಿಗೆ ಈ ರೀತಿ ಉತ್ತರವಿತ್ತನು ||೧೧-೧೨||

ಹರ್ಷಪ್ರವೃದ್ಧಮನಸಾ ಸುರಸಾಯನಮುತ್ತಮಂ ।
ದ್ವಾದಶಾಂಶಮಿದಂ ದಿವ್ಯಂ ದ್ವಾದಶೋಽಹ(?) ಹರಾತ್ಮಜಃ ॥೧೩॥

ಈಶಾಖ್ಯಯಾ ಮಹೇಶೋಕ್ತಂ ಶೃಣ್ವತಾಂ ಸೌಖ್ಯದಾಯಕಂ ।
ಪ್ರಾಹ ತತ್ರ ಮುದಾ ಯುಕ್ತಃ ಸುವ್ಯಕ್ತಕಲಯಾ ಗಿರಾ ॥೧೪॥

ತ್ರಿನೇತ್ರಂ ಸುಪವಿತ್ರಾರ್ಥಚರಿತ್ರಂ ಸತ್ರಿಣಸ್ತದಾ ॥೧೫॥

॥ ಸುಬ್ರಹ್ಮಣ್ಯ ಉವಾಚ ॥

ಜೈಗೀಷವ್ಯ ಮಹಾಭವ್ಯ ಹವ್ಯವಾಹಸಮಪ್ರಭ ।
ದಿವ್ಯಂ ಕಥಾನಕಂ ಶಂಭೋರ್ನಾಕಿಭಿರ್ಮುನಿಭಿರ್ಗಣೈಃ ॥೧೬॥

ಶೃಣ್ವಪರ್ಣಾಪತೇಸ್ತೂರ್ಣಂ ಪೂರ್ಣಂ ಕರ್ಣರಸಾಯನಂ ।
ಭವಾರ್ಣವನಿಮಗ್ನಾನಾಂ ಸಂತೀರ್ಣತರಿಮದ್ಭುತಂ ॥೧೭॥

ಪುರಾ ಕೈಲಾಸಸದನೇ ಮದನಾಂತಕರೋ ಹರಃ ।
ರತ್ನಪ್ರಾಸಾದಸಂಬಾಧೇ ಸೌಧಗೋಪುರಮಂಡಿತೇ ॥೧೮॥

---

ಆಗ ಕುಮಾರಸ್ವಾಮಿಯು ಹರ್ಷನಿರ್ಭರಮಾನಸನಾಗಿ, ಈಶಾನಾಖ್ಯವಾದ ಈ ದ್ವಾದಶಾಂಶದ ಕಥಾಭಾಗವನ್ನು ಕೇಳುವವರಿಗೆ ಆನಂದವಾಗುವಂತೆ, ಸ್ಪಷ್ಟವಾದ ವಾಣಿಯಿಂದ ಶಿವಕಥಾಮೃತಸಾರವನ್ನು ಎಲ್ಲರೂ ಸವಿಯುವಂತೆ ಹೀಗೆ ವಿವರಿಸಿ ಹೇಳಿದನು. ॥೧೩-೧೪-೧೫॥

ಅಗ್ನಿಯಂತೆ ಮಹಾತೇಜಸ್ವಿಯಾಗಿ ಜ್ವಲಿಸುವ ಜೈಗೀಷವ್ಯನೇ, ಈಗ ಪರಮೇಶ್ವರ ಕಥಾಮೃತವನ್ನು ಹೇಳುವೆನು ಕೇಳು. ಕರ್ಣರಸಾಯನವೆನಿಸಿ, ಸಂಸಾರವೆಂಬಘೋರಸಮುದ್ರದಲ್ಲಿ ಮುಳುಗಿದವರಿಗೆ ದೋಣಿಯಂತೆ ಇದ್ದು ಅವರನ್ನು ದುಃಖದಿಂದ ದಾಟಿಸುವ ಈ ಶಿವಕಥಾಮೃತವನ್ನು ಇಲ್ಲಿ ನೆರೆದಿರುವ ದೇವತೆಗಳೊಡನೆಯೂ, ಮುನಿಗಣಗಳೊಡನೆಯೂ ಸಂತೋಷದಿಂದ ಕೇಳುವವನಾಗು. ॥೧೬-೧೭॥

ಹಿಂದೆ ಒಂದುಸಾರಿ ಪರಶಿವನು ಪಾರ್ವತಿಯೊಡನೆ ಕೈಲಾಸದಲ್ಲಿರುವ ದಿವ್ಯಹರ್ಮ್ಯದಲ್ಲಿ ವಿಹರಿಸುತ್ತಿದ್ದನು. ಆ ಕೈಲಾಸವಾದರೋ, ರತ್ನಮಯವಾದ ಉಪ್ಪರಿಗೆಗಳ ಸಾಲುಗಳಿಂದಲೂ, ಎತ್ತರವಾದ ಗೋಪುರಗಳಿಂದಲೂ ಪ್ರಕಾಶಿಸು

ಶಿಖಂಡಿತಾಂಡವಯುತೇ ಡಂಬರಾಡಂಬರೈರ್ಯುತೇ ।
ಉದ್ಯದ್ಭಾಸ್ಕರಸಂಕಾಶವಿದ್ರುಮಸ್ತಂಭಮಂಟಪೇ ॥೧೯॥

ನಾನಾತರುಗಣಾಸಾರಪುಲ್ಲಪುಷ್ಪವಿರಾಜಿತೇ ।
ತತ್ಪುಷ್ಪಸುಂದರತರಪರಾಗಾವೃತಮಾರುತೇ ॥೨೦॥

ನಾನಾಪಕ್ಷಿರುತಾಸಾರ ನಾದಿತಾನತಕಂದರೇ ।
ಚಂದನಾನಂದಸುಭಗಗಂಧಮೇದುರಪೂರಿತೇ ॥೨೧॥

ಪರ್ವತಾಖರ್ವಸರ್ವಸ್ವ ಶರ್ವರೀನಾಥಸತ್ಪ್ರಭೇ ।
ಶಿಖರೇ ವಿಜಹಾರೇಶೋ ಹರೋ ಗೌರ್ಯಾ ಸದಾರ್ಯಯಾ ॥೨೨॥

ಮುದಾ ಹೃದಾ ತದಾ ದೇವೋ ದರ್ಶಯನ್ ತದ್ವನಸ್ಥಲೀಂ ।
ನಾನಾಪುಷ್ಪತರುಚ್ಛನ್ನಾ ಮಭ್ರಕಾಂತಿನಿವಾರಿಣೀಂ ॥೨೩॥

---

ತ್ತಿದ್ದಿತು. ಉಪ್ಪರಿಗೆಗಳ ಮೇಲೆಲ್ಲಾ ಬಣ್ಣಬಣ್ಣಗಳಿಂದ ಕುಣಿದಾಡುವ ನವಿಲುಗಳು ಅಲ್ಲಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿದ್ದುವು. ಆ ದಿವ್ಯ ಸೌಧಗಳಲ್ಲಿರುವ ಕಂಬಗಳು ಸೂರ್ಯನಂತೆ ಹೊಳೆಯುವ ವಿದ್ರುಮಗಳಿಂದ ರಂಜಿತವಾಗಿದ್ದುವು. ಸುತ್ತಲೂ ನಾನಾ ಜಾತಿಯ ಮರಗಳೂ, ವಿಕಸಿತ ಕುಸುಮಮಾಲೆಗಳೂ, ಪುಷ್ಪಸಂಗದಿಂದ ಗಮಗಮಿಸುತ್ತಾ ಬೀಸುತ್ತಿರುವ ಮಂದಮಾರುತವೂ ಅತಿಶಯವಾದ ಆನಂದವನ್ನುಂಟುಮಾಡುತ್ತಿದ್ದುವು. ॥೧೮-೧೯-೨೦॥

ಅದೇ ಕೈಲಾಸಗಿರಿಯಲ್ಲಿ ನಾನಾವಿಧವಾದ ಪಕ್ಷಿಗಳು ಬಗೆಬಗೆಯಾದ ಧ್ವನಿಯಿಂದ ಕೂಗುತ್ತಿರುವುದನ್ನು ಅಲ್ಲಿಯೇ ಇರುವ ಗುಹಾಭಾಗಗಳು ಪ್ರತಿ ಧ್ವನಿಗೊಡುತ್ತಿದ್ದುವು. ಶ್ರೀಗಂಧ, ಚಂದನ ಇವೇ ಮೊದಲಾದ ಸುಗಂಧಮಯವೃಕ್ಷಗಳಿಂದ ಸುವಾಸಿತಗಳಾದ ಉನ್ನತ ಪರ್ವತಶಿಖರಗಳು ಚಂದ್ರನ ಚಂದ್ರಿಕೆಯಿಂದ ಶುಭ್ರನಾಗಿ ತೋರುತ್ತಿದ್ದುವು. ಇಂತಹ ಗಿರಿಶಿಖರದಲ್ಲಿ ಪರಶಿವನು ಸರ್ವದಾ ಪಾರ್ವತಿಯೊಡಗೂಡಿ ನಾನಾವಿಧವಾದ ಕ್ರೀಡಾದಿಗಳಲ್ಲಿ ನಿರತನಾಗಿದ್ದನು. ॥೨೧-೨೨॥

ಅಲ್ಲಿ ನಿಂತು ಶಂಕರನು ಸುಂದರವಾಗಿದ್ದ ಉದ್ಯಾನವನಪ್ರದೇಶವನ್ನು ದೇವಿಗೆ ತೋರಿಸುವನು. ಆ ವನಸ್ಥಲವಾದರೋ ನಾನಾವಿಧವಾದ ಪುಷ್ಪಗಳಿಂದಲೂ, ಮರಗಳಿಂದಲೂ ಶೋಭಿಸುತ್ತಾ, ಮೇಘಮಂಡಲದ ಕಾಂತಿಯನ್ನು ತಿರಸ್ಕರಿಸುವಂತಿದ್ದಿತು.

ಹರಿಣೀಗಣಸಂಯುಕ್ತಾಂ ಪತತ್ಪತ್ರವರ್ಯೈರ್ಯುತಾಂ ।
ನಿಯುತಾಯುತವಿಸ್ತೀರ್ಣಾಂ ಸಂಕೀರ್ಣಾಂ ಮೃಗಪಕ್ಷಿಭಿಃ ॥೨೪॥

ಭ್ರಮನ್ಮಾತಂಗಸಾರಂಗಾಂ ರತ್ನಗಂಗಾತಟೋಜ್ಜ್ವಲಾಂ ।
ತುಂಗಶಾಂಗಮಹಾಲಿಂಗ ಸೌಧೋಜ್ಜ್ವಲಸತ್ಪ್ರಭಾಂ ॥೨೫॥

ಭಾವಿತುಂ ಮನಸಾ ಸರ್ವೈರಶಕ್ಯಾಂತಾಂ ವನಸ್ಥಲೀಂ ।
ಉತ್ಫುಲ್ಲಹಲ್ಲಕಾಕ್ರಾಂತಾಂ ಕ್ರೌಂಚಸಾರಸಸೇವಿತಾಂ ॥೨೬॥

ಪತಂಗಾಂಶುಸಮುತ್ಫುಲ್ಲ ರಕ್ತಾಬ್ಜವರಶೋಭಿತಾಂ ।
ಪರಾಗರಾಗಸ್ವಚ್ಛೋದಾಂ ತಟಪ್ರಾಸಾದಶೋಭಿತಾಂ ॥೨೭॥

ತತ್ಪ್ರಸಾದೈಕಮಧ್ಯಸ್ಥ ಸಿಂಹಾಸನವರಾಶ್ರಿತಃ ।
ದಿವ್ಯಾಂಗರಾಗಸುಭಗೋ ಭರ್ಗೋ ದೇವ್ಯಾ ಸಮನ್ವಿತಃ ॥೨೮॥

---

ಉದ್ಯಾನವನದಲ್ಲೆಲ್ಲಾ ಜಿಂಕೆಗಳು ಸಾಲುಸಾಲಾಗಿ ನಿರ್ಭಯವಾಗಿ ಓಡಾಡುತ್ತಿದ್ದುವು. ಹೀಗೆ ಅನೇಕ ಪಕ್ಷಿಗಳಿಂದಲೂ ಮೃಗಗಳಿಂದಲೂ ಕೂಡಿ ಸಹಸ್ರಾರು ಯೋಜನ ವಿಶಾಲವಾಗಿ ಆ ಕೈಲಾಸದ ಉದ್ಯಾನವು ವ್ಯಾಪಿಸಿದ್ದಿತು. ॥೨೩-೨೪।

ಅಲ್ಲೆಲ್ಲಾ ದೊಡ್ಡ ದೊಡ್ಡ ಆನೆಗಳೂ ಸಾರಗಗಳೂ ಓಡಾಡುತ್ತಿದ್ದುವು. ರತ್ನಮಯವಾದ ಪ್ರದೇಶದಲ್ಲಿ ಗಂಗಾನದಿಯು ಹರಿಯುತ್ತಿದ್ದಿತು. ಎತ್ತರವಾದ ಶಿವಲಿಂಗಗಳಿಂದ ಪ್ರಕಾಶಿಸುವ ಉಪ್ಪರಿಗೆಯ ಸಾಲು ರಮ್ಯವಾಗಿ ತೋರಿಬರುತ್ತಿದ್ದಿತು. ಈ ವಿಧವಾದ ಸೊಬಗನ್ನು ಮನಸ್ಸಿನಿಂದಲೂ ಊಹಿಸಲಾಗದಷ್ಟು ಸುಂದರವಾಗಿ ಆ ಉದ್ಯಾನವನವು ಕಂಗೊಳಿಸುತ್ತಿದ್ದಿತು. ಅರಳಿದ ಕಮಲ ಕಲ್ಹಾರಪುಷ್ಪಗಳೂ, ಅವುಗಳ ಸುತ್ತಲೂ ವಿನೋದದಿಂದ ನಲಿದಾಡುವ ಕ್ರೌಂಚ, ಮತ್ತು ಸಾರಸ ಪಕ್ಷಿಗಳ ಸಾಲೂ ನೋಡುವುದಕ್ಕೆ ಬಹು ಮನೋಹರವಾಗಿ ಕಾಣುತ್ತಿದ್ದುವು. ॥೨೫-೨೬॥

ಸೂರ್ಯಕಿರಣಗಳಿಂದ ಅರಳುತ್ತಿರುವ ಕೆಂದಾವರೆಗಳಿಂದಲೂ, ಕಮಲಪರಾಗಗಳಿಂದ ಶುಭ್ರವಾಗಿರುವ ತಿಳಿನೀರಿನ ಕೊಳಗಳಿಂದಲೂ, ಪ್ರತಿಸರೋವರದ ಪಕ್ಕದಲ್ಲಿಯೂ ವಿರಾಜಿಸುತ್ತಿರುವ ಒಂದೊಂದು ಪ್ರಾಸಾದದಿಂದಲೂ, ಆ ಪ್ರಾಸಾದಗಳ ಮಧ್ಯದಲ್ಲಿ ಉಜ್ಜ್ವಲವಾಗಿ ಕಾಣುತ್ತಿರುವ ದಿವ್ಯಸಿಂಹಾಸನದಿಂದಲೂ, ಆ ಉದ್ಯಾನವನಗಳು ನಯನಮನೋಹರಗಳಾಗಿದ್ದುವು. ಇಂತಹ ಕೈಲಾಸದ ಸುಂದರ ಪ್ರದೇಶ

ಚಂದ್ರಾಪೀಡೋ ವೃಷೋ ಗೌರ್ಯೈ ದರ್ಶಯಾಮಾಸ ತದ್ವನಂ ॥೨೯॥

ಸ್ವಸ್ಯಾಸ್ಯಮಾದರ್ಶತಲಂ ದದರ್ಶ
ಶರ್ವೋಽಥ ಗೌರ್ಯಾ ಪ್ರತಿಬಿಂಬಿತಂ ವನಂ ।
ಸರ್ವೈಕನಾಥಃ ಸ ಹಿ ವಿಶ್ವನಾಥೋ
ವಿಶ್ವಂ ಯಥಾ ಸ್ವಾತ್ಮಪಥಂ ಕರೋತಿ ॥೩೦॥

ಮತ್ತದ್ವಿರೇಫಕಲಹಂಸಕುಲಾಭಿರಾಮಂ
ಪುಂಸ್ಕೋಕಿಲಾಕಲಿತ ಕಾಕಲಿರಾಗಯುಕ್ತಂ ।
ಉತ್ಪುಚ್ಛಗುಚ್ಛಸಮರೈಶ್ಚಮರೈರುಪೇತಂ
ತ್ರ್ಯಕ್ಷೋ ಮುದೈಕ್ಷತ ಶಿವಃ ಶಿವಯಾ ಸಮೇತಃ ॥೩೧॥

ಶಾರದಮುದಿರಾಭಫುಲ್ಲಮಲ್ಲೀ
ಸುಮಗಂಧೋದ್ಧತಮೇದುರಂ ವನಾಂತಂ ।

---

ದಲ್ಲಿ ಪರಶಿವನು ದಿವ್ಯಾಂಗರಾಗ ಸುಂದರನಾಗಿ ಪಾರ್ವತಿಯೊಡನೆ ವಿಹರಿಸುತ್ತಾ ಆ ಉದ್ಯಾನದ ಸೊಬಗನ್ನೆಲ್ಲಾ ಪ್ರತ್ಯೇಕ ಪ್ರತ್ಯೇಕವಾಗಿ ದೇವಿಗೆ ತೋರ್ಪಡಿಸುತ್ತಿದ್ದನು. ॥೨೭-೨೮-೨೯॥

ಗೌರೀಸಹಿತನಾದ ಪರಶಿವನ ಮುಖವೇ ಆ ಉದ್ಯಾನವನದಲ್ಲಿ ಪ್ರತಿಬಿಂಬಿಸುತ್ತಿದ್ದಿತು. ಇದನ್ನು ನೋಡಿದರೆ ಸರ್ವಲೋಕೇಶ್ವರನೂ, ಜಗದಾಕಾರನೂ ಆದ ಪರಶಿವನಲ್ಲಿ ಜಗತ್ತೆಲ್ಲಾ ಅಡಗಿರುವಂತೆ, ಪರಶಿವನ ಪ್ರತಿಬಿಂಬವೂ ಎಲ್ಲೆಡೆಯಲ್ಲಿಯೂ ತೋರುತ್ತಿದೆಯೋ ಎಂಬಂತೆ ಕಾಣುತ್ತಿದ್ದಿತು. ॥೩೦॥

ಆ ಉದ್ಯಾನವನವು ಮದಿಸಿದ ಭ್ರಮರಗಳ ಇಂಚರದಿಂದಲೂ, ಕಲಹಂಸಗಳ ಮಂದಗತಿಯಿಂದಲೂ ಸುಂದರವಾಗಿತ್ತು. ಗಂಡು ಕೋಗಿಲೆಗಳು ಸರ್ವದಾ ಮದಿಸಿ ತಮ್ಮ ಸೂಕ್ಷ್ಮಧ್ವನಿಯಿಂದ ಇಂಪಾದ ರಾಗವನ್ನು ಬೀರುತ್ತಿದ್ದುವು. ಚಮರೀಮೃಗಗಳು ತಮ್ಮ ಬಾಲಗಳನ್ನು ಕೆದರಿಕೊಂಡು ರಭಸದಿಂದಶುಭ್ರವಾಗಿ ಓಡಾಡುತ್ತಿದ್ದುವು. ಇಂತಹ ಉದ್ಯಾನವನವನ್ನು ತ್ರಿಲೋಚನನೆನಿಸಿದ ಪರಶಿವನು ಪಾರ್ವತಿಯೊಡಗೂಡಿ ಸಂತೋಷದಿಂದ ನೋಡುತ್ತಿದ್ದನು. ॥೩೧॥

ಶರತ್ಕಾಲದ ಮೇಘದಂತೆ ಶುಭ್ರವಾಗಿ ಹೊಳೆಯುವ ಮಲ್ಲಿಗೆ ಹೂವುಗಳ ಸುವಾಸನೆಯಿಂದ ಆ ವನಪ್ರದೇಶವೇ ತುಂಬಿಹೋಗಿದ್ದಿತು. ಇಂತಹ ಗಿರಿಶಿಖರದ

ಸ ದಿನಾಂತೇಥ ವಸಂತವಾಸರೇ
ಶಿಖರೇ ಶೈಲವರೇ ದದರ್ಶ ಶರ್ವಂ ॥೩೨॥

ಭಲ್ಲಾಲಿಂಗಿತ ಕುಂದವಲ್ಲೀ ಕಲಿಕಾಮುತ್ಫುಲ್ಲಮಲ್ಲೀಗಣಂ
ತಜ್ಜಾತಾಮಲ ದಿವ್ಯಗಂಧ ಸುಮಹಾ ಬಂಧಾಂಧ ಸನ್ಮಾರುತಂ ।
ಜಿಘ್ರುತ್ಸಾಂಬಶಿವಸ್ತದಾಸ್ತಶಿಖರೇ ಕೈಲಾಸಭೂಭೃದ್ವರೇ ॥೩೩॥

ತಮಾಲತಿಲಕಾಲಕಂ ತಿಲಕಿತಾಚ್ಛಸತ್ಕೇತಕಂ
ಪ್ರಫುಲ್ಲವನರಾಜಿಕಂ ಶಿವಪದಾಬ್ಜಸಂಸೇವಕಂ ।
ದದರ್ಶ ಶಿಖರಾವೃತಂ ಹರಿತಪೀತರೀತೀಯುತಂ
ಪ್ರಫುಲ್ಲನಗಸಂಯುತಂ ಗಿರಿಮಥೈಕ್ಷದಂಬಾಯುತಃ ॥೩೪॥

---

ಉದ್ಯಾನವನದಲ್ಲಿ ಸಾಯಂಕಾಲದವೇಳೆ ವಸಂತಋತುವಿನಲ್ಲಿ ಶಂಕರನು ಪಾರ್ವತಿಯೊಡನೆ ಸಂಚರಿಸುತ್ತಿದ್ದನು. ॥೩೨॥

ಕೋಲುಮಲ್ಲಿಗೆ ಹೂವಿನಿಂದ ತುಂಬಿದ ಮಲ್ಲಿಕಾಲತೆಗಳು ಭಲ್ಲವೃಕ್ಷಕ್ಕೆ ಹಬ್ಬಿ ತಮ್ಮ ಹೂಗಳ ವಾಸನೆಯನ್ನು ಎಲ್ಲೆಡೆಗೂ ಹರಡುತ್ತಿದ್ದುವು. ಆ ವಾಸನೆಯನ್ನು ಹೊತ್ತು ಮಂದಮಾರುತವು ಸರ್ವತ್ರ ಹರಡುತ್ತಾ ವನವನ್ನೆಲ್ಲಾ ಗಂಧಮಯವನ್ನಾಗಿ ಮಾಡುತ್ತಿದ್ದಿತು. ಇಂತಹ ಕೈಲಾಸಗಿರಿಯ ಅಸ್ತಶಿಖರದಲ್ಲಿ ಪರಶಿವನು ದೇವಿಯ ಜೊತೆಯಲ್ಲಿ ಸರ್ವದಾ ವಿಹರಿಸುತ್ತಿದ್ದನು. ॥೩೩॥

ಆ ಕೈಲಾಸಗಿರಿಯಾದರೋ ಹೊಂಗೆಯ ಮತ್ತು ತಿಲಕವೃಕ್ಷಗಳೆಂಬ ಮುಂಗುರುಳಿನಿಂದ ಶೋಭಿಸುತ್ತಿದ್ದಿತು. ತಾಳೆಯ ಮರಗಳು ಈ ಗಿರಿಗೆ ತಿಲಕದಂತೆ ಕಾಣುತ್ತಿದ್ದುವು. ಅರಳಿದ ಹೂವುಗಳಿಂದ ತುಂಬಿದ ವೃಕ್ಷಗಳು ಅಲ್ಲಿ ಸಾಲಾಗಿ ಕಂಗೊಳಿಸುತ್ತಿದ್ದು ಸದಾ ಈಶ್ವರನ ಪಾದವನ್ನು ಸೇವಿಸುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ಅದರ ಶಿಖರಗಳಾದರೋ, ಹಸುರು, ಹಳದಿ ಮುಂತಾದ ಬಣ್ಣ ಬಣ್ಣಗಳಿಂದ ಕೂಡಿ ಹೊಳೆಯುತ್ತಿದ್ದುವು. ಇಂತಹ ಪರ್ವತವನ್ನು ಪರಶಿವನು ಸಂತೋಷದಿಂದ ನೋಡಿ ಆನಂದಿಸುತ್ತಿದ್ದನು. ॥೩೪॥

ಕದಂಬಜಸುನಿಂಬಜೈಃ ಸಫಲಬಿಂಬವಲ್ಲೀವೃತೈಃ
ಸದಂಬುಜಸರೋವರೈಃ ವೃತಮುಪಾರಚಂಚದ್ದ್ರುಮೈಃ ।
ಹೃದಂಬರಮುದಂ ವ್ಯಧಾದ್ವರದಿಶಾಂಬರಃ ಶಂಕರೋ
ಹ್ಯಹಸ್ಕರ ನಿಶಾಕರ ಪ್ರಕಟಲೋಚನೋ ಸಾಂಬಯಾ ॥೩೫॥

ಸುನೀಪತರುಸಂವೃತಂ ಪ್ರಥಿತತಾಪಸಾಪಾಪಹಂ
ತ್ವಪಾಪಶರಣಂ ವನಂ ತಗರುಧೂಪಸಂಮೋದಿತಂ ।
ಚಿರಂತನ ತಪೋವನಂ ಶಿವವಿಹಾರತಃ ಪಾವನಂ
ದದರ್ಶ ಕಿಲ ಕಾನನಂ ಸಶಿವಯಾ ಸ್ವಕೀಯಾನತಂ ॥೩೬॥

ಪ್ರಪುಲ್ಲನಾನಾವಿಧ ಗುಲ್ಮಶೋಭಿತಂ
ಲತಾವಿತಾನಾದಿ ಮನೋರಮಂ ವನಂ ।
ವಿರೂಢಶಷ್ಪೈಃ ಪರಿತಃ ಪ್ರಿಯಂಗುಭಿಃ
ಸ ಪುಷ್ಪಿತಂ ಕಂಟಕಿತಂ ಚ ಕೇತಕೈಃ ॥೩೭॥

---

ಅಲ್ಲಿ ಅನೇಕ ಕದಂಬವೃಕ್ಷಗಳು ಫಲಭರಿತಗಳಾಗಿ ನಿಂತಿದ್ದುವು. ಅನೇಕ ಲತಾಗೃಹಗಳೂ, ಮನೋಹರವಾದ ವೃಕ್ಷಗಳೂ, ಸರೋವರಗಳೂ, ಅವುಗಳ ಸುತ್ತಲೂ ಸುಂದರವಾಗಿ ಕಾಣುವ ತರುರಾಜಿಗಳೂ, ಶಂಕರನ ಮನಸ್ಸನ್ನೂ ಕಣ್ಣನ್ನೂ ಆಕರ್ಷಿಸುವಂತಿದ್ದುವು. ಇಂತಹ ವನದಲ್ಲಿ ಮಹಾದೇವನು ದೇವಿಯೊಡನೆ ವಿಹರಿಸಿದನು. ॥೩೫॥

ಅಲ್ಲಿ ಆರಣ್ಯವು ನೀಪವೃಕ್ಷಗಳಿಂದ ತುಂಬಿ ತಂಪಾದ ನೆರಳನ್ನು ಕೊಟ್ಟು ಸಮಸ್ತ ತಾಪವನ್ನೂ ಪರಿಹರಿಸುವಂತಿತ್ತು. ಅಲ್ಲಿ ಸದಾ ಪುಣ್ಯಶಾಲಿಗಳಿಗೆ ಮಾತ್ರ ಆಶ್ರಯದೊರಕುತ್ತಿದ್ದಿತು. ತಗರು ಧೂಪದಿಂದ ಸದಾ ವನವು ಗಮಗಮಿಸುತ್ತಿದ್ದಿತು. ಹೀಗೆ ಶಿವಸಂಚಾರದಿಂದ ಅತ್ಯಂತ ಪಾವನವೆನಿಸಿದ್ದ ಆ ಆರಣ್ಯವು ಪಾರ್ವತೀ ಸಹಿತನಾದ ಪರಶಿವನಿಗೆ ತಲೆಬಗ್ಗಿ ನಮಸ್ಕರಿಸುತ್ತಿರುವಂತೆ ಆನಂದದಾಯಕವಾಗಿದ್ದಿತು. ॥೩೬॥

ಮತ್ತು ಆ ಅರಣ್ಯದಲ್ಲಿ ನಾನಾವಿಧವಾದ ಅರಳಿದ ಹೂಗೊಂಚಲುಗಳೂ, ಲತಾಗೃಹಗಳೂ, ಸೊಂಪಾಗಿ ಬೆಳೆದಿರುವ ಎಳೆ ಹುಲ್ಲೂ, ಸುತ್ತಲೂ ಬೆಳೆದಿರುವ ಪ್ರಿಯಂಗು (ಪ್ರೇಂಕಣ) ವೃಕ್ಷಗಳೂ, ಮುಳ್ಳಿನಿಂದ ಕೂಡಿ ಸುವಾಸನೆಯುಳ್ಳ

ತಮಾಲಗುಚ್ಛೈರ್ನಿಚಿತಂ ಸುಗಂಧಿಭಿ
ರ್ನಿಕಾಮಪುಷ್ಪೈರ್ಬಕುಲೈಶ್ಚ ಸರ್ವಶಃ ।
ಅಶೋಕಪುನ್ನಾಗವನೈಃ ಸುಪುಷ್ಪಿತೈಃ
ದ್ವಿರೇಫಮಾಲಾಕುಲ ಪುಷ್ಪಸಂಚಯೈಃ ॥೩೮॥

ಕ್ವಚಿತ್ಪ್ರಫುಲ್ಲಾಂಬುಜರೇಣುರೂಷಿತಂ
ವಿಹಂಗಮೈಶ್ಚಾರುಕಲಪ್ರಣಾದಿತಂ ।
ವಿನಾದಿತಂ ಸಾರಸಹಂಸಪಂಕ್ತಿಭಿಃ
ಪ್ರಮತ್ತದಾತ್ಯೂಹರುತೈಶ್ಚ ಬೋಧಿತಂ ॥೩೯॥

ಕ್ವಚಿಚ್ಚ ಚಕ್ರಾಹ್ವರುತೈರ್ವಿನಾದಿತಂ
ಕ್ವಚಿಚ್ಚ ಕಾರಂಡವನಾದಮಂಡಿತಂ ।
ಕ್ವಚಿಚ್ಚ ಮತ್ತಾಲಿಕುಲಾಕುಲೀಕೃತಂ
ಮದಾಕುಲಾಭಿರ್ಭ್ರಮರಾಂಗನಾದಿಭಿಃ ॥೪೦॥

---

ಹೂವನ್ನು ಬಿಡುತ್ತಿರುವ ಕೇತಕೀ ಹೂಗಳ ಸಾಲೂ ನೋಡಲು ಬಹು ಮನೋಹರವಾಗಿ ಕಂಡುಬರುತ್ತಿದ್ದುವು. ॥೩೭॥

ಸುವಾಸನೆಯನ್ನು ಬೀರುವ ಹೊಂಗೆಯಮರಗಳೂ, ಅತಿಯಾಗಿ ಹೂ ಬಿಟ್ಟಿರುವ ಬಕುಲವೃಕ್ಷಗಳೂ, ಬಣ್ಣಬಣ್ಣದ ಹೂವಿನಿಂದ ರಂಜಿಸುವ ಅಶೋಕ ಮತ್ತು ಪುನ್ನಾಗವೃಕ್ಷಗಳೂ, ದುಂಬಿಗಳು ಮಾಲಾರೂಪದಿಂದ ಬಂದು ಮುತ್ತುತ್ತಲಿರುವ ಹೂವಿನ ಸಮೂಹದಿಂದ ಕೂಡಿ ಆ ವನವು ರಂಜಿತವಾಗಿದ್ದಿತು. ॥೩೮॥

ಒಂದು ಕಡೆ ಅರಳಿದ ತಾವರೆಗಳ ಪರಾಗವೂ, ಒಂದು ಕಡೆ ಅವ್ಯಕ್ತಮಧುರವಾಗಿ ಕೂಗುವ ಹಕ್ಕಿಗಳೂ, ಒಂದು ಕಡೆ ಸಾರಸಹಂಸಗಳ ಸಾಲೂ, ಒಂದು ಕಡೆ ಕಾಲಕಂಟಕ ಪಕ್ಷಿಗಳ ಸುಂದರಗಾನವೂ ಕೇಳಿಬರುತ್ತಾ, ಆ ವನವೇ ವಿಶೇಷವಾದ ಒಂದು ರೀತಿಯಲ್ಲಿ ಶೋಭಿಸುತ್ತಿದ್ದಿತು. ॥೩೯॥

ಚಕ್ರವಾಕಪಕ್ಷಿಗಳಧ್ವನಿ, ಕಾರಂಡವ ಹಕ್ಕಿಗಳ ಮಧುರಗಾನ, ಮದಿಸಿದ ದುಂಬಿಗಳ ನೊರೆತ, ಮದಿಸಿ ಪುಷ್ಪಪರಾಗಕ್ಕಾಗಿ ಝೇಂಕರಿಸುತ್ತಲಿರುವ ಹೆಣ್ಣುದುಂಬಿಗಳೂ ಆ ಉದ್ಯಾನವನವನ್ನು ಒಂದೊಂದು ಕಡೆಯಲ್ಲಿ ಅಲಂಕರಿಸುತ್ತಿದ್ದುವು. ॥೪೦॥

ನಿಷೇವಿತಂ ಚಾರುಸುಗಂಧಿಪುಷ್ಪೈಃ
ಕ್ವಚಿತ್ಸುಪುಷ್ಪೈಃ ಸಹಕಾರವೃಕ್ಷೈಃ ।
ಲತೋಪಗೂಢೈಸ್ತಿಲಕೈಸ್ತಮಾಲೈಃ
ಪ್ರಗೀತ ವಿದ್ಯಾಧರ ಸಿದ್ಧಚಾರಣಂ ॥೪೧॥

ವಿವಸ್ವತ್ಪ್ರಜಾಪುಂಜಗುಂಜಾಫಲಾಢ್ಯಂ
ವಿರಾಜತ್ಸುಧಾಂಶೋಃ ಶರಾಂಶೋಭಿಮಧ್ಯಂ ।
ಗಿರಾವದ್ರಿವೃಂದ ಪ್ರಭಾನೀಲವಸ್ತ್ರಂ
ವಿಯದ್ವ್ಯಾಧವೇಶ್ಮೇವ ವಿಶ್ವಂ ವಿಭಾತಿ ॥೪೨॥

ಪ್ರವೃತ್ತನೃತ್ತಾನುಗತೋಪ್ಸರೋಗಣಂ
ಪ್ರಹೃಷ್ಟ ನಾನಾವಿಧ ಪುಷ್ಪಸನ್ಮೃಗಂ ।
ಪ್ರಮತ್ತಹಾರೀತ ಕುಲೋಪಪನ್ನಂ
ಮೃಗೇಂದ್ರನಾದಾಕುಲಸನ್ನಶಂಬರಂ ॥೪೩॥

---

ಸುಗಂಧಮಯವಾದ ಪುಷ್ಪಗಳೂ, ಪುಷ್ಪವಾಗಿ ಬೆಳೆದಿರುವ ಮಾವಿನಮರಗಳೂ, ಬಳ್ಳಿಗಳಿಂದ ತುಂಬಿರುವ ತಿಲಕವೃಕ್ಷಗಳೂ, ಹೊಂಗೆಮರಗಳೂ, ಇದರ ಅಕ್ಕಪಕ್ಕದಲ್ಲಿ ಗಾನಮಾಡುತ್ತಾ ಸಂಚರಿಸುವ ಸಿದ್ಧವಿದ್ಯಾಧರಾದಿಗಳೂ ಅಲ್ಲಿ ಕಂಡು ಬರುತ್ತಿದ್ದರು. ॥೪೧॥

ಸೂರ್ಯಕಿರಣಗಳಂತೆ ಹೊಳೆಯುವ ಗುಲಗಂಜಿಮಾಲೆಗಳೂ, ಚಂದ್ರಕಿರಣಗಳಿಂದ ಶೋಭಿಸುವ ಬಾಣಬತ್ತಳಿಕೆಗಳೂ, ಬೆಟ್ಟಗಳ ಮತ್ತು ಮರಗಳ ಕಾಂತಿಯೆಂಬ ಕಪ್ಪಾದ ಬಟ್ಟೆಗಳೂ, ಪ್ರಪಂಚವನ್ನೇ ಹೊಡೆಯುವ ಕಿರಾತರೂಪಿಯಾದ ಪರಶಿವನ ಮನೆಗೆ ತಕ್ಕವುಗಳಾಗಿ ಶೋಭಿಸುತ್ತಿದ್ದುವು. ಇದರಿಂದ ಆ ವನವೇ ಒಂದು ವ್ಯಾಧಪ್ರಪಂಚದಂತೆ ವಿಶೇಷವಾಗಿ ಕಂಗೊಳಿಸುತ್ತಿದ್ದಿತು. ॥೪೨॥

ಅಲ್ಲಲ್ಲಿ ಸಂಗೀತದಿಂದ ನಾಟ್ಯವಾಡುವ ಅಪ್ಸರಸ್ತ್ರೀಯರೂ, ಕಪ್ಪಾದ ಪುಷ್ಪಗಳೆಂಬ ದೇಹಗಳಿಂದ ಓಡಾಡುವ ಮೃಗಗಳಿಂದಲೂ, ಹಾರೀತ ಪಕ್ಷಿಗಳ ಗುಂಪಿನ ಇಂಪಾದ ಗಾನದಿಂದಲೂ, ಸಿಂಹಗಳ ಗರ್ಜನಾರವದಿಂದಲೂ ತುಂಬಿರುವ ಆ ಉದ್ಯಾನವು ಮನಮೋಹಕವಾಗಿ ಕಂಗೊಳಿಸುತ್ತಿದ್ದಿತು. ॥೪೩॥

ಕ್ವಚಿಚ್ಚ ರುದ್ರೋರೀರುಕದಂಬವೃಗ್ಯ
ವಿಲೂನ ಶಷ್ಪಾಂಕುರ ಚಾಷ್ಪಮಂಡಿತಂ ।
ಪ್ರಫುಲ್ಲಸದ್ಧಲ್ಲಕ ನೀಲಕೋತ್ಪಲೈಃ
ಸತ್ಪುಂಡರೀಕೈಃ ಕಮಲೈಶ್ಚ ಶೋಭಿತಂ ॥೪೪॥

ವಿಟಪಿನಿಚಯಮಂ ನೀಲಂ ನೀಲಕಂಠಾಭಿರಾಮಂ
ಮದಮುದಿತವಿಹಂಗವ್ರಾತನಾದಾಭಿರಾಮಂ ।
ಕುಸುಮಿತತರು ಶಾಖಾನೀಲಮತ್ತದ್ವಿರೇಫಂ
ನವಕಿಸಲಯ ಶೋಭಾಶೋಭಿತಪ್ರಾಂತಶಾಖಂ ॥೪೫॥

ಕ್ವಚಿಚ್ಚ ದಂತಿಕ್ಷತಚಾರುವೀರುಧಂ
ರುಂಧಂತಮಾದಿತ್ಯಪಥೋರುವೇಣುಂ ।
ಕ್ವಚಿಲ್ಲತಾಲಿಂಗಿತ ಕಲ್ಪವೃಕ್ಷಂ
ಖುಕ್ಲಾಘು ಸಂವಾರಿತ ಮೂಲಭಾಗಂ ॥೪೬॥

---

ತಂಡತಂಡವಾಗಿ ಓಡಾಡುವ ಜಿಂಕೆಗಳ ಸಮೂಹದಿಂದ ಕಡಿದು ಕತ್ತರಿಸಲ್ಪಟ್ಟ ಹುಲ್ಲುಗರಿಕೆಗಳ ಚೂರುಗಳೂ, ಅರಳಿದ ಕಲ್ಹಾರ, ಕಮಲ, ನೀಲೋತ್ಪಲ, ರಕ್ತೋತ್ಪಲ ಇವುಗಳ ಸಮೂಹವೂ, ಆ ಉದ್ಯಾನವನ್ನು ವಿಶೇಷವಾಗಿ ಮನೋಹರಗೊಳಿಸುತ್ತಿದ್ದಿತು. ॥೪೪॥

ನೀಲವರ್ಣದಿಂದ ಶೋಭಿಸುತ್ತಾ, ಕೋಗಿಲೆ, ನವಿಲು ಮುಂತಾದ ಮದಿಸಿದ ಪಕ್ಷಿಗಳ ಧ್ವನಿಯಿಂದ ಸುಂದರವಾಗಿ ಕಾಣುತ್ತಾ, ಮರಗಳ ಗುಂಪು, ಗೊಂಚಲು ಗೊಂಚಲಾದ ಹೂಗಳನ್ನೂ, ಅದರಲ್ಲಿ ಹಾರಾಡುವ ಭ್ರಮರ ಪಂಕ್ತಿಯನ್ನೂ, ತಮ್ಮ ತುದಿಗಳಲ್ಲಿ ವಿರಾಜಿಸುವ ಕೆಂಪಾದ ಚಿಗುರುಗಳನ್ನೂ ಹೊಂದಿ ಪ್ರಕಾಶಿಸುತ್ತಾ ಪರಶಿವನನ್ನು ಆನಂದಗೊಳಿಸುತ್ತಿರುವುವು. ॥೪೫॥

ಆ ಕಾಡಿನಲ್ಲಿ ಆನೆಗಳಿಂದ ಎಳೆಯಲ್ಪಟ್ಟ ಬಳ್ಳಿಗಳೂ, ಸೂರ್ಯಮಂಡಲವನ್ನೇ ಮುಟ್ಟುವಂತಿರುವ ಬಿದಿರುಮೆಳೆಗಳೂ, ಬಳ್ಳಿಗಳಿಂದ ಸುತ್ತುವರಿಯಲ್ಪಟ್ಟ ಕಲ್ಪವೃಕ್ಷಗಳೂ, ಮರದ ಬುಡಗಳಲ್ಲಿ ವ್ಯಾಪಿಸಿರುವ ಕರಡಿಗಳ ಗುಂಪೂ, ನೋಡಲು ಬಹು ರಮಣೀಯವಾಗಿ ಕಾಣುತ್ತಿದ್ದುವು. ॥೪೬॥

ಕ್ವಚಿದ್ವಿಲಾಸಾಲಸಗಾಮಿನೀಭಿ
ರ್ನಿಷೇವಿತಂ ರುದ್ರಗಣಾಂಗನಾಭಿಃ ।
ಪಾರಾವತಧ್ವನಿಭಿರೂರ್ಜಿತಚಾರುಶೃಂಗ
ಮಭ್ರಂಕಷೈಃ ಶೀತ ಸಿತಾಯಿತಪರ್ವತಾಗ್ರೈಃ ॥೪೭॥

ಸಂಕೀರ್ಣಪುಷ್ಪನಿಕರಪ್ರವಿಭಕ್ತಭಾಸೈ
ರ್ವಿಭ್ರಾಜಿತೈರಭ್ರಸಮೈಶ್ಚ ಶೃಂಗೈಃ ।
ಪ್ರಾಂತೋದ್ಭವಾಗರು ದವೋದ್ಭವ ಧೂಮರೇಖಾ
ಲೇಖಾಮುಖಾಘ್ರಾಣಮುಖೈಕಸನ್ಮುಖಂ ॥೪೮॥

ವೃಕ್ಷಾಗ್ರ ಸಂಗಲಿತಪುಷ್ಪವಿಚಿತ್ರಪಂಕ್ತಿ
ಸಂಬದ್ಧ ಗುಲ್ಮವಿಹಗೈರ್ಗಹನಂ ದದರ್ಶ ॥೪೯॥

ತುಂಗಾಗ್ರೈರ್ನೀಲಪುಷ್ಪಸ್ತಬಕಭರನತಪ್ರಾಂಶು ಶಾಖಾಶಿಖಾಭಿ
ರ್ಮಾಲಾಪ್ರಾಂತಾಂತಲೀನ ಶ್ರುತಿಮುಖಜನನೈಃ ಕೂಜಿತಂ ಪಕ್ಷಿಸಂಘೈಃ ।

---

ಅಲ್ಲಲ್ಲಿ ರುದ್ರಾಣಿಯರ ತಂಡವು ಮಂದಗಮನದಿಂದ ತಮ್ಮ ಬೆಡಗಿನ ಪರಂಪರೆಯನ್ನು ಎರಚುತ್ತಾ ನಡೆಯುತ್ತಿರುವುದು. ಪಾರಾವತಪಕ್ಷಿಗಳು ಧ್ವನಿಗೈಯ್ಯುತ್ತಿರುವುವು. ಆ ಕೈಲಾಸದ ಹಿಮಪೂರಿತವಾದ ಶಿಖರಗಳು ಶುಭ್ರವಾಗಿ ತೋರುತ್ತಾ ಅಂತರಿಕ್ಷವನ್ನು ಸ್ಪರ್ಶಮಾಡುತ್ತಿರುವಂತೆ ತೋರುತ್ತಿದ್ದುವು. ॥೪೭॥

ಪ್ರತಿಶಿಖರಗಳೂ ಪುಷ್ಪಲತೆಗಳಿಂದಾವೃತವಾಗಿ ಮೇಘಮಂಡಲದಂತೆ ಪ್ರಕಾಶಿಸುತ್ತಿದ್ದುವು. ಆ ಗಿರಿಶಿಖರಗಳ ಪಕ್ಕಗಳಲ್ಲಿ ಬೆಳೆದಿರುವ ಅಗುರು ವೃಕ್ಷಗಳು ಕಾಡುಕಿಚ್ಚಿನಿಂದ ಉರಿದು ಧೂಪ ಧೂಮವನ್ನು ಎರಚುತ್ತಾ ಮನೋಹರವಾಗಿರುವುವು. ಆ ಧೂಪವನ್ನು ಈ ಗಿರಿಶಿಖರಗಳು ಆಘ್ರಾಣಿಸುತ್ತಿವೆಯೋ ಎಂಬಂತೆ ತೋರುತ್ತಿದ್ದುವು. ॥೪೮॥

ಮರಗಳ ತುದಿಗಳಲ್ಲಿ ಸಾಲಾಗಿ ರಂಜಿಸುವ ಪುಷ್ಪರಾಜಿಗಳೂ, ಮರಗಳ ಬುಡದಲ್ಲಿ ಕಂಡುಬರುವ ಪಕ್ಷಿಗಳ ಗೂಡುಗಳೂ, ಆ ಅರಣ್ಯದಲ್ಲಿ ಸುಂದರವಾಗಿ ಕಾಣುತ್ತಿದ್ದುವು. ಇಂತಹ ಉದ್ಯಾನವನ್ನು ಪರಶಿವನು ಸಂತೋಷದಿಂದ ನೋಡಿದನು. ॥೪೯॥

ನೀಲಪುಷ್ಪಗಳ ಗೊಂಚಲಿನ ಭಾರದಿಂದ ಬಗ್ಗಿದ ಮರಗಳಿಂದಲೂ, ಸಾಲು

ರಾತ್ರೌ ಚಂದ್ರಸ್ಯ ಭಾಸಾ ಕುಸುಮಿತತಿಲಕೈರೇಕಧಾ ತಂ ಪ್ರಯಾಂತಂ
ಛಾಯಾಸುಪ್ತಪ್ರಬುದ್ಧಸ್ಥಿತ ಹರಿಣಗಣಾಲುಪ್ತ ದೂರ್ವಾಂಕುರಾಗ್ರಂ॥೫೦॥

ಹಂಸಾನಾಂ ಪಕ್ಷವಾತ ಪ್ರಚಲಿತ ಕಮಲಸ್ವಚ್ಛಸಂಪೂರ್ಣತೋಯಂ
ತತ್ತೀರ ಪ್ರಥಿತೋರು ಚಾರು ಕದಲೀಸಾಲಿನೃತ್ಯನ್ಮಯೂರಂ ।
ಮಾಯೂರೈಃ ಪಕ್ಷಚಂದ್ರೈಃ ಕ್ವಚಿದವಪತಿತೈರರ್ಚಿತಕ್ಷ್ಮಾಪ್ರದೇಶೇ
ಭಾಸೇ ವಿಲೀನಪ್ರಮುದಿತವಿಗಲತ್ಸಾಂಪ್ರಕಸ್ತೂರಿಕೈಣಂ ॥೫೧॥

ಸಾರಂಗೈರುಪವನ ಶೋಭಿ ಸತ್ಪ್ರದೇಶಂ
ಪ್ರಚ್ಛನ್ನಂ ಕುಸುಮಚಯೈಃ ಕ್ವಚಿದ್ವಿಕೀರ್ಣಂ ।
ಹೃಷ್ಟಾಭಿಃ ಕ್ವಚಿದಪಿ ರುದ್ರಕಾಂಗನಾಭಿಃ
ವೀಣಾಭಿಃ ಸುಮಧುರ ಗೀತರಮ್ಯಷಂಡಂ ॥೫೨॥

---

ಸಾಲಾಗಿ ಮರಗಳಮೇಲೆ ಹಾರಾಡುತ್ತಾ ಧ್ವನಿಗೈಯ್ಯುತ್ತಿರುವ ಪಕ್ಷಿಗಳ ಸಮೂಹದಿಂದಲೂ, ರಾತ್ರಿಯು ಹೊತ್ತಿನಲ್ಲಿ ಚಂದ್ರಿಕೆಯ ಕಾಂತಿಯಿಂದಲೂ ಮತ್ತು ಹೆಚ್ಚಾಗಿ ಅರಳಿರುವ ತಿಲಕಪುಷ್ಪಗಳ ಸಾಲಿನಿಂದಲೂ, ಮರಗಳ ನೆರಳಿನಲ್ಲಿ ಮಲಗಿ ನಿದ್ರಿಸಿ ಮೇಲೆದ್ದ ಜಿಂಕೆಗಳಿಂದ ಅರ್ಧಕಚ್ಚಿ ತಿನ್ನಲ್ಪಟ್ಟ ಎಳಗರಿಕೆಯಿಂದಲೂ, ಶೋಭಿಸುವ ಉದ್ಯಾನವನವು ಶಂಕರನಿಗೆ ಆನಂದದಾಯಕವಾಗಿತ್ತು. ॥೫೦॥

ಹಂಸಗಳ ಗರಿಗಳಿಂದ ಬೀಸಲ್ಪಟ್ಟು ಸ್ವಚ್ಛವಾಗಿ ಕಮಲಗಳಿಂದ ಕಂಗೊಳಿಸುವ ಸರೋವರಗಳಿಂದಲೂ, ತೀರದಲ್ಲಿ ತಾನೇತಾನಾಗಿ ಬೆಳೆದಿರುವ ಬಾಳೆಯ ಗಿಡಗಳ ಮಧ್ಯದಲ್ಲಿ ಓಡಾಡುವ ನವಿಲುಗಳಿಂದಲೂ, ಸಂತೋಷದಿಂದ ವಿಹರಿಸುವ ಕಸ್ತೂರೀಮೃಗಗಳೂ, ಜಿಂಕೆಗಳೂ ಮುಂತಾದ ಪ್ರಾಣಿಗಳಿಂದಲೂ ಆ ಉದ್ಯಾನವನವು ಬಹು ಸುಂದರವಾಗಿ ತೋರಿಬರುತ್ತಿದ್ದಿತು. ॥೫೧॥

ಆ ಉದ್ಯಾನವನದಲ್ಲೆಲ್ಲಾ ಸಾರಗಗಳೆಂಬ ಜಿಂಕೆಯ ಜಾತಿಯು ದೊಡ್ಡ ಪ್ರಾಣಿಗಳು ಎಲ್ಲ ಪ್ರದೇಶಗಳಲ್ಲಿಯೂ ಓಡಾಡಿಕೊಂಡಿರುವುವು. ನಾನಾಜಾತಿಯ ಪುಷ್ಪಗಳು ಸರ್ವತ್ರ ವ್ಯಾಪಿಸಿರುವುವು. ರುದ್ರಾಣಿಯರ ಸುಮಧುರಧ್ವನಿಯಿಂದ ಕೂಡಿದ ವೀಣಾನಾದವು ಮನೋಹರವಾಗಿ ಕಿವಿಗಳಿಗೆ ಹಿತವನ್ನುಂಟುಮಾಡುತ್ತಿರುವುದು. ॥೫೨॥

ಸಂಮೃಷ್ಟಂ ಕ್ವಚಿದಪಿ ಲಿಪ್ತಕೀರ್ಣಪುಷ್ಪೈ

ರಾವಾಸ್ಯೈಃ ಪರಿವೃತಪಾದಪೈರ್ಗಣಾನಾಂ ।

ಆಮೂಲಾತ್ಫಲನಿಚಿತೈಃ ಕ್ವಚಿದ್ವಿಶಾಲೈ

ರುತ್ತುಂಗೈಃ ಪನಸಮಹೀರುಹೈರುಪೇತಂ ॥೫೩॥

ಫುಲ್ಲಾತಿಮುಕ್ತ ಕಲತಾಗೃಹಲೀನಬದ್ಧ

ಕೇಕಾರವಾಕ್ರಮಿತ ತದ್ಗಿರಿ ಮೂಲಸಾನುಂ ।

ರಮ್ಯಂ ಪ್ರಿಯಂಗುತರುಮಂಜಿರಸಕ್ತಭೃಂಗಂ

ಭೃಂಗಾವಲೀ ಕಜ್ಜಲಿತಾಮ್ರ ಕದಂಬಪುಷ್ಪಂ ॥೫೪॥

ಪುಷ್ಪೋತ್ಕರಾನಿಲ ವಿಧೂತ ಫಣೀಂದ್ರವಕ್ತ್ರ

ಸತ್ಪಾರಣಂ ವಿದಧತಂ ಪನಮುತ್ಕುಟಾರಂ ।

ಗುಲ್ಮಾಂತರಪ್ರಸೃತಗೀತ ಮೃಗೀ ಸಮೂಹ

ನೇತ್ರಾಂತರಾಗ ಕೃದಥಾಶ್ರುತ ಶೀತವಾರಿ ॥೫೫॥

---

ಮರಗಳ ಅಧೋಭಾಗದಲ್ಲೆಲ್ಲಾ ಹೂವುಗಳು ಎರಚಲ್ಪಟ್ಟ ಬುಡದಿಂದ ತುದಿಯವರೆಗೂ ಒಂದೇ ಸಮನಾಗಿ ಹಣ್ಣುಗಳು ಬಿಟ್ಟಿರುವುವು. ಹಲಸಿನ ಮರಗಳಂತೂ ಸಂಪೂರ್ಣ ಫಲಭರಿತಗಳಾಗಿ ಶಿವಗಣಗಳಿಂದ ವ್ಯಾಪ್ತವಾಗಿ ತೋರುತ್ತಿದ್ದುವು. ॥೫೩॥

ಅರಳಿದ ಮುಕ್ತಾಲತೆಗಳಲ್ಲಿ ಕೋಗಿಲೆಗಳು ಕುಳಿತು.ಕೇಕಾಧ್ವನಿಮಾಡುತ್ತಾ ಗಿರಿಸಾನುಪ್ರದೇಶಕ್ಕೆ ಅಲಂಕಾರವನ್ನುಂಟುಮಾಡುತ್ತಿರುವುವು. ಪ್ರಿಯಂಗು ವೃಕ್ಷಗಳ ಹೂಗೊಂಚಲುಗಳಲ್ಲಿ ದುಂಬಿಗಳು ಕಪ್ಪಾಗಿ ವ್ಯಾಪಿಸಿ ಕಾಡಿಗೆಯ ಭ್ರಾಂತಿಯನ್ನುಂಟು ಮಾಡುತ್ತಾ, ಕದಂಬಪುಷ್ಪ, ಮಾವಿನಹೂವು ಇವುಗಳಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತಿರುವುವು. ॥೫೪॥

ಹೂವಿನ ಮೇಲೆ ಬೀಸಿ ಸುವಾಸನೆಯನ್ನು ಹೊತ್ತುತರುವ ಮಂದಾನಿಲವು ಅಲ್ಲಿ ವಾಸಮಾಡುವ ಹಾವುಗಳಿಗೆ ಪಾರಣೆಯೆನಿಸುವುದು. ಆ ಕಾಡಿನಲ್ಲಿರುವ ಪೊದರುಗಳಲ್ಲಿ ಅಡಗಿ ತಾವಾಗಿ ಧ್ವನಿಗೈಯ್ಯುತ್ತಿರುವ ಹೆಣ್ಣುಜಿಂಕೆಗಳ ಕಣ್ಣುಗಳ ಮೇಲೆ ಬೀಸಿ ಅದೇ ಮಂದಮಾರುತವು ಅವುಗಳ ಕಣ್ಣಿನಿಂದ ಬೀಳುವ ಬಿಸಿ ಕಣ್ಣೀರಿನಿಂದ ಕೂಡಿ ಸ್ವಲ್ಪ ಬಿಸಿಯಾಗಿಯೂ ಮುಂದುವರಿಯುತ್ತಿರುವುದು. ॥೫೫॥

ಚಂದ್ರಾಂಶುಜಾಲಕಲಶೈಸ್ತಿಲಕೈರ್ಮನೋಜ್ಞೈಃ
ಸಿಂದೂರ ಕುಂಕುಮ ಕುಸುಂಭನಿಭೈರಶೋಕೈಃ ।
ಚಾಮೀಕರಾಭ ಪರಿಫುಲ್ಲ ಸುಕರ್ಣಿಕಾರೈಃ
ಮಂದಾರ ಸುಂದರ ಸುವೃತ್ತಸುಚಾರುಶಾಖಿ ॥೫೬॥

ಕೀಲಾಲಜಾತಾನಿಲ ಲೋಲಮೂಲ
ಮೃಣಾಲಮೌಲಿಸ್ಥ ಸುಪದ್ಮಜಾಲಂ ।
ವಾತಾಹತಿಪ್ರೋದ್ಧೃತ ಪತ್ರಘರ್ಘರಂ
ವಿರಾವಿತಾಲಂ ಸುತಮಾಲಪಿಪ್ಪಲಂ ॥೫೭॥

ತ್ಯಕ್ತಾತ್ಶಿವೇನೇತಿ ಚ ಕೈತವೇನ
ಸಂಕೇತಭಾಜೋತ್ರ ವಸಂತಿ ಕೇತಕಾಃ ।
ನಾಗಾನುಬಂಧೇನ ವಿರಾಗಮುಷ್ಯಹೋ
ಶಿವಾಂಗಮುಸ್ಯಾತನುತೇ ಪರಾಗೈಃ ॥೫೮॥

---

ಚಂದ್ರಿಕೆಯಿಂದ ಶುಭ್ರವಾಗಿ ಕಾಣುವ ಕಲಶಗಳಿಂದಲೂ, ಮನೋಹರವಾದ ತಿಲಕವೃಕ್ಷಗಳಿಂದಲೂ ಕೆಂಪು ಬಣ್ಣದ ಕುಂಕುಮಾದಿಗಳಂತೆ ಹೊಳೆಯುವ ಅಶೋಕವೃಕ್ಷಗಳಿಂದಲೂ, ಸುವರ್ಣದಂತೆ ಹೊಳೆಯುವ ಕರ್ಣಿಕಾರಪುಷ್ಪಗಳಿಂದಲೂ, ಮಂದಾರಪುಷ್ಪಗಳಿಂದ ಸುಂದರವಾಗಿಯೂ ಮನೋಹರವಾಗಿಯೂ ಕಾಣುವ ವೃಕ್ಷಸಮೂಹಗಳಿಂದಲೂ ಕೂಡಿರುವ ಆ ಉದ್ಯಾನವು ಪರಶಿವನ ಕ್ರೀಡಾವಿಹಾರವಾಗಿತ್ತು. ॥೫೬॥

ನೀರಿನ ಹನಿಗಳಿಂದ ಕೂಡಿದ ಮಂದಮಾರುತವು ತಾವರೆಯ ದಂಟುಗಳನ್ನು ಅಲುಗಾಡಿಸುತ್ತಾ ನಯನಮನೋಹರವಾಗಿ ತೋರುತ್ತಿರುವುದು. ಅದೇ ಗಾಳಿಯು ಹೊಂಗೆಯ ಮತ್ತು ಅರಳಿಯ ಎಲೆಗಳನ್ನು ಅಲುಗಿಸುತ್ತಾ ಘರ್ಘರಧ್ವನಿಗೈಸುತ್ತಾ ಅರಣ್ಯವನ್ನೆಲ್ಲಾ ಶಬ್ದಾಯಮಾನವನ್ನಾಗಿ ಮಾಡುವುದು. ॥೫೭॥

ಅದೇ ಕೈಲಾಸದಲ್ಲಿ ತಾಳೆಹೂವಿನ ಮರಗಳಲ್ಲಿರುವ ಹೂವುಗಳು ಈಶ್ವರನು ತಮ್ಮನ್ನು ತಿರಸ್ಕರಿಸಿರುವನೆಂದು ಈಶ್ವರನ ಮೇಲಿನ ಸ್ಪರ್ಧೆಯಿಂದ ಅಲ್ಲಿಯೇ ವಾಸಮಾಡುತ್ತಿರುವುವೋ ಎಂಬಂತೆ ಕಾಣುವುದು. ಮತ್ತು ಶಿವನಮೇಲಿನ ಹುಮ್ಮಸ್ಸಿನಿಂದ ಶಿವನಂತೆಯೇ ನಾಗಗಳನ್ನು (ಹಾವುಗಳನ್ನು) ಸುತ್ತಿಕೊಳ್ಳುತ್ತಾ, ಶಿವನು

ಸದ್ವಾರಣಂ ವಾರಣಸಂಘಮತ್ರ
ಮಂದಾರಸಂಪಾರಿತಮೇಘಜಾಲಂ ।
ವಟಂ ಜಟಾಭಿರ್ಜಟಿಲಪ್ರಭಂ ಸದಾ
ಸದಾವೃತಂ ಕೇದಾರಣ ಕೋವಿದಾರಂ ॥೫೯॥

ಕೈಲಾಸ ಮೌಲಿಸ್ಥಿತಬಿಲ್ವಸಂಘ
ನಲ್ಪಪ್ರಮಾಣೈಸ್ಸ್ವಕರೈರ್ದಿವಾಕರಂ ।
ಸ್ವಸೋದರಂ ಶ್ರಾಂತಿಸಮನ್ವಿತಂ ವನೇ
ವಿಶ್ರಾಮಯಂತೀವ ವಿಭಾತಿ ತದ್ವನಂ ॥೬೦॥

ತಮಾಲಸಾಲಂ ಕೃತಮಾಲಜಾಲಂ
ತಕ್ಕೋಲಹಿಂತಾಲರಸಾಲಜಂ ಫಲಂ ।
ಅಂಕೋಲನಾರೇಲಫಲೈರ್ವಿಲೋಲಂ
ಕೃತಾಲವಾಲಂ ಬಹುಲಂ ವಿಭಾತಿ ॥೬೧॥

---

ಭಸ್ಮಧಾರಿಯಾಗಿರುವಂತೆ ತಾವೂ ಬಿಳಿಯ ಪರಾಗವನ್ನು ಧರಿಸಿಕೊಂಡು ಮೆರೆಯುತ್ತಿರುವುವು. (ಅಂದರೆ ಪ್ರತಿ ತಾಳೆಯಮರದಲ್ಲಿಯೂ ಹಾವುಗಳು ವಿಶೇಷವಾಗಿದ್ದುವು ಎಂದು ತಾತ್ಪರ್ಯ) (ಈಶ್ವರನಿಗೆ ತಾಳೆ ಹೂವಿನ ಅರ್ಚನೆಕೂಡದು ಎನ್ನುವುದಕ್ಕೆ ಶಿವಪುರಾಣದ ಒಂದು ಕಥೆಯು ಆಧಾರವಾಗಿದೆ.) ॥೫೮॥

ಆನೆಗಳ ಗುಂಪು ಸದಾ ಅಲ್ಲಿ ಗುಂಪುಗುಂಪಾಗಿ ವಿಹರಿಸುತ್ತಿರುವುದು. ಮಂದಾರವೃಕ್ಷಗಳು ಮೇಘಜಾಲವನ್ನು ಬಿಡಿಸುತ್ತಿರುವುವೋ ಎಂಬಂತೆ ಅತ್ಯುನ್ನತವಾಗಿ ಹೋಗಿರುವುವು. ಆಲದ ಮರದ ಬಿಳಲುಗಳು ಗುಂಪುಗುಂಪಾಗಿ ನೆಲಕ್ಕೆ ಹರಡಿದ್ದುವು. ಕೋವಿದಾರ ವೃಕ್ಷಗಳು ಭೂಮಿಯಮೇಲೆ ಹರಡಿ ಆ ಕೈಲಾಸವನ್ನೇ ಸುಂದರಮಯವನ್ನಾಗಿ ಮಾಡಿದ್ದುವು ॥೫೯॥

ಕೈಲಾಸಶಿಖರದಲ್ಲಿ ಬಿಲ್ವವೃಕ್ಷಗಳು ನಾನೂರುಮಾರುದೂರ ಹರಡಿ ತಮ್ಮ ಜೊತೆಯಲ್ಲಿ ಹುಟ್ಟಿದ ಸೂರ್ಯನ ಕಿರಣಗಳನ್ನೂ ತನ್ನಲ್ಲಿಗೇ ಎಳೆದುಕೊಂಡು ಜೊತೆಯಲ್ಲಿ ವಾಸಮಾಡಲು ನಿಲ್ಲಿಸುತ್ತಿವೆಯೋ ಎಂಬಂತೆ ಅಂತರಿಕ್ಷದಲ್ಲೆಲ್ಲಾ ಹರಡಿ ವ್ಯಾಪಿಸಿದ್ದಿತು. ॥೬೦॥

ಅಲ್ಲಿ ಮಾಲಾಕಾರವಾದ ಹೊಂಗೆಯಮರಗಳೂ, ತಕ್ಕೋಲ, ಹಿಂತಾಲ,

ಪುನ್ನಾಗ ನಾಗ ಸರಲಾರ್ಜುನ ಚಂಪಕಾಢ್ಯಂ
ಸತ್ಪಾಟಲೀಪಟಲಗಂಧ ಸುಗಂಧಿತಾಶಂ ।
ಸಚ್ಛಿಂಶುಪಾ ಬದರಿ ಶಾಲ್ಮಲಿ ಕಿಂಶುಕಾಢ್ಯಂ
ಶೋಕಾಪಹಾರಿಭಿರಶೋಕಸರಂಪರಾಢ್ಯಂ ॥೬೨॥

ಕಪಿತ್ಥ ತಿಂತ್ರಿಣೀವಕೈರ್ಧವಾಶ್ಚ ಮಾರಶೇಖರಂ
ಸುಲೋಧ್ರವಧ್ರಕಾವ್ರಕೈಃ ಸುಫುಲ್ಲದಾಡಿಮೀಫಲಂ ।
ಸುಮಾತುಲಿಂಗರಂಗಕಂ ವಿಭಾತಿ ತದ್ವನಂ ಪರಂ ॥೬೩॥

ಸುರಾದನಾಮಲಕಾ ಪೂಗಪೂರ್ಣನಾಗಜಾಂಬವಂ
ಕದಲ್ಯಯೂಥಿಕಾವೃತಂ ಸಮೀಕ್ಷ್ಯ ಚಾಂಬಯಾವಸನ್ ॥೬೪॥

ಹಸ್ತಿಪ್ರಶಸ್ತತರಹಸ್ತವಿಶಸ್ತಶಾಖಂ
ವಾತಾವಧೂತಸರಘಾ ವಿಗಲನ್ಮಧುಭೂತಲಾಢ್ಯಂ ॥೬೫॥

---

ಮಾವು, ಅಂಕೋಲ, ಕಿತ್ತಿಲೆ ಮುಂತಾದ ಮರಗಳೂ ವಿಶಾಲವಾದ ಪಾತಿಗಳಿಂದ ಕೂಡಿ ರಂಜಿಸುತ್ತಾ ನಯನಮನೋಹರವಾಗಿ ಕಾಣುತ್ತಿರುವುವು. ॥೬೧॥

ಸುರಗೀ, ನಾಗಪುಷ್ಪ, ಸರಲಪುಷ್ಪ, ಅರ್ಜುನವೃಕ್ಷ, ಸಂಪಿಗೆಮರ, ಪಾದರೀ ಮರ ಇವುಗಳ ಸುವಾಸನೆಯಿಂದ ಸಮಸ್ತ ದಿಕ್ಕುಗಳೂ ಗಮಗಮಿಸುತ್ತಿರುವುವು. ಶಿಂಶುಪಾವೃಕ್ಷ, ಬದರಿ, ಬೂರುಗ, ಮುತ್ತುಗ, ಅಶೋಕ ಈ ಮರಗಳು ಪುಷ್ಪ ಭರಿತಗಳಾಗಿದ್ದು ನೋಡುವವರ ಮನೋದುಃಖವನ್ನೆಲ್ಲಾ ಹೋಗಲಾಡಿಸುತ್ತಿರುವುವು. ॥೬೨॥

ಬೇಲ, ಹುಣಿಸೆ, ಬಕಪುಷ್ಪ, ಧವ (ಕಗ್ಗಲೀಮರ) ಮಾರಶೇಖರ ? ಹಿಪ್ಪೆ, ವಧ್ರಕ (ಕಾಡುಹುಣಿಸೆ) ಮಾವು, ದಾಳಿಂಬೆ, ಮಾದಳ, ದೇವಲೋಕದ ನೆಲ್ಲಿಕಾಯಿಗಳು, ಪೂರ್ಣವಾದ ಜಂಬೂನೇರಿಲೆ, ಬಾಳೆ, ಸೇವಂತಿಗೆ ಇವೇ ಮೊದಲಾದ ಫಲಪುಷ್ಪಗಳಿಂದ ತುಂಬಿರುವ ಉದ್ಯಾನವನದಲ್ಲಿ ಶಂಕರನು ಪಾರ್ವತಿಯೊಡನೆ ವಿಹರಿಸುತ್ತಾ ಆನಂದದಿಂದ ಕಾಲಕಳೆದನು. ॥೬೪॥

ದೊಡ್ಡ ದೊಡ್ಡ ಆನೆಗಳು ತಮ್ಮ ಸೊಂಡಲಿನಿಂದ ಮರಗಳ ಕೊಂಬೆಗಳನ್ನು ಎಳೆದು ಬಗ್ಗಿಸುತ್ತಿರುವುವು. ಜೇನುಹುಳುಗಳು ತಮ್ಮ ಹುಟ್ಟಿಯಿಂದ ಜೇನುತುಪ್ಪ

ಗೋಲಾಂಗೂಲ ಸುಹುಂಕೃತಾದ್ಧೃತಿಪತಜ್ಜಂಬೂಫಲಾಲೀಯುತಂ ।
ಭ್ರಾಜದ್ಭೂಮಿತಲಂ ದ್ವಿರೇಫ ಕುಲವದ್ರಾರಾಜತೇ ತದ್ವನಂ ॥೬೬॥

ಇರಣಂ ಖರಪ್ರಕರಕಿರಣೈ
ರರುಣಂ ತತ್ಪ್ರವಿಭಾತಿ ವೈ ಗಿರೀಂದ್ರೇ ।
ಸುದರಿದ್ರೇ ವಿಷಮಾ ಯಥಾ ಫಲಾ
ತೃಣಮಾತ್ರಂ ನ ಹಿ ರೋಹತೇ ಹಿ ತತ್ರ ॥೬೭॥

ರಾಜೀವರಾಜದ್ವನರಾಜಿರೀಶಂ
ನೀರಾಜತೀವ ಪ್ರವಿಭಾತಿ ತದ್ಗಿರೇಃ ।
ಕೋಲೋರು ದಂಷ್ಟ್ರಾಭಿವಿಶಸ್ತಮುಸ್ತ
ಭ್ರಾಷ್ಟ್ರೇ ವಸಂ ಘೃಷ್ಟ ಶಿಲಾತಲಾ ಭೂಃ ॥೬೮॥

---

ವನ್ನು ಸುರಿಸಿ ನೆಲವನ್ನೆಲ್ಲಾ ನೆನೆಸುತ್ತಿರುವುವು. ಅಲ್ಲಲ್ಲಿ ವಿಹರಿಸುವ ಎತ್ತುಗಳು ತಮ್ಮ ಬಾಲಗಳನ್ನು ಅಲ್ಲಾಡಿಸುವಾಗ ಅವು ನೇರಳೆ ಹಣ್ಣುಗಳ ಗೊಂಚಲಿಗೆ ತಗುಲಿ, ಆದರಿಂದ ಎಲ್ಲ ಹಣ್ಣುಗಳೂ ಕೆಳಗೆ ಉದುರುತ್ತಿರುವುವು. ಹಣ್ಣು ಹೂವುಗಳ ಸುವಾಸನೆಗಾಗಿ ಎಲ್ಲ ದುಂಬಿಗಳೂ ನೆಲವನ್ನು ಮುತ್ತಿ ಭೂಮಿಯೆಲ್ಲವೂ ಭ್ರಮರಮಯವಾಗಿರುವಂತೆಯೇ ತೋರುವುದು. ॥೬೫-೬೬॥

ಒಂದು ಭಾಗದಲ್ಲಿ ಸೂರ್ಯನ ಕ್ರೂರವಾದ ಕಿರಣಗಳು ಬೀಳುತ್ತಾ ಆ ಪ್ರದೇಶವೆಲ್ಲಾ ಕೆಂಪುಬಣ್ಣದಿಂದಲೇ ತೋರಿಬರುತ್ತಿರುವುದು. ದರಿದ್ರನಿಗೆ ಯಾವ ಫಲವೂ ದೊರೆಯದಂತೆ, ಆ ಭಾಗದಲ್ಲಿ ಒಂದು ಹುಲ್ಲುಕಡ್ಡಿಯೂ ಬೆಳೆಯಲಾರದು. ಅದು ಕೇವಲ ಕೆಂಡದಂತೆಯೇ ಸರ್ವದಾ ಉರಿಯುತ್ತಿರುವುದು. ॥೬೭॥

ಮತ್ತೊಂದೆಡೆಯಲ್ಲಿ ಕಮಲದ ಬಳ್ಳಿಗಳು ಸರ್ವತ್ರವ್ಯಾಪಿಸಿ ಕೈಲಾಸಗಿರಿಗೆ ನೀರಾಜನವೆಸಗುತ್ತಿವೆಯೋ ಎಂಬಂತೆ ಸುಂದರವಾಗಿ ಕಾಣುತ್ತಿರುವುದು. ಮತ್ತೊಂದೆಡೆ ಕಾಡುಹಂದಿಗಳು ಭದ್ರಮುಸ್ತಾಗೆಡ್ಡೆಯನ್ನು ತಿನ್ನುವುದಕ್ಕಾಗಿ ಭೂಮಿಯನ್ನು ಒಗೆದು ಕಲ್ಲಿನಮೇಲೆ ಚದರಿ ಓಡಾಡುತ್ತಿರುವುವು. ॥೬೮॥

॥ ಶ್ರೀ ಸ್ಕಂದ ಉವಾಚ ॥

ಸಕಲಭುವನಕರ್ತಾ ಲೋಕನಾಥಸ್ತದಾನೀಂ
ತುಹಿನಶಿಖರಿಪುತ್ರ್ಯಾ ಸಾರ್ಧಮಿಷ್ಟೈರ್ಗಣೇಂದ್ರೈಃ ।
ವಿವಿಧತರುವಿಶಾಲಂ ಮತ್ತಹೃಷ್ಟಾನ್ಯಪುಷ್ಟಂ
ಉಪವನಮತಿರಮ್ಯಂ ದರ್ಶಯಾಮಾಸ ದೇವ್ಯೈ ॥೧೯॥

ಪುಷ್ಪೈರ್ವನ್ಯೈಃ ಶುಭಕರಸುಮ್ಯೈರ್ಗಂಧಿತೈಸ್ತದ್ಗಿರೀಂದ್ರೇ
ದೇವೀಂ ವಿದ್ಯಾಮುಪವನಗತಾಂ ಭೂಷಯಾಮಾಸ ಸರ್ವಃ ।
ಸಾ ಚಾಪ್ಯೇವಂ ತುಹಿನಗಿರಿಜಾ ಶಂಕರಂ ದೇವದೇವಂ
ವನ್ಯೈಃ ಪುಷ್ಪೈಃ ಪಶುವರಪತಿಂ ಭೂಷಯಾಮಾಸ ಹೃಷ್ಟಾ ॥೨೦॥

ಸಂಪೂಜ್ಯ ದೇವಂ ಪರಿಹೃಷ್ಟಮಾನಸಾ
ಸಂವೀಕ್ಷ್ಯ ಚೋದ್ಯಾನವರಂ ಪ್ರಹೃಷ್ಟಂ ।
ಮಹೇಶ್ವರಂ ಸಾ ಜಗದಾದಿಕರ್ತ್ರೀ
ಉವಾಚ ದೇವಂ ಪ್ರಣಿಪತ್ಯ ದೇವೀ ॥೨೧॥

---

ಇಂತಹ ಉದ್ಯಾನವನದಲ್ಲಿ ಲೋಕೈಕನಾಥನೂ, ಲೋಕರಕ್ಷಕನೂ ಆದ ಪರಮೇಶ್ವರನು ಗಿರಿರಾಜಪುತ್ರಿಯಾದ ಪಾರ್ವತಿಯೊಡನೆಯೂ, ಇತರ ಗಣದೇವತೆಗಳೊಡನೆಯೂ ಸಂಚರಿಸಿ, ವಿಶಾಲವಾದ ತರುಗಳಿಂದಲೂ, ಇಂಚರಗೊಡುವ ಕೋಗಿಲೆಗಳ ಗುಂಪಿನಿಂದಲೂ ಸುಂದರವಾಗಿ ಕಾಣುವ ಆ ಉದ್ಯಾನವನ್ನು ದೇವಿಗೆ ತೋರ್ಪಡಿಸುತ್ತಿದ್ದನು. ॥೧೯॥

ಈರೀತಿ ಫಲಪುಷ್ಪಭರಿತಗಳಾಗಿ ಸುಗಂಧದಿಂದಲೂ ಸೌಂದರ್ಯದಿಂದಲೂ ಕಂಗೊಳಿಸುವ ಉದ್ಯಾನವನ್ನು ದೇವಿಗೆ ಕಾಣಿಸುತ್ತಾ ಅಲ್ಲಲ್ಲಿ ದೊರೆತ ಭೂಷಣಸಾಮುಗ್ರಿಗಳಿಂದ ದೇವಿಯನ್ನು ಅಲಂಕರಿಸಿದನು. ಅದೇ ರೀತಿ ಪಾರ್ವತಿಯೂ ಕೂಡ ದೇವದೇವನೂ, ಪಶುಪತಿಯೂ ಆದ ಮಹಾದೇವನನ್ನು ಫಲಪುಷ್ಪಾದಿಗಳಿಂದ ಪೂಜಿಸುತ್ತಾ ಸಂತುಷ್ಟಾಂತರಂಗವುಳ್ಳವಳಾಗಿ ಪರಶಿವನನ್ನು ಅಲಂಕರಿಸುತ್ತಿದ್ದಳು. ॥೨೦॥

ಹೀಗೆ ಸಂತುಷ್ಟಳಾದ ಪಾರ್ವತಿಯು ದೇವದೇವನಾದ ಮಹೇಶ್ವರನನ್ನು ನೋಡಿ ಆನಂದಿಸುತ್ತಾ ಉದ್ಯಾನವನದ ಸೊಬಗಿಗೆ ಆನಂದಪಡುತ್ತಾ ಆದಿಶಕ್ತಿ

ಇತಿ ಶ್ರೀಶಿವರಹಸ್ಯೇ ಈಶಾನಾಖ್ಯೇ ದ್ವಾದಶಾಂಶೇ ಜೈಗೀಷವ್ಯ
ಪ್ರಶ್ನವಿಷಯೇ ಕೈಲಾಸೋದ್ಯಾನವರ್ಣನಂ ನಾಮ
ಪ್ರಥಮೋಽಧ್ಯಾಯಃ

---

ಯೆನಿಸಿದ ಮಹಾದೇವಿಯು ಪದೇ ಪದೇ ಪತಿಗೆ ನಮಸ್ಕರಿಸುತ್ತಾ ಮಹಾದೇವನನ್ನು ಕುರಿತು ಈರೀತಿ ಪ್ರಾರ್ಥಿಸಿದಳು. ||೭೧||

ಇಲ್ಲಿಗೆ ಶ್ರೀ ಶಿವರಹಸ್ಯದ ಈಶಾನನಾಮಕವಾದ ಹನ್ನೆರಡನೆಯ ಅಂಶದಲ್ಲಿ
ಕೈಲಾಸೋದ್ಯಾನವರ್ಣನೆಯನ್ನು ತಿಳಿಸುವ ಮೊದಲನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ದ್ವಿತೀಯೋಽಧ್ಯಾಯಃ

॥ ಶ್ರೀ ದೇವ್ಯುವಾಚ ॥

ದೇವದೇವ ಮಹಾದೇವ ಕರುಣಾವರುಣಾಲಯ ।
ವಿಶ್ವವಿಶ್ವಾಧಿಕಾಶಾಸ್ಯ ತ್ರಿಪುರಾಂಧಕಸಂಹರ ॥೧॥

ಅಲಿಂಗಸ್ಯಾಪಿ ತೇ ಶಂಭೋ ಕಥಂ ಲಿಂಗೇ ರುಚಿಃ ಪರಾ ।
ಸರ್ವೇ ಲಿಂಗಾರ್ಚನೇನೈವ ಮುಕ್ತಾ ಏವೇತಿ ನಿಶ್ಚಿತಂ ॥೨॥

॥ ಶ್ರೀ ಸ್ಕಂದ ಉವಾಚ ॥

ವದ ಮೇ ಕರುಣಾಮೂರ್ತೇ ಬ್ರಹ್ಮವಿಷ್ಣ್ವೀಶಪೂಜಿತ ॥೩॥

---

## ಎರಡನೆಯ ಅಧ್ಯಾಯ

ಪಾರ್ವತಿಯು ಪರಮೇಶ್ವರನನ್ನು ಕುರಿತು ಆಗ ಹೀಗೆ ಪ್ರಶ್ನಿಸಿದಳು, “ಮಹಾದೇವನೇ, ದಯಾಸಮುದ್ರನೇ, ಲೋಕರೂಪನಾಗಿಯೂ, ಲೋಕಾತೀತನಾಗಿಯೂ ಇರುವವನೇ, ತ್ರಿಪುರರನ್ನೂ, ಅಂಧಕಾಸುರನನ್ನೂ ನಾಶಮಾಡಿದವನೇ, ನೀನು ವಾಸ್ತವವಾಗಿ ನಿರ್ಗುಣನು, ಆಕಾರಾದಿ ಶೂನ್ಯನು ಆದರೂ ನಿನಗೆ ಶಿವಲಿಂಗದಲ್ಲಿ ಹೆಚ್ಚು ಪ್ರೀತಿಯಿರಲು ಕಾರಣವೇನು? ಸರ್ವರೂ ಶಿವಲಿಂಗಾರ್ಚನೆ ಮಾಡುವುದರಿಂದ ಮುಕ್ತರಾಗುವರು ಎಂಬ ಮಾತು ಹೇಗೆ ಸಾಧುವಾಯಿತು? ॥೧-೨॥

ಬ್ರಹ್ಮವಿಷ್ಣ್ವಾದಿಗಳಿಂದ ಪೂಜಿತನಾದ ಕರುಣಾಮೂರ್ತಿಯೇ, ನನಗೆ ಆ ವಿಷಯವನ್ನು ವಿಸ್ತಾರವಾಗಿ ತಿಳಿಯಪಡಿಸು” ಎಂದು ಭಕ್ತಿಯಿಂದ ಪ್ರಾರ್ಥಿಸಲು,

ಇತಿ ಸಂಪ್ರಾರ್ಥಿತೋ ದೇವ್ಯಾ ಮಹಾದೇವೋ ಮಹೇಶ್ವರಃ ।
ಕೈಲಾಸಮೌಲಿವಿಪಿನೇ ಸರ್ವರ್ತುಸಮಲಂಕೃತೇ ॥೪॥

॥ ಶ್ರೀ ಈಶ್ವರ ಉವಾಚ ॥

ತತ್ರ ಪ್ರಾಸಾದಗಾತ್ಸ್ವಚ್ಛರತ್ನಸಿಂಹಾಸನಸ್ಥಿತಃ ।
ಹರ್ಷೇಣ ಮಹತಾ ದೇವೀಂ ಸಮಾಲಿಂಗ್ಯ ವಚೋಽಬ್ರವೀತ್ ॥೫॥

ಶೃಣು ತ್ವಂ ಚಂಚಲಾಪಾಂಗಿ ಲಿಂಗಸಂಪೂಜನೋತ್ಸವಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಪ್ರಮುಕ್ತೋ ಭಕ್ತಿಮಾನ್ ಭವೇತ್ ॥೬॥

ಪುರಾ ಪದ್ಮೋದ್ಭವೇ ಕಲ್ಪೇ ದೇವಾ ದೈತ್ಯಪ್ರಪೀಡಿತಾಃ ।
ತಾರಕಾಂತಕರಂ ಮತ್ತಃ ಪ್ರಾರ್ಥಯಂತಿ ಸುತೋದ್ಭವಂ ॥೭॥

ತ್ವಯಾಹಂ ಪರಯಾ ಯುಕ್ತೋ ಮುದಾ ಕೈಲಾಸಪರ್ವತೇ ।
ದಕ್ಷಪುತ್ರ್ಯಾ ತತೋ ದೇವ್ಯಾ ತ್ವಯಾಸಲ್ಪಕಕಲ್ಪಕೇ ॥೮॥

---

ಕೈಲಾಸಶಿಖರದಲ್ಲಿ ಸರ್ವಋತುಗಳಲ್ಲಿಯೂ ಒಂದೇ ಸಮವಾದ ಸೌಂದರ್ಯದಿಂದ ಬೆಳಗುವ ಉದ್ಯಾನವನದಲ್ಲಿ ಪರಶಿವನು ಪಾರ್ವತಿಗೆ ಹೀಗೆ ಹೇಳತೊಡಗಿದನು. ॥೩-೪॥

ಮತ್ತು ಪರಶಿವನು ಆಗ ಉದ್ಯಾನವನಾಂತರ್ಗತವಾದ ಪ್ರಾಸಾದದಲ್ಲಿ ರತ್ನ ಸಿಂಹಾಸನದ ಮೇಲೆ ಮಂಡಿಸಿದ್ದನು. ಪಾರ್ವತಿಯನ್ನು ಪ್ರೀತಿಯಿಂದ ಆಲಿಂಗಿಸಿ ಕೊಂಡು ಹೀಗೆಂದನು. '' ಎಲೌ ಚಂಚಲಾಕ್ಷಿಯೇ, ಶಿವಲಿಂಗಪೂಜೆಯ ಮಹಿಮೆ ಯನ್ನೂ, ಅದನ್ನು ಪೂಜಿಸುವ ಸಮಾರಂಭವನ್ನೂ ನಿನಗೆ ವಿವರಿಸಿ ಹೇಳುವೆನು ಕೇಳು. ಇದನ್ನು ಕೇಳಿದವರು ಸರ್ವಪಾಪನಿರ್ಮುಕ್ತರಾಗುವರು. ॥೫-೬॥

ದೇವಿಯೇ ಕೇಳು. ಹಿಂದೆ ಪದ್ಮೋದ್ಭವಕಲ್ಪದಲ್ಲಿ ದೈತ್ಯಪ್ರಪೀಡಿತರಾದ ದೇವತೆಗಳು ತಾರಕಾಸುರರನ್ನು ನಾಶಗೊಳಿಸುವಂತಹ ಒಬ್ಬ ದೇವಾ ಸೇನಾಪತಿ ಯಾಗುವ ಮಗನನ್ನು ನನ್ನಿಂದ ಅಪೇಕ್ಷಿಸಿದರು. ಆಗ ನಾನು ನಿನ್ನಿಂದ ಕೂಡಿದವ ನಾಗಿ ಸಂತೋಷದಿಂದ ಕೈಲಾಸದಲ್ಲಿ ವಿಹರಿಸುತ್ತಿದ್ದೆನು. ನೀನು ಆಗ ದಕ್ಷಬ್ರಹ್ಮನ ಪುತ್ರಿಯೆನಿಸಿ ಸತೀದೇವಿಯೆನಿಸಿಕೊಂಡಿದ್ದೆ. ॥೭-೮॥

ತದಾತ್ರ ದಕ್ಷೋ ಮತಿಮಾಂಶ್ಚಾಕ್ಷುಷಸ್ಯಾಂತರೇ ಮನೋಃ ।
ಇಯಾಜ ಹಯಮೇಧೇನ ಮಾಂ ಹಿತ್ವಾ ಸ ತದಾ ಸುರೈಃ ॥೯॥

ಬ್ರಹ್ಮಾ ತಸ್ಯಾಭವದ್ಬ್ರಹ್ಮಾ ಸದಸ್ಯತ್ವೇ ಹರಿಃ ಸ್ಥಿತಃ ।
ಅಧ್ವರ್ಯುರ್ಭೃಗುರಾಸೀಚ್ಚ ಹೋತಾಸೀತ್ತತ್ರ ಮುದ್ಗಲಃ ॥೧೦॥

ತಾಂಡಕಶ್ಚ ತಥೋದ್ಗಾತಾ ಅಭವನ್ಮುನಯೋಽಖಿಲಾಃ ।
ಶತರ್ಚನೋಽಸ್ಯಾಚ್ಛಾವಾಕ ಆಗ್ನೀಧ್ರೋ ಜಮದಗ್ನಿಜಃ ॥೧೧॥

ನೇಷ್ಟಾ ಪೋತಾ ಸುಮಂತುಶ್ಚ ಜಾತೂಕರ್ಣೋಽಂಗಿರಾಮುನಿಃ ।
ಪ್ರಸ್ತೋತಾ ಪ್ರತಿಹರ್ತಾಭೂಜ್ಜೈಮಿನಿಶ್ಚೈವ ತುಂಬುರಃ ॥೧೨॥

ಸುಬ್ರಹ್ಮಣ್ಯೋಽಭವತ್ತತ್ರ ವಸುಮಾನ್ ಸಾಮಗೋ ದ್ವಿಜಃ ।
ಪ್ರತಿಪ್ರಸ್ಥಾ ಬಭೂವಾಸ್ಯ ಸಂವರ್ತೋಽಥ ಮಹಾಮುನಿಃ ॥೧೩॥

ಉನ್ನೇತಾ ಭೂತ್ತದಾ ಗಾರ್ಗ್ಯೋಽ ಧ್ರುವಗೋಪೋಽನಮಿತ್ರಜಃ ।
ಸಂಸ್ರಾವ್ಯಭಿಗರೋ ಮೈತ್ರ ವರುಣೋ ಬ್ರಾಹ್ಮಣಾಚ್ಛಗುಃ ॥೧೪॥

---

ಆಗ ನಡೆಯುತ್ತಿದ್ದ ಚಾಕ್ಷುಷಮನ್ವಂತರದಲ್ಲಿ ದಕ್ಷಬ್ರಹ್ಮನು ಒಂದು ಅಶ್ವಮೇಧಯಾಗ ಮಾಡಿದನು. ಆದರಲ್ಲಿ ನನ್ನನ್ನು ಸಂಪೂರ್ಣವಾಗಿ ದೂರಮಾಡಿದನು. ಆ ಯಾಗದಲ್ಲಿ ಬ್ರಹ್ಮನು ಬ್ರಹ್ಮನಾಗಿಯೂ, ವಿಷ್ಣುವು ಸದಸ್ಯನಾಗಿಯೂ, ಭೃಗುಮುನಿಯು ಅಧ್ವರ್ಯುವಾಗಿಯೂ, ಮುದ್ಗಲನು ಹೋತೃವಾಗಿಯೂ ನಿಯಮಿತರಾಗಿದ್ದರು. ॥೯-೧೦॥

ತಾಂಡಕಮುನಿಯು ಉದ್ಗಾತೃವಾಗಿಯೂ, ಶತರ್ಚನ, ಶ್ಯಾವಾಕ, ಜಮದಗ್ನಿಪುತ್ರ ಇವರು ಋತ್ವಿಕ್ಕುಗಳಾದರು. ಪೋತಾ, ಸುಮಂತು, ಜಾತೂಕರ್ಣ, ಅಂಗಿರಸ್ಸು ಇವರು ನೇಷ್ಟೃಗಳಾದರು. ಜೈಮಿನಿ, ತುಂಬುರ ಇವರು ಪ್ರಸ್ತೋತೃ ಮತ್ತು ಪ್ರತಿಹರ್ತೃಗಳಾಗಿದ್ದರು. ॥೧೧-೧೨॥

ಸುಬ್ರಹ್ಮಣ್ಯ, ವಸುಮಾನ್, ಸಾಮಗ, ಪ್ರತಿಪ್ರಸ್ಥಾ, ಸಂವರ್ತ, ಉನ್ನೇತಾ ಗಾರ್ಗ್ಯ, ಧ್ರುವಗೋಪ, ಅನಮಿತ್ರಜ, ಸಂಸ್ರಾವ್ಯ, ಅಭಿಗರ, ಮೈತ್ರ, ವರುಣ, ಬ್ರಾಹ್ಮಣಾಚ್ಛಗುಃ, ಗ್ರಾವ, ಏಕತಾದ್ಯರು, ಮಧು, ಕಟ ಇವರೇ ಮೊದಲಾದ ಋಷಿಜನರು ಆ ಯಾಗದಲ್ಲಿ ಋತ್ವಿಕ್ಕುಗಳಂತಿದ್ದರು. ॥೧೩-೧೪॥

ಗ್ರಾವಸ್ತುರ ಭವತ್ತಸ್ಯ ಏಕೆತಾದ್ಯಾ ಮಧುಃ ಕಟಿಃ ।
ಏವಂ ತಥಾನ್ಯಮುನಯಸ್ತಸ್ಯಾಸನ್ ಋತ್ವಿಜಃ ಶಿವೇ ॥೧೫॥

ಇಂದ್ರೋ ಮಿತ್ರೋಽಥ ವರುಣಃ ಸೋಮಃ ಸೂರ್ಯೋ ಸಲೋಽನಿಲಃ ।
ವಸವೋ ಮರುತಸ್ತತ್ರ ಪಿತರೋ ಮರುತಾಖಿಲಾಃ ॥೧೬॥

ಋಭವೋಽಥಾಶ್ವಿನೌ ತತ್ರ ಸಂಗತಾಃ ಪರಮರ್ಷಯಃ ।
ಯಜ್ಞವಾಟೇ ತತ್ರಸಿಂಹಾಃ ನಾಗಾಃ ಕಿಂ ಪುರುಷಾಪ್ಸರಾಃ ॥೧೭॥

ವಿದ್ಯಾಧರಾಶ್ಚಾರಣಾಯೇ ಗರುಡಾಃ ಪನ್ನಗಾಶ್ಚಿನೇ ।
ಪರ್ವತಾಸ್ಸಾಗರಾ ನದ್ಯೋ ವೇದಾಃ ಸಪ್ರಣವಾಸ್ಥಿತಾಃ ॥೧೮॥

ಛಂದಾಂಸಿ ಕಿನ್ನರಾನಂ ತಸ್ಯಾಸನ್ ಪರಿಚಾರಕಾಃ ।
ನಾನಾಪ್ರಶಸ್ತವಿಭವೋ ಹಯಮೇಧೋ ಬಭೂವ ಹ ॥೧೯॥

ದಕ್ಷಸ್ಯ ದೀಕ್ಷಿತಸ್ಯೈವ ಮಾಮನಾದೃತ್ಯ ಸರ್ವತಃ ।
ವಿಮಾನಸಂಚರಾ ದೇವಾ ಯಯುಸ್ತತ್ರ ಸರುದ್ರಕಾಃ ॥೨೦॥

---

ಇಂದ್ರ, ಮಿತ್ರ, ವರುಣ, ಸೋಮ, ಸೂರ್ಯ, ಅನಲ, ಅನಿಲ, ವಸುಗಳು ಮರುತ್ತುಗಳು, ಪಿತೃಗಳು, ಮರುತರು, ಋಭುದೇವತೆಗಳು, ಅಶ್ವಿನೀದೇವತೆಗಳೂ, ಇನ್ನೂ ಪರಮಮಹರ್ಷಿಗಳೂ, ಹಾಗೆಯೇ ಯಜ್ಞವಾಟಿಯಲ್ಲಿ ಸಿಂಹಗಳೂ, ನಾಗಗಳೂ, ಕಿಂಪುರುಷರೂ, ಅಪ್ಸರಸ್ಸುಗಳೂ, ವಿದ್ಯಾಧರರೂ, ಚಾರಣರೂ, ಗರುಡರೂ, ಪನ್ನಗಗಳೂ, ಪರ್ವತಗಳೂ, ಸಾಗರಗಳೂ, ನದಿಗಳು (ಪ್ರಣವಸಹಿತಗಳಾಗಿ) ಛಂದಸ್ಸುಗಳು, ಕಿನ್ನರರು ಇವರೇ ಮೊದಲಾದವರು ಆ ಯಜ್ಞದಲ್ಲಿ ಪರಿಚಾರಕರಾಗಿ ನಾನಾವಿಧವಾದ ಪ್ರಶಸ್ತ ಅನುಕೂಲಗಳನ್ನು ಕಲ್ಪಿಸಿಕೊಡುತ್ತಿದ್ದರು. ಹೀಗೆ ಆ ಯಜ್ಞವು ಮುಂದುವರಿಯುತ್ತಿತ್ತು. ॥೧೬-೧೭-೧೮-೧೯॥

ಆ ದಕ್ಷನಾದರೋ ಯಜ್ಞದಲ್ಲಿ ದೀಕ್ಷಿತನೆನಿಸಿ ಅಟ್ಟಹಾಸದಿಂದ ಯಜ್ಞವನ್ನು ನೆರವೇರಿಸುತ್ತಿದ್ದನು. ಆದರೆ ಅವನು ನನ್ನನ್ನು ಮಾತ್ರ ಮರೆತಿದ್ದನು. ಅಲ್ಲಿಗೆ ನನ್ನ ರುದ್ರಗಣಗಳೂ ಸಹ ವಿಮಾನಾರೂಢರಾಗಿ ಹೋಗಿ ಸೇರಿದರು. ಭೂಮ್ಯಂತರಿಕ್ಷ ಭಾಗಗಳಲ್ಲಿ ಸಂಚರಿಸುವ ನನ್ನ ಸೇವಕರೆಲ್ಲಾ ಅಲ್ಲಿಗೆ ಹೋಗಿ ನಿಂತರು. ನಾನೊಬ್ಬ ಮಾತ್ರ ಅಲ್ಲಿಗೆ ಹೋಗಲಿಲ್ಲ. ॥೨೦-೨೧॥

ಭೂಮ್ಯಂತರಿಕ್ಷದ್ಯಾರ್ಭಾಗೇ ರುದ್ರಾಸ್ತತ್ರ ಸಹಸ್ರಶಃ ।
ಗಚ್ಛಂತಿ ಯಜ್ಞಸದನಂ ಮದನಾಂತಕರಂ ವಿನಾ ॥೨೧॥

ತಾನ್ ಪ್ರಯಾತಾನ್ ಸುರಾನ್ ದೃಷ್ಟ್ವಾ ಸಪತ್ನೀಕಾಂಸ್ತಥಾ ಮಖೇ।
ದಿದೃಕ್ಷಯಾ ತ್ವಂ ಪಿತರಂ ಮಯಾಸೀತ್ಕೌತುಕಾನ್ವಿತಾ ॥೨೨॥

ಮಾಗಚ್ಛೇತಿ ನಿಷಿದ್ಧಾ ತ್ವಂ ಮಯಾ ತದ್ಯಜ್ಞಕರ್ಮಣಿ ।
ತದನಾದೃತ್ಯ ಮದ್ವಾಕ್ಯಂ ಗತವತ್ಯಸಿ ಭಾಮಿನಿ ॥೨೩॥

ವಿಮಾನೇನ ಗಣೈರ್ಯುಕ್ತಾ ತದಾನೀಮರ್ಕರೋಚಿಷಾ ।
ಸಖೀಭಿಃ ಸಂವೃತಾ ದೇವೀ ಪಿತೃಯಜ್ಞಸದೋ ಮುದಾ ॥೨೪॥

ನಾನಾಮುನಿಜನಾಕೀರ್ಣಂ ನಾನಾದೇವಗಣಾನ್ವಿತಂ ।
ಸದಸ್ಯೈರ್ವಾಲಖಿಲ್ಯಾದ್ಯೈರ್ವೈಖಾನಸಗಣೈರ್ಯುತಂ ॥೨೫॥

ನೃತ್ಯದ್ಭಿರಪ್ಸರಃ ಸಂಘೈರ್ಗಂಧರ್ವೈಃ ಕೃತಗಾಯನಂ ।
ನದತ್ಸು ದೇವತೂರ್ಯೌಘೈರ್ವೀಣಾದುಂದುಭಿನಿಃಸ್ವನೈಃ ॥೨೬॥

ಭುಂಜದ್ಭಿರ್ಬ್ರಾಹ್ಮಣೈರ್ಯುಕ್ತಂ ಗೋಭಿಶ್ಚಾವೃತಮೇವ ಹಿ ।
ಪ್ರವರ್ಗ್ಯೇಷು ಪ್ರವೃತ್ತೇಷು ಮಾಂ ತೇನೋಪಸದಾ ಯಜನ್ ॥೨೭॥

---

ಹಾಗೆ ಪತ್ನೀಸಮೇತರಾಗಿ ಹೋಗುತ್ತಿರುವ ದೇವತೆಗಳನ್ನು ನೋಡಿ ನೀನೂ ಸಹ ನಿನ್ನ ತಂದೆಯ ಯಾಗವನ್ನು ನೋಡಲಪೇಕ್ಷಿಸಿ ಅಲ್ಲಿಗೆ ಹೋಗಲುದ್ಯುಕ್ತಳಾದೆ. ನಾನು ಎಷ್ಟೋಸಾರಿ ಹೋಗಬೇಡವೆಂದು ತಡೆದರೂ ನೀನು ಅದನ್ನು ಲಕ್ಷ್ಯಮಾಡದೆ ಮುಂದುವರಿದು ಹೋದೆ. ಸೂರ್ಯನಂತೆ ಜ್ವಲಿಸುವ ದಿವ್ಯವಿಮಾನದಲ್ಲಿ ಕುಳಿತು ನಿನ್ನ ಮೆಚ್ಚಿನ ಗೆಳತಿಯರೊಡನೆ ನಿನ್ನ ತಂದೆಯ ಯಜ್ಞಮಂಟಪವನ್ನು ಕುರಿತು ತೆರಳಿದೆ. ॥೨೨-೨೩-೨೪॥

ಆಗ ಯಜ್ಞಮಂಟಪವು ನಾನಾವಿಧವಾದ ಮುನಿಜನರಿಂದ ತುಂಬಿತ್ತು. ಸಮಸ್ತ ದೇವತೆಗಳೂ ಅಲ್ಲಿದ್ದರು. ವಾಲಖಿಲ್ಯರೇ ಮೊದಲಾದವರೂ ವೈಖಾನಸರೇ ಮೊದಲಾದ ಮಹಿಮಾಶಾಲಿಗಳೂ ಅಲ್ಲಿ ನೆರೆದಿದ್ದರು. ಅಪ್ಸರಸ್ತ್ರೀಯರು ನರ್ತನ ಮಾಡುತ್ತಿದ್ದರು. ಗಂಧರ್ವರು ಗಾನಮಾಡುತ್ತಿದ್ದರು. ದೇವವಾದ್ಯಗಳೂ ನಗಾರಿ,

ತದಾ ತ್ವಯಾ ಕೃತಪ್ರಶ್ನೋ ದಕ್ಷಸ್ಯಾಹೂಯ ತನ್ಮಖೇ
ಶೃಣ್ವತ್ಸು ಮುನಿಸಂಘೇಷು ಬ್ರಹ್ಮಣಾ ವಿಷ್ಣುನಾ ತಥಾ ॥೨೮॥
ವೇದೇಷು ವೇದಸಂಘೇಷು ಶೃಣ್ವತ್ಸು ಪರಮೇಶ್ವರಿ ॥೨೯॥

॥ ಸತ್ಯುವಾಚ ॥

ಕಸ್ಮಾನ್ನಾಹ್ವಯಸೇ ದೇವಂ ಮಹಾದೇವಂ ಮಹಾಮಖೇ ।
ಮಖಸ್ಯ ಪತಿಮೀಶಾನಂ ರಾಜಾನಂ ಚಾಧ್ವರಸ್ಯ ತಂ ॥೩೦॥

ತಸ್ಮಾದೌಪಸದಂ ಭಾಗಂ ವಿಶ್ವೇಶೇ ದಾತುಮರ್ಹಸಿ ।
ಸ್ವಿಷ್ಟಂ ಕರೋತಿ ಸರ್ವತ್ರ ಸುರಭಾಗೇಷು ಶಂಕರಃ ॥೩೧॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಏಕ ಏವ ಮಹಾರುದ್ರೋ ವೇದೇಷು ಪ್ರತಿಪಾದ್ಯತೇ ॥೩೨॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಮಹರ್ಷಿಶ್ಚ ಮಹಾದೇವೋ ವಿದ್ಯಾಧಿಪತಿರೀಶ್ವರಃ ॥೩೩॥

---

ವೀಣೆ ಮೊದಲಾದ ನಾನಾರೀತಿಯ ಮಂಗಳವಾದ್ಯಗಳು ಶಬ್ದಮಾಡುತ್ತಿದ್ದುವು. ಸಮಸ್ತ ಬ್ರಾಹ್ಮಣರೂ ಭೋಜನಾದಿಗಳಿಂದ ತೃಪ್ತರಾಗುತ್ತಿದ್ದರು. ಪ್ರವರ್ಗ್ಯಯಾಗವು ಮುಂದುವರಿಯುತ್ತಿದ್ದಿತು. ॥೨೫-೨೬-೨೭॥

ಆಗ ನೀನು ನಿನ್ನ ತಂದೆಯಾದ ದಕ್ಷಬ್ರಹ್ಮನ ಸಮೀಪಕ್ಕೆ ಹೋಗಿ ಈರೀತಿ ಮಾತನಾಡಿದೆ. ಅದನ್ನು ಅಲ್ಲಿದ್ದ ಸಕಲ ಮುನಿಗಳೂ, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೂ ಕೇಳುತ್ತಿದ್ದರು. ವೇದಗಳು ಧ್ವನಿಮಾಡುತ್ತಿದ್ದುವು. ಈರೀತಿ ಯಜ್ಞಮಂಟಪವು ಸಿದ್ಧವಾಗುತ್ತಿರುವಾಗ ನೀನು ಈರೀತಿ ಪ್ರಶ್ನೆಮಾಡಿದೆ. ॥೨೮-೨೯॥

" ತಂದೆಯೇ, ಏತಕ್ಕಾಗಿ ಮಹಾದೇವನನ್ನು ನೀನು ಈ ಯಜ್ಞಕ್ಕಾಗಿ ಆಹ್ವಾನಿಸಲಿಲ್ಲ. ಮಹಾದೇವನು ಸಕಲ ಯಜ್ಞಗಳಿಗೂ ಪತಿಯಲ್ಲವೆ? ಯಜ್ಞೀಯವಾದ ಔಪಸದಭಾಗವನ್ನೂ, ಸ್ವಿಷ್ಟಕೃತ್ತನ್ನೂ ವಿಶ್ವೇಶ್ವರನಾದ ನನ್ನ ಪತಿಗೆ ಕೊಡುವುದು ಉಚಿತವಲ್ಲವೆ? ಇದು ನಿನಗೆ ತಿಳಿಯದೆ? ॥೩೦-೩೧॥

ಶಂಕರನು ಸರ್ವದೇವತೆಗಳಿಗೂ ಒಡೆಯನಲ್ಲವೆ? ಅವನೇ ಮಹಾರುದ್ರನೆಂದು ವೇದಗಳಲ್ಲಿ ಪ್ರತಿಪಾದಿಸಲ್ಪಡುವುದಷ್ಟೆ. ಮಹರ್ಷಿಯೂ, ವಿದ್ಯಾಧೀಶ್ವರನೂ

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಪತಿತ್ವಂ ಶತರುದ್ರಸ್ಯ ವೇದೈಶ್ಚ ಪ್ರತಿಪಾದ್ಯತೇ ॥೩೪॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಇಂದ್ರಮಿತ್ರಾದೀನಾಮೇಷ ಏಕ ಏವ ಮಹೇಶ್ವರಃ ॥೩೫॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಬ್ರಹ್ಮವಿಷ್ಣ್ವಾದಿ ಜನಕಃ ಸೂರ್ಯಸೋಮಾದಿವಹ್ನೀನಾಂ ॥೩೬॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಏಷ ವಿಶ್ವಂ ವಿಶ್ವಪತಿಃ ಸ ಹಿ ವಿಶ್ವಾಧಿಕಶ್ಶಿವಃ ॥೩೭॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಪ್ರಣವಾತ್ಮಾ ಪ್ರಕಾಶಾತ್ಮಾ ಮಹಾತ್ಮಾ ಸರ್ವತೋಮುಖಃ ॥೩೮॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಯೋ ವಿಭಾಸಯತೇ ಸರ್ವಂ ಜಗತ್ಸ್ಥಾವರಮಾನುಷಂ ॥೩೯॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಯಸ್ಯಾಜ್ಞಯಾ ಜಗತ್ಸೃಷ್ಟಿಂ ಕರೋತ್ಯೇಷ ಪ್ರಜಾಪತಿಃ ॥೪೦॥

---

ಮಹಾದೇವನೇ ಅಲ್ಲವೆ? ರುದ್ರರೂಪದಿಂದ ವಿರಾಜಿಸುವ ಎಲ್ಲ ರುದ್ರಗಣಗಳಿಗೂ ಮಹಾದೇವನೇ ಒಡೆಯನೆಂದು ಸಕಲವೇದಗಳೂ ಹೇಳುತ್ತಿವೆಯಲ್ಲವೆ? ॥೩೨-೩೩-೩೪॥

ದಕ್ಷಬ್ರಹ್ಮನೇ, ಇಂದ್ರ, ಮಿತ್ರ ಮುಂತಾದ ನಾನಾ ಹೆಸರುಗಳಿಂದ ತೋರಿ ಬರುವ ಸಕಲ ದೇವತಾಸ್ವರೂಪನೂ ಈ ಪರಶಿವನಲ್ಲವೆ. ಬ್ರಹ್ಮ, ವಿಷ್ಣು, ಸೂರ್ಯ, ಚಂದ್ರ, ಅಗ್ನಿ ಇವರಿಗೆ ಉತ್ಪತ್ತಿಸ್ಥಾನನೇ ಶಂಕರನು. ಇವನೇ ಪ್ರಪಂಚವು, ಪ್ರಪಂಚಕ್ಕೆ ಒಡೆಯನೂ ಪ್ರಪಂಚಕ್ಕೆ ಮೀರಿದವನೂ ಈತನೇ. ಪ್ರಣವ ಸ್ವರೂಪಿಯಾಗಿ ತೇಜೋಮಯನಾಗಿ, ಮಹಾತ್ಮನೆನಿಸಿ, ಸರ್ವತೋಮುಖದಿಂದ ವರ್ತಿಸುವ ಶಂಕರನು, ಸ್ಥಾವರ ಜಂಗಮಾತ್ಮಕವಾದ ಪ್ರಪಂಚರೂಪದಿಂದ ಪ್ರಕಾಶಿಸುತ್ತಿರುವನಷ್ಟೆ. ಶಿವನ ಅಪ್ಪಣೆಯಿಂದಲೇ ಬ್ರಹ್ಮನು ಜಗತ್ತನ್ನು ಸೃಷ್ಟಿಸುತ್ತಿರುವನು. ಅಂತಹ ದೇವ

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಯಸ್ಯಾಜ್ಞಯಾ ಜಗತ್ಸರ್ವಂ ಹರಿಃ ಪಾಲಯತೇಽಖಿಲಂ ॥೪೧॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಯಸ್ಯಾಜ್ಞಯಾ ಜಗಚ್ಛಾಂತೇ ರುದ್ರಃ ಸಂಹರತಿ ಸ್ವಯಂ ॥೪೨॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಯದ್ಭಾಸಾ ಭಾಸಯತ್ಯೇಷ ಭಾಸ್ಕರೋ ನಾಶಯಂಸ್ತಮಃ ॥೪೩॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಯದ್ಭಾಸೈವ ಸದಾ ಸೋಮಃ ಪುಷ್ಣಾತ್ಯೌಷಧಿಮಂಡಲಂ ॥೪೪॥

ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ।
ಯದ್ಭಾಸಾ ಹವ್ಯಕವ್ಯಾನಿ ದಹತ್ಯೇಷಾನಲೋ ಮಹಾನ್ ॥೪೫॥

ಯದ್ಭಯಾಚ್ಚ ಸದಾ ವಾಯುಃ ಪವತೇ ಲೋಕಮಾವಿಶನ್ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೪೬॥

---

ದೇವನೂ, ಮಹಾತ್ಮನೂ ಆದ ಶಂಕರನನ್ನು ನೀನು ಉಪೇಕ್ಷಿಸುವುದು ನ್ಯಾಯವೇ? ॥೩೫-೩೬-೩೭-೩೮-೩೯-೪೦॥

ಪರಮೇಶ್ವರನ ಆಜ್ಞಾನುಸಾರವಾಗಿಯೇ ಈ ಜಗತ್ತನ್ನೆಲ್ಲಾ ವಿಷ್ಣುವು ರಕ್ಷಿಸುತ್ತಿರುವನು. ಹಾಗೆಯೇ ರುದ್ರನೂ ನಾಶಮಾಡುತ್ತಿರುವನು. ಸೂರ್ಯನೂ ಈಶ್ವರಾಜ್ಞೆಯಿಂದಲೇ ಜಗತ್ತನ್ನೆಲ್ಲಾ ಬೆಳಗಿಸಿ ಕತ್ತಲೆಯನ್ನು ನಾಶಗೊಳಿಸುತ್ತಿರುವನು. ಅದೇರೀತಿ ಚಂದ್ರನೂ ಸಹ ಶಿವಾಜ್ಞೆಯಿಂದಲೇ ಸಕಲ ವನಸ್ಪತಿಗಳನ್ನೂ ಬೆಳೆಸುತ್ತಾ ತಾನು ರಾತ್ರಿಯಲ್ಲಿ ಪ್ರಕಾಶಿಸುತ್ತಿರುವನು. ಅಗ್ನಿಯು ಹವ್ಯಕವ್ಯಗಳನ್ನು ಹೊತ್ತು ದೇವತೆಗಳನ್ನು ತೃಪ್ತಿಪಡಿಸುವುದೂ ಈಶ್ವರಾಜ್ಞೆಯಿಂದಲೇ. ॥೪೧-೪೨-೪೩-೪೪ ೪೫॥

ವಾಯುವು ಸದಾಗತಿಯೆನಿಸಿ ಸಮಸ್ತಪ್ರಪಂಚವನ್ನು ಪಾಲಿಸುವುದೂ, ಇಂದ್ರನು ವಜ್ರಾಯುಧಧಾರಿಯಾಗಿ ದೇವಲೋಕವನ್ನು ರಕ್ಷಿಸುವುದೂ, ವರುಣನು ಸಪ್ತಸಮುದ್ರಗಳನ್ನು ವಶಪಡಿಸಿಕೊಂಡಿರುವುದೂ, ನದಿಗಳು ತಪ್ಪದೆ ಸಮುದ್ರವನ್ನು ಸೇರುವುದೂ, ಗ್ರಹನಕ್ಷತ್ರಗಳು ವಿಶೇಷ ಕಾಂತಿಯಿಂದ ತಮ್ಮ ತಮ್ಮ ಲೋಕಗಳಲ್ಲಿ

ಯಸ್ಯಾಜ್ಞಯಾ ಸುರಾನ್ ಪಾತಿ ವಜ್ರಹಸ್ತಃ ತ್ರಿವಿಷ್ಟಪಂ
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೪೭॥

ವರುಣಃ ಸಾಗರಾನ್ ಸಪ್ತ ಯಾಂತಿ ನದ್ಯಃ ಸಮುದ್ರಗಾಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೪೮॥

ಗ್ರಹರ್ಕ್ಷಾಣಿ ವಿಭಾಂತ್ಯೇವ ಚಂದ್ರಚೂಡಸ್ಯ ಶಾಸನಾತ್ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೪೯॥

ಯಮೋಽಪಿ ಯದ್ಭಯಾನ್ನಿತ್ಯಂ ಸಮವರ್ತಿತ್ವಮಾಸ್ಥಿತಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೫೦॥

ನಿಋಋತಿಃ ಪಾತಿ ಪಾಪೇಭ್ಯಃ ಪ್ರಜಾಃ ಸರ್ವಾಹ್ಯತಂದ್ರಿತಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೫೧॥

ಕುಬೇರೋಽಥ ಧನಂ ಪಾತಿ ಮಹಾದೇವಸ್ಯ ಶಾಸನಾತ್ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೫೨॥

ವೇದಾ ಯಸ್ಯಾಸ್ಯನಿಃಶ್ವಾಸಾಃ ಪ್ರಣವಸ್ತತ್ತ್ವಸುಮರ್ಹಾನ್ ।
ಛಂದಾಂಸಿ ಯಸ್ಯ ಲೋಮಾನಿ ಪುರಾಣಾದೀನಿ ಸರ್ವಶಃ ॥೫೩॥

ಭೂಮಿರ್ಯದಾಜ್ಞಯಾ ಧತ್ತೇ ಸಾಗರಾನ್ ದ್ವೀಪಮಂಡಲಂ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೫೪॥

---

ಸಂಚರಿಸುವುದೂ, ಯಮಧರ್ಮನು ಸಮಾನವಾದ ಧರ್ಮದಿಂದ ನಿಷ್ಪಕ್ಷಪಾತವಾಗಿ ಅಪರಾಧಕ್ಕೆ ತಕ್ಕ ಶಿಕ್ಷೆ ಕೊಡುವುದೂ, ಪರಮೇಶ್ವರನ ಮೇಲಿನ ಭಯದಿಂದಲೇ ಅಲ್ಲವೆ? ಅಂತಹ ಪರಶಿವನನ್ನು ನೀನು ತಿರಸ್ಕರಿಸುವುದು ಉಚಿತವೆ? ॥೪೬-೪೭-೪೮-೪೯-೫೦॥

ಪರಶಿವನ ಆಜ್ಞಾನುವರ್ತಿಗಳಾಗಿಯೇ ಕುಬೇರನು ನಿಧಿಯನ್ನು ರಕ್ಷಿಸುವನು. ನಿಋಋತಿಯು ಪಾಪನಿವಾರಣೆಮಾಡಿ ಜನರನ್ನು ಉದ್ಧರಿಸುವನು. ಪವಿತ್ರವಾದ ವೇದಗಳು ಪರಶಿವನ ಉಸಿರುಗಳಲ್ಲವೆ! ಪ್ರಣವವೆನಿಸಿದ ಓಂಕಾರವೇ ಅವನ

ಶೇಷೋಽಪ್ಯಶೇಷಭೂಲೋಕಂ ಧತ್ತೇ ವಿಶ್ವೇಶ್ವರಾಜ್ಞಯಾ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೫೫॥

ದಿಗ್ಗಜಾಃ ಕೂರ್ಮನಕ್ರಾದ್ಯಾಸ್ತಿಷ್ಠಂತಿ ಶಿವಶಾಸನಾತ್ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೫೬॥

ಪಿತರೋ ಮರುತಃ ಸಾಧ್ಯಾ ಋಭವೋ ವಸವೋ ಮನುಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೫೭॥

ವಿಶ್ವೇದೇವಾಶ್ವಿನೌ ಚಾರ್ಕಾಃ ವಸಂತಿ ಶಿವಶಾಸನಾತ್ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೫೮॥

ಅಧೀಯಂತೇ ತಥಾ ವೇದೈಃ ಋಷಯೋಮೀ ಸಹಸ್ರಶಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೫೯॥

ಪ್ರವರ್ತಂತೇ ಕ್ರಿಯಾಸ್ಸರ್ವಾಃ ಸ್ಮರಶಾಸನಶಾಸನಾತ್ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೬೦॥

---

ದೇಹವಾಗಿದೆ. ಈ ಭೂಮಿಯು ಸಮಸ್ತ ಸಾಗರಗಳನ್ನೂ ದ್ವೀಪಗಳನ್ನೂ ಧರಿಸಿಕೊಂಡಿರುವುದೂ ವಿಶ್ವೇಶ್ವರನ ಆಜ್ಞೆಯಿಂದಲೇ ಅಲ್ಲವೆ ? ||೫೧-೫೨-೫೩-೫೪-೫೫||

ಶಿವನ ಆಜ್ಞೆಯನ್ನನುಸರಿಸಿ ಅಷ್ಟದಿಗ್ಗಜಗಳು, ಆದಿಕೂರ್ಮ, ನಕ್ರಗಳು ಈ ಮೊದಲಾದುವುಗಳೂ ತಮ್ಮ ತಮ್ಮ ಸ್ಥಾನದಲ್ಲಿ ಚಲಿಸದೆ ಇರುವುವು. ಪಿತೃದೇವತೆಗಳು, ಮರುದ್ಗಣಗಳು, ಸಾಧ್ಯರು, ಋಭುದೇವತೆಗಳು, ವಸುಗಳು, ಮನುಗಳೂ, ವಿಶ್ವೇದೇವರು, ಅಶ್ವಿನೀದೇವತೆಗಳೂ, ದ್ವಾದಶಾದಿತ್ಯರು ಇವರೆಲ್ಲರೂ ಶಿವಶಾಸನದಿಂದ ತಮ್ಮ ತಮ್ಮ ಕಾರ್ಯಗಳನ್ನು ನೆರವೇರಿಸಿಕೊಂಡಿರುವರು. ಈ ಸಹಸ್ರಾರು ಸಂಖ್ಯೆಯ ಮಹರ್ಷಿಗಳು ವೇದಾಧ್ಯಯನ ಮಾಡಿಕೊಂಡಿರುವುದೂ, ಈ ಯಜ್ಞ ಕ್ರಿಯೆಗಳೆಲ್ಲವೂ ನಿರ್ವಿಘ್ನವಾಗಿ ಈಗ ನೆರವೇರುತ್ತಿರುವುದೂ ಶಿವಾಜ್ಞೆಯಿಂದಲೇ ಅಲ್ಲವೆ ? ಅಂತಹ ಭಗವಂತನಾದ ಶಂಕರನೇ ಸರ್ವದೇವಾಧಿದೇವನೆಂಬುದನ್ನು ಮರೆತುಬಿಟ್ಟೆಯಾ ? ||೫೬-೫೭-೫೮-೫೯-೬೦||

ಲೋಕಾಲೋಕ್ಯಾ ಲೋಕಪಾಲಾ ಯಸ್ಯಾಜ್ಞಾಧಾರಿಣಃ ಸದಾ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೬೧॥

ಯೋ ವೈ ರುದ್ರೇತಿ ಮಂತ್ರೇಣ ಶಿವೋಽಥರ್ವಶಿಖಾಸ್ತುತಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೬೨॥

ಸರ್ವಃ ಶರ್ವಮಯೋ ಲೋಕೋ ಯೋ ವೇದಾದೌ ಪ್ರತಿಷ್ಠಿತಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೬೩॥

ಯಂ ವಿನಿದ್ರಾ ಜಿತಶ್ವಾಸಾಃ ಸದಾ ಧ್ಯಾಯಂತಿ ಯೋಗಿನಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೬೪॥

ಏಷ ಭೂತಪತಿಃ ಸೇತುರ್ವಿಧಾರಣ ಇತಿ ಶ್ರುತಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೬೫॥

ಯ ಏಷ ಪರಮಾನಂದಃ ಶಿವೋಽದ್ವೈತಶ್ಚ ಕೇವಲಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೬೬॥

ಯತ್ಸ್ವರೂಪಪರಿಜ್ಞಾನಂ ವೇದ್ಯೈರಪಿ ನ ಶಕ್ಯತೇ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೬೭॥

---

ಅಷ್ಟದಿಕ್ಪಾಲಕರೂ ಶಿವಾಜ್ಞಾಧಾರಕರಾಗಿಯೇ ಸಮಸ್ತ ಲೋಕಗಳನ್ನೂ ರಕ್ಷಿಸುತ್ತಿರುವರು. ಅಥರ್ವಶೀರ್ಷೋಪನಿಷತ್ತಿನಲ್ಲಿ 'ಯೋ ವೈ ರುದ್ರಃ' ಎಂಬ ಮಂತ್ರದಿಂದ ಸ್ತುತಿಸಲ್ಪಡುವವನೂ ಶಿವನೇ ಅಲ್ಲವೆ? ವೇದಾದಿಯಲ್ಲಿ ಪ್ರಸಿದ್ಧವಾಗಿರುವ ಓಂಕಾರರೂಪಿಯಾಗಿ ಪ್ರಪಂಚವನ್ನೇ ವ್ಯಾಪಿಸಿ ನಿಂತಿರುವವನೂ ಶಂಕರನೇ ಎಂದು ತಿಳಿ! ಯೋಗಿಗಳೆಲ್ಲರೂ ಪರಶಿವನ ಉಸುರೆನಿಸಿದ ವೇದೋಪನಿಷತ್ತುಗಳನ್ನು ಸದಾ ಚಿಂತಿಸುತ್ತಿರುವರಲ್ಲವೆ? ಭೂತಪತಿಯೆನಿಸಿದ ಈ ಪರಶಿವನೇ ಸಂಸಾರಸೇತುವನ್ನು ಹೊಡೆದುರುಳಿಸುವವನು. ॥೬೧-೬೨-೬೩-೬೪-೬೫॥

ಪರಮಾನಂದಸ್ವರೂಪನಾಗಿ ಶಿವಾದ್ವೈತಪ್ರತಿಪಾದ್ಯಮಾನನಾದವನೇ ಈಶ್ವರನು. ಅವನ ಸ್ವರೂಪವನ್ನು ತಿಳಿಯುವುದಕ್ಕೆ ಯಾವ ವೇದಗಳಿಂದಲೂ ಸಾಧ್ಯವಾಗಿಲ್ಲ. ಮಹಾದೇವನು ಮಹಾವಸ್ತುಗಳಿಗಿಂತಲೂ ಮಹಿಮನೆನಿಸಿದವನು. ಅಣುವಸ್ತುಗಳಿಗೆ ಅಣುಸ್ವರೂಪದಿಂದಿರುವನು. ಪರಮೇಶ್ವರನು ವಾಸ್ತವವಾಗಿ

ಯೋ ಮಹಾಂಶ್ಚ ಮಹಾದೇವಃ ಅಣೀಯೋಣೀಯಸಾಮಪಿ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೬೮॥

ನೈವ ಸ್ತ್ರೀ ನ ಪುಮಾನೇಷ ಮಹಾದೇವೋ ನಪುಂಸಕಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೬೯॥

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೭೦॥

ಆನಂದಂ ಶಾಂಭವಂ ವಿದ್ವಾನ್ನ ಬಿಭೇತಿ ಕುತಶ್ಚನ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೭೧॥

ಸದ್ಯೋಜಾತೋ ಮಹಾದೇವೋ ವಾಮದೇವೋ ಮಹೇಶ್ವರಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೭೨॥

ಅಘೋರೋ ವಿಶ್ವನಾಶಾತ್ಮಾ ತತ್ಪೂರ್ಷಃ ಸರ್ವದೃಕ್ ಶಿವಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೭೩॥

ಸ ಈಶಾನಃ ಸ ಹಿ ವಿರಾಟ್ ಸ್ವರಾಟ್ ಸಂರಾಟ್ ಪ್ರಜಾಪತಿಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೭೪॥

ಸ ನಿರ್ಗುಣೋ ವಿರೂಪಾಕ್ಷಃ ಸ ಆತ್ಮಾ ವಿಶ್ವತೋಮುಖಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೭೫॥

---

ಪುರುಷನೂ ಅಲ್ಲ. ಸ್ತ್ರೀರೂಪಿಯೂ ಅಲ್ಲ. ನಪುಂಸಕನಂತೂ ಅಲ್ಲವೇಅಲ್ಲ. ಮನಸ್ಸಿಗೂ ಮಾತಿಗೂ ಸಿಲುಕದವನು ಪರಶಿವನು. ಆ ರೀತಿ ಮಹಾಮಹಿಮನೂ, ಷಡ್ಗುಣೈಶ್ವರ್ಯ ಪರಿಪೂರ್ಣನೂ ಆದ ಮಹಾದೇವನೇ ದೇವಾಧಿದೇವನು. ಅಂತಹವನನ್ನು ನೀನು ಈ ಸಮಾರಂಭದಲ್ಲಿ ಮರೆಯುವುದು ಉಚಿತವೇ ? ॥೬೬-೬೭-೬೮-೬೯-೭೦॥

ಶಂಕರನ ಕೃಪಾತಿಶಯದಿಂದ ಆನಂದವನ್ನು ಪಡೆದಶಾಂಭವನು ಪ್ರಪಂಚದಲ್ಲಿ ಯಾವ ವಸ್ತುವಿಗೂ ಹೆದರಲಾರನು. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನಗಳೆಂಬ ಪರಶಿವನ ಪಂಚಮುಖಗಳೂ ಮಹಾದೇವಸ್ವರೂಪಗಳೇ. ಆ ಮುಖಗಳಿಂದಲೇ ಜಗತ್ತಿನ ಸೃಷ್ಟಿಸ್ಥಿತಿಲಯಗಳು ನಡೆಯುತ್ತಿರುವುವು. ಅಘೋರ

ವಿಶ್ವತಶ್ಚಕ್ಷುರೀಶಾನಃ ಸಭವೋ ವಿಶ್ವಬಾಹುಕಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೭೬॥

ನಿರ್ವಿಕಾರೋ ವಿಕಾರೋ ವಾ ಭಾಸತೇ ಸರ್ವಹೃದ್ಗತಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೭೭॥

ಪುರುಷೋ ವ್ಯಾಪಕೋಽನಂತೋ ದೃಗ್ದೃಶ್ಯಾತೀತವೈಭವಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೭೮॥

ರಸೋ ಮಹೇಶೋ ವಿಶ್ವಾತ್ಮಾ ವಿಶ್ವಾಧಿಕ ಉಮಾಪತಿಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೭೯॥

ಋತಂ ಸತ್ಯಂ ಪರಂ ಬ್ರಹ್ಮ ಪುರುಷಃ ಕೃಷ್ಣಪಿಂಗಳಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೮೦॥

ಊರ್ಧ್ವರೇತಾ ವಿರೂಪಾಕ್ಷೋ ವಿಶ್ವರೂಪೋ ಗುಣಾತಿಗಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೮೧॥

---

ಮುಖವೇ ಪ್ರಪಂಚನಾಶಕವು. ತತ್ಪುರುಷಮುಖವೇ ಸರ್ವವ್ಯಾಪಿಯು. ಈಶಾನ ಮುಖವೇ ಪ್ರಪಂಚರೂಪವು. ಪರಶಿವನು ವಾಸ್ತವವಾಗಿ ನಿರ್ಗುಣನು. ವಿರೂಪಾಕ್ಷನು. ಸರ್ವತೋಮುಖದಿಂದ ವಿಶ್ವಮುಖನೆನಿಸಿಕೊಂಡಿರುವವನು. ಅಂತಹ ಮಹೇಶ್ವರ ನನ್ನು ನೀನು ಮರೆಯುವುದು ಯುಕ್ತವೆ! ॥೭೧ ೭೨-೭೩-೭೪-೭೫॥

ಪ್ರಪಂಚವೇ ಪರಶಿವನ ಕಣ್ಣುಗಳು. ಪ್ರಪಂಚವೇ ಅವನ ಬಾಹುಗಳು. ವಿಕಾರರೂಪದಿಂದಲೂ ವಿಕಾರರಹಿತನಾಗಿಯೂ ಸರ್ವರ ಹೃದಯಾಂತರಾಳದಲ್ಲಿ ಅಡಗಿರುವವನೇ ಶಂಕರನು. ಸರ್ವವ್ಯಾಪಿಯಾದ ಪುರುಷನೆನಿಸಿ ದೃಕ್, ದೃಶ್ಯ ಮುಂತಾದ ಭೇದಗಳಿಲ್ಲದೆ, ರಸರೂಪದಿಂದಲೂ ವಿಶ್ವಸ್ವರೂಪನೆನಿಸಿ, ವಿಶ್ವಾಧಿಕನಾಗಿ, ಉಮಾಪತಿಯಾದವನೂ ಶಂಕರನೇ ಅಲ್ಲವೆ! ಕಾಯಿಕವಾದ ಮತ್ತು ಮಾನಸಿಕವಾದ ಸತ್ಯಸ್ವರೂಪನೂ, ಪರಬ್ರಹ್ಮವಸ್ತುವೂ, ಉಮಾರೂಪದಿಂದ ಪಿಂಗಳವರ್ಣದವನೂ, ಶಂಕರರೂಪದಿಂದ ಕೃಷ್ಣವರ್ಣದವನೂ ಆಗಿರುವ ಶಂಕರನು ಲೋಕನಾಥನೂ ಯಜ್ಞಪತಿಯೂ ಅಲ್ಲವೆ. ॥೭೬-೭೭-೭೮-೭೯-೮೦॥

ಊರ್ಧ್ವರೇತಸ್ಕನೂ, ತ್ರಿಲೋಚನನೂ, ವಿಶ್ವರೂಪನೂ, ನಿರ್ಗುಣನೂ

ಶಿವೋಽನಂದಘನಃ ಶಾಂತೋ ವಿಶೇಷೇಣ ವಿವರ್ಜಿತಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೮೨॥

ಸರ್ವದೃಕ್ ಸರ್ವಭೂತಾತ್ಮಾ ಸರ್ವೇಂದ್ರಿಯವಿವರ್ಜಿತಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೮೩॥

ಅಪಾಣಿಪಾದೋ ವರದೋ ಜವನೋಽಪ್ಯಗೃಹೀತಕಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೮೪॥

ಸ ಪಶ್ಯತೀದಂ ವಿಶ್ವಾತ್ಮಾ ಚರಾಚರಮಿದಂ ಜಗತ್ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೮೫॥

ನ ತಂ ವಿಂದಂತಿ ವಿದ್ವಾಂಸೋ ಯತಂತೋಽಪಿ ಯತೀಶ್ವರಾಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೮೬॥

ಯೋ ಜಾಗ್ರತ್ಸ್ವಪ್ನತುರ್ಯಾಭಿರವಸ್ಥಾಭಿರತೀತಕಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೮೭॥

ಯೋ ಮಾಯಯಾ ಮೋಹಯತಿ ಜಗದಾಬ್ರಹ್ಮಕೀಟಕಂ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೮೮॥

---

ಆದ ಪರಶಿವನೇ ದೇವಶ್ರೇಷ್ಠನು. ಆತನು ಕೇವಲ ಆನಂದರೂಪಿಯು, ಶಾಂತನು, ವಿಶೇಷಗುಣವಿವರ್ಜಿತನು, ಸರ್ವವನ್ನೂ ನೋಡುವವನು, ಸರ್ವಭೂತಸ್ವರೂಪನು, ಸರ್ವೇಂದ್ರಿಯವಿವರ್ಜಿತನು. ಆತನಿಗೆ ಕೈಕಾಲುಗಳಿಲ್ಲ. ವರಪ್ರದನು, ವೇಗವಾಗಿ ಹೋಗುವವನು, ಯಾರಿಗೂ ಸಿಕ್ಕದವನು. ಅಂತಹ ಪರಶಿವನು ಪ್ರಪಂಚಸ್ವರೂಪನೆನಿಸಿ ಚರಾಚರಾತ್ಮಕವಾದ ಈ ಜಗತ್ತನ್ನೆಲ್ಲಾ ನೋಡುತ್ತಲಿರುವನು. ಅದರಿಂದಲೇ ಮಹಾದೇವನು ದೇವಶ್ರೇಷ್ಠನೆನಿಸಿರುವನು. ॥೮೧-೮೨-೮೩-೮೪-೮೫॥

ಆತ್ಮವಿದ್ಯೆಯನ್ನರಿತವರೂ, ಯತಿಗಳೂ ಎಷ್ಟೇ ಪ್ರಯತ್ನಪಟ್ಟರೂ ಆ ಪರಶಿವನನ್ನು ಪೂರ್ಣವಾಗಿ ಅರಿಯಲಾರರು. ಶಿವನಿಗೆ ಜಾಗ್ರತ್ಸ್ವಪ್ನಸುಷುಪ್ತ್ಯಾದ್ಯವಸ್ಥೆಗಳಿಲ್ಲ. ಮಾಯಾಸಂಬಂಧದಿಂದ ಜಗದ್ರೂಪವಾಗಿ ಪ್ರತಿಫಲಿಸಿ, ಕೀಟದಿಂದ ಹಿಡಿದು ಬ್ರಹ್ಮಪರ್ಯಂತವಾಗಿ ನಾನಾವಸ್ತುರೂಪದಿಂದ ಸ್ಫುರಿಸುತ್ತಿರುವನು. ಮಾಯಾವಿಶಿಷ್ಟನಾಗಿ ಕಂಡುಬಂದರೂ ಮಾಯೆಗೆ ಅವನು ಅಧೀನನಲ್ಲ. ಲೋಕೇಶ್ವರನೇ

ಸ ಮಾಯೀ ಪರಮೇಶಾನಃ ಸ ಪರಃ ಶಿವ ಈಶ್ವರಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೮೯॥

ಸರ್ವಾಂತರಃ ಸರ್ವಸಾಕ್ಷೀ ವೇತ್ತಾ ನೇತಾ ಸ ನಿರ್ಗುಣಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೯೦॥

ಸ ಸುಧನ್ವಾ ಸ್ವಿಷುರ್ದೇವೋ ವಿಭುಶ್ಶಂಕರ ಈಶ್ವರಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೯೧॥

ಸದಾಶಿವಃ ಪಶುಪತಿರ್ಯಜ್ಞೋ ಯಜ್ಞೇಶ್ವರಶ್ಚ ಸಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೯೨॥

ಸೋಂತರಃ ಸರ್ವಭೂತಾನಾಂ ಸ ಬಾಹ್ಯೇಪಿ ಚ ಸಂಸ್ಥಿತಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೯೩॥

ಯೋ ಯಜ್ಞೈರಿಜ್ಯತೇ ಸಾಂಬೋ ಯಜ್ವಿಭಿರ್ವೇದಪಾರಗೈಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೯೪॥

ಯತ್ಸ್ವರೂಪಾಪರಿಜ್ಞಾನಾನ್ನ ಮುಕ್ತಿಂ ಲಭತೇ ನರಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೯೫॥

---

ಅವನು. ಎಲ್ಲ ವಸ್ತುಗಳಲ್ಲಿಯೂ ಅಡಗಿ ಎಲ್ಲ ವಸ್ತುಗಳನ್ನೂ ನೋಡುತ್ತಾ, ಎಲ್ಲಕ್ಕೂ ಒಡೆಯನೆನಿಸಿ ನಿರ್ಗುಣನಾಗಿರುವವನೂ ಈಶ್ವರನೇ. ||೮೬-೮೭-೮೮-೮೯-೯೦||

ಶ್ರೇಷ್ಠವಾದ ಧನುರ್ಬಾಣಗಳುಳ್ಳವನೂ, ಸರ್ವವ್ಯಾಪಿಯೂ ಆದವನು ಒಬ್ಬನೇ ಪರಶಿವನಲ್ಲವೆ! ಸದಾ ಮಂಗಳಕರನೂ, ಪಶುಪತಿಯೂ, ಯಜ್ಞರೂಪಿಯೂ, ಯಜ್ಞೇಶ್ವರನೂ ಆಗಿ ಸರ್ವಭೂತಗಳಲ್ಲಿಯೂ ಅಡಗಿ, ಅಂತರ್ಬಹಿರ್ಭಾಗಗಳಲ್ಲಿ ತೋರಿಬರುತ್ತಾ ಪ್ರಕಾಶಿಸುವವನೂ ಮಹಾದೇವನೇ. ಯಾಗದೀಕ್ಷಿತರು ಪರಶಿವನನ್ನು ತೃಪ್ತಿಪಡಿಸುವುದಕ್ಕಾಗಿಯೇ ಅಲ್ಲವೆ, ನಾನಾವಿಧವಾದ ಹವಿಸ್ಸುಗಳನ್ನು ಮಂತ್ರಪೂತಗಳನ್ನಾಗಿ ಮಾಡಿ ಅಗ್ನಿಯಲ್ಲಿ ಹಾಕುವರು ? ಅವನ ಸ್ವರೂಪವನ್ನೇ ಸರಿಯಾಗಿ ಅರಿಯದ ಮಾನವರಿಗೆ ಎಂದಾದರೂ ಮುಕ್ತಿಯು ದೊರೆತೀತೆ ? ಎಂದಿಗೂ ಇಲ್ಲ. ಅಂತಹ ದೇವದೇವನನ್ನು ನೀನು ಈ ಯಾಗಕ್ಕೆ ಆಹ್ವಾನಿಸದಿರುವುದು ಉಚಿತವೆ? ||೯೧-೯೨-೯೩-೯೪-೯೫||

ಯೋ ಬಾಹ್ಯಾಭ್ಯಂತರೇ ಪೂರ್ಣಃ ಶಿವ ಏಕ ಶ್ಶಿವಂಕರಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೯೬॥

ಯತೋ ಬ್ರಹ್ಮೇಶವಿಷ್ಣ್ವಿಂದ್ರಾ ಸಹ ಭೂತೈಃ ಪ್ರಜಜ್ಞಿರೇ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೯೭॥

ಸ ಧ್ಯೇಯಃ ಪರಮೇಶಾನೋ ಮುಮುಕ್ಷುಭಿರಹರ್ನಿಶಂ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೯೮॥

ದೇವಾ ಅಪಿ ಮಹಾದೇವಂ ಸಹ ಸಂತಂ ಚ ನೋವಿದುಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೯೯॥

ಸ ಏವ ಕರ್ತಾ ಜಗತಾಂ ಭರ್ತಾ ಹರ್ತಾ ಮಹೇಶ್ವರಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೧೦೦॥

ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ।
ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥೧೦೧॥

ಯಸ್ಯ ಲಿಂಗಾರ್ಚನೇನೈವ ಮುಕ್ತಿರ್ಭಕ್ತ್ಯೈಶ್ಚ ಲಭ್ಯತೇ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೧೦೨॥

---

ಲೋಕಕಲ್ಯಾಣಪ್ರದನಾದ ಶಂಕರನು ಬಾಹ್ಯಾಭ್ಯಂತರಗಳಲ್ಲಿ ಪರಿಪೂರ್ಣನೆನಿಸಿದವನು. ಶಂಕರನಿಂದಲೇ ಬ್ರಹ್ಮ, ವಿಷ್ಣು, ರುದ್ರ, ಇಂದ್ರ, ಪಂಚಭೂತಗಳು ಇವರೆಲ್ಲರೂ ಹುಟ್ಟಿರುವರು. ಮೋಕ್ಷಾರ್ಥಿಗಳು ನಿಜವಾಗಿಯೂ ಹಗಲು ರಾತ್ರಿ ಅವನನ್ನೇ ಬಿಡದೆ ಧ್ಯಾನಿಸುತ್ತಿರಬೇಕು. ದೇವತೆಗಳೂ ಸಹ ಮಹಾದೇವನೆನಿಸಿದ ಅವನ ಸ್ವರೂಪವನ್ನು ಸರಿಯಾಗಿ ತಿಳಿಯಲಾರರು. ಲೋಕದೊಡೆಯನೂ, ಲೋಕರಕ್ಷಕನೂ, ಲೋಕನಾಶಕನೂ ಆ ಮಹೇಶ್ವರನೇ ಅಲ್ಲವೆ. ಅಂತಹವನನ್ನು ಈ ಯಜ್ಞಕ್ಕೆ ಆಹ್ವಾನಿಸದಿರುವುದು ಉಚಿತವೇ? ॥೯೬-೯೭-೯೮-೯೯-೧೦೦॥

ಮಾನವರು ಮಾಯಾವರಣದಿಂದ ಮುಚ್ಚಲ್ಪಟ್ಟವರಾಗಿ ನಿಜವಾದ ಪರಬ್ರಹ್ಮ ಸ್ವರೂಪವನ್ನು ತಿಳಿಯಲಾರರು. ಅದನ್ನು ಅರಿಯುವವರೆಗೂ ಅವರಿಗೆ ದುಃಖವು ತಪ್ಪಲಾರದು. ಮುಕ್ತಿಯು ದೊರೆಯಲಾರದು. ಶಿವಲಿಂಗಾರ್ಚನೆಯಿಂದಲೇ ನಿಜವಾಗಿ ಮಾನವರಿಗೆ ಮುಕ್ತಿಯು ದೊರಕುವುದು. ಭಸ್ಮಧಾರಿಯಾದವರೇ ಸಾಂಸಾರಿಕ

ಯದ್ಭಸ್ಮಧೃಗ್ಭವೋದ್ಭೂತಂ ದುಃಖಂ ಸರ್ವಂ ಪ್ರಹಾಸ್ಯತಿ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೧೦೩॥

ಯನ್ನೇತ್ರಾಶ್ರುಭವಂ ಬೀಜಂ ಬಿಭ್ರನ್ನಾದಭ್ರದುಃಖಭಾಕ್ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೧೦೪॥

ಯಸ್ಯ ಪಂಚಾಕ್ಷರಜಪಾತ್ಪಂಚಪಾಪಂ ನ ಕಿಂಚನ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೧೦೫॥

ಯಸ್ಯ ರುದ್ರಜಪಾದೇವ ಸರ್ವಪಾಪಾದ್ರಿಭೇದನಂ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೧೦೬॥

ಯಸ್ಯ ಕ್ಷೇತ್ರೇಷು ವಸತಾಂ ಮುಕ್ತಿರೇಕೇನ ಜನ್ಮನಾ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೧೦೭॥

ಯೋ ವೇದಾದೌ ಸ್ವರಃಪ್ರೋಕ್ತೋ ವೇದಾಂತೇಷು ಪ್ರತಿಷ್ಠಿತಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೧೦೮॥

ಯಸ್ಯ ಪ್ರಕೃತಿಸಂಲೀನಾ ಭವಂತೋ ಮೋಹಮಾಸ್ಥಿತಾಃ ।
ಸ ಏವ ಭಗವಾನ್ ರುದ್ರಃ ಸರ್ವದೇವಪತಿಶ್ಶಿವಃ ॥೧೦೯॥

---

ದುಃಖದಿಂದ ನಿವೃತ್ತಿಹೊಂದುವರು. ಭಸ್ಮತ್ರಿಪುಂಡ್ರವನ್ನು ಯಾರು ಹಣೆಯಲ್ಲಿ ಧರಿಸುವರೋ ಅವರಿಗೆ ಮುಕ್ತಿ ದೊರಕುವುದು. ಈಶ್ವರನ ಕಣ್ಣೀರಿನಿಂದ ಹುಟ್ಟಿದ ಬೀಜವೇ ರುದ್ರಾಕ್ಷಿಯು. ಅದನ್ನು ಧರಿಸುವುದರಿಂದಲೇ ಮಾನವನಿಗೆ ಮುಕ್ತಿ ದೊರಕೀತು. ಶಿವಪಂಚಾಕ್ಷರಜಪದಿಂದಲೇ ಮಾನವರ ಸಮಸ್ತ ಪಾಪರಾಶಿಯೂ ನಿವೃತ್ತಿಯಾಗಬೇಕು. ಅಂತಹ ದೇವದೇವನನ್ನು ಮರೆಯುವುದು ನ್ಯಾಯವೇ ? ॥೧೦೧-೧೦೨-೧೦೩-೧೦೪॥

ರುದ್ರಮಂತ್ರಜಪದಿಂದಲೇ ಪಾಪನಾಶವಾಗುವುದು. ಶಿವಕ್ಷೇತ್ರದಲ್ಲಿ ವಾಸ ಮಾಡುವವರಿಗೆ ಮಾತ್ರ ಒಂದೇ ಜನ್ಮದಿಂದ ಮೋಕ್ಷವು ಲಭಿಸುವುದು. ವೇದಾದಿಯಲ್ಲಿದ್ದು ಶಬ್ದರೂಪವಾಗಿ ಸ್ವರವೆಂಬ ಹೆಸರಿನಿಂದ ಪ್ರತಿಷ್ಠಿತನಾಗಿ ವೇದಾಂತಗಳೆಂಬ ಉಪನಿಷತ್ತುಗಳಲ್ಲಿ ಬ್ರಹ್ಮರೂಪದಿಂದಿರುವವನೂ ಶಂಕರನಲ್ಲವೇ. ಅಂತಹ ದೇವದೇವನನ್ನು ಈಗ ನೀವು ಮರೆತುದು ಹೇಗೆ ? ನಿಜವಾಗಿಯೂ ನೀವು ಶಿವಮಾಯಾ

ಯಜಧ್ವಂ ಸಾಂಬಮೀಶಾನಂ ಲಬಧ್ವಂ ಮುಕ್ತಿಮುತ್ತಮಾಂ ।
ಸತ್ಯಂ ತಥ್ಯಂ ವಚೋಮೇಽಪ್ಯ ಸತ್ಯಮೇಕೋ ಮಹೇಶ್ವರಃ ॥೧೧೦॥

ಅನಿತ್ಯಾಃ ಪಶವೋ ಯೂಯಂ ಬ್ರಹ್ಮವಿಷ್ಣ್ವಾದಯಸ್ಸುರಾಃ ।
ಮಾ ದಕ್ಷೇಣ ವಿನಶ್ಯಂತು ತ್ರ್ಯಕ್ಷಕ್ರೋಧಾಗ್ನಿವಹ್ನಿನಾ ॥೧೧೧॥

ಭಗಾಕ್ಷಿಹಾರಿಣೋ ಭಾಗಂ ದಾತುಮರ್ಹಥ ಸತ್ತಮಾಃ ।
ಕಿಮರ್ಥ್ವರೇತ್ರ ಪಶವಃ ಪೂಜನೀಯಾ ಸುರಾವರಾಃ ॥೧೧೨॥

ಸೋಮೇನ ಸೋಮಂ ಯಜತ ವೇದಸೀಮಾಸು ಸಂಸ್ತುತಂ ।
ಸ ಸೀಮಾ ಸರ್ವವೇದಾನಾಂ ವೇದಾಂತಾನಾಂ ಗತಿಃ ಪರಾ ॥೧೧೩॥

ಸ ಏವೋಪನಿಷದ್ವೇದ್ಯಃ ಪುರುಷಃ ಪರಮೇಶ್ವರಃ ।
ಸಾ ಕಾಷ್ಠಾ ಶಿಪಿವಿಷ್ಟೋ ಹಿ ಸ ಹಿ ನಿಷ್ಠಾವತಾಮಿಹ ॥೧೧೪॥

---

ಮೋಹಿತರಾಗಿ ಅಜ್ಞಾನಿಗಳೆನಿಸಿದ್ದೀರಿ. ಈಗಲಾದರೂ ಎಚ್ಚೆತ್ತು ಶಿವಜ್ಞಾನವನ್ನು ಅನುಸಂಧಾನಮಾಡಿಕೊಂಡು, ಈ ಯಾಗದಲ್ಲಿ ಶಿವನನ್ನು ಪ್ರೀತಿಗೊಳಿಸಿ, ಉತ್ತಮವಾದ ಮುಕ್ತಿಯನ್ನು ಪಡೆಯಿರಿ. ನನ್ನ ಈ ಮಾತನ್ನು ಸತ್ಯವೆಂದು ನಂಬಿರಿ. ಲೋಕದಲ್ಲಿ ಸತ್ಯವಸ್ತುವೆಂದರೆ ಶಿವನೊಬ್ಬನೇ. ಇದರಲ್ಲಿ ಸಂಶಯವಿಡಬೇಡಿ. ॥೧೦೬-೧೦೭-೧೦೮-೧೦೯-೧೧೦॥

ಎಲೈ ಬ್ರಹ್ಮವಿಷ್ಣ್ವಾದಿಗಳೇ, ನೀವೆಲ್ಲಾ ಅಜ್ಞಾನಿಗಳು, ನಿಮಗೆ ಜನನ ಮರಣಾದಿಗಳುಂಟು. ನೀವು ಈ ದಕ್ಷನೊಡನೆ ಸಹಕರಿಸಿ ಶಿವಕೋಪಾಗ್ನಿಗೆ ಸಿಕ್ಕಿ ಧ್ವಂಸರಾಗಬೇಡಿ. ಭಗಾಕ್ಷಿನಾಶಕನಾದ ಈಶ್ವರನಿಗೆ ಹವಿರ್ಭಾಗವನ್ನು ಕೊಟ್ಟು ನೀವು ಕೃತಾರ್ಥರಾಗಿರಿ. ಯಾಗದಲ್ಲಿ ಪಶುಸದೃಶರಾದ ಈ ಅಲ್ಪಶಕ್ತಿಯ ದೇವತೆಗಳನ್ನು ಪೂಜಿಸುವುದು ಯಾವ ನ್ಯಾಯ ? ॥೧೧೧-೧೧೨॥

ಸೋಮಯಾಗದಿಂದ ಉಮಾಸಹಿತನಾದ ಶಂಕರನನ್ನು ಸ್ತುತಿಸಬೇಕು. ಶಂಕರನು ವೇದರಾಶಿಯಿಂದ ಸ್ತುತಿಸಲ್ಪಟ್ಟವನು. ವೇದಾಂತಗಳಿಂದ ಪ್ರತಿಪಾದ್ಯನಾದವನೂ, ವೇದಾರ್ಥಗಳಿಂದ ಸ್ತುತ್ಯನಾದವನೂ ಆ ಪರಶಿವನೇ ಅಲ್ಲವೆ? ಉಪನಿಷತ್ಪ್ರತಿಪಾದ್ಯನಾದ ಪರಶಿವನೇ ಸಮಸ್ತ ದಿಗ್ರೂಪದಿಂದಲೂ, ಕಿರಣರೂಪದಿಂದಲೂ ಪ್ರವೇಶಿಸಿ ಸಮಸ್ತ ಜ್ಞಾನಿಗಳಿಗೂ ಆರಾಧ್ಯನೆನಿಸಿರುವನು. ॥೧೧೩-೧೧೪॥

ವಿಶಿಷ್ಟಫಲದೋ ಭೂಯಾಚ್ಛಿಷ್ಯಾನಾಮೇವ ಕೇವಲಂ ।
ತಸ್ಯೋಚ್ಛಿಷ್ಟಂ ಜಗತ್ಸರ್ವಮಷ್ಟಮೂರ್ತಿತನೂಗತಂ ॥೧೧೫॥

ಸ ಭೂಮಿರಾಪೋ ಹ್ಯನಲೋ ವಾಯುರಾಕಾಶಕೋಶಗಃ ।
ರುದ್ರೋ ವಿಧಾತಾ ದಾಂತಾನಾಂ ಶಾಂತಾನಾಂ ಸ ಗತಿಃ ಪರಾ॥೧೧೬॥

ಕ್ಷಮಾಪಯಧ್ವಂ ವರದಂ ಯದತೀತಂ ಮಖೇ ತವ ।
ಸಹಮಾನೋ ಮಹಾದೇವೋ ಭಕ್ತ್ಯಾ ಸರ್ವಂ ಸಹಿಷ್ಯತಿ ॥೧೧೭॥

ಅಧಿವಕ್ತಾ ಸ ಏವೇಶೋ ಭಕ್ತೇಷ್ವತ್ಯಂತಪಾಪಿಷು ।
ತಮೇವ ಶರಣಂ ಯಾತ ಮಹಾದೇವಂ ಸನಾತನಂ ॥೧೧೮॥

ಪತೀನಾಂ ಪತಿರೀಶಾನಶ್ಚೇತನಾನಾಂ ಸಚೇತನಃ ।
ತಪಸಾಮಧಿಪೋ ವೇದೈಸ್ಸರ್ವದಾ ಪ್ರತಿಪಾದ್ಯತೇ ॥೧೧೯॥

---

ಸಂಪೂರ್ಣವಾದ ಇಷ್ಟಾರ್ಥವನ್ನೆಲ್ಲಾ ಶಿಷ್ಯರಿಗೆ ಅನುಗ್ರಹಿಸುವವನು ಈಶ್ವರನೇ. ಈ ಕಾಣುವ ಜಗತ್ತೆಲ್ಲಾ ಪರಶಿವನಿಂದ ಉದ್ಭವಿಸಿದುದೇ ಅಲ್ಲವೆ. ಭೂಮಿ, ನೀರು, ಅಗ್ನಿ, ಗಾಳಿ, ಆಕಾಶ ಈ ಪಂಚಭೂತಗಳೂ, ಪಂಚಕೋಶಗಳೂ ಶಂಕರನೇ. ದಾಸಿಗಳಿಗೂ, ಶಾಂತರಾದ ಯೋಗಿಗಳಿಗೂ ಪರಮಗತಿಯನ್ನು ಕರುಣಿಸುವವನೂ ಈಶ್ವರನೇ ಅಲ್ಲವೆ? ॥೧೧೫-೧೧೬॥

ಈ ಯಾಗದಲ್ಲಿ ನೀವು ತಿಳಿಯದೆ ಮಾಡಿದ ಅಪರಾಧಕ್ಕಾಗಿ ಈಗಲೇ ಪರಮೇಶ್ವರನಲ್ಲಿ ಅಪರಾಧಕ್ಷಮಾಪಣೆಯನ್ನು ಕೇಳಿಕೊಳ್ಳಿರಿ. ಭಕ್ತರ ಸಂಪೂರ್ಣ ಅಪರಾಧವನ್ನೆಲ್ಲಾ ಸಹಿಸಿಕೊಳ್ಳುವ ವಿಶೇಷ ಗುಣವು ಮಹಾದೇವನಲ್ಲಿರುವುದು. ಅತ್ಯಂತ ಪಾಪಿಗಳನ್ನುದ್ಧರಿಸುವ ಶಕ್ತಿ ಮಹೇಶ್ವರನಲ್ಲಿರುವುದು. ಆದ್ದರಿಂದ ನೀವು ಈಗಲೇ ಸನಾತನನೂ, ಆದಿದೇವನೂ ಆದ ಮಹಾದೇವನನ್ನು ಶರಣುಹೊಂದಿರಿ. ॥೧೧೭-೧೧೮॥

ಲೋಕನಾಯಕರುಗಳಿಗೆಲ್ಲಾ ನಾಯಕನೆನಿಸಿದವನು ಶಂಕರನು. ಚೈತನ್ಯ ವಿಶಿಷ್ಟರಿಗೆ ಚೇತನರೂಪದಿಂದಿರುವವನು ಮಹಾದೇವನು. ಸಮಸ್ತವಿಧವಾದ ತಪಸ್ಸಿಗೂ ಫಲಪ್ರದನು ಮಹೇಶ್ವರನು, ಹೀಗೆಂದು ಸಮಸ್ತ ವೇದಗಳೂ ಉದ್ಘೋ

ಸ ಏವಾದ್ಯ ಸ ಉಶ್ಯೋ ಹಿ ವೇದನಿಶ್ವಾಸ ಈಶ್ವರಃ ।
ಸಾಗತಿಃ ಸಾ ಪರಾಕಾಷ್ಠಾ ಸದಾ ನಿಷ್ಠಾವತಾಂ ಸುರಾಃ ॥೧೨೦॥

ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ ಸನಾತನಂ ।
ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ಹಿ ವಿದ್ಯತೇ ॥೧೨೧॥

ಈಶಾವಾಸ್ಯೋ ಮಹಾದೇವಸ್ತೇನವಾಸ್ಯಮಿದಂ ಜಗತ್ ।
ಕಿಮತ್ರ ಬಹುನೋಕ್ತೇನ ಪ್ರಯಾತ ಶರಣಂ ಶಿವಂ ॥೧೨೨॥

॥ ಸತ್ಯುವಾಚ ॥

ಉಮಾಕಾಂತಮೇವಂ ಹೃದಂತರ್ವಿಭಾಂತಂ
ಸದಾ ವೇದವೇದಾಂತವಾರ್ತಾಸುದಾಂತಾಃ ।
ಕೃತಾಂತಾಂತಕಂ ಪೂಜಯಂತಃ ಪ್ರಶಾಂತಾಃ
ವಸಂತ್ಯೇವ ಸಂತಃ ಕಿಯಂತೋ ಮಹಾಂತಃ ॥೧೨೩॥

---

ಷಿಸುತ್ತಿವೆ. ಈ ವೇದಗಳೆಲ್ಲಾ ಪರಶಿವನ ಉಸಿರುಗಳೇ ಅಲ್ಲವೆ! ನಿಷ್ಠಾವಂತರಾದ ಸಮಸ್ತ ದೇವಮಾನವರಿಗೆಲ್ಲಾ ಪರಮಗತಿಯೆನಿಸಿದವನು ಈ ಮಹಾದೇವನೇ ಎಂಬುದನ್ನು ಮರೆಯಬೇಡ! ॥೧೧೯-೧೨೦॥

ಪ್ರಪಂಚದಲ್ಲಿ ಈಗ ಕಂಡುಬರುವ ಮತ್ತು ಹಿಂದೆ ತೋರಿಬಂದ, ಮುಂದೆ ಕಂಡುಬರುವ ಅಥವಾ ಅನಾದಿಯಾಗಿ ತೋರಿಬರುವ ಸಕಲ ವಸ್ತುಗಳೂ ಪರಶಿವನ ಆಕಾರಗಳೇ. ಅವನ ಸ್ವರೂಪವನ್ನು ತಿಳಿದವರೇ ಮೃತ್ಯುವನ್ನು ಜಯಿಸಬಲ್ಲವರು. ಜೀವನ್ಮುಕ್ತರಾಗಬೇಕಾದರೆ ಅಥವಾ ಕ್ರಮಮುಕ್ತಿಯನ್ನು ಪಡೆಯಬೇಕಾದರೂ ಈಶ್ವರಸ್ವರೂಪವನ್ನು ತಿಳಿಯುವುದೊಂದೇ ಮುಖ್ಯಮಾರ್ಗ. ಅದನ್ನು ಬಿಟ್ಟರೆ ಮತ್ತಾವ ದಾರಿಯೂ ಸುಲಭವಾದುದಲ್ಲ. ॥೧೨೧-೧೨೨॥

ಹೀಗೆ ಶಿವಮಹಿಮೆಯನ್ನು ತಂದೆಗೆ ಹೇಳುತ್ತಾ ಸತೀದೇವಿಯು ಕೊನೆಯದಾಗಿ ಹೀಗೆಂದಳು. ಈ ರೀತಿ ಸರ್ವರ ಹೃದಯಾಕಾಶದಲ್ಲಿ ಪ್ರಕಾಶಿಸುವ ಉಮಾಪತಿಯನ್ನೇ ಸದಾ ಧ್ಯಾನಮಾಡುತ್ತಾ, ಶಾಂತಮನಸ್ಸಿನಿಂದ ಪೂಜಿಸುತ್ತಾ, ವೇದವೇದಾಂತಮಾರ್ಗಗಳನ್ನು ಸ್ಪಷ್ಟವಾಗಿ ತಿಳಿದು ಉದಾರವಾದ ಮತ್ತು ಶಾಂತವಾದ

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ ದಕ್ಷಾಧ್ವರವರ್ಣನೇ ಸದಸ್ಯಾನ್‌ಪ್ರತಿಸತೀ ವಾಕ್ಯಕಥನಂ ನಾಮ ದ್ವಿತೀಯೋಽಧ್ಯಾಯಃ

---

ಮನಃಪರಿಪಾಕವನ್ನು ಪಡೆದವರಾಗಿ ಎಷ್ಟೋ ಜನರು ಮಹಾತ್ಮರೆನಿಸಿಕೊಂಡಿರುವರು. ಅಂತಹ ಮಹಾತ್ಮರು ಎಷ್ಟೋ ಮಂದಿ ಇಂದಿಗೂ ವಾಸಮಾಡುತ್ತಿರುವರು. ಹೀಗಿರುವಾಗ ಜ್ಞಾನಿಗಳೆನಿಸಿದ ನೀವು ಈ ರೀತಿ ಯಾಗಸಮಾರಂಭವನ್ನು ನಡೆಸುತ್ತಾ, ಪರಮಪೂಜ್ಯನಾದ ಮಹಾದೇವನನ್ನೇ ಮರೆತಿರುವಿರಲ್ಲಾ, ಇದು ನ್ಯಾಯವೇ ? ಎಂದು ಸತೀದೇವಿಯೆನಿಸಿದ್ದ ನೀನು ಆ ದಕ್ಷಸಭೆಯಲ್ಲಿ ಈ ರೀತಿ ಹೇಳಿದೆಯೆಂದು ಪರಶಿವನು ಪಾರ್ವತಿಗೆ ತಿಳಿಯಪಡಿಸುತ್ತಾ ಆ ಮೂಲಕ ಸ್ವಸ್ವರೂಪವನ್ನು ದೇವಿಗೆ ತಿಳಿಯಪಡಿಸಿದನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಶಿವಮಹಿಮೆಯನ್ನು ಬೋಧಿಸಿದನು. ||೧೨||

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ದಕ್ಷಾಧ್ವರದಲ್ಲಿ ಶಿವಸ್ವರೂಪವನ್ನು ವರ್ಣಿಸುವ ಎರಡನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ತೃತೀಯೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಸತ್ಯಾಃ ಸತ್ಯಂ ವಚಶ್ಶ್ರುತ್ವಾ ವೇದವೇದಾಂತಸಂಭವಂ ।
ವಿಷ್ಣುಬ್ರಹ್ಮಾದಯೋ ದೇವಾ ನೋಚುಃ ಕಿಂಚನತಾಂ ಪ್ರತಿ ॥೧॥

ಮುನಯೋ ವಿಸ್ಮಿತಾಕ್ಷಾಸ್ತೇ ಸತೀಂಪಶ್ಯಂತಿ ತತ್ರ ಹಿ ।
ಚಿತ್ರಾರ್ಪಿತೇವ ತತ್ರತ್ಯಾ ಅಭವನ್ಮುನಯುಸ್ಸುರಾಃ ॥೨॥

ತದಾ ಸತ್ಯಾವಚಶ್ಶ್ರುತ್ವಾ ಭಾವಿಕರ್ಮಪ್ರಚೋದಿತಃ ।
ದಕ್ಷೋಽಪಿ ದೀಕ್ಷಿತಸ್ತತ್ರ ಪ್ರಾಹಾಸತ್ಯಂ ಸತೀಂ ಪ್ರತಿ ॥೩॥

---

## ಮೂರನೆಯ ಅಧ್ಯಾಯ

ಹಾಗೆ ಸತೀದೇವಿಯು ವೇದಾಂತಗಳ ಅರ್ಥದಿಂದ ಕೂಡಿ ಶಿವಸ್ವರೂಪವನ್ನು ತಿಳಿಸುವ ಮಾತುಗಳನ್ನಾಡುತ್ತಿದ್ದಾಗ ವಿಷ್ಣು, ಬ್ರಹ್ಮ ಮೊದಲಾದ ಯಾವ ದೇವತೆಗಳೂ ಏನೂ ಮಾತನಾಡದೆ ಉದಾಸೀನರಾಗಿ ಕುಳಿತಿದ್ದರು. ಸಮಸ್ತ ಮಹರ್ಷಿಗಳೂ, ಇತರ ದೇವತೆಗಳೂ, ಆಶ್ಚರ್ಯಪಡುತ್ತಾ ಚಿತ್ರದಲ್ಲಿ ಬರೆದ ವ್ಯಕ್ತಿಗಳಂತೆ ಗಂಭೀರವಾಗಿ ಕುಳಿತುಬಿಟ್ಟರು. ಆಗ ಭಾವಿಕರ್ಮದಿಂದ ಪ್ರಚೋದಿತನಾದ ದಕ್ಷನು ದುರ್ಬುದ್ಧಿಯಿಂದ ಕೂಡಿ ಸತೀದೇವಿಯೊಡನೆ ಹೀಗೆ ಅಸತ್ಯವಾದ ಮಾತುಗಳನ್ನಾಡತೊಡಗಿದನು. ॥೧-೨-೩॥

॥ ದಕ್ಷ ಉವಾಚ ॥

ಸತಿ ತ್ವಂ ಶೃಣು ಮದ್ವಾಕ್ಯಂ ಶ್ರುತಿಸ್ಮೃತ್ಯರ್ಥಮಾದರಾತ್ ।
ಏಷ ವಿಷ್ಣುಃ ಸದಾ ಪೂಜ್ಯೋ ಮಮ ಸಂಪ್ರೀತಿದೋ ಮಖೇ ॥೪॥

ಯಜ್ಞೋ ವೈ ವಿಷ್ಣುರಿತ್ಯಾದ್ಯಾಃ ಶ್ರುತಯಸ್ತಂ ವದಂತಿ ವೈ ।
ನಾತ್ರ ರುದ್ರೇಣ ಮೇ ಕಾರ್ಯಂ ವಿರೂಪೇಣ ತ್ವಯಾ ಸಹ ॥೫॥

ವೇದಾ ಏವ ಪ್ರಮಾಣಂ ಮೇ ಮಾ ಕೃಥಾಸ್ಸಂಶಯಂ ಸತೀ ।
ಏತಚ್ಛ್ರುತ್ವಾ ತಸ್ಯ ವಚೋ ನಿಸ್ಸಾರಂ ಮುನಯಸ್ಸುರಾಃ ॥೬॥

ನ ವದಂತಿ ಚ ಪಶ್ಯಾತ್ರ ಪ್ರಮಾಣಂ ವಿಷ್ಣುರೇಷ ಮೇ
ತತ್ರ ದಕ್ಷವಚಶ್ಶ್ರುತ್ವಾ ಸತೀ ಕ್ರುದ್ಧಾಬ್ರವೀನ್ಮುನೇ ॥೭॥

॥ ಸತ್ಯುವಾಚ ॥

ಕಿಂ ತವಾನೇನ ವಚಸಾ ಭಕ್ತಿಹೀನಾಯ ಕುತ್ಸಿತಂ ।
ಯದಿ ವೇದಾಃ ಪ್ರಮಾಣಂ ತೇ ವೇದಾಸ್ಸರ್ವೇ ಪುರಃ ಸ್ಥಿತಾಃ ॥೮॥

---

ಸತೀದೇವಿಯೇ, ಈಗ ನಾನು ಹೇಳಲಿರುವ ಮಾತುಗಳನ್ನು ಕೇಳು. ಇದನ್ನೇ ಶ್ರುತಿಸ್ಮೃತಿಗಳ ಅರ್ಥವೆಂದು ನಂಬು. ಈ ವಿಷ್ಣುವೇ ದೇವಶ್ರೇಷ್ಠನು. ವಿಷ್ಣುವೇ ಯಜ್ಞರೂಪಿಯು ಎಂದು ಸಕಲ ವೇದಗಳೂ ಹೇಳುತ್ತಿವೆ. ಅದರಂತೆ ಈ ನಮ್ಮ ಯಾಗದಲ್ಲಿ ವಿಷ್ಣುವೇ ಪೂಜ್ಯನಾಗಿರುವನು. ನಿನ್ನ ಈಶ್ವರನಿಂದ ಅದರಲ್ಲಿಯೂ ವಿರೂಪನಾಗಿ ನಿನ್ನ ಪತಿಯಾಗಿ ಭಯಂಕರನಾಗಿರುವವನಿಂದ ಇಲ್ಲಿ ಯಾವ ಕಾರ್ಯವೂ ಆಗಬೇಕಾಗಿಲ್ಲ. ॥೪-೫॥

ನನಗೆ ವೇದಗಳೇ ಪ್ರಮಾಣಗಳು. ವೇದವಾಕ್ಯನಲ್ಲಿ ನನಗೆ ಸಂಶಯವಿಲ್ಲ. ಅದರಂತೆಯೇ ನಾನು ನಡೆಯತಕ್ಕವನು. ಎಂದು ದಕ್ಷಬ್ರಹ್ಮನು ಉಸುರಲು, ಆ ನಿಸ್ಸಾರವಾದ ವಾಣಿಯನ್ನು ಕೇಳಿ ಮುನಿಗಳು ವಿಷ್ಣುವನ್ನು ಪ್ರಮಾಣೀಕರಿಸದೆ, ಸುಮ್ಮನೇ ಕುಳಿತಿದ್ದರು. ಆಗ ಸತೀದೇವಿಯು ಕೋಪದಿಂದ ದಕ್ಷನ ಮಾತುಗಳನ್ನು ಖಂಡಿಸುತ್ತಾ ಹೀಗೆಂದಳು. ॥೬-೭॥

“ಎಲೈ ದಕ್ಷಪ್ರಜಾಪತಿಯೇ, ಶಿವಭಕ್ತಿಶೂನ್ಯನಾದ ನಿನಗೆ ಎಷ್ಟು ಹೇಳಿದರೇನು? ನಿನಗೆ ವೇದವಾಣಿಯಲ್ಲಿಯೇ ನಂಬಿಕೆ ಇರುವುದಾದರೆ, ಇಲ್ಲಿಯೇ ಸಕಲ

ವದಂತ್ವದ್ಯ ಯಥಾ ಜೋಷಂ ಸತ್ಯಮೇವ ವಚೋಽಧುನಾ ।
ಏಭಿರ್ಮುನಿಗಣೈಸ್ಸಾರ್ಧಂ ಸುರೈರ್ದಕ್ಷಪ್ರಜಾಪತೇಃ ॥೯॥

ಯದಿ ಪ್ರಮಾಣಂ ತೇ ವಾಕ್ಯಂ ಋಗ್ವೇದ ವದ ಸತ್ಯತಃ ।
ದಕ್ಷಃ ಶೃಣೋತು ನಿಖಿಲಂ ಮುನಿಭಿಶ್ಚ ಸುರೈಸ್ಸಹ ॥೧೦॥

॥ ಸೂತ ಉವಾಚ ॥

ಇತಿ ಸತ್ಯಾವಚಶ್ಶ್ರುತ್ವಾ ಮೌಲಿಬದ್ಧಾಂಜಲಿಸ್ತದಾ ।
ಋಗ್ವೇದಃ ಪ್ರಾಹ ತತ್ರಸ್ಥೋ ಶೃಣ್ವತಾಂ ತತ್ರ ವೈ ವಚಃ ॥೧೧॥

॥ ಋಗ್ವೇದ ಉವಾಚ ॥

ಯಸ್ಸೋಮೋ ಜನಿತಾ ದೇವೋ ಮತೀನಾಂ ಚ ದಿವಸ್ತಥಾ ।
ಪೃಥಿವ್ಯಾ ಜನಿತಸ್ಸೋಮಃ ಸೋಮೋಽಗ್ನೇರ್ಜನಿತಾ ತಥಾ ॥೧೨॥

ಸೂರ್ಯಸ್ಯ ಜನಿತಾ ಸೋಮ ಇಂದ್ರಸ್ಯ ಜನಿತಾ ಶಿವಃ ।
ವಿಷ್ಣೋರ್ವೈ ಜನಿತಾ ಸೋಮಃ ಸರ್ವೇಷಾಂ ಜನಿತಾ ಪರಃ ॥೧೩॥

ಆಷಾಢಃ ಶ್ರೀಮಹಾದೇವೋ ಪಿತಾಸೌ ಮರುತಾಮಪಿ ।
ವಿಶ್ವಸ್ಯ ಭೇಷಜೋ ರುದ್ರೋ ಸುಧನ್ವಾ ಸುಸ್ವಿಷುಃ ಪರಃ ॥೧೪॥

---

ವೇದಗಳೂ ಇರುವುವಲ್ಲವೆ! ಆ ವೇದಗಳೇ ಇಲ್ಲಿ ಕುಳಿತಿರುವ ಮುನಿಗಳೆದುರಿನಲ್ಲಿ ಹೇಳಲಿ. ಎಲ್ಲರೊಡನೆಯೂ ದಕ್ಷನು ಆ ವೇದವಾಕ್ಯಿನಂತೆ ನಡೆಯಲಿ" ಎಂದು ಸತೀದೇವಿಯು ಆಕ್ರೋಶದಿಂದ ನುಡಿದಳು. ॥೮-೯॥

ಸತೀದೇವಿಯು ಹಾಗೆ ಹೇಳಿದುದನ್ನು ಕೇಳಿ ಋಗ್ವೇದವು ಕೈಜೋಡಿಸಿಕೊಂಡು ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ಹೀಗೆ ಕೇಳತೊಡಗಿತು "ಸೋಮದೇವನು ಸಮಸ್ತ ದೇವತೆಗಳಿಗೂ, ಪೃಥಿವೀ, ಅಗ್ನಿ ಮುಂತಾದುವುಗಳಿಗೂ, ಉತ್ಪತ್ತಿಸ್ಥಾನನು. ॥೧೧-೧೨॥

ಸೂರ್ಯ, ಇಂದ್ರ, ವಿಷ್ಣು ಮುಂತಾದ ಸಕಲ ದೇವಮಾನುಷರಿಗೂ ಸೋಮನೇ ಮೂಲಸ್ಥಾನನು. ಯಾರಿಗೂ ಅಧೀನನಾಗದ ಮಹಾದೇವನು ಸಕಲ ದೇವತೆಗ

ನಮೋಭಿಸ್ತ್ವಂ ಪ್ರಪದ್ಯಾಮಿ ರುದ್ರಮಧ್ವರನಾಯಕಂ ।
ಮಾನ ಏಕಸ್ಮಿನ್ನಾಗಸಿ ಮಾದ್ವಯೋರುತತ್ರಿಪು (?)
ಮಧೀರ್ಮಾಶುರಭೂರಿಷು ॥೧೫॥

ಭೂರ್ಣಿರೇವ ವಿರೂಪಾಕ್ಷಃ ಶಿವೋ ಮೀಢುಷ್ಟಮೋ ಹರಃ ।
ಶಂಭೋ ತ್ವಂ ಪ್ರಮತಿಸ್ತ್ವಂ ಮೇ ಮಾತಾಸಿ ಪಿತಾಸಿ ಮೇ ॥೧೬॥

ತೇನ ರಾಯಂ ಸಹಸ್ರಾಢ್ಯಂ ಭವೇನ್ಮಮ ಸದಾ ಮುದಾ ।
ತವ ಸೋಮವ್ರತೇ ದೇವ ತನ್ವಾ ಚ ಮನಸಾ ಸಹ ॥೧೭॥

ಭಜಂತಃ ಶಿವಲಿಂಗಾರ್ಚ್ಯಾಂ ಪಶ್ಯೇಮ ಶರದಃ ಶತಂ ।
ತವೈವ ಶಿವನೈವೇದ್ಯಂ ತದಶ್ನಾಮ ಸದಾ ಮುದಾ ॥೧೮॥

ಭಸ್ಮರುದ್ರಾಕ್ಷಸಹಿತಾ ಜೀವಾಮ ಶರದಶ್ಶತಂ ।
ಸದಾಶಿವಕಥಾಂ ಶ್ರುತ್ವಾ ಮೋದಾಮ ಶರದಶ್ಶತಂ ॥೧೯॥

---

ಳಿಗೂ ತಂದೆಯು. ಪ್ರಪಂಚಕ್ಕೆ ಮಹಾವೈದ್ಯನು ಶಿವನು. ಶ್ರೇಷ್ಠವಾದ ಬಿಲ್ಲು ಮತ್ತು ಬಾಣಗಳು ಪರಶಿವನ ಮುಖ್ಯ ಆಯುಧಗಳು. ॥೧೩-೧೪-೧೫॥

ಸಕಲ ಯಜ್ಞಗಳಿಗೂ ಅಧಿನಾಯಕನಾದ ಶಂಕರನನ್ನು ನಾನು ಸದಾ ನಮಸ್ಕಾರಪೂರ್ವಕವಾಗಿ ಸ್ತುತಿಸುತ್ತಿರುವೆನು. ಯಾವ ನಮ್ಮ ಒಂದು ಅಪರಾಧ ದಲ್ಲಿಯೂ ನಮಗೆ ಶಿಕ್ಷೆಕೊಡಬೇಕು. ಯಜಮಾನರಿಲ್ಲದಿರುವ ನಮಗೆ ಯಾವ ವಿಧವಾದ ತೊಂದರೆಗಳನ್ನೂ ಕೊಡಲಾರನು. ವಿರೂಪಾಕ್ಷನು ಸರ್ವವ್ಯಾಪಕನು. ಶಂಕರನೇ ಸಕಲ ಕಾಮಾಭಿವರ್ಷಕನು. ಶಂಭುವೇ ನನ್ನ ವಿವೇಕವು. ಶಂಭುವೇ ನನಗೆ ಮಾತಾಪಿತೃಗಳು. ॥೧೬॥

ಶಂಭುವಿನಿಂದಲೇ ನನಗೆ ಸಹಸ್ರಾಧಿಕವಾಗಿ ಐಶ್ವರ್ಯಾದಿಗಳು ಲಭಿಸುವುವು. ನನಗೆ ದೇಹದಿಂದಲೂ ಮನಸ್ಸಿನಿಂದಲೂ, ಸೋಮವ್ರತಮಾಡುವ ಶಕ್ತಿಯುಂಟಾಗಲಿ. ಶಿವಲಿಂಗಾರ್ಚನೆಯಿಂದಲೇ ನಾನು ನೂರಾರು ವರ್ಷಪರ್ಯಂತ ಕಾಲಕಳೆಯಬೇಕೆಂದಿರುವೆನು. ಶಿವನೈವೇದ್ಯಭಕ್ಷಣೆಯಿಂದಲೇ ನಿಜವಾದ ಆನಂದವನ್ನು ಅನುಭವಿಸುವೆನು. ॥೧೭-೧೮॥

ಭಸ್ಮರುದ್ರಾಕ್ಷಗಳನ್ನು ಧರಿಸಿಕೊಂಡೇ ಬಹುಕಾಲ ಜೀವಿಸಬೇಕು. ಸದಾ ಶಿವಕಥೆಯನ್ನು ಕೇಳುತ್ತಲೇ ಅನೇಕ ವರ್ಷ ಆನಂದವನ್ನನುಭವಿಸಬೇಕು. ಶಿವಲಿಂಗ

ಶಿವಸ್ಯ ಲಿಂಗಂ ಪೃಷ್ಟ್ವೈವ ನಂದಾಮ ಶರದಶ್ಶತಂ ।
ಶಿವಭಕ್ತಾಃ ಸದಾ ಶಾಂತಾ ಭವಾಮ ಶರದಶ್ಶತಂ ॥೨೦॥

ಶಿವಸ್ಯೈವ ಸದಾ ನಾಚಾ ಚಾರುನಾಮ ಮನಾಮಹೇ ।
ಪಿತರಂ ಚ ಮಹಾದೇವಂ ಪೃಶ್ಯ ಯುಂ ಮಾತರಂ ಶಿವಾಂ ॥೨೧॥

ಚಾರುಚಿತ್ರಂ ಲಿಂಗರೂಪಂ ಭಜಧ್ವಂ ಪರಮೇಶ್ವರಂ ।
ಅಂಬ ಯೇನ ಭಜಂತೀಶಂ ಧಿಯಾ ಪಾವನಯಾ ಸುರಾಃ ॥೨೨॥

ಪುರೀಷಜಿಹ್ವಾಸ್ತೇ ಸರ್ವೇ ಭವಂತಿ ನಿರಪತ್ರಪಾಃ ।
ಈಶಾನಾನಸ್ಯ ಭುವನ[1] . . . . . . . . . .ಸ್ಯ ಜನ್ಮಸದಾ ॥೨೩॥

ಅಯಂ ಗಾಥಪತಿಸ್ಸಾಂಬೋ ಅಯಂ ಮೇಧಪತಿಶ್ಶಿವಃ ।
ಜಲಾಶಾ ಶಿವಭಕ್ತಾ ಯೇ ತೇಷಾಂ ಭೈಷಜ್ಯಕೃಚ್ಛಿವಃ ॥೨೪॥

---

ದರ್ಶನದಿಂದಲೇ ನಾವು ನಿಜವಾದ ಹರ್ಷವನ್ನು ಹೊಂದಬೇಕು. ನೂರಾರುವರ್ಷ ಶಾಂತಮನಸ್ಕರಾಗಿ ಇರಬೇಕಾದರೆ ಶಿವಭಕ್ತರಾಗಿಯೇ ವಾಸಮಾಡಬೇಕು. ॥೧೯-೨೦॥

ಲೋಕಪಿತನಾದ ಮಹಾದೇವನನ್ನೂ, ಲೋಕಮಾತೆಯಾದ ಮಹೇಶ್ವರಿಯನ್ನೂ ದರ್ಶನಮಾಡುತ್ತಾ ಅವರ ಸುಂದರವಾದ ನಾಮಾವಳಿಗಳನ್ನು ಪಠನೆ ಮಾಡುತ್ತಾ ಮನೋಹರವಾದ ಶಿವಲಿಂಗವನ್ನೇ ಸದಾ ಸೇವಿಸಿರಿ. ಪವಿತ್ರವಾದ ಬುದ್ಧಿಯಿಂದ ಸಕಲ ದೇವತೆಗಳೂ ಸದಾಶಿವನನ್ನೇ ಧ್ಯಾನಿಸುತ್ತಿರುವರು. ॥೨೧-೨೨॥

ಯಾರು ಶಿವನಿಂದ ಅನುಗೃಹೀತರಾಗುವುದಿಲ್ಲವೋ ಅವರೆಲ್ಲರೂ ಅಮೇಧ್ಯ ಭಕ್ಷಕರೆನಿಸುವರು. ಅವರಿಗೆ ಯಾವವಿಧವಾದ ಮಾನಮರ್ಯಾದೆಗಳೂ ಇರುವುದಿಲ್ಲ. ಸ್ತುತಿಪಾಲಕನೂ, ಯಜ್ಞಾಧಿಪತಿಯೂ, ಜಲರೂಪವಾದ (ಸುಖರೂಪವಾದ) ಔಷಧಿಗೆ ರಕ್ಷಕನೂ ಪರಶಿವನೇ ಆಗಿರುವನು. ಮತ್ತು ಸ್ತುತಿಪಾಲಕಾದಿಗಳೆಂದು ಹೇಳಲ್ಪಡುವ ಸಮಸ್ತ ದೇವತೆಗಳಿಗೂ ಈತನೇ ಒಡೆಯನು. ಅವರಿಗೆ ಜೀವನದ ಔಷಧಾದಿಗಳನ್ನು ನೀಡುವವನೂ ಪರಶಿವನೇ. ॥೨೩-೨೪॥

---

1 ಮೂಲದಲ್ಲಿ ಈ ಶ್ಲೋಕಭಾಗವು ಬಿಟ್ಟುಹೋಗಿದೆ.

ಸರ್ವೇ ಶಾಂತಂ ಮಹಾದೇವೇ ಊತಾಮೃತಪತಿಂ ಶಿವಂ ।
ಭೂರೇರ್ನೋಕ್ಷಸ್ಯದಾತಾರಂ ಭಜೇಹಂ ಸತ್ಪತಿಂ ಶಿವಂ ॥೨೫॥

ಯದಿ ಪ್ರಮಾಣವಚನಂ ಋಕ್ಸಾರಂ ಪ್ರೋಕ್ತಮೇವ ಮೇ
ಇಂದ್ರಂ ಮಿತ್ರಂ ವರುಣಮಗ್ನಿಮಾಹುರೇಕಂ ಸಂತಂ ಬಹುಧಾವದಾಮಿ ।
ಪಶ್ಯಂತಿ ಸೂರಯಃ ಹೇ ದೇವಾಃ ಪ್ರಿಯಮೇಧಾಸಃ
ಸಮಚ್ಚರ್ಯಂ ತು ಮಹೇಶ್ವರಂ ತ್ರಿಪುರಾರಿಂ ಮಹಾದೇವಂ ತ್ರಿಸತ್ಯಂ
ಪ್ರವದಾಮ್ಯಹಂ ॥೨೬॥

ಸರ್ವಾಂತರಂ ಮಹಾದೇವಂ ಹೃದಿ ಕೃತ್ವಾ ವದಾಮಿ ವಃ ॥೨೭॥

ಯದಿ ಪ್ರಮಾಣಂ ವಚನಂ ಮಮ ಸರ್ವಂ ಸಭಾಸದಃ ।
ಪೂಜಯಧ್ವಂ ಮಹಾದೇವಂ ನೋಚೇನ್ಮೂರ್ಧಾ ಪತಿಷ್ಯತಿ ॥೨೮॥

ಸತ್ಯಂ ಸತ್ಯಂ ಪುನಸ್ಸತ್ಯಂ ಉದ್ಧೃತ್ಯ ಭುಜಮುಚ್ಯತೇ ।
ಋಗ್ವೇದವಚನಂ ಶ್ರುತ್ವಾ ಸಭ್ಯಾಸ್ತೇ ಭಯಕಂಪಿತಾಃ ॥೨೯॥

---

ಅಮೃತಪತಿಯೆನಿಸಿ ಮಂಗಳಕರವಾಗಿರುವ ಸಮಸ್ತ ವಸ್ತುಗಳೂ ಮಹಾದೇವನಲ್ಲಿಯೇ ಐಕ್ಯವಾಗುವುವು. ಮೋಕ್ಷದಾತೃವಾದ ಮತ್ತು ಸಕಲ ಲೋಕೈಕನಾಥನಾದ ಪರಶಿವನನ್ನೇ ನಾನು ಸದಾ ಧ್ಯಾನಿಸುವೆನು. ಇದೇ ಋಗ್ವೇದದ ಸಾರ. ಇಂದ್ರ, ಮಿತ್ರ, ವರುಣ ಮುಂತಾದ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುವವನೂ ಈ ಶಂಕರನೇ. ಎಲೈ ದೇವತೆಗಳಿರಾ, ಪ್ರಿಯಾಪೇಕ್ಷಿಗಳಿರಾ, ನಿಜವಾಗಿ ನಿಮಗೆ ನಿತ್ಯಸುಖದಲ್ಲಿ ಆಸೆಯಿರುವುದಾದರೆ, ತ್ರಿಪುರಾರಿಯೂ, ಮಹಾದೇವನೂ ಆದ ಪರಮಶಿವನನ್ನೇ ಧ್ಯಾನಮಾಡಿರಿ. ಪೂಜೆಮಾಡಿರಿ. ಮುಕ್ತರಾಗಿರಿ. ಈ ಮಾತನ್ನು ನಾನು ಮಹಾದೇವನನ್ನೇ ಹೃದಯದಲ್ಲಿ ಸ್ಮರಿಸುತ್ತಾ ಶಪಥಪೂರ್ವಕವಾಗಿ ಹೇಳುತ್ತಿರುವೆನು. ಇದನ್ನು ನಿಜವೆಂದು ತಿಳಿಯಿರಿ. ॥೨೫-೨೬-೨೭॥

ಎಲೈ ಸಭ್ಯರೇ, ನನ್ನ ಮಾತಿನಲ್ಲಿ ನಿಮಗೆ ನಂಬಿಕೆಯಿದ್ದರೆ ನನ್ನ ಮಾತನ್ನು ನಂಬಿ, ಶ್ರೀ ಶಂಕರನನ್ನು ಪೂಜೆಮಾಡಿರಿ. ಇಲ್ಲದಿದ್ದರೆ ನಿಮ್ಮ ಶಿರಸ್ಸು ಅಧಃಪತನವಾದೀತು ? ಈ ಮಾತು ಪ್ರಮಾಣವಾದದ್ದೆಂದು ಈಗ ಭುಜವೆತ್ತಿ ಶಪಥಮಾಡುವೆನು." ಹೀಗೆಂದು ಹೇಳಿದ ಋಗ್ವೇದದ ಮಾತನ್ನು ಕೇಳಿ ಅಲ್ಲಿದ್ದವರೆಲ್ಲರೂ

ಪುನಸ್ಸತೀವಚಃ ಪ್ರೋಕ್ತೇ ಯಜುರ್ವೇದಂ ಪುರಸ್ಸ್ಥಿತಂ ।
ಮೌಲಿಬದ್ಧಾಂಜಲಿಪುಟಂ ಉತ್ಥಿತಂ ತತ್ರ ಸಂಸದಿ ॥೩೦॥

॥ ಸತ್ಯುವಾಚ ॥

ವದ ಸತ್ಯಂ ಯಜುರ್ವೇದ ಅತ್ರ ಯನ್ಮಾನಸಂ ತವ ।
ತದಾ ಸತ್ಯಾ ವಚಶ್ಶ್ರುತ್ವಾ ಯಜುರ್ವೇದೋಬ್ರವೀತ್ತತಃ ॥೩೧॥

॥ ಯಜುರ್ವೇದ ಉವಾಚ ॥

ಯಸ್ಮಾತ್ಪರಂ ನಾನ್ಯಮಸ್ತಿ ಶಂಭೋರ್ಜ್ಯಾಯಾನ್ನಚೈವ ಹಿ ।
ಸ ಹಿ ವೃಕ್ಷ ಇವಸ್ತಬ್ಧಸ್ತಸ್ಯ ಶಾಖಾಸುರಾಸುರಾಃ ॥೩೨॥

ತೇನ ಪೂರ್ಣಮಿದಂ ಸರ್ವಂ ಸದೇವಾಸುರಮಾನುಷಂ ।
ಈಶಾವಾಸ್ಯಮಿದಂ ಸರ್ವಂ ಯತ್ಕಿಂಚಿಜ್ಜಗತ್ಯಾಂ ಜಗತ್ ॥೩೩॥

ತೇನ ತ್ಯಕ್ತೇನ ಭುಂಜೀಥಾ ಮಾಗೃಧಾಸ್ಯಂ ಸುರಾಂತರಂ ।
ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ ॥೩೪॥

---

ಭಯದಿಂದ ನಡುಗುತ್ತಾ ಮುಂದೇನುಗತಿಯೆಂದು ಯೋಚಿಸುತ್ತಿದ್ದರು. ಆಗ ಸತೀ ದೇವಿಯು ಅಲ್ಲಿಯೇ ಇದ್ದ ಯಜುರ್ವೇದಮೂರ್ತಿಯನ್ನು ಕುರಿತು ನಿನ್ನ ಅಭಿಪ್ರಾಯ ವೇನೆಂದಳು. ಆಗ ಯಜುರ್ವೇದಮೂರ್ತಿಯು ಅಂಜಲಿಬದ್ಧನಾಗಿ ತನ್ನ ಕೈಗಳನ್ನು ಶಿರಸ್ಸಿನಮೇಲಿಟ್ಟುಕೊಂಡು ತುಂಬಿದ ಸಭೆಯಲ್ಲಿ ಹೀಗೆಂದಿತು. ॥೨೮-೨೯-೩೦॥

ಎಲೈ ಸಭಾಂಗಣದಲ್ಲಿ ನೆರೆದಿರುವ ಸಮಸ್ತ ದೇವತಾವರ್ಗದವರೇ, ನನ್ನ ಅಭಿಪ್ರಾಯವನ್ನು ಕೇಳಿರಿ. ಪ್ರಪಂಚದಲ್ಲಿ ಸಾಕ್ಷಾತ್ಪರಶಿವನಿಗಿಂತ ಶ್ರೇಷ್ಠವಾದ ಮತ್ತೊಂದು ವಸ್ತುವು ಎಲ್ಲಿಯೂ ಕಂಡುಬರಲಾರದು. ಆ ಪರಮೇಶ್ವರನು ಒಂದು ಮರದಂತೆ ಸ್ಥಿರನಾಗಿರುವವನು. ಮರದ ಕೊಂಬೆ ಎಲೆಗಳಂತೆ ಮಿಕ್ಕ ದೇವತೆಗಳೆಲ್ಲಾ ಆ ಮರದಂತಿರುವ ಪರಶಿವನನ್ನು ಆಶ್ರಯಿಸಿಕೊಂಡಿರುವರು. ॥೩೧-೩೨॥

ದೇವಾಸುರ ಮನುಷ್ಯಪೂರಿತವಾದ ಈ ಜಗತ್ತೆಲ್ಲವೂ ಪರಶಿವನಿಂದಲೇ ಪೂರ್ಣವೆನಿಸಿರುವುದು. ಈ ಜಗತ್ತಿನಲ್ಲಿ ಕಾಣುವ ಪ್ರತಿಯೊಂದು ವಸ್ತುವಿನಲ್ಲಿಯೂ ಈಶ್ವರನು ನೆಲಸಿರುವನು ಆ ಶಿವನ ಪ್ರಸಾದಶೇಷವನ್ನೇ ನೀವು ಭುಂಜಿಸಬೇಕು

ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ ।
ವಿಶ್ವಾಧಿಕೋ ಮಹರ್ಷಿಶ್ಚ ಮಹಾದೇವೋ ಮಹೇಶ್ವರಃ ॥೩೫॥

ಹಿರಣ್ಯಗರ್ಭಂ ದೇವೇಶೋ ಜನಯಾಮಾಸ ಪೂರ್ವತಃ ।
ಸಮಾಂ ದೇವೋ ಮಹಾದೇವೋ ಬುದ್ಧ್ಯಾಯುಕ್ತಂ ಕರೋತು ವಃ ॥೩೬॥

ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮಃ ।
ವಾಮದೇವಾಯ ಜ್ಯೇಷ್ಠಾಯ ನಮಶ್ಶ್ರೇಷ್ಠಾಯ ಶಂಭವೇ ॥೩೭॥

ಅಘೋರಾಯ ಚ ಘೋರಾಯ ಹರಾಯಾಥ ನಮೋನಮಃ ।
ತತ್ಪುರುಷಾಯ ಮಹಿಮ್ನೇ ವೈ ಮಹಾದೇವಾಯ ಧೀಮಹಿ ॥೩೮॥

---

ಇತರ ದೇವತೆಗಳ ಆರಾಧನೆಗಿಂತಲೂ ಶಿವನನ್ನೇ ಬಿಡದೆ ಪೂಜಿಸಿರಿ. ವೇದಾದಿಯಲ್ಲಿಯೂ, ವೇದಾಂತದಲ್ಲಿಯೂ ಸ್ವರ (ಪ್ರಣವ) ರೂಪದಿಂದ ತೋರಿಬರುವ ಆ ಸ್ವರವು ಪರಶಿವನ ರೂಪದಲ್ಲಿರುವುದು, ಪ್ರಕೃತಿಯಲ್ಲಿ ಅಡಗುವ ವಸ್ತುವೇ ಪರಶಿವ ರೂಪವಾದದ್ದು. ಪ್ರಕೃತಿಯಲ್ಲಿ ಲೀನವಾಗುವ ಸಮಸ್ತ ವಸ್ತು ಜಾಲಗಳಿಗೆಲ್ಲಾ ಪರಾತ್ಪರನೆನಿಸಿದವನು ಅಂದರೆ ಪ್ರಕೃತಿಗೆ ವಶನಾಗದವನು ಮಹಾದೇವನೇ, ಅವನೇ ಮಹರ್ಷಿಯು. ಅವನೇ ಲೋಕಾತೀತನು. ಅವನನ್ನೇ ಮಹೇಶ್ವರನೆನ್ನುವರು. ॥೩೩-೩೪-೩೫॥

ಪರಶಿವನು ಮೊದಲು ಹಿರಣ್ಯಗರ್ಭಬ್ರಹ್ಮನನ್ನು ಸೃಷ್ಟಿಮಾಡಿದನು. ಆ ಹಿರಣ್ಯಗರ್ಭನು ನನ್ನನ್ನು ಪ್ರಕಾಶಪಡಿಸಿದನು. ಹೀಗೆಜಗತ್ಪತಿಯಾದ ಆ ಮಹಾದೇವನು ನಿಮಗೆ ಸದ್ಬುದ್ಧಿಯನ್ನು ಕೊಟ್ಟು ಕಾಪಾಡಲಿ. ತನ್ನ ಇಚ್ಛೆಯಂತೆ ಯಾವಾಗ ಬೇಕೆಂದರೆ ಆಗ ಉತ್ಪತ್ತಿತಾಳುವ ಸದ್ಯೋಜಾತನಾದ ಪರಶಿವನಿಗೆ ನಮಸ್ಕಾರವು. ವಾಮದೇವನೂ ಸಕಲ ದೇವತೆಗಳಿಗೆ ಹಿರಿಯನೂ, ಶ್ರೇಷ್ಠನೂ ಆದ ಲೋಕಸುಖಕರನಾದ ಮಹೇಶ್ವರನಿಗೆ ವಂದಿಸುವೆನು. ॥೩೬-೩೭॥

ಶಾಂತ ಮನಸ್ಕರಾದ ತನ್ನ ಭಕ್ತರಿಗೆ ಶಾಂತಮೂರ್ತಿಯಾಗಿಯೂ, ದುಷ್ಟಭಕ್ತರಿಗೆ ಘೋರರೂಪದಿಂದಲೂ ಇದ್ದು ಅವರ ಪಾಪರಾಶಿಯನ್ನು ನಿವಾರಿಸುವ ಮತ್ತು ಆದಿಪುರುಷನಾದ ಮಹಿಮಾಶಾಲಿಯಾದ ಮಹಾದೇವನಿಗೆ ನಮಸ್ಕಾರ.

ಈಶಾನಃ ಸರ್ವವಿದ್ಯಾನಾಂ ಪತಿರ್ಭೂತಪತಿಶ್ಶಿವಃ ।
ಬ್ರಹ್ಮಣೋಧಿಪತಿಃ ಶಂಭುರೋಂಕಾರಾರ್ಥೈಕವಾಚಕಃ ॥೩೯॥

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಆನಂದಂ ದೇವದೇವಸ್ಯ ವಿದ್ಯಾಂ ತ್ರೋ ಭಯಮಾವಿಶೇತ್(?) ॥೪೦॥

ನಮಸ್ತೇ ರುದ್ರರೂಪಾಯ ಮನ್ಯವೇ ಚ ನಮೋನಮಃ ।
ಇಷವೇ ಪ್ರಣಮಾಮ್ಯದ್ಯ ತದ್ಬಾಹುಭ್ಯಾಂ ನಮೋ ನಮಃ ॥೪೧॥

ಮೇರುಮಧ್ಯಸ್ಥಹಸ್ತಾಯ ಧನ್ವನೇ ತನ್ನಮೋನಮಃ ।
ತಚ್ಛರವ್ಯಾಯ ಚ ನಮಸ್ತಯಾ ಮಾಂ ಪಾತು ಶಂಕರಃ ॥೪೨॥

ಯಾ ತಸ್ಯ ಸಾ ತನುರ್ಮಾಂ ಹಿ ಪಾಯಾನ್ನಾಂ ಪಾಪಕಾಶಿನೀ ।
ತಯಾ ಮಾಂ ತನು ವಾ ಶಂಭುರ್ಗಿರೀಶೋವತು ಸರ್ವದಾ ॥೪೩॥

---

ಸಮಸ್ತ ವಿದ್ಯೆಗೂ ಅಧೀಶ್ವರನೆನಿಸಿ, ಸಮಸ್ತ ಪ್ರಾಣಿಗಳಿಗೂ ಒಡೆಯನೆನಿಸಿರುವ, ಮತ್ತು ಬ್ರಹ್ಮನಿಗೂ ಅಧಿಪತಿಯಾಗಿ ಓಂಕಾರಾರ್ಥಸ್ವರೂಪನಾದ ಮಹೇಶ್ವರನಿಗೆ ನಮಸ್ಕಾರ. ಅಂತಹ ಮಹಾತ್ಮನು ಶಂಕರನೊಬ್ಬನೇ. ॥೩೮-೩೯॥

ಆನಂದಸ್ವರೂಪಿಯಾದ ಪರಶಿವನ ಮಹಿಮೆಯನ್ನು ಬಾಯಿಯಿಂದ ವರ್ಣಿಸುವುದಕ್ಕಾಗಲಿ, ಮನಸ್ಸಿನಿಂದ ಊಹಿಸುವುದಕ್ಕಾಗಲಿ ಸಾಧ್ಯವಿಲ್ಲ. ರುದ್ರರೂಪನಾಗಿರುವ ಪರಶಿವನಿಗೆ ವಂದನೆ. ಮಹಾದೇವನೇ, ನಿನ್ನ ಕೋಪಕ್ಕೂ, ಬಲಿಷ್ಠವಾದ ನಿನ್ನ ಬಾಣಕ್ಕೂ, ಮಹಿಮಾಶಾಲಿಗಳಾದ ನಿನ್ನ ಭುಜಗಳಿಗೂ ನಮಸ್ಕಾರಗಳು. ॥೪೦-೪೧॥

ಮೇರುಪರ್ವತವನ್ನೇ ಧನುಸ್ಸನ್ನಾಗಿ ಮಾಡಿಕೊಂಡು, ಅದನ್ನು ತನ್ನ ಕೈಯಿಂದ ಧರಿಸಿರುವ ಪರಶಿವನಿಗೆ ನಮಸ್ಕಾರಗಳು. ಶಂಕರನ ಶಾಂತವಾದ ಬತ್ತಳಿಕೆಯು ನನ್ನನ್ನು ಸದಾ ರಕ್ಷಿಸಲಿ. ಅದೇ ರೀತಿ ಸರ್ವಪಾಪನಿವಾರಕವಾದ ಪರಶಿವನ ದೇಹವು ಶಾಂತಮಯವಾಗಿದ್ದು ನನ್ನನ್ನು ರಕ್ಷಿಸಲಿ. ಪರಮೇಶ್ವರನು ಶಾಂತಮಯವಾದ ಒಂದು ದೇಹವನ್ನು ನನಗೆ ಅನುಗ್ರಹಿಸಿ ನನ್ನನ್ನು ಕಾಪಾಡಲಿ. ॥೪೨-೪೩॥

ಯಾ ತದ್ಧಸ್ತೇ ಇಷು ಘೋರಾ ಯಾಂ ಬಿಭರ್ತಿ ಮಹೇಶ್ವರಃ ।
ಶಿವಾಂ ತಾಂ ಗಿರಿಶಃ ಕುರ್ಯಾನ್ಮಾಮಹಿಂಸತು ಸರ್ವದಾ ॥೪೪॥

ಶಿವೇನ ವಚಸಾ ದೇವಂ ಸ್ತೌಮಿ ನಿತ್ಯಂ ಸನಾತನಂ ।
ಅಯಕ್ಷ್ಮ ತೇನ ಸತ್ಯೇನ ಮಮ ವಾಕ್ಯಂ ಭವಿಷ್ಯತಿ ॥೪೫॥

ಅಧ್ಯವೋಚನ್ಮಹಾದೇವೋ ಮಯಿ ತುಷ್ಟೇನ ಚೇತಸಾ ।
ಪ್ರಥಮೋ ದೇವ ಈಶಾನೋ ಭವರುಗ್ಭಿಷಗುತ್ತಮಃ ॥೪೬॥

ಮಮ ಶತ್ರೂನ್ನಿವಾರ್ಯಾಶು ತಾನ್ ದಧಾತು ಚ ಜಂಭಯನ್ ।
ಅಸೌ ಸೂರ್ಯಾಂತರಾತಿಷ್ಠತ್ತಾಮ್ರೋ ಅರುಣ ಈಶ್ವರಃ ॥೪೭॥

ಬಭ್ರುಸ್ಸುಮಂಗಲಶ್ಚರ್ವಃ ಸರ್ವರುದ್ರಾವೃತಶ್ಶಿವಃ ।
ತಮೇವಮೀಡೇ ದೇವೇಶಂ ಸರ್ವಂತಂ ಪರಮೇಶ್ವರಂ ॥೪೮॥

---

ಮಹೇಶ್ವರನು ತನ್ನ ಕೈಯ್ಯಲ್ಲಿ ಘೋರವಾದ ಬಾಣವನ್ನು ಹಿಡಿದಿರುವನು. ಆ ಬಾಣವು ಮಹಾದೇವನ ಅನುಗ್ರಹದಿಂದ ಕೂಡಿ ನನ್ನನ್ನು ಶಾಂತಸ್ವಭಾವದಿಂದ ಯಾವ ಹಿಂಸೆಯನ್ನೂ ಕೊಡದೆ ಕಾಪಾಡಲಿ. ಪರಶಿವನನ್ನು ನಾನು ಮಂಗಳಕರವಾದ ಮಾತಿನಿಂದ ಸ್ತೋತ್ರಮಾಡುತ್ತೇನೆ. ಸತ್ಯಸ್ವರೂಪನಾದ ಪರಮೇಶ್ವರನು ನನ್ನ ಮಾತನ್ನು ನಿಜವಾದದ್ದನ್ನಾಗಿ ಮಾಡುವನು. ॥೪೪-೪೫॥

ಪರಶಿವನು ನನ್ನಲ್ಲಿ ಪ್ರಸನ್ನನಾಗಿ, ನಿರ್ಮಲಮನಸ್ಸಿನಿಂದಲೇ ನನ್ನನ್ನು ಎಲ್ಲರಿಗಿಂತಲೂ ಶ್ರೇಷ್ಠನೆಂದು ಹೇಳಿರುವನು. ದೇವತೆಗಳಿಗೆಲ್ಲಾ ಅತ್ಯಂತ ಶ್ರೇಷ್ಠನೂ ಆದಿದೈವನೂ ಆದ ಶಂಕರನು ಸಂಸಾರದ ಸಕಲ ದುಃಖಗಳನ್ನು ನಾಶಗೊಳಿಸುವನು. ಅವನನ್ನು ಸ್ಮರಿಸಿದ ಮಾತ್ರದಿಂದಲೇ ಮಾನವರ ಸಮಸ್ತ ರೋಗಾದ್ಯುಪದ್ರವಗಳೂ ನಾಶವಾಗುವುವು. ನನ್ನ ಶತ್ರುಗಳನ್ನು ಧ್ವಂಸಗೊಳಿಸಿ ಅವರು ಮತ್ತೆ ಹಿಂಸೆಕೊಡದಂತೆ ಅಡಗಿಸಲಿ. ಈಶ್ವರನೇ ಸೂರ್ಯಮಂಡಲಮಧ್ಯವರ್ತಿಯಾಗಿದ್ದು ಉದಯಕಾಲದಲ್ಲಿ ಕೇವಲ ಕೆಂಪಾಗಿಯೂ, ಉದಯಾನಂತರ ಸ್ವಲ್ಪ ಕೆಂಪುಬಣ್ಣದಿಂದಲೂ ಅನಂತರ ಪಿಂಗಲವರ್ಣದವನಾಗಿಯೂ ಕಾಣುವನು. ॥೪೬-೪೭॥

ಹೀಗೆ ನಾನಾವರ್ಣಗಳಿಂದ ರಂಜಿಸುತ್ತಾ ಸರ್ವಲೋಕ ಸುಖಕರನಾದ ಪರಶಿವನು ಕಿರಣರೂಪದಿಂದ ಸರ್ವವ್ಯಾಪಿಯೆನಿಸಿರುವನು. ಅಂತಹ ವಿಭುಮೂರ್ತಿ

ನೀಲಗ್ರೀವಂ ಮಹಾದೇವಂ ನೀಲಲೋಹಿತಮೀಶ್ವರಂ ।
ಗೋಪಾಃ ಪಶ್ಯಂತಿ ದೇವೇಶಂ ಭವಂತೋ ಮೋಹಮಾಸ್ಥಿತಾಃ ॥೪೯॥

ಉದಹಾರ್ಯೋಽಪಿ ಪಶ್ಯಂತಿ ಹೇ ದೇವಾ ಮೋಹಮಾಸ್ಥಿತಾಃ ।
ಸೂರ್ಯಾಂತರಸ್ಥಿತಂ ಸಾಂಬಂ ವಿಶ್ವಜಾತಂ ಚ ಪಶ್ಯತಿ ॥೫೦॥

ದ್ವಿಲೋಚನಾಶ್ಚ ಭಕ್ತ್ಯೈವ ತಂ ಪಶ್ಯಂತಿ ಮಹೇಶ್ವರಂ ।
ಅಭಕ್ತಿಯುಕ್ತಾ ಯೂಯಂ ಹಿ ಸಹಸ್ರಾಕ್ಷಾ ನ ಪಶ್ಯಥ ॥೫೧॥

ಸ ಏವ ಮೃಡಯೇದೀಶೋ ಭಕ್ತಿಯುಕ್ತಂ ಚ ಮಾಂ ಶಿವೇ ।
ನಮೋಽಸ್ತು ನೀಲಗ್ರೀವಾಯ ಸಹಸ್ರಾಕ್ಷಾಯ ಮೀಢುಷೇ ॥೫೨॥

---

ಯಾದ ಶರ್ವನನ್ನು ನಾನು ನಿತ್ಯವೂ ಸ್ತುತಿಸುತ್ತಿರುವೆನು. ಶಂಕರನು ಉದಯಾಸ್ತಮಯದಿಂದ ನಿತ್ಯವೂ ಸೂರ್ಯಮಂಡಲಾಂತರ್ವರ್ತಿಯಾಗಿ ಜಗತ್ತನ್ನೆಲ್ಲಾ ಸುತ್ತುತ್ತಿರುವನು. ಹೀಗೆ ವಿಷಕಂಠನಾಗಿ ನೀಲಗ್ರೀವದಿಂದ ಕಂಗೊಳಿಸುವ, ಹಾಗೂ ಅರುಣ ವರ್ಣದಿಂದ ರಂಜಿಸುವ ಮಹಾದೇವನನ್ನು ವೇದಶಾಸ್ತ್ರಾಭ್ಯಾಸ ಶೂನ್ಯರಾದ ದನ ಕಾಯುವವರೂ, ನೀರನ್ನು ಹೊತ್ತು ತರುವ ಹೆಂಗಸರೂ ಸಹ ಸೂರ್ಯರೂಪದಿಂದ ನೋಡಿ ಅವನ ಮಹಿಮೆಯನ್ನು ಅರಿತಿರುವರು. ಸೂರ್ಯ ಮಂಡಲಮಧ್ಯವರ್ತಿಯಾಗಿದ್ದು ಪ್ರಪಂಚಕ್ಕೆ ಮೂಲಕಾರಣನಾಗಿರುವನೆಂದು ಅವರೂ ಸಹ ಭಾವಿಸಿರುವರು. ಹೀಗಿರುವಾಗ ಎಲೈ ದಕ್ಷಬ್ರಹ್ಮಾದಿಗಳೇ, ನೀವು, ಈರೀತಿ ಅಜ್ಞಾನವನ್ನು ಹೊಂದಿರುವುದು ನ್ಯಾಯವೇ ? ||೪೮-೪೯-೫೦||

ಕೇವಲ ಎರಡು ಕಣ್ಣುಗಳಿಂದ ಮಾತ್ರ ತಿಳಿಯುವ ಸಮಸ್ತ ಪ್ರಾಣಿಗಳೂ ಮಹೇಶ್ವರನ ಶಕ್ತಿಯನ್ನು ಭಕ್ತಿಯಿಂದ ಅರಿಯುತ್ತಾರೆ. ಸಾವಿರ ಕಣ್ಣುಗಳಿಂದ ಕೂಡಿ ಭಕ್ತಿವಿಹೀನರಾದ ನೀವು ಮಹಾದೇವನ ಸ್ವರೂಪವನ್ನು ತಿಳಿಯಲಾರದೆ ಹೋದಿರಲ್ಲಾ ; ಈ ರೀತಿ ಭಕ್ತಿಯುಕ್ತನಾದ ನನ್ನನ್ನು ಮಾತ್ರ ಪರಶಿವನೇ ಇಂದೂ ಸುಖಪಡಿಸುತ್ತಿರುವನು. ಸಹಸ್ರ ಕಣ್ಣುಗಳಿಂದ ಇಂದ್ರರೂಪಿಯಾಗಿರುವವನೂ, ವೃಷ್ಟಿಪ್ರದಾತನೂ ಆದ ಮಹೇಶ್ವರನನ್ನು ನಾನು ಮಾತ್ರ ತಪ್ಪದೆ ಸರ್ವದಾ ವಂದಿಸುತ್ತಿರುವೆನು. ||೫೧-೫೨||

ಅತೋಽಸ್ಯ ಭಕ್ತಾನ್ ದೇವಸ್ಯ ಸಾಷ್ಟಾಂಗಂ ಪ್ರಣಮಾಮ್ಯಹಂ ।
ಪ್ರಾಜ್ಯಂ ವಿಜ್ಯಂಧನುಸ್ತೇನ ಕರೋತು ಮಯಿ ಶಂಕರಃ ॥೫೩॥

ಶಿವಭಕ್ತಾರ್ಚನಪ್ರೀತೋ ಮಹಾದೇವೋ ಮಹೇಶ್ವರಃ ।
ಹಸ್ತೇ ಧೃತಾನ್ ಬಾಣಗಣಾನ್ ಪಾತಯಿಷ್ಯತಿ ಮತ್ಪರಃ ॥೫೪॥

ಶತೇಷುಧೀಃ ಸಹಸ್ರಾಕ್ಷೋ ಧನುರ್ವಿಜ್ಯಂ ಕರೋತು ಚ ।
ಸುಮುಖಶ್ಚ ಮಹಾದೇವೋ ಮಮ ಶರ್ಮ ದದಾತು ವೈ ॥೫೫॥

ತೀಕ್ಷ್ಣಾಗ್ರಾಣಿ ಶರಾಣಾಂ ಮಾಂ ಶರಣಂ ಪುರತಃ ಸ್ಥಿತಂ ।
ದೃಷ್ಟ್ವಾ ಸ್ವಭಕ್ತಂ ಶರಧೌ ವಾರಿಧೌ ಪಾತಯಿಷ್ಯತಿ ॥೫೬॥

ಮೀಢುಷ್ಟಮಸ್ಯ ಯಾ ಹಸ್ತೇ ಹೇತಿಃ ಸಂಹರಣೋಚಿತಾ ।
ಕಪರ್ದಿನೋ ಧನುರ್ಯಚ್ಚ ವಿಶಲ್ಯಾ ಸಾ ಭವೇನ್ಮಯಿ ॥೫೭॥

---

ಆದ್ದರಿಂದಲೇ ನಾನು ಈಶ್ವರನ ಭಕ್ತರಾಗಿರುವವರನ್ನೆಲ್ಲಾ ಭಯಭಕ್ತಿಯಿಂದ ವಂದಿಸುತ್ತಿರುವೆನು. ಅದರಿಂದ ಪ್ರಸನ್ನನಾದ ಶಂಕರನು ನನ್ನ ವಿಷಯದಲ್ಲಿ ತನ್ನ ಧನುಸ್ಸನ್ನು ಜ್ಯಾ (ಬಿಲ್ಲಿನ ಮಧ್ಯದ ಹಗ್ಗ) ರಹಿತವನ್ನಾಗಿ ಮಾಡಲಿ ತನ್ನ ಭಕ್ತರನ್ನು ಯಾರು ವಿಶೇಷವಾಗಿ ಸನ್ಮಾನಿಸುವರೋ ಅಂತಹವರನ್ನು ನೋಡಿದೊಡನೆಯೇ ಪರಮೇಶ್ವರನು ತನ್ನ ಕೈಯ್ಯಲ್ಲಿರುವ ಉಗ್ರವಾದ ಬಾಣಸಮೂಹವನ್ನೆಲ್ಲಾ ಕೆಳಗೆ ಎಸೆದುಬಿಡುವನು. ಮತ್ತು ಪ್ರೀತಿಯನ್ನಿಡುವನು. ನನ್ನಲ್ಲಿಯೂ ಶಂಕರನು ಅದೇ ವಾತ್ಸಲ್ಯವನ್ನಿಡಲಿ. ॥೫೩-೫೪॥

ನೂರಾರು ಬತ್ತಳಿಕೆಗಳಲ್ಲಿ ಬಾಣಗಳನ್ನು ಅಡಗಿಸಿಟ್ಟಿರುವ ಸಹಸ್ರಾಕ್ಷನಾದ ಮಹಾದೇವನು ನನ್ನಲ್ಲಿ ಸದಾ ಪ್ರಸನ್ನನಾಗಿದ್ದು ತನ್ನ ಧನುಸ್ಸನ್ನು ಜ್ಯಾವಿರಹಿತವಾದದ್ದನ್ನಾಗಿ ಮಾಡಲಿ ಅದರಿಂದ ನನಗೆ ಸುಖವುಂಟಾಗುವಂತೆಯೂ ಕರುಣಿಸಲಿ. ಶರಣಾಗತನಾಗಿ ತಲೆಬಗ್ಗಿ ವಿನಯದಿಂದ ನಿಂತಿರುವ ನನ್ನನ್ನು ನೋಡಿ ಶಂಕರನು ತನ್ನ ಹರಿತವಾದ ಬಾಣಗಳನ್ನು ಮೊದಲು ಸಮುದ್ರಕ್ಕೆ ಎಸೆದುಬಿಡುವನು. ಪರಮೇಶ್ವರನ ಭಕ್ತವಾತ್ಸಲ್ಯವು ಅಷ್ಟು ಅತಿಶಯವಾದುದಲ್ಲವೆ ! ॥೫೫-೫೬॥

ಪ್ರಪಂಚಕ್ಕೆ ವೃಷ್ಟಿಪ್ರದನಾದ ಮಹಾದೇವನ ಕೈಯಲ್ಲಿ ಪ್ರಪಂಚವನ್ನೇ ನಾಶಗೊಳಿಸುವಂತಹ ಆಯುಧವೂ ಇರುವುದು. ಜಟಾಜೂಟಧಾರಿಯಾದ ಶಂಕರನು

ಬಾಣಬಾಣಾಸನೈರ್ಹೀನಂ ಬಾಹುಭ್ಯಾಂ ಪಾಲಯೇತ್ಸ ಮಾಂ ।
ಅನಾತತಾಯ ದೇವಾಯ ಧೃಷ್ಣವೇ ಚ ನಮೋ ನಮಃ ॥೫೮॥

ನಮೋ ಹಿರಣ್ಯಬಾಹವೇ ಸೇನಾನ್ಯೇ ಚ ನಮೋ ನಮಃ ।
ದಿಶಾಂ ಚ ಪತಯೇ ತಸ್ಮೈ ವೃಕ್ಷಾಣಾಂ ಪತಯೇ ನಮಃ ॥೫೯॥

ಹರಿಕೇಶಾಯ ಶಾಂತಾಯ ಪಶೂನಾಂ ಪತಯೇ ನಮಃ ।
ಭವಂತಃ ಪಶವೋ ದೇವಾ ಭವತಾಂ ಪತಿರೀಶ್ವರಃ ॥೬೦॥

ತನ್ಮಾಯಾಪಾಶಬದ್ಧಾ ಹಿ ಭವಂತೋ ಮೋಹಮಾಸ್ಥಿತಾಃ ।
ಅನೇನ ಹಯಮೇಧೇನ ಸದಕ್ಷಾಃ ಪೂಜಯಂತು ವಃ ॥೬೧॥

ಸರ್ವಥಾ ಭವಪಾಶೇಭ್ಯೋ ಮುಕ್ತಾ ಯೂಯಂ ಭವಿಷ್ಯಥ ।
ಸಸ್ಪಿಂಜರಾಯ ಸೌಮ್ಯಾಯ ನಮಸ್ತಸ್ಮೈ ತ್ವಿಷೀಮತೇ ॥೬೨॥

---

ಅಂತಹ ಧನುರಾಯುಧವನ್ನು ಬಾಣರಹಿತವನ್ನಾಗಿ ಮಾಡಿ ನನ್ನನ್ನು ರಕ್ಷಿಸಲಿ. ಹಾಗೆ ಧನುಸ್ಸಿಗೆ ಬಾಣವನ್ನು ಹೂಡದಿರುವ ಮತ್ತು ಸ್ವಯಂ ಹೊಡೆಯುವಷ್ಟು ಧೀರನೂ ಆದ ಮಹೇಶ್ವರನಿಗೆ ಅನಂತಾನಂತ ವಂದನೆಗಳು. ॥೫೭-೫೮॥

ಹಿರಣ್ಯ (ಸುವರ್ಣ) ದಿಂದ ನಿರ್ಮಿತಗಳಾದ ಆಭರಣಗಳನ್ನು ಬಾಹುಗಳಿಗೆ ಅಲಂಕರಿಸಿಕೊಂಡು ಸೇನಾಪತಿಯಾಗಿ ಪ್ರಯಾಣಮಾಡುವ ಮಹೇಶ್ವರನಿಗೆ ನಮಸ್ಕಾರ. ಸಮಸ್ತ ದಿಕ್ಕುಗಳಿಗೂ, ಎಲ್ಲ ಜಾತಿಯ ತರುಲತೆಗಳಿಗೂ, ಒಡೆಯನಾದ ದೇವದೇವನಿಗೆ ವಂದನೆ. ಹಸುರು ಬಣ್ಣದ ಕೇಶಪಾಶದಿಂದ ರಂಜಿಸುವ ಶಾಂತರೂಪಿಯಾದ ಅಜ್ಞಾನಿಗಳಿಗೆ ಒಡೆಯನಾದ ಮಹೇಶ್ವರನಿಗೆ ನಮಸ್ಕಾರ. ಎಲೈ ದೇವತೆಗಳಿರಾ, ನೀವು ನಿಜವಾಗಿಯೂ ಪಶುಗಳು. ನಿಮಗೂ ಒಡೆಯನಾದವನು ಪರಶಿವನೆಂದೂ ಪಶುಪತಿಯೆಂದೂ ನಂಬಿರಿ. ॥೫೯-೬೦॥

ಪರಶಿವಮಾಯೆಗೆ ಸಿಕ್ಕಿರುವ ನೀವು ಈಗ ಪೂರ್ಣ ಅಜ್ಞಾನಿಗಳೆನಿಸಿರುವಿರಿ. ಅದನ್ನು ಹೋಗಲಾಡಿಸಿಕೊಳ್ಳಲು ಈಗಲೇ ದಕ್ಷನನ್ನು ಮುಂದುಮಾಡಿಕೊಂಡು ಪರಮೇಶ್ವರನನ್ನು ಪೂಜಿಸಿರಿ. ಆದರಿಂದ ನಿಮಗೆ ಮಾಯಾವರಣವು ತೊಲಗಿ, ನೀವು ಜ್ಞಾನಿಗಳೆನಿಸುವಿರಿ. ಎಳೆಗರುಕೆಯಂತೆ ಹಳದಿ ಕೆಂಪುಗಳ ಮಿಶ್ರಬಣ್ಣದಿಂದ ರಂಜಿಸುವ ಮಹಾದೇವನಿಗೆ ವಂದನೆಯು. ಕಾಂತಿಮತ್ತಾಗಿಯೂ, ಸೌಮ್ಯರೂಪಿಯಾಗಿಯೂ ಇರುವ ಮಹಾದೇವನನ್ನು ನಾನು ಸದಾ ಧ್ಯಾನಿಸುವೆನು. ॥೬೧-೬೨॥

ಪಥೀನಾಂ ಪತಯೇ ತಸ್ಮೈ ಬಭ್ಲುಶಾಯ ನಮೋನಮಃ ।
ವಿವ್ಯಾಧಿನೇ ತಥಾನ್ನಾನಾಂ ತಸ್ಮೈ ಸುಪತಯೇ ನಮಃ ॥೬೩॥

ಪರಿವೇಷಾಯ ಶಾಂತಾಯ ನಮಸಾ ಉಪವೀತಿನೇ ।
ಪುಷ್ಟಾನಾಂ ಪತಯೇ ತಸ್ಮೈ ಭವಹೇತ್ಯೈ ನಮೋ ನಮಃ ॥೬೪॥

ಜಗತಾಂ ಪತಯೇ ತಸ್ಮೈ ರುದ್ರಾಯ ಚಾತತಾವಿನೇ ।
ಕ್ಷೇತ್ರಾಣಾಂ ಪತಯೇ ತಸ್ಮೈ ನಮಸ್ಸೂತಾಯಾ ಹಂತವೇ ॥೬೫॥

ವನಾನಾಂ ಪತಯೇ ತಸ್ಮೈ ರೋಹಿತಾಯ ನಮೋ ನಮಃ ।
ನಮಃ ಸ್ಥಪತಯೇ ತಸ್ಮೈ ವೃಕ್ಷಾಣಾಂ ಪತಯೇ ನಮಃ ॥೬೬॥

ಮಂತ್ರಿಣೇ ವಾಣಿಜಾಯಾಥ ಕಕ್ಷಾಣಾಂ ಪತಯೇ ನಮಃ ।
ನಮೋ ಭುವಂತಯೇ ತಸ್ಮೈ ಕೃತ್ಸ್ನವೀತಾಯ ಧಾವತೇ ॥೬೭॥

---

ಶಾಸ್ತ್ರದಲ್ಲಿ ಪ್ರತಿಪಾದಿತವಾದ ಉತ್ತರದಕ್ಷಿಣ ಮಾರ್ಗಗಳಿಗೆ ಒಡೆಯನಾದವನೂ, ವೃಷಭಾರೂಢನೂ, ಶತ್ರುಗಳನ್ನು ಸಂಪೂರ್ಣವಾಗಿ ಬಾಣಗಳಿಂದ ಹೊಡೆದು ನಾಶಗೊಳಿಸುವವನೂ, ವೇದಾಧಿಪತಿಯೂ ಆದ ಮಹಾದೇವನಿಗೆ ವಂದನೆ. ಶಾಂತಪರಿವೇಷದಂತೆ ಕಾಣುವವನೂ, ಮಂಗಳಕರವಾದ ಉಪವೀತವುಳ್ಳವನೂ, ಪರಿಪೂರ್ಣ ಗುಣಗಳುಳ್ಳ ಪುರುಷರಿಗೆ ಪತಿಯೆನಿಸಿದವನೂ, ಸಂಸಾರದುಃಖಕ್ಕೆ ದೊಡ್ಡ ನಿವಾರಕವಾದ ಆಯುಧದಂತಿರುವವನೂ ಆದ ಮಹೇಶ್ವರನಿಗೆ ವಂದನೆಗಳು. ॥೬೩-೬೪॥

ಸಮಸ್ತ ಜಗತ್ಪತಿಯೂ, ವಿಶಾಲವಾದ ತನ್ನ ಧನುಸ್ಸಿನಿಂದ ಜಗತ್ತನ್ನು ರಕ್ಷಿಸುವವನೂ, ಸಮಸ್ತ ಪುಣ್ಯಕ್ಷೇತ್ರಗಳಿಗೆ ಸ್ವಾಮಿಯಾದವನೂ, ಯಾರಿಗೂ ವಶನಾಗದೆ ಸಾರಥಿಯಂತೆ ಕಂಡುಬರುವವನೂ ಆದ ಮಹೇಶ್ವರನಿಗೆ ನಮಸ್ಕಾರವು. ಸಮಸ್ತ ವನಗಳಿಗೂ ಅಧಿಪತಿಯೆನಿಸಿ ಕೆಂಪುಬಣ್ಣದಿಂದ ವಿರಾಜಿಸುವ, ಜಗತ್ಪತಿಯಾಗಿ ಸಮಸ್ತ ವೃಕ್ಷಾಧಿದೇವತೆಯೆನಿಸಿರುವ ಮಹೇಶ್ವರನಿಗೆ ಸದಾ ವಂದನೆಗಳು. ॥೬೫-೬೬॥

ರಾಜನಿಗೆ ಮಂತ್ರಾಲೋಚನೆಕೊಡುವ ಮಂತ್ರಿಯಂತಿರುವವನೂ, ವ್ಯಾಪಾರಿಗಳಿಗೆಲ್ಲಾ ಒಡೆಯನಾದವನೂ, ಸಮಸ್ತ ಲತಾಗುಲ್ಮಾದಿಗಳಿಗೂ ಸ್ವಾಮಿಯಾದ

ಓಷಧೀನಾಂ ಚ ಪತಯೇ ಉಚ್ಚೈರ್ಘೋಷಾಯಾಕ್ರಂದತೇ ।
ಪತ್ತೀನಾಂ ಪತಯೇ ತಸ್ಮೈ ಕೃತ್ಸ್ನವೀತಾಯ ಧಾವತೇ ॥೬೮॥

ಸತ್ವನಾಂ ಪತಯೇ ತಸ್ಮೈ ಕಕುಭಾಯ ನಿಷಂಗಿಣೇ ।
ಸ್ತೇನಾನಾಂ ಪತಯೇ ತಸ್ಮೈ ನಮಸ್ತಸ್ಮೈ ನಿಚೇರವೇ ॥೬೯॥

ಸ್ತಾಯೂನಾಂ ಪತಯೇ ತುಭ್ಯಂ ನಿಚೇರುಪತಯೇ ನಮಃ ।
ನಮಃ ಪರಿಚರಾಯಾಥ ಆರಣ್ಯಪತಯೇ ನಮಃ ॥೭೦॥

ಸೃಕಾವಿಭ್ಯೋ ಜಿಘಾಂಸದ್ಭ್ಯೋ ಮುಷ್ಣತಾಂ ಪತಯೇ ನಮಃ ।
ಅಸಿಮದ್ಭ್ಯೋ ನಕ್ತಂಚರದ್ಭ್ಯಃ ಪ್ರಕೃಂತಾನಾಂ ಪತಯೇ ನಮಃ ॥೭೧॥

ಉಷ್ಣೀಷಿಣೇ ಗಿರಿಚರಾಯ ಕುಲುಂಚಪತಯೇ ನಮಃ ।
ನಿಷಂಗಿಣೇಷುಧಿಮತೇ ತಸ್ಕರಾಣಾಂ ಪತಯೇ ನಮಃ ॥೭೨॥

---

ವನೂ, ಪ್ರಪಂಚವನ್ನು ವಿಸ್ತಾರಗೊಳಿಸುವ ಸೈನ್ಯಪರಿವೃತನಾಗಿ ಶತ್ರುಗಳನ್ನು ಹಿಂಬಾಲಿಸಿ ಓಡುವಂತಹವನೂ ಆದ ಮಹಾದೇವನಿಗೆ ವಂದನೆ. ಹಾಗೆಯೇ ಸಮಸ್ತ ವನಸ್ಪತಿಗಳಿಗೂ ಒಡೆಯನಾಗಿ ಯುದ್ಧದಲ್ಲಿ ಉಚ್ಚಧ್ವನಿಗೊಡುವ, ಸಕಲ ಸೈನ್ಯಗಳಿಗೂ, ಸಮಸ್ತವಿಧವಾದ ಐಶ್ವರ್ಯಕ್ಕೂ ಪತಿಯೆನಿಸಿದ ಮಹಾದೇವನಿಗೆ ವಂದನೆಗಳು. ॥೬೭-೬೮॥

ಶರಣಾಗತರಾದ ಸಾತ್ವಿಕರಿಗೆ ಒಡೆಯನೂ, ದಿಗ್ರೂಪದಿಂದಿರುವವನೂ ಬಾಣಬತ್ತಳಿಕೆಗಳಿಂದ ಕೂಡಿದವನೂ, ಬೀದಿಗಳ್ಳರಿಗೂ, ಮನೆಕಳ್ಳರಿಗೂ, ಕಳ್ಳಬಂಧುಗಳಿಗೂ, ಇನ್ನೂ ನಾನಾಜಾತಿಯ ಚೋರವರ್ಗಕ್ಕೂ ಅರಣ್ಯವಾಸಿಗಳಿಗೂ ಒಡೆಯನಾದವನೂ ಆದ ಮಹಾದೇವನಿಗೆ ವಂದನೆ. ॥೬೯-೭೦॥

ವಜ್ರಾಯುಧದಿಂದ ಹಿಂಸೆಗೊಳಿಸುವ, ದರೋಡೆಮಾಡುವ, ಪರದ್ರವ್ಯವನ್ನು ಅಪಹರಿಸುವ, ಕತ್ತಿಹಿಡಿದು ರಾತ್ರಿವೇಳೆ ಸಂಚರಿಸುವ, ಕಳ್ಳರಿಗೂ, ಪ್ರಾಣಿವಧೆ ಮಾಡುವವರಿಗೂ, ಊರಿನ ಜನರಂತೆ ತಲೆಯಲ್ಲಿ ರುಮಾಲನ್ನು ಧರಿಸಿ ಕಳ್ಳತನ ಮಾಡುವವರಿಗೂ, ಬೆಟ್ಟದಲ್ಲಿ ಸಂಚರಿಸುತ್ತಾ ಗೃಹಕ್ಷೇತ್ರಾದಿಗಳನ್ನು ಅಪಹರಿಸುವ, ಬತ್ತಳಿಕೆ, ಧನುಸ್ಸು ಇವುಗಳಿಂದ ಕೂಡಿ ಕಳ್ಳತನಮಾಡುವ ಕಳ್ಳರಿಗೂ, ಯಜಮಾನನಾಗಿರುವ ಪರಶಿವನಿಗೆ ನಮಸ್ಕಾರವು. ॥೭೧-೭೨॥

ನಮಸ್ತೇ ವಂಚತೇ ತುಭ್ಯಂ ನಮಸ್ತೇ ಪರಿವಂಚತೇ ।
ಸಹಮಾನಾಯ ನಿವ್ಯಾಧ ಆವ್ಯಾಧಪತಯೇ ನಮಃ ॥೨೩॥

ಇಷುಮದ್ಭ್ಯೋ ಧನ್ವಾವಿಭ್ಯ ಆತನ್ವಭ್ಯೋ ನಮೋನಮಃ ।
ನಮಃ ಪ್ರತಿದಧಾನೇಭ್ಯ ಆಯಚ್ಛದ್ಭ್ಯೋ ನಮೋ ನಮಃ ॥೨೪॥

ವಿಸೃಜದ್ಭ್ಯೋ ನಮೋ ನಿತ್ಯಂ ಸ್ವಪದ್ಭ್ಯಶ್ಚ ನಮೋ ನಮಃ ।
ಜಾಗ್ರದ್ಭ್ಯಶ್ಚ ನಮಸ್ತೇಽಸ್ತು ತಿಷ್ಠದ್ಭ್ಯಶ್ಚ ನಮೋ ನಮಃ ॥೨೫॥

ನಮಸ್ಸಭಾಧಿಪತಯೇ ಸಭಾಭ್ಯಸ್ತೇ ನಮೋ ನಮಃ ।
ವೇದಾಶ್ವೇಭ್ಯೋ ನಮಸ್ತೇಽಸ್ತು ಅಶ್ವಾಧಿಪತಯೇ ನಮಃ ॥೨೬॥

ನಮ ಆವ್ಯಾಧಿನೀಭ್ಯಸ್ತೇ ವಿವಿಧ್ಯಂತ್ಯೈ ನಮೋನಮಃ ।
ಉಗಣಾಭ್ಯೋ ನಮಸ್ತೇಽಸ್ತು ನಮಸ್ತೇಽಸ್ತು ತೃಗ್ಂ ಹತೇ ॥೨೭॥

ಗೃತ್ಸೇಭ್ಯೋಽಥ ನಮಸ್ತೇಽಸ್ತು ನಮೋ ಗೃತ್ಸಾಧಿಪಾಯತೇ ।
ವಿರೂಪೇಭ್ಯೋ ನಮಸ್ತೇಽಸ್ತು ವಿಶ್ವರೂಪಾಯ ತೇ ನಮಃ ॥೨೮॥

---

ವಂಚಕನಂತೆಯೂ, ಕಾಣದೆ ಮೋಸಮಾಡುವನಂತೆಯೂ, ಸರ್ವವನ್ನೂ ಸಹಿಸುವ ಪ್ರಪಂಚವನ್ನೇ ಬೇಡನಂತೆ ಅಟ್ಟಿಸಿಕೊಂಡುಹೋಗುತ್ತಿರುವ ವ್ಯಾಧರಿಗೆಲ್ಲಾ ಪತಿಯೆನಿಸಿದವನೂ ಆದ ಮಹಾದೇವನಿಗೆ ವಂದನೆ. ಪ್ರಶಸ್ತವಾದ ಬಾಣ, ಧನುಸ್ಸು ಇವನ್ನು ಹಿಡಿದು ಪ್ರಪಂಚವನ್ನೇ ರೂಪುಗೊಳಿಸುವ, ಧನುಸ್ಸಿಗೆ ಬಾಣ ರೂಪದಿಂದ ಸೇರುವವನೂ ಮತ್ತು ಜ್ಯಾವನ್ನು ಎಳೆದು ಗುರಿಗೆ ಹೊಡೆಯುವಂತೆಯೂ ಇರುವ ಮಹಾದೇವನಿಗೆ ವಂದನೆಗಳು. ||೨೩-೨೪||

ಬಾಣಬಿಡುವ ರೂಪದಿಂದಲೂ, ನಿದ್ರಿಸುವವರಿಗೂ, ಎಚ್ಚತ್ತಿರುವವರಿಗೂ, ನಿಂತಿರುವವರಿಗೂ ಒಡೆಯನೆನಿಸಿದ ಶಂಕರನಿಗೆ ವಂದನೆ. ಸಭಾಧಿಪತಿಯೆನಿಸಿ, ಸಭಾರೂಪದಿಂದಿರುತ್ತಾ, ವೇದಗಳನ್ನೇ ಕುದುರೆಗಳನ್ನಾಗಿ ಮಾಡಿಕೊಂಡು ಅಶ್ವಾಧಿಪತಿಯಾಗಿರುವ ಮಹಾದೇವನಿಗೆ ನಮಸ್ಕಾರವು. ||೨೫-೨೬||

ಸರ್ವಾಂಶದಲ್ಲಿಯೂ ಎಳೆಯುವ ಸ್ತ್ರೀರೂಪಧಾರಿಗಳಿಗೂ ವಿಶೇಷವಾಗಿ ಆಕರ್ಷಿಸುವ ಸುಂದರ ವ್ಯಕ್ತಿಗಳಿಗೂ, ಸಪ್ತಮಾತೃಕೆಗಳಿಗೂ, ಹಿಂಸೆಯನ್ನುಂಟು ಮಾಡುವ ಉಗ್ರದೇವತೆಗಳಿಗೂ, ವಿಷಯಲಂಪಟರಿಗೂ, ಅವರ ಯಜಮಾನರಿಗೂ

ಮಹದ್ಭ್ಯಃ ಕ್ಷುಲ್ಲಕೇಭ್ಯಸ್ತೇ ಗಣೇಭ್ಯೋಽಥ ನಮೋ ನಮಃ ।
ಭೂರಥಾಯ ನಮಸ್ತೇಽಸ್ತು ರಥಾಧಿಪತಯೇ ನಮಃ ॥೭೯॥

ಸೇನಾನಾಂ ಪತಯೇ ತಸ್ಮೈ ಸೇನಾನಿಗುರವೇ ನಮಃ ।
ವಿಧಿಸಾರಥಯೇ ತುಭ್ಯಂ ಸಂಗೃಹೀತ್ರೇ ನಮೋ ನಮಃ ॥೮೦॥

ತಕ್ಷಭ್ಯೋ ರಥಕಾರೇಭ್ಯಃ ಕುಲಾಲೇಭ್ಯೋ ನಮೋ ನಮಃ ।
ಕರ್ಮಾರೇಭ್ಯೋ ನಮಸ್ತೇಽಸ್ತು ಪುಂಜಿಷ್ಟೇಭ್ಯೋ ನಮೋ ನಮಃ ॥೮೧॥

ನಿಷಾದೇಭ್ಯೋ ನಮಸ್ತೇಽಸ್ತು ಇಷುಧನ್ವಕೃತೇ ನಮಃ ।
ಮೃಗಯುಭ್ಯಃ ಶ್ವನಿಭ್ಯಶ್ಚ ಶುನಾಂ ಚ ಪತಯೇ ನಮಃ ॥೮೨॥

ನಮೋ ಭವಾಯ ರುದ್ರಾಯ ಶರ್ವಾಯ ಪಶುಪಾಯ ಚ ।
ನೀಲಗ್ರೀವಾಯ ಚ ನಮಃ ಶಿತಿಕಂಠಾಯ ತೇ ನಮಃ ॥೮೩॥

---

ವಿಕಾರದೇಹಿಗಳಿಗೂ, ಪತಿಯೆನಿಸಿ ವಿಶ್ವರೂಪದಿಂದಿರುವ ಮಹಾದೇವನೇ, ನಿನಗೆ ವಿಶೇಷವಾಗಿ ವಂದನೆ. ॥೭೭-೭೮॥

ಮಹಾತ್ಮರಿಗೂ, ಅಲ್ಪರಿಗೂ, ಗಣಗಳಿಗೂ ಯಜಮಾನನಾಗಿರುವ ಮಹೇಶ್ವರನೇ ನಿನಗೆ ನಮಸ್ಕಾರ. ಭೂಮಿಯನ್ನೇ ರಥವನ್ನಾಗಿ ಕಲ್ಪಿಸಿಕೊಂಡು ಅದಕ್ಕೆ ಯಜಮಾನನೆನಿಸಿರುವ ಮಹೇಶ್ವರನಿಗೆ ವಂದನೆ. ಸಮಸ್ತ ಸೈನ್ಯಕ್ಕೂ ಅಧಿಪತಿಯಾಗಿ, ಬ್ರಹ್ಮನನ್ನೇ ಸಾರಥಿಯನ್ನಾಗಿ ಮಾಡಿಕೊಂಡು ಷಣ್ಮುಖಪಿತನಾದ, ಪಾಪಿಗಳನ್ನು ಹಿಡಿದು ಪಳಗಿಸುವ ಪರಶಿವನಿಗೆ ವಂದನೆಗಳು. ॥೭೯-೮೦॥

ಬಡಗಿಗಳಿಗೂ, ರಥನಿರ್ಮಾಪಕರಿಗೂ, ಕುಂಬಾರರಿಗೂ, ಕಮ್ಮಾರರಿಗೂ, ಪಕ್ಷಿಸಮೂಹವನ್ನು ಹಿಡಿದು ತಿನ್ನುವವರಿಗೂ, ಮತ್ಸ್ಯಾದಿಗಳನ್ನು ಘಾತಿಸುವವರಿಗೂ, ಬಾಣಬಿಲ್ಲುಗಳನ್ನು ಧರಿಸಿರುವವರಿಗೂ, ಬೇಟೆಗಾರರಿಗೂ, ಬೇಟೆನಾಯಿಗಳನ್ನು ಹಿಡಿಯುವವರಿಗೂ, ಬೇಟೆನಾಯಿಗಳಿಗೂ, ಒಡೆಯನಾಗಿರುವ ಮಹಾದೇವನಿಗೆ ವಂದನೆಗಳು. ॥೮೧-೮೨॥

ಮಹಾದೇವನೇ, ನೀನು ಹುಟ್ಟುವ ಪ್ರಾಣಿಗಳಿಗೆ ಆಶ್ರಯಸ್ಥಾನನು, ಭಯಂಕರನು, ಸುಖಕರನು, ಪಶುಗಳಿಗೆ (ಅಜ್ಞಾನಿಗಳಿಗೆ) ಅಧಿಪತಿಯು, ನೀಲವಾದ ಕಂಠಭಾಗವುಳ್ಳವನು, ವಿಷಕಂಠನು, ಜಟಾಧಾರಿಯು, ಬೋಳಾದ ಕೂದಲುಳ್ಳವನು

ನಮಃ ಕಪರ್ದಿನೇ ತುಭ್ಯಂ ವ್ಯುಪ್ತಕೇಶಾಯ ತೇ ನಮಃ ।
ಸಹಸ್ರಾಕ್ಷಾಯ ತೇ ನಿತ್ಯಂ ನಮಸ್ತೇ ಶತಧನ್ವನೇ ॥೮೪॥

ನಮಸ್ತೇ ಗಿರಿಶಾಯಾಥ ಶಿಪಿವಿಷ್ಟಾಯ ತೇ ನಮಃ ।
ನಮೋ ಮೀಢುಷ್ಟಮಾಯಾಥ ತಥಾ ಚೇಷುಮತೇ ನಮಃ ॥೮೫॥

ನಮೋ ಹ್ರಸ್ವಾಯ ಬೃಹತೇ ತಥಾ ವರ್ಷೀಯಸೇ ನಮಃ ।
ಸಂವೃಧ್ವನೇ ಚ ವೃದ್ಧಾಯ ಅಗ್ರ್ಯಾಯ ಪ್ರಥಮಾಯ ಚ ॥೮೬॥

ಆಶುಷೇಣಾಯ ಚ ನಮಸ್ತಥೈವಾಶುರಥಾಯ ಚ ।
ನಮಶ್ಶೂರಾಯ ದೇವಾಯ ಅಭಿವೇದ್ಯಾಯತೇ ನಮಃ ॥೮೭॥

ವರ್ಮಿಣೇ ತೇ ನಮೋ ನಿತ್ಯಂ ನಮಸ್ತೇಸ್ತು ವರೂಥಿನೇ ।
ಬಿಲ್ಮಿನೇ ತೇ ನಮೋ ನಿತ್ಯಂ ದಂಶನಾಂಗಾಯ ತೇ ನಮಃ ॥೮೮॥

ಶ್ರುತಾಯ ಶ್ರುತಸೇನಾಯ ದುಂದುಭ್ಯಾಯ ನಮೋ ನಮಃ ।
ಆಹನನ್ಯಾಯ ಚ ನಮೋ ಧೃಷ್ಣವೇ ಪ್ರಮೃತಾಯ ಚ ॥೮೯॥

---

(ಸಂನ್ಯಾಸಿಯು), ಸಾವಿರ ಕಣ್ಣುಗಳಿಂದಲೂ, ನೂರಾರು ಧನುಸ್ಸುಗಳಿಂದಲೂ ಕೂಡಿದವನು. ಇಂತಹ ನಿನಗೆ ಭಕ್ತಿಪೂರ್ವಕವಾದ ವಂದನೆಗಳು. ॥೮೩-೮೪॥

ಪರ್ವತನಿವಾಸಿಯೂ, ಕಿರಣಪ್ರವಿಷ್ಟನೂ, ವೃಷ್ಟಿಪ್ರದನೂ, ಧನುರ್ಧಾರಿಯೂ, ಹ್ರಸ್ವರೂಪದಿಂದಿರುವವನೂ, ಬೃಹದಾಕಾರವುಳ್ಳವನೂ, ವೃಷ್ಟಿರೂಪದಿಂದಿರುವವನೂ, ಶ್ರುತ್ಯಾದಿಗಳಿಂದ ವೃದ್ಧಿಹೊಂದಿದವನೂ, ಅಭಿವೃದ್ಧನಾಗಿರುವವನೂ, ದೇವತಾಶ್ರೇಣಿಯಲ್ಲಿ ಮುಂದಾಳಾಗಿ ಮೊದಲಿನವನಾಗಿರುವವನೂ ಆದ ನಿನಗೆ ನಮಸ್ಕಾರವು. ॥೮೫-೮೬॥

ಶೀಘ್ರವಾಗಿ ಹೋಗುವ ಸೈನ್ಯವುಳ್ಳವನೂ, ವೇಗವಾಗಿ ಓಡುವ ರಥವುಳ್ಳವನೂ, ಶೂರನೂ, ದೇವದೇವನೂ, ವೈರಿಗಳನ್ನು ಎದುರಿಸಿ ಕೊಲ್ಲುವವನೂ, ಬಲಿಷ್ಠವಾದ ಕವಚವುಳ್ಳವನೂ, ಪ್ರಶಸ್ತವಾದ ರಥ, ಶಿರಸ್ತ್ರಾಣ ಮುಂತಾದ ವಸ್ತುಗಳಿಂದ ಕೂಡಿದವನೂ, ಶತ್ರುದೇಹವನ್ನು ಭೇದಿಸುವವನೂ ಆದ ಮಹೇಶ್ವರನಿಗೆ ವಂದನೆ. ॥೮೭-೮೮॥

ಅಧ್ಯಯನರೂಪಿಯೂ, ಪ್ರಸಿದ್ಧವಾದ ಸೈನ್ಯವುಳ್ಳವನೂ, ನಗಾರಿಯ

ದೂತಾಯ ಪ್ರಹಿತಾಯಾಥ ನಮಸ್ತೇಸ್ತು ನಿಷಂಗಿಣೇ ।
ವರೇಷುಧಿಮತೇ ತುಭ್ಯಂ ನಮಸ್ತೀಕ್ಷ್ಣೇಷವೇ ಹರ ॥೯೦॥

ನಮ ಆಯುಧಿನೇ ತುಭ್ಯಂ ಸ್ವಾಯುಧಾಯ ನಮೋನಮಃ ।
ಸುಧನ್ವನೇ ನಮಸ್ತುಭ್ಯಂ ಸ್ರುತ್ಯಪಥ್ಯಾಯ ತೇ ನಮಃ ॥೯೧॥

ನಮಃ ಕಾಟ್ಯಾಯ ನೀಪ್ಯಾಯ ನಮಸ್ಸೂದ್ಯಾಯ ತೇ ನಮಃ ।
ಸರಸ್ಯಾಯ ಚ ನಾದ್ಯಾಯ ವೈಶಂತಾಯ ನಮೋನಮಃ ॥೯೨॥

ಅವಟ್ಯಾಯ ಚ ಕೂಪ್ಯಾಯ ವರ್ಷ್ಯಾಯಾವರ್ಷ್ಯಾಯತೇ ನಮಃ ।
ಮೇಘ್ಯಾಯ ಚ ಸುಮೇಧ್ಯಾಯ ವಿದ್ಯುತ್ಯಾಯ ನಮೋ ನಮಃ ॥೯೩॥

ನಮ ಈಧ್ರಿಯಾಯಾತಪ್ಯಾಯ ವಾತ್ಯರೇಷ್ಮ್ಯಾಯ ತೇ ನಮಃ ।
ವಾಸ್ತವ್ಯಾಯ ನಮಸ್ತೇಸ್ತು ವಾಸ್ತುಪಾಯ ನಮೋ ನಮಃ ॥೯೪॥

---

ಧ್ವನಿರೂಪನೂ, ನಗಾರಿಯನ್ನು ಹೊಡೆಯುವ ಆಯುಧದಂತಿರುವವನೂ, ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವವನೂ, ಶತ್ರುಸೈನ್ಯವನ್ನು ಪರಾಮರ್ಶಿಸುವವನೂ, ಪರವೃತ್ತಾಂತವನ್ನು ತಿಳಿಯುವ ದೂತನಾಗಿರುವವನೂ, ಸ್ವಾಮಿಯಿಂದ ಕಳುಹಿಸಲ್ಪಡುವ ಆಳಿನಂತಿರುವವನೂ, ಪ್ರಶಸ್ತವಾದ ಬಾಣ, ಬತ್ತಳಿಕೆ, ಧನುಸ್ಸು ಇವುಗಳನ್ನು ಹೊಂದಿರುವವನೂ ಆದ ಮಹಾದೇವನೇ, ನಿನಗೆ ವಂದನೆ. ॥೮೯-೯೦॥

ನಾನಾವಿಧಗಳಾದ ಆಯುಧಗಳುಳ್ಳವನೂ, ಪ್ರಶಸ್ತವಾದ ಪಿನಾಕಾಯುಧಧಾರಿಯೂ, ಶೋಭನವಾದ ಧನುರಾಯುಧವುಳ್ಳವನೂ, ಕಾಲುನಡಗೆಯುಳ್ಳ ಮಾರ್ಗದಲ್ಲಿ ಸಂಚರಿಸುವವನೂ, ರಾಜಮಾರ್ಗದಲ್ಲಿ ವಿಹರಿಸುವವನೂ, ಕೃತ್ರಿಮವಾದ ಕಾಲುವೆಯಲ್ಲಿ ಓಡಾಡುವವನೂ, ಪರ್ವತದ ತಪ್ಪಲಿನಲ್ಲಿರುವ ಕೊಳದಲ್ಲಿ ಜಲರೂಪದಿಂದಿರುವವನೂ, ಕೆಸರಿನಪ್ರದೇಶದಲ್ಲಿ ಜಲರೂಪದಿಂದಿರುವವನೂ, ಸರಸ್ಸು ಮತ್ತು ನದಿ, ಅಲ್ಪಸರಸ್ಸು ಇವುಗಳಲ್ಲಿ ಜಲರೂಪಿಯಾಗಿ ಸಂಚರಿಸುವವನೂ ಆದ ಮಹಾದೇವನಿಗೆ ನಮಸ್ಕಾರ. ॥೯೧-೯೨॥

ಹಳ್ಳ, ಬಾವಿ, ವೃಷ್ಟಿ, ಮೇಘ ಇವುಗಳಲ್ಲಿ ಜಲರೂಪದಿಂದ ವಿಹರಿಸುತ್ತಿರುವ, ಅತ್ಯಂತ ಪವಿತ್ರನೆನಿಸಿದ, ಮಿಂಚಿನಲ್ಲಿ ಅಡಗಿರುವ, ಶರತ್ಕಾಲದ ಮೋಡಗಳಲ್ಲಿ ವ್ಯಾಪಿಸಿರುವ, ಬಿಸಿಲಿನಲ್ಲಿ ತೋರಿಬರುವ, ಗಾಳಿಯಲ್ಲಿ ನೆಲಸಿರುವ, ಪ್ರಳಯಕಾಲದಲ್ಲಿ ಜಲರೂಪದಿಂದ ಪ್ರಕಾಶಿಸುವ ಪರಶಿವನಿಗೆ ವಂದನೆಗಳು. ॥೯೩-೯೪॥

ಆಶವೇ ಚಾಜಿರಾಯಾಥ ಶೀಘ್ರಶೀಭ್ಯಾಯ ತೇ ನಮಃ ।
ಊರ್ವರ್ಯಾಯ ಚ ಖಲ್ಯಾಯ ನಮಶ್ಶ್ಲೋಕ್ಯಾಯ ತೇ ನಮಃ ॥೯೫॥

ಅವಸಾನ್ಯಾಯ ಚ ನಮೋ ವನ್ಯಕಕ್ಷ್ಯಾಯ ತೇ ನಮಃ ।
ಶ್ರವಪ್ರತಿಶ್ರವಾಯಾಥ ಆಶವೇ ಚಾಜಿರಾಯ ಚ ॥೯೬॥

ನಮಶ್ಶೀಘ್ರ್ಯಾಯ ಶೀಭ್ಯಾಯ ಊರ್ಮ್ಯಾಯಾವಸ್ವನ್ಯಾಯ ತೇ ।
ಸ್ರೋತಸ್ಯಾಯ ಚ ದ್ವೀಪ್ಯಾಯ ಕನಿಷ್ಠಜ್ಯೇಷ್ಠಕಾಯ ತೇ ॥೯೭॥

ಪೂರ್ವಾಪರಭವಾಯಾಥ ಮಧ್ಯಮಾಯ ನಮೋ ನಮಃ ।
ಅಪಗಲ್ಭಾಯ ಬುಧ್ನ್ಯಾಯ ಸೋಭ್ಯಯಾಮ್ಯಾಯ ತೇ ನಮಃ ॥೯೮॥

ಪ್ರತಿಸರ್ಯ ಜಘನ್ಯಾಯ ಕ್ಷೇಮ್ಯಾಯ ಚ ನಮೋ ನಮಃ ।
ನಮಸ್ಸೋಮಾಯ ರುದ್ರಾಯ ತಾಮ್ರಾಯಾರುಣಮೂರ್ತಯೇ ॥೯೯॥

---

ಸರ್ವವ್ಯಾಪಕನೂ, ಗಮನಕುಶಲನೂ, ಶೀಘ್ರಗಾಮಿಯೂ, ಪ್ರವಾಹಾಂತರ್ಗತನೂ, ಫಲವತ್ತಾದ ಭೂಸ್ವರೂಪನೂ, ಕಣದ ಆಕಾರದವನೂ, ವೈದಿಕಮಂತ್ರ ಪ್ರತಿಪಾದ್ಯನೂ, ವೇದಾಂತಪ್ರತಿಪಾದ್ಯನೂ, ವನದಲ್ಲಿ ಹುಟ್ಟಿದ ವೃಕ್ಷಲತಾರೂಪಿಯೂ ಶಬ್ದಪ್ರತಿಶಬ್ದರೂಪದಿಂದ ತೋರುವವನೂ, ಶೀಘ್ರಗಾಮಿಯೂ, ಗಮನಕುಶಲನೂ ಆದ ಮಹಾದೇವನಿಗೆ ವಂದನೆ. ॥೯೫-೯೬॥

ಶೀಘ್ರಗಾಮಿಯೂ, ಜಲಾಂತಃಪಾತಿಯೂ, ಪ್ರವಾಹಾಂತರ್ಗತನೂ, ಅಲೆಗಳ ರೂಪದಿಂದಿರುವವನೂ, ಸ್ಥಿರಜಲದಲ್ಲಿ ನಿಲ್ಲುವವನೂ, ದ್ವೀಪಮಧ್ಯವರ್ತಿಯೂ, ಎಲ್ಲಕ್ಕಿಂತಲೂ ಕನಿಷ್ಠನಾಗಿಯೂ, ವಿದ್ಯೈಶ್ವರ್ಯಾದಿಗಳಲ್ಲಿ ಅಧಿಕನಾಗಿಯೂ, ಜಗದಾದಿಯಲ್ಲಿ ಹಿರಣ್ಯಗರ್ಭಬ್ರಹ್ಮನರೂಪದಲ್ಲಿಯೂ ಜನಿಸುವವನೂ, ಜಗದವಸಾನಕಾಲದಲ್ಲಿ ಕಾಲಾಗ್ನಿರುದ್ರರೂಪದಲ್ಲಿರುವವನೂ, ಮಧ್ಯಕಾಲದಲ್ಲಿ ದೇವತಿರ್ಯಗಾದಿ ರೂಪದಿಂದ ತೋರಿಬರುವವನೂ, ಅತಿಶಯವಾದ ಇಂದ್ರಿಯವ್ಯಾಪಾರಗಳಿಲ್ಲದ ಬಾಲರೂಪದಿಂದಲೂ, ವೃಕ್ಷಾದಿಗಳಲ್ಲಿ ಬುಡಗಳ ರೂಪದಿಂದಲೂ, ಪುಣ್ಯಪಾಪಗಳೆರಡರಿಂದ ಜೀವನ ಜರುಗಿಸುವ ಮನುಷ್ಯರೂಪದಿಂದಲೂ, ಯಮಲೋಕದಲ್ಲಿ ಪಾಪಿಗಳನ್ನು ಶಿಕ್ಷಿಸುವವನೂ ಆದ ಪರಶಿವನಿಗೆ ನಮಸ್ಕಾರಗಳು. ॥೯೭-೯೮॥

ವಿವಾಹಾದಿಗಳಲ್ಲಿ ಧರಿಸುವ ರಕ್ಷಾಸೂತ್ರದಂತಿರುವವನೂ, ಹಸುಗಳ ಜಘನಭಾಗದಲ್ಲಿ ಕರುಗಳ ರೂಪದಿಂದ ಜನಿಸುವವನೂ, ಕ್ಷೇಮದಿಂದ ತೋರಿಬರು

ನಮಶ್ಶಂಗಾಯ ಶಾಂತಾಯ ಪಶೂನಾಂ ಪತಯೇ ನಮಃ ।
ನಮ ಉಗ್ರಾಯ ಭೀಮಾಯ ನಮೋ ಅಗ್ರೇವಧಾಯ ಚ ॥೧೦೦॥

ನಮೋ ದೂರೇ ವಧಾಯಾಥ ಹಂತ್ರೇ ತುಭ್ಯಂ ಹನೀಯಸೇ ।
ತಾರಾಯ ಪ್ರಣವಾಯಾಥ ಶಂಭವೇ ಚ ಮಯೋಭುವೇ ॥೧೦೧॥

ನಮಸ್ತೇ ಶಂಕರಾಯಾಥ ನಮೋ ಮಯಸ್ಕರಾಯ ಚ ।
ನಮಶ್ಶಿವಾಯ ಶಾಂತಾಯ ನಮಶ್ಶಿವತರಾಯ ಚ ॥೧೦೨॥

ನಮಸ್ತೇ ತೀರ್ಥ್ಯಾಯ ಕೂಲ್ಯಾಯ ಪಾದ್ಯಾಯಾದ್ಯಾಯ ತೇ ನಮಃ ।
ನಮ ಪ್ರತರಣಾಯಾಥ ನಮಶ್ಶೋತ್ತರಣಾಯ ಚ ॥೧೦೩॥

ಆತಾರ್ಯಾಯ ಚಾಲಾದ್ಯಾಯ ಶಷ್ಪ್ಯಫೇನ್ಯಾಯ ತೇ ನಮಃ ।
ಸಿಕತ್ಯಾಯ ಪ್ರವಾಹ್ಯಾಯ ಇರಿಣಪ್ರಪಥ್ಯಾಯ ಚ ॥೧೦೪॥

---

ವವನೂ, ಉಮಾಸಹಿತನಾದವನೂ, ಭಯಂಕರನೂ, ಉದಯಕಾಲದಲ್ಲಿ ಕೆಂಪಾಗಿಯೂ, ಅನಂತರ ಮಿಶ್ರವರ್ಣದಿಂದಲೂ ರಂಜಿಸುವ ಸೂರ್ಯನಂತೆಯೂ ಇರುವ ಶಂಕರನಿಗೆ ವಂದನೆಗಳು. ಸುಖಪ್ರದನೂ, ಶಾಂತನೂ, ಅಜ್ಞಾನಿಗಳಿಗೆ ಅಧಿಪತಿಯೂ ಭಯಂಕರ ಸ್ವಭಾವದವನೂ, ಯುದ್ಧದ ಆರಂಭದಲ್ಲಿಯೇ ಶತ್ರುಗಳನ್ನು ಧ್ವಂಸ ಮಾಡುವವನೂ ಆದ ಮಹಾದೇವನಿಗೆ ವಂದನೆ. ॥೯೯-೧೦೦॥

ದೂರದಿಂದಲೇ ಶತ್ರುಗಳನ್ನು ಧ್ವಂಸಮಾಡುವವನೂ, ಕೊಲ್ಲುವವನೂ, ಕೊಲ್ಲಿಸುವವನೂ ಶಂಕರನೇ. ಪ್ರಣವರೂಪಿಯೂ, ಪ್ರಣವಾತ್ಮಕನೂ, ಸುಖಕರನೂ, ಸುಖವನ್ನು ಊಹಿಸುವವನೂ, ಸುಖಪ್ರದನೂ, ಸುಖಕರನೂ, ಶಾಂತಾತ್ಮಕನೂ, ಮಂಗಳರೂಪಿಯೂ, ಅತ್ಯಂತ ಮಂಗಳಪ್ರದನೂ ಆಗಿರುವ ಮಹೇಶ್ವರನಿಗೆ ಸರ್ವದಾ ವಂದನೆಗಳು. ॥೧೦೧-೧೦೨॥

ತೀರ್ಥಕ್ಷೇತ್ರಗಳಲ್ಲಿ ನೆಲಸಿರುವವನೂ, ನದೀದಡದಲ್ಲಿ ಕಂಡುಬರುವವನೂ, ಮೋಕ್ಷಾರ್ಥಿಗಳಿಗೆ ಸಂಸಾರಸಮುದ್ರದ ದಡವನ್ನು ಕಾಣಿಸುವವನೂ, ಸಂಸಾರ ಸಾಗರದ ಮಧ್ಯದಲ್ಲಿ ಐಹಿಕಸುಖವನ್ನು ಒದಗಿಸುವವನೂ, ಕಷ್ಟದಿಂದ ದಾಟಿಸುವವನೂ, ಆಪತ್ತಿನಿಂದ ಉದ್ಧರಿಸುವವನೂ, ದೋಣಿಯಂತೆ ಕಷ್ಟಸಮುದ್ರವನ್ನು ದಾಟಿಸುವವನೂ, ಮತ್ತೆ ಸಂಸಾರಕ್ಕೆ ಬರಲಿಷ್ಟವುಳ್ಳವನೂ, ಕರ್ಮಫಲವನ್ನು

ನಮಃ ಕಿಗ್ಂ ಶಿಲಾಯಾಥ ಕ್ಷಯಣಾಯ ಕಪರ್ದಿನೇ ।
ನಮೋ ಗೋಷ್ಠ್ಯಾಯ ಗೃಹ್ಯಾಯ ಪುಲಸ್ತ್ಯಾಯ ನಮೋ ನಮಃ ॥೧೦೫॥

ನಮಸ್ತಲ್ಪ್ಯಾಯ ಗೇಹ್ಯಾಯ ನಮಃ ಕಾಟ್ಯಾಯ ತೇ ನಮಃ ।
ಗಹ್ವರೇಷ್ಠಾಯ ಚ ನಮೋ ಹ್ರದಯ್ಯಾಯ ನಮೋಸ್ತುತೇ ॥೧೦೬॥

ನಿವೇಷ್ಪ್ಯಾಯ ನಮಸ್ತುಭ್ಯಂ ಪಾಂಸವ್ಯರಜಸೇ ನಮಃ ।
ನಮಶ್ಶುಷ್ಕ್ಯಾಯ ದೇವಾಯ ಹರಿತ್ಯಾಯ ನಮೋನಮಃ ॥೧೦೭॥

ನಮೋ ಲೋಪ್ಯಾಯೋಲಪ್ಯಾಯ ಊರ್ವ್ಯ ಸೂರ್ಮ್ಯಾಯ ತೇ ನಮಃ ।
ಪರ್ಣ್ಯಾಯ ಪರ್ಣಶದ್ಯಾಯ ಗುರಮಾಣಾಯ ತೇ ನಮಃ ॥೧೦೮॥

ನಮೋ ಅಭಿಘ್ನತೇ ತುಭ್ಯಂ ನಮ ಆಖ್ಖಿದ್ಯತೇ ನಮಃ ।
ನಮಃ ಪ್ರಖ್ಖಿದ್ಯತೇ ತುಭ್ಯಂ ಕಿರಿಕೇಭ್ಯೋ ನಮೋ ನಮಃ ॥೧೦೯॥

---

ಸಂಪೂರ್ಣವಾಗಿ ಅನುಭವಿಸುವವನೂ, ಹುಲ್ಲುಗರಿಕೆ, ನೊರೆ, ಮರಳು, ಪ್ರವಾಹ, ಮಾರ್ಗ ಈ ರೂಪದಿಂದ ತೋರಿಬರುವವನೂ ಆದ ಮಹೇಶ್ವರನಿಗೆ ವಂದನೆ. ॥೧೦೩-೧೦೪॥

ಕುತ್ಸಿತವಾದ ಶಿಲಾರೂಪದಿಂದಿರುವವನೂ, ನಿವಾಸಯೋಗ್ಯವಾದ ಪ್ರದೇಶ ಸ್ವರೂಪನೂ, ಜಟಾಬಂಧರೂಪಿಯೂ, ಗೋನಿವಾಸರೂಪಿಯೂ, ಗೃಹದಲ್ಲಿ ನೆಲಸಿರುವವನೂ, ಭಕ್ತರಮುಂದೆ ನಿಲ್ಲುವವನೂ, ತಲ್ಪದಲ್ಲಿ ಮಲಗಿರುವವನೂ, ಪ್ರಾಸಾದದ ಮೇಲ್ಭಾಗದಲ್ಲಿ ವಿರಾಜಿಸುವವನೂ, ಅರಣ್ಯಪ್ರದೇಶದಲ್ಲಿರುವವನೂ ಗಿರಿಗುಹೆಗಳಲ್ಲಿ ವಿಹರಿಸುವವನೂ, ಅಗಾಧಜಲದಲ್ಲಿ ಅಡಗಿರುವವನೂ ಆದ ಮಹೇಶ್ವರನಿಗೆ ವಂದನೆ. ॥೧೦೫-೧೦೬॥

ಮಂಜಿನಲ್ಲಿ ನೀರಿನ ರೂಪದಿಂದಲೂ, ದೂಳಿನಲ್ಲಿ ಪರಮಾಣುರೂಪದಿಂದಲೂ ಇರುವವನೂ, ಒಣಗಿದ ಕಟ್ಟಿಗೆಯಂತಿರುವವನೂ, ಹಸೀವಸ್ತುಗಳಂತಿರುವವನೂ, ಹುಲ್ಲುಗಳು ಬೆಳೆಯದ ಕಠಿನಪ್ರದೇಶದಂತಿರುವವನೂ, ಗರಿಕೆಯಂತೆ ತೋರುವವನೂ ಭೂಮಿ, ಪ್ರಶಸ್ತವಾದ ಅಲೆಗಳು ಇವುಗಳಂತೆ ಕಾಣುವವನೂ, ಎಲೆಗಳಲ್ಲಿ ಅಡಗಿರುವವನೂ, ಒಣಎಲೆಗಳ ರಾಶಿಯಾಗುವವನೂ, ಆಯುಧರೂಪದಿಂದಿರುವವನೂ ಆದ ಮಹಾದೇವನಿಗೆ ವಂದನೆ. ॥೧೦೭-೧೦೮॥

ಶತ್ರುಗಳನ್ನು ಹೊಡೆಯುವವನೂ, ಪಾಪಕರ್ಮಾನುಗುಣವಾಗಿ ಸ್ವಲ್ಪ

ದೇವಾನಾಂ ಹೃದಯೇಭ್ಯಸ್ತೇ ವಿಕ್ಷೀಣೇಭ್ಯೋ ನಮೋನಮಃ ।
ವಿಚಿನ್ವತ್ಕೇಭ್ಯೋಥ ನಮ ಅನಿರ್ಹತೇಭ್ಯ ಏವ ಚ ॥೧೧೦॥

ದ್ರಾಪೇ ಕವಚಯುಕ್ತಾಯ ಅಂಧಸಸ್ಪತಯೇ ನಮಃ ।
ದರಿದ್ರದಾರಿಣೇ ತುಭ್ಯಂ ನಮಸ್ತೇ ನೀಲಲೋಹಿತ ॥೧೧೧॥

ನಮಸ್ತೇ ತವಸೇ ತುಭ್ಯಂ ಕ್ಷಯದ್ವೀರಾಯ ತೇ ನಮಃ ।
ನಮಸ್ತ್ವಾ ತ್ವಾಂ ವಿಧೇಮ್ಯದ್ಯ ಶಿವಾಂ ತಾತನುವಂ ಶಿವ ॥೧೧೨॥

ಘೋರಾ ಶಾಂತಾ ತನೂ ಸ್ತೇದ್ಯ ಪ್ರಪದ್ಯೇ ತನುವಾ ಶಿವ ।
ಘೋರಾ ತೇದ್ಯ ತನುರ್ವಹ್ನಿಃ ಸರ್ವಯಜ್ಞೇಷು ಪೂಜ್ಯತೇ ॥೧೧೩॥

ನಮಸ್ಕಾರೇಣ ತನ್ವಂತೇ ಪ್ರಯಾಮಿ ಶರಣಂ ಹರ ।
ರುದ್ರೋ ವಾ ಏಷ ಯತ್ರಾಗ್ನಿರ್ಯಜುರ್ಭಿಃ ಪ್ರವದಾಮ್ಯಹಂ॥೧೧೪॥

---

ಅಥವಾ ಅಧಿಕವಾಗಿ ಹಿಂಸೆಗೊಡುವವನೂ, ಭಕ್ತರಿಗೆ ಉದಾರವಾಗಿ ಧನಾದಿಗಳನ್ನು ದಾನಮಾಡುವವನೂ, ದೇವತೆಗಳಿಗೆ ಹೃದಯದಂತಿರುವವನೂ, ಕ್ಷೀಣನಲ್ಲದವನೂ, ಅಪೇಕ್ಷಿತವಾದ ಅರ್ಥವನ್ನು ಕರುಣಿಸುವವನೂ, ಸರ್ವಭಾಗದಲ್ಲಿಯೂ ಸ್ಥೂಲರೂಪವನ್ನು ಪಡೆಯುವವನೂ ಆದ ಮಹಾದೇವನಿಗೆ ವಂದನೆ. ||೧೦೯-೧೧೦||

ಪಾಪಿಗಳಿಗೆ ನರಕರೂಪದಿಂದ ಶಿಕ್ಷೆಯನ್ನು ವಿಧಿಸುವವನೇ, ಕವಚಯುಕ್ತನಾಗಿಯೂ, ಭಕ್ತರಿಗೆ ಅನ್ನವನ್ನು ಒದಗಿಸುವವನಾಗಿಯೂ, ಸ್ವಯಂ ದರಿದ್ರನಾದರೂ ಭಕ್ತರ ದಾರಿದ್ರ್ಯವನ್ನು ಅಪಹರಿಸುವವನಾಗಿಯೂ, ಇರುವ ನೀಲಲೋಹಿತನೇ ನಿನಗೆ ವಂದನೆ. ಮತ್ತು ಬಲಯುಕ್ತನೂ, ನಾಶವಾಗುವ ಪ್ರತಿಪಕ್ಷರೂಪಿಯೂ ಆದ ಮಹೇಶ್ವರನೇ ನಿನಗೆ ನಮಸ್ಕರಿಸುವೆನು. ನಿನ್ನ ಮಂಗಳಕರವಾದ ಹಾಗೂ ಸಂಪದ್ಭರಿತವಾದ ದೇಹವನ್ನು ನನಗೆ ಅನುಗ್ರಹಿಸು. ||೧೧೧-೧೧೨||

ಮಹೇಶ್ವರನೇ, ನಿನಗೆ ಘೋರವಾದ ಮತ್ತು ಶಾಂತಮಯವಾದ ಎರಡು ದೇಹಗಳಿವೆ. ಆ ಘೋರದೇಹವೇ ಅಗ್ನಿಯು. ಅದನ್ನೇ ಸಕಲ ಯಾಗಗಳಲ್ಲಿಯೂ ಪೂಜಿಸುವರು. ಅದೇ ರುದ್ರರೂಪವಾದದ್ದು. ನಮಸ್ಕಾರಾದಿಗಳಿಂದ ಪೂಜಿಸಲ್ಪಡುವ ಶರೀರವೇ ಅದು. ಅದೇ ದೇಹವನ್ನೇ ಯಜುರ್ವೇದದ ಸಕಲ ಯಾಜುಷ ಮಂತ್ರಗಳೂ ಹೊಗಳುತ್ತಿರುವುವು. ನಾನು ಅದೇ ದೇಹವನ್ನೇ ಈಗಲೂ ಶರಣು ಹೊಂದುತ್ತೇನೆ. ||೧೧೩-೧೧೪||

ಅಹಂ ಪ್ರತಿಪದೈರ್ಮಂತ್ರೈಸ್ತದ್ರೂಪಾನ್ ರುದ್ರಸತ್ತಮಾನ್ ।
ನಮಸ್ಕರೋಮಿ ತದ್ಭಕ್ತಾನ್ ಪೃಥಿವ್ಯಪ್ಸು ಸದೋ ಗಣಾನ್ ॥೧೧೫॥

ದಿವ್ಯಂತರಿಕ್ಷತೀರ್ಥಸ್ಥಾನ್ ವಾತವರ್ಷಶರಾನಹಂ ।
ಅಭಕ್ತಾನ್ ದೇವದೇವಸ್ಯ ರುದ್ರಜಂಭೇ ದಧಾಮ್ಯಹಂ ॥೧೧೬॥

ಯೋ ರುದ್ರೋ ಅಗ್ನಿಮಧ್ಯಸ್ಥೋ ಅಪ್ಸು ಓಷಧಿಷು ಸ್ಥಿತಾ ।
ಯೋ ರುದ್ರೋ ವಿಶ್ವಮಧ್ಯಸ್ಥೋ ತಸ್ಮೈ ಸರ್ವಾತ್ಮನೇನಮಃ ॥೧೧೭॥

ಹಿರಣ್ಯಬಾಹುರ್ದೇವೇಶೋ ಹಿರಣ್ಯತನುರೀಶ್ವರಃ ।
ಅಂಬಿಕಾಯಾಃ ಪತಿಶ್ಶಂಭುರುಮಾಯಾಃ ಪತಿರೀಶ್ವರಃ ॥೧೧೮॥

ಯಜ್ಞೇಷು ತದ್ಧವಿಃ ಶೇಷಂ ಶಿವಲಿಂಗಪುರಃ ಸ್ಥಿತಂ ।
ತದಶ್ನಾಮಿ ತವಾದ್ಯೈವ ಯನ್ನಿವೇದಿತಮೀಶ್ವರಿ ॥೧೧೯॥

---

ನಾನು ರುದ್ರರೂಪದಿಂದಿರುವ ಸಮಸ್ತ ದೇವತೆಗಳಿಗೂ ನಮಸ್ಕಾರ ಮಾಡುತ್ತೇನೆ. ಅಷ್ಟೇ ಅಲ್ಲ. ಭೂಮಿ, ಜಲ, ಅಂತರಿಕ್ಷ, ತೀರ್ಥ ಮುಂತಾದ ಪ್ರದೇಶಗಳಲ್ಲಿ ನೆಲಸಿರುವ ಎಲ್ಲ ರುದ್ರಗಣಗಳನ್ನೂ, ರುದ್ರಭಕ್ತರನ್ನೂ, ಗಾಳಿ, ಮಳೆ, ಬಾಣ ಈ ರೂಪದಿಂದಿರುವ ಈಶ್ವರನ ಸಾಮಗ್ರಿಗಳನ್ನೂ ಗೌರವಿಸಿ ನಮಸ್ಕರಿಸುವೆನು. ಈಶ್ವರಭಕ್ತರಲ್ಲದವರನ್ನು ಮಾತ್ರ ಎಂದಿಗೂ ಗೌರವಿಸೆನು. ಅಂತಹ ನೀಚರನ್ನು ಭಯಂಕರವಾದ ರುದ್ರಾಸ್ಯದಲ್ಲಿ ನಿಲ್ಲಿಸಿಬಿಡುವೆನು. ॥೧೧೫-೧೧೬॥

ಅಗ್ನಿ, ನೀರು, ವನಸ್ಪತಿಗಳು, ಪ್ರಪಂಚ ಇವುಗಳ ಮಧ್ಯದಲ್ಲಿ ರುದ್ರರೂಪದಿಂದಿದ್ದು ಪ್ರಪಂಚವನ್ನೇ ಆವರಿಸಿರುವ ಮಹಾದೇವನಿಗೆ ವಂದನೆ. ಭಗವಂತನಾದ ಪರಶಿವನಿಗೆ ಬಾಹು, ದೇಹ ಇವೆಲ್ಲವೂ ಸುವರ್ಣಮಯವಾದದ್ದೇ. ಅಂಬಿಕೆ ಮತ್ತು ಉಮಾ ಎಂಬ ಹೆಸರಿನಿಂದ ತೋರಿಬರುವ ಪಾರ್ವತಿಗೆ ಒಡೆಯನಾದವನೂ ಪರಶಿವನೇ. ಅವನೇ ನನಗೆ ರಕ್ಷಕನು. ॥೧೧೭-೧೧೮॥

ಯಜ್ಞದಲ್ಲಿ ಹವಿಸ್ಸೂ, ಶಿವಲಿಂಗಾರ್ಚನೆಯಲ್ಲಿ ಶಿವನೈವೇದ್ಯಶೇಷವೂ ನನಗೆ ಆಹಾರವೆನಿಸುವುದು. ದೇವಿಯೇ, ಅದರಿಂದಲೇ ನಾನು ಜೀವಿಸುತ್ತಿರುವೆನು. ಮಹೇಶ್ವರನೇ, ಹಾಲುಕುಡಿಯುವ ಎಳೆಮಗುವಿನಂತೆ, ಮಹಾವಸ್ತುವೆನಿಸಿರುವ

ಸ್ತನಂಧಯಂ ಮಹಾಂತಂ ಮೇ ಗಾವೋಽಶ್ವಾಪುರುಷಾನ್ ಮಮ ।
ಮಾವಧೀಸ್ತ್ವಂ ಮಹಾದೇವ ಮಾಂ ಪಾಹಿ ತನುವೇವ ಮಾಂ ॥೧೨೦॥

ಕೃತಿಂ ವಸಾನೋ ಹಸ್ತೇ ತ್ವಂ ಬಿಭ್ರದ್ಬಾಣಂ ಧನುರ್ವರಂ ।
ಆಗಚ್ಛ ದೇವದೇವೇಶ ಶರಣಂ ಮಾಮವ ಪ್ರಭೋ ॥೧೨೧॥

ನಮಸ್ತೇ ಹರಸೇ ದೇವ ರೋಚಿಷೇ ಶೋಚಿಷೇ ನಮಃ ।
ಯತ್ರ ತ್ವಂ ವಸಸೀಶಾನಃ ನಮೋ ಯತ್ರ ನಿಷೀದಸಿ ॥೧೨೨॥

ತಸ್ಮಾದಾರ್ದ್ರಪ್ರಥಿತಂ ಋಕ್ಷಂ ಶ್ರೇಷ್ಠೋಽಯಂ ಚ ಗವಾಂಪತಿಃ ।
ನಮಸಾ ತಂ ಪ್ರಪನ್ನೋಽಸ್ಮಿ ಸರ್ವದಾ ಶಿವಮೇವ ಹಿ ॥೧೨೩॥

ತಮೇವ ಯಜತ ಕ್ಷಿಪ್ರಂ ಹೇ ದೇವಾ ದಕ್ಷಸಂಯುತಾಃ ।
ಪ್ರಸಾದಯಧ್ವಂ ದೇವೇಶಂ ಹವಿಷಾ ಮುಖಸತ್ತಮೇ ॥೧೨೪॥

---

ನನ್ನನ್ನೂ, ಗೋವು, ಅಶ್ವಗಳು, ಪುರುಷರು ಇವರೇ ಮೊದಲಾದವರನ್ನೂ ನೀನು ಎಂದಿಗೂ ಸಂಹರಿಸಬೇಡ. ನಿನ್ನ ದೇಹವೆಂಬ ಅಭಿಮಾನದಿಂದ ನನ್ನನ್ನು ಕಾಪಾಡು. ನಾನು ಸದಾ ನಿನ್ನನ್ನೇ ಸ್ತುತಿಸುವೆನು. ॥೧೧೯-೧೨೦॥

ಮಹಾಪ್ರಭುವೇ, ಚರ್ಮವನ್ನು ಧರಿಸಿಕೊಂಡು, ಕೈಯ್ಯಲ್ಲಿ ಬಾಣವನ್ನು ಹಿಡಿದು, ಭಕ್ತರಕ್ಷಣಾರ್ಥವಾಗಿ ಜಾಗ್ರತೆ ಬಾ. ನಾನು ಮಾತ್ರ ಸದಾ ನಿನ್ನನ್ನೇ ಮೊರೆಹೊಕ್ಕಿರುವೆನು. ತೇಜೋರೂಪದಿಂದಲೂ, ಅಗ್ನಿರೂಪದಿಂದಲೂ, ಸೂರ್ಯಾತಪ ರೂಪದಿಂದಲೂ ಲೋಕದಲ್ಲಿ ಹರಡಿ ಸರ್ವರ ಕಷ್ಟಗಳನ್ನೂ ಪರಿಹರಿಸುತ್ತಿರುವೆ. ಮಹಾದೇವನೇ, ನೀನು ಎಲ್ಲಿ ನೆಲೆಸಿದ್ದರೂ, ಎಲ್ಲಿ ವಾಸಮಾಡುತ್ತಿದ್ದರೂ, ಆ ಸ್ಥಳದಲ್ಲಿ ನಿಂತು ನಾನು ನಿನ್ನನ್ನು ಭಜಿಸುವೆನು. ॥೧೨೧-೧೨೨॥

ಆದ್ರಾನಕ್ಷತ್ರಾಧಿಪತಿಯೂ, ಪಶುಪತಿಯೂ, ಅತ್ಯಂತ ಶ್ರೇಷ್ಠನೂ ಆದ ಶಂಕರನಿಗೆ ನಮಸ್ಕಾರ. ಅಂತಹ ಶಿವನನ್ನೇ ನಾನು ಸದಾ ಶರಣುಹೊಂದುವೆನು. ಎಲೈ ದೇವತೆಗಳಿರಾ, ದಕ್ಷಬ್ರಹ್ಮನೇ, ನೀವೆಲ್ಲರೂ ಮಹಾದೇವನಿಗೆ ಹವಿರ್ಭಾಗ ವನ್ನು ಕೊಟ್ಟು ಧನ್ಯರಾಗಿರಿ. ಈ ದಿವ್ಯಯಾಗವು ಶಿವಾನುಗ್ರಹದಿಂದ ಪವಿತ್ರ ವಾಗಲಿ. ॥೧೨೩-೧೨೪॥

ಯದ್ಯಸತ್ಯಂ ಮಯೋಕ್ತಂ ಚೇನ್ಮಮ ಮೂರ್ಧಾ ಪತಿಷ್ಯತಿ ।
ಯೇನ ಶೃಣ್ವಂತಿ ಮೇ ವಾಚಂ ತೇಷಾಂ ಮೂರ್ಧಾದ್ಯ ಸಂಪತೇತ್ ॥೧೨೫॥

॥ ಸೂತ ಉವಾಚ ॥

ಸತ್ಯಂ ಸತ್ಯಂ ಪುನಸ್ಸತ್ಯಂ ಉದ್ಧೃತ್ಯ ಭುಜಮುಚ್ಯತೇ ।
ಇತ್ಯುಕ್ತ್ವಾ ಸಂಸ್ಥಿತಸ್ತೂಷ್ಣೀಂ ಯಜುರ್ವೇದಃ ಸುರಾಗ್ರತಃ ॥೧೨೬॥

ಪ್ರಶಂಸಾಮಿ ಸಾಮಿಪ್ರಭಾಭಾಮಸೋಮ
ಪ್ರಶಸ್ತೈಕಮಸ್ತಂ ಸದಾ ಶೂಲಹಸ್ತಂ ।
ವಿಶಸ್ತಾಂಧಕಾರಂ ಮಹಸ್ತಂ ಸುಹೇಮ
ಪ್ರತೀಕಾಶವಾಮಾರ್ಧರಾಮಂ ಭಜೇಹಂ ॥೧೨೭॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ದಕ್ಷಾಧ್ವರಪ್ರಶಂಸಾಯಾಂ ಋಗ್ವೇದ ಯಜುರ್ವೇದಕೃತ
ಶಿವೋತ್ಕರ್ಷವರ್ಣನಂ ನಾಮ ತೃತೀಯೋಧ್ಯಾಯಃ

---

ಎಲೈ ದೇವತೆಗಳಿರಾ, ಇಲ್ಲಿನ ವರೆಗೂ ನಾನು ಹೇಳಿದ ಮಾತುಗಳಲ್ಲಿ ಏನಾದರೂ ಅಸತ್ಯಾಂಶವಿದ್ದರೆ ಈಗಲೇ ನನ್ನ ತಲೆಯು ಕೆಳಗೆ ಉರುಳಲಿ. ಅಲ್ಲದೆ ಯಾರು ಈ ನನ್ನ ಮಾತನ್ನು ಅಸತ್ಯವೆಂದು ತಿರಸ್ಕರಿಸುವರೋ ಅವರ ಶಿರಸ್ಸೂ ನೆಲಕ್ಕೆ ಬೀಳಲಿ. ಇದೇ ನನ್ನ ದೃಢನಂಬಿಕೆ. ಈ ವಾಣಿಯನ್ನು ಪ್ರತಿಜ್ಞಾಪೂರ್ವಕವಾಗಿ ಮೂರುಸಾರಿ ಭುಜವನ್ನೆತ್ತಿ ಹೇಳುವೆನು." ಎಂದು ಹೇಳುತ್ತಾ ಯಜುರ್ವೇದವು ದೇವತೆಗಳ ಮುಂದೆ ಸುಮ್ಮನೆ ನಿಂತಿತು. ॥೧೨೫-೧೨೬॥

ಎಲೈ ಮಹರ್ಷಿಗಳಿರಾ, ಈ ರೀತಿ ದಕ್ಷಬ್ರಹ್ಮನ ಸಭೆಯಲ್ಲಿ ಅರ್ಧಚಂದ್ರಮಂಡಲಧಾರಿಯೂ, ಅದರಿಂದಲೇ ಪ್ರಶಸ್ತವೆನಿಸಿದ ಶಿರೋಭಾಗವುಳ್ಳವನೂ, ತ್ರಿಶೂಲವನ್ನು ಕೈಯ್ಯಲ್ಲಿ ಹಿಡಿದಿರುವವನೂ, ಕಗ್ಗತ್ತಲನ್ನು ನಾಶಗೊಳಿಸಿದವನೂ, ತೇಜೋರೂಪಿಯೂ ಆಗಿ, ಪುಟಹಾಕಿದ ಚಿನ್ನದಂತೆ ಕಂಗೊಳಿಸುವ ಪಾರ್ವತಿಯ ಬಿಂಬವನ್ನು ಧರಿಸಿ, ಅರ್ಧನಾರೀಶ್ವರನೂ ಎನಿಸಿಕೊಂಡಿರುವ ಪರಮೇಶ್ವರನನ್ನು ನಾನು ಸದಾ ಧ್ಯಾನಮಾಡುತ್ತೇನೆಂದು ಹೇಳಿದ ಯಜುರ್ವೇದ ಮೂರ್ತಿಯ ವಾಣಿಯನ್ನು ನಿಮಗೆ ಈಗ ವಿಸ್ತಾರವಾಗಿ ತಿಳಿಯಪಡಿಸಿದೆನು. ಮುಂದೆ ಸಾಮ

ವೇದವು ಏನು ಹೇಳಿತೆಂಬುದನ್ನು ಮುಂದೆ ಹೇಳುವೆನು? ಕೇಳಿರಿ, ಎಂದು ಸೂತಮಹರ್ಷಿಗಳು ಇತರ ಋಷಿಜನರಿಗೆ ತಿಳಿಯಪಡಿಸಿದರು. ||೧೨೭||

ಶ್ರೀ ಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಚತುರ್ಥೋಽಧ್ಯಾಯಃ

॥ ಶ್ರೀ ಸತ್ಯುವಾಚ ॥

ಶೃಣ್ವಂತು ಬ್ರಹ್ಮವಿಷ್ಣ್ವಾದ್ಯಾ ಮುನಯೋ ದಕ್ಷಸಂಯುತಾಃ ।
ಸಾಮವೇದೋ ವದತ್ಯೇಷ ಪರಮಾರ್ಥತಯಾ ವಚಃ ॥೧॥

॥ ಶ್ರೀ ಸ್ಕಂದ ಉವಾಚ ॥

ತಥಾ ಸತ್ಯಾವಚಃ ಶ್ರುತ್ವಾ ಸಾಮವೇದೋಽಬ್ರವೀತ್ತದಾ ।
ಮೌಲಿಬದ್ಧಾಂಜಲಿಪುಟ ಉತ್ಥಾಯ ಸುರಸನ್ನಿಧೌ ॥೨॥

॥ ಶ್ರೀ ಸಾಮವೇದ ಉವಾಚ ॥

ಅಗ್ನಿರೂಪೋ ಮಹಾದೇವೋ ಮಾಮಾಯಾತು ಸವೀತಯೇ ।
ಹವ್ಯದಾತಾರಮೀಶಾನಂ ಹವ್ಯಭೋಕ್ತಾರಮೀಶ್ವರಂ ॥೩॥

---

## ನಾಲ್ಕನೆಯ ಅಧ್ಯಾಯ

ದಕ್ಷಬ್ರಹ್ಮನ ಸಭೆಯಲ್ಲಿ ಸತೀದೇವಿಯು ಬ್ರಹ್ಮವಿಷ್ಣ್ವಾದಿಗಳಿಂದ ಕೂಡಿದ ದಕ್ಷನನ್ನು ಕುರಿತು, ಶಿವನ ಪಾರಮ್ಯದಲ್ಲಿ ಸಾಮವೇದದ ಯಥಾರ್ಥವಾದ ಅಭಿಪ್ರಾಯವನ್ನು ಕೇಳುವಂತೆ ಪ್ರೇರಿಸಿದಳು. ಆ ದೇವಿಯ ಅಪ್ಪಣೆಯಂತೆ ಸಾಮವೇದವು ತನ್ನ ಶಿರಸ್ಸಿನಲ್ಲಿ ಅಂಜಲಿಯನ್ನಿಟ್ಟು ದೇವಿಗೆ ವಂದಿಸುತ್ತಾ ಆ ತುಂಬಿದ ದೇವಸಭೆಯಲ್ಲಿ ಈರೀತಿ ನುಡಿಯಿತು. ॥೧-೨॥

"ಮಹಾದೇವನು ಅಗ್ನಿರೂಪನು. ಅಂತಹ ದೇವದೇವನು ನನಗೆ ಜ್ಞಾನಪ್ರದ.

ಗೃಣಾಮಿ ವಚಸಾ ಸಾವ್ನಾ ಮನಸೈವ ಮಹೇಶ್ವರಂ ।
ಸವಿತುರ್ಭಾಸಕಂ ತೇಜೋ ಭರ್ಗಮೇವಮುಪಾಸ್ಮಹೇ ॥೪॥

ಸ ಧಿಯಾ ಸರ್ವಜಂತೂನಾಂ ಯೋ ನಃ ಸಮ್ಯಕ್ಪ್ರಚೋದಯಾತ್ ।
ಭೂರ್ಭುವಸ್ಸ್ವಸ್ತಥಾ ಸತ್ಯಂ ಸ ಏವ ಪರಮೇಶ್ವರಃ ॥೫॥

ತದ್ಯೋ ಗಾಯಾಮಿ ದೇವೇಶಂ ಪುರುಷಂ ಪರಮೇಶ್ವರಂ ।
ಆವಿರಾಜಿತಮೇವೇಶಮಧ್ವರಸ್ಯ ಮಹೇಶ್ವರಂ ॥೬॥

ಹೋತಾರಂ ಸತ್ಯಯಜಂ ದೇವಂ ರೋದಸ್ಯೋರೀಶ್ವರಂ ಪರಂ ।
ಅಗ್ನಿಮೇವ ವಿರೂಪಾಕ್ಷಂ ಮರಣಾತ್ಪೂರ್ವಮೀಶ್ವರಂ ॥೭॥

ಹಿರಣ್ಯರೂಪಂ ದೇವೇಶಂ ಕೃಣುಧ್ವಮವಸೇ ಸುರಾಃ ।
ಅಧೀಪತಿರ್ನಿತ್ರಪತಿಃ ಶಿವಕ್ಷೇತ್ರಪತಿಸ್ಸುರಾಃ ॥೮॥

---

ನಾಗಲಿ. ದೇವತೆಗಳಿಗೆ ಹವ್ಯವನ್ನು ಅನುಗ್ರಹಿಸುತ್ತಾ ತಾನೂ ಈಶ್ವರರೂಪದಿಂದ ಹವ್ಯವನ್ನು ಸ್ವೀಕರಿಸುತ್ತಾ ಇರುವ ಪರಮಾತ್ಮನನ್ನು ಸಾಮಗಾನದಿಂದಲೇ ಮನಃಪೂರ್ವಕವಾಗಿ ಪ್ರಾರ್ಥಿಸುವೆನು. ಆ ಪರಶಿವನು ಸೂರ್ಯನಿಗೂ ತೇಜಸ್ಸನ್ನು ಕೊಡುವವನು. ಅಂತಹ ಭರ್ಗದೇವತಾರೂಪಿಯಾದ ಪರಶಿವನನ್ನು ಸದಾ ಧ್ಯಾನಿಸುವೆನು. ॥೩-೪॥

ಭೂಲೋಕ, ಭುವರ್ಲೋಕ, ಸ್ವರ್ಲೋಕ ಇವುಗಳಲ್ಲಿರುವ ಸಮಸ್ತ ಜಂತುಗಳನ್ನೂ, ನಿಮ್ಮನ್ನೂ ಯಾರು ತಪ್ಪದೆ ರಕ್ಷಿಸುವರೋ ಅಂತಹ ಪರಮೇಶ್ವರ ನನ್ನು ಕುರಿತು ನಾನು ಸದಾ ಧ್ಯಾನಮಾಡುವೆನು. ಯಾಗದಲ್ಲಿ ಮಹೇಶ್ವರ ರೂಪದಿಂದ ಪ್ರಕಾಶಿಸುವ ಪುರುಷಶ್ರೇಷ್ಠನಾದ ಪರಮೇಶ್ವರನನ್ನು ಸದಾ ಧ್ಯಾನ ಮಾಡುವೆನು. ॥೫-೬॥

ಯಾಗದಲ್ಲಿ ಹೋತೃರೂಪದಿಂದಿರುವವನೂ ಪರಶಿವನೇ. ಭೂಮ್ಯಂತರಿಕ್ಷ ಗಳಿಗೆಲ್ಲಾ ಸ್ವಾಮಿಯುಂಶಿರುವವನೂ, ಮರಣಾದಿಗಳಿಂದ ರಹಿತನಾಗಿ ಅಗ್ನಿನೇತ್ರ ದಿಂದಲೂ, ಹಿರಣ್ಯರೂಪದಿಂದಲೂ ವಿರಾಜಿಸುವ ದೇವದೇವನೂ, ಸಕಲ ದೇವತೆ ಗಳನ್ನೂ ರಕ್ಷಿಸುವವನೂ ಶಂಕರನೇ. ಸೂರ್ಯಾದಿಗ್ರಹಗಳಿಗೂ, ಶಿವಕ್ಷೇತ್ರಗಳಿಗೂ ಅಧಿಪತಿಯೆನಿಸಿರುವ ಮಹೇಶ್ವರನೇ, ನಿಜವಾಗಿಯೂ ದೇವಶ್ರೇಷ್ಠನು. ॥೭-೮॥

ಶಿವೋ ಧನಪತಿಶ್ಶಂಭುಃ ಸುವಃ ಪತಿರಪೀಶ್ವರಃ ।
ನಮಸ್ತಸ್ಮೈ ಮಹೇಶಾಯ ನಮಸ್ತಸ್ಮೈ ಕಪರ್ದಿನೇ ॥೯॥

ತ್ರ್ಯಂಬಕಾಯ ನಮಸ್ತಸ್ಮೈ ಕ್ರವ್ಯೇಭ್ಯಶ್ಚ ನಮೋನಮಃ ।
ಅನ್ನಾಯ ಚ ನಮೋ ನಿತ್ಯಂ ಅನ್ನಾಧಿಪತಯೇ ನಮಃ ॥೧೦॥

ಏಕಾಕ್ಷಾಯಾವಪನ್ನಾಯ ರುದ್ರಾಯ ತ್ರಿಸದನ್ನಿತೇ ।
ಸಂವೃತೇ ವಿವೃತೇ ಚೈವ ಪ್ರತ್ಯಶ್ರಾವ್ಯೇ ನಮೋ ನಮಃ ॥೧೧॥

ಕ್ರವ್ಯೇಭ್ಯಶ್ಚ ವಿರಿಂಚೇಭ್ಯೋ ಮೃಡಾಯ ಚ ನಮೋನಮಃ ।
ಮಯಿ ಮನ್ಯುಂ ಕ್ಷಮಸ್ವೇಶ ದೋಹಂ ಗಾಯಾಮಿ ಶಂಕರ ॥೧೨॥

ಇಡೇ ಭಾಂ ತವ ದೇವೇಶ ಮಾಂ ರಕ್ಷಸ್ವ ಮಹೇಶ್ವರ ।
ತ್ವಾಮರ್ಚಯಾಮಿ ದೇವೇಶಂ ಪರಮಾತ್ಮಾನಮೀಶ್ವರಂ ॥೧೩॥

ಯ ಇದಂ ವಿಶ್ವಭೂತಂ ಚ ತ್ವಯ್ಯೇವ ಲಯಮೇಷ್ಯತಿ ।
ನಮೋ ನಮಸ್ತೇ ದೇವೇಶ ನಮಸ್ತೇಸ್ತು ಸದಾ ಮಮ ॥೧೪॥

---

ಶಿವನೇ ಧನಾಧಿಪತಿಯು, ಸುಖಕರನು, ಸ್ವರ್ಲೋಕಾಧಿಪತಿಯು, ಅಂತಹ ಮಹೇಶ್ವರನೂ, ಜಟಾಧಾರಿಯೂ ಆದ ಮಹೇಶ್ವರನಿಗೆ ವಂದಿಸುವೆನು. ತ್ರಿಲೋಚನನೂ, ಮಾಂಸಭಕ್ಷಕರಾದ ರಾಕ್ಷಸರಿಗೆ ಅಧಿಪತಿಯೂ, ಪ್ರಾಣಿಗಳಿಗೆ ಆಹಾರವಸ್ತುವೆನಿಸಿರುವವನೂ, ಆಹಾರವಸ್ತುಗಳಿಗೆ ಅಧಿಪತಿಯೂ ಆಗಿರುವ ಮಹೇಶ್ವರನಿಗೆ ವಂದನೆಯು. ॥೯-೧೦॥

ಪ್ರಪಂಚಕ್ಕೆ ಒಂದು ಕಣ್ಣಿನಂತಿರುವ, ಎಂದೂ ಕಷ್ಟಕ್ಕೆ ಸಿಕ್ಕದಿರುವ, ರುದ್ರರೂಪನಾಗಿ ದೇವತೆಗಳ ಸಭೆಯಲ್ಲಿ ವಿರಾಜಿಸುತ್ತಾ, ಸರ್ವವನ್ನೂ ಮುಚ್ಚಿ, ತೆರೆದು ಇಡುವ ಶಕ್ತಿಸಾಮರ್ಥ್ಯಗಳುಳ್ಳ ರಾಕ್ಷಸರಿಗೂ, ಕಲ್ಪಭೇದದಿಂದ ಬೇರೆ ಬೇರೆಯಾಗಿ ತೋರಿಬರುವ ಬ್ರಹ್ಮರಿಗೂ, ಸುಖಪ್ರದರೂಪಿಯಾಗಿಯೂ ಇರುವ ಮಹಾದೇವನನ್ನು ಧ್ಯಾನಿಸಿ, ಅಂತಹ ಮಹಾನುಭಾವನು ನನಗೆ ಆನಂದವನ್ನು ಕೊಟ್ಟು ಅಪರಾಧವನ್ನು ಕ್ಷಮಿಸಬೇಕೆಂದು ಸದಾ ಪ್ರಾರ್ಥಿಸುವೆನು. ॥೧೧-೧೨॥

ಮಹೇಶ್ವರನೇ, ನಿನ್ನನ್ನೇ ನಾನು ಸದಾ ಧ್ಯಾನಿಸುವೆನು. ನನ್ನನ್ನು ರಕ್ಷಿಸುತ್ತಿರು. ಪರಮಾತ್ಮನೂ, ಈಶ್ವರನೂ ಎನಿಸಿದ ನಿನ್ನನ್ನೇ ನಾನು ಸದಾ ಪೂಜಿಸು

ಚಂದ್ರರೂಪಾಯ ಚ ನಮೋ ಶುಕ್ರರೂಪಾಯ ತೇ ನಮಃ ।
ಮಖಾಯ ಚ ನಮಸ್ತುಭ್ಯಂ ಓಜಸೇ ತೇ ನಮೋ ನಮಃ ॥೧೫॥

ಸಹಸೇ ತೇ ನಮಸ್ತುಭ್ಯಂ ಋತವೇ ತೇ ನಮೋನಮಃ ।
ಬೃಹತೇ ತೇ ನಮಸ್ತುಭ್ಯಂ ಸುರಾಯ ಚ ನಮೋನಮಃ ॥೧೬॥

ಜ್ಯೋತಿಷೇ ತೇ ನಮಸ್ತುಭ್ಯಂ ತ್ವಾಂ ದಧೇ ಹೃದಯೇ ಸದಾ ।
ಏಭಿರ್ನಾಮಭಿರೇವೇಶಂ ಸ್ತೋತ್ರೈರ್ಗಾಯಾಮಿ ಶಂಕರಂ ॥೧೭॥

ಓಹಯಿತ್ವಾ ಮಹಾದೇವಂ ವಹಾಮಿ ಪರಮೇಶ್ವರಂ ।
ಸ ತೇ ವಾಚಂ ಮಹಾದೇವ ಕರವಾಣಿ ಸಮರ್ಚನಂ ॥೧೮॥

ಓಂ ವಾಗ್ಘಾ ತವ ದೇವೇಶ ಸರ್ವಭಾಸಕರೀ ಪ್ರಭೋ ।
ಸೋಮೋಯಂ ಜನಿತಾ ದೇವಃ ಪವತೇ ಶಂಕರಃ ಸ್ವಯಂ ॥೧೯॥

---

ವೆನು. ಈ ಅಖಂಡ ಪ್ರಪಂಚವು ನಿನ್ನಲ್ಲಿಯೇ ಲಯಹೊಂದುವುದು. ದೇವೇಶನೇ, ನಿನಗೆ ನಮಸ್ಕಾರ, ಚಂದ್ರರೂಪನೂ, ಶುಕ್ರರೂಪನೂ, ಯಜ್ಞಸ್ವರೂಪಿಯೂ, ಓಜೋರೂಪಿಯೂ ಆದ ಪರಶಿವನೇ, ನಿನಗೆ ವಂದನೆಗಳು. ॥೧೩-೧೪-೧೫॥

ಗ್ರೀಷ್ಮಋತುವಿನಂತೆಯೂ, ಬೃಹದ್ರೂಪದಂತೆಯೂ ತೋರಿಬರುವ ಸಕಲ ದೇವತಾತ್ಮಕನೇ, ನಿನಗೆ ವಂದನೆಗಳು. ನಕ್ಷತ್ರರೂಪಿಯಾಗಿಯೂ, ಜ್ಯೋತೀರೂಪ ದಿಂದಲೂ ಜಗತ್ತನ್ನು ವ್ಯಾಪಿಸಿರುವ ಮಹಾದೇವನಿಗೆ ವಂದನೆಗಳು. ಆಯಾ ರೂಪದ ನಾಮಗಳಿಂದಲೇ ನಾನು ನಿನ್ನನ್ನು ಸದಾ ಗಾನರೂಪದಿಂದ ಧ್ಯಾನಮಾಡು ತ್ತಿರುವೆನು. ॥೧೬-೧೭॥

ನಾನು ಸಕಲ ಸ್ತೋತ್ರಗಳಿಂದಲೂ ಮಹಾದೇವನನ್ನೇ ಸ್ತುತಿಸುತ್ತಾ ಸದಾ ಅವನನ್ನು ಧರಿಸಿಕೊಂಡಿರುವೆನು. ಆ ನಿನ್ನ ಮಾತಿನಿಂದಲೇ ನಿನ್ನ ಅರ್ಚನೆಯನ್ನು ನಡೆಸುವೆನು. ಆ ನಿನ್ನ ವಾಗ್ರೂಪವಾದ ತೇಜಸ್ಸು ಸಮಸ್ತ ತೇಜಸ್ಸುಗಳಿಗೂ ಮೂಲಭೂತವಾದದ್ದು. ವಾಯುರೂಪದಿಂದ ಜಗತ್ತಿನಲ್ಲೆಲ್ಲಾ ಸುತ್ತುವ ಗಾಳಿಗೆ ಜನಕನೂ ಈ ಶಂಕರನೇ. ॥೧೮-೧೯॥

ಸೋಮೋಽಯಂ ಜನಿತಾ ದೇವೋ ಮತೀನಾಂ ಪರಮೇಶ್ವರಃ ।
ಸೋಮೋಽಯಂ ಜನಿತಾ ದೇವೋ ದಿವಶ್ಯಂಕರ ಈಶ್ವರಃ ॥೨೦॥

ಸೋಮೋಽಯಂ ಜನಿತಾ ದೇವೋ ಪೃಥಿವ್ಯಾಃ ಪರಮೇಶ್ವರಃ ।
ಸೋಮೋಽಯಂ ಜನಿತಾ ದೇವೋ ಅಗ್ನೇಸ್ಸಾಕ್ಷಾನ್ಮಹೇಶ್ವರಃ ॥೨೧॥

ಸೋಮೋಽಯಂ ಜನಿತಾ ದೇವೋ ಇಂದ್ರಸ್ಯ ಚ ಸದಾಶಿವಃ ।
ಸೋಮೋಽಯಂ ಜನಿತಾ ದೇವೋ ವಿಷ್ಣೋಶ್ಚಾಪಿ ತ್ರಿಯಂಬಕಃ ॥೨೨॥

ಏಷಾಂತರೋ ಮಹಾದೇವ ಆದಿತ್ಯೇ ದೃಶ್ಯತೇ ವಿಭುಃ ॥೨೩॥

ಹಿರಣ್ಯಶ್ಮಶ್ರುರೀಶಾನೋ ಹಿರಣ್ಮಯಸುಕೇಶವಾನ್ ।
ಸರ್ವ ಏವ ಸುವರ್ಣೋಽಯಂ ಶಿವೋದ್ಯಾತ್ಪ್ರಣವಾತ್ಪರಾಃ ॥೨೪॥

ಸೀಮಾ ಭೂಮಾ ಮಹಾನಾತ್ಮಾ ವಿಶ್ವರೂಪೋ ಮಹೇಶ್ವರಃ ।
ಕಂ ಖಂ ಬ್ರಹ್ಮೇಶ್ವರೋ ಹ್ಯೇಷ ಮಹಾದೇವಃ ಪ್ರಕಾಶತೇ ॥೨೫॥

ವೈಶ್ವಾನರಾತ್ಮಾ ತ್ರಿಮಧುಸ್ತ್ರಿಸುಪರ್ಣೋಽ ಹ್ಯತೀಂದ್ರಿಯಃ ।
ಅಪಾವೃತಂ ತದ್ವಾರಂ ಸದಾ ಪಶ್ಯಂತಿ ಸೂರಯಃ ॥೨೬॥

---

ಬುದ್ಧಿ, ಸ್ವರ್ಗ, ಭೂಮಿ, ಅಗ್ನಿ, ಇಂದ್ರ, ವಿಷ್ಣು ಇವರಿಗೆಲ್ಲಾ ಜನಕನೆನಿಸಿ, ಬೇರೆ ಬೇರೆಯಾದ ಶಕ್ತಿಯನ್ನಿಟ್ಟು, ಅವರನ್ನು ಪ್ರಭಾವಶಾಲಿಗಳನ್ನಾಗಿ ಮಾಡಿರುವವನೂ ಶಂಕರನೇ. ಇವನ ಅನುಗ್ರಹದಿಂದಲೇ ಇಂದು ಅವರೆಲ್ಲರೂ ದೇವಶ್ರೇಷ್ಠರೆನಿಸಿರುವರು. ಅಂತಹ ದೇವದೇವನೇ ಶಂಕರನು. ॥೨೦-೨೧-೨೨॥

ಸೂರ್ಯಮಂಡಲಮಧ್ಯವರ್ತಿಯಾಗಿ ಕಾಣುವ ಪರಮಾತ್ಮನೂ ಈತನೇ. ಹಿರಣ್ಯವರ್ಣದಿಂದಿರುವ ಮೀಸೆಯುಳ್ಳವನೂ, ಹಿರಣ್ಯದಂತೆ ರಂಜಿಸುವ ಕೇಶಪಾಶವುಳ್ಳವನೂ, ಆದಿಪ್ರಣವರೂಪಿಯೂ, ಪ್ರಕಾಶಮಾನವಾದ ವರ್ಣವುಳ್ಳವನೂ ಆದ ಪರಶಿವನೇ ಪ್ರಪಂಚಕ್ಕೆ ಒಂದು ಎಲ್ಲೆಯಂತಿರುವವನು. ಅವನೇ ಪ್ರಪಂಚರೂಪಿಯು. ಕಕಾರದಿಂದಲೂ, ಖಕಾರದಿಂದಲೂ ಬ್ರಹ್ಮ, ಅಂತರಿಕ್ಷನೆನಿಸಿ ಅವುಗಳಿಗೆ ಪತಿಯೆನಿಸಿರುವವನು ಈ ಮಹಾದೇವನೊಬ್ಬನೇ. ಅವನೇ ಸ್ವಯಂಪ್ರಕಾಶಕನು. ॥೨೩-೨೪-೨೫॥

ಅಗ್ನಿರೂಪಿಯೂ, ಋತುತ್ರಯಾಂತರ್ಗತನೂ, ಮೂರ್ತಿತ್ರಯಾತ್ಮಕನೂ, ಅತೀಂದ್ರಿಯನೂ, ಆಗಿರುವ ಪರಮೇಶ್ವರನನ್ನು ತಮ್ಮ ಹೃದಯಕುಹರದಲ್ಲಿಟ್ಟು

ವಿರಾಟ್ ಸ್ವರಾಟ್ ತದಾ ಸಂರಾಟ್ ಭಗವಾನ್ ರುದ್ರ ಏವ ಹಿ ।
ಯುಂಜೇ ತ್ವತ್ಪದಯೋರ್ವಾಚಂ ಗಾಯೇ ತ್ವಾ ಶತವರ್ತನಂ ॥೨೭॥

ಮಾಹೇಂದ್ರಾತ್ಮಾ ವಾಮದೇವ್ಯೋ ಜ್ಯೇಷ್ಠೋ ರಾಜನ ಹಿಂಕೃತಃ ।
ವೈರೂಪ ವೈಶ್ವರೂಪಾತ್ಮಾ ಸರ್ವಾತ್ಮಾ ಪರಮೇಶ್ವರಃ ॥೨೮॥

ಮಹಾವೈರಾಜಸುಪ್ರೀತೋ ವೈಶ್ವಾಮಿತ್ರಸ್ತು ತಂ ಶಿವಃ ।
ಅಷ್ಟಾದಂಷ್ಟ್ರರವಪ್ರೀತೋ ಏಷ ಏವ ಮಹೇಶ್ವರಃ ॥೨೯॥

ಯಜಧ್ವಂ ಶ್ರೀಮಹಾದೇವಂ ಲಭಧ್ವಂ ಮುಕ್ತಿಮುತ್ತಮಾಂ ।
ಸತ್ಯಂ ಮದ್ವಚನಂ ದೇವಾಃ ಮಹಾದೇವೋಸ್ಯ ಭಾಗಭುಕ್ ॥೩೦॥

॥ ಸೂತ ಉವಾಚ ॥

ಪ್ರಯಾತ ಶರಣಂ ದೇವಾಃ ಸದಕ್ಷಾ ಯೂಯಮೀಶ್ವರಂ ।
ಸತ್ಯಂ ಸತ್ಯಂ ಪುನಸ್ಸತ್ಯಂ ಉದ್ಧೃತ್ಯ ಭುಜಮುಚ್ಯತೇ ॥೩೧॥

---

ತಮ್ಮ ಜ್ಞಾನದೃಷ್ಟಿಯಿಂದ ವಿದ್ವಾಂಸರಾದವರು ಸದಾ ಧ್ಯಾನಮಾಡುತ್ತಿರುವರು. ವಿಶೇಷ ರೂಪದಿಂದಲೂ, ವಿಶೇಷ ತೇಜಸ್ಸಿನಿಂದಲೂ, ಪ್ರಪಂಚಕ್ಕೆ ಅಧಿಪತಿಯೆನಿಸಿರುವವನೂ ಈ ಮಹಾದೇವನೇ. ಇಂತಹ ನಿನ್ನ ಪಾದಗಳಲ್ಲಿಯೇ ನಾನು ಸದಾ ನೆಲಸಿ, ಅದನ್ನೇ ಪೂಜಿಸುತ್ತಾ, ನಿನ್ನ ನಾಮಗಳನ್ನೇ ಅನೇಕಾವರ್ತಿ ಸಾಮಗಾನಗಳಿಂದ ಸ್ತೋತ್ರಮಾಡುವೆನು. ॥೨೬-೨೭॥

ವಾಮದೇವಸಾಮವು ಮಹೇಂದ್ರಾತ್ಮಕವಾದದ್ದು. ರಾಜನ ಸಾಮದ ಹಿಂಕಾರವು ಜ್ಯೇಷ್ಠದೇವತಾಕವು. ವೈರೂಪವೇ ವಿಶ್ವರೂಪಾತ್ಮಕವಾದುದು. ಪರಶಿವನೇ ಸರ್ವಸಾಮರೂಪನು. ಮಹಾವೈರಾಜಸಾಮದಿಂದಲೇ ವಿಶ್ವಾಮಿತ್ರನೆನಿಸಿದ ಮಹಾದೇವನು ತೃಪ್ತಿಹೊಂದುವನು. ಅಷ್ಟಾದಂಷ್ಟ್ರಸಾಮರವದಿಂದ ಸುಪ್ರೀತನಾಗುವವನು ಮಹೇಶ್ವರನೊಬ್ಬನೇ. ಎಲೈ ದೇವತೆಗಳಿರಾ, ನೀವು ಇನ್ನು ಮುಂದೆ ತಪ್ಪದೆ ಮಹಾದೇವನನ್ನೇ ಭಕ್ತಿಯಿಂದ ಆರಾಧಿಸಿರಿ. ಅದರಿಂದ ನಿಮಗೆ ಮುಕ್ತಿಯು ದೊರಕುವುದು. ಈ ನನ್ನ ಮಾತನ್ನು ನಿಜವೆಂದು ನಂಬಿರಿ. ಈ ನನ್ನ ಮಾತಿಗೆ ಮಹೇಶ್ವರನೇ ಪ್ರಮಾಣನು. ॥೨೮-೨೯-೩೦॥

ಎಲೈ ದೇವತೆಗಳಿರಾ, ದಕ್ಷಬ್ರಹ್ಮನೇ, ನೀವು ಅಜ್ಞಾನಿಗಳು, ನೀವು ಈಗ

ಇತ್ಯುಕ್ತ್ವಾ ಮೌನಮಾತಿಷ್ಠತ್ಸಾಮವೇದಸ್ತದಾ ಮುದಾ ।
ಸಹಸ್ರಶಾಖೋ ದ್ಯುತಿಮಾನ್ ಶಿವಪ್ರಿಯಕರಸ್ಸದಾ ॥೩೨॥

॥ ಸತ್ಯುವಾಚ ॥

ವದ ತ್ವಮಿಹಾಥರ್ವಣವೇದ ಸತ್ಯಂ ವದಾಧುನಾ ।
ಶೃಣ್ವತಾಂ ಸರ್ವದೇವಾನಾಂ ಯತ್ತೇ ಹೃದ್ಗತಮಾದರಾತ್ ॥೩೩॥

ಸ ಸತ್ಯಾ ವಚನಂ ಶ್ರುತ್ವಾ ವೇದೋಽಥರ್ವಾಬ್ರವೀತ್ತದಾ ।
ಮೌಲಿಬದ್ಧಾಂಜಲಿಪುಟಸ್ತದಾ ತತ್ರ ಮುನೀಕ್ಷಿತಂ ॥೩೪॥

॥ ಅಥರ್ವಣ ವೇದ ಉವಾಚ ॥

ಓಂ ಯೋ ವೈ ರುದ್ರಸ್ಸಭಗವಾನ್ ಯಶ್ಚ ಬ್ರಹ್ಮಾತಸ್ಮೈ ವೈ ನಮೋನಮಃ ॥೩೫॥
ಯೋ ವೈ ರುದ್ರಸ್ಸಭಗವಾನ್ ಯಶ್ಚ ವಿಷ್ಣುಸ್ತಸ್ಮೈ ವೈ ನಮೋನಮಃ॥೩೬॥

---

ಮಾಡಿರುವ ಅಪರಾಧಕ್ಕಾಗಿ ಈಗಲೇ ಪರಶಿವನನ್ನು ಮೊರೆಹೊಗಿರಿ. ಈ ನನ್ನ ಮಾತನ್ನು ನಂಬಿರಿ. ಅಕ್ಷರಶಃ ನನ್ನ ಮಾತನ್ನು ನಿಜವೆಂದು ತೋಳೆತ್ತಿ ಪ್ರಮಾಣ ಮಾಡುವೆನು." ಎಂದು ಸಾಮವೇದವು ಹೇಳಿ ಸುಮ್ಮನಾಯಿತು. ಸಹಸ್ರ ಶಾಖೆಗಳಿಂದಲೂ, ನಾನಾವಿಚಾರಗಳಿಂದಲೂ, ಕೂಡಿ ಶಿವಪ್ರಿಯನಾಗಿರುವ ಸಾಮವೇದವು ಶಿವನನ್ನೇ ಸರ್ವೋತ್ಕೃಷ್ಟನೆಂದು ಹೊಗಳಿ ಶಾಂತವಾಗಲು, ಮತ್ತೆ ಸತೀದೇವಿಯು ಅಥರ್ವಣವೇದವನ್ನು ಕುರಿತು ಈರೀತಿ ಹೇಳಿದಳು. ॥೩೧-೩೨॥

"ಎಲೈ ಅಥರ್ವಣವೇದವೇ, ನೀನು ಶಿವನವಿಷಯದಲ್ಲಿ ಏನಭಿಪ್ರಾಯ ಕೊಡುವೆ? ನಿಜವನ್ನು ಹೇಳು. ಅದನ್ನು ಇಲ್ಲಿರುವ ಸಕಲದೇವತೆಗಳೂ ಕೇಳಲಿ. ಮುಚ್ಚುಮರೆ ಬೇಡ" ಎನ್ನಲು, ಆ ಸತೀದೇವಿಯ ಮಾತುಗಳನ್ನು ಕೇಳಿ ಅಥರ್ವಣವೇದವು ಭಯಭಕ್ತಿಯಿಂದ ನಿಂತು ಕೈಜೋಡಿಸಿ ಅಂಜಲಿಯನ್ನು ತಲೆಯ ಮೇಲಿಟ್ಟು ಈ ರೀತಿ ಹೇಳತೊಡಗಿತು. ॥೩೩-೩೪॥

"ಬ್ರಹ್ಮಸ್ವರೂಪನೂ, ರುದ್ರರೂಪನೂ, ವಿಷ್ಣುವಿನ ಆಕಾರದವನೂ, ಉಮಾದೇವಿಯ ಆಕಾರರಂಜಿತನೂ ಆಗಿರುವ ದೇವರೆಂದರೆ ಪರಮೇಶ್ವರನೇ. ಅವನೇ ಷಡ್ಗುಣೈಶ್ವರ್ಯಸಂಪನ್ನನು. ಅಂತಹ ಆ ಪರಬ್ರಹ್ಮನಿಗೆ ವಂದನೆಗಳು. ॥೩೫-೩೬-೩೭॥

ಯೋ ವೈ ರುದ್ರಸ್ಸಭಗವಾನ್ ಯಶ್ಚ ರುದ್ರಸ್ತಸ್ಮೈ ವೈ ನಮೋನಮಃ ।
ಯೋ ವೈ ರುದ್ರಸ್ಸಭಗವಾನ್ ಯಾ ಚೋಮಾ ತಸ್ಮೈ ವೈ ನಮೋನಮಃ ॥೩೭॥

ಯೋ ವೈ ರುದ್ರಃ ಸ ಭಗವಾನ್ ಯಶ್ಚವಿನಾಯಕಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚಸ್ಕಂದಸ್ತಸ್ಮೈ ವೈ ನಮೋನಮಃ॥೩೮॥

ಯೋ ವೈ ರುದ್ರಸ್ಸಭಗವಾನ್ ಯಶ್ಚೇಂದ್ರಸ್ತಸ್ಮೈ ವೈ ನಮೋನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚಾಗ್ನಿಸ್ತಸ್ಮೈ ವೈ ನಮೋನಮಃ ॥೩೯॥

ಯೋ ವೈ ರುದ್ರಸ್ಸಭಗವಾನ್ ಯಶ್ಚ ವಾಯುಸ್ತಸ್ಮೈ ವೈ ನಮೋನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ವರುಣಸ್ತಸ್ಮೈ ವೈ ನಮೋನಮಃ ॥೪೦॥

ಯೋ ವೈ ರುದ್ರಸ್ಸಭಗವಾನ್ ಯಶ್ಚ ಯಮಸ್ತಸ್ಮೈ ವೈ ನಮೋನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ನಿಋುಋುತಿ ಸ್ತಸ್ಮೈ ವೈ ನಮೋ ನಮಃ ॥೪೧॥

ಯೋ ವೈ ರುದ್ರಸ್ಸಭಗವಾನ್ ಯಶ್ಚ ಈಶಾನಸ್ತಸ್ಮೈ ವೈ ನಮೋನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ಕುಬೇರಸ್ತಸ್ಮೈ ವೈ ನಮೋನಮಃ ॥೪೨॥

ಯೋ ವೈ ರುದ್ರಸ್ಸಭಗವಾನ್ ಯಶ್ಚಸೂರ್ಯಸ್ತಸ್ಮೈ ವೈ ನಮೋನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚಸೋಮಸ್ತಸ್ಮೈ ವೈ ನಮೋನಮಃ ॥೪೩॥

---

ವಿನಾಯಕ, ಕುಮಾರಸ್ವಾಮಿ, ಇಂದ್ರ, ಅಗ್ನಿ, ಯಮ, ವಾಯು, ವರುಣ, ನಿಋುಋುತಿ, ಈಶಾನ, ಕುಬೇರ ಈ ಹೆಸರುಗಳಿಂದ ಜಗತ್ತನ್ನೇ ವ್ಯಾಪಿಸಿರುವ ಮಹಾಮಹಿಮನಾದವನು ಶಂಕರನೇ. ಅಂತಹ ಮಹಾದೇವನಿಗೆ ವಂದಿಸುವೆನು. ಮತ್ತು ಪುನಃ ಪುನಃ ನಮಸ್ಕಾರ ಮಾಡುವೆನು. ॥೩೮-೩೯-೪೦-೪೧-೪೨॥

ಸೂರ್ಯ, ಚಂದ್ರ, ನಕ್ಷತ್ರಗಳು, ಉಳಿದ ಋಜಾದಿಗಳು, ಧೂಮಾದಿಪ್ರತಿಗ್ರಹಗಳೂ, ಮಹರ್ಷಿಗಳೂ, ಅಷ್ಟವಸುಗಳೂ, ದ್ವಾದಶಾದಿತ್ಯರೂ, ಏಕಾದಶರುದ್ರರೂ,

ಯೋ ವೈ ರುದ್ರಸ್ಸಭಗವಾನ್ ಯಾನಿ ಚ ನಕ್ಷತ್ರಾಣಿ ತಸ್ಮೈ ವೈ ನಮೋ
ನಮಃ ।
ಯೋ ವೈ ರುದ್ರಸ್ಸಭಗವಾನ್ ಯೇ ಚಾಷ್ಟೌ ಗ್ರಹಾಸ್ತಸ್ಮೈ ವೈ ನಮೋ
ನಮಃ ॥೪೪॥
ಯೋ ವೈ ರುದ್ರಸ್ಸಭಗವಾನ್ ಯೇ ಚಾಷ್ಟೌ ಪ್ರತಿಗ್ರಹಾಸ್ತಸ್ಮೈ ವೈ
ನಮೋನಮಃ ॥೪೫॥
ಯೋ ವೈ ರುದ್ರಸ್ಸಭಗವಾನ್ ಯೇ ಚ ಋಷಯಸ್ತಸ್ಮೈ ವೈ ನಮೋ
ನಮಃ ।
ಯೋ ವೈ ರುದ್ರಸ್ಸಭಗವಾನ್ ಯೇ ಚಾಷ್ಟೌ ವಸವಸ್ತಸ್ಮೈ ವೈ ನಮೋ
ನಮಃ ॥೪೬॥
ಯೋ ವೈ ರುದ್ರಸ್ಸಭಗವಾನ್ ಯೇ ಚ ದ್ವಾದಶಾದಿತ್ಯಾಸ್ತಸ್ಮೈ ವೈ ನಮೋ
ನಮಃ ।
ಯೋ ವೈ ರುದ್ರಸ್ಸಭಗವಾನ್ ಯೇ ಚೈಕಾದಶ ರುದ್ರಾಸ್ತಸ್ಮೈ ವೈ
ನಮೋ ನಮಃ ॥೪೭॥
ಯೋ ವೈ ರುದ್ರಸ್ಸಭಗವಾನ್ ಯಾ ಚ ಪೃಥಿವೀ ತಸ್ಮೈ ವೈ ನಮೋ
ನಮಃ ।
ಯೋ ವೈ ರುದ್ರಸ್ಸಭಗವಾನ್ ಯಾಶ್ಚಾಪಸ್ತಸ್ಮೈ ವೈ ನಮೋ ನಮಃ॥೪೮॥
ಯೋ ವೈ ರುದ್ರಸ್ಸಭಗವಾನ್ ಯಶ್ಚ ತೇಜಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ವಾಯುಸ್ತಸ್ಮೈ ವೈ ನಮೋ ನಮಃ
॥೪೯॥
ಯೋ ವೈ ರುದ್ರಸ್ಸಭಗವಾನ್ ಯಶ್ಚಾಕಾಶ ಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಾ ಚ ಭೂಸ್ತಸ್ಮೈ ವೈ ನಮೋ ನಮಃ॥೫೦॥

---

ಪೃಥಿವೀ, ಜಲ ಮುಂತಾದ ವಸ್ತುಗಳೆಲ್ಲವೂ ಪರಶಿವನ ಸ್ವರೂಪಗಳೇ. ಇಂತಹ ವಸ್ತುಸ್ವರೂಪಗಳಾದ ಪರಶಿವನಿಗೆ ಸದಾ ನಮಸ್ಕಾರ ಮಾಡುವೆನು. ॥೪೩-೪೪-೪೫-೪೬-೪೭-೪೮॥

ತೇಜಸ್ಸು, ವಾಯು, ಆಕಾಶ, ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕ, ಪಂಚಪ್ರಾಣಗಳು

ಯೋ ವೈ ರುದ್ರಸ್ಸಭಗವಾನ್ ಯಶ್ಚ ಭುವಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ಸುವಸ್ತಸ್ಮೈ ವೈ ನಮೋನಮಃ ॥೫೧॥

ಯೋ ವೈ ರುದ್ರಸ್ಸಭಗವಾನ್ ಯಶ್ಚ ಮಹಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ಜನಸ್ತಸ್ಮೈ ವೈ ನಮೋ ನಮಃ ॥೫೨॥

ಯೋ ವೈ ರುದ್ರಸ್ಸಭಗವಾನ್ ಯಶ್ಚ ತಪಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಚ್ಚ ಸತ್ಯಂ ತಸ್ಮೈ ನಮೋ ನಮಃ ॥೫೩॥

ಯೋ ವೈ ರುದ್ರಸ್ಸಭಗವಾನ್ ಯಶ್ಚ ಯೇ ಚ ಪ್ರಾಣಾಸ್ತಸ್ಮೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಚ್ಚ ಮನಸ್ತಸ್ಮೈ ವೈ ನಮೋ ನಮಃ ॥೫೪॥

ಯೋ ವೈ ರುದ್ರಸ್ಸಭಗವಾನ್ ಯಚ್ಚ ಸರ್ವೇಂದ್ರಿಯಾಣಿತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಶ್ಚ ಕಾಲಸ್ತಸ್ಮೈ ವೈ ನಮೋ ನಮಃ ॥೫೫॥

ಯೋ ವೈ ರುದ್ರಸ್ಸಭಗವಾನ್ ಯಶ್ಚ ಮೃತ್ಯುಸ್ತಸ್ಮೈ ವೈ ನಮೋ ನಮಃ ।
ಯೋ ವೈ ರುದ್ರಸ್ಸಭಗವಾನ್ ಯಚ್ಚ ಭೂತಂ ಭವ್ಯಂ ಭವಿಷ್ಯತ್ತಸ್ಮೈ ನಮೋ ನಮಃ ॥೫೬॥

ಓಮಾದೌ ತಥಾಂತೇ ಚ ಭೂರ್ಭುವಸ್ಸ್ವಸ್ತ್ರಿರೋಂಕೃತಿಃ ।
ಬ್ರಹ್ಮೈಕತ್ವಂ ತ್ರಿಧೋರ್ಧ್ವಂ ತ್ವಂ ಗತಿಃ ಪುಷ್ಟಿರ್ಮಹೇಶ್ವರಃ ॥೫೭॥

---

ಮನಸ್ಸು, ಸಕಲ ಇಂದ್ರಿಯಗಳು, ಕಾಲ, ಮೃತ್ಯು, ಭೂತಭವಿಷ್ಯದ್ವರ್ತಮಾನ ಕಾಲಗಳು ಇವೆಲ್ಲವೂ ಪರಬ್ರಹ್ಮಸ್ವರೂಪಗಳೇ. ಏತದ್ರೂಪಿಯಾಗಿರುವ ಭಗವಂತನೆನಿಸಿದ ಮಹಾದೇವನಿಗೆ ಸರ್ವದಾ ನಮಸ್ಕಾರಮಾಡುವೆನು. ಅವನೇ ನನ್ನ ಆರಾಧ್ಯದೈವನು. ॥೪೯-೫೦-೫೧-೫೨-೫೩-೫೪-೫೫-೫೬॥

ಓಂಕಾರಾದಿಯಾದ, ಓಂಕಾರಾಂತವಾದ, ಓಂಕಾರ ಸಹಿತವಾದ ಭೂಃ, ಭುವಃ, ಸ್ವಃ ಎಂಬ ಪದಗಳೂ ಪರಶಿವನಸ್ವರೂಪವನ್ನೇ ಬೋಧಿಸುವುವು. ಈ

ವಿಶ್ವಂ ಚ ವಿಶ್ವಾತೀತಸ್ತ್ವಂ ಹುತಂ ಪ್ರಹುತಮೇವ ಚ ।
ಕೃತಂ ಚಾಕೃತಮೇತೇ ಚ ಪರಮಂ ಚ ಪರಾಯಣಂ ॥೫೮॥

ನಾರಾಯಣಾದಿಜನಕ ಆರ್ಯಮ್ಣೋ ವರುಣಸ್ಯ ಹಿ ।
ಜನಿತಾ ತ್ವಂ ತಥಾ ವಾಯೋರ್ದ್ಯಾವಾಭೂಮ್ಯೋರ್ಮಹೇಶ್ವರಃ ॥೫೯॥

ಸರ್ವೇಶಃ ಸರ್ವಸಾಕ್ಷೀ ಚ ಸರ್ವ ಏವ ತ್ವಮೇವ ಹಿ ।
ಅಗ್ರಾಹ್ಯಃ ಸರ್ವಭೂತೇಷು ಸರ್ವೇಂದ್ರಿಯಗುಣಾನ್ವಿತಃ ॥೬೦॥

ಅಲಿಂಗೋಽಸ್ಯ ಶರೀರಸ್ತ್ವಂ ವ್ಯಾಪಕಶ್ಚ ಸನಾತನಃ ।
ವಾಮನಂ ತ್ವಂ ಮಹಾದೇವಂ ಸರ್ವದೇವಾ ಉಪಾಸತೇ ॥೬೧॥

ತ್ವತ್ತೋ ಜಾತಂ ಜಗಚ್ಛಂಭೋ ಸ್ಥಿತಂ ತ್ವಯ್ಯೇವ ಲೀಯತೇ ।
ತ್ವತ್ತೋ ನಾಸ್ತಿ ಪೃಥಕ್ಕಿಂಚಿನ್ನ ಭಿನ್ನಂ ಪರಮಾರ್ಥತಃ ॥೬೨॥

---

ರೂಪದಿಂದಲೇ ಬ್ರಹ್ಮೈಕತ್ವವೂ, ತ್ರಿಪ್ರಕಾರದಿಂದ ಸರ್ವವ್ಯಾಪಿತ್ವವೂ ತೋರಿ ಬರುವುದು. ಸಮಸ್ತರಿಗೂ ದಿಕ್ಕಾಗಿ, ಪುಷ್ಟಿಯಾಗಿ, ಪ್ರಪಂಚರೂಪಿಯಾಗಿ ಪ್ರಪಂಚವನ್ನು ಮೀರಿ, ಹೋಮದ್ರವ್ಯರೂಪದಿಂದ, ಕೃತಕವಾದ ಮತ್ತು ಅಕೃತವಾದ ಕರ್ಮಯೋಗದಿಂದ, ಪರಮಸ್ವರೂಪನೂ, ಪರಾಯಣನೂ ಎನಿಸಿ ಮೆರೆಯುವವನೆಂದರೆ ಪರಶಿವನೊಬ್ಬನೇ. ॥೫೭-೫೮॥

ನಾರಾಯಣನೇ ಮೊದಲಾದವರಿಗೂ ಉತ್ಪತ್ತಿಸ್ಥಾನನು ಈತನು. ಆರ್ಯಮಾ, ವರುಣ, ವಾಯು, ದ್ಯಾವಾಭೂಮಿ, ಈಶ್ವರ, ಸರ್ವೇಶ್ವರ ಎಲ್ಲರಿಗೂ ಮೂಲಭೂತನೆನಿಸಿದವನು ಈತನು. ಆದರೆ ಯಾರಿಂದಲೂ ಸುಲಭವಾಗಿ ತಿಳಿಯಲಾಗದವನು. ಸರ್ವೇಂದ್ರಿಯಗಳ ಗುಣಗಳಿಂದಲೂ ಕೂಡಿದವನು ಪರಶಿವನು. ॥೫೯-೬೦॥

ನಿನ್ನನ್ನು ಗುರುತಿಸುವಂತಹ ಯಾವ ಗುರುತುಗಳೂ ಲೋಕದಲ್ಲಿ ಇಲ್ಲ. ನಿನಗೆ ಶರೀರವಿಲ್ಲ. ನೀನು ಸರ್ವವ್ಯಾಪಿಯು. ಉಪಾಧಿವಶದಿಂದ ಅತ್ಯಲ್ಪರೂಪಿಯಾಗಿಯೂ ಕಾಣುವೆ. ಇಂತಹ ನಿನ್ನನ್ನು ಸಕಲ ದೇವತೆಗಳೂ ಸದಾ ಆರಾಧನೆಮಾಡುತ್ತಿರುವರು. ಪರಶಿವನೇ, ಈ ಜಗತ್ತೆಲ್ಲವೂ ನಿನ್ನಿಂದಲೇ ಉದಯಿಸಿರುವುದು. ಕೊನೆಗೆ ನಿನ್ನಲ್ಲಿಯೇ ಲಯಹೊಂದುವುದು. ನಿನ್ನನ್ನು ಬಿಟ್ಟರೆ ಮತ್ತಾವ ವಸ್ತುವೂ ನಿನಗಿಂತ ಬೇರೆಯಾಗಿ ಕಾಣುವುದೇ ಇಲ್ಲ. ಇದೇ ಪರಮಾರ್ಥ. ॥೬೧-೬೨॥

ನೇಹ ನಾನಾಸ್ತಿ ಕಿಂಚಿದ್ವೈ ತ್ವದಧಿಷ್ಠಿತಮೇವ ಹಿ ।
ತ್ವಾಮವಿಜ್ಞಾಯ ದುರ್ಮೇಧಾಃ ಕೃತಕೃತ್ಯೋಽಭಿಮನ್ಯತೇ ॥೬೩॥

ಸರ್ವಭೂತಾತಿಗಶ್ಚಾತ್ಮಾ ಕೋಶಾತೀತೋ ಮಹೇಶ್ವರಃ ।
ಮಹಾಗ್ರಾಸಸ್ಸ ಏವೇಶೋ ಬ್ರಹ್ಮಕ್ಷತ್ರಂ ತದೋದನಂ ॥೬೪॥

ಕಾಲಕಾಲಸ್ಯ ದೇವಸ್ಯ ಮೃತ್ಯುರೇವೋಪಸೇಚನಂ ।
ಬ್ರಹ್ಮಪುಚ್ಛಂ ಪ್ರತಿಷ್ಠಾ ಶಾಂತಿರಕ್ಷರಮೇವ ಚ ॥೬೫॥

ಹೃದಯಂ ಪುರುಷೋ ರುದ್ರಸ್ತ್ರಿಸ್ರೋ ಮಾತ್ರಾಃ ಪರಸ್ತು ಸಃ ।
ಓಂಕಾರಃ ಪ್ರಣವೋ ವ್ಯಾಪೀ ಅನಂತೋ ವ್ಯಾಪಕೋ ವಿಭುಃ ॥೬೬॥

ತಾರಂ ಸೂಕ್ಷ್ಮಂ ವೈದ್ಯುತಂ ಚ ಶುಕ್ಲಂ ಸರ್ವಶರೀರಗಃ ।
ಈಶಾನೋ ಭಗವಾನ್ ರುದ್ರೋ ಮಹಾದೇವಸ್ಸ ಏವ ಹಿ ॥೬೭॥

---

ಪ್ರಪಂಚದಲ್ಲಿ ನಮ್ಮ ಕಣ್ಣಿಗೆ ಕಾಣುವ ನಾನಾವಿಧವಾದ ವಸ್ತುಗಳೆಲ್ಲವೂ ನಿನಗಿಂತ ಬೇರೆಯಾದುವುಗಳಲ್ಲ. ಎಲ್ಲವೂ ನಿನ್ನಲ್ಲಿಯೇ ಅಡಗತಕ್ಕವುಗಳು. ದುರ್ಬುದ್ಧಿಯಿಂದ ಮಾಯಾಪಾಶಕ್ಕೆ ಸಿಕ್ಕಿದ ಮಾನವರು ನಿನ್ನ ಸ್ವರೂಪವನ್ನರಿಯದೆ ತಾವು ಕೃತಕೃತ್ಯರಾದರೆಂದು ಭಾವಿಸುತ್ತಾರೆ. ನಿಜವಾಗಿಯೂ ನೀನು ಸರ್ವಭೂತಗಳಿಗಿಂತ ಮೀರಿದವನು. ಅನ್ನಮಯಾದಿ ಪಂಚಕೋಶಗಳಿಗೆ ನೀನು ವಶನಾಗದವನು. ಬ್ರಹ್ಮ, ಕ್ಷತ್ರಿಯ, ಈ ವರ್ಗದವರೇ ನಿನಗೆ ಆಹಾರಸ್ಥಾನೀಯರು. ||೬೩-೬೪||

ಯಮನಿಗೂ ಯಮನಾಗಿರುವ ನಿನಗೆ ಮೃತ್ಯುದೇವತೆಯೇ ಉಪ್ಪಿನಕಾಯಿಯ ಸ್ಥಾನವು. ಬ್ರಹ್ಮವೇ ಬಾಲ. ಅಕ್ಷರಾತ್ಮಕವಾಗಿರುವುದೇ ನಿಜವಾದ ಶಾಂತಿ. ಪುರುಷರೂಪಿಯಾದ ರುದ್ರನೇ ನಿನ್ನ ಹೃದಯಸ್ಥಾನೀಯನು. ಮಾತ್ರಾತ್ರಯಯುಕ್ತವಾದ ಓಂಕಾರವೆಂಬ ಪ್ರಣವವೇ ಸರ್ವವ್ಯಾಪಿ. ನೀನು ಈ ಎಲ್ಲಾರೂಪದಿಂದಲೂ ಪ್ರಪಂಚವನ್ನೆಲ್ಲಾ ವ್ಯಾಪಿಸಿ ನಿಂತಿರುವೆ. ||೬೫-೬೬||

ಸೂಕ್ಷ್ಮಧ್ವನ್ಯಾತ್ಮಕನಾಗಿ, ವಿದ್ಯುದ್ರೂಪದಿಂದಲೂ, ಶುಕ್ಲವರ್ಣದಿಂದಲೂ ಸರ್ವಶರೀರವನ್ನೂ ವ್ಯಾಪಿಸಿರುವೆ. ಮಹಾಮಹಿಮನೂ, ಈಶಾನ, ರುದ್ರ, ಮಹಾದೇವ ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವವನೂ ನೀನೇ. ನೀನೇ ಪರಬ್ರಹ್ಮನು.

ಪರಂ ಬ್ರಹ್ಮ ಪರಂಧಾಮ ಪರಃಪಾರಃ ಪರಾಯಣಃ ।
ವಿಶೋಕೋ ನಿರ್ಗುಣಶ್ಚಾಯಂ ಮಹಾತ್ಮಾ ವಿಶ್ವತೋಮುಖಃ ॥೧೮॥

ಸರ್ವಾಂತರಸ್ಸರ್ವಸಾಕ್ಷೀ ಏಷ ರುದ್ರೋ ಮಹೇಶ್ವರಃ ।
ಸ ಏವ ಕರ್ತಾ ಜಗತಾಂ ನಾನ್ಯೇ ವಿಷ್ಣ್ವಾದಯಸ್ಸುರಾಃ ॥೧೯॥

ನ ಚ ಬ್ರಹ್ಮಾ ನ ಚೈವೇಂದ್ರೋ ನಾಗ್ನಿಸ್ಸೂರ್ಯೋಽನಿಲಸ್ಸುರಾಃ ।
ಯಸ್ಯ ಶಕ್ತಿರ್ವಿಚಿತ್ರಾಸ್ಯ ಜಗತಃ ಕಾರಣಂ ಹರಃ ॥೨೦॥

ಹಿರಣ್ಯಗರ್ಭಂ ಪುರತೋ ಜಾಯಮಾನಂ ಸ ಪಶ್ಯತಿ ।
ಯಸ್ಮಾದ್ವಿಷ್ಣುಃ ಸಮುತ್ಪನ್ನೋ ರುದ್ರಸ್ತಸ್ಮಾದಜಾಯತ ॥೨೧॥

ಸ ವಿಶ್ವಂ ವಿಶ್ವಜಾತಂ ಯತ್ ಸ್ಥಾಸ್ನು ಗಚ್ಛ ಸುರೋತ್ತಮಾಃ ।
ಯತೋ ಬ್ರಹ್ಮೇಶವಿಷ್ಣ್ವಿಂದ್ರಾಃ ಸಹ ಭೂತೈಃ ಪ್ರಜಜ್ಞಿರೇ ॥೨೨॥

---

ಪರಮಪದದಲ್ಲಿರುವವನು. ಎಲ್ಲರಿಗೂ ಶ್ರೇಷ್ಠನು. ಸರ್ವಕರ್ಮದಲ್ಲಿಯೂ ಅಸಕ್ತನು. ದುಃಖರಹಿತನು. ಗುಣರಹಿತನು. ಮಹಾತ್ಮನು. ಸರ್ವಭಾಗದಲ್ಲಿಯೂ ಮುಖವುಳ್ಳವನು. ॥೧೭-೧೮॥

ಸರ್ವರ ಹೃದಯದಲ್ಲಿಯೂ ಅಡಗಿ ಎಲ್ಲವನ್ನೂ ನೋಡುತ್ತಾ ಸಕಲ ಕಾರ್ಯಕ್ಕೂ ಕರ್ತನೆನಿಸಿ ಪ್ರಕಾಶಿಸುತ್ತಿರುವವನು ಈಶ್ವರನೊಬ್ಬನೇ. ಈ ನಾರಾಯಣಾದಿಗಳು ಇದರಲ್ಲಿ ಯಾವ ಭಾಗವನ್ನೂ ವಹಿಸಲಾರರು. ಬ್ರಹ್ಮ, ಇಂದ್ರ, ಸೂರ್ಯ, ವಾಯು, ಇತರ ದೇವತೆಗಳು, ಇವರಾರಿಂದಲೂ ಯಾವ ಕೆಲಸವೂ ನೆರವೇರಲಾರದು. ಈ ಜಗತ್ತಿಗೂ ಸಕಲಪ್ರಾಣಿಗಳಿಗೂ ಮೂಲಭೂತನಾದ ಈತನ ಶಕ್ತಿಯು ವಿಚಿತ್ರವಾದದ್ದು. ಅದ್ಭುತವೆನಿಸಿರುವುದು. ॥೧೯-೨೦॥

ಮೊದಲು ಈಶ್ವರನು ಹಿರಣ್ಯಗರ್ಭಬ್ರಹ್ಮನನ್ನೂ ಅನಂತರ ವಿಷ್ಣುವನ್ನೂ, ಹಾಗೆಯೇ ರುದ್ರನನ್ನೂ ಸೃಷ್ಟಿಮಾಡಿರುವನು. ಒಟ್ಟಿನಲ್ಲಿ ಪರಶಿವನೇ ವಿಶ್ವವು. ಅವನಿಂದಲೇ ಈ ವಿಶ್ವಾಂತರ್ಗತವಾದ ಸಕಲ ವಸ್ತುಗಳೂ ಉತ್ಪನ್ನವಾಗುವುವು. ಬ್ರಹ್ಮ, ವಿಷ್ಣು, ರುದ್ರ, ಇಂದ್ರಾದಿಗಳಿಗೂ ಉತ್ಪತ್ತಿಸ್ಥಾನವಾದ ಆ ಮಹೇಶ್ವರನನ್ನು ನೀವೆಲ್ಲರೂ ಶರಣುಹೊಂದಿರಿ. ದೇವತೆಗಳಿರಾ, ಈ ಅಭಿಪ್ರಾಯವನ್ನು ನೀವು ನಿಜವೆಂದು ನಂಬಿರಿ. ॥೨೧-೨೨॥

ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಥ ಹೇ ಸುರಾಃ ।
ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥೭೩॥

ಯದಾ ತಮಸ್ತಂ ನ ದಿವಾ ನೈವ ರಾತ್ರಿರ್ಮಹೇಶ್ವರಃ ।
ನ ಸನ್ ನ ಚಾಸನ್ ಸ ಶಿವ ಏಕ ಏವ ಹಿ ಕೇವಲಃ ॥೭೪॥

ವಿಶ್ವಸ್ಮಾದುತ್ತರೋ ದೇವಃ ಸ ಹಿ ವಿಶ್ವಾಧಿಕಶ್ಶಿವಃ ।
ತಸ್ಯ ಸ್ವರೂಪಮಸ್ಮಾಭಿರ್ವಕ್ತುಂ ದ್ರಷ್ಟುಂ ನ ಶಕ್ಯತೇ ॥೭೫॥

ಭವಂತೋ ಮಾಯಯಾ ತಸ್ಯ ಪ್ರತಿಕಲ್ಪಂ ಸುರಾಸುರಾಃ ।
ಮುಹ್ಯಂತಿ ತತ್ಪ್ರಸಾದೇನ ವಿಮುಕ್ತಾ ಭವಿಷ್ಯಥ ॥೭೬॥

ಭಜಧ್ವಂ ಹಯಮೇಧೇನ ಹೇ ಸುರಾ ವೃಷಭಧ್ವಜಂ ।
ಸರ್ವಮನ್ಯತ್ಪರಿತ್ಯಜ್ಯ ಶಿವ ಏಕಶ್ಶಿವಂಕರಃ ॥೭೭॥

ಧ್ಯೇಯಃ ಪೂಜ್ಯೋ ನಮಸ್ಯಶ್ಚ ಸ ಈಡ್ಯಃ ಪರಮೇಶ್ವರಃ ।
ಸಮಾಪ್ತಮೇವ ಜಾಬಾಲಂ ಸತ್ಯಂ ಸತ್ಯಂ ನ ಚಾನ್ಯಥಾ ॥೭೮॥

---

ಶಿವಸ್ವರೂಪಜ್ಞಾನವಿಲ್ಲದೆ ಪ್ರಪಂಚವು ಚರ್ಮವೆಂಬ ಆಕಾಶದಿಂದ ಪರಿವೃತವಾಗಿರುವುದೆಂದು ಭಾವಿಸುತ್ತಿದ್ದೀರಿ. ಶಿವನೇ ಪ್ರಪಂಚವು, ತದ್ಭಿನ್ನವಾದ ಪ್ರಪಂಚವು ಬೇರೊಂದಿಲ್ಲ ಎಂದು ಯಾವ ಕಾಲದಲ್ಲಿ ನೀವು ತಿಳಿಯುವಿರೋ ಆಗ ನಿಮ್ಮ ದುಃಖವು ಕೊನೆಗಾಣವುದು. ಪರಶಿವನಿಗೆ, ಅಸ್ತ, ಉದಯ, ಹಗಲು, ರಾತ್ರಿ, ಇರುವುದು, ಸಾಯುವುದು ಎಂಬ ಯಾವ ಭೇದಗಳಾಗಲಿ, ವಿಕಾರಗಳಾಗಲಿ ಇಲ್ಲ. ನಿಜವಾಗಿ ಸ್ಥಿರವಾಗಿರುವವನೆಂದರೆ ಶಂಕರನೊಬ್ಬನೇ. ||೭೩-೭೪||

ಪ್ರಪಂಚಕ್ಕೆ ಸಿಕ್ಕದೆ ಪ್ರಪಂಚಕ್ಕೆ ಸೇರದೆ ಪ್ರಪಂಚದಲ್ಲಿದ್ದು ಪ್ರಪಂಚವನ್ನು ಮೀರದವನು ಶಂಕರನು. ಅವನ ಸ್ವರೂಪವನ್ನು ವರ್ಣಿಸುವುದಕ್ಕಾಗಲಿ, ಬಾಯಿಂದ ಹೇಳುವುದಕ್ಕಾಗಲಿ ಸಾಧ್ಯವಾಗಲಾರದು. ನೀವು ಶಿವಮಾಯೆಗೆ ಸಿಕ್ಕಿದವರಾಗಿ ಪ್ರತಿಕಲ್ಪದಲ್ಲಿಯೂ ದೇವಾಸುರರಾಗಿ ಹುಟ್ಟಿ ನಾನಾಕಷ್ಟಗಳಿಗೆ ಸಿಕ್ಕುವಿರಿ. ಕೊನೆಗೆ ಶಿವಾನುಗ್ರಹವನ್ನು ಪಡೆದು ಮುಕ್ತರಾಗುವಿರಿ. ||೭೫-೭೬||

ಎಲೈ ದೇವತೆಗಳಿರಾ, ನೀವು ಅಶ್ವಮೇಧಯಾಗದ ಈ ಸಮಯದಲ್ಲಿ ಎಲ್ಲವನ್ನೂ ದೂರತಳ್ಳಿ ಸುಖಕರನಾದ ಮತ್ತು ವೃಷಭಧ್ವಜನಾದ ಪರಮೇಶ್ವರ

ಏಕ ಏವ ಹಿ ವಿಶ್ವಾತ್ಮಾ ಭಗವಾನ್ ರುದ್ರ ಏವ ಹಿ ।
ಸರ್ವೇಷಾಂ ಪತಿರೀಶಾನೋ ಯೂಯಂ ಹಿ ಪಶವಸ್ಸ್ಮೃತಾಃ ॥೭೯॥

ತನ್ಮಾಯಾಪಾಶಬದ್ಧಾನ್ವೋ ಮೋಚಯಿಷ್ಯತಿ ವೈ ಸುರಾಃ ।
ತಮೇವ ಶರಣಂ ಯಾತ ಕ್ಷಿಪ್ರಮದ್ಯೈವ ಸತ್ತಮಾಃ ॥೮೦॥

ಪ್ರಸಾದಯಧ್ವಂ ವರದಂ ಮಹಾದೇವಂ ಸತೀಪತಿಂ ।
ಏಕ ಏವ ಮಹಾನ್‌ರುದ್ರಃ ಸರ್ವೈಃ ಪೂಜ್ಯೋ ನ ಸಂಶಯಃ ॥೮೧॥

ಅಸ್ಮಿನ್ನರ್ಥೇ ಸುರಶ್ರೇಷ್ಠಾಃ ಸಂತಪ್ತಪರಶುಂ ದಧೇ ।
ಸತ್ಯಂ ಸತ್ಯಂ ಪುನಸ್ಸತ್ಯಂ ಉದ್ಧೃತ್ಯ ಭುಜಮುಚ್ಯತೇ ॥೮೨॥

॥ ಶ್ರೀಸ್ಕಂದ ಉವಾಚ ॥

ಇತ್ಯುಕ್ತ್ವಾಥರ್ವಣೋ ವೇದಸ್ತೂಷ್ಣೀಮಾಸ ತದಾ ಮುದಾ ।
ತತ್ರ ದೇವೈಃ ಸದಕ್ಷೋಽಪಿ ನಿರ್ವಿಣ್ಣೋ ಮುನಿಭಿಸ್ಸ್ಥಿತಃ ॥೮೩॥

---

ನನ್ನೇ ಭಜಿಸಿರಿ. ನಿಜವಾಗಿಯೂ ಪರಮೇಶ್ವರನು ಧ್ಯಾನಕ್ಕೂ, ಪೂಜೆಗೂ, ನಮಸ್ಕಾರಕ್ಕೂ ಅರ್ಹನು, ಯೋಗ್ಯನು. ಈ ವಿಷಯವೆಲ್ಲಾ ಜಾಬಾಲೋಪನಿಷತ್ತಿನಲ್ಲಿ ವಿಸ್ತೃತವಾಗಿದೆ. ಅದನ್ನೇ ನಾನು ನಿಮ್ಮ ಅವಗಾಹನೆಗೆ ಈಗ ತಂದಿರುವೆನು. ॥೭೭-೭೮॥

ಭಗವಂತನಾದ ಮಹಾದೇವನೊಬ್ಬನೇ ವಿಶ್ವಪತಿಯು. ನಿಮ್ಮೆಲ್ಲರಿಗೂ ಒಡೆಯನಾದ ಪಶುಪತಿಯೇ ಆತನು, ನೀವೆಲ್ಲರೂ ಅಜ್ಞಾನಿಗಳೆನಿಸಿದ ಪಶುಗಳು. ಶಿವಮಾಯಾಬದ್ಧರಾಗಿರುವ ನಿಮ್ಮನ್ನು ಪರಶಿವನು ಕರುಣೆಯಿಂದ ಉದ್ಧರಿಸುವನು. ಕರುಣಾಶಾಲಿಯಾದ ಆ ಮಹಾದೇವನನ್ನೇ ನೀವು ತಪ್ಪದೆ ಶರಣುಹೊಂದಿರಿ. ॥೭೯-೮೦॥

ಸತೀಪತಿಯೂ, ವರಪ್ರದನೂ ಆದ ಮಹಾದೇವನನ್ನು ನೀವು ತೃಪ್ತಿಗೊಳಿಸಿರಿ. ಸರ್ವಪೂಜ್ಯನಾದವನು ಅವನೇ ಸರಿ. ಅವನಿಗಿಂತ ಮಹಿಮೆಯಲ್ಲಿ ಅಧಿಕರಾದವರು ಮತ್ತಾರೂ ಇಲ್ಲ. ಈವಿಷಯದಲ್ಲಿ ಯಾವರೀತಿ ಪ್ರಮಾಣಮಾಡಿ ಬೇಕಾದರೂ ಹೇಳುವೆನು. ಕೆಂಪಾಗಿ ಕಾದ ಕೊಡಲಿಯನ್ನು ಹಿಡಿದು ಬೇಕಾದರೂ ಪ್ರತಿಜ್ಞೆ ಮಾಡುವೆನು. ಭುಜವನ್ನೆತ್ತಿ ಸಾರಿಸಾರಿ ಹೇಳುವೆನು. ಈ ಮಾತು ಅಕ್ಷರಶಃ ನಿಜವಾದುದು.'' ॥೮೧-೮೨॥

ಹೀಗೆ ಅಥರ್ವಣವೇದವೂ ಸಹ ಪರಶಿವನನ್ನೇ ಬಹಳವಾಗಿ ಸ್ತುತಿಸಿ ಸಭೆ

ಅಧೋಮುಖೋಶ್ರುವದನೋ ವಿಷ್ಣುಮೀಕ್ಷನ್ಮುಹುರ್ಮುಹುಃ ॥೮೪॥

ಏವಂ ತೇ ವೇದವಾಚಾ ಮುನಿಗಣಸುರತಾ ಮೂಕಭಾವಂ ಪ್ರಪನ್ನಾ
ಖಿನ್ನಾ ದುಃಖಾತಿಭಾರೈರತುಲನತಿಹಿತಪ್ರಾಜ್ಯವಾಚಾಮಮೀಷಾಂ ।
ತತ್ರೈವಾಮಿಷಲೋಲುಪಾ ಇವ ಝುಷಾ ಪೂಷಾದಯಸ್ಸಂಸ್ಥಿತಾಃ
ನೋಚುಃ ಕಿಂಚನ ಕಿಂಚನಂ ಪ್ರತಿಸುರಾಸ್ತೇ ವಂಚನಾಮಾಸ್ಥಿತಾಃ ॥೮೫॥

ಇತಿ ಶ್ರೀ ಶಿವರಹಸ್ಯೇ ದ್ವಾದಶಾಂಶೇ ಈಶಾಖ್ಯೇ ಶಿವಗೌರೀಸಂವಾದೇ
ದಕ್ಷಾಧ್ವರ ಪ್ರಶಂಸಾಯಾಂ ಸಾಮಾಥರ್ವನಿರೂಪಿತ
ಶಿವೋತ್ಕೃಷ್ಟವರ್ಣನಂ ನಾಮ ಚತುರ್ಥೋಽಧ್ಯಾಯಃ

---

ಯಲ್ಲಿ ಸುಮ್ಮನೆ ಕುಳಿತುಕೊಂಡಿತು. ಆಗ ಅದನ್ನು ಕೇಳಿ ದೇವತೆಗಳೂ, ಮುನಿಗಳೂ, ದಕ್ಷಬ್ರಹ್ಮನೂ ದುಃಖಿತರಾದರು. ದಕ್ಷನಾದರೋ ಕಣ್ಣೀರನ್ನು ಸುರಿಸುತ್ತಾ, ಮುಖವನ್ನು ತಗ್ಗಿಸಿಕೊಂಡು ವಿಷ್ಣುವನ್ನು ನೋಡತೊಡಗಿದನು. ||೮೪-೮೫||

ಎಲೈ ಜೈಗೀಷವ್ಯಾದಿ ಮಹರ್ಷಿಗಳೇ ಕೇಳಿರಿ. ಈ ರೀತಿ ನಾಲ್ಕು ವೇದಗಳೂ ಒಮ್ಮನಸ್ಸಿನಿಂದ ಪರಶಿವಪಾರಮ್ಯವನ್ನೇ ನಿರೂಪಿಸುತ್ತಾ ಅಲ್ಲಿದ್ದ ಸಕಲ ದೇವತೆಗಳನ್ನೂ ಪಶುಗಳೆಂದೂ ಅಜ್ಞಾನಿಗಳೆಂದೂ ಹಿಯ್ಯಾಳಿಸಿದರೋ, ಆಗಲೇ ಅದನ್ನು ಕೇಳಿ ಸಮಸ್ತ ದೇವತೆಗಳೂ ಮುನಿಗಳೂ ಮೌನವಾಗಿ ಕುಳಿತುಬಿಟ್ಟರು. ಎಲ್ಲರೂ ದುಃಖಭರದಿಂದ ಕುಗ್ಗಿಹೋದರು. ಮಾಂಸದ ಆಸೆಗೆ ಬಲೆಗೆ ಬಿದ್ದು ಸಿಕ್ಕಿನರಳುತ್ತಿರುವ ಮೀನುಗಳಂತೆ ಪೂಷಾದಿ ಸಮಸ್ತ ದೇವಗಣಗಳು ಯಜ್ಞದಲ್ಲಿ ಆಹುತಿಯ ಆಸೆಗೆ ಬಂದು, ಅಲ್ಲಿ ವೇದಗಳ ಮಾತಿನಿಂದ ಅಪಮಾನಿತರಾಗಿ ಕುಳಿತುಬಿಟ್ಟರು. ಅಲ್ಲದೆ ದೇವತೆಗಳಲ್ಲಿ ಯಾರೊಬ್ಬರೂ ಏನನ್ನೂ ಹೇಳದೆ ಮೋಸದಿಂದ ವಂಚಿತರಾದಂತೆ ಪೆಚ್ಚುಮೋರೆಯಿಂದ ಸಭೆಯಲ್ಲಿ ಮಂಕಾಗಿ ಕುಳಿತಿದ್ದರು, ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಯಪಡಿಸಿದನು. ||೮೬||

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಪಂಚಮೋಽಧ್ಯಾಯಃ

॥ ಶ್ರೀ ಸತ್ಯವಾಚ ॥

ಚತುಸ್ಸಾಕ್ಷಿಕಮೇವೇದಂ ಶೃಣುಧ್ವಂ ವಚನಂ ಸುರಾಃ ।
ಯಜಧ್ವಂ ಹಯಮೇಧೇನ ಲಭಧ್ವಂ ಮುಕ್ತಿಮುತ್ತಮಾಂ ॥೧॥

ಸ್ತುತಮೀಶಮಥೋಕ್ತೇನ ಮಂತ್ರೈಃ ಶಸ್ಯತ ಶಂಕರಂ ।
ತಂ ಗಾಯಂತಿ ಮಹಾದೇವಂ ಸದಾ ಗಾಯತ್ರಿಣೋಽಖಿಲಾಃ ॥೨॥

---

## ಐದನೆಯ ಅಧ್ಯಾಯ

ಹಾಗೆ ನಾಲ್ಕು ವೇದಗಳೂ ಸಭೆಯಲ್ಲಿ ಶಿವನ ವಿಷಯವನ್ನು ತಿಳಿಸಿದ ಮೇಲೆ ಮತ್ತೆ ಸತೀದೇವಿಯು ದೇವತೆಗಳೊಡನೆ ಹೀಗೆಂದಳು.— ಸುರರೇ, ನನ್ನ ಮಾತನ್ನು ಕೇಳಿರಿ. ಈಗ ಈ ಅಶ್ವಮೇಧಯಜ್ಞದಲ್ಲಿ ನನ್ನ ಮಾತನ್ನು ಕೇಳಿ. ಮೊದಲು ನನ್ನ ಪತಿಯನ್ನು ಪೂಜಿಸಿರಿ. ನಿಮಗೆ ಸ್ಥಿರಮುಕ್ತಿಯು ದೊರಕುವುದು. ಉಕ್ಥ (ವೇದಭಾಗ) ದಿಂದ ಸ್ತುತಿಸಿರಿ. ಸಾಮಗಾನದಿಂದ ಸ್ವಾಮಿಯನ್ನು ಸಂತೋಷಪಡಿಸಿರಿ. ಗಾಯತ್ರೀಮಂತ್ರಪಠನೆಯಿಂದ ಸರ್ವರೂ ಮಹಾದೇವನನ್ನು ಬಿಡದೆ ಸ್ತುತಿಸುತ್ತಿರುವರು. ನೀವೂ ಅದೇ ರೀತಿ ಮಹಾದೇವನನ್ನು ಭಜಿಸಿ ಧನ್ಯರಾಗಿರಿ. ॥೧-೨॥

ಅರ್ಚ್ಯಂತಿ ಬಿಲ್ವಪತ್ರಾದ್ಯೈರ್ಲಿಂಗೇ ದೇವಂ ಸನಾತನಂ ।
ಸೋಮಾದಿಭಿರ್ಹವಿರ್ಭಿಶ್ಚ ಸೋಮಂ ಯಜತ ಸತ್ವರಂ ॥೩॥

ಬ್ರಹ್ಮಣಸ್ಪತಿಮೀಶಾನಂ ಮಖಾಧೀಶಂ ಮಹೇಶ್ವರಂ ।
ತ್ರಿಯಂಬಕಂ ಮಹಾದೇವಂ ಸುಗಂಧಿಂ ಪುಷ್ಟಿವರ್ಧನಂ ॥೪॥

ಯಜಂತು ಪುಷ್ಟ್ಯೈ ಭವತಾಂ ತುಷ್ಟೋ ಭವತಿ ಶಂಕರಃ ।
ನೋ ಚೇದ್ರುಷ್ಟೋ ಭವೇದ್ದೇವೋ ಭವತ್ಸು ಸುರಸತ್ತಮಾಃ ॥೫॥

ಶಿಪಿವಿಷ್ಟೇಷ್ಟಮನಸಸ್ತುಷ್ಟಾ ಯೂಯಂ ಭವಿಷ್ಯಥ ।
ಮಾಯಾಹಂ ಪ್ರಕೃತಿಸ್ಸಾಕ್ಷಾತ್ತಸ್ಯ ದೇವಸ್ಯ ಹೇ ಸುರಾಃ ॥೬॥

ಸಮಾಯೀ ಪರಮೇಶಾನಃ ಶಾಶ್ವತೋ ವಿಶ್ವನಾಯಕಃ ।
ಮನ್ಮಾಯಾಮೋಹಿತಾ ಯೂಯಂ ನ ಜಾನಥ ಮಹೇಶ್ವರಂ ॥೭॥

ಅಹಂ ವಃ ಪ್ರೀತಿಕೃನ್ಮಾತಾ ಪಿತಾ ಶಂಕರ ಈಶ್ವರಃ ।
ಆವಾಂ ಸಂಪೂಜಿತೋ ಯತ್ರ ಜಗತ್ಪೂಜಿತಮೇವ ವಾ ॥೮॥

---

ಶಿವಲಿಂಗದಲ್ಲಿ ಸರ್ವರೂ ಬಿಲ್ವಪತ್ರಾರ್ಚನಾದಿಗಳಿಂದ ಆದಿಪುರುಷನಾದ ಶಂಕರನನ್ನು ತೃಪ್ತಿಪಡಿಸುವರು. ನೀವೂ ಸಹ ಈಗ ಸೋಮರಸಾದಿಗಳಿಂದಲೂ ಹವಿಸ್ಸುಗಳಿಂದಲೂ ಅದೇ ಶಂಕರನನ್ನು ತೃಪ್ತಿಪಡಿಸಿರಿ. ಅವನೇ ಬ್ರಹ್ಮಣಸ್ಪತಿಯು. ಈಶ್ವರನು ಯಾಗದೊಡೆಯನು. ಮಹೇಶ್ವರನು, ಮೂರು ಕಣ್ಣುಗಳುಳ್ಳವನು, ಮಹಾದೇವನು, ಸುಗಂಧವಿಶಿಷ್ಟನು. ಪುಷ್ಟಿವರ್ಧನನು. ||೩-೪||

ನಿಮ್ಮ ಶ್ರೇಯಸ್ಸಿಗಾಗಿ ಪರಶಿವನನ್ನು ಪೂಜಿಸಿರಿ. ಅವನು ತೃಪ್ತನಾದರೆ ನಿಮಗೆ ಹಿತವನ್ನುಂಟುಮಾಡುವನು. ಎಂದೂ ಮಹಾದೇವನನ್ನು ರೋಷಗೊಳಿಸಿ ಎದುರಿಸಬೇಡಿರಿ. ಶಿಪಿವಿಷ್ಟನೆನಿಸಿದ ಮಹಾದೇವನ ತೃಪ್ತಿಯಿಂದ ನೀವೂ ತೃಪ್ತರಾಗುವಿರಿ. ಆ ಪರಶಿವನ ಮಾಯೆಯೆಂಬುವಳೇ ನಾನು. ನಾನೇ ಪ್ರಕೃತಿಯು. ಇದನ್ನು ನೀವು ನಂಬಿರಿ. ||೫-೬||

ನನ್ನಿಂದ ಸಹಿತನಾದ ಆ ಪರಶಿವನೇ ಮಾಯಿಯೆನ್ನಿಸಿಕೊಳ್ಳುವನು. ಅಂತಹ ಬ್ರಹ್ಮವಸ್ತುವಿನ ಮಾಯಾಜಾಲಕ್ಕೆ ಸಿಕ್ಕಿದ ನೀವು ಪರಶಿವನ ಸ್ವರೂಪವನ್ನು ಅರಿಯಲಾರಿರಿ. ನಿಜವಾಗಿಯೂ ನಾನು ನಿಮಗೆ ತಾಯಿಯಂತೆಯೂ, ಶಂಕರನು

ಯತೋ ಬ್ರಹ್ಮೇಶವಿಷ್ಣ್ವಿಂದ್ರಾ ಜಜ್ಞಿರೇ ದೇವಸತ್ತಮಾಃ ।
ವಿಷ್ಣೋರ್ಜಿಷ್ಣೋಸ್ತಥಾ ಪೂಷ್ಣಃ ಪ್ರೋಕ್ತಂ ಯತ್ಪರಮಂಪದಂ ॥೯॥

ಶಿವಪ್ರಸಾದಪಾತ್ರಸ್ಯ ಸಾಹಾಯ್ಯಂ ನೈವ ಕಶ್ಚನ ।
ಶಿವಕ್ರೋಧಾಗ್ನಿದಗ್ಧಸ್ಯ ಸಹಾಯೋ ನಾತ್ರ ಕಶ್ಚನ ॥೧೦॥

ಯದಿ ವೇದಾಃ ಪ್ರಮಾಣಂ ವೋ ಕ್ಷಿಪ್ರಂ ಯಜತ ಶಂಕರಂ ।
ಮಾ ವಃ ಕಾಲಾತ್ಯಯೋ ಭೂಯಾದ್ಧವಿಷೋತ್ರ ಪಿನಾಕಿನಃ ॥೧೧॥

ಯಜ ಸ್ವಿಷ್ಟಕೃತಾ ದೇವಾ ಶಿಪಿವಿಷ್ಟಂ ಮಹೇಶ್ವರಂ ।
ದುರಿಷ್ಟಂ ಯದಿ ತೇ ಕಿಂಚಿತ್ ಸ್ವಿಷ್ಟಂ ಶಿವಕೃಪಾವಶಾತ್ ॥೧೨॥

ಸ್ವಿಷ್ಟಮಪ್ಯತ್ರ ತದ್ಧೀನಂ ದುಷ್ಟಂ ಭವತಿ ದೂಷಿತಂ ।
ತಸ್ಮಾದ್ಧಿಶಿಷ್ಟಂ ಸರ್ವೇಷಾಂ ಶಿಪಿವಿಷ್ಟಂ ಯಜಂತು ವಃ ॥೧೩॥

---

ತಂದೆಯಂತೆಯೂ ಇರುವೆವು. ನಮ್ಮಿಬ್ಬರನ್ನು ನೀವು ಪೂಜಿಸಿದರೆ ಈ ಜಗತ್ತನ್ನೇ ಪೂಜಿಸಿದಂತಾಗುವುದು. ॥೭-೮॥

ಇಂದು ಪ್ರಸಿದ್ಧ ದೇವತೆಗಳೆನಿಸಿರುವ ವಿಷ್ಣು, ಬ್ರಹ್ಮ, ಇಂದ್ರ, ಚಂದ್ರ, ಸೂರ್ಯ ಇವರೆಲ್ಲರೂ ಪರಮಾತ್ಮನೆನಿಸಿದ ಶಂಕರನ ಅಂಶಸಂಭೂತರೇ. ಇವರಿಗೂ ಪರಮಪದವೆನಿಸಿದವನು ಪರಶಿವನೇ, ಶಿವಪ್ರಸಾದವನ್ನು ಪಡೆದವರಿಗೆ ಮತ್ತಾರ ಸಹಾಯವೂ ಬೇಕಿಲ್ಲ. ಶಿವಕೋಪಕ್ಕೆ ಪಾತ್ರನಾದರೆ ಮಾತ್ರ ಮತ್ತಾರ ಸಹಾಯದಿಂದಲೂ ಅವನು ಉಳಿಯುವಂತಿಲ್ಲ. ವೇದಗಳು ನಿಮಗೆ ಪ್ರಮಾಣ ಗ್ರಂಥಗಳಾಗಿದ್ದರೆ ಈಗಲೇ ಪರಶಿವನನ್ನು ಭಕ್ತಿಯಿಂದ ಪೂಜಿಸಿರಿ. ಪಿನಾಕಿಯಾದ ಪರಶಿವನಿಗೆ ಹವಿಃಪ್ರದಾನಮಾಡುವುದರಲ್ಲಿ ಖಂಡಿತ ಹಿಂಜರಿಯಬೇಡಿರಿ. ನಿದಾನವಾಗಿ ಯೋಚನೆಮಾಡಿರಿ. ॥೧೦-೧೧॥

ಎಲೈ ದೇವತೆಗಳಿರಾ, ಕಿರಣರೂಪಿಯಾಗಿ ಜಗತ್ತನ್ನೇ ವ್ಯಾಪಿಸಿರುವ ಮಹೇಶ್ವರನಿಗೆ ಸ್ವಿಷ್ಟಕೃತ್ ಎಂಬ ಆಹುತಿಯನ್ನಿತ್ತು ಭಜಿಸಿರಿ. ನಿಮಗೆ ಏನಾದರೂ ಅನಿಷ್ಟವುಂಟಾಗುವುದಾದರೆ, ಶಿವಕೃಪಾಬಲದಿಂದ ಅದು ಮಂಗಳವಾಗಿ ಪರಿಣಮಿಸೀತು. ಯಾವ ಕರ್ಮದಲ್ಲಾದರೂ ಸ್ವಿಷ್ಟಕೃದ್ಧೋಮ ನಡೆಯದಿದ್ದರೆ ಅದು ಸಮಗ್ರವೆನಿಸಲಾರದು. ಆದ್ದರಿಂದ ನೀವು ಪ್ರಯತ್ನಪೂರ್ವಕವಾಗಿ ಶಿಪಿವಿಷ್ಟನೆನಿಸಿದ ಪರಶಿವನನ್ನು ಭಕ್ತಿಯಿಂದ ಪೂಜಿಸಿರಿ. ॥೧೨-೧೩॥

ಶಿಷ್ಟಾ ತೇನ ಭವಂತ್ವತ್ರ ವಿಶಿಷ್ಟಾಃ ಶಿವಸಮ್ಮತಾಃ ।
ನೋ ಚೇನ್ನಷ್ಟೋ ಭವೇದ್ಯಜ್ಞೋ ಭ್ರಷ್ಟೋಽಪ್ಯತ್ರಹಿ ದೀಕ್ಷಿತಃ ॥೧೪॥

ತದ್ವೀಕ್ಷಣಾನ್ನಿದಗ್ಧೋಽಥ ದಕ್ಷಃ ಕ್ಷಿಪ್ರಂ ಭವಿಷ್ಯತಿ ।
ಮುಗ್ಧಾ ಯೂಯಂ ವಿದಗ್ಧಾಂಗಾಸ್ತತ್ಫಾಲಾನಲಕೀಲತಃ ॥೧೫॥

ಭವಿಷ್ಯಥ ಸುರಶ್ರೇಷ್ಠಾ ಮಾ ಚ ವೋ ವಿಪದೋಽತ್ರ ಹಿ ।
ಭಕ್ತ್ಯೈವ ಪೂಜಿತಶ್ಶಂಭುಸ್ಸತಾಂ ಸಂಸಾರನಾಶಕೃತ್ ॥೧೬॥

ಭಕ್ತ್ಯಾರಾಧ್ಯ ಮಹಾದೇವಂ ವಿಮುಕ್ತಾ ಭವಬಂಧನಾತ್ ।
ಅಗಸ್ತ್ಯ ಭೃಗುಧೌಮ್ಯಾದ್ಯಾ ಮಾರ್ಕಂಡೇಯ ದಧೀಚಿಕಾಃ ॥೧೭॥

ಸುರಾಸುರಾಶ್ಚ ಮನವೋ ಮುನಯೋಽಮೀ ತಪಸ್ವಿನಃ ।
ಭಸ್ಮರುದ್ರಾಕ್ಷಸಹಿತಾ ನ ವದಂತಿ ಕಿಮುತ್ತರಂ ॥೧೮॥

ಶಿವಲಿಂಗಾರ್ಚನರತಾಃ ಶಿಷ್ಟಾ ಯಜ್ಞೈರ್ಮಹೇಶ್ವರಂ ।
ಭವಭಕ್ತಾ ಮಹಾತ್ಮಾನಸ್ತೇ ವದಂತ್ವತ್ರ ಸಾಂಪ್ರತಂ ॥೧೯॥

---

ಎಲೈ ದೇವತೆಗಳಿರಾ, ನೀವು ಸನ್ಮಾರ್ಗದಲ್ಲಿ ನಡೆದು ಶಿವಸಮ್ಮತರಾಗಿ ಶಿಷ್ಟರೆನಿಸಿಕೊಳ್ಳಿರಿ. ಇಲ್ಲವಾದರೆ ನೀವೂ, ನಿಮ್ಮ ಯಜ್ಞವೂ, ನಿಮ್ಮ ಯಾಗ ದೀಕ್ಷಿತನೂ, ಶಿವಫಾಲಾಗ್ನಿಯಿಂದ ಧ್ವಂಸವಾಗುವಿರಿ. ಶಿವನ ಕೋಪಾಗ್ನಿಗೆ ಸಿಕ್ಕಿ ದಕ್ಷನು ಉಳಿಯಲಾರನು. ಅವನ ಇಷ್ಟದಂತೆ ನಡೆದು ನೀವೂ ಸಹ ಪರಶಿವನ ಫಾಲಾಗ್ನಿಗೆ ಸಿಕ್ಕಿ ಧ್ವಂಸವಾಗುವಿರಿ. ಪರಶಿವನ ಕೋಪಕ್ಕೆ ಸಿಕ್ಕಿ ಬದುಕಿದವರು ಇಲ್ಲಿನವರೆಗೆ ಯಾರೂ ಇಲ್ಲ. ॥೧೪-೧೫॥

ಎಲೈ ದೇವತೆಗಳಿರಾ, ನೀವು ವಿಪತ್ತಿಗೆ ಗುರಿಯಾಗಬೇಡಿರಿ. ಭಕ್ತಿಯಿಂದ ಪೂಜಿಸಲ್ಪಟ್ಟ ಪರಶಿವನು ಸಂಸಾರಿಗಳ ದುಃಖವನ್ನು ನಾಶಗೊಳಿಸುವನು. ಹಿಂದೆ ಅಗಸ್ತ್ಯ, ಭೃಗು, ಧೌಮ್ಯ, ಮಾರ್ಕಂಡೇಯ, ದಧೀಚಿ ಮುಂತಾದ ಮಹರ್ಷಿಗಳು ಪರಶಿವನನ್ನು ಪೂಜಿಸಿ ಸಂಸಾರಬಂಧನದಿಂದ ಪಾರಾಗಿರುವರು. ॥೧೬-೧೭॥

ದೇವರಾಕ್ಷಸರು, ಮನುಗಳು, ಮುನಿಗಳು, ಋಷಿಗಳೂ ಇಲ್ಲಿ ಭಸ್ಮರುದ್ರಾಕ್ಷ ಧಾರಿಗಳಾಗಿದ್ದೂ ಸುಮ್ಮನೆ ಕುಳಿತಿರುವರು. ಏತಕ್ಕಾಗಿ ಏನನ್ನೂ ಹೇಳದೆ ಇರು

ಸತ್ರಾಸ್ಥಿತಾ ಸದಾ ಸಭ್ಯಾಃ ಸಭಾಪತಿಪದಾರ್ಚಕಾಃ ।
ನ ತತ್ರಾಸಭ್ಯವಾರ್ತಾ ಕಾ ಭವಿಷ್ಯತಿ ತದಾಪಿ ಹಿ ॥೨೦॥

ನ ವದಂತಿ ಚ ಯೇ ಧರ್ಮಂ ವಿದ್ವಾಂಸೋಽಪಿ ಬಹುಶ್ರುತಾಃ ।
ಸಭಾಸು ಚ ನ ತೇ ಸಭ್ಯಾ ಇಭ್ಯಾ ಅಪಿ ಚ ರಾಸಭಾಃ ॥೨೧॥

ಸರ್ವೇದ್ಯ ಮುನಯೋ ಯೂಯಂ ದಕ್ಷಮುನ್ಮಾರ್ಗವರ್ತಿನಂ ।
ಯಾಜಯಂತಿ ಕಥಂ ಮೋಹಾದ್ಭವಂತೋಽರ್ಥಾರ್ಥಲಿಪ್ಸಯಾ ॥೨೨॥

ಅಯಾಜ್ಯಯಾಜಕಾನಾಂ ತು ಪಾಪಮಂಹೋ ಮಹದ್ಭವೇತ್ ।
ವಾರ್ಯತಾಂ ವಾರ್ಯತಾಂ ದಕ್ಷೋ ದೀಕ್ಷಿತೋಽಪ್ಯಯಮುತ್ಪಥಃ ॥೨೩॥

ಉನ್ಮಾರ್ಗವರ್ತಿನಂ ಮೂಢಂ ತಾರಯಂತಿ ಕೃಪಾಲವಃ ।
ಅತ್ರಾಸ್ಯ ಋತ್ವಿಜೋ ಭೂತ್ವಾ ನೂನಂ ನೈನಃ ಸ್ಮೃಶತ್ವಿಹ ॥೨೪॥

---

ವರು? ಶಿವಲಿಂಗಾರ್ಚನೆಯನ್ನೇ ಮುಖ್ಯವ್ರತವನ್ನಾಗಿ ಹೊಂದಿರುವ ಅವರು ಈಗ ಪರಶಿವನ ವಿಷಯವನ್ನು ವಿವರಿಸಿ ಹೇಳಲಿ. ॥೧೮-೧೯॥

ಯಾಗದ ಸಭೆಯಲ್ಲಿ ಕುಳಿತುಕೊಳ್ಳಲು ಸಭ್ಯರಿಗೆ ಮಾತ್ರ ಅವಕಾಶವುಂಟು. ಸಭ್ಯರೆಲ್ಲರೂ ಸಭಾಪತಿಯಾದ ಪರಶಿವನ ಅರ್ಚಕರೇ ಅಲ್ಲವೆ? ವಿದ್ವಾಂಸರಾಗಿ ಶಾಸ್ತ್ರಜ್ಞರಾಗಿ ತಿಳಿದವರಾಗಿ ಈ ಸಭೆಯಲ್ಲಿ ಕುಳಿತಿದ್ದೂ ಈ ಧರ್ಮಸಂಶಯಕಾಲದಲ್ಲಿ ನಿರ್ಣಯವನ್ನು ಸೂಚಿಸದಿದ್ದರೆ ಅವರನ್ನು ಸಭ್ಯರೆಂದು ಕರೆಯಬಹುದೆ? ನಿಜವಾಗಿಯೂ ಅಂತಹವರು ಸಭ್ಯರಲ್ಲ. ಸಭೆಯಲ್ಲಿ ಕಂಡುಬರುವ ಆನೆ ಮರಿಗಳು ಅಥವಾ ಕತ್ತೆಗಳು. ॥೨೦-೨೧॥

ಎಲೈ ಋಷಿಗಳಿರಾ, ಹೀಗೆ ಸ್ವೇಚ್ಛಾಚಾರಿಯಾಗಿರುವ ದಕ್ಷಬ್ರಹ್ಮನಿಂದ ಯಾಗಮಾಡಿಸಲು ನೀವು ಹೇಗೆ ಒಪ್ಪಿ ಬಂದಿರುವಿರಿ? ನಿಮಗೆ ಕೇವಲ ದ್ರವ್ಯವೇ ಪ್ರಧಾನವೇ? ಅಯಾಜ್ಯರಿಂದ ಯಾಗಮಾಡಿಸಿದರೆ ಬರುವ ಪಾಪವೆಷ್ಟು ಎಂಬುದನ್ನು ಗಮನಿಸಬಾರದೆ? ಯಜ್ಞದೀಕ್ಷಿತನಾಗಿದ್ದರೂ ದಕ್ಷನು ಉನ್ಮಾರ್ಗಗಾಮಿಯಾಗಿರುವನು. ಅವನ ನಡತೆಯನ್ನು ಪೂರ್ಣವಾಗಿ ಖಂಡಿಸಿರಿ. ನಿಜವಾಗಿಯೂ ಈ ಯಾಗಕ್ಕೆ ನೀವು ಸಹಾಯಕರಾಗಬೇಡಿರಿ. ॥೨೨-೨೩॥

ದಯಾಶಾಲಿಗಳಾದವರು ದುರ್ಮಾರ್ಗಗಾಮಿಯಾದ ಮೂಢನನ್ನು ತಿದ್ದಿ ಅವನಿಗೆ ನೈಜವಾದ ಧರ್ಮೋಪದೇಶಮಾಡಿ ಬದುಕಿಸುತ್ತಾರೆ ಹೀಗಿರುವಾಗ ನೀವು

ಸಮಾನಸುಖದುಃಖಾಶ್ಚ ಭವಂತಸ್ತೇನ ಸತ್ತಮಾಃ ।
ಅನೇನ ಮಾ ವಿನಶ್ಯಂತು ವಾರ್ಯತಾಮಯಮುದ್ಧತಃ ॥೨೫॥

॥ ಶ್ರೀಸ್ಕಂದ ಉವಾಚ ॥

ಇತ್ಥಂ ಸತ್ಯಾವಚಶ್ಶ್ರುತ್ವಾ ಮುನಯೋ ಋತ್ವಿಜೋಸ್ಯ ಹಿ ।
ಊಚುಸ್ತೇ ಮ್ಲಾನವದನಾಃ ದಕ್ಷಮೇವಂ ಪ್ರಜಾಪತಿಂ ॥೨೬॥

॥ ಋತ್ವಿಜ ಊಚುಃ ॥

ವೇದಾನಾಂ ವಚನಂ ದಕ್ಷ ಪ್ರಮಾಣಂ ಚಾತ್ರ ಸತ್ತಮ ।
ಸರ್ವಭಾಗಭುಗೀಶಾನಃ ಪ್ರಭುಃ ಪ್ರೀಣಾತಿ ವಿಶ್ವಭುಕ್ ॥೨೭॥

ಯಜಸ್ವೋಪಸದಾ ದೇವಂ ಮಹಾದೇವಂ ಸಹಾಮರೈಃ ।
ಪುರಾ ತ್ರಿಪುರನಾಶಾರ್ಥಂ ಭಾಗೋ ದತ್ತೋ ಮಹೇಶ್ವರೇ ॥೨೮॥

ತಮೇವೋಪಸದಾ ದೇವಂ ಯಜ ದಕ್ಷ ಸುಖೀಭವ ॥೨೯॥

---

ದಕ್ಷನ ಹಿತೈಷಿಗಳಾಗಿದ್ದು ಅವನ ಸುಖದುಃಖಗಳಲ್ಲಿ ಭಾಗಿಗಳಾಗಿ ಈ ದುರ್ಮಾರ್ಗಕ್ಕೆ ಎಡೆಯಿತ್ತಿರುವಿರಲ್ಲಾ. ಈಗಲೇ ದಕ್ಷನಿಗೆ ಬುದ್ಧಿಹೇಳಿ ಅವನನ್ನು ಉದ್ಧರಿಸಿರಿ. ನಿಮಗೆ ಇದರಿಂದ ಯಾವ ಪಾಪವೂ ಸಂಘಟಿಸುವುದಿಲ್ಲ. ॥೨೪-೨೫॥

ಹಾಗೆಂದು ಹಿಯ್ಯಾಳಿಸಿದ ದೇವಿಯ ಮಾತನ್ನು ಕೇಳಿ, ಆ ಸಭೆಯಲ್ಲಿದ್ದ ಋತ್ವಿಜರು ಖಿನ್ನಮನಸ್ಕರಾಗಿ ದಕ್ಷಬ್ರಹ್ಮನನ್ನು ಕುರಿತು ಹೀಗೆಂದು ನುಡಿದರು. "ಎಲೈ ದಕ್ಷಬ್ರಹ್ಮನೇ, ಈ ವಿಷಯದಲ್ಲಿ ನಮಗೆ ವೇದವಾಣಿಯೇ ನಿರ್ಣಾಯಕವಾದುದು. ವೇದದಲ್ಲಿ ಸರ್ವಯಜ್ಞಭಾಗಕ್ಕೂ ಈಶ್ವರನೇ ಯಜಮಾನನು. ಅವನೇ ಪ್ರಭುವು. ಪ್ರಪಂಚವನ್ನೇ ಭಕ್ಷಿಸುವವನು ಅವನು. ॥೨೬-೨೭॥

ಯಜ್ಞದಲ್ಲಿ ಉಪಸದವೆಂಬ ಒಂದು ಭಾಗದಿಂದ ಪರಶಿವನನ್ನು ಪೂಜಿಸು. ಹಿಂದೆ ನಾವೆಲ್ಲರೂ ತ್ರಿಪುರಾಸುರರನ್ನು ನಾಶಗೊಳಿಸಲೋಸುಗ ಯಾಗದಲ್ಲಿ ಶಂಕರನನ್ನು ತೃಪ್ತಿಪಡಿಸಿ ಅದರಿಂದ ಪ್ರಯೋಜನವನ್ನು ಪಡೆದೆವು. ಹೀಗಿರುವಾಗ ಇನ್ನು ನೀನು ಈಶ್ವರನನ್ನು ತಿರಸ್ಕರಿಸುವುದು ಉಚಿತವಲ್ಲ. ಈಗಲೇ ಎಚ್ಚೆತ್ತು ಶಂಕರನನ್ನು ಪೂಜಿಸುವವನಾಗು." ॥೨೮-೨೯॥

|| ಸೂತ ಉವಾಚ ||

ಋತ್ವಿಗ್ವಾಚಂ ತದಾ ಶ್ರುತ್ವಾ ದಕ್ಷೋ ವೀಕ್ಷನ್ ಕ್ರುಧೈವ ತಾನ್ ।
ನಿರ್ದಹನ್ನಿವ ಚಕ್ಷುರ್ಭ್ಯಾಂ ವಾಚಮೂಚೇ ದ್ವಿಜಾಂಸ್ತದಾ ||೩೦||

|| ದಕ್ಷ ಉವಾಚ ||

ನಾಹಮೌಪಸದಾ ತ್ರ್ಯಕ್ಷಂ ಸದಾ ಭಿಕ್ಷಾಶನೇ ರತಂ ।
ಯಜಾಮಿ ವಿಷ್ಣುಮೇವಾಹಂ ಸ್ವಿಷ್ಟಕೃದ್ಭಾಗಿನಂ ಚ ತಂ ||೩೧||

ಕರೋಮಿ ವೇದವಚನಂ ಸಮುಲ್ಲಂಘ್ಯ ಕ್ರುಧಾಗ್ನಿನಾ ।
ವಿಷ್ಣುರೇಷ ಸದಾಪೂಜ್ಯಃ ಸದಾಗತಿರಯಂ ಮಮ ||೩೨||

ಹಿತ್ವೈನಮಮರಶ್ರೇಷ್ಠಂ ನ ರುದ್ರೋ ಭಾಗಮರ್ಹತಿ ।
ಇತಿ ತದ್ವಚನಂ ಶ್ರುತ್ವಾ ದಧೀಚಿಃ ಕ್ರೋಧವಹ್ನಿನಾ ||೩೩||

ಜ್ವಲನ್ನಿವ ತದೋತ್ತಸ್ಥೌ ಯಥಾ ಪ್ರಾಜ್ಯಾಜ್ಯತರ್ಪಿತಃ ।
ಜ್ವಲಚ್ಛಿಖಾಶಿಖೋ ವಹ್ನಿಃ ತದಾ ಮಧ್ಯಸಭಂ ಮುನಿಃ ||೩೪||

---

ಹೀಗೆಂದು ಅಲ್ಲಿ ನೆರೆದಿದ್ದ ಋತ್ವಿಜರೂ, ಮುನಿಗಳೂ ದಕ್ಷಬ್ರಹ್ಮನಿಗೆ ಬುದ್ಧಿಹೇಳಲು, ಆ ದುರಾತ್ಮನಾದ ದಕ್ಷಬ್ರಹ್ಮನು ಅದನ್ನು ಕೇಳದೆ ಕ್ರೋಪದಿಂದ ಅವರನ್ನು ಸುಡುವಂತೆ ನೋಡುತ್ತಾ, ಅಲ್ಲಿ ನೆರೆದಿದ್ದವರನ್ನು ಕುರಿತು ಹೀಗೆಂದನು. "ನಾನು ಔಪಸತ್ತೆಂಬ ಯಜ್ಞಭಾಗದಿಂದ ಭಿಕ್ಷಾಟನೆಮಾಡುವ ಈಶ್ವರನನ್ನು ತೃಪ್ತಿ ಪಡಿಸಲಾರೆ. ವಿಷ್ಣುವಿಗೇ ಸ್ವಿಷ್ಟಕೃತ್ತನ್ನು ಕೊಟ್ಟು ಅವನನ್ನೇ ತೃಪ್ತಿಪಡಿಸುವೆನು. ||೩೦-೩೧||

ವೇದಗಳ ಮಾತನ್ನು ನಾನು ಲಕ್ಷಿಸುವುದಿಲ್ಲ. ನನ್ನ ಕ್ರೋಧಾಗ್ನಿಯಿಂದ ಅವನನ್ನು ದಹಿಸಿಬಿಡುವೆನು. ಈ ವಿಷ್ಣುವೇ ನನಗೆ ಪೂಜ್ಯನು. ಇವನೇ ನನಗೆ ರಕ್ಷಕನು. ದೇವಶ್ರೇಷ್ಠನಾದ ಇವನಿಗಲ್ಲದೆ ಈ ಯಜ್ಞದಲ್ಲಿ ರುದ್ರನಿಗೆ ಯಜ್ಞಭಾಗ ವಿಲ್ಲ" ಎಂದು ಹೆಮ್ಮೆಯಿಂದ ದಕ್ಷನು ಮಾತನಾಡಿದುದನ್ನು ಕೇಳಿ ದಧೀಚಿಯೆಂಬ ಮಹಾಮುನಿಯು ಕೋಪದಿಂದ ಉರಿದು ಮೇಲೆದ್ದನು. ||೩೨-೩೩||

ಆ ದಧೀಚಿಯು ತುಪ್ಪದ ಧಾರೆಯಿಂದ ಉರಿಯುತ್ತಿದ್ದ ಬೆಂಕಿಯಂತೆ

ಪ್ರಾಹ ದಕ್ಷಂ ಪುರಸ್ಕೃತ್ಯ ಸುರಾಣಾಮುಪಶೃಣ್ವತಾಂ ॥೩೫॥

॥ ದಧೀಚಿರುವಾಚ ॥

ಬ್ರಹ್ಮಣೋ ಮಾನಸಃ ಪುತ್ರ ದಕ್ಷ ದಕ್ಷೋಽಸಿ ದೀಕ್ಷಿತಃ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೩೬॥

ದೇವದೇವಂ ವಿರೂಪಾಕ್ಷಂ ಯಜ್ಞೇಶಂ ಪರಮೇಶ್ವರಂ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೩೭॥

ವಿಶ್ವತಶ್ಚಕ್ಷುಷಂ ದೇವಂ ವಿಶ್ವತೋಮುಖಮೀಶ್ವರಂ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರ ನಾಯಕಂ ॥೩೮॥

ವಿಶ್ವಾಧಿಕಂ ಮಹಾದೇವಂ ವಿಷ್ಣುಬ್ರಹ್ಮಾದಿನಾಯಕಂ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೩೯॥

ವಿಶ್ವಜಾತೇಷು ಪಶುಷು ಸ ಕಥಂ ಪಶುಪೋ ಭವೇತ್ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೪೦॥

---

ಕಾಣುತ್ತಿದ್ದನು. ಅಷ್ಟು ರೋಷಭೀಷಣನಾಗಿ ದಧೀಚಿಯು ಮೇಲೆದ್ದು ದೇವತೆಗಳೆಲ್ಲರಿಗೂ ಕೇಳುವಂತೆ ದಕ್ಷಬ್ರಹ್ಮನೊಡನೆ ಹೀಗೆಂದನು. ॥೩೪-೩೫॥

"ಎಲೈ ಬ್ರಹ್ಮಮಾನಸಪುತ್ರನಾದ ದಕ್ಷಬ್ರಹ್ಮನೇ, ಆಹಾ! ನೀನು ಯಜ್ಞದೀಕ್ಷಿತನಾಗಿರುವೆಯಲ್ಲವೆ? ರುದ್ರನು ಆ ಯಜ್ಞಕ್ಕೆ ನಾಯಕನೆನಿಸಿರುವುದು ನಿನಗೆ ತಿಳಿಯದೋ! ಪರಮೇಶ್ವರನು ದೇವದೇವನು. ಯಜ್ಞಗಳಿಗೆ ಈಶ್ವರನು. ಅವನೇ ಪ್ರಪಂಚ. ಪ್ರಪಂಚಕ್ಕೆ ಕಣ್ಣಿನಂತಿರುವವನು ಅವನು. ಆದರೆ ಸರ್ವತೋಮುಖನಾಗಿ ಪ್ರಪಂಚವನ್ನು ಮೀರಿ, ಪ್ರಪಂಚಕ್ಕೆ ಸೇರದವನಾಗಿರುವನು. ಪರಶಿವನು ಬ್ರಹ್ಮವಿಷ್ಣ್ವಾದಿಗಳಿಗಿಂತ ಮೀರಿದವನು. ವಿಶ್ವದಲ್ಲಿ ತೋರಿಬರುವ ಸಕಲ ಅಜ್ಞಾನಿಗಳಿಗೂ ಅವನೇ ಪಶುಪತಿಯು. ಅಂತಹ ಪರಶಿವನನ್ನು ನೀನೂ ಈ ಯಜ್ಞಕ್ಕೆ ಆಹ್ವಾನಿಸದಿರುವುದು ನ್ಯಾಯವೆ? ॥೩೬-೩೭-೩೮-೩೯-೪೦॥

ಯನ್ಮಾಯಾಮೋಹಿತಾಸ್ಸರ್ವೇ ವಿಷ್ಣು ಬ್ರಹ್ಮಾದಯಸ್ಸುರಾಃ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೪೧॥

ಭವಾನಪಿ ಮಹಾದೇವಂ ಕಿಂ ನ ಜಾನಾಸಿ ಶಂಕರಂ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೪೨॥

ಬ್ರಹ್ಮಣೋಸ್ಯ ಶಿರಶ್ಛಿನ್ನಂ ಮಹೇಶೇನ ಪಿನಾಕಿನಾ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೪೩॥

ಬ್ರಹ್ಮಣೇಸ್ಮೈ ದದೌ ವೇದಾನೀಶೋ ವೇದಾಂತಸಂಸ್ತುತಃ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೪೪॥

ವಿಷ್ಣವೇಸ್ಮೈ ದದೌ ಶಂಭುಶ್ಚಕ್ರಂ ದೈತ್ಯವಿನಾಶಕೃತ್ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೪೫॥

ವಿಷ್ಣವೇಸ್ಮೈ ಮಹಾಲಕ್ಷ್ಮೀಂ ಭಾರ್ಯಾತ್ವೇನ ದದೌ ಹರಃ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೪೬॥

ವೈಕುಂಠಸ್ಯಾಧಿಪತ್ಯಂ ಚ ನೀಲಕಂಠೋ ದದೌ ಪುರಾ ।
ಕಸ್ಮಾನ್ನಾಹೂಯಸೇ ರುದ್ರಂ ಸಾಕ್ಷಾದಧ್ವರನಾಯಕಂ ॥೪೭॥

ಗರ್ವೋದ್ರಿಕ್ತೋ ಯದಾ ವಿಷ್ಣುರಭೂಲ್ಲೋಕವಿನಾಶಕೃತ್ ।
ಮತ್ಸ್ಯವಾರಾಹಸಿಂಹಾದ್ಯೈರ್ದೇಹೈರ್ಲೋಕೋಪಕಾರಕಃ ॥೪೮॥

---

ಎಲೈ ವಿಷ್ಣುಬ್ರಹ್ಮಾದಿ ದೇವತೆಗಳಿರಾ, ನೀವು ಶಿವಮಾಯಾಮೋಹಿತರಾಗಿರುವಿರಿ. ಆದರಿಂದಲೇ ನಿಮಗೆ ಶಿವಸ್ವರೂಪಪರಿಜ್ಞಾನವಿಲ್ಲ. ಬ್ರಹ್ಮನೇ, ಹಿಂದೆ ನಿನ್ನ ಶಿರಸ್ಸನ್ನು ಪಿನಾಕಪಾಣಿಯಾದ ಮಹೇಶ್ವರನು ಕತ್ತರಿಸಲಿಲ್ಲವೆ? ಹಾಗೆಯೇ ಸಕಲ ವೇದರಾಶಿಯನ್ನೂ ಬ್ರಹ್ಮನಾದ ನಿನಗೆ ಮಹಾದೇವನು ದಾನಮಾಡಲಿಲ್ಲವೆ? ವಿಷ್ಣುವಿಗೆ ಬಲಿಷ್ಠವಾದ ದೈತ್ಯನಾಶಕವಾದ ಚಕ್ರವನ್ನೂ ಅನುಗ್ರಹಿಸಿ ಕೊಟ್ಟಿರುವನು. ಮಹಾಲಕ್ಷ್ಮಿಯನ್ನು ವಿಷ್ಣುವಿಗೆ ಪತ್ನಿಯನ್ನಾಗಿ ಮಾಡಿಸಿ ವೈಕುಂಠ ಲೋಕದ ಆಧಿಪತ್ಯವನ್ನು ಪರಶಿವನಲ್ಲವೆ ಒದಗಿಸಿದವನು! ॥೪೧-೪೨-೪೩-೪೪-೪೫-೪೬-೪೭॥

ಮತ್ಸ್ಯ, ವರಾಹ, ನರಸಿಂಹ ಮುಂತಾದ ಅವತಾರಗಳಿಂದ ಲೋಕೋಪ

ಸ ಶಿಕ್ಷಿತಶ್ಚ ಬಹುಧಾ ಮಹಾದೇವೇನ ಶೂಲಿನಾ ।
ತವಾಯಂ ಕೋಪದಗ್ಧಸ್ಯ ಮಹಾದೇವೇನ ರಕ್ಷಕಃ ॥೪೯॥

ಕೋಽವಾಯಂ ವಿಷ್ಣುರೇವಾದ್ಯ ರಕ್ಷಕಸ್ತೇ ಕಥಂ ಭವೇತ್ ।
ಮೃಗೇಂದ್ರನಖರಾಘಾತಂ ಜಂಬುಕಃ ಕಿಂ ಸಹಿಷ್ಯತಿ ॥೫೦॥

ಯದ್ಭಕ್ತೈರ್ಧಿಕ್ಕೃತೋ ವಿಷ್ಣುಃ ಸಹ ಲಕ್ಷ್ಮ್ಯಾಕೃತಿಕೋಪನೈಃ ।
ಶಾಪಾಸ್ತ್ರೈರ್ದಾರಿತೋ ವಿಷ್ಣುರಸ್ತ್ರೈಶ್ಶಿವಗಣೈರಪಿ ॥೫೧॥

ವಿಷ್ಣೋಃ ಕಪಾಲಂ ನಿರ್ಭಿದ್ಯ ಪಪೌ ರಕ್ತಂ ಸ ಭೈರವಃ ।
ವಿಷ್ವಕ್ಸೇನೋ ಗಣೋಽಸ್ಯೈವ ವಿಷ್ಣೋಃ ಸಂಪಶ್ಯತಃ ಪುರಃ ॥೫೨॥

ಇಷೀಕಾಪ್ರೋತಲೀಕ್ಷೇವ ಶೂಲಪ್ರೋತಸ್ತದಾ ಕರೋತ್ ।
ಇಂದ್ರಸ್ಯಾಸ್ಯ ಭುಜಸ್ತಂಭೋ ಯೇನಾಕಾರಿ ಪಿನಾಕಿನಾ ॥೫೩॥

---

ಕಾರವಮಾಡಿದರೂ ವಿಷ್ಣುವು ಗರ್ವಿಷ್ಠನಾಗಿ ಲೋಕಕಂಟಕನಾಗುವುದನ್ನು ತಿಳಿದು ಮಹೇಶ್ವರನೇ ವಿಷ್ಣುವನ್ನು ನಾನಾರೀತಿಯಲ್ಲಿ ಶಿಕ್ಷಿಸಿ ಬುದ್ಧಿಗಲಿಸಲಿಲ್ಲವೆ? ಅಂತಹ ಮಹಾದೇವನ ಕೋಪಜ್ವಾಲೆಯಿಂದ ಸುಡುತ್ತಲಿರುವ ನನ್ನನ್ನು (ದಕ್ಷನನ್ನು) ಯಾರುತಾನೆ ಉಳಿಸಬಲ್ಲರು? ಅಂತಹ ಆಪತ್ಸಮಯದಲ್ಲಿ ವಿಷ್ಣುವು ನಿನಗೆ ರಕ್ಷಕನಾದಾನೆ! ಖಂಡಿತವಾಗಿಯೂ ಇಲ್ಲ. ಸಿಂಹದಿಂದ ಆಕ್ರಮಿಸಲ್ಪಟ್ಟವನನ್ನು ನರಿ ಬಂದು ರಕ್ಷಿಸುವುದುಂಟೆ? ಸಿಂಹದ ಏಟನ್ನು ನರಿ ಸಹಿಸಬಲ್ಲುದೆ? ॥೪೮-೪೯-೫೦॥

ಶಿವಭಕ್ತರಿಂದ ವಿಷ್ಣುವು ಪತ್ನಿಯೊಡನೆ ಹೆದರಿ ನಡುಗುವನು. ಈಶ್ವರ ಭಕ್ತರ ಶಾಪಕ್ಕೂ, ಅಸ್ತ್ರಗಳಿಗೂ ವಿಷ್ಣುವು ಭಯಪಡುವನು. ಭೈರವನೆಂಬ ಶಿವಗಣ ಶ್ರೇಷ್ಠನು ಹಿಂದೆ ಒಂದುಸಾರಿ ಮಹಾವಿಷ್ಣುವಿನ ತಲೆಯನ್ನೊಡೆದು ರಕ್ತಪಾನ ಮಾಡಿಬಿಟ್ಟನು. ವಿಷ್ಣುಗಣಶ್ರೇಷ್ಠನಾದ ವಿಷ್ವಕ್ಸೇನನನ್ನು ಭೈರವನು ವಿಷ್ಣುವಿನ ಎದುರಿಗೆ ಮುಳ್ಳಿಗೆ (ಹಂಚೀಕಡ್ಡಿಯ ಊಬು) ಸಿಕ್ಕಿ ನರಳುವ ನೊಣದಂತೆ ತನ್ನ ತ್ರಿಶೂಲದಿಂದ ಚುಚ್ಚಿ ನರಳಿಸಿಬಿಟ್ಟನು. ॥೫೧-೫೨॥

ಹಿಂದೆ ಒಂದುಸಾರಿ ವಜ್ರಾಯುಧಧಾರಿಯಾದ ಇಂದ್ರನ ಮತ್ತು ಅವನ ಅನುಯಾಯಿಗಳಾದ ದೇವತೆಗಳ ಭುಜಗಳು ಸ್ತಂಬದಂತೆ ಸ್ತಬ್ಧವಾಗಿ ನಿಂತು

ಸ ವಜ್ರಸ್ಸಸುರೈಃ ಪೂರ್ವಂ ಗುರುಣೇಶಃ ಪ್ರಸಾದಿತಃ ।
ತದಾ ಮುನೋಚ್ಚೈವ ಹಸನ್ ಮಹೇಶೋ ಭಕ್ತವತ್ಸಲಃ ॥೫೪॥

ಯಮೋಯಂ ನಿಹತಃ ಪೂರ್ವಂ ಶಿವಪಾದಾಗ್ರತಾಡಿತಃ ।
ಮೃಕಂಡುತನಯಸ್ಯಾಸ್ಯ ಹಿತಾರ್ಥಂ ಶೂಲಪಾಣಿನಾ ॥೫೫॥

ವಾಯುರಾಯಾಸಿತಃ ಪೂರ್ವಂ ತೃಣಾಗ್ರಚಲನೇಪ್ಯಯಂ ।
ಮಹಾದೇವಸ್ಯ ಪುರತೋ ನಾಪಹತ್ತೃಣಮಪ್ಯಯಂ ॥೫೬॥

ಅಗ್ನಿಶ್ಶಿಖಾವಲೀಘೋಯಂ ತ್ವದ್ಧವಿರ್ಭಕ್ಷಕೇ ರತಃ ।
ಚಂದ್ರೋಯಂ ತವ ಶಾಪೇನ ಯಕ್ಷ್ಮರೋಗಾರ್ದಿತಃ ಪುರಾ ॥೫೭॥

ಪ್ರಸಾದತೋ ಮಹೇಶೇನ ಸುಧಾಧಾನ್ಯೈಕಮೌಲಿನಾ ।
ಸೂರ್ಯೋಯಂ ನೇತ್ರಪಾತ್ರತ್ವಮಗಚ್ಛಚ್ಛಂಕರಸ್ಯ ಹಿ ॥೫೮॥

---

ಬಿಟ್ಟವು. ದೇವತೆಗಳ ಮತ್ತು ದೇವೇಂದ್ರನ ಪ್ರಾರ್ಥನೆಗೆ ಮರುಗಿ ಭಕ್ತವತ್ಸಲನಾದ ಮಹೇಶ್ವರನು ಅವರನ್ನು ಮೊದಲಿನ ಸ್ಥಿತಿಯಲ್ಲಿ ಕರುಣಿಸಿದನು. ॥೫೩-೫೪॥

ಮೃಕಂಡು ಪುತ್ರನಾದ ಮಾರ್ಕಂಡೇಯನನ್ನು ಎಳೆಯಲು ಬಂದ ಯಮ ಧರ್ಮನನ್ನು ಹಿಂದೆ ಶಿಕ್ಷಿಸಿ ಕೊನೆಗೆ ಅವನನ್ನು ಬದುಕಿಸಿ ಕಳುಹಿಸಿಕೊಟ್ಟವನು ಶಂಕರನಲ್ಲವೆ? ಈಶ್ವರನು ಶಕ್ತಿಕೊಟ್ಟು ಇಟ್ಟ ಒಂದು ಹುಲ್ಲುಕಡ್ಡಿಯನ್ನು ವಾಯುವು ಅಲ್ಲಾಡಿಸಲಾರದೆ ಹೋದನು. ಅದನ್ನೇ ಅಗ್ನಿಪುರುಷನು ಸುಡಲಾರದೆ ವಿಫಲನಾದನು. ಹೀಗೆ ಎಲ್ಲಾ ದಿಕ್ಪಾಲಕರೂ ಈಶ್ವರಶಕ್ತಿಯ ಮುಂದೆ ಮಂಕಾಗಿ ಹೋಗಿರುವರು. ॥೫೫-೫೬॥

ನಿನ್ನ ಯಾಗದಲ್ಲಿ ಹವಿಸ್ಸನ್ನು ಭಕ್ಷಿಸಿದುದರ ಫಲವಾಗಿ ಅಗ್ನಿಯು ಶಿವನ ಶರೀರದಲ್ಲಿ ಬಂಧಿಸಲ್ಪಟ್ಟಿರುವನು. ಮತ್ತು ನೀನು ಚಂದ್ರನಿಗೆ ಕೊಟ್ಟಿದ್ದ ಕ್ಷಯ ರೋಗದ ಶಾಪವನ್ನು ಪರಿಹರಿಸಿದವನು ಶಂಕರನಲ್ಲವೆ? ಸೂರ್ಯದೇವನು ಚಂದ್ರ ಶೇಖರನಾದ ಮಹೇಶ್ವರನನ್ನು ಬಹಳವಾಗಿ ಪ್ರಾರ್ಥಿಸಿದುದರಿಂದಲೇ ಈಗಲೂ ಸೂರ್ಯನು ಶಿವನ ಒಂದು ನೇತ್ರವಾಗಿ ನಿಂತಿರುವನು. ॥೫೭-೫೮॥

ಕುಬೇರೋಽಪ್ಯಯುಮೀಶಸ್ಯ ಪ್ರಸಾದಾತ್ಸಖ್ಯಮವಾಪ್ತವಾನ್ ।
ವರುಣೋ ಜಲರೋಗಾರ್ತೋ ಮಹೇಶೇನ ಪ್ರಸಾದಿತಃ ॥೫೯॥

ವಸವೋಽಪಿ ಮಹೇಶೇನ ದಯಯಾ ಸಂಪ್ರಸಾದಿತಾಃ ।
ಆದಿತ್ಯಾ ಮರುತಸ್ಸರ್ವೇ ಶಕ್ರೇಣ ಸಹ ಭಾಗಿನಃ ॥೬೦॥

ಚಕಾರ ಪರಮೇಶೋಽಯಂ ಪ್ರಸಾದೇನ ಮಹೇಶ್ವರಃ ।
ಭಿಷಜಾವಶ್ವಿನೌ ದೇವೌ ಸೌಮ್ಯೋ ಸೋಮಪ್ರಸಾದತಃ ॥೬೧॥

ಏವಂ ಪ್ರಸಾದಿತಾ ದೇವಾ ಮಹೇಶೇನ ದಯಾಳುನಾ ।
ರುದ್ರಸಾರೂಪ್ಯಮಾಪುಸ್ತೇ ಮಹೇಶಸ್ಯ ಪ್ರಸಾದತಃ ॥೬೨॥

ತಥಾನ್ಯೇ ಮುನಯಃ ಸಿದ್ಧಾ ಮಹೇಶೇನ ಪ್ರಸಾದಿತಾಃ ।
ತತ್ಪ್ರಸಾದಾಯ ಕರ್ಮಾಣಿ ಕುರ್ವಂತಿ ಮುನಯಸ್ಸುರಾಃ ॥೬೩॥

ತಸ್ಯ ಲಿಂಗಂ ಸದಾಕಾಲಂ ಪೂಜಯಂತಿ ಸುರಾಸುರಾಃ ।
ಪಶುಭೂತೇಷು ಯುಷ್ಮಾಸು ಕಥಂ ಪಶುಪತಿಶ್ಶಿವಃ ॥೬೪॥

---

ಕುಬೇರನು ಪರಶಿವನನ್ನು ಮೆಚ್ಚಿಸಿ ಅವನಿಗೆ ಸ್ನೇಹಿತನಾಗಿರುವನು. ಜಲರೋಗದಿಂದ ನರಳುತ್ತಿರುವ ವರುಣನನ್ನು ರಕ್ಷಿಸಿದವನೂ ಮಹೇಶ್ವರನೇ. ಹಾಗೆಯೇ ಮಹಾದೇವನಿಂದ ಅಷ್ಟವಸುಗಳೂ, ದ್ವಾದಶಾದಿತ್ಯರೂ, ಸಪ್ತಮರುತ್ತುಗಳೂ ತಮ್ಮ ತಮ್ಮ ಕಷ್ಟಗಳಿಂದ ಪಾರಾಗಿ ಇಂದಿಗೂ ಜೀವಿಸಿರುವರು. ॥೫೯-೬೦॥

ಮತ್ತೂ ಅವರಿಗೆಲ್ಲರಿಗೂ ಯಜ್ಞದಲ್ಲಿ ಸಮಭಾಗವೊದಗುವಂತೆ ಪರಮೇಶ್ವರನೇ ಅನುಗ್ರಹಿಸಿರುವನು. ಇದೇ ರೀತಿ ಅಶ್ವಿನೀದೇವತೆಗಳೆನಿಸಿದ ದೇವತೆಗಳಿಬ್ಬರು ಶಿವಾನುಗ್ರಹದಿಂದ ದೇವವೈದ್ಯರೆನಿಸಿಕೊಂಡಿರುವರು. ಇನ್ನೂ ಅನೇಕ ದೇವತೆಗಳು ನಾನಾರೀತಿ ಪರಶಿವನನ್ನು ಧ್ಯಾನಿಸಿ ಪೂಜಿಸಿ ಶಿವಸಾರೂಪ್ಯವನ್ನು ಪಡೆದಿರುವರು. ॥೬೧-೬೨॥

ಅನೇಕ ಮುನಿಗಳೂ, ಮಹರ್ಷಿಗಳೂ, ದೇವತೆಗಳೂ, ರಾಕ್ಷಸರೂ ಶಿವಪ್ರೀತಿಕರಗಳಾದ ಕರ್ಮಗಳನ್ನು ಮಾಡಿ ಮಹಾದೇವನ ಅನುಗ್ರಹವನ್ನು ಪಡೆದು ಧನ್ಯರಾಗಿರುವರು. ಅವರೆಲ್ಲರೂ ಸದಾ ಶಿವಲಿಂಗವನ್ನು ತಪ್ಪದೆ ಪೂಜಿಸುವರು. ಹೀಗಿರುವಾಗ ಪಶುಗಳಾದ ನಿಮಗೆ ಪಶುಪತಿಯಾದ ಈಶ್ವರನಲ್ಲವೆ ಯಜಮಾನನು!

ಗಣ್ಯತೇ ದೇವದೇವೋಽಸೌ ಮಹಾದೇವಸ್ಸನಾತನಃ ।
ವಿಶ್ವಾಧಿಕೋ ಮಹಾರುದ್ರಃ ಪೂಜನೀಯಸ್ತ್ವಯೇಜ್ಯಯಾ ॥೬೫॥

ಪೂಜ್ಯೋಽಯಂ ದೇವದೇವೇಶಃ ಸರ್ವೇಷಾಂ ಸರ್ವಕರ್ಮಭಿಃ ।
ತಸ್ಯ ಪ್ರಸಾದೇನ ತವ ಸಫಲೋಽಸ್ತು ಮನೋರಥಃ ॥೬೬॥

ತತ್ಪ್ರಸಾದೇನ ಸರ್ವಸ್ಯ ಭುಕ್ತಿರ್ಮುಕ್ತಿರ್ಹಿ ಸಿಧ್ಯತಿ ।
ತಸ್ಮಾನ್ಮಾವಿಪದಃ ಸಂತು ಶೃಣು ಮದ್ವಚನಂ ಮುದಾ ॥೬೭॥

ರುದ್ರಕ್ರೋಧಾಗ್ನಿದಗ್ಧಸ್ಯ ತವ ನಾನ್ಯತ್ಪರಾಯಣಂ ।
ನ ಬ್ರಹ್ಮಾಯಂ ನೈವ ವಿಷ್ಣುರ್ನಚಾತ್ರ ಸುರಪುಂಗವಾಃ ॥೬೮॥

ಪ್ರಭವಿಷ್ಯಂತಿ ಸಾಹಾಯ್ಯೇ ತವ ದಕ್ಷ ಮಖೇಽಧುನಾ ।
ಅಪೂಜ್ಯಪೂಜನಾದ್ದಕ್ಷ ಪೂಜ್ಯಾನಾಂ ಚಾಪ್ಯಪೂಜನೇ ॥೬೯॥

ನ ಜ್ಯಾಯಸೀಂ ಗತಿಂ ವಿಂದೇದಿಜ್ಯಯಾ ಯಾಜ್ಯ ಏವ ಹಿ ।
ಭವಿಷ್ಯತಿ ಮುನಿಶ್ರೇಷ್ಠೈರಿತ್ಯುವಾಚ ದಧೀಚಕಃ ॥೭೦॥

---

ಅಂತಹ ವಿಶ್ವಾಧಿಕನೂ ಮಹಾರುದ್ರನೂ ಸನಾತನನೂ ಆಗಿರುವ ಶಿವನನ್ನು ಈ ಯಾಗದಲ್ಲಿ ತಿರಸ್ಕರಿಸುವುದು ಯಾವ ನ್ಯಾಯ? ಎಲ್ಲರೂ ವಿವೇಕದಿಂದ ವರ್ತಿಸಿ ಮೊದಲು ಪರಶಿವನಿಗೆ ಪೂಜೆಯನ್ನು ಸಲ್ಲಿಸಿರಿ. ॥೬೩-೬೪-೬೫॥

ಎಲ್ಲ ಕರ್ಮಗಳಲ್ಲಿಯೂ ಎಲ್ಲರೂ ಪರಶಿವನನ್ನು ಪೂಜಿಸಲೇಬೇಕು. ಶಿವ ಪ್ರಸಾದದಿಂದಲೇ ನಿನ್ನ ಇಷ್ಟಾರ್ಥವು ಸಿದ್ಧಿಸುವುದು. ಶಿವಾನುಗ್ರಹದಿಂದಲೇ ಸರ್ವರಿಗೂ ಭುಕ್ತಿ ಮತ್ತು ಮುಕ್ತಿಯು ಸಿದ್ಧಿಸುವುದು. ಎಲೈ ದಕ್ಷಬ್ರಹ್ಮನೇ ನನ್ನ ಮಾತನ್ನು ಕೇಳು, ನಿನ್ನ ವಿಪತ್ತುಗಳೆಲ್ಲಾ ದೂರವಾಗುವುವು. ॥೬೬-೬೭॥

ದಕ್ಷಬ್ರಹ್ಮನೇ, ರುದ್ರಕೋಪದಿಂದ ನೀನು ಹಾಳಾಗುವ ಸನ್ನಿವೇಶ ಒದಗಿದರೆ ಆಗ ಯಾರೂ ನಿನ್ನನ್ನು ಉಳಿಸಲಾರರು. ಬ್ರಹ್ಮ, ವಿಷ್ಣು ಅಥವಾ ಮತ್ತಾವ ದೇವತೆಗಳೂ ನಿನ್ನ ಪಕ್ಷದಲ್ಲಿ ನಿಂತು ಸಹಾಯಮಾಡಲಾರರು. ಯಾಗಾದಿಗಳಲ್ಲಿ ಪೂಜ್ಯರನ್ನು ಪೂಜಿಸದಿರುವುದೂ ಮಹಾಪಾಪಕರವೆನಿಸುವುದು. ಒಂದುವೇಳೆ ಈರೀತಿ ನೀನು ಯಾಗವನ್ನು ನೆರವೇರಿಸಿದರೂ ನಿನಗೆ ಯಾಗದ ಫಲವು ದೊರೆಯಲಾರದು.

॥ ಸೂತ ಉವಾಚ ॥

ತದ್ದಧೀಚಿವಚಃ ಶ್ರುತ್ವಾ ದಕ್ಷಃ ಕ್ರುದ್ಧೋಽಭ್ಯಭಾಷತ ।
ಸಂವೀಕ್ಷ್ಯ ವಿಷ್ಣುಬ್ರಹ್ಮಾಣೌ ಸುರಾನನ್ಯಾಂತ್ಸತೀಂಸ್ತದಾ ॥೨೧॥

॥ ದಕ್ಷ ಉವಾಚ ॥

ಕಿಂ ಮೇ ರುದ್ರೇಣ ಕರ್ತವ್ಯಮಭವ್ಯೇನ ಪಿನಾಕಿನಾ ।
ಇಜ್ಯೋಽಯಂ ವಿಷ್ಣುರೇವಾತ್ರ ಸುರಾಸ್ಸರ್ವೇ ಮಮಾಧುನಾ ॥೨೨॥

॥ ದಧೀಚಿರುವಾಚ ॥

ಗಚ್ಛ ವಾ ತ್ವಂ ಯಥಾ ಜೋಷಂ ನ ಸದಸ್ಯೋಽಸಿ ಮೇ ರಿಪುಃ ।
ತದ್ದಕ್ಷವಚನಂ ಶ್ರುತ್ವಾ ಮಹರ್ಷಿಃ ಶಾಂಭವಸ್ತದಾ ॥೨೩॥

ಸಹ ಶಿಷ್ಯೈಸ್ತದೋತ್ತಸ್ಥೌ ಧೂನ್ವನ್ವಾಸೋಽಬ್ರವೀತ್ಕ್ರುಧಾ ॥೨೪॥

ನ ಯತ್ರ ಪೂಜ್ಯತೇ ರುದ್ರೋ ಭಗವಾನ್ ಶಂಕರೋ ಯದಿ ।
ತತ್ರ ಯಾಂತ್ಯೇವ ವಿಪದಃ ಸಂಪದಾ ನೈವ ಸಂಪ್ರತಿ ॥೨೫॥

---

ಇದು ನಿಜ ಎಂದು ಸಕಲ ಮುನಿಗಳೊಡಗೂಡಿ ದಧೀಚಿಮಹರ್ಷಿಯು ದಕ್ಷಬ್ರಹ್ಮನಿಗೆ ಹೇಳಿದನು. ॥೧೮-೧೯-೨೦॥

ಆ ದಧೀಚಿಯ ಮಾತುಗಳನ್ನು ಕೇಳಿ ದಕ್ಷಬ್ರಹ್ಮನು ಅತ್ಯಂತ ಕುಪಿತನಾಗಿ ಅಲ್ಲಿಯೇ ಕುಳಿತಿದ್ದ ವಿಷ್ಣು, ಬ್ರಹ್ಮ ಇತರ ದೇವತೆಗಳು, ಮಗಳಾದ ಸತೀದೇವಿ ಇವರನ್ನು ನೋಡುತ್ತಾ "ಇರಲಿ ನನಗೆ ಈಶ್ವರನಿಂದ ಏನೂ ಆಗಲಾರದು. ಈ ಯಾಗದಲ್ಲಿ ನಾನು ಅವನನ್ನು ಪೂಜಿಸುವುದೇ ಇಲ್ಲ. ವಿಷ್ಣುವೇ ನನಗೆ ಪೂಜ್ಯನು. ಅದರಂತೆಯೇ ನನ್ನ ಎಲ್ಲಾ ದೇವತೆಗಳೂ ವಿಷ್ಣುವನ್ನೇ ಪೂಜಿಸಲಿ. ॥೨೧-೨೨॥

ನಿನಗೆ ಇಷ್ಟವಿಲ್ಲದಿದ್ದರೆ ಈ ಸಭೆಯಿಂದ ಎದ್ದುಹೋಗು. ನೀನು ನನ್ನ ಸದಸ್ಯನಲ್ಲ. ನಿನ್ನನ್ನು ನಾನು ಶತ್ರುವಿನಂತೆ ಭಾವಿಸುವೆನು" ಎಂದು ನಿಷ್ಠುರವಾಗಿ ಮಾತನಾಡಲು, ಶಾಂಭವನಾದ ದಧೀಚಿಮುನಿಯು ಕೂಡಲೇ ಕೋಪದಿಂದ ಕೂಡಿ, ತನ್ನ ವಸ್ತ್ರವನ್ನು ಕೊಡವಿಕೊಳ್ಳುತ್ತಾ ಶಿಷ್ಯರೊಡಗೂಡಿ ಹೊರಟು ಹೀಗೆ ನುಡಿದನು "ಎಲ್ಲಿ ಪರಮಪೂಜ್ಯನಾದ ಶಂಕರನಿಗೆ ಪೂಜೆ ನಡೆಯುವುದಿಲ್ಲವೋ ಅಲ್ಲಿ ವಿಪತ್ಪರಂ

ಧ್ವಸ್ತೋ ಭವಿಷ್ಯತಿ ಮಖೋ ಮಹಾದೇವಸ್ಯ ಮನ್ಯುನಾ ।
ಸರ್ವೈಸ್ಸುರಾಸುರೈಸ್ಸಾರ್ಧಂ ದೇವೈಶ್ಚ ಮುನಿಭಿಸ್ಸಹ ॥೨೬॥

ವಿಶ್ರುತಶ್ರುತಿವಾಕ್ಯಂ ಚ ನೈವ ತೇ ರೋಚತೇಧುನಾ ।
ದಂಡೋತ್ರ ಸಂಪತೇದೀಶಾದಹೀಶವರಮನ್ಯುನಾ ॥೨೭॥

ನ ವಿಷ್ಣುರ್ನವಿಧಾತಾತ್ರ ರಕ್ಷಕೋಽಸ್ತಿ ತವಾತ್ರ ಹಿ ।
ಪಶ್ಯಾಮಿ ಸಿಂಹಸ್ಯ ಪುರೋ ಕ್ರೋಷ್ಟುಕಾಕ್ರೋಶವತ್ ವೃಥಾ ॥೨೮॥

ಇತ್ಯುಕ್ತ್ವಾ ನಿರ್ಗತಸ್ತಸ್ಮಾದ್ಯಜ್ಞವಾಟಾತ್ತದಾ ಮುನಿಃ ।
ವೇದಾಸ್ಸಪ್ರಣವಾಸ್ತಸ್ಮಾಚ್ಛಂದಾಂಸಿ ಮುನಯಸ್ತಥಾ ॥೨೯॥

ಶಾಂಭವಾ ಯೇ ಮುನಿಶ್ರೇಷ್ಠಾ ದೂರ್ವಾಸಾ ಜಮದಗ್ನಿಕಾಃ ।
ಶೇಪುರ್ದಕ್ಷಂ ತದಾ ತತ್ರ ದಕ್ಷಂ ಚಾವಿನಯೋದ್ಧತಂ ॥೩೦॥

---

ಪರೆಗಳು ಎಂದೂ ತಪ್ಪಲಾರವು. ಮತ್ತು ಅಲ್ಲಿಗೆ ಶುಭವು ಎಂದೂ ಲಭಿಸಲಾರದು. ॥೨೩-೨೪-೨೫॥

ಮಹಾದೇವನ ಕೋಪದಿಂದ ಈ ಯಜ್ಞವು ಈಗಲೇ ನಾಶವಾಗುವುದು. ಅಲ್ಲದೆ ಇಲ್ಲಿ ನೆರೆದಿರುವ ದೇವರಾಕ್ಷಸರೂ ದೇವಮುನಿಗಳೂ ನಾಶಹೊಂದುವರು. ವೇದವಾಣಿಯೂ ಸಹ ನಿನಗೆ ಈಗ ರುಚಿಸದೇ ಹೋಗಿದೆ. ಇದಕ್ಕೆ ಶಿಕ್ಷೆಯು ನಿನಗೆ ಕುಪಿತನಾದ ಈಶ್ವರನಿಂದಲೇ ಲಭಿಸಲಿ. ॥೨೬-೨೬॥

ಅಂತಹ ವಿಪತ್ಕಾಲದಲ್ಲಿ ನಿನಗೆ ವಿಷ್ಣು, ಬ್ರಹ್ಮ ಇವರಾರೂ ರಕ್ಷಕರಾಗುವುದಿಲ್ಲ. ಸಿಂಹದ ಮುಂದೆ ನರಿಯು ಕೂಗು ಏನು ಮಾಡೀತು ?" ಎಂದು ನಿಷ್ಠುರವಾಗಿ ಹೇಳಿ ಆ ಯಜ್ಞಮಂಟಪದಿಂದ ದಧೀಚಿಮುನಿಯು ಹೊರಟುಹೋದನು. ಕೂಡಲೇ ವೇದಗಳೂ, ಪ್ರಣವವೂ, ಛಂದಸ್ಸುಗಳೂ, ಶಾಂಭವರಾದ ಅನೇಕ ಮಹರ್ಷಿಗಳೂ, ದೂರ್ವಾಸ, ಜಮದಗ್ನಿ ಮುಂತಾದವರೂ ದಕ್ಷಬ್ರಹ್ಮನನ್ನು ನಿಂದಿಸುತ್ತಾ ಧೂರ್ತನೆಂದು ಹಿಯ್ಯಾಳಿಸುತ್ತಾ ಹೊರಟುಹೋದರು. ॥೨೮-೨೯-೩೦॥

॥ ಮುನಯ ಊಚುಃ ॥

ನೈವಾಯಂ ತೇ ಭವೇ ಮನ್ಯುಃ ಶಿವಮನ್ಯುಪ್ರದೂಷಿತಃ ।
ಗಚ್ಛಾಮೋಽಸ್ಮಾದ್ಯಜ್ಞವಾಟಾತ್ ಕ್ಷಿಪ್ರಂ ದಕ್ಷೋ ವಿನಶ್ಯತು ॥೮೧॥

ಸಹೈವ ಬ್ರಹ್ಮವಿಷ್ಣುಭ್ಯಾಂ ಸುರೈರತ್ರೈವ ಭೂಸುರೈಃ ।
ಇತ್ಯುಕ್ತ್ವಾ ನಿರ್ಗತಾಸ್ತತ್ರ ಶಾಂಭವಾ ಯೇ ಮುನೀಶ್ವರಾಃ ॥೮೨॥

ತತ್ರ ಕ್ರುದ್ಧಾ ಸತೀ ವಾಚಮುವೋಚತ್ಕ್ರೋಧವೀಕ್ಷಣೈಃ ॥೮೩॥

॥ ಸತ್ಯುವಾಚ ॥

ಯದಾ ನ ದಿತ್ಸಸೇ ಭಾಗಂ ನಲಿಪ್ಸಾ ತೇ ಸುಖಂ ಭವೇತ್ ।
ಸಹೈಭಿರಸುರಾಕಾರೈಃ ಸುರೈರ್ನಾಶಮವಾಪ್ನುಯಾಃ ॥೮೪॥

ಇತ್ಯುಕ್ತ್ವಾ ಯೋಗಮಾಸ್ಥಾಯ ದದಾಹಾತ್ಮತನುಂ ಪ್ರತಿ ।
ತದಾ ಹಾಹಾ ಕೃತಸ್ತತ್ರ ಸುರಾಸ್ತೇ ವಿಸ್ಮಿತಾಭವನ್ ॥೮೫॥

---

ಅನೇಕ ಮಹರ್ಷಿಗಳು 'ಇದು ನಿಜವಾದ ಯಾಗವಲ್ಲ. ಶಿವಾಗ್ರಹದಿಂದ ಇದು ಸದ್ಯದಲ್ಲಿಯೇ ನಾಶವಾಗುವುದು. ಇಲ್ಲಿ ನಾವಿರುವುದು ತರವಲ್ಲ. ಶಿವದೂಷಕನಾದ ದಕ್ಷಬ್ರಹ್ಮನು ಶೀಘ್ರದಲ್ಲಿಯೇ ನಾಶವಾಗಲಿ. ಜೊತೆಗೆ ಬ್ರಹ್ಮ, ವಿಷ್ಣು, ಇತರ ದೇವತೆಗಳೂ ಧ್ವಂಸವಾಗುವರು' ಎಂದು ಕೂಗುತ್ತಾ ಆ ಯಾಗಮಂಟಪದಿಂದ ಹೊರಟುಹೋದರು. ಇದನ್ನೆಲ್ಲಾ ನೋಡಿದ ಸತೀದೇವಿಯು ಕ್ರೋಧಾಕುಲಳಾಗಿ ದುರುದುರನೆ ನೋಡುತ್ತಾ, ॥೮೧-೮೨-೮೩॥

"ದಕ್ಷನೇ, ನಿನಗೆ ಯಜ್ಞದಲ್ಲಿ ಈಶ್ವರನಿಗೆ ಹವಿರ್ಭಾಗಕೊಡಲು ಯಾವಾಗ ಇಷ್ಟವಿಲ್ಲವೋ ನಿನಗೆ ಸುಖವೂ ಅಷ್ಟಾಗಿ ಒದಗಲಾರದು. ನಿನ್ನನ್ನೇ ನಂಬಿ ಕುಳಿತಿರುವ ಈ ರಾಕ್ಷಸಸದೃಶರಾದ ದೇವತೆಗಳೊಡನೆ ನೀನು ಧ್ವಂಸವಾಗು" ಎಂದು ಶಪಿಸುತ್ತಾ ಯೋಗಾಗ್ನಿಯಿಂದ ತನ್ನ ದೇಹವನ್ನು ಭಸ್ಮಮಾಡಿಕೊಂಡಳು. ಇದನ್ನು ನೋಡಿದ ದೇವತೆಗಳೆಲ್ಲರೂ ಆಶ್ಚರ್ಯದಿಂದ ಹಾಹಾಕಾರಮಾಡಿದರು. ॥೮೪-೮೫॥

ವಿಷ್ಣುಬ್ರಹ್ಮಾದಯೋ ದಕ್ಷಾ ಭಯಕಂಪಿತವಿಗ್ರಹಾಃ ।
ಗ್ರಹಾಸ್ತೇ ವಿಗ್ರಹಂ ಚಕ್ರುರ್ವವುರ್ವಾತಾಸ್ಸಶರ್ಕರಾಃ ॥೮೬॥

ವವೃಷುಶ್ಶೋಣಿತಂ ಮೇಘಾ ಜಗರ್ಜುಃ ಕ್ರೂರವಿಧ್ಯುತಃ ।
ಆಪತನ್ ಪ್ರಾಲುಠನ್ ಭೂಮೌಶ್ಚೇಲುರ್ನದ್ಯಶ್ಚ ಸಾಗರಾಃ ॥೮೭॥

ಏವಮುದ್ಭ್ರಾಂತವಿಭ್ರಾಂತಾ ಅಭವಂಸ್ತತ್ರ ಸಂಸ್ಥಿತಾಃ ।
ದಕ್ಷೋತ್ರ ಶರಣಂ ವಿಷ್ಣುಮಾಯಯಾಸೀದ್ಭಯಮೋಹಿತಃ ॥೮೮॥

ಸ ಧೂಮಾಗ್ನಯ ಏವಾಸನ್ ಸುರಾ ಗಂಧಾಃ ಸಮಾವೃತಾಃ ।
ತದಾ ಭಯಸಮಾವಿಷ್ಟಾಃ ಕಷ್ಟಾ ಆಸನ್ ಸುರಾದ್ವಿಜಾಃ ॥೮೯॥

ದಕ್ಷೋಪ್ಯಜಾಕ್ಷವತ್ತತ್ರ ವಿಷ್ಣುಮೀಕ್ಷತ್ತದಾ ಭಿಯಾ ॥೯೦॥

ಅಪಶಕುನಂ ಶಕುನಾ ಪರಿಭ್ರಮು
ರ್ವಮುರದ್ಧಾ ರುಧಿರಂ ಮುಖೇನ ಶಬ್ದೈಃ ।
ಅಭವಾಯು ಮುಖಸ್ಯ ದುಃಖಮೇವಂ
ಪ್ರಬಭೌ ವಿಶಿಖೋಭವತ್ತದಾನಲಃ ॥೯೧॥

---

ವಿಷ್ಣು, ಬ್ರಹ್ಮಾದಿಗಳು ಭಯದಿಂದ ನಡುಗಿದರು. ಕುಜಾದಿ ಗ್ರಹಗಳು ಅಂತರಿಕ್ಷದಲ್ಲಿ ಯುದ್ಧಮಾಡಿದವು. ಕಲ್ಲು ಮಣ್ಣುಗಳಿಂದ ಕೂಡಿದ ಬಿರುಗಾಳಿ ಎಲ್ಲೆಲ್ಲೂ ಬೀಸಿತು. ಮೇಘದಿಂದ ರಕ್ತವೃಷ್ಟಿಯಾಯಿತು. ಭಯಂಕರವಾದ ಸಿಡಿಲುಗಳು ಗರ್ಜಿಸಿದವು. ಭೂಕಂಪವಾಯಿತು. ನದಿಗಳೂ, ಸಾಗರಗಳೂ ಮೇರೆ ದಪ್ಪಿದುವು. ಹೀಗೆ ಎಲ್ಲೆಲ್ಲೂ ಕೋಲಾಹಲವಾಯಿತು. ॥೮೬-೮೭॥

ಹೀಗೆ ಉಪದ್ರವ ಅನಾಹುತಗಳನ್ನು ನೋಡುತ್ತಾ ಎಲ್ಲಾ ದೇವತೆಗಳೂ ಭ್ರಾಂತರಾಗಿ ಚಕಿತರಾಗಿರುವಾಗ ದಕ್ಷಬ್ರಹ್ಮನು ಭಯದಿಂದ ವಿಷ್ಣುವನ್ನು ಮೊರೆ ಹೊಕ್ಕನು. ಅಗ್ನಿಯು ಹೊಗೆಯಿಂದ ಕೂಡಿ ದುರ್ಗಂಧಪೂರಿತವಾಯಿತು. ದೇವತೆಗಳೆಲ್ಲಾ ದಿಕ್ಕುಗೆಟ್ಟರು. ದಕ್ಷನಾದರೋ ಆಡಿನಂತೆ ಕಣ್ಣುಬಿಡುತ್ತಾ ವಿಷ್ಣುವನ್ನೇ ನೋಡತೊಡಗಿದನು. ॥೮೮-೮೯-೯೦॥

ಶುಭಶಕುನಗಳೆಲ್ಲಾ ಅಪಶಕುನಗಳಾಗಿ ಪರಿಣಮಿಸಿದುವು. ಪಕ್ಷಿಗಳು ಅಪಶಬ್ದದಿಂದ ಕೂಗಿದುವು. ಅವು ಬಾಯಲ್ಲಿ ರಕ್ತವನ್ನು ಕಾರಿದುವು. ಯಜ್ಞದಲ್ಲಿ ನಡೆದ ಅಪಘಾತದಿಂದ ದುಃಖಿಸಲ್ಪಟ್ಟ ಅಗ್ನಿಪುರುಷನು ಜ್ವಾಲಾದಿಗಳಿಲ್ಲದೆ ಮಂಕಾದನು.

ಇತಿ ಶ್ರೀ ಶಿವರಹಸ್ಯೇ ದ್ವಾದಶಾಂಶೇ ಈಶಾಖ್ಯೇ ಶಿವಗೌರೀ ಸಂವಾದೇ ದಕ್ಷಾಧ್ವರವರ್ಣನೇ ದಕ್ಷಶಾಪ ಸತೀದೇಹತ್ಯಾಗವಿವರಣಂ ನಾಮ ಪಂಚಮೋಽಧ್ಯಾಯಃ

---

ವಿಶೇಷ ಜ್ವಾಲಾಕಾರಗಳಿಂದ ಬೆಳಗುತ್ತಿದ್ದ ಅಗ್ನಿಪುರುಷನು ತೇಜೋಹೀನನಾದುದನ್ನು ನೋಡಿದರೆ ತನ್ನ ಅತಿಶಯವಾದ ದುಃಖವನ್ನು ಸೂಚಿಸುತ್ತಿರುವನೋ ಎಂಬಂತಿತ್ತು. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ದಕ್ಷಬ್ರಹ್ಮನ ಯಾಗಮಂಟಪದ ವರ್ಣನೆಯನ್ನು ವಿವರಿಸಿ ಹೇಳಿದನು. ॥೯೧॥

ಇಲ್ಲಿಗೆ ಶ್ರೀಶಿವರಹಸ್ಯದ ಈಶನಾಮಕವಾದ ದ್ವಾದಶಾಂಶದಲ್ಲಿ ಶಿವಗೌರೀಸಂವಾದ ರೂಪವಾದ ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಷಷ್ಠೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಚಾರಣಾನಾಂ ಚ ವದತಾಮಾಶ್ಚರ್ಯಂ ತನ್ನಭಃಸ್ಥಲೇ ।
ದೇಹತ್ಯಾಗಂ ತಥಾ ಸತ್ಯಾಃ ಶ್ರುತಿವಾಕ್ಯಂ ಸವಿಸ್ತರಂ ॥೧॥

ದಕ್ಷಾವಮಾನನಂ ಚಾಪಿ ಹೃದಾ ಪಶ್ಯನ್ಮಹೇಶ್ವರಃ ।
ಮಹಾಮನ್ಯುರ್ಮನ್ಯುನೈವ ಪಪ್ರಥೇತ್ಯಂತದುಃಖಿತಃ ॥೨॥

ದಕ್ಷಮನ್ಯುಂ ತದಾ ದೇವೈರ್ಹಂತುಂ ಚಕ್ರೇ ಮತಿಂ ಹರಃ ।
ಜಟಾಜೂಟಾತ್ಸಮುತ್ಪಾಟ್ಯ ಜಟಾಮೇಕಾಂ ಮಹೇಶ್ವರಃ ॥೩॥

---

### ಆರನೆಯ ಅಧ್ಯಾಯ

ದಕ್ಷಬ್ರಹ್ಮನ ಯಾಗಮಂಟಪದಲ್ಲಿ ನಡೆದ ಸತೀದೇಹತ್ಯಾಗ, ವೇದವಾಣಿ, ಋಷಿವಾಣಿ, ದಕ್ಷಬ್ರಹ್ಮನ ಕೋಪ ಹಠ, ಈ ವಿಷಯವಾಗಿ ಅಂತರಿಕ್ಷದಲ್ಲಿ ಚಾರಣರು ಮಾತನಾಡಿಕೊಳ್ಳುವ ವಿಚಾರ, ಇವೆಲ್ಲವೂ ಪರಶಿವನಿಗೆ ಮನವರಿಕೆಯಾದುವು. ಇದರಿಂದ ಬಹಳವಾಗಿ ಕುಪಿತನಾದ ಮಹಾದೇವನು ಆ ದಕ್ಷಬ್ರಹ್ಮನ ಯಾಗವನ್ನು ಧ್ವಂಸಗೊಳಿಸಲು ಸಂಕಲ್ಪಮಾಡಿಬಿಟ್ಟನು. ॥೧-೨॥

ಈಶ್ವರನು ತತ್‌ಕ್ಷಣವೇ ತನ್ನ ಜಟೆಯನ್ನು ನೆಲಕ್ಕೆ ಬಡಿದನು. ವಿಶೇಷ ಕೋಪದಿಂದ ಜಟಾತಾಡನವಾದೊಡನೆಯೇ, ಒಂದು ವ್ಯಕ್ತಿಯು ಅಲ್ಲಿಯೇ ಉದ್ಭವ

ಭೂಮೌ ಸಂತಾಡಯಾಮಾಸ ಕ್ರೋಧೇನಾಂಧೀಕೃತೇಕ್ಷಣಃ ।
ತಸ್ಮಾತ್ತತ್ರ ಜಟಾಪಾತಾದ್ಬಭೂವಾತೀವ ಮನ್ಯುಮಾನ್ ॥೪॥

ವೀರಭದ್ರೋ ಜ್ವಲತ್ಕ್ರೋಧೋ ದಂಷ್ಟ್ರಾಕ್ರೂರಾಸ್ಯಯುಕ್ತದಾ ।
ಮಹಾಗಿರಿಪ್ರತೀಕಾಶವರ್ಷ್ಮಣಾ ಸಮುಪಶ್ಯತ ॥೫॥

ವೃತ್ತದಂಷ್ಟ್ರಾಕರಾಲಾಸ್ಯೋ ಜಿಹ್ವಯಾ ಸೃಕ್ವಿಣೀಂ ಲಿಹನ್ ।
ವ್ಯಾಲೀವ ವಲ್ಮೀಕಗತಾ ಜಿಹ್ವಾ ಚಾಹ್ವಯತೀ ಸುರಾನ್ ॥೬॥

ತಚ್ಛ್ಮಶ್ರುಜಟಿಲಂ ವಕ್ತ್ರಂ ಶೂಲಹಸ್ತಂ ಸಭೈರವಂ ।
ಕರಿವೃತ್ತೋರುಶುಂಡಾಭಬಾಹುದಂಡವಿರಾಜಿತಂ ॥೭॥

ಮುಕುಟೇನಾರ್ಕಪರ್ಣೇನ ಭಾಸ್ವತ್ಕುಂಡಲಮಂಡಿತಂ ।
ಹಾರಕೇಯೂರವಲಯೈರ್ಭೂಷಿತಂ ಕಿಂಕಿಣೀಗಣೈಃ ॥೮॥

ಕಟಾಕಟಿತಮಧ್ಯಸ್ಥಂ ಖಡ್ಗಖೇಟಧರಂ ತದಾ ।
ತದಂಬುಜಭದಾರಕ್ತವ್ಯಾವೃತ್ತನಯನೋ ಮುಹುಃ ॥೯॥

---

ವಾಯಿತು. ಆ ವ್ಯಕ್ತಿಯಾದರೋ ಅತ್ಯಂತ ಕೋಪವುಳ್ಳದಾಗಿ, ನೋಡಲು ಭಯಂಕರವಾಗಿ ಕಂಡುಬಂದಿತು. ॥೩-೪॥

ಅವನೇ ವೀರಭದ್ರನು. ಕೋಪದಿಂದ ಉರಿಯುತ್ತಾ, ಉಗ್ರವಾದ ಕೋರೆ ಹಲ್ಲು, ಮುಖ ಇವುಗಳಿಂದ ಭಯಂಕರನಾಗಿದ್ದನು. ದೊಡ್ಡಪರ್ವತದಂತೆ ಅವನ ದೇಹವು ಅದ್ಭುತವಾಗಿದ್ದಿತು. ದುಂಡಾದ ಕೋರೆಹಲ್ಲುಗಳು ಮುನ್ನುಗ್ಗಿ ಮುಖ ವನ್ನು ಭಯಂಕರವನ್ನಾಗಿ ಮಾಡಿದ್ದುವು. ಹುತ್ತದಲ್ಲಿ ಕಂಡುಬರುವ ಹಾವಿನಂತೆ ಅವನ ಬಾಯಿಯಲ್ಲಿ ನಾಲಗೆಯು ತುಟಿಯನ್ನು ಸವರಿಕೊಳ್ಳುತ್ತಾ ದೇವತೆಗಳನ್ನು ಕರೆಯುತ್ತಿದೆಯೋ ಎಂಬಂತೆ ಕಾಣುತ್ತಿದ್ದಿತು. ॥೫-೬॥

ಅವನ ಮೀಸೆಯು ಹುರಿಗೊಂಡಿತ್ತು. ಕೈಯ್ಯಲ್ಲಿ ತ್ರಿಶೂಲವಿತ್ತು. ತೋಳು ಗಳಾದರೋ ಆನೆಯ ಸೊಂಡಲಿನಂತೆ ದುಂಡಾಗಿಯೂ ನೀಳವಾಗಿಯೂ ಕಾಣು ತ್ತಿದ್ದುವು. ಸೂರ್ಯಕಾಂತಮಣಿಗಳಿಂದ ರಚಿತವಾದ ಕಿರೀಟವೂ, ಪ್ರಕಾಶಮಾನಗಳಾದ ಕುಂಡಲಗಳೂ, ಹಾರ, ಹಸ್ತಾಭರಣ, ಕಿರುಗೆಜ್ಜೆ, ಇವುಗಳೂ ವೀರಭದ್ರನ ದೇಹ

ತ್ರಿಪುಂಡ್ರವಿಲಸತ್ಫಾಲಃ ಕರಾಲಕರವಾಲಧೃಕ್ ।
ಸ ಪ್ರಣಮ್ಯ ಮಹಾದೇವಂ ಉವಾಚಾನತಕಂಧರಃ ॥೧೦॥

ಭೈರವೋ ದಾರುಣಾಕಾರೋ ಮೃಗೇಂದ್ರಸಮವಿಕ್ರಮಃ ।
ಅಂಜನಾದ್ರಿಪ್ರತೀಕಾಶೋ ಭಾವಿಭಾಸಿತದಿಙ್ಮುಖಃ ॥೧೧॥

ಘನಗಂಭೀರಸಂಭೇರೀ ಸಮಾರವಭರಸ್ತದಾ ॥೧೨॥

॥ ಭೈರವ ಉವಾಚ ॥

ದೇವದೇವ ಮಹಾದೇವ ಕರುಣಾವರುಣಾಲಯ ।
ಮರುತ್ಪಾರಣಹಾರಾಢ್ಯ ಕಂಧರಾಸಂತವಿಕ್ರಮ ॥೧೩॥

ಮಾಮಾಜ್ಞಾಪಯ ದೇವೇಶ ಕಿಮತ್ರ ಕರವಾಣಿ ತೇ ।
ಕಿಂ ಪಿಬಾಮ್ಯಬ್ಧಯಃ ಸಪ್ತ ತರಂಗಾವಲಿಘೂರ್ಣಿತಾಃ ॥೧೪॥

---

ವನ್ನು ಅಲಂಕರಿಸುತ್ತಿದ್ದುವು. ಕತ್ತಿ ಗುರಾಣಿಗಳು ಒಂದರನ್ನೊಂದು ಅಂಟಿಕೊಂಡೇ ಇದ್ದುವು. ತಾವರೆಯ ಎಸಳಿನಂತೆ ಬಹಳ ರಕ್ತವರ್ಣದ ಕಣ್ಣುಗಳು ಕೋಪದಿಂದ ಸುತ್ತುತ್ತಿದ್ದುವು. ॥೮-೯॥

ಹಣೆಯಲ್ಲಿ ಭಸ್ಮತ್ರಿಪುಂಡ್ರವೂ ಕೈಯ್ಯಲ್ಲಿ ಕರವಾಲವೂ ಶೋಭಿಸುತ್ತಿತ್ತು. ಭಯಂಕರವಾದ ಆಕಾರ, ಸಿಂಹಸದೃಶವಾದ ವಿಕ್ರಮ, ಅಂಜನಾಚಲದಂತಿರುವ ಶರೀರ, ಪ್ರಕಾಶವಾಗಿ ಹೊಳೆಯುವ ಮುಖ, ಇವುಗಳಿಂದ ಕೂಡಿ ತಲೆಬಗ್ಗಿಸಿಕೊಂಡು ವೀರಭದ್ರನು ಆಗಾಗ ಪರಶಿವನಿಗೆ ನಮಸ್ಕರಿಸುತ್ತಿದ್ದನು. ॥೧೦-೧೧॥

ಕೊನೆಯಲ್ಲಿ ಮೇಘಧ್ವನಿಗೊಡುವ ತನ್ನ ಮಾತುಗಳಿಂದ ಸ್ವಾಮಿಯನ್ನು ಈರೀತಿ ಕೇಳಿಕೊಂಡನು 'ಸ್ವಾಮಿ, ದೇವದೇವನೇ, ದಯಾಸಮುದ್ರನೇ, ಆದಿಶೇಷ ನನ್ನೇ ಹಾರವನ್ನಾಗಿ ಮಾಡಿಕೊಂಡಿರುವ ಮಹಾದೇವನೇ, ನನಗೇನು ಅಪ್ಪಣೆ? ನಿನ್ನ ಅಪ್ಪಣೆಯೊಂದು ಲಭಿಸಿದರೆ ಈ ಮಹಾ ಅಲೆಗಳ ಸಮೂಹದಿಂದ ಉಗ್ರವಾಗಿರುವ ಸಪ್ತಸಮುದ್ರಗಳನ್ನು ಬೇಕಾದರೂ ನಿಶ್ಶೇಷವಾಗಿ ಹೀರಿಬಿಡುವೆನು. ॥೧೨-೧೩-೧೪॥

ಚೂರ್ಣಿತಂ ಕಿಂ ಗಿರಿವ್ರಾತಂ ಕರೋಮಿ ಪದಘಾತಕೈಃ ।
ಕಿಂ ಬ್ರಹ್ಮಾಂಡಂ ಮಹಾಪಿಂಡಂ ಕರೋಮ್ಯದ್ಯ ಚರಾಚರೈಃ ॥೧೫॥

ಭೂಚಕ್ರಮಾಕ್ರಮಂ ಚಾತ್ರ ಚಿತ್ರಂ ನೇತ್ರಾಗ್ನಿನಾ ದಹನ್ ।
ಕಿಂ ವಾ ಸುರಾಸುರವ್ರಾತಂ ಪಾತಯಾಮಿ ಮೃತಂ ಪುರಃ ॥೧೬॥

ಶೀಘ್ರಮಾಜ್ಞಾಪಯೇದಾನೀಂ ಮಾ ವಿಲಂಬಿತುಮರ್ಹಸಿ ।
ತದ್ಭೈರವೋರುರಭಸಾ ವಚಸಾ ಪರಮೇಶ್ವರಃ ॥೧೭॥

ವಿಪ್ರಯೋಗೇನ ವೈ ದೇವ್ಯಾಃ ದುಸ್ಸಹೇನೈವ ಸುವ್ರತಾಃ ।
ತದಾ ತೀವ್ರತರಂ ಸ್ವಾಂಗಾತ್ಸಸರ್ಜ ಸುರತರ್ಜಕಾನ್ ॥೧೮॥

ರೌಭ್ಯಾನ್ನಾಮ ಗಣಶ್ರೇಷ್ಠಾನಸೌಮ್ಯಾಂಛಿವಭಾಗವಾನ್ ।
ತುರಂಗವರಮಾತಂಗ ಸಾರಂಗಾಸ್ಯಾನ್ ಮನೋಹರಾನ್ ॥೧೯॥

ಕಾಕಕೋಕಬಕಾಭಾಸ್ಯಾನ್ ವೃಕಭೇಕಾಸ್ಯಕಾಂಸ್ತಥಾ ।
ವಾನರಸೃಮರಾಭಾಸ್ಯಾನ್ ಚಾಮರಾಸ್ಯಾಂಸ್ತಥಾ ಗಣಾನ್ ॥೨೦॥

---

ಕಾಲುಗಳಿಂದಲೇ ಒದ್ದು ಬೆಟ್ಟಗಳನ್ನು ಬೇಕಾದರೂ ಪುಡಿಮಾಡಬಲ್ಲೆನು. ಈ ಬ್ರಹ್ಮಾಂಡಾಂತರ್ಗತವಾದ ಚರಾಚರವಸ್ತುಗಳನ್ನೆಲ್ಲಾ ಧ್ವಂಸಮಾಡಿ ಒಂದು ಪಿಂಡಾಕಾರವನ್ನಾಗಿ ಮಾಡುವೆನು. ತನ್ನ ಫಾಲನೇತ್ರದಿಂದ ಈ ಭೂಮಂಡಲವನ್ನೆಲ್ಲಾ ಸುಟ್ಟುಬಿಡುವೆನು. ದೇವರಾಕ್ಷಸರನ್ನೆಲ್ಲಾ ಕೊಂದು ನಿನ್ನ ಮುಂದೆ ತಂದು ಬಿಸುಡುವೆನು. ಆದರೆ ಯಾವುದಕ್ಕೂ ತಮ್ಮ ಅಪ್ಪಣೆ ಬೇಕು. ॥೧೫-೧೬॥

ಯಾವುದಕ್ಕೂ ಜಾಗ್ರತೆ ಅಪ್ಪಣೆಕೊಡೋಣವಾಗಲಿ. ನಿದಾನಮಾಡುವುದರಿಂದ ಪ್ರಯೋಜನವಿಲ್ಲ. ಎಂದು ಭೈರವನು ಪ್ರಾರ್ಥಿಸುತ್ತಿರಲು ಆ ಮಾತಿನ ಜೋರಿನಿಂದಲೂ, ಪತ್ನೀವಿಯೋಗತಾಪದಿಂದಲೂ ಅತ್ಯಂತ ಕುಪಿತನಾಗಿ ಪರಶಿವನು ತನ್ನ ದೇಹದಿಂದ ಮತ್ತೆ ದೇವತೆಗಳನ್ನು ನಾಶಗೊಳಿಸುವಂತಹ ಒಂದು ಸೈನ್ಯ ತಂಡವನ್ನು ನಿರ್ಮಾಣಮಾಡಿದನು. ॥೧೭-೧೮॥

ಅವರೇ ರೌಭ್ಯರೆಂಬ ಶಿವಗಣಗಳು. ಅವರು ನೋಡಲು ಬಹು ಭಯಂಕರರಾಗಿದ್ದರು. ಅಲ್ಲದೆ ಸದಾ ಶಿವಭಕ್ತಿಪರಾಯಣರಾಗಿ, ಆನೆ, ಕುದುರೆ, ತೋಳ, ಜಿಂಕೆ, ಸಾರಂಗ, ಕಾಗೆ, ಚಕ್ರವಾಕ, ಬಕ, ನರಿ, ಕಪ್ಪೆ, ಕಪಿ, ಚಮರೀಮೃಗ,

ಶೇಷಮಾಹಿಷವಕ್ತ್ರಾಂಶ್ಚ ಖಡ್ಗಗೋಮಾಯುವಕ್ತ್ರಕಾನ್ ।
ವೃಷಭಾಸ್ಯಾನ್ ರಾಸಭಾಸ್ಯಾನಿಭಾಸ್ಯಾನ್ ಕೋಕಿಲಾಸ್ಯಕಾನ್ ॥೨೦॥

ಏವಂ ಗಣಗಣಂ ತತ್ರ ದೃಷ್ಟ್ವೇಶಃ ಪುರತಸ್ಸ್ಥಿತಂ ।
ಕೋಟಿತ್ರಯೇಣ ಗುಣಿತಂ ನಾನಾವೇಷೈಕಭೂಷಿತಂ ॥೨೨॥

ಭೂಷಿತಂ ಭಸಿತೇನೈವ ಘೋಷಮಾಣಂ ಮುಹುರ್ಮುಹುಃ ।
ತ್ರಿಪುಂಡ್ರಫಾಲಂ ರುದ್ರಾಕ್ಷಫಣೀಹಾರವಿರಾಜಿತಂ ॥೨೩॥

ಅಸಿಕಾರ್ಮುಕನಿಸ್ತ್ರಿಂಶಖಡ್ಗಖೇಟಧರಂ ತದಾ ।
ಬಾಣಬಾಣಾಸನಧರಂ ಕರವಾಲಲಸತ್ಕಟಿಂ ॥೨೪॥

ಕುಂತಶಾಂತಾರಿಮುತ್ಕೃಷ್ಟಂ ಪ್ರಣತಂ ಪುರತಸ್ಸ್ಥಿತಂ ।
ಸಾಸ್ರಾವಿಲಾಕ್ಷಸ್ತ್ರ್ಯಕ್ಷಸ್ತಾನ್ಮುಹುರೀಕ್ಷನ್ನುವಾಚ ತಾನ್ ॥೨೫॥

ವೀರಭದ್ರಂ ಪುರಸ್ಕೃತ್ಯ ರುದ್ರಕೋಟಿಸಮನ್ವಿತಂ ॥೨೬॥

---

ಎಮ್ಮೆ, ಖಡ್ಗಮೃಗ, ಗೋಮಾಯು, ಹಸು, ಎತ್ತು, ಕತ್ತೆ, ಕೋಗಿಲೆ ಇವೇ ಮುಂತಾದ ಪ್ರಾಣಿಗಳ ಮುಖಗಳಂತೆ ಮುಖವುಳ್ಳವರಾಗಿ ವಿಕಾರವಾಗಿ ಕಂಡುಬರುತ್ತಿದ್ದರು. ಈ ಶಿವಗಣಗಳು ಅಸಂಖ್ಯಾತವಾಗಿ ಉದ್ಭವಿಸಿದ್ದುವು. ॥೧೯-೨೦॥

ಹೀಗೆ ಅಸಂಖ್ಯಾತವಾಗಿ ಬಂದ ಮೂರುಕೋಟಿ ಶಿವಗಣಗಳನ್ನು ನೋಡಿ ಪರಶಿವನು ತೃಪ್ತನಾದನು. ಆ ಗಣಗಳಾದರೋ ಪ್ರತಿಯೊಬ್ಬರೂ, ನಾನಾವಿಧವಾದ ವೇಷಭೂಷಣಗಳಿಂದ ಒಪ್ಪುತ್ತಿದ್ದರು. ಭಸ್ಮಧಾರಿಗಳಾಗಿ ಭಯಂಕರವಾಗಿ ಧ್ವನಿ ಮಾಡುತ್ತಿದ್ದರು. ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನೂ, ಕತ್ತಿನಲ್ಲಿ ರುದ್ರಾಕ್ಷಿಯ ಸರಗಳನ್ನೂ ಸರ್ಪಗಳನ್ನೂ ಇವರು ಧರಿಸಿಕೊಂಡಿದ್ದರು. ॥೨೧-೨೨-೨೩॥

ಕತ್ತಿ, ಧನುಸ್ಸು, ಕಠಾರಿ, ಖಡ್ಗ, ಗುರಾಣಿ, ಬಾಣ, ಬಿಲ್ಲು, ಇವುಗಳನ್ನು ಧರಿಸಿ ಸೊಂಟಕ್ಕೆ ಕತ್ತಿಯನ್ನು ಕಟ್ಟಿ, ಕುಂತವೇ ಮೊದಲಾದ ಆಯುಧಗಳನ್ನೂ ಧ್ವನಿಗೈಸುತ್ತಾ ಯಜಮಾನನಾದ ಮಹಾದೇವನಿಗೆ ವಂದಿಸುತ್ತಾ ಈಶ್ವರಾಜ್ಞೆಯನ್ನೇ ನಿರೀಕ್ಷಿಸುತ್ತಾ ನಿಂತಿರುವ ಶಿವಗಣವನ್ನು ನೋಡಿ, ಮಹೇಶ್ವರನು ಕಣ್ಣಿನಲ್ಲಿ ನೀರು ಸುರಿಸುತ್ತಾ, ವೀರಭದ್ರನೊಡಗೂಡಿ ನಿಂತಿರುವ ಆ ಭಯಂಕರ ಗಣಗಳೊಡನೆ ಹೀಗೆ ನುಡಿದನು. ॥೨೪-೨೫-೨೬॥

ವೀರಭದ್ರ ಸದಾ ಭದ್ರಂ ತವಾಸ್ತು ವಿಜಯೋ ಗಣೈಃ ।
ತೂರ್ಣಂ ಪ್ರಯಾಹಿ ದಕ್ಷಸ್ಯ ಯಜ್ಞವಾಟಂ ಸುರೈರ್ವೃತಂ ॥೨೭॥

ವಿಷ್ಣುಬ್ರಹ್ಮಾದಿವಿಬುಧೈಃ ಕ್ಷಣಾದ್ವಿಧ್ವಂಸಯಾಧುನಾ ।
ತೇನ ಮೇ ಪ್ರೀತಿರತುಲಾ ಮಾ ತೇ ವಿಘ್ನೋತ್ರ ಸಂಪ್ರತಿ ॥೨೮॥

ಇತ್ಯುಕ್ತೋಥ ಮಹೇಶೇನ ವೀರಭದ್ರೋ ಗಣೈಸ್ಸಹ ।
ಮತ್ತವಾರಣಸಂಕಾಶೈರ್ಯಯೌ ಗಣಗಣೈರ್ವೃತಃ ॥೨೯॥

ನತ್ವಾಸೌ ಶ್ರೀ ಮಹಾದೇವಂ ವೀರಭದ್ರೋ ನದನ್ ತದಾ ।
ಗಣಾ ಜಗರ್ಜುಶ್ಚ ತದಾ ಭ್ರಾಮಯಂತೋಸ್ತ್ರಮಂಡಲಂ ॥೩೦॥

ಗಣೈರ್ವರಕೃತಾರಾವಬಧಿರೀಕೃತದಿಙ್ಮುಖಂ ।
ತನ್ಮಖಂ ಖೇಲಕೈಸ್ಸಾರ್ಧಂ ದುರ್ಮುಖಂ ಸಮಪದ್ಯತ ॥೩೦॥

ತದಾ ವಾತಾ ವವುರ್ಲೋಕೇ ತತ್ರ ವೈ ಭಯಶಂಸಿತಃ ।
ಪರ್ವತಾಶ್ಚ ವ್ಯಶೀರ್ಯಂತ ಚಕಂಪೇ ಚ ವಸುಂಧರಾ ॥೩೧॥

---

“ ವೀರಭದ್ರನೇ, ನಿನಗೆ ಮಂಗಳವಾಗಲಿ. ನೀನು ಈಗಲೇ ನಿನ್ನ ಈ ಗಣಗಳೊಡಗೂಡಿ ದಕ್ಷಬ್ರಹ್ಮನ ಯಾಗಮಂಟಪಕ್ಕೆ ಹೋಗು. ಅಲ್ಲಿ ವಿಷ್ಣ್ವಾದಿ ಸಕಲ ದೇವತೆಗಳೂ ನೆರೆದಿರುವರು. ಅವರೆಲ್ಲರೊಡನೆ ಆ ಯಾಗಸಭೆಯನ್ನೇ ಧ್ವಂಸ ಮಾಡು. ಅದರಿಂದ ನನಗೆ ಸಂತೋಷವಾವುದು. ಈ ಕಾರ್ಯಕ್ಕೆ ನಿನಗೆ ಯಾವ ವಿಘ್ನವೂ ಬರದಿರಲಿ.” ॥೨೭-೨೮॥

ಎಂದು ಶಂಕರನು ಆಜ್ಞೆಯಿತ್ತೊಡನೆಯೇ ಗಣಗಳೊಡಗೂಡಿ ವೀರಭದ್ರನು ಮದ್ದಾನೆಗಳ ಗುಂಪಿನಿಂದ ಕೂಡಿ ಹೊರಟಂತೆ ಪ್ರಯಾಣ ಸನ್ನದ್ಧನಾಗಿಯೇ ಬಿಟ್ಟನು. ಮಹಾದೇವನಿಗೆ ಮೊದಲು ವೀರಭದ್ರನು ಭಕ್ತಿಪೂರ್ವಕವಾಗಿ ನಮಸ್ಕರಿಸಿದನು. ಗಣಗಳಾದರೋ ತಮ್ಮ ಅಸ್ತ್ರಶಸ್ತ್ರಗಳನ್ನು ಧ್ವನಿಗೈಸುತ್ತಾ ತಾವೂ ಪ್ರಯಾಣಕ್ಕೆ ಅನುವಾದರು. ॥೨೯-೩೦॥

ಆ ವೀರಭದ್ರಗಣಗಳು ಆಗ ಗರ್ಜಿಸಿದ ಗರ್ಜನೆಯಿಂದ ದಿಕ್ಕುಗಳೆಲ್ಲವೂ ಕಿವುಡಾದುವು. ಆ ಯಜ್ಞವು ಅಲ್ಲಿದ್ದವರಿಗೆ ಅಶುಭಫಲವನ್ನು ಕೊಡುವ ಸೂಚನೆಯನ್ನು ಹೊಂದಿತು. ಲೋಕದಲ್ಲೆಲ್ಲಾ ಭಯಜನಕವಾದ ವಾಯುವು ಬೀಸಲಾರಂಭಿ

ಮಾರುತೈಶ್ಚಾಭ್ಯಘೂರ್ಣತ್ವಂ ಚುಕ್ಷುಭೇ ವರುಣಾಲಯಃ ।
ಆಗ್ನೇಯೋ ನೈವ ದೀಪ್ಯಂತ ನ ಚ ಭಾತಿ ಪ್ರಭಾಕರಃ ॥೩೩॥

ಗ್ರಹಾಶ್ಚ ನ ಪ್ರಕಾಶಂತೇ ಪೇತುರ್ನಕ್ಷತ್ರಪಙ್ಕ್ತಯಃ ।
ಉಲ್ಕಾಕಬಂಧಸಹಿತಾ ಪಪಾತ ಮುಖಸಂಸದಿ ॥೩೪॥

ಗಣೇಶ್ವರೈಃ ಸಮಾರುಹ್ಯ ರಥಂ ಭದ್ರೋ ಗಿರಿಪ್ರಭಂ ।
ಸಹಸ್ರಾಶ್ವಂ ಪತಾಕಾಢ್ಯಂ ಕುಂಭರಾಜತ್ಪತಾಕಕಂ ॥೩೫॥

ಗಣಾ ಸಮನ್ವಯುಸ್ತತ್ರ ವಿವಿಧಾಯುಧಪಾಣಯಃ ।
ಗರ್ಜಂತಶ್ಚಾತಿಹೃಷ್ಯಂತಾ ಭಿಂದಂತೋ ಗಾಂ ಶರಾವರೈಃ ॥೩೬॥

ಶೂಲಮೂಲೈರ್ಗಿರಿವ್ರಾತಂ ಧನುಃಕೋಟ್ಯೋತ್ಸೃಜಂತ್ಯಪಿ ।
ಹಿಮವಚ್ಛಿಖರೇ ರಮ್ಯೇ ಹೇಮಶೃಂಗೇ ಸುಶೋಭನೇ ॥೩೭॥

ಯಜ್ಞವಾಟಸ್ತದಾ ತಸ್ಯ ಗಂಗಾದ್ವಾರಸಮೀಪಗಃ ।
ತದ್ವೈ ಕನಖಲಂ ಖ್ಯಾತಂ ನಿಖಿಲೈರಮರೈರ್ವೃತಂ ॥೩೮॥

---

ಸಿತು. ಪರ್ವತಗಳು ಒಡೆದುಹೋದುವು. ಭೂಮಿಯು ನಡುಗಿಹೋಯಿತು. ಬಿರುಗಾಳಿಯು ಸಮುದ್ರವನ್ನು ಕದಡಿತು. ಅಗ್ನಿ ಮತ್ತು ಸೂರ್ಯರು ತೇಜೋಹೀನರಾದರು. ॥೩೧-೩೨-೩೩॥

ಕುಜಾದಿಗ್ರಹಗಳು ಮಂಕಾದುವು. ನಕ್ಷತ್ರಗಳು ಕೆಳಗುರುಳಿದುವು. ಉಲ್ಕಾಪಾತ, ಶಿಲಾಪಾತಗಳು ಯಾಗಮಂಟಪದ ಮೇಲೆ ಬಿದ್ದುವು. ವೀರಭದ್ರನೂ ಮತ್ತಿತರ ಶಿವಗಣನಾಯಕರೂ, ಪರ್ವತದಂತೆ ಅಭೇದ್ಯವಾಗಿ ಸಹಸ್ರ ಅಶ್ವಗಳಿಂದಲೂ, ಪತಾಕೆಗಳಿಂದಲೂ, ಕಲಶಗಳಿಂದಲೂ ವಿರಾಜಿಸುವ ರಥವನ್ನೇರಿ ಅಲ್ಲಿಗೆ ಪ್ರಯಾಣ ಬೆಳೆಸಿದರು. ॥೩೪-೩೫॥

ಶಿವಗಣಗಳು ಆಗ ಸಮಸ್ತ ಆಯುಧಗಳನ್ನೂ ಉಪಯೋಗಿಸುತ್ತಾ ಗರ್ಜಿಸುತ್ತಾ ಬಾಣರಾಶಿಯನ್ನು ಎರೆಚುತ್ತಾ ಅಲ್ಲಿಗೆ ಬಂದು ನೆರೆದರು. ತ್ರಿಶೂಲಗಳಿಂದ ಬೆಟ್ಟಗಳನ್ನೇ ಉರುಳಿಸುತ್ತಿದ್ದರು. ಮತ್ತೆ ಕೆಲವರು ಧನುಸ್ಸಿನ ತುದಿಗಳಿಂದಲೇ ಪರ್ವತಗಳನ್ನು ಎಳಿಸುತ್ತಿದ್ದರು. ಹೀಗೆ ಅವರು ಉತ್ಸಾಹದಿಂದ ದಕ್ಷಬ್ರಹ್ಮನ ಯಜ್ಞವಾಟಿಗೆ ಬಂದಿಳಿದರು. ಅದು ಗಂಗಾದ್ವಾರಕ್ಕೆ ಸಮೀಪದಲ್ಲಿ ಹಿಮಗಿರಿಯ ತಪ್ಪಲಲ್ಲಿ ಸುವರ್ಣಮಯವಾದ ಶಿಖರದಭಾಗದಲ್ಲಿ ಪ್ರಕಾಶಿಸುತ್ತಿದ್ದಿತು. ಅದಕ್ಕೆ

ತತಃ ಕ್ಷಣಾತ್ಪ್ರವಿಶ್ಯೈವ ಯಜ್ಞವಾಟಂ ಗಣೇಶ್ವರೈಃ ।
ರೋಮಜೈಃ ಸಹಿತೋ ಭದ್ರಃ ಕಾಲಾಗ್ನಿರಿವ ಚಾಪರಃ ॥೩೯॥

ಉವಾಚ ಭದ್ರೋ ಭಗವಾನ್ ಯಜ್ಞವಾಟಾದ್ಬಹಿಸ್ಸ್ಥಿತಃ ।
ಸರ್ವಾನ್ ಮರ್ತ್ಯೈರ್ವೃತಂ ತತ್ರ ದಕ್ಷಂ ವಿಷ್ಣುವಿಧೀ ತದಾ ॥೪೦॥

॥ ವೀರಭದ್ರ ಉವಾಚ ॥

ದಕ್ಷ ದಕ್ಷೋಽಸಿ ನಿತರಾಂ ಸುರೈಸ್ಸಹ ಮುನೀಶ್ವರೈಃ ।
ಏತೇ ಚ ಬ್ರಹ್ಮವಿಷ್ಣ್ವಾದ್ಯಾ ಮೋಹಿತಾ ಶಿವಮಾಯಯಾ ॥೪೧॥

ವಾಕ್ಯಾದ್ದೇವಸ್ಯ ಭಾಗಾರ್ಥಂ ಸಮಾಯಾತಸ್ತ್ವದಂತಿಕಂ ।
ಸತ್ಯಾ ವಿಯೋಗದುಃಖೇನ ಭವಸ್ಯಾತ್ಯಂತರೋಷತಃ ॥೪೨॥

ದಗ್ಧುಂ ವೈ ಪ್ರೇಷಿತಶ್ಚಾಹಂ ಭವತಾ ಚ ಮುನೀಶ್ವರೈಃ ।
ಕೃತೇ ಸಾಹಾಯ್ಯಕೃದ್ವಿಷ್ಣುರ್ನಿರ್ಗಚ್ಛತು ಮಯಾ ರಣೇ ॥೪೩॥

---

ಈಗಲೂ ಕನಖಲಕ್ಷೇತ್ರವೆಂಬ ಹೆಸರಿದೆ. ಅಲ್ಲಿಗೆ ಸಮಸ್ತದೇವತೆಗಳೂ ಆಯಜ್ಞಕ್ಕಾಗಿ ಬಂದಿಳಿದಿದ್ದರು. ॥೩೬-೩೭-೩೮॥

ವೀರಭದ್ರನು ಶಿವರೋಮಗಳಿಂದ ಹುಟ್ಟಿದ ಆ ಶಿವಗಣಗಳನ್ನು ಯಜ್ಞವಾಟದ ಹೊರಭಾಗದಲ್ಲಿಯೇ ತಡೆದು ನಿಲ್ಲಿಸಿ, ತಾನು ಮಾತ್ರ ಯಾಗಮಂಟಪದ ಒಳಕ್ಕೆ ಹೋಗಿ ಅಲ್ಲಿ ಸಮಸ್ತದೇವತೆಗಳಿಂದ ಕೂಡಿರುವ ದಕ್ಷಬ್ರಹ್ಮ, ವಿಷ್ಣು, ಬ್ರಹ್ಮ ಇವರನ್ನು ಕುರಿತು ಈರೀತಿ ನುಡಿದನು. ॥೩೯-೪೦॥

"ಎಲೈ ದಕ್ಷಬ್ರಹ್ಮನೇ, ನೀನು ಅತ್ಯಂತ ಸಮರ್ಥನು. ಆದರೇನು! ಈ ಮುನಿಗಳೂ, ದೇವತೆಗಳೂ, ಬ್ರಹ್ಮವಿಷ್ಣ್ವಾದಿಗಳೂ ಸಹ ಈಗ ಶಿವಮಾಯೆಗೆ ಸಿಕ್ಕಿ ಮೋಹಿತರಾಗಿದ್ದಾರೆ. ನೀನಾದರೋ ನಮ್ಮ ಸ್ವಾಮಿಯಾದ ಮಹೇಶ್ವರನಿಗೆ ಯಜ್ಞಭಾಗವನ್ನು ಅರ್ಪಿಸಿಲ್ಲ. ಅಲ್ಲದೆ ಅದೇ ನಿಮಿತ್ತವಾಗಿ ಸತೀದೇವಿಯೂ ದೇಹತ್ಯಾಗ ಮಾಡಿರುವಳು. ಈ ಕಾರಣಗಳಿಂದ ಪರಶಿವನು ಬಹಳವಾಗಿ ಕುಪಿತನಾಗಿ ನನ್ನನ್ನು ನಿನ್ನಲ್ಲಿಗೆ ಕಳುಹಿಸಿರುವನು. ॥೪೧-೪೨॥

ಮತ್ತು ಈ ಯಜ್ಞಮಂಟಪವನ್ನೇ ಧ್ವಂಸಮಾಡಿ ಸುಟ್ಟುಹಾಕುವಂತೆ ನನಗೆ ಆಜ್ಞೆಯಿತ್ತಿರುವನು. ಈ ಸಮಯದಲ್ಲಿ ನಿನಗೆ ಸಹಾಯಮಾಡಲಿರುವ ವಿಷ್ಣುವು

ಶಂಖಚಕ್ರಧರಶ್ಶಾರ್ಙ್ಗೀ ದೈತ್ಯಸಂಘಾದಿದರ್ಪಹಾ ।
ಇತ್ಯುಕ್ತ್ವಾ ಯಜ್ಞಶಾಲಾಂ ತಾಂ ದದಾಹ ಗಣಪುಂಗವಃ ॥೪೪॥

ಫಾಲನೇತ್ರಾನಲಜ್ವಾಲಾಜಾಲಮಾಲಾಭಿರೇವ ಹಿ ।
ಗಣಾ ನರ್ದಂತಿ ಸೋತ್ಸಾಹಂ ಚಾರಯಂತಿ ಸುರಾನ್ ಮುನೀನ್ ॥೪೫॥

ತ್ರಿಶೂಲಮೂಲನಿರ್ಭಿನ್ನಾನ್ ನಿರ್ವಿಣ್ಣಾನ್ ಬಾಷ್ಪಸಾರಿಭಿಃ ।
ಸಿಂಚಂತಃ ಸ್ವಾನಿ ಚಾಂಗಾನಿ ದ್ವಿಜಾದೇವಾಸ್ಸವಾಸವಾಃ ॥೪೬॥

ಧಾವಂತಿ ಕಾಂದಿಶೀಕಾಸ್ತೇ ವಿಸ್ರಸ್ತಮುಕುಟಾಂಗದಾಃ ।
ಸ್ಖಲತ್ಪಾದಾ ಪತಂತಶ್ಚ ಮುಕ್ತಕೇಶೈಕವಾಸಸಃ ॥೪೭॥

ವಸವಶ್ಚಾಸುಭಿರ್ಹೀನಾ ನಿಪೇತುಶ್ಚ ಪದೇಪದೇ ।
ಮರುತೋಥ ರವಂತಸ್ತೇ ಗಣಬಾಣೈರ್ವಿದಾರಿತಾಃ ॥೪೮॥

ಸಪ್ತಜಿಹ್ವಶ್ಚಲಜ್ಜಿಹ್ವೋ ಶುಷ್ಕೋಷ್ಠಃ ಸೃಕ್ವಿಣೀಂ ಲಿಹನ್ ।
ವಿಶ್ವೇದೇವಾಃ ಶ್ವಾಸಹೀನಾಃ ಪೇತುಃ ಪ್ರೇತಾ ಇವಾತ್ರ ಗಾಂ ॥೪೯॥

---

ಎಲ್ಲಿ? ಶಕ್ತಿಯಿದ್ದರೆ ಆ ವಿಷ್ಣುವು ನನ್ನೊಡನೆ ಈಗ ಯುದ್ಧಕ್ಕೆ ಬರಲಿ. ಶಂಖ, ಚಕ್ರ, ಶಾರ್ಙ್ಗಗಳೆಂಬ ಆಯುಧಗಳನ್ನು ಹಿಡಿದು ದೈತ್ಯರನ್ನು ನಾಶಗೊಳಿಸಿದ್ದ ಆ ವಿಷ್ಣುವು ಈಗ ಎಲ್ಲಿ ಹೋಗಿರುವನು? ನೋಡೋಣ, ಎಂದು ಹೇಳುತ್ತಲೇ ವೀರಭದ್ರನು ತನ್ನ ಫಾಲನೇತ್ರಾಗ್ನಿಯಿಂದ ಯಾಗಮಂಟಪವನ್ನು ಸುಡಲಾರಂಭಿಸಿದನು. ॥೪೩-೪೪॥

ವೀರಭದ್ರನ ಗಣಗಳು ಸಿಕ್ಕಿದ ದೇವತೆಗಳನ್ನು ಹೊಡೆದೋಡಿಸಲು ಆರಂಭಿಸಿದರು. ವೀರಭದ್ರನ ಫಾಲನೇತ್ರ ಜ್ವಾಲೆಯು ಮಾಲಾಕಾರವಾಗಿ ವ್ಯಾಪಿಸತೊಡಗಿತು. ತ್ರಿಶೂಲಗಳ ತಿವಿತದಿಂದ ಎಲ್ಲ ದೇವತೆಗಳೂ ಕಣ್ಣೀರಿಡಲಾರಂಭಿಸಿದರು. ಅಲ್ಲಿ ನೆರೆದಿದ್ದ ಇಂದ್ರನೇ ಮೊದಲಾದ ಸಕಲ ದೇವತೆಗಳ ಅಂಗಾಂಗಗಳೆಲ್ಲಾ ರಕ್ತಮಯುವಾಗಿ ಬಿಟ್ಟಿತು. ॥೪೫-೪೬॥

ಕೂಡಲೇ ದೇವತೆಗಳೂ ತಮ್ಮ ಕಿರೀಟ, ತೋಳುಬಳೆ ಮುಂತಾದ ಆಭರಣಗಳನ್ನು ಕಿತ್ತೊಗೆದು, ದಿಕ್ಕುಗೆಟ್ಟು ಓಡುತ್ತಾ, ಎಡವುತ್ತಾ, ಮುಗ್ಗರಿಸುತ್ತಾ, ಬೀಳುತ್ತಾ, ಏಳುತ್ತಾ ಚದುರಿಓಡಿದರು. ಅಷ್ಟವಸುಗಳೂ ಅಲ್ಲಿ ಗತಪ್ರಾಣರಾಗಿ

ಕುಬೇರೋಽಥ ವಿರೂಪೋಽಭೂದ್ವರುಣಃ ಶರಣೋಜ್ಝಿತಃ ।
ವಾಯುರಾಯಾಸಯುಕ್ತಾತ್ಮಾ ಭಾಸ್ಕರೋ ನಿಷ್ಪ್ರಭೋಽಭವತ್ ॥೫೦॥

ನಿಋುಋುತಿಃ ಧೃತಿಹೀನೋಽಭೂದಾದಿತ್ಯಾ ನಿತ್ಯಮಾನಿನಃ ।
ಸೋಮೋ ಭಯಾಮಯಯುತಃ ಪಿತರಃ ಕಾತರಾ ಭವನ್ ॥೫೧॥

ಕೃತಾಂತಃ ಸಭಯಾಕ್ರಾಂತಃ ಸಂಕ್ರಾಂತಃ ಪೂರ್ವಖೇದತಃ ।
ಸುಧನ್ವಾನೋ ವಿಧನ್ವಾನಃ ಅಭವನ್ ಭಯಮೋಹಿತಾಃ ॥೫೨॥

ನಿರ್ವೀರ್ಯಾಶ್ಚಾಭವನ್ ಸರ್ವೇ ಗಂಧರ್ವಾ ಧೈರ್ಯವರ್ಜಿತಾಃ ।
ತರ್ಜಿತಾ ಗಣರಾವೇಣ ತತ್ರೈವಾಪ್ಸರಸಾಂ ಗಣಾಃ ॥೫೩॥

ವಿಸ್ರಸ್ತಕಬಲಾಲಂಬಿ ವಿಗಲತ್ಕರಕಂಕಣಾಃ ।
ಧಾವಂತಿ ವಿದಿಶಾಂ ತತ್ರ ಸಿದ್ಧವಿದ್ಯಾಧರಾದಯಃ ॥೫೪॥

---

ಬಿದ್ದುಬಿಟ್ಟರು. ಮರುದ್ಗಣಗಳು ಶಿವಗಣಗಳ ಬಾಣಪ್ರಹಾರಕ್ಕೆ ಹೆದರಿ ಮೂರ್ಛಿತರಾದರು. ||೪೭-೪೮||

ಅಗ್ನಿ ಪುರುಷನಿಗೆ ನಾಲಿಗೆ ಒಣಗಿಹೋಯಿತು. ಒಣಗಿದ ತುಟಿಯನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾ ಎಲ್ಲೆಲ್ಲೂ ಓಡಾಡತೊಡಗಿದನು. ವಿಶ್ವೇದೇವತೆಗಳು ಶ್ವಾಸಹೀನರಾಗಿ ಮೃತದೇಹದಂತೆ ಕೆಳಗೆ ಬಿದ್ದುಬಿಟ್ಟರು. ಕುಬೇರನು ವಿಕಾರಾಂಗನಾಗಿಯೂ, ವರುಣನು ದಿಕ್ಕುಗೆಟ್ಟವನಾಗಿಯೂ, ವಾಯುವು ಮೇಲೆ ಮೇಲೆ ಏರುತ್ತಲೂ, ಸೂರ್ಯನು ಕಾಂತಿಹೀನನಾಗಿಯೂ ಓಡಿದನು. ||೪೯-೫೦||

ನಿಋುಋುತಿಯು ಧೈರ್ಯಗೆಟ್ಟನು. ಆದಿತ್ಯರೂ ಚಂದ್ರನೂ ಭಯೋದ್ವಿಗ್ನರಾದರು. ಪಿತೃದೇವತೆಗಳು ಕಾತರರಾದರು. ಯಮನು ಭಯಚಕಿತನಾದನು. ಮತ್ತು ಹಿಂದೆ ಈಶ್ವರನಿಂದ ಆಗಿದ್ದ ದುಃಖವನ್ನು ಸ್ಮರಿಸಿಕೊಂಡನು (ಮಾರ್ಕಂಡೇಯನ ಎದುರಿನಲ್ಲಿ) ಧನುರ್ಧಾರಿಗಳಾಗಿದ್ದವರೆಲ್ಲಾ ಭಯದಿಂದ ತಮ್ಮ ಧನುಸ್ಸುಗಳನ್ನು ಎಸೆದು ನಿಂತರು, ||೫೧-೫೨||

ಗಂಧರ್ವರೆಲ್ಲಾ ಭಯಚಕಿತರಾಗಿ ಧೈರ್ಯವನ್ನೇ ಬಿಟ್ಟರು. ವೀರಭದ್ರ ಗಣಗಳ ಗರ್ಜನೆಗೆ ಅಪ್ಸರಸ್ಸುಗಳೆಲ್ಲಾ ನಡುಗಿಹೋದರು. ಸಿದ್ಧವಿದ್ಯಾಧರಾದಿ ದೇವಯೋನಿಗಳು ತಲೆಕೆದರಿಕೊಂಡು, ಕೈಬಳೆಗಳು ಜಾರಿ ಬಿದ್ದುಹೋಗುತ್ತಿದ್ದರೂ ಲಕ್ಷಿಸದೆ ದಿಕ್ಕಾಪಾಲಾಗಿ ಓಡತೊಡಗಿದರು. ||೫೩-೫೪||

ಕಿಂಪೂರುಷಾ ನಾಗಯಕ್ಷಾಶ್ಚ ದಕ್ಷಾಕ್ರೋಶಾತ್ ಪ್ರದುದ್ರುವುಃ ।
ನಾಗಾ ನಗಾಶ್ಚ ಭೂನಾಗಾಃ ಸದ್ಯೋ ವಿದ್ಯಾಧರಾಸ್ತದಾ ॥೫೫॥

ಹಾಹಾಕಾರಕೃತಾಸ್ತತ್ರ ಭ್ರಮಂತಿ ಪರಿತೋ ಮುಹುಃ ।
ಧೂಮಾಸೀನಾಸಮೂಹೇನ ಶಾಲಾಂತಃ ಸಂಸ್ಥಿತಾ ದ್ವಿಜಾಃ ॥೫೬॥

ವಿದಗ್ಧಾಶ್ಚೈವ ಮುಗ್ಧಾಶ್ಚ ಶಾಲಾದಾಹೇನ ಮೋಹಿತಾಃ ।
ಬಡಬಾನಲಸಂಕಾಶೋ ಜ್ವಾಲಾಮಾಲೋನಿಲೈರ್ಯುತಃ ॥೫೭॥

ಶಾಖಾಶಿಖಾಭಿರ್ವಹ್ನೇಶ್ಚ ಲೇಲಿಹಾನಮಭೂಜ್ಜಗತ್ ।
ಧೂಮಜ್ವಾಲಾವೃತಾ ಲೋಕಾ ಅಭವನ್ ಗಂಧಮೇದುರಾಃ ॥೫೮॥

ಮಾಂಸಾನಿ ಚೈವ ಭಕ್ಷ್ಯಾಣಿ ಅನ್ನಮುಚ್ಚಾವಚಂ ಬಹು ।
ರಸವಂತಿ ಚ ಪಾನಾನಿ ಸೋಮಾಜ್ಯಹವಿಷಾದ್ರಯಃ ॥೫೯॥

ವಾಸಾಂಸ್ಯಾಭರಣಾನ್ಯತ್ರ ಸ ದದಾಹೋಜ್ಜ್ವಲಚ್ಛಿಖಃ ।
ಗಣೇಶ್ವರಾಸ್ಯ ಸಂಕ್ರುದ್ಧಾ ಯೂಪಾನುತ್ಪಾಟ್ಯ ಚಿಕ್ಷಿಪುಃ ॥೬೦॥

---

ಕಿಂಪುರುಷರು, ನಾಗರು, ಯಕ್ಷರು, ಪರ್ವತಗಳು, ಭೂಮಿಯಲ್ಲಿರುವ ಸರ್ಪದೇವತೆಗಳು, ವಿದ್ಯಾಧರರು ಇವರೆಲ್ಲರೂ ವೀರಭದ್ರನ ಅಟಾಟೋಪಕ್ಕೆ ಹೆದರಿ ಹಾಹಾಕಾರಮಾಡಿದರು. ಯಜ್ಞಮಂಟಪವೆಲ್ಲಾ ವೀರಭದ್ರನ ಹಣೆಗಣ್ಣಿನ ಉರಿಯ ಹೊಡೆತಕ್ಕೆ ಸಿಕ್ಕಿ ಉರಿಯುತ್ತಿತ್ತು. ಸುತ್ತಲೂ ಹೊಗೆಯ ಸಮೂಹವು ವ್ಯಾಪಿಸಿಬಿಟ್ಟಿತು. ಆ ಯಾಗಮಂಟಪದ ಒಳಭಾಗದಲ್ಲಿದ್ದ ಪಂಡಿತರು, ಸ್ತ್ರೀಯರು, ಬ್ರಾಹ್ಮಣರು ಇವರೆಲ್ಲರೂ, ಬಡಬಾಗ್ನಿಯಂತೆ ಎಲ್ಲವನ್ನೂ ಸುಡುತ್ತಲಿರುವ ಜ್ವಾಲಾಸಮೂಹದಿಂದ ಆವೃತರಾಗಿ ದಿಕ್ಕುಗೆಟ್ಟು ಕುಳಿತಿದ್ದರು. ೫೫-೫೬-೫೭॥

ಆ ಅಗ್ನಿಯು ಪ್ರಪಂಚವನ್ನೇ ನುಂಗಿಬಿಡುವುದೋ ಎಂಬಂತೆಯೂ ತನ್ನ ಧೂಮರಾಶಿಯಿಂದ ಜಗತ್ತನ್ನೇ ಆಚ್ಛಾದಿಸುವನೋ ಎಂಬಂತೆ ತನ್ನ ಧೂಮರಾಶಿಯಿಂದ ಜಗತ್ತನ್ನೇ ಆವರಿಸಿಕೊಂಡಿತು. ಯಾಗಶಾಲೆಯಲ್ಲಿದ್ದ ಮಾಂಸ, ಭಕ್ಷ್ಯಭೋಜ್ಯಗಳ ರಾಶಿ, ಹಾಗೆಯೇ ರಸವತ್ತಾದ ಪಾನೀಯಗಳು, ಸೋಮರಸ, ತುಪ್ಪ, ಹವಿಸ್ಸು, ವಸ್ತ್ರಾಭರಣಗಳು ಇವೆಲ್ಲವನ್ನೂ ಸುಟ್ಟು ಭಸ್ಮಮಾಡಿತು. ಯಾಗಮಂಟಪದಲ್ಲಿದ್ದ ಯೂಪಸ್ತಂಭಗಳನ್ನು ವೀರಭದ್ರಗಣಗಳು ಕಿತ್ತೆಸೆದುವು. ॥೫೮-೫೯-೬೦॥

ಪ್ರಸ್ತೋತ್ರಾ ಸಹ ಹೋತ್ರಾ ಚ ಪೋತ್ರಾ ನೇಷ್ಟ್ರಾ ಗಣೇಶ್ವರಾಃ ।
ಗಂಗಾಸ್ರೋತಸಿ ಚೈವಾಶ್ವಂ ಪಶುಭಿಃ ಪಾತಯಾಂಸ್ತದಾ ॥೬೧॥

ಭಾಂಡಾನಿ ಯಜ್ಞಪಾತ್ರಾಣಿ ಭಿಂದಂತಿ ಗಣಪಾ ಮುದಾ ।
ಭಕ್ಷ್ಯಾಣಿ ತತ್ರ ಪೇಯಾನಿ ಪಿಬಂತೋ ಭಕ್ಷಯಂತಿ ಹಿ ॥೬೨॥

ಧಾವಂತಿ ಪರಿತಸ್ತತ್ರ ಅನುಪೃಷ್ಠಂ ಸುರಾನ್ಮುನೀನ್ ।
ಬಿಭಿದುಶ್ಶರವರ್ಷೇಣ ಹರ್ಷೇಣ ಮಹತಾ ಗಣಾಃ ॥೬೩॥

ಕುಂತಶಾಂತಾಂತ್ಸುರಾಂಸ್ತತ್ರ ಚಕ್ರುರಾಕ್ರೋಶಕಾರಿಣಃ ।
ಹಾಹಾಹೇತಿ ವದಂತ್ಯನ್ಯೇ ತಾತಾಂಬೇತಿ ವದಂತಿ ತೇ ॥೬೪॥

ಭ್ರಾತರ್ಹಿತೇತಿ ಸಂಭ್ರಾಂತಾ ಧಾವಂತಿ ಮುನಯಸ್ಸುರಾಃ ।
ಗತದಂಡಕಮಂಡಲ್ವಃ ಖಂಡಿತಾ ಗಣಖಡ್ಗತಃ ॥೬೫॥

ಚೂರ್ಣಿತಾಶ್ಚಾಶ್ಮಭಿಃ ಕೇಚಿದ್ಘೂರ್ಣಿತಾ ಪ್ರಾಪ್ಯ ತಾನ್ ಕ್ಷಿತೌ ।
ಜಟಾಶ್ಚೋತ್ಪಾಟ್ಯ ಗಣಪಾಃ ಮುನೀನಾಂ ಪಾತಯಂತ್ಯಧಃ ॥೬೬॥

---

ಯಜ್ಞಕರ್ಮದಲ್ಲಿ ಪ್ರಸ್ತೋತ, ಹೋತ, ಪೋತ, ನೇಷ್ಟಾ ಮುಂತಾದ ಹೆಸರಿನ ಋತ್ವಿಕ್ಕರನ್ನೂ, ಯಜ್ಞಾಶ್ವವನ್ನೂ ಎತ್ತಿಕೊಂಡು ಹೋಗಿ ಗಂಗಾಪ್ರವಾಹಕ್ಕೆ ಎಸೆದುಬಿಟ್ಟರು. ಯಾಗಕ್ಕಾಗಿ ಸಿದ್ಧಪಡಿಸಿಟ್ಟಿದ್ದ ಭಾಂಡಗಳನ್ನು ಒಡೆದುಹಾಕಿದರು. ಹೋಮಕ್ಕಾಗಿದ್ದ ಭಕ್ಷ್ಯಭೋಜ್ಯಗಳನ್ನೂ, ಪಾನೀಯಾದಿಗಳನ್ನೂ ತಾವೇ ತಿಂದು ಬಿಟ್ಟರು. ॥೬೧-೬೨॥

ಹೆದರಿ ಓಡಿಹೋಗುತ್ತಿರುವ ದೇವತೆಗಳನ್ನೂ, ಮುನಿಗಳನ್ನೂ ಹಿಂಬಾಲಿಸಿ ಓಡಿಹೋಗಿ ಗಣನಾಯಕರು ಬಾಣಪ್ರಯೋಗಮಾಡಿ ನೋಯಿಸಿದರು. ಮತ್ತೆ ಕೆಲವು ದೇವತೆಗಳನ್ನು ಕುಂತಾಯುಧದಿಂದ ಹೊಡೆದು, ಅವರು "ಅಪ್ಪ", "ಅಮ್ಮ" ಎಂದು ಕೂಗಿಕೊಳ್ಳುವಂತೆ ಗಾಯಗೊಳಿಸಿದರು. ॥೬೩-೬೪॥

ಮುನಿಗಳೂ, ದೇವತೆಗಳೂ ತಮ್ಮ ದಂಡಕಮಂಡಲುಗಳನ್ನು ಎಸೆದು ಗಣಗಳ ಖಡ್ಗದ ಏಟನ್ನು ತಾಳಲಾರದೆ ಅಣ್ಣ, ಅಪ್ಪ, ಎಂದು ಅರಚಿಕೊಳ್ಳುತ್ತಾ ಓಡಿಹೋದರು. ಅನೇಕ ಮುನಿಗಳನ್ನು ಶಿವಗಣಗಳು ಕತ್ತರಿಸಿಹಾಕಿದರು. ಕಲ್ಲಿನ

ಶ್ಮಶ್ರುಭಿಶ್ಚ ಗಣಾಶ್ಚಾಷ್ಟೌ ದಂತೈರ್ನಿಷ್ಕಾಸಯಂತ್ಯಪಿ ।
ಮುನೀನಾಮೃತ್ವಿಜಾಂಸ್ತತ್ರ ಸದಸ್ಯಾನಾಂ ತದಾ ಗಣಾಃ ॥೬೭॥

ಹಾವಯಂತಂ ಸೋಮರಸಂ ಭೃಗುಂ ತಾಡ್ಯ ಕಪೋಲಯೋಃ ।
ಪಾತಯಂತಿ ಮಹೀಪೃಷ್ಠೇ ನಿಷ್ಪಿಷ್ಯೋಷ್ಠಮಕುರ್ವತ ॥೬೮॥

ವೀರಭದ್ರೋ ಮಹಾತೇಜಾಃ ಶಕ್ರಂ ನಕ್ರವದಾಸ್ಥಿತಂ ।
ಐರಾವತೇನ ಧಾವಂತಂ ಪಾಟಯಾಮಾಸ ಖಡ್ಗತಃ ॥೬೯॥

ಆಖಂಡಲಕರಂ ತತ್ರ ಕಾರ್ಮುಕಾಕ್ತೈಃ ಪೃಷತ್ಕಕೈಃ ।
ತಿಲಶಃ ಖಂಡಯಾಮಾಸ ಸಂಪೂರ್ಯಾಕ್ಷಿಮಪಾತಯತ್ ॥೭೦॥

ಮುಕುಟೇನಾಪವಿದ್ಧೇನ ಪತನ್ನೂರ್ವ್ಯಾಂ ಸ ವಾಸವಃ ।
ಲಂಬಮಾನೋ ಗಜಪದೇ ಕಕ್ಷ್ಯಾಸಕ್ತಪದೋ ಲುಠತ್ ॥೭೧॥

ನಿಸ್ತ್ರಿಂಶೇನ ಹತಸ್ತತ್ರ ವರುಣೋ ಯಾದಸಾಂ ಪತಿಃ ।
ಲುಲಾಯೇನೈವ ನಿಹತೋ ಗಣಬಾಣೈರ್ಯಮಸ್ತದಾ ॥೭೨॥

---

ಮೇಲೆ ಬಡಿದರು, ಮತ್ತೆ ಕೆಲವರ ಜಟೆಗಳನ್ನು ಕಿತ್ತು ನೆಲಕ್ಕೆ ಹಾಕಿ ಅಪ್ಪಳಿಸಿದರು. ॥೬೫-೬೬॥

ಎಂಟು ಜನ ಸದಸ್ಯರಾಗಿದ್ದ ಋಷಿಜನರ ಮೀಸೆಯನ್ನೂ, ಹಲ್ಲುಗಳನ್ನೂ ಕಿತ್ತು ಓಡಿಸಿದರು. ಋತ್ವಿಜರ ಮಧ್ಯದಲ್ಲಿ ಸೋಮರಸವನ್ನು ಹೋಮಮಾಡುತ್ತಿದ್ದ ಭೃಗುಮಹರ್ಷಿಯ ಕೆನ್ನೆಗೆ ಹೊಡೆದು ದವಡೆಯನ್ನು ಹರಿದು ನೆಲಕ್ಕೆ ಹಾಕಿ ಅಪ್ಪಳಿಸಿದರು. ॥೬೭-೬೮॥

ಮೊಸಳೆಯಂತೆ ಅವಿತುಕೊಂಡು ಐರಾವತದ ಮೇಲೆ ಕುಳಿತು ಓಡುತ್ತಿದ್ದ ಇಂದ್ರನನ್ನು ವೀರಭದ್ರನು ತನ್ನ ಕತ್ತಿಯಿಂದ ಹೊಡೆದು, ಅವನ ಕೈಯ್ಯಲ್ಲಿದ್ದ ಬಿಲ್ಲು ಬಾಣಗಳನ್ನು ಕೆಳಕ್ಕೆ ಬೀಳಿಸಿ ಅವುಗಳನ್ನೆಲ್ಲಾ ಚೂರುಚೂರಾಗಿ ಖಂಡಿಸಿ, ಅವನ ಕಣ್ಣುಗಳಿಗೆಲ್ಲಾ ಬಾಣಬಿಟ್ಟನು. ॥೬೯-೭೦॥

ಇಂದ್ರನು ಆ ಏಟನ್ನು ತಾಳಲಾರದೆ ಕಿರೀಟಕಳಚಿ ನೆಲಕ್ಕೆ ಬಿದ್ದುಬಿಟ್ಟನು. ಆನೆಯ ಕಾಲಿನ ಮಧ್ಯಭಾಗದಲ್ಲಿ ಬಿದ್ದು ಹೊರಳಾಡುತ್ತಾ ನರಳಿದನು. ವರುಣನು ಕತ್ತಿಯ ಏಟಿಗೆ ತುತ್ತಾದನು. ಯಮನು ತನ್ನ ವಾಹನವಾದ ಕೋಣ

ಅರ್ಯಮಾ ನಮ್ರಯಾ ವಾಚಾ ಅಭಯಂ ಸಮಯಾಚತ ।
ಶರಾಗ್ರೇಣೋತ್ಕಿರನ್ನೇತ್ರೇ ತಸ್ಯ ತೇ ಗಣಪುಂಗವಾಃ ॥೭೩॥

ವೀರಭದ್ರೋ ಮಹಾತೇಜಾಃ ಶಕ್ರಂ ಮುಷ್ಟ್ಯೈವ ತಾಡಯನ್ ।
ಭಗಸ್ಯ ನೇತ್ರೇ ಚೋತ್ಪಾಟ್ಯ ಕರಜಾಗ್ರೇಣ ಲೀಲಯಾ ॥೭೪॥

ನಿಹತ್ಯ ಮುಷ್ಟಿನಾ ದಂತಾನ್ ಪೂಷ್ಣಶ್ಚಾಥ ನ್ಯಪಾತಯತ್ ।
ತದಾ ಚಂದ್ರಮಸಂ ದೇವಂ ಪಾದಾಂಗುಷ್ಠೇನ ಲೀಲಯಾ ॥೭೫॥

ಶಿರೋ ಯಜ್ಞಸ್ಯ ಸ ತದಾ ಚಿಚ್ಛೇದ ಕರವಾಲತಃ ।
ವಹ್ನೇರ್ಹಸ್ತದ್ವಯಂ ಛಿತ್ವಾ ಜಿಹ್ವಾಶ್ಚೋತ್ಪಾಟಯದ್ದ್ರುತಂ ॥೭೬॥

ನಿರ್ಗತಾಸೂನ್ ವಸೂಂಶ್ಚಕ್ರೇ ಪಾದಾರತ್ನಿಜಘಾನತಃ ।
ವಿಶ್ವೇದೇವಾಶ್ವಿನೌ ತತ್ರ ಮರುತಃ ಪಿತರಸ್ತಥಾ ॥೭೭॥

---

ದೊಡನೆ ಶಿವಗಣಗಳ ಬಾಣದ ಏಟಿನಿಂದ ಗಾಯವಡೆದು ಕೆಳಕ್ಕುರುಳಿದನು. ॥೭೨-೭೩॥

ದ್ವಾದಶಾದಿತ್ಯರಲ್ಲಿ ಒಬ್ಬನಾದ ಅರ್ಯಮನು ವಿನಯವಾಣಿಯಿಂದ ಮಾತನಾಡುತ್ತಾ ಶರಣಾಗತನಾದನು. ಆಗ ಗಣದೇವತೆಗಳು ಅವನ ನೇತ್ರಗಳನ್ನು ಬಾಣಾಗ್ರಗಳಿಂದ ಕಿತ್ತುಹಾಕಿದರು. ವೀರಭದ್ರನು ಇಂದ್ರನನ್ನು ಮುಷ್ಟಿಯಿಂದ ಗುದ್ದುತ್ತಾ, ಭಗದೇವತೆಯೆಂಬ ಸೂರ್ಯಾಂಶಪುರುಷನ ಕಣ್ಣುಗಳನ್ನು ಕೇವಲ ತನ್ನ ಉಗುರಿನ ತುದಿಯಿಂದಲೇ ಕಿತ್ತುಹಾಕಿದನು. ॥೭೩-೭೪॥

ಪೂಷದೇವತೆಯ ಹಲ್ಲುಗಳನ್ನು ಹೊಡೆದು ಉದುರಿಸಿದನು. ಚಂದ್ರನನ್ನು ಕಾಲುಂಗುಷ್ಠದಿಂದ ಮೇಲಕ್ಕೆ ಹಾರಿಸಿದನು. ಯಜ್ಞಪುರುಷನ ತಲೆಯನ್ನು ಕತ್ತಿಯಿಂದ ಹಾರಿಸಿದನು. ಅಗ್ನಿಯ ಎರಡು ಕೈಗಳನ್ನೂ ಕತ್ತರಿಸಿ ನಾಲಗೆಯನ್ನು ಎಳೆದು ಕಿತ್ತು ಬಿಸುಟನು. ॥೭೫-೭೬॥

ವಸುದೇವತೆಗಳನ್ನು ಕೊಂದೇಬಿಟ್ಟನು. ವೀರಭದ್ರನ ಕಾಲಿನ ತುಳಿತದಿಂದ ವಿಶ್ವದೇವತೆಗಳೂ, ಅಶ್ವಿನೀದೇವತೆಗಳೂ, ಮರುದ್ಗಣಗಳೂ, ಪಿತೃದೇವತೆಗಳೂ,

ತೇನ ಸಂತಾಡಿತಾಃ ಪಾದೈರ್ಗದಾಪಾತನಿಘೂರ್ಣಿತಾಃ ।
ಯಮಂ ಸದಂಡಂ ಸಗಣೋ ಪಾದಾಘಾತೈರಥಾಹನತ್ ।೭೮॥

ಜಘಾನ ತತ್ರ ಚೇಶಾನಂ ತ್ರಿಶೂಲೇನ ಮಹಾಬಲಂ ।
ಪತ್ನೀ ಶಾಲಾಂ ದದಾಹಾಸ್ಯ ಕ್ರೋಶಂತೀರ್ನಾಗಪಾನಿವ ॥೭೯॥

ದಕ್ಷಪತ್ನ್ಯಾಸ್ತು ಕಬರಂ ಕರವಾಲೇನ ಚಾಹನತ್ ।
ಸರಸ್ವತೀಂ ಛಿನ್ನನಾಸಾಮಕರೋದಸಿಧಾರಯಾ ॥೮೦॥

ಕ್ಷತಜೇನೋಕ್ಷಿತಾ ತತ್ರ ದೇವಪತ್ನ್ಯೋಂಗನಾಗಣಂ ।
ವಿಸ್ರಸ್ತವಾಸಾಭರಣಂ ಗಲದ್ಧಮ್ಮಿಲ್ಲಮಲ್ಲಿಕಂ ॥೮೧॥

ಸಸ್ವೇದಾಶ್ರುಗಲದ್ಗಂಧಂ ಅಂಗರಾಗವಿದೂಷಿತಂ ।
ಕುರಂಗ ಇವ ಕ್ರೋಶಂತ್ಯೋ ಧಾವಂತಿ ಸುರಯೋಷಿತಃ ॥೮೨॥

ತ್ರಯಸ್ತ್ರಿಂಶತ್ಸುರಾನೇವಂ ತೇ ಗಣಾಶ್ಚ ಗಣೇಶ್ವರಃ ।
ಜಘಾನ ಭಗವಾನ್ ರುದ್ರಃ ಖಡ್ಗಯಷ್ಟ್ಯಸಿಸಾಯಕೈಃ ॥೮೩॥

---

ನರಳಿಹೋದರು. ಅವನ ಗದೆಗಳಪೆಟ್ಟಿನಿಂದ ಎಲ್ಲರೂಗಾಯಗೊಂಡರು. ದಂಡಾಯುಧ ಧಾರಿಯಾದ ಯಮನೂ ವೀರಭದ್ರನ ಕಾಲಿಗೆ ಸಿಕ್ಕಿ ಮೂರ್ಛೆಹೋದನು. ॥೭೭-೭೮॥

ಈಶಾನನನ್ನು ತ್ರಿಶೂಲದಿಂದ ತಿವಿದುಬಿಟ್ಟನು. ದೀಕ್ಷಿತನ ಪತ್ನಿಗಾಗಿ ನಿರ್ಮಿಸಿದ್ದ ಯಾಗಶಾಲೆಯನ್ನು ಸುಟ್ಟುಬಿಟ್ಟನು. ದಕ್ಷಬ್ರಹ್ಮನ ಪತ್ನಿಯ ಕೇಶ ಪಾಶವನ್ನು ವೀರಭದ್ರನು ತನ್ನ ಕತ್ತಿಯಿಂದ ಕತ್ತರಿಸಿಹಾಕಿದನು. ಬ್ರಹ್ಮಪತ್ನಿ ಯಾದ ಸರಸ್ವತಿಯ ಮೂಗನ್ನು ಕೊಯ್ದುಬಿಟ್ಟನು. ॥೭೯-೮೦॥

ಇನ್ನು ದೇವತೆಗಳ ಪತ್ನಿಯರು ನಾನಾವಿಧವಾದ ಏಟುಗಳಿಗೆ ಸಿಕ್ಕಿ ವಸ್ತ್ರಾ ಭರಣಗಳನ್ನು ಕಳೆದುಕೊಂಡು, ತಲೆ ಕೆದರಿಕೊಂಡು ಬೆವರಿನಿಂದಲೂ ಕಣ್ಣೀರಿ ನಿಂದಲೂ ತಮ್ಮ ಅಂಗರಾಗಗಳ ಗಂಧವನ್ನು ಅಳಿಸಿಕೊಂಡು, ಹೆಣ್ಣುಜಿಂಕೆಗಳಂತೆ ಅರಚಿಕೊಳ್ಳುತ್ತಾ ದಿಕ್ಕಾಪಾಲಾಗಿ ಓಡಿಹೋದರು. ಆಗ ಅವರನ್ನು ರಕ್ಷಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ. ॥೮೧-೮೨॥

ರುದ್ರರೂಪಿಯಾದ ಆ ವೀರಭದ್ರನು ಆ ರೀತಿ ಮೂವತ್ತುಮೂರುಕೋಟಿ ದೇವತೆಗಳನ್ನೂ, ತನ್ನ ಕತ್ತಿ, ಕಠಾರಿ, ಬಾಣ, ಗದೆ, ಪರಿಘ, ಖಡ್ಗ ಮುಂತಾದ

ಗದಾಪರಿಘನಿಸ್ತ್ರಿಂಶೈರ್ನಿರ್ದಯಂ ಮರ್ದಯನ್ಗಣೈಃ ।
ಏತಸ್ಮಿನ್ನಂತರೇ ತತ್ರ ವೀರಭದ್ರಂ ವಚೋಽಬ್ರವೀತ್ ॥೮೪॥

ಯಾಚಮಾನಶ್ಚ ಶರಣಂ ವೃದ್ಧಭಾವಾಶ್ರಿತಾಮಹಃ ।
ರಥಸ್ಥಮಪಿ ಸಾರಥ್ಯಂ ಸ್ವಯಂ ಕುರ್ವಂತಮೀಕ್ಷ್ಯನ್ವೈ ॥೮೫॥

॥ ಬ್ರಹ್ಮೋವಾಚ ॥

ಸಾರಥಿಸ್ತೇ ಭವಾಮ್ಯದ್ಯ ವೃದ್ಧೋ ನೋ ಯೋದ್ಧುಮುತ್ಸಹೇ ।
ಸುರಾಣಾಂ ಚ ರಣೇಮೇದ್ಯ ಪಶ್ಯ ಮೇ ರಶ್ಮಿಲಾಘವಂ ॥೮೬॥

ಪುರಾ ತ್ರಿಪುರಸಂಹಾರೇ ಶಂಭೋಃ ಸಾರಥ್ಯಕರ್ಮಣಿ ।
ಪ್ರಸಾದೇನ ನಿಯುಂಜನ್ಮಾಂ ಭಗವಾನಗಜಾಪತಿಃ ॥೮೭॥

ಸ್ಥಾಪಯನ್ಮಾಂ ರಥಸ್ಯಾಗ್ರೇ ವಿಜಯಾಯ ಸುರಾಹವೇ ।
ತಂ ಬ್ರಹ್ಮಾಣಂ ಗಣಶ್ರೇಷ್ಠಃ ಸಾರಥ್ಯೇ ಸಮಯೋಜಯತ್ ॥೮೮॥

---

ಆಯುಧಗಳಿಂದಲೂ ತನ್ನ ಗದೆಗಳ ಸಹಾಯದಿಂದಲೂ ಧ್ವಂಸಮಾಡಿಬಿಟ್ಟನು. ಹೀಗೆ ನಿರ್ದಯರಾಗಿ ದೇವತೆಗಳಿಗೆ ಹಿಂಸೆಕೊಡುತ್ತಿರುವ ಶಿವಗಣಗಳನ್ನು ಕಂಡು ಹೆದರಿ ವೃದ್ಧನಾದ ಬ್ರಹ್ಮನು, ರಥದ ಮೇಲೆ ಕುಳಿತು ತಾನೇ ಸಾರಥಿಕೆಲಸಮಾಡಿ ಕೊಳ್ಳುತ್ತಿದ್ದ ವೀರಭದ್ರನನ್ನು ಕುರಿತು ಈ ರೀತಿ ನುಡಿದನು. ॥೮೩-೮೪-೮೫॥

"ವೀರಭದ್ರನೇ, ನಾನು ಪೂರ್ಣವೃದ್ಧನಾಗಿರುವೆನು. ನಿನ್ನೊಡನೆ ಯುದ್ಧ ಮಾಡಲು ನನಗೆ ಇಷ್ಟವಿಲ್ಲ. ನಿನಗೆ ಸಾರಥಿಯಾಗಿ ನಾನು ಕೆಲಸಮಾಡುವೆನು. ದೇವತೆಗಳು ನನ್ನ ಸಾರಥಿತನದ ಕೈಚಳಕವನ್ನು ನೋಡಲಿ. ಹಿಂದೆ ತ್ರಿಪುರಾಸುರ ಸಂಹಾರಕಾಲದಲ್ಲಿ ನಾನು ಪರಶಿವನ ಅಪ್ಪಣೆಯಂತೆ ಪರಶಿವನಿಗೆ ಸಾರಥಿಯಾಗಿ ಕೆಲಸಮಾಡಿರುವೆನು. ಆ ಅನುಗ್ರಹವನ್ನು ನಾನು ಶಿವನಿಂದಲೂ ಹಿಂದೆ ಪಡೆದಿರು ವೆನು." ॥೮೬-೮೭॥

ಹಾಗೆ ಪ್ರಾರ್ಥಿಸಿಕೊಂಡ ಬ್ರಹ್ಮನನ್ನು ಗಣಶ್ರೇಷ್ಠನಾದ ವೀರಭದ್ರನು ಸುರರ ಮೇಲೆ ಮಾಡುತ್ತಿರುವ ಆ ಯುದ್ಧದಲ್ಲಿ ತನ್ನ ಸಾರಥಿಯನ್ನಾಗಿ ಏರ್ಪಡಿಸಿ ಕೊಂಡನು. ಆದರಂತೆ ವೀರಭದ್ರನು ತಾನು ಹಿಡಿದಿದ್ದ ರಥದ ಕುದುರೆಯ ಹಗ್ಗ

ತಸ್ಯ ರಶ್ಮೀನ್ ಪ್ರಜಗ್ರಾಹ ತದಶ್ವಾಂಶ್ಚೋದಯದ್ರಣೇ ।
ಗತಪ್ರತ್ಯಾಗತೈಶ್ಚಿತ್ರೈರಪೋವಾಹನಯೋಜನೈಃ ॥೮೯॥

ಸಂತುಷ್ಟಮುಕರೋದ್ವೇಧಾಃ ವೀರಭದ್ರಂ ಸುರಾಜಿಷು ।
ಪಕ್ಷಪಾತೇನ ದಕ್ಷಸ್ಯ ದಕ್ಷಂ ಕೃತ್ವಾ ಚ ಪೃಷ್ಠತಃ ॥೯೦॥

ತದ್ವೃತ್ವಿಜೋ ಮುನಿಗಣಾನ್ ಪ್ರದ್ರುತಾನ್ ಸುರಸತ್ತಮಾನ್ ।
ಪುನರ್ಯೋಜ್ಯ ಸಹಸ್ರಾಕ್ಷರಥೇ ಮಾತಲಿಚೋದಿತೇ ॥೯೧॥

ವಾಮದಕ್ಷಿಣಭಾಗಸ್ಥ ಸಹಸ್ರಾಕ್ಷಸುದಕ್ಷಕಾ ।
ನಿಷಂಗಕಾರ್ಮುಕಧರೌ ವರ್ಷಂತೌ ಚ ಶರಾಂಸ್ತಿತಾನ್ ॥೯೨॥

ಮಧ್ಯೇ ಸ್ವಯಂ ರಥೋಪಸ್ಥಂ ಸಮಾಸ್ಥಾಯ ಯಯೌ ಹರೀ ।
ದೇವಾನೀಕೈಶ್ಚ ಕೋಟೀಭಿಃ ಸಂವೃತೋ ವಿವಿಧಾಯುಧೈಃ ॥೯೩॥

ನಿಷಂಗಿಭಿಃ ಕವಚಿಭಿರ್ಗದಬಾಣಾಸಿಪಾಣಿಭಿಃ ।
ಶರಾಸಾರಂ ಪ್ರಮುಂಚನ್ಸ್ವೈ ಶಾರ್ಙ್ಗಂ ಧುನ್ವನ್ ಹರಿರ್ಯಯೌ ॥೯೪॥

---

ಗಳನ್ನು ಬ್ರಹ್ಮನ ಕೈಗೆ ಕೊಟ್ಟನು. ಬ್ರಹ್ಮನು ಬಹಳ ಶ್ರದ್ಧೆಯಿಂದ ಕುದುರೆಗಳನ್ನು ಎಳೆಯುವುದು, ಬಿಡುವುದು ಇವುಗಳಲ್ಲಿ ತನ್ನ ನೈಪುಣ್ಯವನ್ನು ತೋರ್ಪಡಿಸುತ್ತಿದ್ದನು. ॥೮೮-೮೯॥

ಆದರಿಂದ ವೀರಭದ್ರನಿಗೆ ಬಹಳ ಸಂತೋಷವಾಯಿತು. ಆಗ ಬ್ರಹ್ಮನು ದಕ್ಷನ ಮೇಲಿನ ಅಭಿಮಾನದಿಂದ ದಕ್ಷಬ್ರಹ್ಮನು ಹಿಂದಕ್ಕೆ ಬರುವಂತೆ ಮಾಡಿಕೊಂಡು ರಥವನ್ನು ಮುಂದುವರಿಸಿದನು. ಅತ್ತ ಇಂದ್ರನಾದರೋ ಹೆದರಿ ಓಡುತ್ತಲಿರುವ ದೇವತೆಗಳನ್ನೂ, ಮುನಿಗಳನ್ನೂ ಒಟ್ಟುಗೂಡಿಸಿಕೊಂಡು, ಮಾತಲಿಯನ್ನು ಸಾರಥಿಯನ್ನಾಗಿ ಕರೆಸಿಕೊಂಡು ಇಂದ್ರನು ಯುದ್ಧಸನ್ನದ್ಧನಾದನು. ॥೯೦-೯೧॥

ಎದುರುಪಕ್ಷದಲ್ಲಿ ವಿಷ್ಣುವು ಮಧ್ಯಭಾಗದಲ್ಲಿಯೂ, ಎಡಬಲಭಾಗಗಳಲ್ಲಿ ಇಂದ್ರನೂ, ದಕ್ಷನೂ, ಅಸ್ತ್ರಶಸ್ತ್ರಬಲಸಂಪನ್ನರಾಗಿ ವೀರಭದ್ರನ ಮೇಲೆ ಬಾಣಪ್ರಯೋಗ ಮಾಡಲಾರಂಭಿಸಿದರು. ವಿಷ್ಣುವು ಮಧ್ಯಭಾಗದಲ್ಲಿ ನಿಂತು ದೇವತೆಗಳ ಸೈನ್ಯದೊಡಗೂಡಿ ಘೋರಯುದ್ಧಕ್ಕಾರಂಭಿಸಿದನು. ॥೯೨-೯೩॥

ಬಾಣಗಳು, ಕವಚಧಾರಿಗಳು, ಗದೆ, ಕತ್ತಿ ಇವುಗಳನ್ನು ಹಿಡಿದವರೊಡಗೂಡಿ

ಕೇಚಿದ್ಗಜಾಶ್ವೈಶ್ಚ ರಥೈಃ ಸುರೈರ್ಬಾಣಧನುರ್ಧರೈಃ ।
ಪ್ರಾಧ್ಮಾಯ ಶಂಖಾನ್ ಭೇರೀಂಶ್ಚ ಪಟಹಾಹತಿನಿಸ್ಸನೈಃ ॥೯೫॥

ವೀರಭದ್ರಃ ಪ್ರಯಾಹೀತಿ ಮಾಧವಂ ಚೋದಯದ್ವಿಧಿಂ ।
ಗಣೈರ್ನಾನಾಪ್ರಹರಣೈರ್ಹೇತಿಶೂಲಹಲಾಯುಧೈಃ ॥೯೬॥

ನಿಷಂಗ ದಂಸ ನಾಗೈಶ್ಚ ಧನುರ್ಬಾಣಾಸಿಸಾಯಕೈಃ ।
ಕುಂತೈರ್ಗದಾಭಿರ್ಮುಸಲೈಃ ಪಟ್ಟಿಶೈಶ್ಚ ಪರಶ್ವಧೈಃ ॥೯೭॥

ಪ್ರದಧ್ಮುರಬ್ಜಾನ್ ಭೇರೀಂಶ್ಚ ಸವಾದ್ಯಪಟಹಾನಕಾನ್ ।
ಬೃಂಹಿತಾಸ್ಫೋಟನರವೈಃ ಪತಾಕಾಧೂನ ನಿಸ್ವನೈಃ ॥೯೮॥

ನಿಷ್ಕೋಸಿತಾಸಿವಿದ್ಯೋತ ಶತಾರ್ಕಮಿವ ಭಾಸ್ಕರಂ ।
ಆಹರ ಪ್ರಹರಸ್ವೇತಿ ಗಣೈಸ್ಸುರಗಣಾರವೈಃ ॥೯೯॥

---

ವಿಷ್ಣುವು ಶಾರ್ಙ್ಗವೆಂಬ ಬಿಲ್ಲನ್ನು ಪ್ರಯೋಗಿಸುತ್ತಾ ಮುಂದುವರಿದನು. ಕೆಲವು ದೇವತೆಗಳು ಆನೆ, ಕುದುರೆ, ರಥ, ಬಿಲ್ಲುಬಾಣ ಇವುಗಳ ಸಹಾಯವನ್ನು ಪಡೆದು, ಶಂಖ, ಭೇರಿ, ತಮಟೆ ಇವುಗಳನ್ನು ಧ್ವನಿಗೈಸುತ್ತಾ ಯುದ್ಧಸನ್ನದ್ಧರಾಗಿ ಬಂದರು. ॥೯೪-೯೫॥

ಇದನ್ನು ನೋಡಿ ವೀರಭದ್ರನು ವಿಷ್ಣುವಿನ ಕಡೆಗೆ ರಥವನ್ನು ತಿರುಗಿಸುವಂತೆ ಪ್ರೇರಿಸಿದನು. ವೀರಭದ್ರಗಣಗಳಾದರೋ, ನಾನಾವಿಧವಾದ ಬಾಣಗಳು, ಆಯುಧಗಳು, ತ್ರಿಶೂಲಗಳು, ಹಲಾಯುಧ, ಬತ್ತಳಿಕೆ, ಬಾಣಗಳು, ಆಯುಧಗಳು, ತ್ರಿಶೂಲಗಳು, ಕುಂತಾಯುಧ, ಗದೆ, ಮುಸಲ, ಪಟ್ಟಿಶ, ಪರಶು ಮುಂತಾದ ಆಯುಧಗಳಿಂದ ಕೂಡಿ ಯುದ್ಧಸನ್ನದ್ಧರಾದರು. ॥೯೬-೯೭॥

ಶಂಖಗಳನ್ನು ಊದಿದರು. ನಗಾರಿಗಳನ್ನೂ ತಮಟೆಗಳನ್ನೂ ಬಾರಿಸಿದರು. ಆನೆಗಳ ಘೀಂಕಾರ, ಸೈನಿಕರ ಆಟಾಟೋಪ, ಧ್ವಜಗಳು ಗಾಳಿಗೆ ಹಾರಾಡುವ ಧ್ವನಿ ಇವುಗಳಿಂದ ಆ ಯುದ್ಧರಂಗವು ಭಯಂಕರವಾಗಿದ್ದಿತು. ಒರೆಯಿಂದ ಈಚೆಗೆ ಎಳೆದ ಕತ್ತಿಗಳ ಹೊಳಪು ನೂರಾರು ಸೂರ್ಯರು ಒಟ್ಟುಗೂಡಿರುವರೆಂಬ ಭ್ರಾಂತಿಯನ್ನುಂಟುಮಾಡುತ್ತಿದ್ದಿತು. ಯುದ್ಧವೀರರಾದ ಆ ಭಟರಾದರೋ ಹೊಡಿ, ಬಡಿ,

ಧನುಷಾಂ ಕರ್ಷತಾಂ ತತ್ರ ಶರಾಣಾಂ ಜ್ಯಾಸುಧನ್ವಿನಾಂ ।
ಕೃತಕ್ರೇಂಕಾರ ಚೀತ್ಕಾರೈರ್ಹಯಹೇಷರಥಸ್ವನೈಃ ॥೧೦೦॥

ಭ್ರಮಚ್ಚಕ್ರಾಕ್ಷಸಂಕೂಜ ಗದಾಮುಸಲಪಾತನೈಃ ।
ಯುದ್ಧಮುದ್ಧತಮಾಕ್ರೋಶಂ ತಯೋಸ್ತತ್ರಾಸ ಸತ್ತ್ರಮ ॥೧೦೧॥

ಏವಂ ಯುಯೋಧ ಭದ್ರೋಽಪಿ ಹರಿಣಾ ದಾನವಾರಿಣಾ ।
ಹರಿಃ ಸುರಗಣೈಸ್ಸಾರ್ಧಂ ಭದ್ರಮೇವ ಯುಯೌ ತದಾ ॥೧೦೨॥

ತಯೋ ಸ್ಸಮಭವದ್ಯುದ್ಧಂ ಸುಘೋರಂ ರೋಮಹರ್ಷಣಂ ।
ಶೂರಾಣಾಮಥ ಭೀರೂಣಾಂ ದಾರುಣಂ ಮರಣೋಪಮಂ ॥೧೦೩॥

ದೇವಾಗಣೈಶ್ಚಯುಯುಧುಃ ವಸ್ವಶ್ವಿಮರುತೋಽರ್ಕಕಾಃ ।
ವಿಶ್ವೇದೇವಾಶ್ಚ ಪಿತರಃ ಸಾಧ್ಯಾವಿದ್ಯಾಧರಾಸ್ತಥಾ ॥೧೦೪॥

ಯಕ್ಷಾಪಕ್ಷೈಕಪಕ್ಷಸ್ಥಾಃ ಕುಬೇರವರುಣಾರ್ಯಮಾಃ ।
ಸುಧನ್ವಾನೋಥ ಮರುತೋ ಧನ್ವಿನೋ ಸಾಯಕೈಸ್ತದಾ ॥೧೦೫॥

---

ಏಳಿ ಮುಂತಾದ ವೀರಾಲಾಪಗಳಿಂದ ಬಾಣಗಳನ್ನು ಬಿಲ್ಲುಗಳಿಂದ ಎಳೆದು ಬಿಡುತ್ತಿದ್ದರು. ಕುದುರೆಗಳ ಕೆನೆತ, ರಥಗಳ ಕ್ರೇಂಕಾರ, ವೀರರ ಚೀತ್ಕಾರ ಇವುಗಳಿಂದ ಯುದ್ಧವು ಅತ್ಯಂತ ಭಯಪ್ರದವಾಗಿದ್ದಿತು. ||೯೮-೯೯-೧೦೦||

ಸುತ್ತುವರಿದು ಬರುತ್ತಿರುವ ಚಕ್ರಾಯುಧಗಳು, ತಿರುಗಿಬೀಳುವ ಗದೆಗಳು, ಮುಸಲಗಳು ಇವುಗಳಿಂದ ಕೂಡಿ ಅವರಿಬ್ಬರಿಗೂ ಘೋರಯುದ್ಧವೇ ಆರಂಭವಾಯಿತು. ದೇವಗಣಗಳೊಡಗೂಡಿದ ವಿಷ್ಣುವಿಗೂ ಶಿವಗಣಪರಿವೃತನಾದ ವೀರಭದ್ರನಿಗೂ ಸಂಗ್ರಾಮವು ಪ್ರಾರಂಭವಾಯಿತು. ||೧೦೧-೧೦೨||

ಅವರಿಬ್ಬರಿಗೆ ನಡೆದ ಯುದ್ಧವು ಶೂರರಿಗೆ ರೋಮಾಂಚವನ್ನುಂಟುಮಾಡುತ್ತಿದ್ದಿತು. ಭೀರುಗಳಿಗಾದರೋ ಮರಣಭಯವನ್ನುಂಟುಮಾಡುತ್ತಿದ್ದಿತು. ಸಕಲ ದೇವತೆಗಳೂ, ವಸುಗಳೂ, ಮರುತರೂ, ಆದಿತ್ಯರೂ, ವಿಶ್ವೇದೇವತೆಗಳೂ, ಪಿತೃಗಳೂ, ಸಿದ್ಧವಿದ್ಯಾಧರರೂ, ಯಕ್ಷರೂ, ವಿಷ್ಣುವಿನ ಪಕ್ಷದವರಾಗಿದ್ದರು. ದಕ್ಷನ ಪಕ್ಷೀಯರಾದ ಕುಬೇರ, ವರುಣ, ಆರ್ಯಮಾ ಮುಂತಾದ ದೇವತೆಗಳು ಬಲಿಷ್ಠವಾದ ಧನುರ್ಬಾಣಗಳುಳ್ಳವರಾಗಿ ಮುಂದುವರಿದರು. ೧೦೩-೧೦೪-೧೦೫||

ವಿಶ್ವಕ್ಸೇನಾದಿಗಣಪಾಃ ಸ್ವಗಣೈಃ ಕೋಟಿಭಿರ್ವೃತಾಃ ।
ಶಂಖಚಕ್ರಗದಾಹಸ್ತಾಃ ಯುಯುಧುಸ್ಸ್ವಯುಧೈಸ್ತದಾ ॥೧೦೬॥

ಗರುಡೋಽಪಿ ಗಣಾಂಸ್ತತ್ರ ವ್ಯದದಾರ ನಖೈಶ್ಶಿತೈಃ ।
ಪಕ್ಷತುಂಡಪ್ರಹಾರೈಶ್ಚ ಗಣೈಸ್ಸುರಗಣಾಸ್ತದಾ ॥೧೦೭॥

ಉದ್ಯತಾಯುಧಜಾಲೈಶ್ಚ ಯುಯುಧುರ್ವರಸಾಯಕೈಃ ।
ವಿಷ್ಣುಃ ಸಾಯಕಸಾಹಸ್ರೈರ್ವೀರಭದ್ರಂ ಜಘಾನ ಹ ॥೧೦೮॥

ವೀರಭದ್ರಚ್ಛಿನ್ನಬಾಣಾನ್ ವಿಷ್ಣೋಸ್ತತ್ಪಶ್ಯತಾಂ ತದಾ ।
ತ್ರಿಭಿಶ್ಶರೈಸ್ತದಾ ವಿಷ್ಣುಂ ಜಘಾನ ಗಣಪುಂಗವಃ ॥೧೦೯॥

ಧನುರ್ಜ್ಯಾಕವಚಂ ತತ್ರ ಛಿತ್ವಾ ತತ್ರೈವ ಪಾತಯತ್ ।
ನವತ್ಯಾ ವೀರಭದ್ರಂ ಚ ಶರೈರಾತತಪರ್ವಭಿಃ ॥೧೧೦॥

ಸಂತಾಡ್ಯ ಮರ್ಮಸು ಹರಿಃ ಶಂಖಂ ಪ್ರಾಧ್ಮಾಪಯತ್ತದಾ ।
ತುಹುಂಡು ಹುಂಡ ಹೇರಂಡ ಮುಂಡಲೋ ಬಾಷ್ಕಲಿರ್ಬಲಿಃ ॥೧೧೧॥

ಏತೇ ಗಣೇಂದ್ರಾ ವಸ್ವಶ್ವಿಮರುದ್ಭಿರ್ಯುಯುಧೂ ರಣೇ ।
ಗದಾಪರಿಘನಿಸ್ತ್ರಿಂಶೈಃ ಶರೈರ್ಮರ್ಮಸು ತಾಡಯನ್ ॥೧೧೨॥

---

ವಿಶ್ವಕ್ಸೇನನೇ ಮೊದಲಾದ ಕೋಟಿವಿಷ್ಣುಗಣಗಳು ಶಂಖ, ಗದೆ ಮುಂತಾದ ಆಯುಧಗಳಿಂದ ಕೂಡಿ, ವೀರಭದ್ರಸೈನ್ಯದ ಮೇಲೆ ನುಗ್ಗಿದರು. ವಿಷ್ಣುವಾಹನನಾದ ಗರುಡನೂ ಸಹ ತನ್ನ ಹರಿತವಾದ ಕೊಕ್ಕಿನ ತುದಿಯಿಂದ ಶಿವಗಣನಾಯಕರ ದೇಹವನ್ನು ಸೀಳಿಬಿಡುತ್ತಿದ್ದನು. ॥೧೦೬-೧೦೭॥

ವಿಷ್ಣುವೂ ಸಹ ದಿವ್ಯಾಸ್ತ್ರಗಳಿಂದ ಕೂಡಿ ವೀರಭದ್ರನನ್ನು ನೋಯಿಸಿದನು. ವೀರಭದ್ರನಾದರೋ ಎಲ್ಲರೂ ನೋಡುತ್ತಿರುವಂತೆಯೇ ವಿಷ್ಣುವಿಗೆ ಮೂರು ಬಾಣಗಳನ್ನು ಹೊಡೆದು ವಿಶೇಷವಾಗಿ ಗಾಯಗೊಳಿಸಿದನು. ॥೧೦೮-೧೦೯॥

ವಿಷ್ಣುವಾದರೋ ತೊಂಬತ್ತು ಬಾಣಗಳನ್ನು ಪ್ರಯೋಗಿಸಿ ವೀರಭದ್ರನ ಧನುಸ್ಸು, ಮೌರ್ವಿ, ಕವಚ ಇವೆಲ್ಲವೂ ಹರಿದು ಮುರಿದುಹೋಗುವಂತೆ ಮಾಡಿ, ವೀರಭದ್ರನ ಮರ್ಮಸ್ಥಾನಗಳಿಗೆ ಹೊಡೆದು ಶಂಖಧ್ವನಿಮಾಡಿದನು. ಹಾಗೆಯೇ,

ಗಜಾಗಜೈರ್ಹಯೈರಶ್ವಾಃ ರಥಸ್ಥಾ ರಥಿಭಿಸ್ಸಹ ॥೧೧೩॥

ಕಶಾಂಕುಶಾಂಗುಷ್ಠ ಸುಪ್ರಪುಷ್ಟತೋದನೈಃ
ಸ್ರೋತ್ರೈಶ್ಚ ಯೋಕ್ರೈಃ ಸುಖಲೀನಚಾಲನೈಃ ।
ಕರೀಂದ್ರಸಂಘಾನ್ ಪ್ರಸೃತೋರುಸತ್ಕಟಾಂ
ತ್ಸಚಾಮರಾಸಕ್ತವಿಲೋಲಕರ್ಣಾನ್ ॥೧೧೪॥

ತ್ವಂಗತ್ತುರಂಗಾನ್ ವರಸಾದಿಚೋದಿತಾನ್
ಉತ್ಪುಚ್ಛಸಂಗಾಹತಿ ಫೇನಿಲಾಸ್ಯಾನ್ ।
ಖುರಾಗ್ರಬದ್ಧಾಯಸಪುಷ್ಪರೇಣು
ಪ್ರಕೀರ್ಣತಾಮಾಪ ರಣಾವನಿಸ್ತದಾ ॥೧೧೫॥

ಧಾವದ್ರಥಾಂಗೋತ್ಥಿತ ರೇಣುರೂಷಿತೈಃ
ಸುಭೂಷಣಶ್ಮಶ್ರುಭಿರುದ್ಧತಾಸುರಾಃ ।

---

ತುಹುಂಡು, ಹುಂಡ, ಹೇರಂಡ, ಬಾಷ್ಕಲಿ, ಬಲಿ ವಸುಗಳು, ಅಶ್ವಿನೀ ದೇವತೆಗಳು, ಮರುದ್ಗಣಗಳು ಇವರೊಡಗೂಡಿ ವಿಷ್ಣು ಸೈನಿಕರು ವೀರಭದ್ರನ ಗಣದೇವತೆಗಳನ್ನು ಗಾಯಗೊಳಿಸ ತೊಡಗಿದರು. ||೧೧೦-೧೧೧-೧೧೨||

ಆನೆಗಳು ಆನೆಗಳೊಡನೆಯೂ, ಕುದುರೆಗಳು ಕುದುರೆಗಳೊಡನೆಯೂ, ರಥಿಕರು ರಥಿಕರೊಡನೆಯೂ ಪರಸ್ಪರನಾಗಿ ಹೊಡೆದಾಡುತ್ತಿದ್ದರು. ಕುದುರೆಗಳಮೇಲೆ ಸವಾರರು ಕುಳಿತು, ಲಗಾಮನ್ನು ಎಳೆಯುತ್ತಾ, ಚಾಟಿಯಿಂದ ಹೊಡೆಯುತ್ತಾ ಯುದ್ಧರಂಗದಲ್ಲಿ ಎದುರುಪಕ್ಷದ ಸವಾರರನ್ನು ಹೊಡೆದಟ್ಟುತ್ತಿದ್ದರು. ಅದೇ ರೀತಿ ಆನೆಗಳು ತಮ್ಮ ಕಿವಿಗಳ ಮೇಲೆ ಚಾಮರವನ್ನಿಟ್ಟು, ಮದೋದಕವನ್ನು ಸುರಿಸುತ್ತಾ ಎದುರುಪಕ್ಷದ ಆನೆಗಳ ಮೇಲೆ ನುಗ್ಗುತ್ತಿದ್ದುವು. ||೧೧೩-೧೧೪||

ಸವಾರರಿಂದ ಪ್ರೇರಿತಗಳಾದ ಕುದುರೆಗಳು, ಬಾಲವನ್ನೆತ್ತಿಕೊಂಡು ನೊರೆಯನ್ನು ಸುರಿಸುತ್ತಾ, ಕಾಲುಗೊರಸಿನ ಕೆಳಭಾಗದಲ್ಲಿರುವ ಲಾಳಗಳಿಂದ ನೆಲವನ್ನು ತುಳಿದು, ಧೂಳನ್ನು ಎಬ್ಬಿಸುತ್ತಾ ಆ ರಣರಂಗವನ್ನೆಲ್ಲಾ ರಜೋಮಯವನ್ನಾಗಿ ಮಾಡಿಬಿಟ್ಟಿತು. ||೧೧೫||

ರಥಚಕ್ರಗಳ ಓಡಾಟದಿಂದ ಆ ಭೂಮಿಯೆಲ್ಲಾ ದೂಳಿನಿಂದ ತುಂಬಿ ಹೋಯಿತು. ಮೀಸೆಗಳಿಂದ ಅಲಂಕೃತವಾಗಿದ್ದ ರಾಕ್ಷಸ ಶಿರೋಭಾಗಗಳು ಅಲ್ಲಲ್ಲಿ

ಗಣಾ ವಿಕೋಶೀಕೃತ ಖಡ್ಗ ಖೇಟ
ಪ್ರಹಾರಧಾರಾಸು ಪತಂತಿ ಭೃಂಗವತ್ ॥೧೧೬॥

ಕೋದಂಡಮಂಡಲಸಮುದ್ಭವ ಕಾಂಡಬಾಣ
ವೇತಂಡ ಶುಂಡಾರದಖಂಡಸಂಸೃತಾಃ ।
ಸುರೋರುಮುಂಡಾಬ್ಜಕಷಂಡಮಂಡಿತಾ
ಸ್ತದಾ ಗಣೇಂದ್ರೈಃ ಪ್ರಬಭೌ ರಣಾವನಿಃ ॥೧೧೭॥

ಮಾತಂಗಬೃಂಹಿತರವೈರ್ಹಯಹೇಷಘೋಷೈಃ
ಶಾತಾಂಗ ಚಕ್ರಾವೃತ ನೇಮಿನಿಸ್ವನೈಃ ।
ಚಲತ್ಪತಾಕಾವಲಿಧೂನನೈಃ ಸುರಾಃ
ಭಾಂಕಾರಭೇರೀಪಟಹಾಬ್ಜನಾದೈಃ ॥೧೧೮॥

ತುರಂಗಮಾತಂಗ ಶತಾಂಗಸಂಘೈ
ರ್ಗಣಾಸಿವಿದ್ಯೋತಿತ ಶಸ್ತ್ರಜಾಲೈಃ ।
ಸಮಾವೃತಂ ತತ್ತುಮುಲಂ ವಿರೇಜಿರೇ
ಸುರೋರುಕೋಲಾಹಲಜಾತಸಂಭ್ರಮಂ ॥೧೧೯॥

---

ಬಿದ್ದಿದ್ದುವು. ಹೊಳೆಯುವ ಕತ್ತಿಗಳ ಪೆಟ್ಟಿಗೆ ಸಿಕ್ಕಿದ ಸೈನಿಕಗಣಗಳು ಅಲ್ಲಲ್ಲಿ ದುಂಬಿಗಳಂತೆ ಸಾಲುಸಾಲಾಗಿ ಸತ್ತುಬಿದ್ದಿದ್ದರು. ॥೧೧೬॥

ಗಣನಾಯಕರ ಧನುಸ್ಸಿನಿಂದ ಹೊರಬಿದ್ದ ಬಾಣಸಮೂಹವು ಆನೆಗಳ ಸೊಂಡಿಲುಗಳನ್ನೂ, ದಂತಗಳನ್ನೂ ಕತ್ತರಿಸಿ ಬೀಳಿಸಿದುದಲ್ಲದೆ, ದೇವಶ್ರೇಷ್ಠರ ರುಂಡಗಳನ್ನು ತರಿದೊಟ್ಟಿ ರಣರಂಗವನ್ನೆಲ್ಲಾ ತುಂಬಿಸಿಬಿಡುತ್ತಿದ್ದಿತು. ಈ ರೀತಿ ಆ ಯುದ್ಧವು ಭಯಂಕರವಾಗಿದ್ದಿತು. ॥೧೧೭॥

ಆನೆಗಳ ಧ್ವನಿ, ಕುದುರೆಗಳ ಕೆನೆತ, ರಥಚಕ್ರಚೀತ್ಕಾರ, ಗಾಳಿಗೆ ಚಲಿಸುವ ಪತಾಕೆಗಳ ಪಟಪಟಧ್ವನಿ, ದೇವತೆಗಳ ನಗಾರಿ, ಭೇರಿ, ತಮಟೆ ಮುಂತಾದುವುಗಳ ವಾದ್ಯಧ್ವನಿ ಇವುಗಳಿಂದ ಆ ರಣಭೂಮಿಯೆಲ್ಲಾ ಧ್ವನಿಮಯವಾಗಿದ್ದಿತು. ॥೧೧೮॥

ಕುದುರೆ, ಆನೆ, ರಥ ಇವುಗಳನ್ನು ಆಕ್ರಮಿಸಿರುವ ಗಣಗಳ ಕತ್ತಿ, ಕಠಾರಿ, ಶಸ್ತ್ರಾಸ್ತ್ರಗಳು ಇವುಗಳಿಂದ ಕೂಡಿ, ದೇವಗಣಗಳ ಕೋಲಾಹಲದ ಧ್ವನಿಯಿಂದ ತುಂಬಿ ಆ ಯುದ್ಧವು ಕೇವಲ ದೊಂಬಿಯುದ್ಧದಂತೆ ತೋರಿಬಂದಿತು. ॥೧೧೯॥

ಲಾಂಗಲಮುಸಲೈಸ್ತ್ರಿಶೂಲಹಸ್ತೈಃ
ಸುರತಾ ಸಾ ಜರತಾಮವಾಪ ಜನ್ಯೇ ।
ಗರ್ಜಂತಿ ತತ್ರೈವ ಗಣೇಂದ್ರಸಂಘಾ
ಪರ್ಜನ್ಯನಾದೇನ ಹಿ ತರ್ಜಯಂತ್ಸುರಾನ್ ॥೧೨೦॥

ತನ್ನಾದತಸ್ತತ್ರ ಗಜಾಹಯಾ ವೃಷಾ
ಉತ್ಕರ್ಷಯಂತೋ ಮುದಮಾಶುಸತ್ಕಟೈಃ ।
ನಿಮೀಲಿತಾಕ್ಷಾಶ್ಚ ಪದಾಂತಶುಂಡಾಃ
ಪ್ರಸುಸ್ರುವುಸ್ತೇ ಶಕೃದತ್ರ ಮೂತ್ರಂ ॥೧೨೧॥

ಸುರಸಾಮಾನ್ಯವಿನಾಶ ಸಂಭ್ರಮೇ
ಭ್ರಮತೀವ ಪ್ರಮುದಾ ಬಭೂವ ಸೇನಾ ।
ಕುಂತೈಃ ಶಕುಂತಾನಿವ ತೇ ಗಣೇಂದ್ರಾ
ನಿಹಂತುಮೈಚ್ಛತ್ಸುರವಾಹಿನೀಂ ತಾಂ ॥೧೨೨॥

---

ನೇಗಿಲು, ಒನಕೆ, ತ್ರಿಶೂಲ, ಮುಂತಾದುವುಗಳಿಂದ ಕೂಡಿ ದೇವತೆಗಳ ಗುಂಪು ಯುದ್ಧದಲ್ಲಿ ಭಾಗವಹಿಸಿತು. ಮತ್ತು ಯುದ್ಧಮಾಡುತ್ತಾ ಕ್ರಮಕ್ರಮವಾಗಿ ಕ್ಷೀಣಿಸುತ್ತಾ ಬಂದಿತು. ಕೊನೆಗೆ ಮೇಘಧ್ವನಿಯಿಂದ ಗರ್ಜಿಸುತ್ತಾ ಆ ದೇವತೆಗಳನ್ನು ಶಿವಗಣಗಳು ಹೆದರಿಸುತ್ತಿದ್ದರು. ॥೧೨೦॥

ಈ ಯುದ್ಧಘೋಷದಿಂದ ಆನೆ, ಕುದುರೆ, ಗೂಳಿ ಮುಂತಾದವುಗಳು ಉದ್ರೇಕಗೊಳ್ಳುತ್ತಿದ್ದುವು. ಮತ್ತೆ ಕೆಲವು ಹೆದರಿದ ಪ್ರಾಣಿಗಳು ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡು, ಮಲಮೂತ್ರಗಳನ್ನು ವಿಸರ್ಜಿಸುತ್ತಾ ನಡುಗುತ್ತಿದ್ದುವು. ॥೧೨೧॥

ವೀರಭದ್ರ ಸೈನ್ಯವಾದರೋ ದೇವತೆಗಳೆಲ್ಲರನ್ನೂ ಸದೆಬಡಿಯುವ ವಿಶೇಷ ಅಭಿಲಾಷೆಯಿಂದ ಸುತ್ತುತ್ತಿದೆಯೋ ಎಂಬಂತೆ ಗರ್ವೋದ್ರಿಕ್ತವಾಗಿ ಮುಂದುವರಿಯುತ್ತಿದ್ದಿತು. ಆ ವೀರಭದ್ರಗಣನಾಯಕರಾದರೋ ಕುಂತಾಯುಧದಿಂದ ಪಕ್ಷಿಗಳನ್ನು ಸದೆಬಡಿಯುವಂತೆ ತಮ್ಮ ಧನುರ್ಬಾಣಗಳಿಂದ ದೇವತೆಗಳನ್ನು ಸದೆಬಡಿದು ಚದುರಿಸುತ್ತಿದ್ದರು. ॥೧೨೨॥

ಅಹೀನಮನ್ಯೋಃ ಸುಮಹೋರುಮನ್ಯೋ
ರಾಜ್ಞಾವಶಾನ್ಮನ್ಯುಮಹೋ ಸೃಜನ್ ಗಣಾಃ ।
ತೇ ಶಸ್ತ್ರಲಾಘವಕರೈಃ ವರಮಂಡಲಾಸಿ
ಸಂಭ್ರಾಮಣೈಃ ಪ್ರತಿಹತೀ ಧೃತಖೇಟಸೃಷ್ಟೈಃ ॥೧೨೩॥

ಅತ್ಯಂತ ಏವ ವಿಸೃಜಂತಿ ಶರಾವರೋಧಂ
ಮೇಘಾ ಇವಾದ್ರಿಶಿಖರೇ ಶರವೃಷ್ಟಿಸೃಷ್ಟಿಂ ।
ಅಮೋಘಮೇಘಾ ಇವ ಶಸ್ತ್ರವರ್ಷೈ
ರ್ವವರ್ಷತುಸ್ತೌ ಗಣಪೋ ಸುರೋತ್ತಮಃ ॥೧೨೪॥

ಸಂಯುಧ್ಯ ಚಾಯೋಧನಭೂಮಿಮಧ್ಯಗೌ
ಪಪುಶ್ಚ ಪಾನಾನಿ ಚ ಸಾಸವಾನಿ ।
ತೌ ಚಾಜಿಮೀಯತುರುಭೌ ಹರಿವೀರಭದ್ರೌ
ರುದ್ರೈಸ್ಸುರಾರ್ಭಟಭಟೈರ್ವರಶಸ್ತ್ರಹಸ್ತೈಃ ॥೧೨೫॥

---

ಅತಿಶಯವಾದ ಕೋಪವುಳ್ಳ ವೀರಭದ್ರನ ಪ್ರೇರಣೆಯಂತೆಯೂ, ಅಪ್ಪಣೆಯಂತೆಯೂ ಸಕಲ ಗಣದೇವತೆಗಳೂ ತಮ್ಮ ತಮ್ಮ ಶಸ್ತ್ರಾಸ್ತ್ರಗಳಿಂದಲೂ, ಕತ್ತಿ ಕಠಾರಿಗಳನ್ನು ಸುತ್ತಿಸುವಿಕೆಯಿಂದಲೂ, ಶತ್ರುಗಳಾದ ದೇವತೆಗಳನ್ನು ನೋಯಿಸುತ್ತಾ ತಮ್ಮ ಗುರಾಣಿಯೇ ಮೊದಲಾದುವುಗಳಿಂದ ಅವರ ಏಟನ್ನು ತಪ್ಪಿಸಿಕೊಳ್ಳುತ್ತಾ ಮುಂದುವರಿಯುತ್ತಿದ್ದರು. ॥೧೨೩॥

ಹೀಗೆ ಯುದ್ಧ ನಡೆಯುತ್ತಿರುವಾಗ ವೀರಭದ್ರನೂ ಮತ್ತು ಮಹಾವಿಷ್ಣುವೂ ಪರಸ್ಪರವಾಗಿ ಎದುರಿಸುತ್ತಾ, ಬೆಟ್ಟದ ಮೇಲಕ್ಕೆ ನೀಲಮೇಘವು ಮಳೆಯನ್ನು ಸುರಿಸುವಂತೆ, ಸಾಂದ್ರವಾದ ಬಾಣವೃಷ್ಟಿಯನ್ನು ಸುರಿಸುತ್ತಾ ಯುದ್ಧವನ್ನು ನಡೆಸುತ್ತಿದ್ದರು. ॥೧೨೪॥

ಹೀಗೆ ಯುದ್ಧರಂಗದ ಮಧ್ಯದಲ್ಲಿ ಹರಿ ಮತ್ತು ವೀರಭದ್ರ ಇವರಿಬ್ಬರೂ ತಮ್ಮ ರಣಕೌಶಲವನ್ನು ತೋರ್ಪಡಿಸುತ್ತಾ, ಆಯಾಸವಾದ ಸಮಯದಲ್ಲಿ ಮದ್ಯಪಾನಮಾಡುತ್ತಾ ತಮ್ಮ ತಮ್ಮ ಸೈನಿಕರನ್ನು ಹುರಿದುಂಬಿಸುತ್ತಾ ಜಯಾಕಾಂಕ್ಷಿಗಳಾಗಿ ಯುದ್ಧಮಾಡುತ್ತಿದ್ದರು. ॥೧೨೫॥

ಖಡ್ಗಪ್ರಭಾ ನಿಕರತೈಲಶಿಲಾಸುಧೌತ
ಕೂಜತ್ಸು ಪುಂಖಸುಮುಖಾಃ ಪ್ರಬಭುಶ್ಚ ಲೇಖಾಃ ।
ದಕ್ಷಸ್ಸಹಸ್ರಾಕ್ಷರಥೇಂಬುಜಾಕ್ಷ
ಸಮನ್ವಿತಸ್ತತ್ರ ಶರೈಸ್ತತಕ್ಷ ॥೧೨೬॥

ಶತಂ ಸಹಸ್ರಾಯುತಕೋಟಿಸಂಖ್ಯಯಾ
ಸಪಕ್ಷಯುಕ್ತೈಃ ಸುಪೃಷತ್ಕಸಂಘೈಃ ।
ಸ ವೀರಭದ್ರೋಪಿ ಪಿನಾಕನಿಸ್ಸೃತೈಃ
ಶರೋರುಸಾರೈರ್ನಿಚಕರ್ತ ತಾಂಛರಾನ್ ॥೧೨೭॥

ದಕ್ಷಂ ಲಲಾಟೇ ತ್ರಿಭಿರಾಜಘಾನ
ಹರಿಂ ಚ ಜಂಭಾರಿಮಪಿ ಸ್ತನಾಂತರೇ ।
ಚಕರ್ಷ ಚಾಪಂ ಪ್ರವವರ್ಷ ಬಾಣಾನ್
ಹರ್ಷೋರುತರ್ಷೈಕಹೃದಾ ಸ ಭದ್ರಃ ॥೧೨೮॥

---

ಕತ್ತಿಗಳ ಹೊಳಪು, ಬಾಣಗಳ ಹಿಡಿಗಳ ಕಾಂತಿ, ವೀರರ ಸಿಂಹನಾದ ಇವುಗಳಿಂದ ಕೂಡಿದ ಆ ರಣರಂಗದಲ್ಲಿ ದೇವತೆಗಳೂ ಸಹ ಪ್ರಸನ್ನರಾಗಿ ಉತ್ಸಾಹದಿಂದಲೇ ಯುದ್ಧಮಾಡುತ್ತಿದ್ದರು. ದಕ್ಷಬ್ರಹ್ಮನಾದರೋ ಇಂದ್ರನ ರಥದಲ್ಲಿ ಕುಳಿತು ಮಹಾವಿಷ್ಣುವಿನೊಡಗೂಡಿ ತಾನೂ ಪರಾಕ್ರಮದಿಂದ ಯುದ್ಧಮಾಡುತ್ತಿದ್ದನು. ॥೧೨೬॥

ನೂರು, ಸಾವಿರ, ಹತ್ತುಸಾವಿರ, ಕೋಟಿ ಮುಂತಾದ ಸಂಖ್ಯೆಯಿಂದ ದೇವತೆಗಳ ಬಾಣಗಳು ಅಲ್ಲಲ್ಲಿ ಹಾರಾಡುತ್ತಿದ್ದುವು. ಹಾಗೆ ತನ್ನ ಎದುರಾಗಿ ಬರುವ ಬಾಣರಾಶಿಯನ್ನೆಲ್ಲಾ ವೀರಭದ್ರನು ತನ್ನ ಪಿನಾಕವೆಂಬ ಆಯುಧದಿಂದಲೂ ಅತಿಶಯವಾದ ಬಾಣಪ್ರಯೋಗದಿಂದಲೂ ಲಕ್ಷ್ಯಮಾಡದೆ ಕತ್ತರಿಸಿಹಾಕುತ್ತಿದ್ದನು. ದೇವತೆಗಳ ಬಾಣಗಳು ಅವನ ಮುಂದೆ ಏನೂ ಮಾಡಲಾರದೆ ಹೋದವು. ॥೧೨೭॥

ಕೂಡಲೇ ವೀರಭದ್ರನು ಮೂರು ಬಾಣಗಳಿಂದ ದಕ್ಷ, ಹರಿ, ಇಂದ್ರ ಈ ಮೂವರನ್ನೂ ನೋಯಿಸಿದನು. ದಕ್ಷನಿಗೆ ಹಣೆಯಲ್ಲಿಯೂ, ಹರಿ, ಇಂದ್ರರಿಗೆ ಎದೆಯಲ್ಲಿಯೂ ಆ ಬಾಣಗಳು ನೋವನ್ನುಂಟುಮಾಡಿದುವು. ಅಷ್ಟಕ್ಕೇ ಬಿಡದೆ ವೀರಭದ್ರನು ಉತ್ಸಾಹಯುಕ್ತನಾಗಿ ಮೇಲೆ ಮೇಲೆ ಬಾಣವೃಷ್ಟಿಯನ್ನು ಸುರಿಸುತ್ತಲೇ ಇದ್ದನು. ॥೧೨೮॥

ಸುರೋರುಕುಂಭ್ಯುದ್ಧೃತಕುಂಭಮಧ್ಯೇ
ಹಯೋರುಸತ್ವಾಸದಿಷು ತದ್ರಥೇಷು ।
ಕ್ಷಿಪ್ರಂ ಸಪ್ರಶರ್ಯೈಃ ಸುವತ್ಸದಂತನಾರಾಚ
ಮಾಕರ್ಣಕೃಷಂ ಮುಮೋಚ ॥೧೨೯॥

ತಸ್ಯಾರ್ಧಚಂದ್ರೇಣ ಧನುಶ್ಯರಾವರಂ
ಚಿಚ್ಛೇದ ಭದ್ರೋಪಿ ಹಿರಣ್ಯದಂಶನಂ ॥೧೩೦॥

ಕಚತ್ಕವಚಮುಪ್ಯಧೋ ನಿಪತತ್ತದಾಶುನಾರಾಚಕೈ ।
ರ್ವಿದಾರಿತಶಿರೋಧರೈಃ ಮುಕುಟಕುಂಡಲಾಲಂಕೃತೈಃ
ಸುರೇಂದ್ರಗಣದಾರಣೈಃ ಸುರಗಣೇಷು ಸಾಧಾರಣೈ
ರ್ಬಭೂವ ಧರಣೀ ತದಾ ಭಗಣಪಾತವತ್ ಸ್ವರ್ಗತಃ । ॥೧೩೧॥

ಗೋಧಾಂಗುಲಿತ್ರಸುಶಿರತ್ರತನುತ್ರಮತ್ರ
ದಿವ್ಯಾತಪತ್ರನಿಕರೈರ್ವಿಬಭಾತಿ ಸಾ ಭೂಃ ॥೧೩೨॥

---

ದೇವಗಜವಾದ ಐರಾವತದ ಕುಂಭಸ್ಥಳಕ್ಕೂ, ಉಚ್ಚೈಶ್ಯ್ರವಸ್ಸೆಂಬ ದೇವಾಶ್ವದ ಬೆನ್ನಿಗೂ, ಇಂದ್ರಾದಿಗಳ ರಥಕ್ಕೂ, ವತ್ಸದಂತ, ನಾರಾಚಗಳೆಂಬ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುತ್ತಾ, ವಿಷ್ಣುವಿಗೆ ಕರ್ಣಾಂತದ ವರೆಗೂ ಮೌರ್ವಿಯನ್ನು ಎಳೆದು ಬಾಣವನ್ನು ಪ್ರಯೋಗಿಸುತ್ತಾ ವೀರಭದ್ರನು, ಹಿರಣ್ಯಾಕ್ಷಾದಿಗಳನ್ನು ಕೊಂದ ಮಹಾವಿಷ್ಣುವನ್ನು ಬಾಣಗಳಿಂದ ಬಹಳವಾಗಿ ನೋಯಿಸುತ್ತಿದ್ದನು ॥೧೨೯-೧೩೦॥

ಈ ವೀರಭದ್ರ ಮತ್ತು ಅವನ ಗಣಗಳ ಬಾಣಗಳ ಹೊಡೆತಕ್ಕೆ ದೇವತೆಗಳ ಕವಚ ಕುಂಡಲಾದಿಗಳು ಹರಿದು ನೆಲಕ್ಕೆ ಉದುರುತ್ತಿದ್ದುವು. ಮುಕುಟಾದ್ಯಾಭರಣ ಗಳಿಂದ ಅಲಂಕೃತವಾಗಿದ್ದ ಶಿರೋಭಾಗಗಳು ಅಲ್ಲಲ್ಲಿ ಅಸಂಖ್ಯಾತವಾಗಿ ಬಿದ್ದಿದ್ದುವು. ವೀರರು ಉಪಯೋಗಿಸುತ್ತಿದ್ದ ಕತ್ತಿಕಠಾರಿಗಳು, ಗುರಾಣಿಗಳೂ, ಕೈಚೀಲಗಳೂ, ಶಿರಸ್ತ್ರಾಣಗಳೂ ಛತ್ರಿಚಾಮರಗಳೂ ಅಲ್ಲಲ್ಲಿ ಬಿದ್ದು ನಕ್ಷತ್ರಮಂಡಲವೇ ಭೂಮಿಗೆ ಕಳಚಿಬಿದ್ದಿದೆಯೋ ಎಂಬಂತೆ ತೋರಿಬರುತ್ತಿದ್ದಿತು. ॥೧೩೧-೧೩೨॥

ತುರಂಗಮಾತಂಗನರೋತ್ತಮಾಂಗಾ
ಸ್ತ್ರಸ್ತಾರ ವಿಸ್ತಾರಿತವಸ್ತ್ರವರ್ಷೈಃ ।
ತೇ ಭಿನ್ನಮರ್ಮಹೃದಯಾಶ್ಚ ವಿವರ್ಣಗೋತ್ರ
ವೈವರ್ಣ್ಯಮಾಪುರಮರಾಗಣಶಸ್ತ್ರಘಾತೈಃ ॥೧೩೩॥

ಕರ್ಮಾಣಿ ತತ್ರ ಸಸೃಜುಃ ಶರಸೃಷ್ಟಿವೃಷ್ಟಿಂ
ಮುಷ್ಟೀಭಿರ್ಯಷ್ಟಿಭಿರಥ ಪ್ರಹರಂತಿ ಜನ್ಯೇ ।
ಪತಂತಿ ಧಾವಂತಿ ಪಿಬಂತಿ ಶೋಣಿತಂ
ಮುಖಂ ಸ್ರವಂಚೋಪ್ಸುಲ್ಲಿತಿಮಾಚರಂತಿ ॥೧೩೪॥

ಕೂಜಂತಿ ಹೃಷ್ಯಂತಿ ಚ ನೂತನವ್ರಣೈಃ
ಪಾನೀಯಮಾನೀಯತ ಇತ್ಯುದಾರಂ ।
ಸಾ ವಾಜಿಯುಕ್ತಾ ಶರರಾಜಿರಾಜಾ
ಕೂಜತ್ಪತತ್ರೀ ವಿರರಾಜ ತತ್ರ ॥೧೩೫॥

---

ಆನೆ, ಕುದುರೆ, ಮಾನವರು ಇವರೇ ಮೊದಲಾದವರ ತಲೆಗಳು ವೀರಭದ್ರನ ಬಾಣಪರಂಪರೆಯಿಂದ ಭೂಮಿಯು ಮೇಲೆ ಉರುಳುತ್ತಿದ್ದುವು. ದೇವತೆಗಳ ಮರ್ಮಸ್ಥಳವೆಲ್ಲಾ ಬಾಣಾಘಾತಕ್ಕೆ ಸಿಕ್ಕಿ ಜಜ್ಜಿಹೋಗುತ್ತಿದ್ದಿತು. ಇದನ್ನೆಲ್ಲಾ ನೋಡಿ, ದೇವತೆಗಳು ಹೆದರಿ ಮಂಕಾಗುತ್ತಾ ಬಂದರು. ॥೧೩೩॥

ಶಿವಗಣಗಳು ಬಾಣವೃಷ್ಟಿಯಿಂದಲೂ, ಮುಷ್ಟಿ, ದಂಡ ಮುಂತಾದ ಆಯುಧಗಳಿಂದಲೂ, ದೇವತೆಗಳನ್ನು ಸದೆಬಡಿಯುತ್ತಿರುವಾಗ ದೇವತೆಗಳು ಬೀಳುತ್ತಲೂ, ಓಡುತ್ತಲೂ, ತಮ್ಮ ಮುಖದಿಂದ ಸುರಿಯುವ ರಕ್ತವನ್ನು ತಾವೇ ಕುಡಿಯುತ್ತಲೂ ದಿಕ್ಕಾಪಾಲಾಗಿ, ಹಾರಿ ಓಡಿಹೋಗುತ್ತಿದ್ದರು. ॥೧೩೪॥

ಹೊಸಹೊಸದಾಗಿ ಏಟುಗಳು ಬಿದ್ದು ಗಾಯವಾದಾಗಲೆಲ್ಲಾ ದೇವತೆಗಳು ಕುಡಿಯುವ ನೀರಿಗಾಗಿ ಕೂಗಿಕೊಳ್ಳುತ್ತಿದ್ದರು. ಹೀಗೆ ದೇವಸೈನ್ಯವಾದರೋ ವೀರಭದ್ರಾದಿಗಳ ಬಾಣವೃಷ್ಟಿಯ ಮಧ್ಯದಲ್ಲಿ ಸಿಕ್ಕಿ ನರಳುತ್ತಾ ಏಳುತ್ತಾ ಬೀಳುತ್ತಾ ಹಕ್ಕಿಗಳಂತೆ ಹಾರಾಡುತ್ತಿದ್ದುದು ಕಂಡುಬಂದಿತು. ॥೧೩೫॥

ಆಗ್ನೇಯ ವಾಯವ್ಯ ಸುರಾಖ್ಯಶಸ್ತ್ರೈ
ರಸ್ತ್ರೈರ್ವರ್ಷತುರುಭೌ ಹರಿವೀರಭದ್ರೌ ।
ತಸ್ಯಾತಪತ್ರಧ್ವಜವಾಜಿರಶ್ಮಿ
ತತ್ಸಾರಥಿಂ ಭದ್ರಗಣೋನ್ಮವಾಥ ॥೧೩೬॥

ರಥಂ ತಥಾಕ್ಷಂ ಚ ಸ ಕೂಬರಂ ರಣೇ
ಚಕರ್ತ ಬಾಣೈಸ್ತಿಲಶೋ ಗಣೇಶ್ವರಃ ।
ಚಕ್ರಂ ಚ ನಕ್ರಾಕೃತಿಶಕ್ರಯುಕ್ತ
ತ್ರಿವಿಕ್ರಮೋ ವಿಕ್ರಮ ತೇ ರಣಾಜಿರೇ ॥೧೩೭॥

ವಕ್ರಂ ಚ ತಚ್ಚಕ್ರಮಭೂನ್ನಿಸೃಷ್ಟಂ
ಹರೇಃ ಕರಾದ್ಭದ್ರಗಿರಿಪ್ರಭಾಂಗಕೇ ।
ಸಸ್ಮಾರ ವೇದಾಂಶ್ಚ ವಹಂ ಚ ಭೂರಥಂ
ಮಹಾರಥೇ ಶಂಕಿಲವೀರಭದ್ರಃ ॥೧೩೮॥

---

ಹೀಗಿದ್ದಾಗ ಇತ್ತ ವೀರಭದ್ರ ಮತ್ತು ವಿಷ್ಣು ಇವರಿಬ್ಬರೂ ಆಗ್ನೇಯಾಸ್ತ್ರ, ವಾಯುವ್ಯಾಸ್ತ್ರ ಇವುಗಳನ್ನು ಪರಸ್ಪರವಾಗಿ ಪ್ರಯೋಗಿಸುತ್ತಾ ಒಬ್ಬರನ್ನೊಬ್ಬರು ನೋಯಿಸುತ್ತಿದ್ದರು. ವೀರಭದ್ರನ ಗಣವಾದರೋ ವಿಷ್ಣುವಿನ ಛತ್ರಿ, ಚಾಮರ, ಕುದುರೆ, ಸಾರಥಿ ಮುಂತಾದುವುಗಳಿಗೆ ಗುರಿಯಿಟ್ಟು ಬಾಣಬಿಡುತ್ತಾ ಅವುಗಳನ್ನು ನಾಶಗೊಳಿಸುತ್ತಿದ್ದಿತು. ॥೧೩೬॥

ವೀರಭದ್ರನು ವಿಷ್ಣುವಿನ ರಥ, ರಥದ ಅಚ್ಚು, ಮೇಲ್ಭಾಗ ಇವು ಸಣ್ಣ ಸಣ್ಣ ಚೂರಾಗುವಂತೆ ಹೊಡೆದನು. ಮೊಸಳೆಯಂತೆ ಅತಿ ತೀಕ್ಷ್ಣವಾದ ಅಲುಗುಳ್ಳ ಚಕ್ರವನ್ನು ಧರಿಸಿದ್ದರೂ ತ್ರಿವಿಕ್ರಮನಾದ ಮಹಾವಿಷ್ಣುವು ಆ ರಣಾಂಗಣದಲ್ಲಿ ವೀರಭದ್ರನ ಶೌರ್ಯವನ್ನು ನೋಡಿ ಹೆದರಿಹೋದನು. ॥೧೩೭॥

ವಿಷ್ಣುಚಕ್ರವು ಎಷ್ಟೇ ಬಲಿಷ್ಠವಾಗಿದ್ದರೂ, ವೀರಭದ್ರನೆಂಬ ಗಿರಿಪ್ರಭೆಗೆ ಮಂಕಾಗಿ ವಿಷ್ಣುವಿನ ಕೈಯಿಂದ ಕೆಳಕ್ಕೆ ಜಾರಿಬಿದ್ದಿತು. ಅದನ್ನು ನೋಡಿ ವೀರಭದ್ರನು ಮತ್ತೂ ತನ್ನ ಶೌರ್ಯವನ್ನು ಹೆಚ್ಚಿಸಿಕೊಳ್ಳುವುದಕ್ಕೂ, ಸ್ಥಿರವಾದ ಬೇರೊಂದು ರಥವನ್ನು ಹೊಂದುವುದಕ್ಕೂ, ವೇದಗಳನ್ನು ಕುದುರೆಗಳಾಗುವಂತೆಯೂ ಭೂಮಿಯನ್ನು ರಥವಾಗುವಂತೆಯೂ ಸ್ಮರಿಸಿಕೊಂಡನು. ॥೧೩೮॥

ಸ್ಮಿಷುಂ ಸುಧನ್ವಾನಮುಹೋ ಪಿನಾಕಿನಂ
ನೈವಾಸ್ಯ ಭಗ್ನೋ ನರಥೋ ನ ಕಾರ್ಮುಕಂ ।
ನ ದಂಸನಂ ವಾ ನಿಜಕರ್ತ ನ್ಯೆ ಸುರೋ
ದ್ರಾಪಿಪ್ರಭಾಭಾವಿತ ಏಷ ವೀರಃ ॥೧೩೯॥

ನಿಷಂಗಿಣೋಸ್ಯ ಸ್ಮೃತಿತೋ ಕ್ಷಯೇಷುಧೀಃ
ಬಭೂವ ತಸ್ಯೇಶಕೃಪಾವಶಾದ್ರಣೇ ।
ಸುಪರ್ವಣಾಂ ಸನ್ನತಪರ್ವಭಿಶ್ಯರೈ
ರಖರ್ವಗರ್ವಂ ಪ್ರಜಹಾರ ಭರ್ಗಹೃತ್ ॥೧೪೦॥

ಕಕ್ಷೋರುಕುಕ್ಷಿಸ್ಥಿತವಹ್ನಿನಾ ಸನೋ
ದದಾಹ ತತ್ರಾಪಿ ಸುರೋರುವಾಹಿನೀಂ ।
ಗಣೋತ್ತಮಾಸ್ತೇ ಚ ಸುತೈಲಧೌತೈ
ಸ್ತ್ರಿಶೂಲಘಾತೈಃ ಪರಿಘೈರ್ಗದಾಭಿಃ ॥೧೪೧॥

---

ಶ್ರೇಷ್ಠವಾದ ಬಿಲ್ಲು ಬಾಣಗಳಿಂದಲೂ, ಪಿನಾಕಾಯುಧದಿಂದಲೂ ಕೂಡಿ, ಶಿವಾನುಗ್ರಹವನ್ನು ಸಂಪೂರ್ಣವಾಗಿ ಪಡೆದಿದ್ದ ವೀರಭದ್ರನ ರಥವಾಗಲಿ, ಬಿಲ್ಲಾಗಲಿ, ಬಾಣವಾಗಲಿ ಯಾವುದೂ ಹರಿಯ ಬಾಣದಿಂದ ಸ್ವಲ್ಪವೂ ನಾಶವಾಗ ಲಿಲ್ಲ. ॥೧೩೯॥

ವೀರಭದ್ರನ ಬತ್ತಳಿಕೆಯಲ್ಲಿ ಬಾಣಗಳು ಮುಗಿದರೂ, ಶಿವಾನುಗ್ರಹ ದಿಂದಲೂ, ಶಿವಸ್ಮರಣೆಯಿಂದಲೂ ಮತ್ತೆ ಆದರಲ್ಲಿ ಬಾಣಗಳು ತುಂಬಿಹೋಗು ತ್ತಿದ್ದುವು. ಇಂತಹ ಈಶ್ವರದತ್ತವಾದ ಬಾಣಪರಂಪರೆಗಳಿಂದ ದೇವತೆಗಳ ಗರ್ವ ವೆಲ್ಲಾ ಕ್ಷಣಮಾತ್ರದಲ್ಲಿ ಅಡಗಿಹೋಗುತ್ತಿದ್ದಿತು. ಅಷ್ಟು ಮಹಿಮೆಯು ದೇವತೆಗಳಿಗೆ ವೀರಭದ್ರನಲ್ಲಿ ಕಂಡುಬಂದಿತು. ॥೧೪೦॥

ವೀರಭದ್ರನ ಗಣಗಳು, ಎಣ್ಣೆಯಂತೆ ಹೊಳೆಯುವ ತಮ್ಮ ತ್ರಿಶೂಲಗಳಿಂ ದಲೂ, ಪರಿಘ, ಗದಾ ಮುಂತಾದ ಆಯುಧಗಳಿಂದಲೂ, ದೇವಸೈನ್ಯವನ್ನು ಸದೆಬಡಿ ಯುತ್ತಾ, ದೇವತೆಗಳ ಹೊಟ್ಟೆ, ಭುಜ ಮುಂತಾದುವುಗಳೆಲ್ಲಾ ಸುಡುವಂತೆ ಅವರನ್ನು ದಹಿಸುತ್ತಲೇ ಮುಂದುವರಿದರು. ॥೧೪೧॥

ತಿರ್ಯಕ್ಸಮುಸ್ತಿಷ್ಕಸುಶುಷ್ಕಲೋಹಿತೈ
ರ್ವಸಾವಸೂಂ ತತ್ರ ಹತಾನ್ ಪ್ರಚಕ್ರುಃ ।
ತೇ ವಿಶ್ವದೇವಾಂಶ್ಚ ರಥೇಷು ವಾಜೀನ್
ನಿಜಘ್ನಿರೇ ತತ್ರ ಗದಾಭಿಪಾತೈಃ ॥೧೪೨॥

ವಾಯೋರ್ವಿನಿರ್ಯಾಪಿತರಾಯುಷೋಂತಾನ್
ಪ್ರಚಕ್ರುರುಚ್ಚಕ್ರಸಹಸ್ರಧಾರೈಃ ।
ತರಣಿಂ ವರುಣಂ ತಥೈವ ವಹ್ನಿಂ
ಯಮಮಪ್ಯಾನಮಯಂಛರೋರುವರ್ಷೈಃ ॥೧೪೩॥

ರಥಸಾರಥಿವಾಜಿಯೋಕ್ತ್ರಛತ್ರಾ
ಣ್ಯುಪಜಘ್ನುರ್ಧನುಷೋ ಗಣಾಜ್ಞ್ಯಾಃ ।
ನಿಋಋತಿಂ ಮರುತಂ ಸುರಾವಯುಕ್ತಂ
ಮರುತೋಪಿ ಸುಧನ್ವನೋಸ್ತಧನ್ವಃ ॥೧೪೪॥

---

ರಥಕ್ಕೆ ಕಟ್ಟಿದ್ದ ಕುದುರೆಗಳನ್ನೂ, ವಿಶ್ವೆದೇವತೆಗಳನ್ನೂ, ಶಿವಗಣಗಳು, ಹೊಟ್ಟೆಯೊಳಗಿನಿಂದ ಕರುಳು ಮಾಂಸಾದಿಗಳು ಹೊರಬೀಳುವಂತೆ ರಕ್ತಪ್ರಚುರಗಳನ್ನಾಗಿಮಾಡಿ ಕೊಂದುಹಾಕುತ್ತಿದ್ದರು. ॥೧೪೨॥

ತಮ್ಮ ಕೈಗಳಲ್ಲಿದ್ದ ಸಹಸ್ರ ಅಲುಗುಗಳಿಂದ ಕೂಡಿದ ಚಕ್ರಧಾರೆಗಳಿಂದ ಶತ್ರುಗಳನ್ನು ಧ್ವಂಸಮಾಡುತ್ತಾ, ಅವರೆಲ್ಲರೂ ಪ್ರಾಣವಾಯು ವಿರಹಿತರಾಗುವಂತೆ ಮಾಡಿಬಿಟ್ಟರು. ಅದೇ ರೀತಿ ಸೂರ್ಯ, ಅಗ್ನಿ, ವರುಣ, ಯಮ ಮುಂತಾದವರನ್ನೂ ಶರವರ್ಷಗಳಿಂದ ಬಹಳವಾಗಿ ಗಾಯಗೊಳಿಸಹತ್ತಿದರು. ॥೧೪೩॥

ಗಣಪತ್ರೇಷ್ಠರಾದ ವೀರಭದ್ರಸೈನಿಕರು, ದೇವತೆಗಳು, ರಥ, ಸಾರಥಿ, ಕುದುರೆ, ಕಡಿವಾಣ, ಛತ್ರಿ, ಬಿಲ್ಲು ಮುಂತಾದುವುಗಳನ್ನೆಲ್ಲಾ ನಾಶಗೊಳಿಸಿ, ಅಲ್ಲಿಗೆ ಬಂದ ನಿಋಋತಿ, ಮರುತ್ತು ಮುಂತಾದವರ ಕೈಯಲ್ಲಿದ್ದ ಧನುರ್ಬಾಣಗಳು ಕೆಳಗೆ ಬಿದ್ದುಹೋಗುವಂತೆ ಏರ್ಪಾಡುಮಾಡಿದರು. ॥೧೪೪॥

ಮಥಿತಾಕ್ಷಾಃ ಪ್ರಮಥೈಶ್ಚ ಶಸ್ತ್ರಜಾಲೈ
ರ್ನಿರಗಚ್ಛನ್ನಸುಭಿರ್ನಿದಾಹವನಾನಾಃ ।
ಗಹನಂ ವಿವಿಶುಃ ಸುರಾಸ್ತ್ವನಾಯಾ
ಸ್ವಗಣೈರುಜ್ಝಿತವಾಹವಸ್ತ್ರವೇಷಾಃ ॥೧೪೫॥

ಪರಿಧಾವಂತಿ ರಣೇರಿಣೇ ತೇ
ಪ್ರಪತಂತುಂ ದ್ರುತವಿದ್ರುತಾ ಗಣೇಂದ್ರೈಃ ।
ಭಗ್ನಾಕ್ಷಚಕ್ರಧ್ವಜಕೂಬರೈರಥೈ
ರ್ಹಯೋರುಮಾತಂಗಶವೈರ್ವಿಭಾತಿ ಭೂಃ ॥೧೪೬॥

ವಿನಿಷ್ಕೃತಾಂತ್ರೋರುವಸಾಸೃಗಶ್ರ
ದುರ್ಗಂಧಬಂಧಾನಿಲಸಂಘುವತ್ರ ।
ಊಹುಃ ಕಶಾಘಾತವಶಾಂಕುಶಾಗ್ರ
ಸಂಚೋದವನ್ಯೈರಶ್ವಗಜಾರಥಾಶ್ಚ ॥೧೪೭॥

---

ಹೀಗೆ ವೀರಭದ್ರಗಣಗಳ ಬಾಣತಾಡನಗಳಿಂದ ಖಿನ್ನರಾದ ಸಕಲ ದೇವತೆಗಳೂ ತಮ್ಮ ವಾಹನ, ವೇಷಭೂಷಾದಿಗಳನ್ನು ಕಳೆದುಕೊಂಡು, ಕ್ಷೀಣಬಲರಾಗಿ ಪ್ರಾಣರಕ್ಷಣೆಯ ಆಸೆಯಿಂದ ದಿಕ್ಕಾಪಾಲಾಗಿ ಚದುರಿಹೋದರು. ॥೧೪೫॥

ಹೀಗೆ ದೇವತೆಗಳು ರಣಾಂಗಣದಲ್ಲಿ ಹೆದರಿ ಓಡುತ್ತಿರುವಾಗ ಅಲ್ಲಿ ಮುರಿದ ರಥ ಚಕ್ರಗಳು, ಧ್ವಜಪತಾಕೆಗಳು, ಸತ್ತುಬಿದ್ದ ಕುದುರೆ, ಆನೆಗಳು ಇವುಗಳಿಂದ ರಣಭೂಮಿಯೆಲ್ಲಾ ಆಕ್ರಾಂತವಾಗಿದ್ದಿತು. ॥೧೪೬॥

ಪ್ರಾಣಿಗಳ ದೇಹದಿಂದ ಹೊರಬಿದ್ದ ಮಾಂಸ, ಕೀವು, ರಕ್ತ ಇವುಗಳು ಒಟ್ಟುಗೂಡಿ ದುರ್ಗಂಧವನ್ನು ಎರಚುತ್ತಿದ್ದವು. ಚಾವಟಿಯ ಏಟಿನಿಂದಲೂ, ಅಂಕುಶಗಳ ತಿವಿತದಿಂದಲೂ, ನೊಂದ ಕುದುರೆಗಳೂ ಮತ್ತು ಆನೆಗಳೂ ರಥಗಳನ್ನು ಶಕ್ತಿಯಿರುವಷ್ಟು ದೂರ ಎಳೆದುಕೊಂಡು ಹೋಗುತ್ತಿದ್ದವು. ॥೧೪೭॥

ಯೋಧಾಂತ್ಸುಸನ್ನದ್ಧ ಮಹೋರುಯುದ್ಧೇ
ಮಾಂಸಾದ್ಯಸೃಕ್ಪೂಯ ವಸಾದಿ ಪಂಕೇ ।
ಸುರೇಂದ್ರಸಂಘಾಶ್ಚ ಗಣೇಂದ್ರವೃಂದಂ
ನಿಪಾಟನಾರಾಚಶರೈರ್ವಿಪಾಟಯನ್ ॥೧೪೮॥

ಭಲ್ಲ್ಯೈಃ ಸುಪುಲ್ಲೈರಿವ ಕಿಂಶುಕಾಭೈ
ರ್ದೇಹೇ ತತಕ್ಷುಕ್ಷತಜಾರ್ದ್ರಗಾತ್ರಾಃ ।
ಪ್ರಾಸಾಸಿಹಸ್ತಂ ಮುಸಲೈರ್ವಿಶಸ್ತಂ
ಧ್ವಸ್ತಂ ಚಕಾರಾಶು ಗಣೇಂದ್ರವಾಹಿನೀಂ ॥೧೪೯॥

ಗದಾಭಿಭಗ್ನೋರು ಚ ಲಗ್ನಮಧ್ಯಂ
ನಗ್ನಂ ಪ್ರದುದ್ರಾವ ಸುಮಾನಹರ್ಷಂ ।
ವಿಶಾಲವಕ್ಷಃ ಸುಕವಾಟಪಾಟನೈಃ
ಸ್ಕಂಧೇ ಚ ಬಾಹ್ವೋಃಗಲಕಚ್ಛಮೂಲೇ ॥೧೫೦॥

---

ದೇವತೆಗಳೂ ಸಹ ಮಾಂಸ, ರಕ್ತ, ವಸಾದಿಮಯಗಳಾದ ರಣರಂಗದಲ್ಲಿ ನಿಂತು ತಮ್ಮನ್ನು ಎದುರಿಸಿ ಬಿಲ್ಲುಬಾಣಗಳಿಂದ ತಮ್ಮನ್ನು ಹಿಂಸಿಸುತ್ತಿದ್ದ ಶಿವಗಣಗಳನ್ನು ಲಕ್ಷ್ಯಮಾಡದೆ ಮೇಲೆ ಮೇಲೆ ಹೊಡೆದು ಹಿಂಸೆಗೊಳಿಸುತ್ತಿದ್ದರು. ॥೧೪೮॥

ಅರಳಿದ ಮುತ್ತುಗದ ಹೂವಿನಂತೆ ರಕ್ತಮಯವಾಗಿರುವ ಭಲ್ಲಾಯುಧಗಳಿಂದ ಶತ್ರುಗಳ ದೇಹವನ್ನು ತುಂಡರಿಸಿ, ಆದರ ಮೇಲೆ ಕುಂತ, ಪ್ರಾಸ, ಕತ್ತಿ ಇವುಗಳಿಂದ ಹೊಡೆದು ಎದುರಿಸಿ ಬರುವ ದೇವಗಣಗಳನ್ನೂ ಈ ವೀರಭದ್ರಸೈನ್ಯವು ಸಂಪೂರ್ಣವಾಗಿ ನಾಶಗೊಳಿಸುತ್ತಿದ್ದಿತು. ॥೧೪೯॥

ಗದೆಯು ಏಟುಗಳಿಂದ ಕೆಲವರ ಸೊಂಟವೇ ಮುರಿದುಹೋಗುತ್ತಿದ್ದಿತು. ವಿಶಾಲವಾದ ಎದೆಯೇ ನಾಶವಾಯಿತು. ಬಾಗಿಲನ್ನು ಸೀಳುವಂತಹ ಆಯುಧಗಳಿಂದ ಕೆಲವರ ಭುಜಗಳು, ಕತ್ತು, ಬೆನ್ನು ಇವೆಲ್ಲವೂ ಮುರಿದು ನಾಶವಾಗುತ್ತಿದ್ದವು. ಈ ಸ್ಥಿತಿಯಲ್ಲಿ ಯುದ್ಧವು ನಾನಾರೀತಿ ಭಯಂಕರವಾಗಿ ಮುಂದುವರಿಯುತ್ತಿದ್ದಿತು. ॥೧೫೦॥

ಗಣೇಶ್ವರಾಶ್ಚಾಪವರಾಸಿಪಾಣಯೋ
ಯಜ್ಞೋಪವೀತಾಕೃತಿಚಿಚ್ಛಿದುಸ್ಸುರಾನ್ ।
ಹಸಂತಿ ಕೇಚಿತ್ಪ್ರರುದಂತಿ ಕೇಚಿತ್
ನೃತ್ಯಂತಿ ತತ್ರೈವ ಕಬಂಧಮುಂಡಾಃ ॥೧೩೧॥

ಪ್ರಾಸಾಸಿಹಸ್ತಾ! ವಿವೃತಾಂತ್ರಬಂಧಾಃ
ಸಂಬಂಧಮೀಯುಃ ಧರಣೀತಲೇಷು ॥೧೩೨॥

ಪತತ್ಸಮದಕುಂಜರೈರ್ವರಹಯೋರುದೇಹಾನ್ನೈಃ
ಸುಕಂಪಿತರಸಾತಲಂ ಸ್ಖಲದಪಾರಯೋಧೈರ್ವೃತಂ
ಸುಗರ್ಜಿತಸುನಿರ್ಜರಂ ಗಣಕೃತೋರುಸಂತರ್ಜನಂ ।
ಬಭೂವ ಸ ರಣಾಜಿರಂ ಸುರಗಣಾಘರಾಗಾದರಂ ॥೧೩೩॥

ಜನ್ಯೇ ತದಾ ತತ್ರ ಸುಶೋಣಿತಾಪಗಾಃ
ಪ್ರಸುಸ್ರುವುಶ್ಛತ್ರಕದಂಬಫೇನಾಃ ।
ಸಚಾಮರಾಖಂಡಿತಫೇನಬುದ್ಬುದಾ
ನರಾಂತ್ರಮುಸ್ತಿಷ್ಕಜಕೂರ್ಮಮೀನಾಃ ॥೧೩೪॥

---

ಬಿಲ್ಲು, ಬಾಣ, ಕತ್ತಿ ಇವುಗಳನ್ನು ಹಿಡಿದ ವೀರಭದ್ರಗಣಗಳು ದೇವತೆಗಳನ್ನು ಯಜ್ಞೋಪವೀತದ ಆಕಾರದಿಂದ ಕತ್ತರಿಸಿ ಬಿಸುಟರು. ಅದನ್ನು ನೋಡಿ ಶಿವಗಣಗಳು ನಗುತ್ತಿದ್ದರು. ದೇವತೆಗಳಾದರೋ ಅಳುತ್ತಿದ್ದರು. ತಲೆಯಿಲ್ಲದ ಮುಂಡಗಳು ಸಂಸ್ಕಾರವಶದಿಂದ ಸ್ವಲ್ಪಹೊತ್ತು ಕುಣಿದಾಡುತ್ತಿದ್ದುವು. ॥೧೩೧॥

ಕೆಲವರು ತಮ್ಮ ಕೈಯ್ಯಲ್ಲಿ ಪ್ರಾಸ, ಕತ್ತಿ ಇವುಗಳನ್ನು ಹಿಡಿದುಕೊಂಡೇ ತಮ್ಮ ಕರುಳುಗಳು ಶತ್ರುಗಳ ಬಾಣಾಘಾತದಿಂದ ಹೊರಬಂದುದರಿಂದ ನೆಲದ ಮೇಲೆ ಬಿದ್ದಿರುವರು. ಹೀಗೆ ಆನೆ, ಕುದುರೆ, ಸೈನಿಕರು ಇವರೇ ಮೊದಲಾದವರು ರಭಸದಿಂದ ನೆಲದ ಮೇಲೆ ಉರುಳುತ್ತಾ ಪಾತಾಳಲೋಕವನ್ನೇ ನಡುಗಿಸುತ್ತಿದ್ದುವು. ॥೧೩೨॥

ರಣಾಂಗಣದಲ್ಲಿ ದೇವತೆಗಳ ವೀರಗರ್ಜನೆಯೂ, ವೀರಭದ್ರ ಸೈನಿಕರ ಸಿಂಹನಾದವೂ ಒಟ್ಟುಗೂಡಿ ಸರ್ವವೂ ಧ್ವನಿಮಯವಾಗಿದ್ದಿತು. ಅಲ್ಲಿ ರಕ್ತದ ನದಿಗಳು ಹರಿದುವು. ಅದರಲ್ಲಿ ಬಿಳಿ ಛತ್ರಿಗಳೆಂಬ ನೊರೆಯೂ, ಕತ್ತರಿಸಿಹಾಕಲ್ಪಟ್ಟ ಚಾಮರ

ನ್ಮೃತದ್ವೀಪಿಸುದ್ವೀಪಕಕೇಶಶೈವಲಾ
ನರಾಂತ್ರಮಾಲಾವಿಲಸತ್ತರಂಗಾಃ ।
ತಾ ದುಸ್ತರಾ ಕಾಪುರುಷೈರಕಾತರೈ
ರ್ಧೀರೇಷು ಸಂಹರ್ಷಕರಾಃ ಪ್ಲವಂತಿ ॥೧೫೫॥

ಸಮಾಲಿಂಗ್ಯ ಕಾಂತಾಮಿವ ಕ್ಷ್ಮಾತಲಂ ತೇ
ಗಣೇಂದ್ರಾಃ ಸುರೇಂದ್ರಾಸ್ರವದ್ರಕ್ತಗಂಧಾಃ ।
ದಿವಿ ಸ್ವರ್ಗಲಿಪ್ಸಾರ್ಥಯಾ ಪ್ರಾರ್ಥಯಂತಃ
ಸುಶಾಸ್ತ್ರೋರುಗಾಢೈಕಮೂಢಾ ಧರಣ್ಯಾಂ ॥೧೫೬॥

ವೇತಾಲಕಂಕಾಲಬಲಾದಿಹರ್ಷದಾ
ಗೃಧ್ರೇಷು ಕಾಕಶ್ವಗಣೇಶಿವಾಸು ।

---

ಗಳೆಂಬ ಗುಳ್ಳೆಗಳೂ, ಪ್ರಾಣಿಗಳ ಕರುಳು, ಮಾಂಸಗಳೆಂಬ ಆಮೆ ಮೀನುಗಳೂ ಗೋಚರವಾದುವು. ॥೧೫೩-೧೫೪॥

ಸತ್ತ ಆನೆಗಳ ಶರೀರವೇ ಅಲ್ಲಲ್ಲಿ ಒಂದೊಂದು ನಡುಗಡ್ಡೆಯೆಂಬ ದ್ವೀಪವಾಯಿತು. ಮೃತರ ತಲೆಕೂದಲುಗಳೇ ಪಾಚಿಗಳಂತೆ ಕಂಡುಬಂದುವು. ಮಾನವರ ಕರುಳುಗಳು ಅಲೆಯುಲೆಯಂತೆ ಕಾಣಲಾರಂಭಿಸಿದುವು. ಇಂತಹ ರಕ್ತನದಿಯು ದುಷ್ಟರಿಗೆ ದಾಟಲಸಾಧ್ಯವಾಗಿ ತೋರಿಬಂದಿತು. ರಣಧೀರರಿಗಾದರೋ ಅದು ಅತ್ಯಂತ ಹರ್ಷದಾಯಕವಾಗಿ ತೋರಿಬಂದು ತಮ್ಮ ಪರಾಕ್ರಮಕ್ಕೆ ತಾವೇ ಆಶ್ಚರ್ಯಪಡುತ್ತಿದ್ದರು. ॥೧೫೫॥

ಯುದ್ಧದಲ್ಲಿ ಮಡಿದ ಗಣನಾಯಕರು, ಸುರಾಧಿಪತಿಗಳು, ಮಾನವ ವರ್ಗದವರು ತಮ್ಮ ರಕ್ತವೆಂಬುದನ್ನೇ ಒಂದು ಗಂಧದಂತೆ ದೇಹಕ್ಕೆ ಬಳಿದುಕೊಂಡು ತಮ್ಮ ಹೆಂಡತಿಯರನ್ನು ಆಲಿಂಗಿಸಿಕೊಂಡಂತೆ ವಿಗತಪ್ರಾಣರಾಗಿ ಭೂಮಿಯ ಮೇಲೆ ಬಿದ್ದಿದ್ದರು. ಅದನ್ನು ನೋಡಿದರೆ ಈ ಮೃತರಾದವರೆಲ್ಲರೂ ವೇದಶಾಸ್ತ್ರಾದಿಗಳನ್ನು ಓದಿ ಜ್ಞಾನಮಾರ್ಗದಿಂದ ಮೋಕ್ಷಫಲ ಪಡೆಯಲಾರದೆ, ಈರೀತಿ ಯುದ್ಧದಲ್ಲಿ ಮೃತರಾಗಿ ವೀರಸ್ವರ್ಗವನ್ನು ಅವಲಂಬಿಸುತ್ತಿರುವರೋ ಎಂಬಂತೆ ಕಾಣುತ್ತಿದ್ದಿತು. ॥೧೫೬॥

ಈ ಹೆಣಗಳ ರಾಶಿಯನ್ನು ನೋಡಿ ಭೂತಬೇತಾಳಗಳಿಗೆ ಬಹಳ ಆನಂದವಾಯಿತು. ಹದ್ದು, ಕಾಗೆ, ನಾಯಿ, ನರಿ ಮುಂತಾದುವುಗಳು ತಮ್ಮ ಆಹಾರಾರ್ಥ

ಭಷಂತಿ ತತ್ರೈವ ಶುನಾಂ ಸಮೂಹೋ
ಗೃಧ್ರಭ್ರಮ್ಯೈಸ್ತತ್ಪಿಶುನಾಲಿವತ್ತದಾ ॥೧೩೭॥

ಭ್ರಾಮ್ಯದ್ಗೃಧ್ರಗಣೋರುಪಕ್ಷತಿಹತಾಃ
ಸಂವೀಜಿತಾಸ್ತೇ ಶಿವಾಃ ।
ಕಂಕೈಶ್ಚ ಶಂಕು ಪ್ರಭವಕ್ರತೋತ್ಕೃತ್ತೈ
ರ್ಗಜೋರುದೇಹೇಷು ವಸಂತ್ಯಧೀರಾಃ ॥೧೩೮॥

ಗಜಾಶ್ವರಥಪಂಕ್ತಯೋ ನಿಹತಸಾದಿಸಂಸಾರಥಿ ।
ಪ್ರತೋತವರಹಸ್ತತೋ ಮೃತನಿರಸ್ತಶಸ್ತ್ರಾಂಕುಶೈಃ ॥೧೩೯॥

ಪ್ರಕೀರ್ಣಮಣಿಭಾಂಡಕೈರ್ವಿವೃತನೇತ್ರಜಿಹ್ವಾಸ್ಯಕೈಃ
ಕುಥಾಂಕುಶಪಥಾಹತಿಪ್ರಬಲಮಾಂಸಪಂಕೇ ।
ಸ್ಖಲದ್ಗಣೋರುಶರವರ್ಷಣೈರ್ಮೃತಿಮವಾಪುರೇವಂಸುರಾಃ॥೧೪೦॥

---

ವಾಗಿ ಸುತ್ತುವರಿದು ಬಂದುವು. ನಾಯಿಗಳು ಹೆಚ್ಚಾದ ದುರಾಸೆಯಿಂದ ಕಣ್ಣಿಗೆ ಕಂಡವರನ್ನೆಲ್ಲಾ ಹದ್ದೆಂದು ಭಾವಿಸಿ ಅವುಗಳನ್ನು ಓಡಿಸಲೋಸುಗ ಜೋರಾಗಿ ಕಿರಿಚುತ್ತಿದ್ದುವು. ॥೧೩೭॥

ಹದ್ದುಗಳು ತಮ್ಮ ರೆಕ್ಕೆಗಳನ್ನು ಬಲವಾಗಿ ಬೀಸುತ್ತಾ ನರಿಗಳನ್ನು ಓಡಿಸುತ್ತಿದ್ದುವು. ಗುಳ್ಳೆನರಿಗಳು ಮತ್ತು ಇತರ ದುರ್ಬಲ ಪಕ್ಷಿಗಳು ಸತ್ತ ಆನೆಗಳ ದೇಹದ ಒಳಭಾಗದಲ್ಲಿ ಅಡಗಿ ಯಥೇಚ್ಛವಾಗಿ ಮಾಂಸವನ್ನು ಭಕ್ಷಿಸುತ್ತಿದ್ದುವು. ॥೧೩೮॥

ಅಲ್ಲಿ ದೇವತೆಗಳು ಆನೆಗಳಿಂದ ಕುದುರೆಗಳಿಂದ ರಥಗಳಿಂದ ಉರುಳುರುಳಿ ಕೆಳಗೆ ಬೀಳುತ್ತಿದ್ದರು. ಎಷ್ಟೋ ಕುದುರೆಗಳು ಸವಾರನ ಸಮೇತ ಚಾವಟಿಯೊಡಗೂಡಿ ಶಸ್ತ್ರಾಸ್ತ್ರಗಳ ಏಟಿಗೆ ಸಿಕ್ಕಿ ಕೆಳಗೆ ಉರುಳಿದ್ದುವು. ಇನ್ನು ರಥಿಕರಾದರೋ ತಮ್ಮ ಕಿರೀಟದಲ್ಲಿರುವ ರತ್ನಗಳು ದಿಕ್ಕಾಪಾಲಾಗಿ ಚದುರಿಹೋಗುವಷ್ಟು ಏಟುಗಳನ್ನು ತಿಂದು ನೆಲದಲ್ಲಿ ಬಿದ್ದು ಸತ್ತಿದ್ದರು. ಆನೆಗಳು ಅಂಕುಶಗಳ ಏಟನ್ನೂ ಲಕ್ಷಿಸದೆ, ತಮ್ಮ ಮೇಲಿನ ಆಸನಗಳನ್ನು ಕಿತ್ತೆಸೆದು ಮಾಂಸಕೂಪದಲ್ಲಿ ಜಾರಿಬಿದ್ದು ಏಳಲಾರದೆ ಅಲ್ಲಿಯೇ ನರಳುತ್ತಿದ್ದುವು. ಈರೀತಿ ದೇವಸೈನ್ಯವು ವಿಶೇಷ ಅಪಘಾತಕ್ಕೆ ಒಳಗಾಗಿ ಹೆಚ್ಚು ಕಷ್ಟನಷ್ಟಗಳನ್ನು ಅನುಭವಿಸುತ್ತಿದ್ದಿತು. ॥೧೩೯-೧೪೦॥

ತ್ರಿದಶಾ ವಿದಶಾಮವಾಪುರೇವಂ
ಗಣಶಸ್ತ್ರೈರ್ವಿಹತಾಶ್ಚ ಕಾಂದಿಶೀಕಾಃ ।
ಸಭಯಾ ಅಭಯಂ ಪ್ರಯಾಚಮಾನಾ
ತೃಣವಕ್ತ್ರಾ ಶರಭಾರನುನ್ನಖಿನ್ನಾಃ ॥೧೬೧॥

ಗಜೋನಲದವಕ್ರುಧಾನಿಲ ಇವೇಹ ಮೇಘಾವಲಿಂ
ದದಾಹ ವಡವೋ ಯಥಾ ಜಲನಿಧೇಸ್ತರಂಗಾವಲಿಂ ।
ತಥೇಹ ಗಣಪುಂಗವಃ ಶರವರೋರುಧಾರಾದಿಭಿಃ
ಸುರಾಸುರಗಣಂ ವ್ಯಧಾದ್ಭಗಣನಾಥಚೂಡಾಜ್ಞಯಾ ॥೧೬೨॥

ರಟಿತ್ಕರಟಿಕೋಜನೈರ್ಹಯವರೋರುಪಾತಸ್ವನೈ
ರ್ಬಭೂವ ಧರಣೀ ತದಾ ಸಕರುಣಾರುಣಾಶೋಣಿತೈಃ ।
ಪ್ರಭಗ್ನರಥಚಕ್ರಕಪ್ರಶಿಥಿಲಾಕ್ಷನೇಮಿಸ್ವನೈಃ
ರರಾಜ ರಣಭೂಸ್ತದಾ ಗಣಗಣೋರುಬಾಣೈರ್ಹತಾಃ ॥೧೬೩॥

---

ಹೀಗೆ ವೀರಭದ್ರಗಣಗಳ ಶಸ್ತ್ರಾಸ್ತ್ರಗಳಿಂದ ಹೊಡೆಯಲ್ಪಟ್ಟ ದೇವತೆಗಳು ದಿಕ್ಕುಪಾಲಾಗಿ ಹೆದರಿ ಓಡಿಹೋಗುತ್ತಾ, ಭಯಾನ್ವಿತರಾಗಿ ಅಭಯವನ್ನು ಯಾಚಿಸುತ್ತಾ ಬಾಯಲ್ಲಿ ಹುಲ್ಲುಕಡ್ಡಿಯನ್ನು ಕಚ್ಚಿಕೊಂಡವರಾಗಿ ತಾವು ಯುದ್ಧದಲ್ಲಿ ಅಸಮರ್ಥರೆಂಬ ಭಾವವನ್ನು ತೋರ್ಪಡಿಸಿಕೊಂಡರು. ॥೧೬೧॥

ಕಾಡುಕಿಚ್ಚಿನಿಂದ ಕೆರಳಿದ ಆನೆಯು ಕಾಡನ್ನು ತುಳಿಯುವಂತೆ, ಬಿರುಗಾಳಿಯು ಮೇಘರಾಶಿಯನ್ನು ಕೆದರುವಂತೆ, ಬಡಬಾಗ್ನಿಯು ಸಮುದ್ರದ ಅಲೆಗಳನ್ನು ಪಾನಮಾಡುವಂತೆ, ವೀರಭದ್ರನು ಚಂದ್ರಶೇಖರನಾದ ಶಂಕರನ ಅಪ್ಪಣೆಯಂತೆ ದೇವರಾಕ್ಷಸರ ಸೈನ್ಯವನ್ನೆಲ್ಲಾ ಧ್ವಂಸಮಾಡತೊಡಗಿದನು. ॥೧೬೨॥

ಹೆಣ್ಣಾನೆಗಳ ಘೀಂಕಾರ, ದಿವ್ಯಾಶ್ವಗಳು ಭೂಮಿಗೆ ಬೀಳುವ ಭಯಂಕರ ಶಬ್ದ, ಹಾಗೆಯೇ ಗಾಯಗೊಂಡವರ ಆರ್ತನಾದ, ರಕ್ತಪ್ರವಾಹ, ಮುರಿದ ರಥಗಳ ಚಕ್ರದ ಅಚ್ಚಿನಿಂದ ಉಂಟಾಗುವ ಕಿರುಲಧ್ವನಿ, ಬಾಣಸಹಿತವಾಗಿ ಬಿದ್ದಿರುವ ಬೇರೆ ಬೇರೆ ದೇಹಗಳು, ಇವುಗಳಿಂದ ಆ ರಣಭೂಮಿಯು ವ್ಯಾಪ್ತವಾಗಿ ಭಯಂಕರವಾಗಿ ಕಾಣತೊಡಗಿತು. ॥೧೬೩॥

ಧ್ವಸ್ತಾತ್ಮಶ್ವಸತ್ಸಾರಥಿಸತ್ಪತಾಕಾ
ಸುಚ್ಛತ್ರಹೀನಾನ್ನಿಪಪಾತ ಮಾಧವಃ ।
ಸ್ವಕಾಂ ಸ್ತ್ರಿಯಂ ತಾಂ ಭುವಮಾಲಿಲಿಂಗ
ನ್ನಭ್ಯುತ್ಥಿತೋ ದಕ್ಷಯುತಃ ಸ ವಾಸವಃ ॥೧೬೪॥

ವಿಹಂಗಮಂ ತಂ ಖಗಪಂ ಪುರಸ್ಸ್ಥಿತಂ
ವಿಷ್ಣುಃ ಸಮಾರುಹ್ಯ ಚಕಾರ ಲಾಘವಂ ।
ಗೋಮಾಯುಮಾಯೇವ ಸಮಾಯುಯಾಸ್ತ್ರಾ
ಣ್ಯವಾಸೃಜತ್ತತ್ರ ಗಣೇಂದ್ರದೇಹೇ ॥೧೬೫॥

ವಿಧೌ ಮುಧೈರ್ವಹಸ (?) ವಿಷ್ಣುರಾಹವೇ
ವ್ಯಧಾತ್ಸ್ವಕಾಸ್ತ್ರೈರ್ವಿನಿವಾರ್ಯ ತದ್ಗಣಾನ್ ।
ಪ್ರಾಧ್ಮಾಪಯಚ್ಛಂಖಮುವೀನದೀಯೋ
ಧೈರ್ಯೈಕಧುರ್ಯಃ ಸಗಣೇಶಿತುಃ ಪುರಃ ॥೧೬೬॥

---

ಈ ಮಧ್ಯೆ ವಿಷ್ಣುವು ತನ್ನ ಸಾರಥಿ, ಅಶ್ವ, ಧ್ವಜ, ಛತ್ರಿ ಇವುಗಳನ್ನು ಕಳೆದುಕೊಂಡು, ತನ್ನ ಪತ್ನಿಯಾದ ಭೂದೇವಿಯನ್ನು ಆಲಿಂಗಿಸಿಕೊಂಡನೋ ಎಂಬಂತೆ ಭೂಮಿಯ ಮೇಲೆ ಬಿದ್ದನು. ಕೂಡಲೇ ಇಂದ್ರ, ದಕ್ಷ ಇವರ ಸಹಾಯದಿಂದ ಚೇತರಿಸಿಕೊಂಡೆದ್ದು ಮತ್ತೆ ಯುದ್ಧಕ್ಕೆ ನಿಂತನು. ॥೧೬೪॥

ಮತ್ತು ಎದುರಿಗೆ ಬಂದು ನಿಂತ ಗರುಡನ ಮೇಲೆ ಕುಳಿತುಕೊಂಡು, ನರಿಯು ತಂತ್ರಮಾಡುವಂತೆ, ವೈಷ್ಣವೀಮಾಯೆಯನ್ನು ಬಿಟ್ಟು ವೀರಭದ್ರನ ಮೇಲೆ ತನ್ನ ಕೈಚಳಕವನ್ನು ಪ್ರಯೋಗಿಸಿ ಬಾಣಪ್ರಯೋಗಮಾಡಿದನು. ॥೧೬೫॥

ಮತ್ತು ವಿಷ್ಣುವು ತನ್ನದೇ ಆದ ವಿಶೇಷ ಬಾಣಗಳಿಂದ ವೀರಭದ್ರನ ಕಡೆಯವರನ್ನೆಲ್ಲಾ ತಡೆಗಟ್ಟಿ ತಾನು ಜಯಿಸಿದೆನೆಂಬ ಅಹಂಕಾರದಿಂದ ಶಂಖವನ್ನೂದುತ್ತಾ, ವಿಶೇಷವಾಗಿ ಧೈರ್ಯತಂದುಕೊಂಡು ಮುಂದುವರಿದು ಯುದ್ಧವನ್ನು ನಡೆಸುತ್ತಿದ್ದನು. ॥೧೬೬॥

ತದಸ್ತ್ರವರ್ಷಂ ವಿನಿವಾರ್ಯ ಗಾಂ ವೃಷೋ
ವರ್ಷಪ್ರಕರ್ಷಂ ಸಹತೇ ಯಥಾ ಗಣ್ಯೈಃ ।
ಶರಾಂಧಕಾರಾಭಸುಮೇಘಮಾಲಾ
ಮಯೂಖಮಾಲೀವ ನಿರಸ್ಯ ದೃಶ್ಯತ ॥೧೬೭॥

ಪಕ್ಷೀಂದ್ರಪಕ್ಷಾಣಿ ಶರೈಃ ಪ್ರಚಿಚ್ಛಿದೇ
ತತ್ತುಂಡಪಾದೌ ಪ್ರವಿಖಂಡ್ಯ ಯಚ್ಛರೈಃ
ವಿಹಂಗಮಸ್ತತ್ಕ್ಷತಜಾಭಿತಪ್ತಃ
ಪಪಾತ ಕೂಜಂತ್ಸಹ ವಿಷ್ಣುನಾವನೌ ॥೧೬೮॥

ಪ್ರಾಧ್ಮಾಯ್ಯ ಶಂಖಂ ಸಹ ವೀರಭದ್ರಃ
ಪ್ರೋವಾಚ ವಿಷ್ಣುಂ ಕ್ಷತಜಾವೃತಾಂಗಂ ।
ವಸಂತಕಾಲೋತ್ಥಪಲಾಶಭಾಪ್ರಭಾ
ವಿಭಾಸಿಭಾಸಾಂಗಮಥೋ ರಣಸ್ಥಲೇ ॥೧೬೯॥

---

ಆ ವಿಷ್ಣುವಿನ ಬಾಣವೃಷ್ಟಿಯನ್ನು, ಭೂಮಿಯು ಮಳೆಯ ಹನಿಗಳನ್ನು ತಡೆಯುವಂತೆ ಅನಾಯಾಸವಾಗಿ ತಡೆದು ಆ ವೇಗವನ್ನೆಲ್ಲಾ ವೀರಭದ್ರನು ಸಹಿಸಿಕೊಂಡನು. ಅಂತಹ ಬಾಣಸಮೂಹದಲ್ಲಿದ್ದ ವೀರಭದ್ರನು ನೀಲಮೇಘ ಮಧ್ಯದಲ್ಲಿ ವಿರಾಜಿಸುವ ಸೂರ್ಯನಂತೆ ಕಂಗೊಳಿಸುತ್ತಿದ್ದನು. ॥೧೬೭॥

ಕೂಡಲೇ ವೀರಭದ್ರನು ಕೋಪದಿಂದ ಬಾಣಪ್ರಯೋಗಮಾಡಿ ಗರುಡನನ್ನು ನೆಲಕ್ಕೆ ಕೆಡವಿದನು. ಬಾಣದ ಏಟಿಗೆ ಗರುಡನ ರೆಕ್ಕೆ, ಕೊಕ್ಕು, ಕಾಲು ಇವು ಕತ್ತರಿಸಿಹೋದುವು. ಆಗ ಗರುಡನು ನಿಲ್ಲಲಾರದೆ ಮೇಲೆ ಕುಳಿತಿದ್ದ ವಿಷ್ಣುವಿನೊಡನೆ ಭೂಮಿಗೆ ಬಿದ್ದುಬಿಟ್ಟನು. ॥೧೬೮॥

ವಿಷ್ಣುವಿನ ದೇಹವೆಲ್ಲಾ ಗಾಯಗೊಂಡಿತ್ತು. ಅವನ ಮೈಯಿಂದ ರಕ್ತವು ಸುರಿಯುತ್ತಿದ್ದಿತು. ಆಗ ವಿಷ್ಣುವು ವಸಂತಕಾಲದಲ್ಲಿ ಹೂಬಿಟ್ಟ ಮುತ್ತುಗದ ಮರದಂತೆ ರಕ್ತದಿಂದ ಕೆಂಪಾಗಿ ಶೋಭಿಸುತ್ತಿದ್ದನು. ಇಂತಹ ಆಪತ್ತಿಗೆ ಸಿಕ್ಕಿದ ವಿಷ್ಣುವನ್ನು ನೋಡಿ ವೀರಭದ್ರನು ಸಂತೋಷದಿಂದ ಶಂಖಧ್ವನಿ ಮಾಡತೊಡಗಿದನು. ಮತ್ತು ದರ್ಪದಿಂದ ವಿಷ್ಣುವನ್ನು ಕುರಿತು ವೀರಭದ್ರಸ್ವಾಮಿಯು ಹೀಗೆಂದನು. ॥೧೬೯॥

ಕ್ವ ತೇದ್ಯ ದೈತ್ಯಪ್ರಹರೋರುಚಕ್ರಂ
ಶಂಖಂ ಕ್ವ ತೇ ಕೌಸ್ತುಭವೈಜಯಂತೀ ।
ನ ದೈತ್ಯಪಕ್ಷಸ್ಯ ವಿಹಾರಕಾಲಃ
ಸಂಹಾರಕಾಲೋಹಿ ತವಾದ್ಯ ಸಂಪ್ರತಿ ॥೧೭೦॥

ನಾಹಂ ಹಿರಣ್ಯಕಶಿಪುಃ ನ ಹಿರಣ್ಯನೇತ್ರೋ
ತ್ರಿವಿಕ್ರಮಸ್ತೇ ಕ್ವ ತವಾದ್ಯ ಸಂಪ್ರತಿ ।
ನ ರಾವಣೋಽಹಂ ನ ಚ ಕಂಸದೈತ್ಯೋ
ನ ಭಾರ್ಗವಕ್ಷತ್ರಕುಲಾಂತಕಾರೀ ॥೧೭೧॥

ವಿಭೀಷಿಕಾಂತೇ ಕಿಮುತಾತ್ರ ಜನ್ಯೇ
ಇಷೀಕನಾಲಾನಿವ ಸಂದಹೇ ತೇ ।
ತೀಕ್ಷ್ಣಕ್ಷ್ಣಕೋಣೇನ ತದೈವ ಮುಕ್ಷ್ಣನ್
ವೀಕ್ಷನ್ ಸಹಸ್ರಾಕ್ಷಮುಖೋತ್ರ ದಕ್ಷಂ ॥೧೭೨॥

ದೀಕ್ಷಾನ್ವಿತಂ ತ್ರ್ಯಕ್ಷಪದೇ ವಿರಕ್ತಂ
ಲೀಕ್ಷೇವ ಸಂದಹ್ಯ ಭಗಾಕ್ಷಿಸೂದನಃ ॥೧೭೩॥

---

"ಎಲೈ ವಿಷ್ಣುವೇ, ಸಕಲ ದೈತ್ಯರನ್ನೂ ನಿರ್ಮೂಲಗೊಳಿಸಿದ ಚಕ್ರ, ಶಂಖ ಇವು ಈಗ ಎಲ್ಲಿ ಹೋದವು ? ಕೌಸ್ತುಭವೈಜಯಂತಿಗಳೆಂಬ ಭೂಷಣಸಾಮಗ್ರಿಗಳು ನಿನಗೆ ಮಾಯವಾಗಿರುವುವಲ್ಲಾ ! ಅವೆಲ್ಲಾ ಎಲ್ಲಿ ಹೋದುವು ? ಇದು ದೈತ್ಯರೊಡನೆ ಹೋರಾಡುತ್ತಾ ಆಟವಾಡಿಕೊಂಡಿರುವ ಕಾಲವಲ್ಲ. ಪ್ರಪಂಚ ಸಂಹಾರ ಕಾಲವೇ ಇದು ಎಂದು ಭಾವಿಸುವವನಾಗು. ಈಗ ನಿನಗೆ ಕ್ಷೇಮವುಂಟಾಗಲಾರದು. ॥೧೭೦॥

ನಾನು ಹಿರಣ್ಯಾಕ್ಷ, ಹಿರಣ್ಯಕಶಿಪು, ರಾವಣ, ಕಂಸ, ಪರಶುರಾಮ ಇವರಂತೆ ನಿನಗೆ ಸೋಲುವವನಲ್ಲ. ತ್ರಿವಿಕ್ರಮನೆನಿಸಿದ ನಿನ್ನ ಪರಾಕ್ರಮವು ಇಂದಿಗೆ ವ್ಯರ್ಥವೇ ಸರಿ. ನನ್ನ ಮುಂದೆ ನಿನ್ನ ಯಾವ ಪ್ರಕಾಶವೂ ನಡೆಯಲಾರದು. ॥೧೭೧॥

ಕ್ರೂರಗಳೆನಿಸಿದ ನಿನ್ನ ಬಾಣಗಳನ್ನೆಲ್ಲಾ ಕ್ಷಣಮಾತ್ರದಲ್ಲಿ ಹಂಚಿಯ ಕಡ್ಡಿಯ ಊಬುಗಳಂತೆ ದಹಿಸಿಬಿಡುವೆನು. ಎಚ್ಚರಿಕೆಯಿಂದಿರು." ಎಂದು ವಿಷ್ಣು

॥ ಸೂತ ಉವಾಚ ॥

ಇತ್ಯುಕ್ತ್ವೋತ್ಥಿತ ಏವ ಖಡ್ಗಕರಧೃಕ್ ಖೇಟಾಭಿಘಾತೈರ್ಹರಿಂ
ಜಾನುಭ್ಯಾಮಥ ಪಾದಘಾತನಿಕರೈರ್ವ್ಯಾಲೋಲಯತ್ತತ್ರ ಹಿ ।
ದಕ್ಷಂ ದೀಕ್ಷಿತಮುಪ್ಯಪಾಸ್ತಶಿರಸಂ ಚಕ್ರೇ ಸ ಬಸ್ತಂಶಿರೋ
ಖಡ್ಗೇನೈವ ಹರಿಂ ಹರಂತಮುಪಳೃದ್ಬ್ರಹ್ಮಾ ಪ್ರಸಾದ್ಯಾನಮತ್ ॥೧೭೪॥

॥ ಬ್ರಹ್ಮೋವಾಚ ॥

ಕ್ಷಮಸ್ವ ಮನ್ಯುಂ ಚ ಸಹಸ್ವ ವಿಷ್ಣೋ-
ರ್ಮಹಾಪರಾಧಂ ರಣವೀರಭದ್ರ ।
ತ್ವಂ ವೀರಭದ್ರೋಽಸಿ ಸ್ವಭಕ್ತವೃಂದಂ
ಹರ್ತಾ ಖಲಾನಾಂ ರಣಗೋಽಸ್ಯ ಭದ್ರಃ ॥೧೭೫॥

---

ವನ್ನು ಹೆದರಿಸಿ ತನ್ನ ಕ್ರೂರವಾದ ಕಡೆಗಣ್ಣೋಟದಿಂದ ಇಂದ್ರನನ್ನೂ ದಕ್ಷನನ್ನೂ ನೋಡತೊಡಗಿದನು. ಅದರಲ್ಲಿಯೂ ಯಜ್ಞದೀಕ್ಷಿತನಾಗಿ ಶಿವಭಕ್ತಿಪರಾಙ್ಮುಖನಾಗಿದ್ದ ದಕ್ಷನನ್ನಂತೂ ಬಹಳ ಕ್ರೂರದೃಷ್ಟಿಯಿಂದ ನೋಡತೊಡಗಿದನು. ॥೧೭೨-೧೭೩॥

ಅದೇ ಕೋಪದಿಂದ ಮೇಲೆದ್ದ ವೀರಭದ್ರನು ತನ್ನ ಕೈಯ್ಯಲ್ಲಿ ಕತ್ತಿ ಗುರಾಣಿಗಳನ್ನು ಹಿಡಿದವನಾಗಿ, ವಿಷ್ಣುವನ್ನು ಸಮೀಪಿಸಿ, ಪಾದಘಾತಾದಿಗಳಿಂದ ಅವನನ್ನು ನೋಯಿಸಿದನು. ಮತ್ತು ನಿರ್ಲಕ್ಷ್ಯವಾಗಿ ಯಜ್ಞದೀಕ್ಷಿತನಾಗಿದ್ದ ದಕ್ಷಬ್ರಹ್ಮನ ತಲೆಯನ್ನು ಕತ್ತರಿಸಿದನು. ಹಾಗೆಯೇ ವಿಷ್ಣುವನ್ನೂ, ಕತ್ತಿಯಿಂದ ಕೊಲ್ಲಲು ಹೋದ ವೀರಭದ್ರನನ್ನೂ ನೋಡಿ, ಬ್ರಹ್ಮನು ವೀರಭದ್ರನಿಗೆ ನಮಸ್ಕರಿಸಿ ಹೀಗೆ ಪ್ರಾರ್ಥಿಸಿಕೊಂಡನು. ॥೧೭೪॥

"ವೀರಭದ್ರನೇ, ರಣದಲ್ಲಿ ಶೂರನೆನಿಸಿದವನೇ, ಸ್ವಲ್ಪ ತಾಳ್ಮೆತಂದುಕೋ. ವಿಷ್ಣುವಿನ ಅಪರಾಧವನ್ನು ಕ್ಷಮಿಸು. ಭಕ್ತವೃಂದವನ್ನು ಕಾಪಾಡುವ ನೀನು ಈರೀತಿ ಭಕ್ತರನ್ನು ರಣದಲ್ಲಿ ಶಿಕ್ಷಿಸಬಾರದು. ಹೇಗಾದರೂ ವಿಷ್ಣುವನ್ನು ರಕ್ಷಿಸುವ ದಾರಿಯನ್ನು ನೋಡು." ॥೧೭೫॥

ಇಂದ್ರೋಽಪಿ ತತ್ರಾಶು ಸ ವೀರಭದ್ರಂ
ಪ್ರಣಮ್ಯ ಪಾದಾವುಪಗೃಹ್ಯ ನಾತ್ಯಜತ್ ।
ಉತ್ಥಾಯ ಪಾಹೀತಿ ಚ ತೇನ ಮೋಚಿತೋ
ದಯಾವತಾ ಭ್ರಾಂತತರಾಶುಲೋಚನಃ ॥೧೭೬॥

ಪಾಪಸ್ಯ ದಕ್ಷಸ್ಯ ಸಹಾಯಕಾರಣಾ
ತ್ಸುರಾಸುರಾಸ್ತೇ ನಿಹತಾಸ್ತ್ವಯಾಧುನಾ ।
ವಿಷ್ಣೋರ್ಯಶೋ ಭಕ್ಷಿತಮೇವ ದೈತ್ಯ
ಪಾಪಸ್ಯ ಸಂಗಾದಭವತ್ಸ್ವನಾಶಃ ॥೧೭೭॥

ಅಧೋಕ್ಷಜಂ ರಕ್ಷ ಕೃಪಾಕಟಾಕ್ಷೈಃ
ಕ್ಷಂತವ್ಯ ವಿಷ್ಣೋಸ್ತ್ವಪರಾಧವೃಂದಂ ॥
ಲೋಕೋಪಕಾರಾರ್ಥಮಸೌ ತ್ವಯಾದ್ಯ
ಸಂರಕ್ಷಣೀಯೋ ನ ಹಿ ನಾಶಮಾಪ್ನುಯಾತ್ ॥೧೭೮॥

---

ಅದನ್ನು ನೋಡಿ ಇಂದ್ರನೂ ಸಹ ವೀರಭದ್ರನಿಗೆ ವಂದಿಸಿ, ಅವನ ಕಾಲುಗಳನ್ನು ಬಿಡದೆ ಹಿಡಿದುಕೊಂಡು ಕ್ಷಣಕಾಲವಿದ್ದು, ಅನಂತರ 'ನನ್ನನ್ನು ಕಾಪಾಡು' ಎಂದು ಗೋಳಿಟ್ಟನು. ಹಾಗೆ ಮೊರೆಯಿಡುತ್ತಿರುವ ಇಂದ್ರನನ್ನು ನೋಡಿ ವೀರಭದ್ರನು ದಯಾರ್ದ್ರಚಿತ್ತನಾಗಿ ಅವನ ಪ್ರಾಣಗಳನ್ನುಳಿಸಿದನು. ॥೧೭೬॥

ಪಾಪಿಷ್ಠನಾದ ದಕ್ಷಬ್ರಹ್ಮನನ್ನು ಅನುಸರಿಸಿ ನಡೆದದ್ದರಿಂದ ಅನೇಕ ದೇವರಾಕ್ಷಸರಿಗೆ ಗರ್ವಭಂಗವಾಯಿತು. ದೈತ್ಯನಾಶಕನೆಂದೂ ಮಹಾವೀರನೆಂದೂ ಹೆಸರು ಪಡೆದಿದ್ದ ವಿಷ್ಣುವಿನ ಕೀರ್ತಿ ಕಲಂಕಿತವಾಯಿತು. ಹೀಗೆ ಪಾಪಿಷ್ಠನ ಸಂಪರ್ಕದಿಂದ ಅನೇಕ ಅನರ್ಥಗಳು ಒದಗುವುವು. ॥೧೭೭॥

ಮತ್ತೆ ಬ್ರಹ್ಮನು "ವೀರಭದ್ರನೇ, ನಿನ್ನ ದಯೆಯಿಂದ ಈಗ ವಿಷ್ಣುವನ್ನು ರಕ್ಷಿಸು. ಇವನ ಶತಾಪರಾಧಗಳನ್ನೂ ಕ್ಷಮಿಸು. ಏಕೆಂದರೆ ಈತನು ಲೋಕೋಪಕಾರಾರ್ಥವಾಗಿ ದುಷ್ಟರನ್ನು ನಾಶಗೊಳಿಸುತ್ತಿರುವನು. ಈತನನ್ನು ನಾಶಗೊಳಿಸಬಾರದು. ಹೇಗಾದರೂ ಈ ವಿಷ್ಣುವನ್ನು ಸಂರಕ್ಷಿಸು" ಎಂದು ಪ್ರಾರ್ಥಿಸಿದನು. ॥೧೭೮॥

॥ ಶ್ರೀಸ್ಕಂದ ಉವಾಚ ॥

ನಿಷ್ಕಾಸಿತಾಸಿಂ ಸ ತು ಸಂಜಹಾರ
ತತ್ಕೇಶಪಾಶಂ ವಿಧಿವಾಕ್ಯತೋಷಿತಃ ।
ಸಾರಥ್ಯಮೌಚಿತ್ಯಸುಸಾಮವಾಕ್ಯೈಃ
ಜಹರ್ಷ ತತ್ರಾಶು ಸ ವೀರಭದ್ರಃ ॥೧೭೯॥

ಶ್ವಸಂತಮಾಸಂತಸುದುಃಖಖಿನ್ನಂ
ಗಚ್ಛೇತಿ ತತ್ರಾಹ ಹರಿಂ ಕ್ರುಧಾ ಗಣೈಃ ।
ತ್ರಪಾನತೋ ಮಾಧವ ಏಷ ನತ್ವಾ
ಗಣೇಂದ್ರಮುಖ್ಯಂ ಪ್ರಯಯೌ ಸ್ವಲೋಕಂ ॥೧೮೦॥

ಖಗಂ ಸಮುಜ್ಜೀವ್ಯ ಯಥಾಗತಂ ಹರಿ
ರ್ದಕ್ಷೋತ್ರ ನಿರ್ವಿಣ್ಣಮನಾ ಬಭೂವ ।
ತಾ ದಕ್ಷಪತ್ನ್ಯಃ ಸುರವರ್ಯಪತ್ನ್ಯೋ
ಯತ್ನಾದುಪಾಲಭ್ಯ ಪತೀನ್ ರಣಾಂಗಣೇ ॥೧೮೧॥

---

ಆ ಬ್ರಹ್ಮನ ಪ್ರಾರ್ಥನೆಯಂತೆ ವೀರಭದ್ರನು ವಿಷ್ಣುವನ್ನು ಕೊಲ್ಲಲು ಎತ್ತಿದ್ದ ಕತ್ತಿಯನ್ನು ಕೆಳಕ್ಕೆ ಹಾಕಿದನು. ವಿಷ್ಣುವಿನ ಜುಟ್ಟನ್ನು ಆಗ ಬಿಟ್ಟು ಬಿಟ್ಟನು. ಅಂತಹ ವೀರಭದ್ರನ ದಯಾರಸಕ್ಕೆ ತೃಪ್ತನಾದ ಬ್ರಹ್ಮದೇವನು ವೀರಭದ್ರನನ್ನು ಸಾಮಗಾನದಿಂದ ಸ್ತುತಿಸುತ್ತಾ ಸಂತೋಷಗೊಳಿಸಿದನು. ॥೧೭೯॥

ವಿಷ್ಣುವು ನೇಲುಸುರುಬಿಡುತ್ತಾ, ಅತ್ಯಂತ ಖಿನ್ನವದನನಾಗಿದ್ದನು. ವೀರಭದ್ರನು ಅಂತಹ ವಿಷ್ಣುವನ್ನು ದಯೆಯಿಂದ ಬಿಟ್ಟೊಡನೆಯೇ ನಾಚಿಕೆಯಿಂದ ತಲೆ ಬಗ್ಗಿಸಿದ ವಿಷ್ಣುವು ವೀರಭದ್ರನಿಗೆ ವಂದಿಸಿ ತನ್ನ ಲೋಕಕ್ಕೆ ಪ್ರಯಾಣಮಾಡಲು ಸಿದ್ಧನಾದನು. ॥೧೮೦॥

ಸತ್ತುಬಿದ್ದಿದ್ದ ಗರುಡನನ್ನು ಮತ್ತೆ ಬದುಕಿಸಿಕೊಂಡು ವಿಷ್ಣುವು ಹೆಚ್ಚು ಮಾತನಾಡದೆ ಗರುಡಾರೂಢನಾಗಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು. ದಕ್ಷಬ್ರಹ್ಮನಾದರೋ ಆಗ ಅನಾಥನಾಗಿ ಕುಳಿತುಬಿಟ್ಟನು. ದಕ್ಷಪತ್ನಿಯರೂ ನಿರ್ವಿಣ್ಣರಾದರು. ಮೃತರಾಗಿದ್ದ ದೇವತೆಗಳ ಪತ್ನಿಯರಾದರೋ ಬಹುಕಷ್ಟಪಟ್ಟು ತಮ್ಮ ತಮ್ಮ ಗಂಡಂದಿರನ್ನು ಹುಡುಕಿ ರಣರಂಗದಲ್ಲಿ ಗೋಳಿಡಲಾರಂಭಿಸಿದರು. ॥೧೮೧॥

ವಿಮುಕ್ತಕೇಶ್ಯಃ ಪ್ರರುದಂತಿ ಸಂಘಶೋ
ವೈವರ್ಣ್ಯಮಾಲಿನ್ಯದಶಾಶ್ರುಲೋಚನಾಃ ।
ಹಾ ದಕ್ಷಪಕ್ಷಸುರತಾ ವಿರತಾದ್ಯಭೋಗೇ
ಲೀಕ್ಷೇವ ಧೃಷ್ಟಾ ನಿಖಿಲಾ ಗಣೇಶ್ವರೈಃ ॥೧೮೨॥

ಕಸ್ತಂ ಪ್ರಸಾದಯತಿ ಚಾಪಧರೋಗ್ರಬಾಹುಂ
ಪ್ರಯಾಮ ಸರ್ವಾಃ ಶರಣಂ ಹಿ ನೋ ಗತಿಃ ।
ಇತ್ಯೇವಮುಕ್ತ್ವಾ ಪ್ರಣತಾಃ ಸುರಾಂಗನಾಃ
ಸಂಸಾದ್ಯ ಬಾಷ್ಪಾಣಿ ನಿಗೃಹ್ಯತಾಮಿತಿ ॥೧೮೩॥

ಉವಾಚ ಭದ್ರೋತ್ರ ವಚಸ್ತದಾನೀಂ
ನಿಂದಾಶ್ರವಾಯಾ ಫಲಮೇತದೀಶಿತುಃ ।
ಅಶಾಂಭವಸಹಾಯಕೃದ್ಭವತಿ ಪಾಪದೂನಾಂಕಗೋ
ಮಹೇಶ್ವರದಯೋಜ್ಝಿತೋಪ್ಯಖಿಲಲೋಲಫಾಲಾನಲೈಃ ॥೧೮೪॥

---

ಅವರೆಲ್ಲರೂ ತಲೆಕೆದರಿಕೊಂಡು ಗಟ್ಟಿಯಾಗಿ ಒಟ್ಟಾಗಿ ಅಳತೊಡಗಿದರು. ಸುರಿಯುವ ಕಣ್ಣೀರಿನಿಂದ ಅವರ ಮುಖವೆಲ್ಲಾ ವಿಕಾರಗೊಂಡಿದ್ದಿತು. "ಅಯ್ಯೋ ಈ ದಕ್ಷನ ಪಕ್ಷವನ್ನು ಅನುಸರಿಸಿದ ದೇವತೆಗಳೆಲ್ಲಾ ಹಾಳಾದರಲ್ಲಾ! ಸಣ್ಣಹುಳುಗಳನ್ನು ತಿಕ್ಕುವಂತೆ ಈ ವೀರಭದ್ರಗಣಗಳು ದೇವತೆಗಳನ್ನು ಕೊಂದು ನಮ್ಮ ಗುಂಪಿನ ಭೋಗವನ್ನೇ ನಾಶಮಾಡಿದರಲ್ಲಾ! ಮುಂದೇನು ಗತಿ! ॥೧೮೨॥

ಅಷ್ಟು ಉಗ್ರನಾದ ಧನುರ್ಧಾರಿಯನ್ನು ಪ್ರಸಾದಗೊಳಿಸಲು ಇಲ್ಲಿ ಯಾರು ಸಮರ್ಥರಿರುವರು? ಈಗ ನಾವೇ ಅವನನ್ನು ಶರಣುಹೊಂದೋಣ." ಹೀಗೆ ಯೋಚಿಸುತ್ತಾ ಆ ದೇವತಾಸ್ತ್ರೀಯರೆಲ್ಲಾ ವೀರಭದ್ರನ ಸಮೀಪಕ್ಕೆ ಬಂದು ನಮಸ್ಕರಿಸಿ ನಮ್ಮ ಕಣ್ಣೀರು ನಿಲ್ಲುವಂತೆ ಮಾಡಿ ನಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿಕೊಂಡರು. ॥೧೮೩॥

ಆಗ ವೀರಭದ್ರನು, ಈಶ್ವರನಿಂದನೆಯನ್ನು ಕೇಳಿದವರಿಗೆಲ್ಲಾ ಇದೇ ಫಲವಾಗುವುದೆಂದೂ, ಶಾಂಭವರಲ್ಲದವರಿಗೆ ಎಂದೂ ಸಹಾಯಮಾಡಬಾರದೆಂದೂ, ಅದು ಮಹಾಪಾಪಕಾರ್ಯವೆಂದೂ, ಒಂದುವೇಳೆ ಹಾಗೆ ಸಹಾಯಮಾಡಿದರೆ, ಮಹೇಶ್ವರನ

ವಿದಾಹಯತಿ ತಂ ಪರಂ ಸುರವರಂ ದ್ವಿಜಂ ವಾಂತ್ಮಜಂ ।
ವಿಲೋಕಿತಮಿದಂ ಯಥಾ ಮುಖವಿಭಂಗವಿಘ್ನಂ ಮಹತ್ ॥೧೮೫॥

॥ ಸೂತ ಉವಾಚ ॥

ಅನೀಕಿನೀತ್ಯಾಸುರಸತ್ತಮಾನಾಂ
ಪಿನಾಕಿನೀಶೇ ಸ್ಥಿರಭಕ್ತಿವರ್ಜಿತಾ ।
ವಿನಾಶಿನೀ ಸಾ ಪ್ರಬಭೌ ತದಾನೀಂ
ಸೌದಾಮಿನೀ ಚಾತಿಚಲೇವ ಕಾಮಿನೀ ॥೧೮೬॥

ಜಗರ್ಜುರ್ಗಣೇಂದ್ರಾ ಮುದಾ ತಂ ಗಣೇಂದ್ರಂ
ಪ್ರಕೃಷ್ಟೋರುಘೋಷೈರ್ದಿವಂ ಗಾಂ ಭಿನಂತಃ ।
ಕ್ಷಯದ್ವೀರಪಾದಾರ್ಚಕೋ ವೀರಭದ್ರೋ
ಜಯತ್ಯೇವ ದಕ್ಷಾಸುಹೃದ್ದೇವಸಂಘಂ ॥೧೮೭॥

---

ದಯೆಯು ಅವರಿಗೆ ತಪ್ಪುವುದೆಂದೂ, ಕೊನೆಗೆ ಅವರು ಶಿವಫಾಲನೇತ್ರಕ್ಕೆ ಸಿಕ್ಕಿ ಬಲಿಯಾಗುವರೆಂದೂ ತಿಳಿಯಪಡಿಸಿದನು. ॥೧೮೪॥

ಮತ್ತು ಯಾರು ಶಿವನಿಂದನೆ ಮಾಡುವರೋ ಅಥವಾ ಕೇಳುವರೋ, ಅವರು ಜಾತಿಯಿಂದ ಬ್ರಾಹ್ಮಣರಾಗಲಿ, ಅಂತ್ಯಜರಾಗಿರಲಿ ಈ ದಕ್ಷಯಜ್ಞವು ನಾಶವಾದಂತೆ ನಾಶವಾಗುವರು. ಎಂದು ವೀರಭದ್ರನು ಅವರಿಗೆ ಶಿವಶಕ್ತಿಯನ್ನು ತಿಳಿಸಿದನು. ॥೧೮೫॥

ಹೀಗೆ ದೇವರಾಕ್ಷಸರ ಸೈನ್ಯವು ಪಿನಾಕಧಾರಿಯಾದ ಪರಶಿವನಲ್ಲಿ ಸ್ಥಿರಭಕ್ತಿಯಿಡದೆ ವಿಪತ್ತಿಗೆ ಸಿಕ್ಕಿ ಅತಿ ಚಂಚಲಳಾದ ಸ್ತ್ರೀಯಂತೆಯೂ, ಹೊಳೆಯುವ ಮಿಂಚಿನಂತೆಯೂ ಸ್ವಲ್ಪಕಾಲ ಮಾತ್ರ ಪರಾಕ್ರಮದಿಂದ ಯುದ್ಧಮಾಡಿ, ಕೊನೆಗೆ ಸರ್ವನಾಶಹೊಂದಿ ಮಂಕಾಗಿಹೋಯಿತು. ॥೧೮೬॥

ಈ ಜಯದಿಂದ ಉತ್ಸಾಹಗೊಂಡ ವೀರಭದ್ರಗಣಗಳು ವೀರಗರ್ಜನೆ ಮಾಡುತ್ತಾ ಭೂಮ್ಯಂತರಿಕ್ಷಗಳು ಒಡೆದುಹೋಗುವಂತೆ ಮಾಡಿದರು. ವೀರಭದ್ರನಾದರೋ ಈಶ್ವರಪಾದಸೇವಕನಾದ್ದರಿಂದಲೇ ದೇವಸಂಘವನ್ನೆಲ್ಲಾ ಜಯಿಸಿ ಕೀರ್ತಿಶಾಲಿಯೆನಿಸಿದನು. ॥೧೮೭॥

ಸಂಧುಕ್ಷಿತಾಧೋಕ್ಷಜ ಏಷ ವೀರೋ
ಜಯತ್ಯೇವಮೀಶಾರ್ಚನಾಸಕ್ತಚಿತ್ತಃ ।
ಮಹಾಭಸ್ಮರುದ್ರಾಕ್ಷಭಾಜಾಂ ಶರಣ್ಯೋ
ನ ಗಣ್ಯೋಽಸ್ಯ ಸಾಮ್ಯೇ ಭವೇತ್ಕೋಽಪಿ ವೀರಃ ॥೧೪೮॥

ವವರ್ಷುರದ್ಧಾ ಕುಸುಮೋರುವರ್ಷಂ
ವವುಶ್ಚ ವಾತಾಃ ಸುಖಸಾರಶೀತಲಾಃ ।
ವಿತ್ರಸ್ತವಿಶ್ವಂ ಪ್ರಜಗಾಮ ಹರ್ಷಂ
ಜಗ್ಮುಶ್ಚ ಶಾಂತಿಂ ಕಿಲ ಸರ್ವಲೋಕಾಃ ॥೧೪೯॥

ಹರಪ್ರಸಾದೇನ ಸ ವೀರಭದ್ರೋ
ರಮಾವರಂ ತಂ ಪ್ರವಿದಾರ ಸಾಯಕೈಃ ।
ದಕ್ಷೋಽಪಿ ಸಂಶಿಕ್ಷಿತ ಏವ ದೇವೈ
ರ್ಜಗಾಮ ರುದ್ರಂ ಸ ಪಿತಾಮಹೇನ ॥೧೫೦॥

---

ಈಶ್ವರಾರ್ಚನೆಯಲ್ಲಿಯೇ ನೆಟ್ಟಮನಸ್ಸುಳ್ಳ ಈ ವೀರಭದ್ರನು ಮಹಾವಿಷ್ಣುವನ್ನು ಸಂಪೂರ್ಣವಾಗಿ ಸೋಲಿಸಿದನು. ಭಸ್ಮರುದ್ರಾಕ್ಷಧಾರಿಗಳಿಗೆ ರಕ್ಷಕನಾದ ಈ ವೀರಭದ್ರನು ಸರ್ವ ಸಮರ್ಥನು. ಇಂತಹ ವೀರನನ್ನು ಎದುರಿಸಲು ಯಾರಿಂದಲೂ ಸಾಧ್ಯವಿಲ್ಲ. ॥೧೪೮॥

ಆ ಕಾಲದಲ್ಲಿ ವೀರಭದ್ರನ ಮೇಲೆ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿದರು. ಮಂದಮಾರುತವು ಸುಖಶೀತಲವಾಗಿ ಬೀಸಿತು. ಕಳವಳಗೊಂಡಿದ್ದ ಜಗತ್ತು ಹರ್ಷಪೂರಿತವಾಯಿತು. ಸಮಸ್ತಲೋಕಗಳೂ ಸುಖಶಾಂತಿಯನ್ನು ಪಡೆದುವು. ॥೧೪೯॥

ಈರೀತಿ ಈಶ್ವರಾನುಗ್ರಹದಿಂದ ವೀರಭದ್ರನು ಮಹಾವಿಷ್ಣುವನ್ನು ಸಾಯಕಾದಿಗಳಿಂದ ಅವಮಾನಗೊಳಿಸಿದನು. ಮಹಾಪರಾಕ್ರಮಿಯಾದ ದಕ್ಷನೂ ವೀರಭದ್ರನಿಂದ ಶಿಕ್ಷಿತನಾದನು. ಇಷ್ಟಾದಮೇಲೆ ವಿಷ್ಣುವು ಬ್ರಹ್ಮನೊಡಗೂಡಿ ಪರಮೇಶ್ವರನ ಸಮೀಪಕ್ಕೆ ತೆರಳಿದನು. ಎಂದು ಜೈಗೀಸವ್ಯಮಹರ್ಷಿಗೆ ಸ್ಕಂದಸ್ವಾಮಿಯು ವೀರಭದ್ರನ ಸಾಹಸರೂಪವಾದ ವೃತ್ತಾಂತವನ್ನು ವಿವರವಾಗಿ ತಿಳಿಯಪಡಿಸಿದನು. ॥೧೫೦॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀ ಸಂವಾದೇ ದಕ್ಷಾಧ್ವರವರ್ಣನೇ ವೀರಭದ್ರವಿಷ್ಣು ಯುದ್ಧವರ್ಣನಂ ನಾಮ ಷಷ್ಠೋಽಧ್ಯಾಯಃ

---

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ವೀರಭದ್ರ ಮತ್ತು ವಿಷ್ಣು ಇವರ ಯುದ್ಧವನ್ನು ವರ್ಣಿಸುವ ದಕ್ಷಯಜ್ಞವಿಧ್ವಂಸಕವಾದ ಕಥೆಯನ್ನು ಅನುವಾದಿಸುವ ಆರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಸಪ್ತಮೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತತ್ರ ದಕ್ಷಶಿರಶ್ಛಿನ್ನಂ ನಿಪಪಾತ ಧರಾತಲೇ ।
ನಿವೃತ್ತದಂತನಯನಂ ನಿರ್ಯಜ್ಜಿಹ್ವಸ್ತದಾ ದ್ವಿಜ ||೧||

ಪ್ರವಿವೇಶ ಕ್ಷಣಾದೇವ ತದಪ್ಯಾಹವನೀಯಜಂ ।
ತತ್ಪ್ರವಿಧ್ವಸ್ತಕಲಶಂ ಭಗ್ನಯೂಥಂ ಸತೋರಣಂ ||೨||

ವ್ಯದೀಪಿತ ಮಹಾಶಾಲಂ ತತ್ರ ಯಜ್ಞಂ ಚ ವಿದ್ರುತಂ ।
ಪುರೀಷಭಸ್ಮಶಕೃತಾ ವ್ಯಕ್ತಂ ಭಾಂಡಾದಿರಾಶಿಭಿಃ ||೩||

---

## ಏಳನೆಯ ಅಧ್ಯಾಯ

ದಕ್ಷಬ್ರಹ್ಮನು ವೀರಭದ್ರನ ಶರಾಘಾತದಿಂದ ಕೆಳಗೆ ಬಿದ್ದು ಹಲ್ಲುಗಳನ್ನು ಕಳೆದುಕೊಂಡು, ಜೋತಾಡುವ ಕಂಠ ನಾಲಗೆಯಿಂದ ನರಳುತ್ತಾ, ಹಾಗೆಯೇ ಮೆಲ್ಲ ನೆದ್ದು ಆಹವನೀಯಾಗ್ನಿ ಶಾಲೆಗೆ ಹೋದನು. ಆ ಯಾಗಮಂಟಪವಾದರೋ ಮುರಿದ ಕಲಶಗಳಿಂದಲೂ, ಹರಿದ ತೋರಣಗಳಿಂದಲೂ ಕತ್ತರಿಸಲ್ಪಟ್ಟ ಯೂಪಸ್ತಂಭ ದಿಂದಲೂ ಶೂನ್ಯವಾಗಿತ್ತು. ||೧-೨||

ಯಜ್ಞಮಂಟಪವೆಲ್ಲಾ ಮಂಕಾಗಿದ್ದಿತು. ಮತ್ತು ಅದೆಲ್ಲಾ ಮೂತ್ರ ಪುರೀಷಾದಿಗಳು ಬಿದ್ದು ಅಪವಿತ್ರವಾಗಿದ್ದಿತು. ಯಜ್ಞದ ಭಾಂಡಗಳೆಲ್ಲಾ ಒಡೆದು ಚೂರಾಗಿದ್ದುವು. ಮಾಂಸ, ಮಜ್ಜಾ, ಪುರೀಷ ಮುಂತಾದುವುಗಳು ಸರ್ವತ್ರ

ವಸಾತ್ರಮಾಂಸಬಹುಲಂ ಭ್ರಮದ್ಗೃಧ್ರಾದಿಕೂಜಿತಂ ।
ಕ್ರೌಂಚೀನಾಮಿವ ತತ್ರೈವ ರುದತ್ ಸ್ತ್ರೀಗಣಸಂಕುಲಂ ॥೪॥

ಏವಂ ಬಭೌ ಯಜ್ಞಶಾಲಾ ದಕ್ಷಸ್ಯೈವ ದುರಾತ್ಮನಃ ।
ದಕ್ಷೋಽಪಿ ಬಸ್ತಶಿರಸಾ ಸಮುದ್ವೀಕ್ಷನ್ ಮುಹುರ್ಮುಹುಃ ॥೫॥

ಶಾಂತಾನಗ್ನೀನ್ ಸಮುತ್ಪಾಟ್ಯ ಋತ್ವಿಗ್ಭಿಃ ಪುನರುದ್ಧೃತಃ ।
ಪ್ರಖಿನ್ನಮನಸಾ ದಕ್ಷೋ ಯಜ್ಞಪುಚ್ಛಂ ಪ್ರತಿಷ್ಠಿತಂ ॥೬॥

ಪ್ರಾಯಶ್ಚಿತ್ತಾದಿಕಂ ಕೃತ್ವಾ ಜಗಾಮ ಶರಣಂ ಹರಂ ।
ಶಮಂ ಜಗಾಮ ಗಣಪೈಃ ಶಾಂತಸ್ತಸ್ಥೌ ಶಿವಾಗ್ರತಃ ॥೭॥

ಗಣೇಂದ್ರೈರ್ವಾರಣೇಂದ್ರಾಭೈರ್ನಮಸ್ಕೃತ್ಯ ಮಹೇಶ್ವರಂ ।
ತುಷ್ಟಾವ ವೀರಭದ್ರೋಽಸೌ ಮಹಾದೇವಂ ವೃಷಧ್ವಜಂ ॥೮॥

॥ ವೀರಭದ್ರ ಉವಾಚ ॥

ಶಂಭೋ ಭವಾಂಬುನಿಧಿತಾರಕಕರ್ಣಧಾರ
ವಿಶ್ವಂಭರಾಧರಣಕಾರಣಕಾಲಕಾಲ ।

---

ವ್ಯಾಪ್ತವಾಗಿದ್ದುವು. ಹದ್ದು ಗೂಬೆ ಇವೇ ಮುಂತಾದುವುಗಳು ಅಲ್ಲಲ್ಲಿ ಅರಚಿಕೊಳ್ಳು ತ್ತಿದ್ದವು ಸ್ತ್ರೀಗಣಗಳು ಹೆಣ್ಣುಕ್ರೌಂಚಪಕ್ಷಿಗಳಂತೆ ಅಲ್ಲಲ್ಲಿ ಗೋಳಿಡುತ್ತಿದ್ದುವು. ॥೩-೪॥

ಇಂತಹ ಅಸ್ತವ್ಯಸ್ತವಾದ ಯಾಗಶಾಲೆಯನ್ನು ನೋಡುತ್ತಾ ದಕ್ಷಬ್ರಹ್ಮನು ತನ್ನ ತಲೆಯಿಂದ ರಕ್ತವನ್ನು ಸುರಿಸುತ್ತಲೇ ಯಾಗದಲ್ಲಿ ಉಳಿದಿರುವ ಸ್ವಿಷ್ಟ ಕೃದ್ಹೋಮವನ್ನು ಮುಗಿಸಲು ಮತ್ತೆ ಋತ್ವಿಕ್ಕುಗಳೊಡನೆ ಕುಳಿತನು. ಆರಿ ಹೋಗಿದ್ದ ಬೆಂಕಿಯನ್ನು ಮತ್ತೆ ಹುತಮಾಡಿ, ಖಿನ್ನವಾದ ಮನಸ್ಸಿನಿಂದ ಯಜ್ಞದ ಪುಚ್ಛವನ್ನು ಅಂದರೆ ಸ್ವಿಷ್ಟಕೃದ್ಹೋಮವನ್ನು ನೆರವೇರಿಸಲು ಯತ್ನಿಸಿದನು. ॥೫-೬॥

ಪ್ರಾಯಶ್ಚಿತ್ತಾದಿ ಹೋಮಶೇಷವನ್ನು ಸಮಾಪ್ತಿಗೊಳಿಸಿ, ಪರಶಿವನಿದ್ದಲ್ಲಿಗೆ ಹೋಗಿ ಪರಶಿವನನ್ನು ಮೊರೆಹೊಕ್ಕನು. ಅದನ್ನು ನೋಡಿ ವೀರಭದ್ರನು ಶಾಂತನಾದನು. ಮತ್ತು ಶಿವನ ಮುಂದೆ ತನ್ನ ಮದವಾರಣಸರಿಸಮರಾದ ಗಣನಾಥರೊಡನೆ ನಿಂತು ವೀರಭದ್ರನು ವೃಷಭಧ್ವಜನಾದ ಪರಶಿವನನ್ನು ಈರೀತಿ ಸ್ತುತಿಸಿದನು. ॥೭-೮॥

"ಶಂಭುವೇ, ಸಂಸಾರವೆಂಬ ಸಮುದ್ರದಿಂದ ನಮ್ಮನ್ನುದ್ಧರಿಸುವವನೇ,

ಶ್ರೀವ್ಯೋಮಕೇಶ ಗರಳಾಶ ಮಹೇಶ ಶಂಭೋ
ಪಾಹ್ಯಬ್ಜಮಿತ್ರ ನಯನೈಣಕಲಂಕಚೂಡ ॥೯॥

ಸ್ತುತ್ವಾ ನತ್ವಾ ಮಹಾದೇವಂ ಗಣೇಂದ್ರೋ ಗಣಪೈಸ್ಸಹ ।
ಶಂಭೋಃ ಪಾರ್ಶ್ವಗತೋ ಭೂತ್ವಾ ವ್ಯತಿಷ್ಠತ್ಸಕೃತಾಂಜಲಿಃ ॥೧೦॥

॥ ಶ್ರೀ ಈಶ್ವರ ಉವಾಚ ॥

ವತ್ಸಾದ್ಯ ಪರಿಖಿನ್ನೋಽಸಿ ಗಣೇಶೈಸ್ಸುರಜನ್ಮಕೇ ।
ನೈನಂಚಿತ್ರಂ ಜಯಸ್ತೇಽದ್ಯ ಮತ್ಕೃಪಾವಶತೋ ಭವೇತ್ ॥೧೧॥

ಗಣೇಶತಾಮುಪಗತೋ ಏಭಿರ್ಗಣವರೈಸ್ಸಹ ।
ಹೇತಿಶೂಲಾಯುಧಧರೈರ್ಭಸ್ಮಫಾಲಬಲೋನ್ನತೈಃ ॥೧೨॥

ವಸ ಮತ್ತದ್ವಿಸಾಕಾರ್ಯೈಃ ಕಾಶ್ಯಾಂ ನಿತ್ಯಮತಂದ್ರಿತೈಃ ।
ತತ್ರ ಪಾಪಕೃತಾಮಂತೇ ಜೀವತಾಂ ವಿಘ್ನರಾಶಿಭಿಃ ॥೧೩॥

---

ಪ್ರಪಂಚಕ್ಕೆ ಆಶ್ರಯವಿತ್ತು, ಯಮನಿಗೂ ಯಮನಂತಿರುವವನೇ, ಆಕಾಶವನ್ನೇ ತನ್ನ ತಲೆಗೂದಲಂತೆ ಭಾವಿಸುವವನೇ, ವಿಷಭಕ್ಷಕನೇ, ಮಹೇಶನೇ, ಶಂಭುವೇ, ಸೂರ್ಯನನ್ನೇ ನೇತ್ರವನ್ನಾಗಿ ಹೊಂದಿದವನೇ, ಚಂದ್ರಶೇಖರನೇ, ನಮ್ಮನ್ನುದ್ಧರಿಸು. ನಮಗೆ ರಕ್ಷಣೆಕೊಡು.'' ॥೯॥

ಹೀಗೆ ಸ್ತೋತ್ರಮಾಡುತ್ತಾ ವೀರಭದ್ರನು ತನ್ನ ಗಣನಾಯಕರೊಡಗೂಡಿ ಈಶ್ವರನ ಪಾರ್ಶ್ವದಲ್ಲಿ ನಿಂತುಕೊಂಡನು. ಆಗ ಶಂಕರನು ಪ್ರತ್ಯಕ್ಷನಾಗಿ ''ಅಯ್ಯಾ ವತ್ಸ ವೀರಭದ್ರನೇ, ನೀನು ಯುದ್ಧದಲ್ಲಿ ಬಹಳವಾಗಿ ಆಯಾಸಪಟ್ಟಿರುವೆ. ನನ್ನ ಕೃಪೆಗೆ ಪಾತ್ರನಾಗಿ ನೀನು ಇಂತಹ ಜಯಪಡೆದುದರಲ್ಲಿ ಹೆಚ್ಚಿನ ಆಶ್ಚರ್ಯವೇನಿಲ್ಲ! ॥೧೦-೧೧॥

ನೀನು ಈ ಗಣಗಳಿಗೆಲ್ಲಾ ಒಡೆಯನಾಗು. ಇಲ್ಲಿರುವ ತ್ರಿಶೂಲವೇ ಮೊದಲಾದ ಸಮಸ್ತ ಆಯುಧಗಳನ್ನೂ ಧೈರ್ಯದಿಂದ ಧರಿಸಿ ಸದಾ ಭಸ್ಮಧಾರಿಗಳೆನಿಸಿರುವ ಗಣಗಳಿಗೆ ಒಡೆಯನಾಗಿ ನಿತ್ಯಾನಂದದಿಂದ ಕಾಶೀಕ್ಷೇತ್ರದಲ್ಲಿ ವಾಸಮಾಡು. ಅಲ್ಲಿ ಇದೇರೀತಿ ಪಾಪಿಷ್ಠರಾದವರನ್ನು ತಪ್ಪದೆ ಶಿಕ್ಷಿಸುತ್ತಿರು. ॥೧೨-೧೩॥

ನಿಘ್ನನ್ ಗದಾಯುಧೈಃ ಪಾಪಾನ್ ಭಸ್ಮರುದ್ರಾಕ್ಷವರ್ಜಿತಾನ್ ।
ವಿಶ್ವೇಶದರ್ಶನೈರ್ಹೀನಾನ್ ಸ್ತೋತ್ರಾರ್ಚನವಿವರ್ಜಿತಾನ್ ॥೧೪॥

ಅನ್ನಪೂರ್ಣಾದರ್ಶನಾರ್ಚಾವಿಹೀನಾನ್ ಧುಂಢ್ಯಪೂಜಕಾನ್ ।
ತತ್ರತ್ಯಲಿಂಗಯಾತ್ರಾದಿಸಮರ್ಚನವಿವರ್ಜಿತಾನ್ ॥೧೫॥

ಜ್ಞಾನವಾಪೀಸ್ನಾನಹೀನಾನ್ಮಣಿಕರ್ಣ್ಯರ್ಚನೋಜ್ಝಿತಾನ್ ।
ಪ್ರದೋಷಸೋಮವಾರಾರ್ಚಾವಿಹಿನಾಲ್ಲಿಂಗಮೌಳಿಷು ॥೧೬॥

ಕಾಲಾಷ್ಟಮೀವ್ರತಶ್ರಾದ್ಧಾಂಶ್ಚತುರ್ದಶ್ಯರ್ಚನೋಜ್ಝಿತಾನ್ ।
ನಿತ್ಯಾಂತರ್ಗೃಹಯಾತ್ರಾದಿವಿಹೀನಾನ್ ಭಿಕ್ಷಯಾಧುನಾ ॥೧೭॥

ರುದ್ರಪಂಚಾಕ್ಷರಾವೃತ್ತಿವಿಹೀನಾನ್ ಪಾತಯಾಧುನಾ ।
ಅಶಾಂಭವಾನ್ ಯಾತನಾಭಿಃ ಸಂಶಿಕ್ಷಯ ಯಥಾರುಚಿ ॥೧೮॥

ಇತ್ಯುಕ್ತೋ ವೀರಭದ್ರೋಽಸೌ ಯಯೌ ನತ್ವಾ ಮಹೇಶ್ವರಂ ।
ಅವಿಮುಕ್ತಂ ಸಮಾಸಾದ್ಯ ಗಣೈಸ್ತತ್ರ ಶಾಂಕರಃ ॥೧೯॥

---

ಕಾಶಿಯಲ್ಲಿದ್ದು ಭಸ್ಮರುದ್ರಾಕ್ಷಿಗಳಿಲ್ಲದೆ, ವಿಶ್ವೇಶ್ವರನನ್ನು ದರ್ಶನಮಾಡದೆ, ಶಿವಸ್ತುತಿಯನ್ನು ಪಠಿಸದೆ, ಅನ್ನಪೂರ್ಣೆಯನ್ನು ಪೂಜಿಸದೆ, ಧುಂಡೀಗಣಪತಿಯನ್ನು ಆರಾಧಿಸದೆ, ಅಲ್ಲಿರುವ ಶಿವಲಿಂಗಗಳನ್ನು ಮನಃಪೂರ್ವಕವಾಗಿ ಉಪಚರಿಸದೆ ಪಾಪಿಗಳಾಗಿರುವವರನ್ನು ಗದಾಯುಧಾದಿಗಳಿಂದ ಶಿಕ್ಷಿಸುತ್ತಿರು. ॥೧೪-೧೫॥

ಜ್ಞಾನವಾಪಿಯಲ್ಲಿ ಸ್ನಾನಮಾಡದಿರುವವರು, ಮಣಿಕರ್ಣಿಕೆಯನ್ನು ಅರ್ಚಿಸದಿರುವವರು, ಪ್ರದೋಷಕಾಲದಲ್ಲಿ, ಸೋಮವಾರಗಳಲ್ಲಿ ಶಿವಲಿಂಗಮೌಳಿಯನ್ನು ಪೂಜಿಸದಿರುವವರು, ಕೃಷ್ಣಾಷ್ಟಮೀವ್ರತಗಳು, ಚತುರ್ದಶಿಯಲ್ಲಿ ಶಿವಪೂಜೆ, ಕಾಶಿಯಲ್ಲಿ ನಿತ್ಯದಲ್ಲಿಯೂ ಗೃಹಯಾತ್ರಾ (ವಿಶ್ವೇಶ್ವರಕ್ಷೇತ್ರವನ್ನು ಸುತ್ತುವುದು) ಇವುಗಳನ್ನು ಯಾರು ಆಚರಿಸುವುದಿಲ್ಲವೋ, ಅಂತಹವರನ್ನು ಪ್ರಬಲವಾಗಿ ಶಿಕ್ಷಿಸುತ್ತಿರು. ॥೧೬-೧೭॥

ಕಾಶಿಯಲ್ಲಿ ಯಾರು ಶಿವಪಂಚಾಕ್ಷರಮಂತ್ರವನ್ನು ಜಪಿಸುವುದಿಲ್ಲವೋ, ಅಂತಹ ಶಂಭುಭಕ್ತಿವಿಮುಖರನ್ನು ನಾನಾವಿಧವಾದ ಶಿಕ್ಷೆಗಳಿಂದ ಶಿಕ್ಷಿಸು" ಹೀಗೆಂದು ಮಹೇಶ್ವರನು ವೀರಭದ್ರನಿಗೆ ಅಪ್ಪಣೆಮಾಡಿದನು. ವೀರಭದ್ರನಾದರೋ

ವೀರಭದ್ರೇಶ್ವರಂ ಲಿಂಗಂ ಪ್ರತಿಷ್ಠಾಪ್ಯ ವಸನ್ತದಾ ।
ಶಿವಾಜ್ಞಯಾ ತದಾ ಭದ್ರೋ ಭದ್ರದಃ ಶಾಂಭವೇಷು ಸಃ ॥೨೦॥

ಅಭದ್ರದೋಽಪ್ಯಶೈವೇಷು ಉವಾಸ ಗಣಸೈರ್ವೃತಃ ।
ಬ್ರಹ್ಮಾಪಿ ಸಾಂತ್ವಯಾಮಾಸ ಮಹಾದೇವಂ ವಚೋಕ್ತಿಭಿಃ ॥೨೧॥

ಪ್ರಣಮ್ಯ ದೇವದೇವೇಶಂ ವಿಯುಕ್ತಂ ದಕ್ಷಕನ್ಯಯಾ ।
ತನ್ಮನ್ಯುನಾ ದಹ್ಯಮಾನಂ ಯಜ್ಞೇ ದಕ್ಷಾವಮಾನಿನಂ ॥೨೨॥

॥ ಬ್ರಹ್ಮೋವಾಚ ॥

ಸದಯಂ ಹೃದಯಂ ತವೈವ ಶಂಭೋ
ದಯನೀಯೋಽಯಮಿತಿ ಸ್ಮರಾಧುನಾ ಮಾಂ ।
ಇಯತಾ ಮಮತಾವಹಂ ಮನೋ ಮೇ
ಮಮ ತಾವತ್ಪ್ರಭವೇತ ಮುಕ್ತಯೇ ॥೨೩॥

---

ಶಿವಾಜ್ಞೆಯಂತೆ ಅವಿಮುಕ್ತಕ್ಷೇತ್ರಕ್ಕೆ ಹೋಗಿ ಅಲ್ಲಿ ವೀರಭದ್ರೇಶ್ವರಲಿಂಗವನ್ನು ಪ್ರತಿಷ್ಠೆಮಾಡಿ, ಅದನ್ನು ಬಿಡದೆ ಪೂಜಿಸುತ್ತಾ, ಶಿವಾಜ್ಞೆಯಂತೆ ಈಶ್ವರ ಪೂಜಕರನ್ನು ರಕ್ಷಿಸುತ್ತಾ ಅಲ್ಲಿಯೇ ನೆಲಸಿದನು. ॥೧೮-೧೯-೨೦॥

ಆದರೆ ವೀರಭದ್ರನು ಮಾತ್ರ ಅಶೈವರನ್ನು ತಪ್ಪದೆ ಶಿಕ್ಷಿಸುತ್ತಿದ್ದನು. ಇಂತಹ ಸಂದರ್ಭದಲ್ಲಿ ಬ್ರಹ್ಮನು ಮಹಾದೇವನಿಗೆ ಪದೇ ಪದೇ ವಂದಿಸುತ್ತಾ, ಸತೀವಿಯೋಗದಿಂದ ಕೋಪಿಸಿಕೊಂಡು ದಕ್ಷಯಜ್ಞವನ್ನೇ ನಾಶಗೊಳಿಸಿದ ಮಹಾದೇವನನ್ನು ಮೃದುವಾಣಿಯಿಂದ ಈ ರೀತಿ ಸ್ತುತಿಸಲಾರಂಭಿಸಿದನು. ॥೨೧-೨೨॥

“ಪರಶಿವನೇ, ನಿನ್ನ ಮನಸ್ಸು ಸದಾ ದಯಾರಸಪರಿಪೂರ್ಣವಾದದ್ದು. ಇಂತಹ ಮನಸ್ಸಿನಿಂದ ನನ್ನಲ್ಲಿ ದಯೆತೋರಿಸಲು ಅರ್ಹನೆಂದು ಭಾವಿಸು. ಇಷ್ಟು ಮಮತೆಯನ್ನು ನನ್ನಲ್ಲಿಟ್ಟು ನನ್ನನ್ನು ಉದ್ಧರಿಸುವೆಯೆಂದು ನಾನು ಭಾವಿಸಿರುವೆನು. ಅದ್ದರಿಂದ ನಾನು ಮುಕ್ತನೂ ಆಗುವೆನೆಂಬುದರಲ್ಲಿ ಸಂಶಯವೇನು? ॥೨೩॥

ಸಹಮಾನಸ್ತ್ವಮೇವೇಶೋ ಮಹೇಶೋ ಭಕ್ತವತ್ಸಲಃ ।
ಸಂಹರಾತ್ರ ಮಹಾಮನ್ಯುಂ ದಕ್ಷಂ ಚ ಸುರಸತ್ತಮಾನ್ ॥೨೪॥

ರಕ್ಷ ಜೀವಿತದಾನೇನ ಲೋಕಗುಪ್ತ್ಯರ್ಥಮೀಶ್ವರ ।
ತ್ವಯೈವ ಸೃಷ್ಟಾನಿಖಿಲಾ ಲೋಕಾಃ ಸರ್ವೇ ಚರಾಚರಾಃ ॥೨೫॥

ವಿಷ್ಣುಸ್ತ್ವತ್ಕೃಪಯಾ ಶಂಭೋ ಪಾಲಕೋಭೂತ್ತ್ವದಾಜ್ಞಯಾ ।
ಅಹಂ ಲೋಕಸಿಸೃಕ್ಷಾರ್ಥಂ ತ್ವಯಾ ಸೃಷ್ಟೋಽಸ್ಮಿ ಶಂಕರ ॥೨೬॥

ಮಮೈವ ತನುಜೋ ಮೂಢೋ ದಕ್ಷೋಽಯಂ ಶಿಕ್ಷಿತಸ್ತ್ವಯಾ ।
ವೀರಭದ್ರೇಣ ಗಣಪೈಃ ಸಂಜ್ಞಸ್ತಾಃ ಪಶವೋ ಯಥಾ ॥೨೭॥

ಸುರಾ ಇಂದ್ರಾದಯಸ್ಸರ್ವೇ ಅನಿಲಾನಲವಹ್ನಯಃ ।
ಸೂರ್ಯ ಚಂದ್ರೇಂದ್ರವರುಣಾ ವಸವೋಽಶ್ವಿಸುಧನ್ವನಃ ॥೨೮॥

ಮರುತಃ ಪಿತರಸ್ಸಾಧ್ಯಾ ನಾಗಾ ವಿದ್ಯಾಧರಾದಯಃ ।
ಕಿಂಪೂರುಷಾಪ್ಸರಸ್ಸಂಘಾನಿಋಋತಿರ್ಧನಪೋ ಯಮಃ ॥೨೯॥

---

ಎಂತಹ ಘೋರಸನ್ನಿವೇಶವನ್ನಾದರೂ ಎದುರಿಸುವ ಶಕ್ತಿಯು ನಿನ್ನಲ್ಲಿರುವುದಷ್ಟೆ. ಭಕ್ತವತ್ಸಲನೇ, ಮಹೇಶ್ವರನೇ, ನಿನಗೆ ಬಂದಿರುವ ಮಹಾಕೋಪವನ್ನು ಉಪಸಂಹರಿಸು. ಲೋಕೋಪಕಾರಕ್ಕಾಗಿ ಈಗ ಮೃತರಾಗಿರುವವರೆಲ್ಲರಿಗೂ ಜೀವನ ದಾನಮಾಡು. ಈ ಲೋಕಗಳೆಲ್ಲಾ ನಿನ್ನಿಂದಲೇ ಸೃಷ್ಟವಾದವುಗಳಲ್ಲವೆ? ಇಂತಹ ನಿನ್ನನ್ನು ನಾನು ಬಿಡದೆ ಧ್ಯಾನಮಾಡುವೆನು. ॥೨೪-೨೫॥

ಲೋಕಪಾಲನಾರ್ಥವಾಗಿ ವಿಷ್ಣುವನ್ನೂ, ಲೋಕಸೃಷ್ಟ್ಯರ್ಥವಾಗಿ ಬ್ರಹ್ಮನನ್ನೂ ನೀನೇ ಸೃಷ್ಟಿಮಾಡಿರುವೆಯಲ್ಲವೆ? ನಮ್ಮೆಲ್ಲರಿಗೂ ಜನಕನು ನೀನೇ. ನನ್ನ ಮಗನಾದ ದಕ್ಷಬ್ರಹ್ಮನು ದುಷ್ಟನಾಗಿ ವರ್ತಿಸಿದುದರಿಂದಲೇ ನೀನು ನಿನ್ನ ಗಣನಾಯಕನಾದ ವೀರಭದ್ರನಿಂದ ಶಿಕ್ಷೆಮಾಡಿಸಿದೆ. ಪಶುಗಳಂತಿರುವ ಅಜ್ಞಾನಿಗಳನ್ನು ಆಗಾಗ ಎಚ್ಚರಿಸುವವನೂ ನೀನೇ ಅಲ್ಲವೆ? ॥೨೬-೨೭॥

ಇಂದ್ರಾದಿ ದೇವತೆಗಳು, ವಾಯು, ಅಗ್ನಿ, ಸೂರ್ಯ, ಚಂದ್ರ, ಇಂದ್ರ, ವರುಣ, ವಸುಗಳು, ಅಶ್ವಿನೀದೇವತೆಗಳೂ, ಮರುದ್ಗಣಗಳು, ಪಿತೃಗಳು, ಸಾಧ್ಯರು, ನಾಗರು, ವಿದ್ಯಾಧರರು, ಕಿಂಪುರುಷರು, ಅಪ್ಸರಸ್ಸುಗಳು, ನಿಋಋತಿ, ಕುಬೇರ,

ಮುನಯೋ ಮನವೋ ದೈತ್ಯಾ ಯಕ್ಷರಕ್ಷೋ ಗಣಾನರಾಃ ।
ನದ್ಯಶ್ಚ ಸಾಗರಾಸ್ಸಪ್ತ ದ್ವೀಪಾಶ್ಚ ವನರಾಜಯಃ ॥೩೦॥

ಗರುಡಾಃ ಪತಗಾಃ ಸರ್ಪಾಃ ಲೋಕಾಸ್ಸರ್ವೇ ಚರಾಚರಾಃ ।
ಗ್ರಹಾ ಋಕ್ಷಾ ಧ್ರುವಾಂತಾ ಯೇ ರುದ್ರಾ ಭೂತಾಃ ಪಿಶಾಚಕಾಃ ॥೩೧॥

ಗುಹ್ಯಕಾಶ್ಚ ಸಗಂಧರ್ವಾ ನಾರದಾದ್ಯಾ ಮಹರ್ಷಯಃ ।
ದಿಗ್ಗಜಾಃ ಶಿಂಶುಮಾರಾದ್ಯಾಃ ಕೂರ್ಮಶೇಷಾದಯೋಽಖಿಲಾಃ ॥೩೨॥

ಧರ್ಮಾಧರ್ಮಸ್ತಥಾ ಶಾಸ್ತ್ರಂ ವೇದಾಶ್ಚ ಸ್ಮೃತಯೋಽಪಿ ಚ ।
ಪುರಾಣಜಾಲಂ ನಿಖಿಲಂ ವೈಷ್ಣವಂ ಶಾಂಭವಂ ತಥಾ ॥೩೩॥

ಆಗಮಾಶ್ಚ ತ್ವಯಾ ಪ್ರೋಕ್ತಾಃ ಸರ್ವಮೇವ ತ್ವಯಾಕೃತಂ ।
ತ್ವಯೈವ ಪಾಲಿತಂ ಶಂಭೋ ತ್ವಯ್ಯಂತೇ ಲಯಮೇಷ್ಯತಿ ॥೩೪॥

ಜಗಚ್ಚಕ್ರಮಿದಂ ಶಂಭೋ ಭೂತಂ ಭವ್ಯಂ ಭವತ್ತಥಾ ।
ತ್ವದ್ದಯಾಪಾತ್ರಭೂತಂ ಚ ನಿವೃದ್ಧಂ ಭವತು ಪ್ರಭೋ ॥೩೫॥

---

ಯಮ, ಮುನಿಗಳು, ಮನುಗಳು, ದೈತ್ಯ, ಯಕ್ಷರು, ರಕ್ಷಸ್ಸುಗಳು, ಮಾನವರು, ನದಿಗಳು, ಸಾಗರಗಳು, ಸಪ್ತದ್ವೀಪಗಳು, ವನರಾಜಿಗಳು ಇವೆಲ್ಲವೂ ನಿನ್ನಿಂದಲೇ ಸೃಷ್ಟವಾದವುಗಳು. ॥೨೮-೨೯-೩೦॥

ಗುಹ್ಯಕರು, ಗರುಡರು, ಪತಗರು, ಸರ್ಪಗಳು, ಸಮಸ್ತ ಲೋಕಗಳು, ಗ್ರಹ ನಕ್ಷತ್ರಾದಿಗಳು, ಏಕಾದಶರುದ್ರರು, ಪಿಶಾಚಗಣಗಳು, ಗುಹ್ಯಕರು, ಗಂಧರ್ವರು, ನಾರದಾದಿಗಳು, ಮಹರ್ಷಿಗಳು, ದಿಗ್ಗಜಗಳು, ಶಿಂಶುಮಾರಗಳು, ಕೂರ್ಮ, ಶೇಷ ಮುಂತಾದ ದೇವಯೋನಿಗಳೆಲ್ಲಾ ನಿನ್ನಿಂದ ಸೃಷ್ಟವಾದವುಗಳೇ. ॥೩೧-೩೨॥

ಧರ್ಮಾಧರ್ಮಗಳು, ವೇದಶಾಸ್ತ್ರಗಳು, ಸ್ಮೃತಿಪುರಾಣಗಳು, ವೈಷ್ಣವ ಮತ್ತು ಶೈವಾಗಮಗಳು ಇವೆಲ್ಲವೂ ನಿನ್ನಿಂದಲೇ ಸೃಷ್ಟವಾದವುಗಳು. ಮತ್ತು ರಕ್ಷಿತವಾದವುಗಳು. ಕೊನೆಯಲ್ಲಿ ಅವೆಲ್ಲವೂ ನಿನ್ನಲ್ಲಿಯೇ ಲಯಹೊಂದುವುವು. ॥೩೩-೩೪॥

ಮಹಾದೇವನೇ, ಕಳೆದುಹೋದ, ಮತ್ತು ಮುಂದೆ ಬರುವ, ಈಗಿರುವ ಈ ಜಗಚ್ಚಕ್ರವೆಲ್ಲಾ ನಿನ್ನ ದಯೆಯಿಂದಲೇ ಬೆಳೆಯುತ್ತಿರುವುದು. ನಿನ್ನ ಕೋಪಾಗ್ನಿ

ತ್ವತ್ಕ್ರೋಪದಗ್ಧಂ ಮಾ ಭೂಯಾಜ್ಜಗದೇತಚ್ಚರಾಚರಂ ।
ರಕ್ಷ ದೇವಾಂತ್ಸದಕ್ಷಾಂಶ್ಚ ತ್ವತ್ಕ್ರೋಪಾನಲಪೀಡಿತಾನ್ ॥೩೬॥

ಮಹಾಮನ್ಯೋ ಮನ್ಯುಮಿಮಂ ಸಂಹರಾತ್ರ ಮುಖಂ ಪ್ರತಿ ।
ಸತೀಮಾಯಾ ತವ ವಿಭೋ ಮಾಯೀ ತ್ವಂ ಪರಮೇಶ್ವರಃ ॥೩೭॥

ಕಾಲಃ ಕರೋತಿ ನಿಖಿಲಂ ಕಾಲಃ ಸಂಹರತೇ ಪ್ರಜಾಃ ।
ಕಾಲೇನ ವರ್ಧತೇ ಸರ್ವಂ ಕಾಲಕಾಲ ತವಾಜ್ಞಯಾ ॥೩೮॥

ಕಾಲಂ ಕಂಚಿತ್ಪ್ರತೀಕ್ಷಸ್ವ ಸತೀಪ್ರಕೃತಿರೀಶ್ವರೀ ।
ಜಾತಾ ಹೈಮವತೀ ಶಂಭೋ ತ್ವಮಾಪ್ನೋತಿ ಪತಿಂ ಸತೀ ॥೩೯॥

ಭಾವ್ಯೇವಂ ಭೂತಭವ್ಯೇಶ ತ್ರಿಕಾಲಜ್ಞೋಸಿ ಶಂಕರ ।
ತ್ವತ್ಪಾದಪಂಕಜಂ ಸ್ಮೃತ್ವಾ ಸರ್ವದುಃಖಕ್ಷಯೋ ಭವೇತ್ ॥೪೦॥

---

ಯಿಂದ ಅನೇಕ ದೇವರಾಕ್ಷಸರು, ದಕ್ಷಬ್ರಹ್ಮ ಇವರೆಲ್ಲರೂ ಪೀಡಿತರಾಗಿರುವರು. ಇಂತಹ ನಿನ್ನ ಭಕ್ತರನ್ನು ದಯೆಯಿಂದ ಪರಿಪಾಲಿಸು. ॥೩೫-೩೬॥

ಮಹಾಯಜ್ಞರೂಪಿಯೇ, ಈಗ ಯಾಗನಿಮಿತ್ತವಾಗಿ ಬಂದಿರುವ ಅತಿಶಯವಾದ ಕೋಪವನ್ನು ಉಪಸಂಹರಿಸು. ಈ ಸತಿಯೆಂಬವಳು ನಿನ್ನ ಮಾಯೆಯೆ ಅಲ್ಲವೆ? ಪರಮೇಶ್ವರನೆನಿಸಿದ ನಿನಗೆ ಆ ಮಾಯೆಯು ಅಧೀನಳಲ್ಲವೆ? ನೀನೇ ಮಾಯಿಯು. ಕಾಲರೂಪನೇ ನೀನು. ಅಂತಹ ಕಾಲವೇ ಪ್ರಪಂಚವನ್ನು ಸೃಷ್ಟಿಸುವುದು, ಪಾಲಿಸುವುದು, ಮತ್ತು ನಾಶಗೊಳಿಸುವುದು. ಕಾಲಕಾಲನೇ, ನಿನ್ನಾಜ್ಞೆಯಿಂದಲೇ ಈ ಜಗತ್ತೆಲ್ಲವೂ ವೃದ್ಧಿಹೊಂದುತ್ತಿರುವುದು. ॥೩೭-೩೮॥

ಸತೀದೇವಿಯೇ ಪ್ರಕೃತಿಯು, ಈಶ್ವರಿಯು, ಅವಳೇ ಹಿಮವಂತನ ಪುತ್ರಿಯಾಗಿ ಜನಿಸುವಳು. ಆ ಸತಿಯೇ ಈಗ ನಿನಗೆ ಪತ್ನಿಯಾಗಿ ಅವತರಿಸಿರುವಳು. ಭೂತಭವಿಷ್ಯದ್ವರ್ತಮಾನಕಾಲಗಳಿಗೆ ಅಧಿಪತಿಯಾದವನೇ, ನಿನ್ನ ಪಾದಪಂಕಜವನ್ನು ಸ್ಮರಿಸುವ ಮಾತ್ರದಿಂದಲೇ ಸರ್ವದುಃಖವೂ ನಾಶವಾಗುವುದರಲ್ಲಿ ಸಂಶಯವಿಲ್ಲ. ॥೩೯-೪೦॥

ದುಃಖಂ ಸತೀವಿಯೋಗೋತ್ಥಂ ನಿವರ್ತಯ ಮಹೇಶ್ವರ ।
ತ್ವಮೇವೇತ್ಥಂ ಯೋಸಿ ಸೋಸಿ ಜಾನಾಸ್ಯಾತ್ಮಾನಮಾತ್ಮನಾ ॥೪೧॥

ತ್ವಮಾತ್ಮಾ ಸರ್ವಭೂತಾನಾಮಂತಶ್ಶಾಸ್ತಾ ಸನಾತನಃ ।
ಬ್ರಹ್ಮತ್ವಂ ನಿರ್ಗುಣಸ್ಸಾಕ್ಷೀ ಚೇತಾನೇತಾ ಪರಾತ್ಪರಃ ॥೪೨॥

ಋತಂ ಸತ್ಯಂ ಪರಂ ಧಾಮ ಭೂಮಾ ಸೀಮಾ ವಿರಾಟ್ ಸ್ವರಾಟ್ ।
ಸಂರಾಟ್ ಪ್ರಜಾಪತಿರ್ವೇಧಾ ವೇದವೇದ್ಯೋ ಮಹೇಶ್ವರಃ ॥೪೩॥

ಪ್ರಣವಃ ಪ್ರಾಣ ಈಶಾನಸ್ತ್ವತ್ತೋ ನಾನ್ಯೋಽಸ್ತಿ ಕಶ್ಚನ ।
ವೇದವಾದರತಾ ಮೂಢಾ ನಾನಾಶಾಸ್ತ್ರೇಷು ವಾದಿನಃ ॥೪೪॥

ಏಕತ್ವೇನ ಬಹುತ್ವೇನ ವಿವದಂತಿ ಪರಸ್ಪರಂ ।
ನಾನಾಕಾರೇಣ ಭ್ರಾಂತಂ ತ್ವಾಮೇಕಮೇವ ಸನಾತನಂ ॥೪೫॥

ನ ವೇದ ಮಹಿಮಾಂ ಕಶ್ಚಿತ್ತವ ಶಂಭೋ ಸುರೇಶ್ವರ ।
ಇಂದ್ರಮಿತ್ರಾದಿವಾಕ್ಯೈಶ್ಚ ಮೋಹಿತಾಸ್ತವ ಮಾಯಯಾ ॥೪೬॥

---

ಪರಶಿವನೇ, ಸತೀದೇವಿಯ ವಿಯೋಗದಿಂದಾಗಿರುವ ದುಃಖವನ್ನು ಮರೆತು ಬಿಡು. ಪರಮಾತ್ಮರೂಪಿಯಾದ ನಿನಗೆ ದುಃಖವೆಲ್ಲಿಂದಬಂದೀತು ? ಸರ್ವಪ್ರಾಣಿಗಳಲ್ಲಿಯೂ ನೀನು ಆತ್ಮನಂತೆ ಅಡಗಿರುವೆ. ಪ್ರಾಣಿಗಳ ಹೃದಯಕುಹರದಲ್ಲಿ ಅಡಗಿ ಅವರವರ ಕರ್ಮಾನುಸಾರವಾದ ಶಿಕ್ಷೆಯನ್ನು ಕೊಡುವವನೂ ನೀನೇ ಆಗಿರುವೆ. ನಿರ್ಗುಣಬ್ರಹ್ಮನೂ ನೀನೇ. ಪ್ರಾಣಿಗಳಿಗೆ ಚೈತನ್ಯಪ್ರದನೆನಿಸಿ ಅವರನ್ನು ಸನ್ಮಾರ್ಗಕ್ಕೆ ಎಳೆಯುವವನೂ ನೀನೇ. ॥೪೧-೪೨॥

ಕಾಯಿಕವಾದ ಮತ್ತು ಮಾನಸಿಕವಾದ ಸತ್ಯಸ್ವರೂಪನು ನೀನೇ. ಪ್ರಪಂಚರೂಪಿಯೂ, ಚಕ್ರವರ್ತಿಸ್ವರೂಪನೂ, ಪ್ರಪಂಚದ ಸೃಷ್ಟಿಕರ್ತನೂ, ಪರಬ್ರಹ್ಮರೂಪಿಯೂ ನೀನೇ ಆಗಿರುವೆ. ಅಂತಹ ನಿನ್ನನ್ನು ವೇದಮಾರ್ಗದಲ್ಲಿ ಚರ್ಚೆ ಮಾಡುವ ಅನೇಕ ಶಾಸ್ತ್ರಕಾರರು, ಪರಮಾತ್ಮನು ಒಬ್ಬನೇ ಎಂದೂ, ಕೆಲವರು ಜೀವಬ್ರಹ್ಮರು ಬೇರೆ ಎಂದೂ, ದ್ವೈತ, ಅದ್ವೈತಭಾವನೆಗಳಿಂದ ನಾನಾರೀತಿ ಉಪಾಧಿಭೇದದಿಂದ ತೋರುತ್ತಿರುವನೆಂದೂ ನಿರೂಪಿಸುತ್ತಿರುವರು. ನಿಜವಾಗಿ ನಾನಾರೂಪವಾಗಿ ಪ್ರಕಾಶಿಸುವವನು ನೀನೊಬ್ಬನೇ. ॥೪೩-೪೪-೪೫॥

ತವ ಮಾಯಾಮಯೈಃ ಪಾಶೈರ್ಬದ್ಧಾ ಸರ್ವೇ ಸುರಾಸುರಾಃ ।
ಅಸ್ವತಂತ್ರಾ ಮಹಾದೇವ ನೈಷಾಮಾಗೋಽಸ್ತಿ ಸಂಪ್ರತಿ ॥೪೭॥

ಪ್ರಾರ್ಥಿತೋ ಬ್ರಹ್ಮಣಾ ತತ್ರ ಭಗವಾನ್ ಪರಮೇಶ್ವರಃ ।
ಕಿಂಚಿನ್ನಿಮೀಲ್ಯ ಚಾತ್ಮಾನಂ ಪ್ರಪಶ್ಯ ಶಮಯಾ ಯಯೌ ॥೪೮॥

ಹತಾನಾಂ ತತ್ರ ದೇವಾನಾಂ ಪ್ರದದೌ ಪೂರ್ವವತ್ತನುಂ ।
ಇಂದ್ರಸ್ಯ ವಿಷ್ಣೋರ್ದಕ್ಷಸ್ಯ ಮಂತುಮಜ್ಞಾನತಃ ಕೃತಂ ॥೪೯॥

ಸಂಜಹಾರ ತದಾ ಮನ್ಯುಂ ಸುರಾನ್ ಪ್ರತಿ ಮಹೇಶ್ವರಃ ।
ಪೂಷ್ಣೋ ದಕ್ಷ ಮುನೀಂದ್ರಾಣಾಂ ಸಹೇ ದೇವಾಪರಾಧಕಂ ॥೫೦॥

ಭ್ರಂಶಿತಾಂಗಾನಿ ದೇವಾನಾಂ ಸಮಯುಜ್ಯಂತ ತತ್ರ ಹಿ ।
ಗಣಾನಾಂ ತತ್ರ ದೇವಸ್ಯ ಪ್ರಸಾದೇನ ಮಹೇಶಿತುಃ ॥೫೧॥

---

ಸುರೇಶ್ವರನೇ, ನಿನ್ನ ನಿಜವಾದ ಮಹಿಮೆಯನ್ನು ಅರಿತವರು ಯಾರೂ ಇಲ್ಲ. "ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ" ಎಂಬ ವೇದವಾಕ್ಯಾನುಸಾರವಾಗಿ ನಿನ್ನನ್ನು ನಾನಾರೂಪನಾಮಭೇದಗಳಿಂದ ನಿರೂಪಿಸುತ್ತಿರುವರು. ನಿನ್ನ ಮಾಯಾಸಂಸರ್ಗದಿಂದ ಆ ರೀತಿ ಜನರಿಗೆ ಭ್ರಾಂತಿಯನ್ನುಂಟುಮಾಡುತ್ತಿರುವೆ. ಈ ದೇವರಾಕ್ಷಸರೂ ಸಹ ಅದೇ ಮಾಯೆಯಿಂದ ಬದ್ಧರಾಗಿ ಸ್ವಸ್ವರೂಪವನ್ನು ಅರಿಯದವರಾಗಿದ್ದಾರೆ. ಮಹಾದೇವನೇ, ಈಗಂತೂ ನಾವು ಕೇವಲ ಪರಾಧೀನರಾಗಿದ್ದೇವೆ. ನಿನ್ನ ಸಾಮರ್ಥ್ಯವನ್ನು ಅರಿಯಲು ನಮಗೆ ಯಾವ ಶಕ್ತಿಯೂ ಇಲ್ಲದಂತಾಗಿದೆ." ॥೪೬-೪೭॥

ಹೀಗೆ ಬ್ರಹ್ಮನು ನಾನಾರೀತಿ ಪರಶಿವನನ್ನು ಪ್ರಾರ್ಥಿಸಲು, ಆಗ ಪರಶಿವನ ಅನುಗ್ರಹದಿಂದ ಸತ್ತು ಬಿದ್ದಿದ್ದ ಸಕಲ ದೇವತೆಗಳಿಗೂ ಕಳೆದ ಪ್ರಾಣವು ಮತ್ತೆ ಬಂದಿತು. ಇಂದ್ರ, ವಿಷ್ಣು, ದಕ್ಷ, ಮತ್ತಿತರ ದೇವತೆಗಳು, ಮುನಿಗಳು, ಪೂಷ ದೇವತೆಗಳು ಇವರು ಮಾಡಿದ ಅಜ್ಞಾನಕೃತವಾದ ಸಕಲಾಪರಾಧವನ್ನೂ ಕ್ಷಮಿಸುತ್ತೇನೆಂದು ಭರವಸೆಯಿತ್ತನು. ॥೪೮-೪೯-೫೦॥

ದೇವತೆಗಳ ಅಂಗಗಳು ಬಾಣಘಾತದಿಂದ ಅಸ್ತವ್ಯಸ್ತವಾಗಿ ಅಲ್ಲಲ್ಲಿ ಬಿದ್ದಿದ್ದವಷ್ಟೆ. ಅವೆಲ್ಲವನ್ನೂ ಯಥಾಸ್ಥಾನದಲ್ಲಿ ಜೋಡಿಸಿಟ್ಟೊಡನೆಯೇ ಆ ದೇಹಗಳಲ್ಲಿ

ವಿಷ್ಣುಃ ಸಮಾಗತೋ ಲಕ್ಷ್ಮ್ಯಾ ಪ್ರಣಮ್ಯಾಥ ಮಹೇಶ್ವರಂ ।
ಸಂಸ್ಥಿತೋ ವೇಧಸಾ ತತ್ರ ದೇವೈರ್ದಕ್ಷಃ ಸಮಾಗತಃ ॥೫೨॥

ಲಬ್ಧಸಂಜ್ಞೋ ಭವೇ ಭಕ್ತೋ ಬಭೂವಾತೀವ ವಿಹ್ವಲಃ ।
ಪ್ರಣಮ್ಯ ರಕ್ಷ ರಕ್ಷೇತಿ ಸಾಶ್ರುನೇತ್ರಃ ಸ್ತುವದ್ಧರಂ ॥೫೩॥

॥ ದಕ್ಷ ಉವಾಚ ॥

ಅವ ಶಿವ ಸದಯಂ ಪಿನಾಕಪಾಣೇ
ಹೃದಯಂ ಮೇ ತವ ಪಾದಪದ್ಮಸದ್ಮ ।
ನ ವಿಮುಂಚತಿ ಮುಂಚತೀಶ ಶೋಕಂ
ನ ಶಶಾಂಕೋಽಪಿ ಸದಾ ಮುದಾಹೃದೇ ಮೇ ॥೫೪॥

ಅವತೇ ಭವತೇ ನಮಸ್ಕ್ರಿಯಾ ಮೇ
ಭವ ತೇ ದೇವ ಶತಪ್ರಸಾದಿನೇ ।
ಹರತೇ ವೃಜಿನೌಘಸಂಘಮೇತ
ದ್ಧರತೇ ದೇವಕಟಾಕ್ಷಕೋಣಪಾತೇ ॥೫೫॥

---

ಶಿವಾನುಗ್ರಹದಿಂದ ಪ್ರಾಣವಾಯುವು ಓಡಾಡಲಾರಂಭಿಸಿತು. ಅತಿವಿಹ್ವಲನಾಗಿದ್ದ ದಕ್ಷಬ್ರಹ್ಮನಿಗೆ ಮತ್ತೆ ಪ್ರಜ್ಞೆ ಬಂದಂತಾಯಿತು. ವಿಷ್ಣು, ಲಕ್ಷ್ಮೀ ಬ್ರಹ್ಮ ಇವರೊಡಗೂಡಿ ಬಂದ ದಕ್ಷಬ್ರಹ್ಮನು ಕಣ್ಣೀರು ಸುರಿಸುತ್ತಾ ಈಶ್ವರನಿಗೆ ವಂದಿಸುತ್ತಾ ಈ ರೀತಿ ಸ್ತೋತ್ರಮಾಡತೊಡಗಿದನು. ॥೫೧-೫೨-೫೩॥

"ಪಿನಾಕಪಾಣಿಯೇ, ಶಂಕರನೇ, ನಿನ್ನ ಹೃದಯವು ಸದಾ ದಯಾಭರಿತವಾದದ್ದಲ್ಲವೆ? ನಿನ್ನ ಪಾದಪದ್ಮಧ್ಯಾನದಲ್ಲಿಯೇ ಸದಾ ನನ್ನ ಮನಸ್ಸು ಆನಂದ ಹೊಂದುತ್ತಲಿದೆ. ಆದರಿಂದ ನನಗೆ ಎಂದೂ ದುಃಖವು ಪ್ರಾಪ್ತವಾಗಲಾರದು. ನಿನ್ನ ಪಾದಧ್ಯಾನದಿಂದಾಗುವಷ್ಟು ಆನಂದವು ನನಗೆ ಪೂರ್ಣಚಂದ್ರನಿಂದಲೂ ಲಭಿಸಲಾರದು. ॥೫೪॥

ಮಹಾದೇವನೇ, ಭಕ್ತರಿಗೆ ಅನುಗ್ರಹಪ್ರದನಾಗಿರುವವನೇ, ನಿನಗೆ ನಮಸ್ಕಾರವು. ನಿನ್ನ ಪಾದವಂದನೆಯಿಂದಲೂ, ನಿನ್ನ ಕರುಣಾಕಟಾಕ್ಷಪಾತದಿಂದಲೂ ನಿನ್ನ ಭಕ್ತರ ಪಾಪರಾಶಿಯೆಲ್ಲವೂ ನಾಶವಾಗಿ ಅವರಿಗೆ ನಿಜವಾದ ಸುಖವು ಲಭಿಸುವುದರಲ್ಲಿ ಸಂಶಯವಿಲ್ಲ. ॥೫೫॥

ಸ ದಕ್ಷಪರಮಸ್ತುತ್ವಾ ಪ್ರೀತ್ಯಾಯುಕ್ತೋ ಮಹೇಶ್ವರಃ ।
ಯಜ್ಞಸ್ಯ ಚ ಶಿರಶ್ಛಿನ್ನಂ ಪುನಃ ಪ್ರಾವರ್ತಯದ್ಯಥಾ ॥೫೬॥

ಗಾಣಾಪತ್ಯಂ ದದೌ ತಸ್ಮೈ ದಕ್ಷಾಯಾಕ್ಲಿಷ್ಟಕರ್ಮಣೇ ।
ದಕ್ಷೋ ನತ್ವಾ ಮಹಾದೇವಂ ಯಜ್ಞಶೇಷಂ ಸಮಾಪ್ಯ ತತ್ ॥೫೭॥

ಋತ್ವಿಕ್ಪತ್ನ್ಯಾದಿಸಹಿತಾನ್ ದಕ್ಷಿಣಾಭಿಃ ಪ್ರತರ್ಪ್ಯತಾನ್ ।
ಅವಿಮುಕ್ತಂ ಯಯೌ ದಕ್ಷಶ್ಶಿವನಿಂದಾಕ್ಷದಂ ಸಃ ॥೫೮॥

ಪ್ರಮುಚ್ಯೇಯಮಿತಿ ಸ್ವೈರಂ ತಪ ಉಗ್ರಂ ಸಮಾಸ್ಥಿತಃ ।
ದಕ್ಷೇಶ್ವರಾಭಿಧಂ ಲಿಂಗಂ ಪ್ರತಿಷ್ಠಾಪ್ಯಾರ್ಚಯದ್ಧರಂ ॥೫೯॥

ಭಸ್ಮರುದ್ರಾಕ್ಷಪುಂಡ್ರಾಂಕೋ ರುಪ್ರಪಂಚಾಕ್ಷರಾದರಃ ।
ಗಂಗಾಂಭಸಾಥ ಸಂಸಿಚ್ಯ ತ್ರಿಕಾಲಂ ಬಿಲ್ವಪಲ್ಲವೈಃ ॥೬೦॥

---

ಹಾಗೆ ಸ್ತುತಿಸಿದ ದಕ್ಷನಿಗೆ ಶಂಕರನು ಪ್ರಸನ್ನನಾಗಿ ಯಜ್ಞಪುರುಷನಿಗೆ ಛಿನ್ನವಾದ ಶಿರಸ್ಸನ್ನು ಮತ್ತೆ ಸರಿಪಡಿಸಿಕೊಟ್ಟು, ಬಹುಕಷ್ಟದಿಂದ ಯಾಗಮಾಡಿ ಮುಗಿಸಿದ ದಕ್ಷನಿಗೆ ಗಾಣಾಪತ್ಯಪದವಿಯನ್ನಿತ್ತನು. ದಕ್ಷಬ್ರಹ್ಮನೂ ಸಹ ಅದಕ್ಕಾಗಿ ತೃಪ್ತಿಪಟ್ಟು ಯಜ್ಞಶೇಷವನ್ನು ಮುಗಿಸಿ ಮಹಾದೇವನಿಗೆ ಸಂತೋಷವನ್ನುಂಟು ಮಾಡಿದನು. ॥೫೬-೫೭॥

ಅನಂತರ ಯಾಗದಲ್ಲಿ ಋತ್ವಿಕ್ಕುಗಳಾದವರಿಗೂ ಅವರ ಪತ್ನಿಯರಿಗೂ ಯಥೋಚಿತವಾಗಿ ದಕ್ಷಿಣಾದಿಗಳನ್ನರ್ಪಿಸಿ, ಅವರನ್ನು ತೃಪ್ತಿಪಡಿಸಿ, ಯಾಗಮಧ್ಯ ದಲ್ಲಿ ತಾನು ಮಾಡಿದ್ದ ಶಿವನಿಂದಾಪಾಪಪರಿಹಾರಾರ್ಥವಾಗಿ ಕಾಶೀಕ್ಷೇತ್ರಕ್ಕೆ ತೆರಳಿ ದನು. ಅಲ್ಲಿ ನಿಂತು ದಕ್ಷಬ್ರಹ್ಮನು ಉಗ್ರವಾದ ತಪಸ್ಸನ್ನು ಕೈಕೊಂಡು, ದಕ್ಷೇಶ್ವರ ನೆಂಬ ಹೆಸರಿನಿಂದ ಒಂದು ಶಿವಲಿಂಗಪ್ರತಿಷ್ಠೆಮಾಡಿದನು. ಹಾಗೆಯೇ ದಕ್ಷಬ್ರಹ್ಮನು ತ್ರಿಕಾಲಗಳಲ್ಲಿಯೂ ಶಿವಲಿಂಗವನ್ನು ಪೂಜಿಸುತ್ತಾ, ಭಸ್ಮರುದ್ರಾಕ್ಷಧಾರಿಯಾಗಿ, ಶಿವಪಂಚಾಕ್ಷರವನ್ನೇ ಜಪಿಸುತ್ತಾ, ಗಂಗಾನೀರಿನಿಂದ ಶಿವಲಿಂಗಾಭಿಷೇಕಮಾಡುತ್ತಾ ಶಿವಲಿಂಗಕ್ಕೆ ಬಿಲ್ವಪತ್ರಾದಿಗಳನ್ನು ಸಮರ್ಪಿಸುತ್ತಾ ಕಾಲಕಳೆಯುತ್ತಿದ್ದನು. ॥೫೮-೫೯-೬೦॥

ಸ್ತುವನ್ನೇವಂ ವಿರೂಪಾಕ್ಷಂ ದ್ವಾದಶಾಬ್ದಮುವಾಸ ಹ ॥೬೧॥

॥ ದಕ್ಷ ಉವಾಚ ॥

ಪಶುಪಾಶಹೃತೇ ನಮೋ ನಮಸ್ತೇ
ಶರಣಂ ಚರಣಾಂಬುಜಂ ಪ್ರಪದ್ಯೇ ।
ಪಶುಪತಯೇ ಕರವಾಣಿ ವಾಣಿಮಿಷ್ಟಾಂ
ಶರಣಂ ಯಾಮಿ ಶರಣ್ಯಮಿಂದುಮೌಳಿಂ ॥೬೨॥

॥ ದೇವಾ ಊಚುಃ ॥

ದೇವಾಃ ಪ್ರಣಮ್ಯ ದೇವೇಶಂ ಪ್ರಸಾದ್ಯ ಪರಮೇಶ್ವರಂ ।
ಮೌಲಿಬದ್ಧಾಂಜಲಿಕರಾಸ್ತುಷ್ಟುವುಸ್ಸರ್ವ ಏವ ತೇ ॥೬೩॥

ಚಂಡಾಂಶುನಂದನಮದೋದ್ಧತಬಾಹುದಂಡ
ಸಂಲಗ್ನಪಾಶವರಯುಕ್ತದ್ವಿಜಾರ್ತಿಖಂಡ ।
ವೇತಂಡವಕ್ತ್ರಕಲಿತೇಕ್ಷಣತುಂಡಗಂಡ
ಸತ್ಕುಂಡಲೀಶವರಕುಂಡಲಮಂಡಿತಾಸ್ಯ ॥೬೪॥

---

ಮತ್ತು ನಿತ್ಯವೂ ಶಿವಪೂಜಾನಂತರದಲ್ಲಿ ದಕ್ಷಬ್ರಹ್ಮನು ಮಹಾದೇವನನ್ನು ಹನ್ನೆರಡು ವರ್ಷ ಈರೀತಿ ಸ್ತುತಿಸುತ್ತಿದ್ದನು. "ಪಶುಗಳಂತೆ ಅಜ್ಞಾನಿಗಳಾಗಿರುವ ನಮ್ಮ ಕಷ್ಟವನ್ನೆಲ್ಲಾ ಪರಿಹರಿಸಿದ ಮಹಾದೇವನೇ, ನಿನ್ನ ಪಾದಾರವಿಂದಗಳನ್ನು ತಪ್ಪದೆ ನಾನು ಧ್ಯಾನಿಸುವೆನು. ಪಶುಪತಿಯೆನಿಸಿದ ನಿನ್ನನ್ನು ಸಂಪೂರ್ಣವಾದ ವಾಕ್ಸಂಪತ್ತಿನಿಂದ ಪೂಜಿಸುವೆನು. ಮತ್ತು ಇಂದುಮೌಳಿಯಾದ ನಿನ್ನನ್ನೇ ನಾನು ಸದಾ ರಕ್ಷಕನನ್ನಾಗಿ ಪಡೆಯುವೆನು." ॥೬೧-೬೨॥

ಆಗ ದೇವತೆಗಳೂ ಸಹ ಪರಮೇಶ್ವರನಿಗೆ ಪದೇ ಪದೇ ವಂದಿಸುತ್ತಾ ಅಂಜಲಿಬದ್ಧರಾಗಿ ಸಂತೋಷದಿಂದ ಈರೀತಿ ಪರಶಿವನನ್ನು ಸ್ತುತಿಸಿದರು. "ಸೂರ್ಯಪುತ್ರನಾದ ಯಮನು ನಿರ್ದಯನಾಗಿ ಈಶ್ವರಭಕ್ತನೆಂದು ಗೌರವಿಸದೆ ಶಿವಪೂಜಾ ಕಾಲದಲ್ಲಿ ಮಾರ್ಕಂಡೇಯನ ಪ್ರಾಣವನ್ನಪಹರಿಸಲು ಹೋದಾಗ, ಅವನನ್ನು ತನ್ನ ಪಾಶಗಳಿಂದ ಬಿಗಿದು ಅವನ ಗರ್ವವನ್ನು ನಾಶಮಾಡಿದ ಮಹಾನುಭಾವನೇ, ನಿನ್ನ ಪೂರ್ಣ ಕಟಾಕ್ಷವು ಗಜವದನನಾದ ಗಣಪತಿಯ ಮೇಲೆ ಸಂಬಂಧಿಸಿರುವುದಲ್ಲವೆ?

ವಿವಶಾಃ ಪಶವೋ ವಯಂ ಮಹೇಶ
ಭವತಾಂತಾ ಕಿಲ ಕಾಮಪಾಶಬದ್ಧಾಃ ।
ಪಶುಪಾಶವಿಮೋಚಕೋಽಸಿ ಶಂಭೋ
ಪಶುಪಸ್ತ್ವಂ ಪರಿಮೋಚಯಾಶು ನಸ್ತ್ವಂ ॥೬೫॥

॥ ಶ್ರೀ ಈಶ್ವರ ಉವಾಚ ॥

ತದ್ದೇವಸ್ತುತ್ಯವಾಕ್ಯೇನ ಶಿಪಿವಿಷ್ಟೋ ಮಹೇಶ್ವರಃ ।
ಪ್ರಹರ್ಷಮತುಲಂ ಲೇಭೇ ತಾನುವಾಚಾಮರೇಶ್ವರಾನ್ ॥೬೬॥

ಕ್ಷಾಂತಾಪರಾಧಾಸ್ಸರ್ವೇಽಪಿ ದೇವಾಸ್ಸಂತು ಗತವ್ಯಥಾಃ ।
ಭಜಂತು ಸ್ವಾನಿಧಿಷ್ಣ್ಯಾನಿ ಯೂಯಂ ಮೋದಥ ವಿಷ್ಟಪೇ ॥೬೭॥

ತತ್ರ ಶಂಭುವಚಶ್ಶ್ರುತ್ವಾ ನತ್ವಾ ದೇವಂ ಮಹೇಶ್ವರಂ ।
ಯಯುಸ್ತೇ ಶರಣಂ ದೇವಂ ಹರ್ಷಿತಾಸ್ಸ್ವಾಂಗನಾಯುತಾಃ ॥೬೮॥

ದಿವ್ಯಾಂಗರಾಗಭೋಗಾಢ್ಯಾ ವಿಮಾನೈಸ್ತೇ ತ್ರಿವಿಷ್ಟಪಂ ।
ಇಂದ್ರೋ ನತ್ವಾ ಮಹಾದೇವಪದಾಂಬುಜಯುಗಂ ತದಾ ॥೬೯॥

---

ನಿನಗೆ ಆದಿಶೇಷನೇ ಆಭರಣವಾಗಿರುವನಲ್ಲವೆ ? ಸತ್ಕುಂಡಲಗಳಿಂದ ಅಲಂಕೃತನಾಗಿರುವ ಮಹಾದೇವನೇ, ನಿನಗೆ ವಂದನೆಯು. ॥೬೩-೬೪॥

ಮಹೇಶ್ವರನೇ, ನಾವು ಏನೂ ಅರಿಯದ ಪಶುಗಳು. ಕಾಮಪಾಶಕ್ಕೆ ಸಿಕ್ಕಿ ಸಂಸಾರದ ಕಷ್ಟದಿಂದ ಬೆಂಡಾಗಿರುವೆವು. ನೀನಾದರೋ ನಮ್ಮಂತಹ ಪಶುಗಳ ಪಾಶವನ್ನು ತಪ್ಪಿಸುವ ಸಾಮರ್ಥ್ಯವುಳ್ಳವನು. ನೀನೇ ಪಶುಪತಿಯು. ಅಂತಹ ನೀನು ನಮ್ಮನ್ನು ದುಃಖದಿಂದ ತಪ್ಪಿಸಿ ಕಾಪಾಡು. ॥೬೫॥

ದೇವತೆಗಳ ಈ ಸ್ತೋತ್ರದಿಂದ ಸಂತುಷ್ಟನಾದ ಮಹೇಶ್ವರನು ಅವರನ್ನು ಕುರಿತು ಹೀಗೆ ಅಭಯಪ್ರದಾನಮಾಡಿದನು. "ಎಲೈ ದೇವತೆಗಳಿರಾ, ಇನ್ನು ನೀವು ದುಃಖವನ್ನು ದೂರಮಾಡಿರಿ. ನಿಮ್ಮ ಅಪರಾಧಗಳನ್ನೆಲ್ಲಾ ಮನ್ನಿಸಿರುವೆನು. ಇನ್ನು ನೀವು ನಿಮ್ಮ ನಿಮ್ಮ ಸ್ಥಾನಗಳಿಗೆ ಸಂತೋಷದಿಂದ ತೆರಳಿರಿ." ॥೬೬-೬೭॥

ಶಂಕರನ ದಯಾಪೂರಿತಗಳಾದ ಆ ಮಾತುಗಳನ್ನು ಕೇಳಿ, ಸಕಲ ದೇವತೆಗಳೂ ಹರ್ಷಿತರಾಗಿ ಪರಶಿವನಿಗೆ ವಂದಿಸುತ್ತಾ ತಮ್ಮ ತಮ್ಮ ಪ್ರಿಯರೊಡನೆ

ಪ್ರಪನ್ನಃ ಪರಯಾ ಭಕ್ತ್ಯಾ ಸ್ತೌತಿ ದೇವಂ ಮಹೇಶ್ವರಂ ।
ಮೌಲಿಬದ್ಧಾಂಜಲಿಪುಟೋ ಸಾನಂದಜಲಲೋಚನಃ ॥೭೦॥

॥ ಇಂದ್ರ ಉವಾಚ ॥

ಶರಣಂ ಕಿಲ ಯಾಮಿ ಸಾಮಿಸೋಮ
ಪ್ರಥನೋತಂ(?) ಸ ಕಿರೀಟಕೋಟಿಜೂಟಂ ।
ಕರಟಿತ್ವಕ್ಪಟಶೋಭಿಸತ್ಕಟಿಂ ತಂ
ಭಜ ಚೇತಸ್ತಟಿನೀಜಟಂ ಮಹೇಶಂ ॥೭೧॥

ಇತಿ ಸ್ತುತ್ವಾ ಮಹಾದೇವಮಿಂದ್ರಃ ಸ್ವಗುರುಣಾ ಸಹ ।
ದೇವರಾಜ್ಯಂ ಸುರೈಃ ಪ್ರಾಜ್ಯಂ ಯಯೌ ಶಾಸಿತುಮೋಜಸಾ ॥೭೨॥

ವಿಷ್ಣುರಪ್ಯತಿಹೃಷ್ಟಾತ್ಮಾ ಅಷ್ಟಮೂರ್ತಿಂ ಕೃಪಾಕರಂ ।
ನತ್ವಾ ಕೃತಾರ್ಥಯಾ ವಾಚಾ ಸ್ತೌತಿ ದೇವಮುಮಾಧವಂ ॥೭೩॥

ಸ್ವಾಪರಾಧಂ ತದಾ ವಿಷ್ಣುಃ ಕ್ಷಾಮಿತುಂ ಪರಮೇಶ್ವರಂ ।
ಮೌಲಿಬದ್ಧಾಂಜಲಿಪುಟೋ ಲಕ್ಷ್ಮ್ಯಾ ಸ ಗರುಡೇನ ಚ ॥೭೪॥

---

ದಿವ್ಯಾಂಗರಾಗಭೂಷಿತರಾಗಿ ಸ್ವರ್ಗಲೋಕವನ್ನು ಸೇರಿದರು. ಇಂದ್ರನಾದರೋ ಮಹಾದೇವನ ಪಾದದ್ವಯಗಳಿಗೆ ವಂದಿಸುತ್ತಾ ಅಂಜಲಿಬದ್ಧನಾಗಿ, ಈ ರೀತಿ ಸ್ತುತಿಸಲಾರಂಭಿಸಿದನು. ॥೬೮-೬೯-೭೦॥

ಅರ್ಧಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿ, ಮಣಿಮಯವಾದ ಕಿರೀಟವನ್ನೂ ಜಟಾಜೂಟವನ್ನೂ, ಗಜಚರ್ಮಾಂಬರವನ್ನೂ ಉಟ್ಟು, ಗಂಗಾನದಿಯನ್ನೇ ಶಿರಸ್ಸಿನಲ್ಲಿ ಕಟ್ಟಿನಿಲ್ಲಿಸಿರುವ ಮಹೇಶ್ವರನೇ, ನಾನು ನಿನ್ನನ್ನೇ ಶರಣುಹೊಂದುವೆನು."॥೭೧॥

ಆ ರೀತಿ ಸ್ತುತಿಸಿ ಇಂದ್ರನು ತನ್ನ ಗುರುವಾದ ಬೃಹಸ್ಪತ್ಯಾಚಾರ್ಯನೊಡಗೂಡಿ ತನ್ನ ರಾಜ್ಯವನ್ನು ರಕ್ಷಿಸಿಕೊಂಡಿರಬೇಕೆಂಬ ಆಸೆಯಿಂದ ಹಿಂದಿರುಗಿ ಹೋದನು. ವಿಷ್ಣುವಾದರೋ ಅತಿ ಸಂತೋಷದಿಂದ, ಅಷ್ಟಮೂರ್ತಿಯಾದ ಮತ್ತು ಕೃಪಾಳುವಾದ ಮಹಾದೇವನನ್ನು ನಾನಾರೀತಿಯಾಗಿ ಸ್ತುತಿಸಿ, ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತಾ, ಅಂಜಲಿಬದ್ಧನಾಗಿ ಲಕ್ಷ್ಮಿಯೊಡಗೂಡಿ ಗರುಡಾರೂಢನಾಗಿ ಪ್ರಯಾಣಮಾಡುತ್ತಾ ಈ ರೀತಿ ಸ್ತುತಿಸಿದನು. ॥೭೨-೭೩-೭೪॥

॥ ವಿಷ್ಣುರುವಾಚ ॥

ಪರಿಪಾಹಿ ವಿಭೋ ಮಹೇಶ ಶಂಭೋ
ಸುರವೃಂದೋತ್ತಮಪುಂಗವೋರುಕೇತೋ ।
ಭವ ಭರ್ಗಾಂಧಕಸೂದನಾಂತಕಾರೇ
ಪ್ರಮಥಾಧೀಶ ಸನಾಥಯಾಶು ಮಾಂ ತ್ವಂ ॥೭೫॥

ವಸುಧಾಧೃಗ್ವರಹಾರಚಾಪಪಾಣೇ
ವಸುಧಾಸ್ಯಂದನಸಂಸ್ಥ ಚಿತ್ರಶಕ್ತೇ ।
ವಸುಧಾರಾಧಿಪಪೂಜ್ಯ ದೇವ ಶಂಭೋ
ವಸುಧಾಧೃಕ್ತನಯಾ ಪ್ರಿಯ ತೇ ನಮಸ್ತೇ ॥೭೬॥

ಕ್ಷಮಸ್ವಾಪರಾಧಂ ಮದೀಯಂ ಮಹೇಶ
ವಿಭೋ ಮಾಯಯಾ ತೇ ನಿಬದ್ಧೋಽಸ್ಮಿ ದೀನಃ ।
ಅಹಂ ದೇವಮನ್ಯಂ ನ ಮನ್ಯೇ ತ್ವದನ್ಯಂ
ಮಹಾದೇವ ಶಂಭೋ ಪ್ರಸೀದ ಪ್ರಸೀದ ॥೭೭॥

---

ವಿಭೋ, ಮಹೇಶ್ವರನೇ, ದೇವದೇವನೇ, ವೃಷಭಧ್ವಜನೇ, ಪರಶಿವನೇ, ಅಂಧಕಸೂದನನೇ, ಕಾಲಕಾಲನೇ, ನನ್ನನ್ನು ಸನಾಥನನ್ನಾಗಿ ಮಾಡು. ನನ್ನ ಅಪರಾಧವನ್ನೆಲ್ಲಾ ಕ್ಷಮಿಸಿ ನನ್ನನ್ನು ರಕ್ಷಿಸು. ॥೭೫॥

ಭೂಮಿಯನ್ನೇ ಹೊತ್ತಿರುವ ಆದಿಶೇಷನನ್ನೇ ಹಾರವನ್ನಾಗಿಯೂ ಗಿರಿಯನ್ನೇ ಚಾಪವನ್ನಾಗಿಯೂ ಧರಿಸಿದವನೇ, ಭೂಮಿಯನ್ನೇ ರಥವನ್ನಾಗಿ ಮಾಡಿಕೊಂಡವನೇ, ನಿನ್ನನ್ನು ಕುಬೇರನು ಸದಾ ನಮಸ್ಕರಿಸುತ್ತಾ ಶರಣುಹೊಂದುತ್ತಿರುವನು. ಪ್ರಪಂಚವನ್ನೇ ಹೊತ್ತಿರುವ ನಗರಾಜಪುತ್ರಿಯಾದ ಪಾರ್ವತಿಯಿಂದ ಆಲಿಂಗಿಸಲ್ಪಟ್ಟಿರುವ ಮಹಾದೇವನೇ, ನಮ್ಮನ್ನು ರಕ್ಷಿಸು. ॥೭೬॥

ಮಹೇಶ್ವರನೇ, ನನ್ನ ಅಪರಾಧವನ್ನು ಕ್ಷಮಿಸು. ನಾನು ನಿನ್ನ ಮಾಯೆಯಿಂದ ಆವೃತನಾಗಿದ್ದೇನೆ. ನಿನ್ನ ಹೊರತು ಬೇರೆ ಯಾವ ದೇವರೂ ನನಗಿಲ್ಲ. ಮಹಾದೇವನೇ, ಶಂಭುವೇ ನನ್ನಲ್ಲಿ ಪ್ರಸನ್ನನಾಗು, ನನಗೆ ಅನುಗ್ರಹಿಸು." ॥೭೭॥

॥ ಸೂತ ಉವಾಚ ॥

ಸ ವಿಷ್ಣುವಚಸಾ ತುಷ್ಟೋ ಮಹಾದೇವೋ ಮಹೇಶ್ವರಃ ।
ಉವಾಚ ಮಾಧವಂ ತತ್ರ ಬ್ರಹ್ಮಾಣಂ ವೀಕ್ಷ್ಯ ಶಂಕರಃ ॥೭೮॥

॥ ಶ್ರೀ ಈಶ್ವರ ಉವಾಚ ॥

ಅಶಾಂಭವಜನಾವನಂ ಸುರವರಾದ್ಯದುಃಖಾವನಂ
ಭವೇತ್ಕಿಮು ಭವಾಯತೇ ಮಯಿ ಸುಭಕ್ತಿಯುಕ್ತೋ ಭವ ।
ವಸೈವ ರಮಯಾ ಭವಾನ್ವಿಧಿರಯಂ ಚ ಲೋಕೇ ಸ್ವಕೇ
ಚಿರಾಯ ಮಮ ವಾಕ್ಯತೋ ವೃಜಿನಮದ್ಯ ಕ್ಷಾಂತಂ ತವ ॥೭೯॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ದಕ್ಷಬ್ರಹ್ಮವಿಷ್ಣ್ವಿಂದ್ರಾದಿ ಶಿವಪ್ರಸಾದನಂ ನಾಮ ಸಪ್ತಮೋಽಧ್ಯಾಯಃ

---

ಹೀಗೆ ಮಹಾವಿಷ್ಣುವು ಸ್ತುತಿಸಲು ಮಹೇಶ್ವರನು ಬ್ರಹ್ಮನನ್ನೂ ವಿಷ್ಣುವನ್ನೂ ಕುರಿತು ಹೀಗೆಂದನು. "ಬ್ರಹ್ಮವಿಷ್ಣ್ವಾದಿಗಳೇ, ನೀವು ಎಂದೂ ನನ್ನ ಭಕ್ತರಲ್ಲದವರನ್ನು ರಕ್ಷಿಸಲು ಹೋಗಬೇಡಿರಿ. ಆದರಿಂದ ದೇವತೆಗಳಾದ ನಿಮಗೆ ದುಃಖವೊದಗುವುದೇ ಹೊರತು ಸುಖವು ಲಭಿಸಲಾರದು. ಇನ್ನುಮೇಲಾದರೂ ನೀವು ನನ್ನಲ್ಲಿ ಭಕ್ತಿಯಿಂದಿರಿ. ನಿಮ್ಮ ಪತ್ನಿಯರಾದ ಲಕ್ಷ್ಮೀ ಸರಸ್ವತಿಯರೊಡನೆ ನೀವು ನಿಮ್ಮ ನಿಮ್ಮ ಲೋಕಗಳಲ್ಲಿ ಸುಖದಿಂದಿರಿ. ತಿಳಿಯದೆ ಮಾಡಿದ ನಿಮ್ಮ ಅಪರಾಧವನ್ನೆಲ್ಲಾ ನಾನೀಗ ಕ್ಷಮಿಸಿರುವೆನು. ಯೋಚಿಸಬೇಡಿ" ಎಂದು ಕೊನೆಯಲ್ಲಿ ಪರಶಿವನು ಭರವಸೆಯಿತ್ತು ಕಳುಹಿಸಿದನು. ॥೭೮-೭೯॥.

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ದಕ್ಷಬ್ರಹ್ಮಾದಿಗಳಿಗೆ ಶಿವಾನುಗ್ರಹವು ಲಭಿಸಿದ ವಿಷಯವನ್ನು ತಿಳಿಸುವ ಏಳನೆಯ ಅಧ್ಯಾಯವು ಮುಗಿದುದು.

---

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಅಷ್ಟಮೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತದಾ ಬ್ರಹ್ಮಾ ಹರಿಶ್ಚೈವ ಸ ದಕ್ಷೋ ವಾಸವಸ್ಸುರಾಃ ।
ನತ್ವಾ ಸ್ತುತ್ವಾ ಮಹಾದೇವಂ ಯಯುರ್ಲೋಕಾಂತ್ಸುರಾಸ್ತದಾ ॥೧॥

ಮಹಾದೇವೋಽಪಿ ವಿಶ್ವಾತ್ಮಾ ಬ್ರಹ್ಮಣಾ ಪರಿಸಾಂತ್ವಿತಃ ।
ಜಗಾಮ ಗಣವೃಂದೈಶ್ಚ ನಂದಿನಾ ವಿಶ್ವನಂದಿನಾ ॥೨॥

ಗಣಾನಾಂ ಗರ್ಜನೈಶ್ಚೈವ ಭೇರೀಪಟಹಗೋಮುಖೈಃ ।
ಕಾಹಲೈಃ ಶೃಂಗಗೋಶೃಂಗೈರ್ನದದ್ಭಿರ್ಗಣವಕ್ತ್ರತಃ ॥೩॥

---

## ಎಂಟನೆಯ ಅಧ್ಯಾಯ

ಅನಂತರ ಬ್ರಹ್ಮ, ವಿಷ್ಣು, ದಕ್ಷ, ಇಂದ್ರ ಇನ್ನೂ ಇತರ ದೇವತೆಗಳೂ ಮಹಾದೇವನಿಗೆ ನಮಸ್ಕರಿಸಿ, ಅವನನ್ನೇ ಸ್ತುತಿಸುತ್ತಾ ತಮ್ಮ ತಮ್ಮ ಲೋಕಗಳಿಗೆ ತೆರಳಿದರು. ಮಹಾದೇವನಾದರೋ ಬ್ರಹ್ಮನಿಂದ ಸ್ತುತನಾಗಿ ಪ್ರಪಂಚವನ್ನೇ ಆನಂದಗೊಳಿಸುವ ನಂದೀಶ್ವರನೊಡನೆಯೂ, ಇತರ ಗಣಗಳೊಡನೆಯೂ ಕೂಡಿ ತನ್ನ ನಗರಿಗೆ ಪ್ರಯಾಣಮಾಡಿದನು. ||೧-೨||

ಶಿವಗಣಗಳು ಶಿವನ ಸುತ್ತಲೂ ಭೇರೀ, ಪಟಹ, ಗೋಮುಖ, ತುತ್ತೂರಿ, ಕೊಂಬು ಮುಂತಾದ ವಾದ್ಯಗಳನ್ನು ಧ್ವನಿಗೈಸುತ್ತಲಿದ್ದುವು. ಅನೇಕರು ಪರಶಿವನಿಗೆ ಅಸಂಖ್ಯಾತ ಛತ್ರಿಗಳನ್ನು ಹಿಡಿದಿದ್ದರು. ಹಲವರು ಚಾಮರಗಳನ್ನು ಬೀಸು

ನಾನಾಛತ್ರಧರೈರನ್ಯೈಶ್ಚಾಮರಾಸಕ್ತಪಾಣಿಭಿಃ ।
ಗಣೇಂದ್ರೈಃ ಕೇತುಹಸ್ತೈಶ್ಚ ಚಂದ್ರಸ್ಫಾಟಿಕನಿರ್ಮಲೈಃ ॥೪॥

ಭಸ್ಮಭೂಷಿತಸರ್ವಾಂಗೈರ್ಗಣೇಂದ್ರೈರ್ವಾರಣೋಪಮೈಃ ।
ಕೋಟಿತ್ರಯೈಃ ಪರಿವೃತೋ ವೃಷಾರೂಢೋ ಮಹೇಶ್ವರಃ ॥೫॥

ಸತ್ಯಾ ವಿಯೋಗದುಃಖೇನ ತಪಸ್ತಪ್ತುಂ ಮನೋದಧೇ ।
ಜಗಾಮ ಮಂದರಂ ತತ್ರ ನಾನಾದ್ರುಮವಿರಾಜಿತಂ ॥೬॥

ಚಂಪಕಾಶೋಕಪುನ್ನಾಗವಕುಲೈಃ ಸಮಲಂಕೃತಂ ।
ಸಾಲತಾಲತಮಾಲಾಢ್ಯೇ ಅಂಕೋಲಕದಲೀಯುತೇ ॥೭॥

ಕಪಿತ್ಥಪೂಗಹಿಂತಾಲರಸಾಲಪನಸಾವೃತೇ ।
ಪಾರಿಜಾತಕಸಂಪೂರ್ಣೇ ನಾನಾಪಕ್ಷಿವಿರಾಜಿತೇ ॥೮॥

ಪುಷ್ಪಗುಚ್ಛೈಃ ಕಸುಭಗಮಿಲದ್ಭೃಂಗಕುಲಾಕುಲೇ ।
ಪರಭೃತ್ಸುಂದರಗಿರಾ ಪಲ್ಲವೋಲ್ಲಾಸಿಮಾರುತೇ ॥೯॥

---

ತ್ತಿದ್ದರು. ಬಹುಜನರು ಚಂದ್ರನಂತೆ ಹೊಳೆಯುವ ಧ್ವಜಪಟಗಳನ್ನು ಹಿಡಿದು ಮುಂದುವರಿಯುತ್ತಿದ್ದರು. ||೩-೪||

ಶಿವನ ಸುತ್ತಲೂ ಮೂರು ಕೋಟಿ ಶಿವಗಣಗಳಿದ್ದುವು. ಅವರೆಲ್ಲರೂ ಭಸ್ಮಭೂಷಿತಗಾತ್ರರಾಗಿ, ಮದ್ದಾನೆಯಂತೆ ದೊಡ್ಡ ದೇಹವುಳ್ಳವರಾಗಿದ್ದರು. ಇಂತಹವರ ಮಧ್ಯದಲ್ಲಿ ವೃಷಭಾರೂಢನಾದ ಮಹಾದೇವನು ಸತೀದೇವಿಯ ವಿರಹ ದುಃಖವನ್ನು ಸಹಿಸಲಾರದೆ ತಪಸ್ಸುಮಾಡಲು ಮನಸ್ಸುಮಾಡಿದನು. ಕೂಡಲೇ ತಪಸ್ಸಿಗಾಗಿ ನಾನಾವೃಕ್ಷಗಳಿಂದ ವಿರಾಜಿತವಾದ ಮಂದರಪರ್ವತವನ್ನು ಕುರಿತು ಪ್ರಯಾಣ ಮಾಡಲೆಳಸಿದನು. ||೫-೬||

ಆ ಮಂದರಪರ್ವತವು ಸಂಪಿಗೆ, ಅಶೋಕ, ಪುನ್ನಾಗ, ವಕುಲ, ಸಾಲ, ತಾಲ, ಹೊಂಗೆ, ಅಂಕೋಲ, ಬಾಳೆಗಿಡ, ಬೇಲದಮರ, ಅಡಕೆ, ಹಿಂತಾಲ, ಮಾವು, ಹಲಸು, ಪಾರಿಜಾತ, ಮುಂತಾದ ವೃಕ್ಷಗಳಿಂದ ನಿಬಿಡವಾಗಿದ್ದಿತು. ನಾನಾಜಾತಿಯ ಪಕ್ಷಿಗಳು ಅಲ್ಲಿ ಹಾರಾಡುತ್ತಿದ್ದುವು. ||೭-೮||

ಆ ಮಂದರಗಿರಿಯಲ್ಲಿ ಪುಷ್ಪಗುಚ್ಛಗಳು ನಾಲ್ಕುನಾಲ್ಕಾಗಿ ಕಂಗೊಳಿಸು

ನೃತ್ಯನ್ಮಯೂರಕೇಕಾಭಿರ್ನದನ್ ದಾತ್ಯೂಹಶೋಭಿತೇ ।
ಹಂಸಕ್ರೇಂಕಾರಸರಸಿ ಸಾರಸೈಃ ಸಮಲಂಕೃತೇ ॥೧೦॥

ಫುಲ್ಲಹಲ್ಲಕಪದ್ಮಾಲಿ ನೀಲೋತ್ಪಲಸುಕೌಮುದ್ಯೈಃ ।
ಕದಂಬಮಂಜರೀಲೋಲಸ್ರವತ್ಪುಷ್ಪರಜೋವೃತೇ ॥೧೧॥

ಗಲನ್ಮಧುಸ್ರವಾಲೋಲ ಶಾಖಾಂದೋಲಿತಮಾರುತೇ ।
ಭ್ರಮುಸ್ಸಾರಂಗಮಾತಂಗ ಸಂಘರ್ಷಿತಮಹಾದ್ರುಮೇ ॥೧೨॥

ಉತ್ಪುಚ್ಛ ಚಾಮರೀಸಂಘಸರಘೋಡ್ಡೀನ ಸಂಕುಲೇ ।
ಕಸ್ತೂರಿಕಾಮೃಗಭ್ರಾಮ್ಯಗಂಧವಾಹೈಕಸುಂದರೇ ॥೧೩॥

ಕಪೋತಗತಹುಂಕಾರೈರ್ಗೋಲಾಂಗೂಲೋತ್ಥಹುಂಕೃತೈಃ ।
ವಾನರೋದರಸಂಬದ್ಧ ಸ್ತನಂಧಯಕುತೂಹಲೇ ॥೧೪॥

---

ತ್ತಿದ್ದವು. ಅದರಲ್ಲೆಲ್ಲಾ ಝೇಂಕರಿಸುವ ದುಂಬಿಗಳು ಮಾಲಾಕಾರದಲ್ಲಿ ಕಾಣು ತ್ತಿದ್ದವು. ಹೆಣ್ಣುಕೋಗಿಲೆಗಳು ಇಂಚರಗೈಯ್ಯುತ್ತಿದ್ದವು. ನವಿಲುಗಳು ನರ್ತನ ಮಾಡುತ್ತಿದ್ದವು. ಕಾಲಕಂಟಕಪಕ್ಷಿಗಳು ಕುಣಿದಾಡುತ್ತಿದ್ದವು. ಹಂಸ, ಕ್ರೇಂಕಾರ, ಸಾರಸ ಮುಂತಾದ ಹಕ್ಕಿಗಳು ಆ ಮಂದಗಿರಿಯ ಸರೋವರವನ್ನು ಅಲಂಕರಿಸಿ ದ್ದವು. ॥೯-೧೦॥

ಆ ಪರ್ವತದಲ್ಲಿ ಅರಳಿದ ಕಮಲ ಕಲ್ಹಾರಗಳೂ, ನೀಲೋತ್ಪಲ, ಕದಂಬ ಮುಂತಾದ ಪುಷ್ಪಗಳ ಪರಾಗಮಯವಾದ ಮಂದಮಾರುತವೂ, ನಿದಾನವಾಗಿ ಬೀಸುವ ಆ ಮಾರುತದಿಂದ ಸೊಂಪಾಗಿ ಅಲುಗಾಡುವ ವೃಕ್ಷರಾಜಿಗಳೂ, ಅಲ್ಲಲ್ಲಿ ಓಡಾಡುವ ಸಾರಗಗಳಿಂದಲೂ, ಆನೆಗಳಿಂದಲೂ ನಿಬಿಡವಾದ ಮಹಾವೃಕ್ಷಗಳೂ, ತಮ್ಮ ಬಾಲಗಳನ್ನು ಎತ್ತಿಕೊಂಡು ಓಡಾಡುತ್ತಿರುವ ಚಮರೀಮೃಗಗಳೂ, ಕಸ್ತೂರೀಮೃಗಗಳ ಓಡಾಟದಿಂದ ಸುತ್ತಲೂ ವ್ಯಾಪಿಸಿರುವ ಸುಗಂಧವೂ ಬಹಳ ವಾಗಿದ್ದು ಪರ್ವತವನ್ನೇ ಮನೋಹರಗೊಳಿಸಿದ್ದಿತು. ॥೧೧-೧೨-೧೩॥

ಕಪೋತ ಪಕ್ಷಿಗಳು ಹುಂಕಾರಮಾಡುತ್ತಿದ್ದವು. ಗೋವುಗಳು ಬಾಲಗಳ ನ್ನೆತ್ತಿಕೊಂಡು ಹೂಂಕರಿಸುತ್ತಿದ್ದವು. ಕಪಿಗಳು ತಮ್ಮ ಮರಿಗಳನ್ನು ಹೊಟ್ಟೆಗೆ ಕಟ್ಟಿಕೊಂಡು ಅಲ್ಲಿಂದಿಲ್ಲಿಗೆ ಹಾರಾಡುತ್ತಿದ್ದವು. ಮರಗಳ ಕೊಂಬೆಗಳಲ್ಲಿರುವ ಹಕ್ಕಿ

ಶಾಖಾನೀಕೇಷು ಸಂಲೀನ ಶಿಶುವಕ್ತ್ರಕಣಾದರೇ ।
ಸಪಕ್ಷಪಕ್ಷವಿಕ್ಷೇಪೈಃ ಪಕ್ಷಿಪೋತಕಭಾಸುರೇ ॥೧೫॥

ಖರೋರುನಖರೋತ್ಕೀರ್ಣಲೀಕ್ಷವೀಕ್ಷಣವಾನರೇ ।
ನೈಕಧಾತುಗತೈಶ್ಚಿತ್ರೈರ್ವಿಚಿತ್ರಕುಸುಮೋಜ್ವಲೇ ॥೧೬॥

ಶಾಖಾಶತಸಹಸ್ರಾಢ್ಯೇ ದವಧೂಮವಿರಾಜಿತೇ ।
ಕದಂಬಕದಲೀಪುಷ್ಪ ನತಾಂದೋಲನ ಸುಂದರೇ ॥೧೭॥

ಗಿರಿಮಸ್ತಕಸಂಸ್ರಾವಿ ಸರೋವರವಿರಾಜಿತೇ ।
ಪಲ್ವಲೋದಕತೀರಸ್ಥಗುಲ್ಮವಲ್ಲೀಗೃಹೈರ್ಯುತೇ ॥೧೮॥

ಫುಲ್ಲನ್ಮಲ್ಲೀಮಹಾಮಲ್ಲೀ ಗುಚ್ಛಸಲ್ಲೀಸುಶೋಭಿತೇ ।
ವೇಣು ಸಂಘರ್ಷಣೋತ್ಪನ್ನ ಹವ್ಯವಾಹಶಿಖಾವೃತೇ ॥೧೯॥

---

ಗಳ ಗೂಡುಗಳಲ್ಲಿ ತಾಯಿ ಹಕ್ಕಿಗಳು ಮರಿಗಳಿಗೆ ಗುಟುಕನ್ನು ಕೊಡುತ್ತಿದ್ದುವು. ಚಿಕ್ಕ ಚಿಕ್ಕ ಹಕ್ಕಿಗಳು ತಮ್ಮ ರೆಕ್ಕೆಗಳನ್ನು ಕೆದರಿಕೊಂಡು ಅಲ್ಲಲ್ಲಿ ಹಾರಾಡುತ್ತಿದ್ದುವು. ॥೧೪-೧೫॥

ಕಪಿಗಳು ತಮ್ಮ ಉಗುರುಗಳಿಂದ ಜೇನುಹುಳುಗಳ ಗೂಡುಗಳನ್ನು ಕಿತ್ತೊಗೆಯುತ್ತಿದ್ದುವು. ಅಲ್ಲಲ್ಲಿ ಗೈರಿಕಾದಿ ಧಾತುಗಳಿಂದ, ಚಿತ್ರವಿಚಿತ್ರವಾಗಿ ಕಾಣುವ ಬಣ್ಣ ಬಣ್ಣದ ಹೂವುಗಳು ಕಂಗೊಳಿಸುತ್ತಿದ್ದುವು. ಕಾಡುಕಿಚ್ಚಿನ ಹೊಗೆಯು ಸಾವಿರಾರು ಶಾಖೆಗಳಾಗಿ ಮೇಲಕ್ಕೆ ಹೋಗುತ್ತಿದ್ದಿತು. ಕದಂಬವೃಕ್ಷಗಳು, ಬಾಳೆಮರಗಳು, ಫಲಭಾರದಿಂದ ಬಗ್ಗಿನೋಡಲು ಸುಂದರವಾಗಿ ಕಾಣುತ್ತಿದ್ದುವು. ಗಿರಿಶಿಖರದಲ್ಲಿ ಹರಿಯುವ ನದಿಗಳೂ, ಸರೋವರಗಳೂ ರಮ್ಯವಾಗಿ ಕಾಣುತ್ತಿದ್ದುವು. ಚಿಕ್ಕಚಿಕ್ಕ ಸರೋವರಗಳ ಅಕ್ಕಪಕ್ಕದಲ್ಲಿ ಲತಾಗೃಹಗಳು ಬೆಳೆದು ರಮ್ಯವಾಗಿ ಕಂಗೊಳಿಸುತ್ತಿದ್ದುವು. ॥೧೬-೧೭-೧೮॥

ಅರಳಿದ ಗಿರಿಮಲ್ಲಿಗೆಗಳು, ದೊಡ್ಡಮಲ್ಲಿಗೆ ಹೂಗಳು ಗಮಗಮಿಸುತ್ತಿದುವು. ಬಿದಿರುಮೆಳೆಗಳ ಪರಸ್ಪರ ಘರ್ಷಣದಿಂದ ಬೆಂಕಿಯೆದ್ದು ಕಾಡನ್ನೇ ಸುಡುತ್ತಿದ್ದಿತು. ಬಿದಿರುಮೆಳೆಗಳ ಕ್ರೇಂಕಾರಧ್ವನಿಯಿಂದ ಹೆದರಿ ಹಕ್ಕಿಗಳು ಅಲ್ಲಲ್ಲಿ ಹಾರಾಡು

ವೇಣುಕ್ರೇಂಕಾರಬಹುಲೇ ಝಿಲ್ಲೀಗಣ ವಿನಾದಿತೇ ।
ಹಲ್ಲೀಸಲಾಸ್ಯಕುರ್ವದ್ಭಿಃ ಶಾಖಿಭಿಶ್ಚ ಪರಸ್ಪರಂ ॥೨೦॥

ಮಾತಂಗಬೃಂಹಿತರವೈಃ ಕೋಲಘುರ್ಘುರನಿಸ್ವನೈಃ ।
ಘುರ್ಘುರೈಸ್ತಾಡಪತ್ರಾಣಾಂ ನಾರಿಕೇಲದ್ರುಶೋಭಿತೈಃ ॥೨೧॥

ತದ್ವೃಂತ ತಾಲಸಲ್ಲೀಸ ಪಕ್ವ ನಾರೇಲತಾಲಕೈಃ ।
ಸಮಾವೃತಾ ಸಾ ಭೂರ್ಭಾತಿ ಮಾತಂಗಮದಪಂಕಿಲೈಃ ॥೨೨॥

ವಿಮಲಸ್ವಾದುಪಾನೀಯಾನೇಕಪ್ರಸ್ರವಣೈರ್ಯುತೇ ।
ನಿರೂಢ ಶಷ್ಪ ಸಂಪೂರ್ಣ ಭೂಭಾಗಸಮಲಂಕೃತೇ ॥೨೩॥

ವನಗೋರಸಸಂತಪ್ತಶಿಲಾತಲವಿರಾಜಿತೇ ।
ಸ್ನಿಗ್ಧವರ್ಣ ಮಹಾಮೂಲ ಸಟಾವಟವಿರಾಜಿತೇ ॥೨೪॥

ಮಂದರೇ ತತ್ರ ಗಣಸ್ತೈರ್ಮಹಾದೇವೋ ವೃಷಾಸ್ಥಿತಃ ।
ಮಹಾದೇವಸ್ಯ ದೇವಸ್ಯ ಶಂಕರಸ್ಯಾಮಿತಾತ್ಮನಃ ॥೨೫॥

---

ತ್ತಿದ್ದುವು. ಮರಗಳು ಅಲುಗಾಡುತ್ತಾ ಹಲ್ಲೀಸವೆಂಬ ನಾಟ್ಯವನ್ನು ಅಭ್ಯಾಸಮಾಡು ತ್ತಿವೆಯೋ ಎಂಬಂತೆ ಇದ್ದುವು. ॥೧೯-೨೦॥

ಆನೆಗಳ ಗರ್ಜನೆಯಿಂದಲೂ, ಹಂದಿಗಳ ಘೀಂಕಾರಗಳಿಂದಲೂ ಆ ಪ್ರದೇಶವು ಭಯಂಕರವಾಗಿದ್ದಿತು. ಬಿಚ್ಚೋಲೆ ಮರಗಳ ಚಲನೆಯಿಂದಾಗುವ ಘುರ್ಘುರಧ್ವನಿ ಯಿಂದಲೂ, ಸಾಲಾದ ತೆಂಗಿನಮರಗಳಿಂದಲೂ ಮನೋಹರವೂ ಆಗಿದ್ದಿತು. ಓಲೆ ಮರಗಳ ಮಧ್ಯದಲ್ಲಿ ಏಲಕ್ಕಿ ಬಳ್ಳಿಗಳು ಹಬ್ಬಿ ಎಲ್ಲ ಕಡೆಗೂ ಸುವಾಸನೆಯನ್ನು ಬೀರುತ್ತಿದ್ದುವು. ಮದ್ದಾನೆಗಳ ಮದೋದಕದ ಗಂಧದಿಂದ ಆ ವನಪ್ರದೇಶವೆಲ್ಲವೂ ಸುಗಂಧಮಯವಾಗಿದ್ದಿತು. ॥೨೧-೨೨॥

ನಿರ್ಮಲವಾಗಿಯೂ ರುಚಿಕರವಾಗಿಯೂ ಇರುವ ಪಾನೀಯಧಾರೆಯು ಅಲ್ಲೆಲ್ಲಾ ವ್ಯಾಪಿಸಿದ್ದಿತು. ಅಲ್ಲಲ್ಲಿ ಬೆಳೆದ ಹಸುರು ಹುಲ್ಲು ಆ ಪ್ರದೇಶವನ್ನೆಲ್ಲಾ ರಮಣೀಯವನ್ನಾಗಿ ಮಾಡಿದ್ದಿತು. ಕಾಡುಹಸುಗಳ ಗೋರೋಚನದಿಂದ ಅಲ್ಲಿನ ಕಲ್ಲುಗಳೆಲ್ಲಾ ವರ್ಣಾಂತರವನ್ನು ಪಡೆದಿದ್ದುವು. ದೊಡ್ಡದಾಗಿ ಬಿಳಲುಗಳನ್ನು ಬಿಟ್ಟು ಬೆಳೆದಿರುವ ಆಲದಮರಗಳು ಅಸಂಖ್ಯಾತವಾಗಿದ್ದುವು. ಇಂತಹ ಸುಂದರವಾದ

ದೀಪ್ತಮಾಯತನಂ ತತ್ರ ಹೈಮಂ ಮಣಿವಿಭೂಷಿತಂ ।
ಹೇಮಪ್ರಾಕಾರಸಂಯುಕ್ತಂ ಮಣಿತೋರಣಮಂಡಿತಂ ॥೨೬॥

ಸ್ಫಾಟಿಕೈಃ ಸುವಿಚಿತ್ರೈಶ್ಚ ಗೋಪುರೈಶ್ಚ ಸಮನ್ವಿತಂ ।
ಸಿಂಹಾಸನೈರ್ಮಣಿಮಯೈಃ ಶುಭಾಸ್ತರಣಸಂಯುತೈಃ ॥೨೭॥

ರಮ್ಯಾದರ್ಶಗ್ರಹೈಶ್ಚಿತ್ರೈಶ್ಚಿತ್ರರಂಗವಿಚಿತ್ರಿತೈಃ ।
ವೃಕ್ಷಪಾಷಾಣಫಲಕೈಶ್ಚಿತ್ರಿತೈಃ ಸೌಧಭೂಷಿತೈಃ ॥೨೮॥

ವಿತಾನತಾನಿತೈಶ್ಚಿತ್ರೈರ್ದಿವ್ಯಾಸ್ತರಣಿಕಾವೃತೇ ।
ಪದ್ಮರಾಗೈಃ ಪುಷ್ಪರಾಗೈರ್ನೀಲವೈಡೂರ್ಯನಿರ್ಮಿತೈಃ ॥೨೯॥

ಗೋಮೇಧವಜ್ರಮುಕ್ತಾಚ್ಛವಿದ್ರುಮೈಶ್ಚ ವಿರಾಜಿತೈಃ ।
ಮಂಟಪೈಃ ಪುಷ್ಪಮಾಲಾಢ್ಯೈರ್ಧೂಪದೀಪಸಮಾವೃತೈಃ ॥೩೦॥

---

ಮಂದರಗಿರಿಯಲ್ಲಿ ಪರಶಿವನು ತನ್ನ ಗಣದೇವತೆಗಳೊಡನೆಯೂ ನಂದಿಯೊಡನೆಯೂ ತಂಗಿದವನಾಗಿ ತಪಸ್ಸಿಗೆ ಆರಂಭಿಸಿದನು. ॥೨೩-೨೪-೨೫॥

ಆ ಮಂದರಗಿರಿಯ ಮಧ್ಯದಲ್ಲಿ ಸುವರ್ಣದಿಂದಲೂ, ಮಣಿಗಳಿಂದಲೂ ಪ್ರಕಾಶಿತವಾದ ದೇವಾಲಯವೊಂದಿದ್ದಿತು. ಆದಕ್ಕೆ ಸುವರ್ಣ ಪ್ರಾಕಾರವೂ, ಮಣಿಮಯ ತೋರಣಗಳೂ, ಸ್ಫಟಿಕಮಯವಾದ ಗೋಪುರಗಳೂ, ಮಧ್ಯಭಾಗದಲ್ಲಿ ಮಣಿಮಯವಾದ ಮತ್ತು ಮೃದುವಾದ ಆಸನಗಳುಳ್ಳ ಸಿಂಹಾಸನಗಳೂ ವಿಶಾಲವಾಗಿದ್ದವು. ॥೨೬-೨೭॥

ಆ ದೇವಾಲಯದ ಗೋಡೆಗಳಿಗೆಲ್ಲಾ ಬಣ್ಣ ಬಣ್ಣದ ಕನ್ನಡಿಗಳನ್ನು ಹದ್ದಿದ್ದರು. ಮರದ ಹಲಗೆಗಳು, ಕಲ್ಲುಚಪ್ಪಡಿಗಳು ಇವುಗಳಿಂದ ಕೂಡಿ ಉಪ್ಪರಿಗೆಯು ನಾನಾವಿಧವಾದ ಚಿತ್ರಗಳಿಂದ ರಂಜಿತವಾಗಿದ್ದಿತು. ಅಲ್ಲಲ್ಲಿ ಸುಂದರವಾದ ಮೇಲ್ಕಟ್ಟುಗಳಿಂದಲೂ ಮೃದುವಾದ ಹಾಸಿಗೆಯಿಂದಲೂ ಅಲಂಕೃತವಾದ ಮಂಚಗಳಿದ್ದುವು. ಪದ್ಮರಾಗ, ಪುಷ್ಯರಾಗ, ನೀಲ, ವಜ್ರ, ವೈಡೂರ್ಯ, ಗೋಮೇಧಕ, ಮುತ್ತು, ಹವಳ ಇವುಗಳಿಂದ ರಂಜಿತವಾಗಿರುವ ಮಂಟಪಗಳು ಬಹಳವಾಗಿ ಕಂಡುಬರುತ್ತಿದ್ದುವು. ಆ ಮಂಟಪಗಳು ಹೂಮಾಲೆಗಳಿಂದಲೂ, ಧೂಪದೀಪಗಳಿಂದಲೂ ಮನೋಹರವಾಗಿ ಕಂಡುಬರುತ್ತಿದ್ದುವು. ॥೨೮-೨೯-೩೦॥

ಪ್ರಮಥೈರಾವೃತಸ್ತತ್ರ ವೇಣುವೀಣಾಬ್ಜನಾದಿತೇ ।
ಝುಲ್ಲರೀಶಂಖಪಟಹಭೇರೀಗೋಮುಖಡಿಂಡಿಮೈಃ ॥೩೦॥

ಲಲಿತಾರಸಸದ್ಗೀತಮುಖರೀಕೃತದಿಙ್ಮುಖೇ ।
ಸಿದ್ಧದೇವರ್ಷಿಗಂಧರ್ವೈರ್ಬ್ರಹ್ಮೇಂದ್ರಾದ್ಯಮರೈರ್ವೃತೈಃ ॥೩೧॥

ಕಿಂಪೂರುಷೈಸ್ತಥಾ ನಾಗೈರಪ್ಸರೋಗಣಸೇವಿತೈಃ ।
ಗಾಯದ್ಗಂಧರ್ವನಿಕರೈರ್ವೀಣಾತಂತ್ರೀವಿನಾದಿತೈಃ ॥೩೨॥

ಮಾಂದರೈಶ್ಚಾರುಶಿಖರೈರುಪೇತಂ ಶಂಕರಸ್ತದಾ ।
ದೃಷ್ಟ್ವಾ ನ ಹರ್ಷಮಾಪಾಥ ಮಹಾದೇವೋ ಮಹೇಶ್ವರಃ ॥೩೪॥

ತದಾ ರುದ್ರಗಣೈಃ ಸಾರ್ಧಂ ನಿಶಶ್ವಾಸ ಮುಹುರ್ಮುಹುಃ ।
ರುದ್ಧಾಹಿರಾಡಿವಾಸ್ವಸ್ಥೋ ಸ್ಥಾಣುಃ ಸ್ಥಾಣುರಿವಸ್ಥಿತಃ ॥೩೫॥

ತದಾ ಸತೀವಿಯೋಗಾರ್ತೋ ಬಭೂವಾತೀವ ವಿಹ್ವಲಃ ।
ದೃಷ್ಟ್ವಾ ಚಂದ್ರಮಸಂ ರಾತ್ರಾ ಫುಲ್ಲಮಲ್ಲೀಗಣಾನಿಲಂ ॥೩೬॥

---

ಪ್ರಮಥಗಣಗಳು ಆ ದೇವಾಲಯದ ಸುತ್ತಲೂ, ಕೊಳಲು, ವೀಣೆ, ಝುಲ್ಲರೀ, ಶಂಖ, ತಮಟೇ ಭೇರಿ, ಗೋಮುಖ, ಡಿಂಡಿಮ ಮುಂತಾದ ವಾದ್ಯಗಳನ್ನು ಬಾರಿಸುತ್ತಾ, ಲಲಿತವಾದ ಗಾನಧಾರೆಯಿಂದ ದಿಗಂತವನ್ನೆಲ್ಲಾ ಮೊಳಗಿಸುತ್ತಲಿದ್ದವು. ಆ ಪ್ರದೇಶವೆಲ್ಲಾ, ಸಿದ್ಧರು, ದೇವರ್ಷಿಗಳು, ಗಂಧರ್ವರು, ಬ್ರಹ್ಮ, ಇಂದ್ರ ಮುಂತಾದ ದೇವಶ್ರೇಷ್ಠರಿಂದ ತುಂಬಿಹೋಗಿದ್ದಿತು. ॥೩೦-೩೧॥

ಕಿಂಪುರುಷರು, ನಾಗಗಳು, ಅಪ್ಸರಸ್ಸುಗಳು, ಗಂಧರ್ವರು, ಮುಂತಾದವರು ಮೃದುಮಧುರವಾಗಿ ಗಾನಮಾಡುತ್ತಿದ್ದರು. ಇಷ್ಟು ಸೌಂದರ್ಯದಿಂದ ಕೂಡಿದ್ದರೂ ಆ ಮಂದರಗಿರಿಯು ಪರಶಿವನಿಗೆ ಸಂತೋಷವನ್ನುಂಟುಮಾಡಲಿಲ್ಲ. ಇವುಗಳನ್ನೆಲ್ಲಾ ನೋಡಿ ಪರಶಿವನು ಮಂತ್ರದಿಂದ ಕಟ್ಟಲ್ಪಟ್ಟ ಹಾವಿನಂತೆಯೂ, ಒಂದೇ ಕಡೆ ಸ್ಥಿರವೃಕ್ಷದಂತೆಯೂ ನಿಶ್ಚಲವಾಗಿ ನಿಂತುಬಿಟ್ಟನು. ॥೩೩-೩೪-೩೫॥

ಸತೀವಿಯೋಗದುಃಖದಿಂದ ವಿಹ್ವಲನಾದ ಪರಶಿವನು ಪೂರ್ಣಚಂದ್ರನನ್ನೂ, ಅರಳಿದ ಮಲ್ಲಿಗೆಯನ್ನೂ, ಮಂದಮಾರುತವನ್ನೂ ನೋಡಿ, ನಿಟ್ಟುಸಿರುಬಿಡುತ್ತಾ,

ಜಿಘ್ರನ್ ಸ್ವಾಂಗಮಹಾಸರ್ಪಪಾರಣಾಂ ವ್ಯದಧಾದ್ಧರಃ ।
ವಿನಿಶ್ವಸನ್ ತದಾ ದೇವಸ್ತಪಸ್ಯೇವಂ ಮನೋದಧೇ ॥೩೭॥

ವಿಧಾಯ ಸ್ವಾತ್ಮನಾತ್ಮಾನಂ ಭಸ್ಮಭೂಷಿತವಿಗ್ರಹಃ ।
ತ್ರಿಪುಂಡ್ರವಿಲಸತ್ಫಾಲೋ ರುದ್ರಾಕ್ಷಾಂಗದಕಂಕಣಃ ॥೩೮॥

ಜಟಿಲಾಲಕಸನ್ಮೌಲಿಃ ಪಿಶಂಗಿತಗಿರಿಪ್ರಭಃ ।
ಪ್ರಭಾವಿಭಾಸಿಸೋಮಾಂಗಸುಂದರಾಮಲವಿಗ್ರಹಃ ॥೩೯॥

ಸೋಮಧಾಮಕೃತೋತ್ತಂಸೋ ಮಹಾದೇವೋ ಮಹೇಶ್ವರಃ ।
ಉತ್ಫುಲ್ಲಪುಂಡರೀಕಾಭಮುಖಮಂಡಲಭಾಸುರಃ ॥೪೦॥

ಫಾಲಾನಲಾನಿಲಾಲೋಲನೇತ್ರಾಂಚಲಸುಪಕ್ಷ್ಮಕಃ ।
ಉದ್ಯದ್ಭಾನುಪ್ರಭಾಭಾಸಿ ವಾಮಲೋಚನಸುಂದರಃ ॥೪೧॥

ಪರ್ವಪೂರ್ಣಸುಧಾಧಾಮಮಂಡಲೋತ್ತುಂಗದಕ್ಷದೃಕ್ ।
ಚಾಂಪೇಯಕಲಿಕೋದ್ದಾಮ ನಾಸಾಪುಟವಿರಾಜಿತಃ ॥೪೨॥

---

ಆ ತನ್ನ ನಿಟ್ಟುಸಿರು ತಾನು ಧರಿಸಿರುವ ಸರ್ಪಕ್ಕೆ ಆಹಾರವಾಗುವಂತೆ ಮಾಡುತ್ತಾ ಕೊನೆಗೆ ಸ್ಥಿರಮನಸ್ಸಿನಿಂದ ತಪಸ್ಸುಮಾಡಲು ಉಪಕ್ರಮಿಸಿದನು. ॥೩೬-೩೭॥

ತಪಶ್ಚರ್ಯಾಕಾಲದಲ್ಲಿ ಪರಶಿವನು ಆತ್ಮಧ್ಯಾನ ನಿರತನಾದನು. ಭಸ್ಮಭೂಷಿತ ಗಾತ್ರನಾಗಿ ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನಿಟ್ಟಿದ್ದನು. ಪರಶಿವನ ಮುಂಗುರುಳು ತಲೆಯನ್ನು ಅಲಂಕರಿಸಿದ್ದಿತು. ಹೊಂಬಣ್ಣದ ಗಿರಿಯಂತೆ ಶಿವನ ದೇಹವು ಸುವರ್ಣದಂತೆ ಹೊಳೆಯುತ್ತಿತ್ತು. ಪರಶಿವನ ದೇಹದ ಪ್ರಭೆಯು ಸುತ್ತಲೂ ವ್ಯಾಪಿಸಿದ್ದಿತು. ಚಂದ್ರಕಲೆಯು ಶಿರಸ್ಸಿನ ಆಭರಣವಾಗಿದ್ದಿತು. ಅರಳಿದ ಕಮಲದಂತೆ ಮುಖವು ಮುಗುಳ್ನಗೆಯಿಂದ ಕೂಡಿದ್ದಿತು. ॥೩೮-೩೯-೪೦॥

ಅಗ್ನಿನೇತ್ರದಿಂದಲೂ, ಚಂಚಲವಾದ ಉಳಿದೆರಡು ನೇತ್ರಗಳ ಕಟಾಕ್ಷದಿಂದಲೂ, ಉದಯಿಸುವ ಸೂರ್ಯನಂತೆ ಸ್ಫುರಿಸುವ ಎಡಭಾಗದ ಕಣ್ಣಿನಿಂದಲೂ, ಪೂರ್ಣಚಂದ್ರನಂತೆ ಆಹ್ಲಾದಕರವಾದ ಬಲಗಣ್ಣಿನಿಂದಲೂ, ಸಂಪಿಗೆಯ ಮೊಗ್ಗಿನಂತೆ ನೀಳವಾಗಿ ಉದ್ದವಾಗಿರುವ ಮೂಗಿನಿಂದಲೂ ಪರಶಿವನ ಮುಖಮಂಡಲವು ಸುಂದರವಾಗಿದ್ದಿತು. ॥೪೧-೪೨॥

ಸ್ವಚ್ಛಾದರ್ಶಕಪೋಲಾಢ್ಯಪ್ರಭಾಭಾಸಿತದಿಕ್ತತಿಃ ।
ನಾಗಕುಂಡಲವಿಭ್ರಾಜತ್ಕರ್ಣವೃಂತಾಲಿಶೋಭಿತಃ ॥೪೩॥

ಶಂಖಾಭಕಂಠಗರಲಕೀಲಾಲಲಿತಕಂಧರಃ ।
ಕರಿಶುಂಡಾಭವೃತ್ತೋರು ಬಾಹುದಂಡವಿರಾಜಿತಃ ॥೪೪॥

ಚತುರ್ದಶೋರುಭವನಸ್ಥಾನಾ ಇವ ಮಹೋದರಃ ।
ವೃತ್ತಗಂಭೀರಸುಭಗನಾಭೀಕೂಪವಿರಾಜಿತಃ ॥೪೫॥

ತ್ರಿವಲೀಲಲಿತೋದಾರಮೃಗೇಂದ್ರಸಮಸತ್ಕಟಿಃ ।
ವ್ಯಾಘ್ರಚರ್ಮಪರೀಧಾನಃ ಕೃತ್ತಿವಾಸಾ ಮಹೇಶ್ವರಃ ॥೪೬॥

ರಂಭಾವೃತ್ತೋರುಸಿದ್ಧೋರುಕಾಂಡದಂಡಪದದ್ವಯಃ ।
ಪಾದಪದ್ಮಯುಗಾಲೀಢವ್ಯಾಲೀಮಂಜೀರಫೂತ್ಕೃತಿಃ ॥೪೭॥

ನಾಗಹಾರೋ ಮಹಾದೇವೋ ತ್ಯಕ್ತ್ವಾ ಚಾಯುಧಮುತ್ತಮಂ ।
ಮೃಗಟಂಕೌ ಪರಿತ್ಯಜ್ಯ ವಟೋರುವಿಟಪಾಸ್ತೃತೇ ॥೪೮॥

---

ಶುಭ್ರವಾದ ಕನ್ನಡಿಯಂತೆ ಹೊಳೆಯುವ ಕಪೋಲ, ನಾಗಕುಂಡಲಗಳಿಂದ ಹೊಳೆಯುವ ಕಿವಿ, ಶಂಖದ ಆಕಾರದಂತೆ ಶೋಭಿಸುತ್ತಾ ವಿಷಜ್ವಾಲೆಯಿಂದ ಕಪ್ಪಾಗಿ ತೋರುವ ಕಂಠಪ್ರದೇಶ, ಆನೆಯಸೊಂಡಲಿನಂತೆ ದುಂಡಾಗಿಯೂ ನೀಳವಾಗಿಯೂ ಇರುವ ಬಾಹುದಂಡ, ಇವು ಅತಿಶಯವಾಗಿ ಶೋಭಿಸುತ್ತಿದ್ದುವು. ॥೪೩-೪೪॥

ಹದಿನಾಲ್ಕು ಲೋಕಗಳನ್ನೂ ಅಡಗಿಸಿಕೊಂಡಿದೆಯೋ ಎಂಬಂತಿರುವ ವಿಶಾಲವಾದ ಹೊಟ್ಟೆಯೂ, ಆಳವಾಗಿ ಗಂಭೀರವಾಗಿ ಸುಂದರವಾಗಿರುವ ಹೊಕ್ಕುಳೂ, ತ್ರಿವಳಿಗಳಿಂದ ಕೂಡಿ ಸಿಂಹದ ಸೊಂಟದಂತೆ ಬಲವಾಗಿರುವ ಸೊಂಟವೂ, ಅದರಲ್ಲಿ ಕಂಡುಬರುವ ವ್ಯಾಘ್ರಾಜಿನವೂ ಪರಶಿವನ ಸೌಂದರ್ಯವನ್ನು ಹೆಚ್ಚಿಸುತ್ತಿದ್ದಿತು. ॥೪೫-೪೬॥

ಬಾಳೆ ಕಂಬದಂತೆ ಪರಶಿವನ ತೊಡೆಯು ಶೋಭಿಸುತ್ತಿತ್ತು. ಪಾದಪದ್ಮಗಳಲ್ಲಿ ನಾಗಾಭರಣಗಳು (ಸರ್ಪಗಳು) ಫೂತ್ಕಾರಮಾಡುತ್ತಿದ್ದುವು. ಇಂತಹ ನಾಗಾಭರಣ ವಿಶಿಷ್ಟನಾದ ಮಹಾದೇವನು ತನ್ನ ದಿವ್ಯಾಯುಧಗಳನ್ನೂ, ಮೃಗಟಂಕಗಳನ್ನೂ

ಭೂತಲೇಜಿನಸಂಸ್ತೀರ್ಣೇ ವ್ಯಾಘ್ರಾಜಿನವಿರಾಜಿತೇ ।
ಯೋಗಪಟ್ಟಾಭಿರಾಮೇಣ ಪಾದಾವಾಬಧ್ಯ ಚಾನ್ಯತಃ ॥೪೯॥

ಭಸ್ಮಾಂಗರಾಗಸುಭಗ ದೇಹಕಾಂತಿವಿರಾಜಿತಃ ।
ನಾಸಾಗ್ರನ್ಯಸ್ತನಯನೋ ಭಗನೇತ್ರನಿಪಾತನಃ ॥೫೦॥

ಉಗ್ರೋಽಪ್ಯವ್ಯಗ್ರಮನಸಾ ಇಂದ್ರಿಯಾಣ್ಯಥ ಸಂಹರನ್ ।
ವಿಶ್ವತಃ ಪರಮೇಶಾನೋ ರುದ್ರೋ ವಿಶ್ವಾಧಿಕಃ ಪ್ರಭುಃ ॥೫೧॥

ಆತ್ಮಾನಮಾತ್ಮನಾಧ್ಯಾಯನ್ ಹೃದ್ಯೈವ ಮನಸಾತಿಗಃ ।
ತಮಸಃ ಪರಮಂ ಸಾಕ್ಷಾದ್ಬ್ರಹ್ಮ ತಂ ನಿರ್ಗುಣಂ ಪರಂ ॥೫೨॥

ಚತುರ್ಥಂ ಶಿವಮದ್ವೈತಂ ಪೂರ್ಣಾತ್ಪೂರ್ಣತರಂ ಶಿವಂ ।
ವಿಶ್ವತಶ್ಚಕ್ಷುಷಂ ದೇವಂ ವಿಶ್ವತೋಮುಖಮೀಶ್ವರಂ ॥೫೩॥

---

ದೂರಮಾಡಿ ವಿಶಾಲವಾದ ಆಲದಮರದ ಕೆಳಗೆ ತಪಸ್ಸಿಗೆ ಕುಳಿತುಬಿಟ್ಟನು. ॥೪೭-೪೮॥

ವ್ಯಾಘ್ರಾಜಿನದಿಂದ ಆಚ್ಛಾದಿಸಲ್ಪಟ್ಟ ಭೂಭಾಗದಲ್ಲಿ ಯೋಗಾಸನದಲ್ಲಿ ಕುಳಿತು,ಯೋಗಪಟ್ಟದಿಂದ ತನ್ನ ಕಾಲುಗಳನ್ನು ಬಿಗಿದುಕೊಂಡು ತನ್ನ ದೃಷ್ಟಿಯು ತನ್ನ ನಾಸಾಗ್ರಕ್ಕೆ ಬೀಳುವಂತೆ ನಿಲ್ಲಿಸಿಕೊಂಡು, ಭಸ್ಮಾಂಗರಾಗದಿಂದ ತನ್ನ ದೇಹ ಕಾಂತಿಯನ್ನು ಸರ್ವತ್ರ ವ್ಯಾಪಿಸುವಂತೆ ಮಾಡಿ ತಪಸ್ಸಿಗೆ ಕುಳಿತುಬಿಟ್ಟನು. ॥೪೯-೫೦॥

ಸ್ವಯಂ ಉಗ್ರರೂಪಿಯಾದರೂ ಪರಶಿವನು ಸ್ಥಿರಮನಸ್ಕನಾಗಿ ತನ್ನ ಇಂದ್ರಿಯಗಳನ್ನೆಲ್ಲಾ ನಿಗ್ರಹಿಸಿಕೊಂಡನು. ಲೋಕಕ್ಕೇ ಪ್ರಭುವೆನಿಸಿ, ಲೋಕಾತೀತನಾದ ಮಹಾದೇವನು ಆತ್ಮಧ್ಯಾನಮಾಡುತ್ತಾ ಮನಸ್ಸನ್ನು ಸ್ತಿಮಿತಗೊಳಿಸಿದನು. ಸಗುಣಾಕಾರನಾದ ಮಹಾದೇವನು ಮಾಯಾತೀತವೂ, ನಿರ್ಗುಣವೂ, ಸತ್ಯಸ್ವರೂಪವೂ ಆದ ನಿರ್ಗುಣಬ್ರಹ್ಮಸ್ವರೂಪಾನುಸಂಧಾನಮಾಡಲು ತೊಡಗಿದನು. ॥೫೧-೫೨॥

ಬ್ರಹ್ಮವಿಷ್ಣ್ವಾದಿ ತ್ರಿಮೂರ್ತಿಗಳಿಗಿಂತಲೂ ಬೇರೆಯವನಾದ ಸಜಾತೀಯ ದ್ವಿತೀಯ ರಹಿತನಾದ, ಪೂರ್ಣಸ್ವರೂಪವುಳ್ಳ ವಸ್ತುಗಳನ್ನೂ ಪೂರ್ಣವೆನಿಸಿ ಹೇಳುವ, ಪ್ರಪಂಚಕ್ಕೇ ನೇತ್ರವಾಗಿರುವ, ವಿಶ್ವವನ್ನೇ ಮುಖವೆನಿಸಿಕೊಂಡಿರುವ,

ಸರ್ವೇಂದ್ರಿಯಗುಣಾತೀತಂ ಸರ್ವೇಂದ್ರಿಯವಿವರ್ಜಿತಂ ।
ಆಕಾಶಕೋಶಂ ವಿಶ್ವೇಶಂ ಚೇತನಾನಾಂ ಚ ಚೇತನಂ ॥೫೪॥

ನಿರಂಜನಂ ಶಿವಂ ನಿತ್ಯಂ ವ್ಯಾಪ್ಯವ್ಯಾಪಕವರ್ಜಿತಂ ।
ಭೂತಂ ಭವ್ಯಂ ಭವಿಷ್ಯಂ ಚ ಯದ್ಭಾವ್ಯಮಭಯಂ ಪರಂ ॥೫೫॥

ಪರಾತ್ಪರಂ ಸಾಕ್ಷಿಣಂ ಚ ವಿಶ್ವಸ್ಮಾದುತ್ತರೋತ್ತರಂ ।
ಅಮೃತಂ ಪರಮಂ ಧಾಮ ಸೀಮಾಪುಚ್ಛಪ್ರತಿಷ್ಠಿತಂ ॥೫೬॥

ಋತಂ ಸತ್ಯಂ ಪರಂ ಧಾಮ ಬೃಹದ್ಬ್ರಹ್ಮ ಸನಾತನಂ ।
ಅಣೋರಣುಂ ಮಹಾಂತಂ ತಂ ಈಶಾನಂ ವಿಶ್ವತೋಮುಖಂ ॥೫೭॥

ಪುರೀಶಯಂ ಗುಹಾಸಂಸ್ಥಂ ಅವಸ್ಥಾತೀತಮೀಶ್ವರಂ ।
ಶಾಶ್ವತಂ ಧ್ರುವಮಕ್ಷಯ್ಯಂ ಕ್ಷರಾಕ್ಷರವಿಲಕ್ಷಣಂ ॥೫೮॥

---

ಸರ್ವೇಂದ್ರಿಯ ಗುಣಗಳಿಗೂ ದೂರನಾಗಿ, ಸ್ವಯಂ ಇಂದ್ರಿಯ ರಹಿತನೆನಿಸಿ, ಆಕಾಶ ಮಾತ್ರ ಕೋಶನೆನಿಸಿ ಚೈತನ್ಯವಸ್ತುವಾದ ಪರಬ್ರಹ್ಮವಸ್ತುವೇ ಶಿವನ ಧ್ಯೇಯವಸ್ತುವೆನಿಸಿತು. ॥೫೩-೫೪॥

ಪಾಪರಹಿತನೂ, ಮಂಗಳಪ್ರದನೂ, ವ್ಯಾಪ್ಯವ್ಯಾಪಕ ಎಂಬ ಯಾವ ಧರ್ಮ ಭೇದವೂ ಇಲ್ಲದವನೂ, ವರ್ತಮಾನ ಭೂತಭವಿಷ್ಯತ್ತೆಂಬ ಕಾಲಭೇದಕ್ಕೆ ಸಿಲುಕದವನೂ, ಭಯರಹಿತನೂ, ಪರಾತ್ಪರವಸ್ತುವೂ, ಪ್ರಪಂಚಕ್ಕೆ ಸಾಕ್ಷಿರೂಪದಿಂದಿರುವವನೂ, ಮರಣರಹಿತನೂ, ಪ್ರಪಂಚವನ್ನೇ ವ್ಯಾಪಿಸಿ ಆದ್ಯಂತಗಳಿಲ್ಲದೆ ಅಖಂಡಾಕಾರದಿಂದಿರುವವನೂ ಆದ ಪರಬ್ರಹ್ಮವಸ್ತುವನ್ನೇ ಶಂಕರನು ಮನಸಾ ಧ್ಯಾನಮಾಡತೊಡಗಿದನು. ॥೫೫-೫೬॥

ಕಾಯಿಕ ಮತ್ತು ವಾಚಿಕವಾದ ಸತ್ಯರೂಪವೆನಿಸಿ, ಸನಾತನನೆನಿಸಿ, ಅಣುವಿಗೂ ಅಣುವಾಗಿ ಮಹತ್ತಾದ ವಸ್ತುವಿಗೂ ಮಹಾವಸ್ತುವೆನಿಸಿ ಸರ್ವತೋಮುಖನಾಗಿರುವ, ಹಾಗೆಯೇ ಸರ್ವರ ಹೃದಯಕುಹರದಲ್ಲಿಯೂ ಅಡಗಿ, ಸರ್ವಾವಸ್ಥೆಗಳಿಂದಲೂ ದೂರನಾಗಿ, ನಾಶರಹಿತನೆನಿಸಿ, ಕ್ಷರಾಕ್ಷರ ಗುಣಗಳಿಲ್ಲದೆ ಕೇವಲ ಆನಂದಮಯನಾದ ಪರಬ್ರಹ್ಮನನ್ನು ಶಂಕರನು ದೃಢಭಾವನೆಯಿಂದ ಧ್ಯಾನಿಸಿದನು. ॥೫೭-೫೮॥

ಅಪಾಣಿಪಾದಜಘನಂ ಅಚಕ್ಷುರ್ಘ್ರಾಣಮೀಶ್ವರಂ ।
ಅಗಂಧಘ್ರಾಣರಸನಂ ಸರ್ವೇಂದ್ರಿಯಗುಣಾತಿಗಂ ॥೫೯॥

ಶಾಶ್ವತಂ ಶಾಂತಿಗಂಭೀರಂ ವೇದ್ಯಂ ಭೇದವಿವರ್ಜಿತಂ ।
ರಸಂ ಪರಹರಂ ತಾರಂ ಪ್ರಣವಂ ನಾದಬೋಧಿತಂ ॥೬೦॥

ಯೋಗಸಾಂಖ್ಯದುರಾಪಂ ತಂ ಸರ್ವಾತ್ಮಾನಂ ಗುಣಾತಿಗಂ ।
ವೇದವೇದಾಂತಸಂವೇದ್ಯಂ ವಿಶ್ವಾತ್ಮಾನಂ ಸನಾತನಂ ॥೬೧॥

ಭಾವಾಭಾವೈಕರಹಿತಂ ಹೃದಯಂ ಶರಣಂ ಶಿವಂ ।
ಪ್ರತ್ಯಗ್ದೃಶ್ಯಮನೌಪಮ್ಯಂ ಸರ್ವದೃಕ್ಸರ್ವಹೃದ್ಗತಂ ॥೬೨॥

ವೇದಾವೇದ್ಯಂ ನ ತದ್ವೇದ್ಯಂ ಅಭೇದ್ಯಂ ದ್ವೈತವರ್ಜಿತಂ ।
ಆನಂದಂ ವ್ಯಾಪಕಂ ಬೋಧಂ ಸರ್ವಚೈತನ್ಯಬೋಧದಂ ॥೬೩॥

ಬಹುರೂಪಮರೂಪಂ ಚ ಚಿದ್ಘನಂ ಭಾನಭಾನಕಂ ।
ಶಿವಂ ತುರೀಯಮದ್ವೈತಂ ಸರ್ವಾಂತರ್ಯಾಮಿಣಂ ಹರಂ ॥೬೪॥

---

ಕೈ, ಕಾಲು, ಸೊಂಟ, ಕಣ್ಣು, ಮೂಗು, ಈ ಯಾವ ಅವಯವಗಳೂ ಅಲ್ಲದೆ, ಇಂದ್ರಿಯ ಕಾರ್ಯಗಳೂ, ಇಂದ್ರಿಯವಿಷಯಗಳೂ ಆಗದೆ, ಕೇವಲ ಶಾಂತಿ ಗಂಭೀರಾತ್ಮಕವಾಗಿ, ಜೀವಾದಿಗಳ ಭೇದವಿಲ್ಲದೆ, ನಾದಾತ್ಮಕವಾದ ಪ್ರಣವವೇದ್ಯನಾಗಿ ಆನಂದರಸಮಯವಾದ ಬ್ರಹ್ಮವಸ್ತುವೇ ಈಶ್ವರನ ಧ್ಯಾನಕ್ಕೆ ಆಗ ವಿಷಯವಾಯಿತು. ||೫೯-೬೦||

ಯೋಗಾಭ್ಯಾಸದಿಂದಲೂ, ಸಾಂಖ್ಯಪ್ರಕ್ರಿಯೆಯಿಂದಲೂ ತಿಳಿಯಲಾಗದ, ಗುಣಾತೀತನಾದ, ವೇದವೇದಾಂತಗಳಿಂದ ಊಹಿಸಲ್ಪಡುವ, ಪ್ರಪಂಚರೂಪಿಯಾದ ಸನಾತನನೆನಿಸಿದ ಪರಬ್ರಹ್ಮವಸ್ತುವು, ಭಾವಾಭಾವಗಳಿಂದ ದೂರವೆನಿಸಿ, ಸರ್ವಹೃದಯಾಂತಃಪಾತಿಯಾಗಿ, ಜ್ಞಾನಗೋಚರನೆನಿಸಿ, ಸರ್ವದೃಕ್ಕುಗಳಲ್ಲಿಯೂ, ಸರ್ವರ ಹೃದಯದಲ್ಲಿಯೂ ನೆಲಸಿರುವ ಮಹಾಬ್ರಹ್ಮವಸ್ತುವನ್ನು ಶಂಕರನು ಆಶ್ರಯಿಸಿದನು. ||೬೧-೬೨||

ವಾಚಾ ವಿವರಿಸಲಾಗದ ಆ ಪರಬ್ರಹ್ಮವಸ್ತುವನ್ನು ವೇದವೂ ವಿವರಿಸಿ ಹೇಳಲಾರದು. ನಿಜವಾದ ರೂಪವೇ ಇಲ್ಲದ ಆ ವಸ್ತುವು ಜ್ಞಾನಘನವೆನಿಸಿರುವುದು.

ವಿಶ್ವಾತ್ಮಾನಂ ವಿಶ್ವರೂಪಂ ವೃತ್ತಿವಾಗ್ರೂಪವರ್ಜಿತಂ ।
ಸೂಕ್ಷ್ಮಂ ಸೂಕ್ಷ್ಮಪ್ರತೀಕಾಶಂ ವಾಚ್ಯವಾಚಕವರ್ಜಿತಂ ॥೬೫॥

ನ ದಿವ್ಯಂ ನಾಂತರಿಕ್ಷಂ ಚ ವೇದಾಶ್ರಮವಿವರ್ಜಿತಂ ।
ಆನಂದರೂಪಮಮೃತಂ ಸದ್ವೈಕರಸಮದ್ವಯಂ ॥೬೬॥

ಅಖಂಡೈಕರಸಂ ದೇವಃ ಸ್ವಾತ್ಮಾನಂ ಸ್ವಾತ್ಮನಿ ಸ್ಥಿತಂ ।
ನಿಶ್ಚಲಃ ಸ್ಥಾಣುವತ್ ಸ್ಥಾಣುರತಿಷ್ಠದ್ಗಣಸೇವಿತಃ ॥೬೭॥

ದಶಸಾಹಸ್ರಶರದಾಮೇವಂ ತೇಪೇ ತಪೋ ಹರಃ ॥೬೮॥

ಸ್ವಾತ್ಮಾನಮಾನಂದಮಖಂಡಬೋಧಂ
ವೇದಾಂತಸಾರಂ ಪರಮೇಶ್ವರಂ ತದಾ ।
ಸ್ವಾತ್ಮಾನಮಾಲೋಕ್ಯ ಸನಾತನಂ ಶಿವಂ
ನ ವೇದ ಕಿಂಚಾತ್ರ ನ ಕಿಂಚಿದೀಶ್ವರಃ

---

ಸ್ವಪ್ರಕಾಶಕವಾದ ವಸ್ತುವೇ ಅದು. ತುರೀಯವಸ್ತುವೆನಿಸಿ ಸರ್ವಾಂತರ್ಯಾಮಿಯೆನಿಸಿದ ಪರಾಪರವಸ್ತುವನ್ನೇ ಪರಶಿವನು ಧ್ಯಾನಿಸತೊಡಗಿದನು. ॥೬೩-೬೪॥

ಪರಬ್ರಹ್ಮವಸ್ತುವು ವಿಶ್ವರೂಪಿಯೂ, ವಿಶ್ವಾತ್ಮನೂ, ವೃತ್ತಿಯಿಂದಲೂ ವಾಕ್ಕಿನಿಂದಲೂ ದೂರನಾದವನು, ಸೂಕ್ಷ್ಮವಸ್ತುವು, ಸೂಕ್ಷ್ಮವೃತ್ತಿಯಿಂದ ವಿರಾಜಿಸುವವನು, ವಾಚ್ಯವಾಚಕಗಳಿಲ್ಲದಿರುವವನು, ದಿವ್ಯ, ಅಂತರಿಕ್ಷ ಈ ವಸ್ತುಗಳಲ್ಲದವನು, ವೇದಾಶ್ರಮವಿವರ್ಜಿತನು, ಆನಂದರೂಪಿಯು, ಅಮೃತರೂಪಿಯು, ದ್ವಿತೀಯವಸ್ತು ರಹಿತನಾಗಿ ಏಕರಸಾತ್ಮಕನಾಗಿರುವವನು, ಇಂತಹ ಪರಬ್ರಹ್ಮವಸ್ತುವನ್ನು ಶಂಕರನು ಧ್ಯಾನಿಸುತ್ತಿದ್ದನು. ॥೬೫-೬೬॥

ಅಖಂಡಸ್ವರೂಪವಾದ ಆತ್ಮಹೃದಯ ಕುಹರದಲ್ಲಿ ಅಡಗಿರುವ ಪರಬ್ರಹ್ಮ ವಸ್ತುವನ್ನು, ನಿಶ್ಚಲನೂ, ಸ್ಥಾಣುವಂತಿರುವವನೂ, ಪ್ರಮಥಗಣಗಳಿಂದ ಸೇವಿತನೂ ಆಗಿರುವ ಪರಮ ಶಿವನು ಧ್ಯಾನಿಸುತ್ತಾ, ಹತ್ತುಸಾವಿರವರ್ಷ ಪರ್ಯಂತವಾಗಿ ತಪಸ್ಸನ್ನಾಚರಿಸಿದನು. ॥೬೭-೬೮॥

ಆನಂದಾತ್ಮಕನೂ, ವೇದಾಂತಸಾರನೂ, ಪರಮಾತ್ಮನೂ, ಎನಿಸಿದ ಪರಬ್ರಹ್ಮ ವಸ್ತುವೊಂದನ್ನು ಬಿಟ್ಟು ಸೋಹಂಭಾವದಿಂದ ಶಿವನು ಮತ್ತಾವ ವಸ್ತುವನ್ನೂ

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ ಮಂದರಾಚಲ ಶಿವತಪೋವರ್ಣನಂ ನಾಮ ಅಷ್ಟಮೋಽಧ್ಯಾಯಃ

---

ಮನಸ್ಸಿನಲ್ಲಿ ಯೋಚಿಸಲಿಲ್ಲ. ಬೇರೆ ಯಾವ ವಸ್ತುವನ್ನೂ ಶಂಕರನು ಲಕ್ಷಿಸಲಿಲ್ಲ. ಕೇವಲ ಆತ್ಮಧ್ಯಾನದಲ್ಲಿಯೇ ಮಗ್ನನಾಗಿ ಪರಮಾತ್ಮರೂಪನೇ ಆಗಿಬಿಟ್ಟನು. ॥೬೯॥

ಇಲ್ಲಿಗೆ ಶ್ರೀ ಶಿವರಹಸ್ಯದ ದ್ವಾದಶಾಂಶದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ನವಮೋಧ್ಯಾಯಃ

॥ ಮುನಯ ಊಚುಃ ॥

ಕಥಂ ಹಿಮವತಃ ಪುತ್ರೀ ಸಂಜಾತಾ ಸಾ ಸತೀ ಮುನೇ ।
ಉದ್ವಾಹೋತ್ರ ಕಥಂ ಶಂಭೋಃ ಪಾರ್ವತ್ಯಾ ಶಂಕರಸ್ಯ ಚ ॥೧॥

ತನ್ನೋ ವದ ವಿಶೇಷೇಣ ಜನ್ಮ ದೇವ್ಯಾ ಪಿನಾಕಿನಃ ।
ಉದ್ವಾಹಮಪಿ ತಚ್ಛಂಭೋಃ ತಾರಕಾರಿಸಮುದ್ಭವಂ ॥೨॥

ವಿಸ್ತರೇಣ ವದಾಸ್ಮಾಕಂ ಯಥಾ ಸ್ಕಂದಮುಖಾಚ್ಛ್ರುತಂ ।
ಜೈಗೀಷವ್ಯಾಯ ಮುನಯೇ ಸುರಾಣಾಂ ಗಣಪಾಗ್ರತಃ ॥೩॥

---

## ಒಂಬತ್ತನೆಯ ಅಧ್ಯಾಯ

ಸೂತಮಹರ್ಷಿಯು ಪರಶಿವನು ಮಂದರಗಿರಿಯಲ್ಲಿ ತಪಸ್ಸಿಗೆ ಕುಳಿತ ಕಥೆಯನ್ನು ಹೇಳಿ ಸುಮ್ಮನಾಗಲು, ಅದನ್ನೆಲ್ಲಾ ಭಕ್ತಿಯಿಂದ ಆಲಿಸುತ್ತಿದ್ದ ವಾಜಶ್ರವಸರೇ ಮೊದಲಾದ ಮಹರ್ಷಿಗಳು ಮತ್ತೆ ಸೂತಮಹಾಮುನಿಯನ್ನು ಕುರಿತು "ಮಹರ್ಷಿವರ್ಯನೇ, ಯೋಗಾಗ್ನಿಯಿಂದ ದಗ್ಧಳಾಗಿದ್ದ ಸತೀದೇವಿಯು ಹಿಮವಂತನ ಪುತ್ರಿಯಾಗಿ ಜನ್ಮವೆತ್ತಿದುದು ಹೇಗೆ? ಮತ್ತೆ ಪರಶಿವನು ಪರ್ವತರಾಜಪುತ್ರಿಯನ್ನು ಯಾವ ರೀತಿ ವಿವಾಹಮಾಡಿಕೊಂಡನು.? ಆ ಶಿವದಂಪತಿಗಳಿಂದ ತಾರಕಾರಿಯಾದ ಕುಮಾರಸ್ವಾಮಿಯು ಜನಿಸಿದ ಬಗೆ ಹೇಗೆ? ಈ ಎಲ್ಲ ವಿಷಯವನ್ನೂ ದಯೆಯಿಟ್ಟು ನಮಗೆ ತಿಳಿಯಪಡಿಸಬೇಕು. ಮತ್ತು ಇದೇ ವಿಚಾರವನ್ನು ಹಿಂದೆ ಕುಮಾರ

॥ ಸೂತ ಉವಾಚ ॥

ಏವಮೇವ ಪುರಾ ಪೃಷ್ಟಃ ಸುಬ್ರಹ್ಮಣ್ಯೋ ಹರಾತ್ಮಜಃ ।
ಜೈಗೀಷವ್ಯೇನ ಮುನಿನಾ ಗಣೈಸ್ಸುರಗಣೈಸ್ಸಹ ॥೪॥

ತಮಾಹ ತಾರಕಾರಾತಿಃ ಪಾರ್ವತ್ಯಾ ಜನ್ಮ ಸತ್ತಮಂ ।
ತದಾ ಹಿಮವತೋ ಗರ್ಭೇ ತಾರಕಾರಿಃ ಸ್ವಕೋದ್ಭವಂ ॥೫॥

ಸೇನಾಪತ್ಯೇ ಸ್ಥಿತಿಂ ಸ್ವಸ್ಯ ಗಜಾನನಸಮುದ್ಭವಂ ।
ತ್ರಿಪುರಾಣಾಂ ಚ ಸಂಮರ್ದಂ ಕಥಯಾಮಾಸ ವಿಸ್ತರಾತ್ ॥೬॥

॥ ಶ್ರೀ ಸುಬ್ರಹ್ಮಣ್ಯ ಉವಾಚ ॥

ಯದಾ ಸತೀ ತನುಂ ತ್ಯಕ್ತ್ವಾ ಯೋಗೇನೈವ ಸ್ವತೇಜಸಾ ।
ಸುಮುಹೂರ್ತೇ ಸುದಿವಸೇ ಮೇನಾ ಗರ್ಭಂ ಸಮಾವಿಶತ್ ॥೭॥

---

ಸ್ವಾಮಿಯು ತನ್ನ ತಾಯಿಯಾದ ಪಾರ್ವತಿಯಿಂದಲೇ ತಿಳಿದು ಜೈಗೀಷವ್ಯಾದಿಗಳಿಗೆ ವಿಸ್ತರಿಸಿ ಹೇಳಿರುವನೆಂದು ನೀನೇ ತಿಳಿಸಿದೆಯಲ್ಲವೆ? ಆ ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಯಪಡಿಸಿದ ವಿಷಯವನ್ನೇ ನಮಗೆ ಬೋಧಿಸು'' ಎಂದು ಪರಿಪರಿಯಾಗಿ ಪ್ರಾರ್ಥಿಸಿಕೊಂಡರು. ॥೧-೨-೩॥

ಆಗ ಸೂತರು ಮಹರ್ಷಿಗಳನ್ನು ಕುರಿತು "ಮುನಿಗಳೇ ಕೇಳಿರಿ. ಈಗ ನೀವು ಪ್ರಶ್ನಿಸಿದಂತೆಯೇ ಹಿಂದೆ ಜೈಗೀಷವ್ಯಾದಿಗಳು ಹರಸುತನಾದ ಸ್ಕಂದಸ್ವಾಮಿಯನ್ನು ಕೇಳಿಕೊಂಡರು. ಆಗ ಕುಮಾರಸ್ವಾಮಿಯೇ ಸಾಕ್ಷಾತ್ತಾಗಿ, ಪಾರ್ವತಿಯು ಹಿಮವಂತನಗೃಹದಲ್ಲಿ ಜನ್ಮತಾಳಿದುದು, ತಾರಕಾರಿಯಾದ ತಾನು ಪಾರ್ವತಿಯಿಂದ ಜನಿಸಿದುದು, ಮತ್ತು ಗಜಾನನ ಉತ್ಪತ್ತಿಕ್ರಮ, ಹಾಗೆಯೇ ತಾವು ಸೇನಾಪತಿಗಳಾಗಿ ತ್ರಿಪುರಗಳನ್ನೂ ತಾರಕಾಸುರನನ್ನೂ ಧ್ವಂಸಮಾಡಿದುದು, ಈ ವಿಷಯಗಳೆಲ್ಲವನ್ನೂ ವಿಸ್ತಾರವಾಗಿ ತಿಳಿಯಪಡಿಸಿದನು. ಅದನ್ನೇ ನಿಮಗೆ ಈಗ ತಿಳಿಯಹೇಳುವೆನು'' ಎಂದು ಸುಬ್ರಹ್ಮಣ್ಯೋಕ್ತಿಯನ್ನು ವಿಸ್ತರಿಸಿ ಹೇಳಲುಪಕ್ರಮಿಸಿದರು. ॥೪-೫-೬॥

ಸತೀದೇವಿಯು ಯೋಗಾಗ್ನಿಯಿಂದ ದಕ್ಷಬ್ರಹ್ಮನ ಯಾಗಮಂಟಪದಲ್ಲಿ ದೇಹತ್ಯಾಗಮಾಡಿ, ಸುಮುಹೂರ್ತದಲ್ಲಿ ಮೇನಾದೇವಿಯ ಗರ್ಭವನ್ನು ಪ್ರವೇಶಿ

ವಿಚಿತ್ರಶಕ್ತಿಃ ಸಾದೇವೀ ಮಾಯಾ ಪಶುಪತೇಸ್ತದಾ ।
ತತ್ರೈವ ದಶಮೋ ಮಾಸಿ ಶುಭಲಗ್ನಗ್ರಹೈರ್ಯುತೇ ॥೮॥

ಉಚ್ಚಸ್ಥೇ ಪಂಚಸು ಶಿವಾ ತದಾ ಹಿಮವತೋ ಗೃಹೇ ।
ಜಜ್ಞೇ ತತ್ರ ಮಹಾದೇವೀ ತದಾಭೂದುತ್ಸವೋ ಮಹಾನ್ ॥೯॥

ದೇವಾಸ್ತತ್ರ ಸಮಾಜಗ್ಮುರ್ವಿಷ್ಣುಬ್ರಹ್ಮಾದಯಸ್ಸುರಾಃ ।
ಮರುತೋ ವಸವಃ ಸಾಧ್ಯಾ ಗಂಧರ್ವಾಶ್ಚ ಜಗುಃ ಕಲಂ ॥೧೦॥

ದೇವದುಂದುಭಯೋ ನೇದುಃ ಪುಷ್ಪವೃಷ್ಟಿರಭೂಚ್ಚ ಖಾತ್ ।
ನೃತ್ಯಂತ್ಯಪ್ಸರಸೋ ಹೃಷ್ಟಾಸ್ತದಾ ಹಿಮವತೋ ಗೃಹೇ ॥೧೧॥

ಸೋಽಪಿ ವಿಶ್ರಾಣಯಾಮಾಸ ಧನಧಾನ್ಯಗವಾಂಗಣಂ ।
ರತ್ನಾನಿ ಚೈವ ವಾಸಾಂಸಿ ಪ್ರದದೌ ಶಾಂಭವೇಷು ಸಃ ॥೧೨॥

---

ಸಿದಳು. ಪಶುಪತಿಯ ಪತ್ನಿಯೆನಿಸಿದ ಸತೀದೇವಿಯು ಮಾಯಾಶಕ್ತಿಯಲ್ಲವೇ ! ವಿಚಿತ್ರಶಕ್ತಿಯುಳ್ಳ ಆ ದೇವಿಯು ಮೇನಾಗರ್ಭವನ್ನು ಪ್ರವೇಶಿಸುದರಲ್ಲಿ ಆಶ್ಚರ್ಯವೇನು ? ಮೇನಾದೇವಿಯ ಗರ್ಭದಲ್ಲಿ ಹತ್ತುತಿಂಗಳ ಕಾಲ ಶಿಶುವಾಗಿ ಬೆಳೆದು ಶುಭಮುಹೂರ್ತದಲ್ಲಿ ಪಾರ್ವತಿಯಾಗಿ ಅವತರಿಸಿದಳು. ॥೭-೮॥

ಪಾರ್ವತಿಯ ಜನನಕಾಲದಲ್ಲಿ ಐದುಗ್ರಹಗಳು ಉಚ್ಚರಾಶಿಯಲ್ಲಿದ್ದುವು. ಪಾರ್ವತಿಯ ಜನನಕಾಲವು ಒಂದು ದೊಡ್ಡ ಉತ್ಸವಕಾಲವಾಗಿ ಪರಿಣಮಿತವಾಗಿದ್ದಿತು. ಬ್ರಹ್ಮ, ವಿಷ್ಣು, ಮರುದ್ಗಣಗಳು, ವಸುಗಳು, ಸಾಧ್ಯರು, ಗಂಧರ್ವರೂ ಮೊದಲಾದವರೆಲ್ಲರೂ ಬಂದಿದ್ದರು. ಗಂಧರ್ವರು ದಿವ್ಯಗಾನಮಾಡಿದರು. ॥೯-೧೦॥

ದೇವದುಂದುಭಿಗಳು ಮೊಳಗಿದುವು. ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತು. ಅಪ್ಸರಸ್ತ್ರೀಯರು ನರ್ತನಮಾಡಿದರು. ಹಿಮವಂತನ ಗೃಹದಲ್ಲಿ ದೊಡ್ಡ ಹಬ್ಬವಾಯಿತು. ಹಿಮವಂತನು ಪುತ್ರೀಜನನದ ಸಂತೋಷಾರ್ಥವಾಗಿ ರತ್ನ, ವಸ್ತ್ರಮುಂತಾದುವುಗಳನ್ನು ಶಾಂಭವರಾಗಿದ್ದ ಸತ್ಪುರುಷರಿಗೆ ದಾನಮಾಡಿದನು. ॥೧೧-೧೨॥

ಮುನಯಃ ಪೂಜಿತಾಸ್ತೇನ ನಾರದಾದ್ಯಾ ಮಹರ್ಷಯಃ ।
ವಿಷ್ಣುಬ್ರಹ್ಮಾದಿವಿಬುಧಾನ್ ಗಂಧಪುಷ್ಪೈಃ ಸಮರ್ಚಯತ್ ॥೧೩॥

ಭಕ್ಷ್ಯೈರ್ಭೋಜ್ಯೈಶ್ಚ ವಾಸೋಭಿರ್ಭೂಷಣೈರ್ಮುದಮಾದಧತ್ ।
ಜಾತಕರ್ಮಾದಿಕರ್ಮಾಣಿ ಚಕಾರ ಸ ಗಿರೀಶ್ವರಃ ॥೧೪॥

ಯಯುಃ ಸಂತೋಷ್ಯ ಗಿರಿಶಂ ಮುದಾ ತೇ ವಿಬುಧರ್ಷಯಃ ।
ಮೇನಯಾ ಸಹ ತಾಂ ದೃಷ್ಟ್ವಾ ಪಾರ್ವತೀಂ ಸೂತಿಕಾಗೃಹೇ ॥೧೫॥

ಉತ್ತಾನಶಾಯಿನೀಂ ಬಾಲಾಂ ನೀಲಕುಂಚಿತಮೂರ್ಧಜಾಂ ।
ಪದ್ಮಪತ್ರೇಕ್ಷಣಾಂ ಚಾರುಬಿಂಬೋಷ್ಠೀಂ ಪದ್ಮವಕ್ತ್ರಕಾಂ ॥೧೬॥

ಕಂಬುಕಂಠೀಂ ಮೃಣಾಲಾಭಾಂ ಬಾಹುದ್ವಯವಿರಾಜಿತಾಂ ।
ರಕ್ತಾಬ್ಜಾಭಸುಹಸ್ತಾಂ ಚ ನಖಚಂದ್ರಯುತಾಂಗುಲಿಂ ॥೧೭॥

ಬಾಲರಂಭಾಭವೃತ್ತೋರು ಕುಕ್ಷಿಜಂಘಾಘನಾವೃತಾಂ ।
ಫುಲ್ಲಪದ್ಮಾಭಪಾದೇನ ಉತ್ತಾನೇನ ವಿರಾಜಿತಾಂ ॥೧೮॥

---

ಹಿಮವಂತನು ನಾರದಾದಿ ಮಹರ್ಷಿಗಳನ್ನೂ, ವಿಷ್ಣುಬ್ರಹ್ಮಾದಿ ಸಮಸ್ತ ದೇವಶ್ರೇಷ್ಠರನ್ನೂ ಗಂಧಪುಷ್ಪಾದಿಗಳಿಂದ ಪೂಜಿಸಿದನು. ಮತ್ತು ವಿಧವಿಧವಾದ ಭಕ್ಷ್ಯಭೋಜ್ಯಾದಿಗಳಿಂದಲೂ ವಸ್ತ್ರಾಭರಣಗಳಿಂದಲೂ ಅವರನ್ನು ತೃಪ್ತಿಪಡಿಸಿದನು. ಅನಂತರ ಗಿರಿರಾಜನು ತನ್ನ ಮಗಳಿಗೆ ಜಾತಕರ್ಮಾದಿ ವಿಧ್ಯುಕ್ತ ಸಂಸ್ಕಾರಗಳನ್ನು ನೆರವೇರಿಸಿದನು. ॥೧೩-೧೪॥

ಅದನ್ನು ನೋಡಿ ಸಂತೋಷಪಟ್ಟು ಸಮಸ್ತದೇವತೆಗಳೂ ಮಹರ್ಷಿಗಳೂ ತಮ್ಮ ನಿವಾಸಗಳಿಗೆ ತೆರಳಿದರು. ಇತ್ತ ಗಿರಿರಾಜನು ಸೂತಿಕಾಗೃಹದಲ್ಲಿ ಮೇನಾ ದೇವಿಯ ಜೊತೆಯಲ್ಲಿ ಮಲಗಿದ್ದ ತನ್ನ ಪುತ್ರಿಯನ್ನು ನೋಡಿ ಆನಂದಪಟ್ಟನು. ಆ ಮಗುವಾದರೋ ಮುಖವನ್ನು ಮೇಲೆ ಮಾಡಿಕೊಂಡು ಮಲಗಿದ್ದಿತು. ನೀಲ ವರ್ಣದ ಮುಂಗುರುಳೂ, ಪದ್ಮದಂತಿರುವ ಮುಖವೂ, ತೊಂಡೆಯಹಣ್ಣಿನಂತಿರುವ ತುಟಿಯೂ, ತಾವರೆಯ ಎಸಳಿನಂತಿರುವ ದೃಷ್ಟಿಯೂ, ಮಗುವನ್ನು ಅತಿಯಾಗಿ ಸೌಂದರ್ಯಗೊಳಿಸಿದ್ದಿತು. ॥೧೫-೧೬॥

ಶಿಶುವಿನ ಕತ್ತು ಶಂಖದ ಆಕಾರದಲ್ಲಿತ್ತು. ತಾವರೆಯ ದಂಟಿನಂತೆ ಎರಡು

ದ್ವಿತೀಯಸೋಮಸಂಕಾಶಪಾದಾಂಬುಜ ನಖಾವಲಿಂ ।
ವ್ಯಾಲೋಲನಯನಾಂ ಬಾಲಾಂ ಸರ್ವಭೂಷಣಭೂಷಿತಾಂ ॥೧೯॥

ರತ್ನಗ್ರೈವೇಯವಲಯೈರ್ಮುಕ್ತಾಹಾರವಿರಾಜಿತಾಂ ।
ಫಾಲಮಧ್ಯಾಲಕಾಲೋಲ ಮುಕ್ತಾಜಾಲಕಭೂಷಿತಾಂ ॥೨೦॥

ತಿಲಕಾಕ್ತಮುಖೇಂದೂತ್ಥ ಕರ್ಣಬಾಲಿಕಭೂಷಿತಾಂ ।
ದಿವ್ಯವ್ಯಾಘ್ರ ನಖಾಸಕ್ತ ಖಚಿತಾರತ್ನಪಂಕ್ತಿಭಿಃ ॥೨೧

ಬಾಲೇಂದುಸಾರಮುಕುಟಾಂ ಕಂಕಣಾಂಗದಭೂಷಣಾಂ ।
ರೂಷಿತಾಂ ದಿವ್ಯಗಂಧೇನ ದಿವ್ಯಪುಷ್ಪೈಸ್ಸುರಾರ್ಚಿತಾಂ ॥೨೨॥

ಕಾಂಚಿಕಾಚಿತ್ರಮಧ್ಯಾಂ ಚ ಕ್ಷುದ್ರಘಂಟಾಲಿಸತ್ಕಟಿಂ ।
ಪಾದನೂಪುರಸಂರಾವಜಿತಕ್ರೌಂಚವರಸ್ವನಾಂ ॥೨೩॥

---

ತೋಳುಗಳೂ, ಕೆಂಪುಕಮಲದಂತಿರುವ ಹಸ್ತಗಳೂ, ಅರ್ಧಚಂದ್ರನಂತೆ ಉಗುರುಗಳೂ, ಎಳೆ ಬಾಳೆಯದಿಂಡಿನಂತೆ ತೊಡೆಗಳೂ, ಸುಳಿಯಂತಿರುವ ಹೊಕ್ಕುಳೂ, ಅರಳಿದ ಕಮಲದಂತಿರುವ ಪಾದಗಳೂ ಮನೋಹರವಾಗಿ ಕಾಣುತ್ತಿದ್ದುವು.॥೧೭-೧೮॥

ಬಿದಿಗೆಯ ಅರ್ಧಚಂದ್ರನಂತೆ ಕಾಲುಗುರುಗಳು ಹೊಳೆಯುತ್ತಿರುವುವು. ಚಂಚಲವಾದ ನೇತ್ರವೂ, ಸರ್ವಾಭರಣಗಳಿಂದ ಕೂಡಿದ ಅವಯವವೂ ನೋಡಲು ಮನೋಹರವಾಗಿದ್ದಿತು. ರತ್ನಾಭರಣಗಳೂ, ಮುತ್ತಿನ ಹಾರಗಳೂ, ಹಣೆಯ ಮಧ್ಯದಲ್ಲಿ ಹೊಳೆಯುವ ಹಣೆಬಟ್ಟೂ, ಗಾಳಿಗೆ ಅಲುಗುತ್ತಿರುವ ಮುಂಗುರುಳೂ ಬಹಳ ಸುಂದರವಾಗಿ ಕಾಣುತ್ತಿದ್ದುವು. ॥೧೯-೨೦॥

ಮುಖದಲ್ಲಿ ತಿಲಕಾಕಾರವೂ, ಕಿವಿಯಲ್ಲಿ ಓಲೆಯ ಗುರುತೂ, ಕೊರಳಿನಲ್ಲಿ ಹುಲಿಯುಗುರುಗಳಿಗೆ ಸೇರಿದಂತೆ ನಿರ್ಮಿಸಿರುವ ರತ್ನಹಾರವೂ, ಬಾಲಚಂದ್ರನಿಂದ ರಂಜಿತವಾದ ಕಿರೀಟವೂ, ಕೈಬಳೆ ತೋಳುಗಳೂ, ದೇವಲೋಕದಿಂದ ಸುರಿಸಲ್ಪಟ್ಟ ಪುಷ್ಪಮಾಲೆಗಳ ಸುಗಂಧವೂ, ಪಾರ್ವತಿಯನ್ನು ಬಹಳವಾಗಿ ಅಲಂಕಸಿದ್ದುವು. ॥೨೧-೨೨॥

ಸೊಂಟವು ಕಿರುಗೆಜ್ಜೆಗಳಿಂದ ಕೂಡಿ ಮನೋಹರವಾಗಿದ್ದಿತು. ಕಾಲುಬಳೆಗಳಿಂದ ಹೊರಟ ಇಂಚರವು ಕ್ರೌಂಚಪಕ್ಷಿಗಳ ದನಿಯನ್ನು ತಿರಸ್ಕರಿಸುವಂತಿದ್ದಿತು.

ದಿವ್ಯವಾಸೋಭಿರಾಚ್ಛನ್ನಾಂ ಲೋಲಾಂದೋಲನವೀಜಿತಾಂ ।
ದೇವಪತ್ನ್ಯಃ ಸಮಾಗತ್ಯ ಶಚೀ ಸ್ವಾಹಾಸ್ವಧಾರಮಾ ॥೨೪॥

ನೀರಾಜಯಂತಿ ತಾಂ ದೇವೀಂ ದಿವ್ಯಮಂಗಳಗಾಯನೈಃ ।
ರಕ್ಷಾಂ ರಕ್ಷಾಕರೀಂ ತಸ್ಯಾಃ ರಾಕ್ಷಸೇಭ್ಯಸ್ತದಾ ಮುದಾ ॥೨೫॥

ರಾತ್ರೌ ರಾತ್ರೌ ಪಠಂತಿಸ್ಮ ಸಮವೇತಾ ಮಹರ್ಷಯಃ ।
ಗಾಯಂತಿ ಲಲಿತಂ ವಲ್ಗು ಮಧುರಂ ಗಾಯನಂ ತದಾ ॥೨೬॥

॥ ದೇವಸ್ತ್ರಿಯ ಊಚುಃ ॥

ತದ್ಗಾಯನೇನ ಸಾ ದೇವೀ ವಿನಿದ್ರಾತಿ ದಿನೇ ದಿನೇ ॥೨೭॥

ಅಯಿ ಜಗದಂಬ ಕದಂಬ ವನಸ್ಥಿತ ನೀಪವಿದೀಪಿತ
ಸೌಧಯುತಾಮೃತವಾರ್ಧಿತರಂಗಿತವಾತ
ಸುಪೋತಕವೀಜಿತರತ್ನಗಣಪ್ರಭಲೋಲಕ
ಡೋಲವರಾಸನತಾನವಿತಾನಸುವಸ್ತ್ರಮಣೀ
ಗಣಪುಷ್ಪವಿರಾಜಿತಫುಲ್ಲಸುಹಲ್ಲಕಲೋಲ

---

ತೊಟ್ಟಿಲಿನಲ್ಲಿ ಮಲಗಿಸಿ ದಿವ್ಯವಸ್ತ್ರವನ್ನು ಹೊಂದಿಸಿ, ಜೋಗುಳ ಹಾಡುತ್ತಾ ದೇವತಾಸ್ತ್ರೀಯರೂ, ಶಚಿ, ಸ್ವಾಹಾ, ಸ್ವಧಾ, ರಮಾದೇವಿಯರೂ ತೊಟ್ಟಿಲನ್ನು ತೂಗುತ್ತಿದ್ದರು. ॥೨೩-೨೪॥

ಮತ್ತು ದಿವ್ಯಮಂಗಳಕರವಾದ ಹಾಡುಗಳನ್ನು ಹೇಳುತ್ತಾ ಆರತಿಯೆತ್ತಿದರು. ರಾಕ್ಷಸರಿಂದ ಯಾವ ವಿಧವಾದ ತೊಂದರೆಯೂ ಉಂಟಾಗದಂತೆ ಕೈಗೆ ರಕ್ಷಾಬಂಧನವನ್ನು ಕಟ್ಟಿದರು. ಪ್ರತಿದಿನವೂ ಮಹರ್ಷಿಗಳು ರಾತ್ರಿಸೂಕ್ತವನ್ನು ಪಠಿಸುತ್ತಾ, ರಾಕ್ಷಸಬಾಧೆಯುಂಟಾಗದಂತೆ ಮಂತ್ರಪಠನಮಾಡುತ್ತಿದ್ದನು. ಆ ಮಂತ್ರಗಾನದಿಂದ ಶಿಶುವು ಸುಖನಿದ್ದೆಮಾಡುತ್ತಿದ್ದಿತು. ॥೨೫-೨೬॥

ದೇವತಾಸ್ತ್ರೀಯರು ಆ ಗೀತದಲ್ಲಿ ಈರೀತಿ ಪಾರ್ವತಿಯನ್ನು ಸ್ತುತಿಸುತ್ತಿದ್ದರು "ಜಗನ್ಮಾತೆಯೇ, ಕದಂಬವನದಲ್ಲಿ ನೀಪವೃಕ್ಷಗಳಿಂದ ಪ್ರಕಾಶಿತವಾದ ಸೌಧದಲ್ಲಿ, ಅಮೃತಸಮುದ್ರದ ಅಲೆಯಮೇಲೆ ಬೀಸುವ ಮಂದಮಾರುತದಿಂದ ಅಲುಗಾಡುವ ರತ್ನಹಾರಗಳಿಂದ ಶೋಭಿತಳಾದವಳೇ, ದಿವ್ಯಹರ್ಮ್ಯದ ಮಧ್ಯದಲ್ಲಿ

ಸಮಾವೃತ ಮಂಚವಿಕರ್ಷಣಕೂಜಿತಘನರವ
ರಾಗವಿರಾಗವಿರಾಗಮೃಗಾವಲಿಧೂತವಿಧೂತ
ಸುಚಾಮರ ಚಂದ್ರಿಕವೀಜನವೀಜಿತಮಾರುತ
ಸೋಪಘನಾವೃತಚಂದ್ರಸಮಪ್ರಭಧೂತ
ತರಾಳ್ಕೃತಿದೇವಗಣಾಂಗನಾಗೀತಮಿದಂ ॥೨೮॥

ವಿಶ್ರುತಮಣಿಗಣಭೂಷಣಕೃತರವ
ರಿಂಖಣಝುಣಝುಣರವಘೋಷಣ
ನಿದ್ರಿತಹರ್ಷಿತಧರ್ಷಿತವರ್ಷಿತತರ್ಷಿತ
ಮೇಘಸುಚಾತಕಪೋತಕಜಾತಕಭಾವುಕ
ಕಲ್ಪನಶಿಲ್ಪನಜಾತಸುಸಂಭ್ರಮದಿಗ್ಗಜ
ಗರ್ಜನತೋಷಸ್ತುತಾವಿತಸರ್ವಸುರಾವನ
ಪಾವನಸುಂದರ ಮಂದಿರ ನಿರ್ಜರದಾರಕೃತ
ಸ್ತುತಿನಿದ್ರಿತ ಪರ್ವತಬಾಲಮಬಾಲತನು
ಪ್ರಭಾಭಾವಿತ ನತಜನಪೋಷಿತವಿಶ್ರುತಗೀತಮಿದಂ ॥೨೯॥

---

ತೂಗುಮಂಚದಲ್ಲಿ ಕುಳಿತು, ಅರಳಿದ ದೇವಲೋಕದ ಪುಷ್ಪಗಳಿಂದ ಬರುತ್ತಿರುವ ಸುವಾಸನೆಯನ್ನು ಸೇವಿಸುತ್ತಾ ಮೇಘಧ್ವನಿಯನ್ನು ತಿರಸ್ಕರಿಸುವ ಉಯ್ಯಾಲೆಯ ಧ್ವನಿಯನ್ನು ಆಲೈಸುತ್ತಾ, ಸುತ್ತಲೂ ಚಮರೀಮೃಗಗಳು ತಮ್ಮ ಬಾಲಗಳನ್ನೆತ್ತಿ ಚಾಮರದಂತೆ ಬೀಸುತ್ತಿರಲು, ಮೇಘಗಳಿಂದ ಆವೃತವಾದ ಚಂದ್ರಮಂಡಲದಂತೆ ದೇವತೆಗಳಿಂದ ಪರಿವೃತಳಾಗಿ ನೀನು ವಿರಾಜಿಸುತ್ತಿರುವೆ." ಎಂದು ದೇವಿಯನ್ನು ವರ್ಣಿಸುತ್ತಾ ಹಾಡುತ್ತಿದ್ದರು. ॥೨೭-೨೮॥

ಪ್ರಸಿದ್ಧವಾದ ರತ್ನಭೂಷಣಗಳಿಂದ ಅಲಂಕೃತವಾದ ದೇವಿಯ ದೇಹವು ಅಲುಗಾಡುತ್ತಿರುವಾಗ, ಅದರಿಂದ ಹುಟ್ಟಿದ ಧ್ವನಿಯು ಮೇಘಧ್ವನಿಯನ್ನು ತಿರಸ್ಕರಿಸುವುದು. ದೇವಿಯು ಭಕ್ತಜನಪೋಷಕವಾದ ಕೃಪಾದೃಷ್ಟಿಯನ್ನು ಎದುರು ನೋಡುತ್ತಾ ಭಕ್ತವೃಂದವು, ಚಾತಕಪಕ್ಷಿಯು ಮೇಘಮಂಡಲವನ್ನು ನೀರಿಗಾಗಿ ನಿರೀಕ್ಷಿಸುವಂತೆ ಕಾದು ನಿಂತಿರುವುದು. ಸಕಲ ದೇವತೆಗಳೂ ದೇವಿಯ ಸುತ್ತ ನಿಂತು ಸ್ತುತಿಸುತ್ತಿದ್ದರೆ ಅಷ್ಟದಿಗ್ಗಜಗಳು ಎಂಟುದಿಕ್ಕಿನಿಂದಲೂ ಗರ್ಜಿಸುತ್ತಿವೆಯೋ

ಏವಂ ಗೀತೇನ ತಾಂ ಬಾಲಾಂ ದೇವ್ಯೋ ನಿದ್ರಾಪಯಂತ್ಯಪಿ ।
ಲಾಲಯಂತಿ ಸ್ತ್ರಿಯಃ ಕಾಶ್ಚಿತ್ಸ್ನಾಪಯಂತಿ ಮನೋರಮಾಃ ॥೩೦॥

ಭೂಷಯಂತಿ ತದಾ ಬಾಲಾಂ ತಿಲಕೈರ್ವೇಣುಮಂಡನೈಃ ।
ಪಾಯಯಂತಿ ತಥಾ ಸ್ತನ್ಯಂ ಧಿಕ್ಕೃತಾಮೃತಮುತ್ತಮಂ ॥೩೧॥

ದಿನೇ ದಿನೇ ಮಹಾದೇವೀಂ ತದಾ ನೀರಾಜಯಂತ್ಯಪಿ ।
ದುಕೂಲವಸನೈಶ್ಚಿತ್ರೈರ್ವಾಸಯಂತ್ಯಸ್ತ್ರಿಯೋಽಖಿಲಾಃ ॥೩೨॥

ಏವಂ ತತ್ರ ಮಹಾದೇವಂ ಪೂಜಯಂತಿ ಸುರಾಂಗನಾಃ ।
ತದಾ ಸಾ ವವೃಧೇ ಬಾಲಾ ಕಲಾ ಚಾಂದ್ರಮಸೀವ ಸಾ ॥೩೩॥

॥ ಹಿಮವಾನುವಾಚ ॥

ತಾಂ ದೃಷ್ಟ್ವಾ ಪಾರ್ವತೀಂ ದೇವೀಂ ಹಿಮವಾನ್ಮೇನಯಾ ಸಹ ।
ನಮಸ್ಕೃತ್ವಾಥ ತುಷ್ಟಾವ ಮೌಲಿಬದ್ಧಾಂಜಲಿಶ್ಮಿವಾಂ ॥೩೪॥

---

ಎಂಬಂತೆ ತೋರುವುದು. ಇಂತಹ ಜಗನ್ಮಾತೆಯಾದ ಪರ್ವತರಾಜಕುಮಾರಿಯನ್ನು ಸುಂದರವಾದ ಅರಮನೆಯ ಮಧ್ಯಭಾಗದಲ್ಲಿ ಮನೋಹರವಾದ ಶಯ್ಯೆಯಲ್ಲಿ ಮಲಗಿಸಿ, ಕೋಮಲ ದೇಹದ ಪ್ರಭೆಯು ಸರ್ವವ್ಯಾಪಿಯಾಗುವಂತೆ ಮಾಡಿ, ವಿಧವಿಧವಾಗಿ ಸ್ತುತಿಸಿ, ಭಕ್ತಜನರನ್ನು ಉದ್ಧಾರಗೊಳಿಸಿದ ಸ್ತುತಿರತ್ನವಿದು. ॥೨೯॥

ಈರೀತಿ ದೇವಸ್ತ್ರೀಯರು ದಿವ್ಯಗೀತೆಗಳಿಂದ ಮಗುವನ್ನು ತೂಗುತ್ತಾ ಲಾಲಿಸುತ್ತಾ, ಆಡಿಸುತ್ತಾ ಮತ್ತೆ ಮತ್ತೆ ಅಲಂಕರಿಸುತ್ತಾ, ತಿಲಕವಿಡುತ್ತಾ ದೇವಿಯನ್ನು ಸೇವಿಸುತ್ತಿದ್ದರು. ಮತ್ತು ಅಮೃತಕ್ಕಿಂತಲೂ ಹೆಚ್ಚು ಸವಿಯಾದ ತಮ್ಮ ಸ್ತನ್ಯವನ್ನು ದೇವಿಗೆ ಕುಡಿಸುತ್ತಲಿದ್ದರು. ॥೩೦-೩೧॥

ಪ್ರತಿದಿನವೂ ಇದೇ ರೀತಿ ಮಹಾದೇವಿಯಾದ ಪಾರ್ವತಿಗೆ ಆರತಿ ಎತ್ತುತ್ತಾ ವಸ್ತ್ರಭೂಷಣಾದಿಗಳಿಂದ ಅಲಂಕರಿಸುತ್ತಾ, ದೇವಸ್ತ್ರೀಯರು ದೇವಿಯನ್ನು ಉಪಚರಿಸಿ ಅನಂತರ ಪರಶಿವನನ್ನೂ ಆರಾಧಿಸುತ್ತಿದ್ದರು. ಈರೀತಿ, ಚಂದ್ರಕಲೆಯು ಅಭಿವೃದ್ಧಿಹೊಂದುವಂತೆ ಪಾರ್ವತಿಯು ದಿವ್ಯತೇಜಸ್ಸಿನಿಂದ ನಿತ್ಯವೂ ಅಭಿವೃದ್ಧಿ ಹೊಂದುತ್ತಿದ್ದಳು. ॥೩೨-೩೩॥

ಅಂತಹ ಪಾರ್ವತಿಯನ್ನು ನೋಡಿ ಮೇನಾ ಮತ್ತು ಗಿರಿರಾಜ ಇವರು

ಪ್ರಪದ್ಯೇ ಶಿವೇದ್ಯೈವ ತೇ ಪಾದಪದ್ಮಂ
ಹರಾದ್ಯಾಮವಿದ್ಯಾಂ ಪ್ರದೇಹ್ಯದ್ಯ ವಿದ್ಯಾಂ ।
ನ ತೇ ಮದ್ಯಮಾಂಸಾದಿಮೀಮಾಂಸಾಪೂಜ್ಯ
ಪ್ರಕಾರೇತಿ ದೂರಂ ಗಿರಿಂ ಮಾಮವೇಹಿ ॥೩೫॥

ಮಹಾಘೌಘನೀಹಾರಘೋರಾಂಧಕಾರ
ಪ್ರಶಿಕ್ಷಾನುರೂಕ್ಷಪ್ರಭಾಹಸ್ಕರಾಂ ತಾಂ ।
ವಿದಿತ್ವಾ ಚ ನತ್ವಾ ಚ ಸ್ತುತ್ವಾ ಚ ವಾಚಾ
ಸಮಸ್ತೇಷು ನಾನ್ಯೋ ಮದನ್ಯೋತಿ ಧನ್ಯಃ ॥೩೬॥

ಧರಾಧೀಶಕನ್ಯೇ ಶಿವೇ ಸಾಮಿಸೋಮ
ಪ್ರಶಸ್ತೈಕಮಸ್ತೇ ನಮಸ್ತೇ ಸುಹಸ್ತೇ ।
ತ್ವದನ್ಯತ್ರ ಲೋಕೇ ನ ಲೋಕೇ ಸಶೋಕಂ
ಸುಶೂಕೋಪಮಂ ನ್ಯೂಕವೃದ್ಧಾತಿಮಂತಃ ॥೩೭॥

---

ಅಂಜಲಬದ್ಧರಾಗಿ ತಮ್ಮ ಪುತ್ರಿಯಾದ ಶಿವಪತ್ನಿಗೆ ವಂದಿಸುತ್ತಾ ಈರೀತಿ ಪ್ರಾರ್ಥಿಸುತ್ತಿದ್ದರು. " ದೇವಿಯೇ, ನಾವು ಈಶ್ವರನ ಮಾಯಾಶಕ್ತಿಗೆ ಸಿಕ್ಕಿ ಬಂಧಿತರಾಗಿರುವೆವು. ಅದನ್ನು ನಿವಾರಿಸುವಂತಹ ದಿವ್ಯವಿದ್ಯೆಯು ನಮಗೆ ನಿನ್ನಿಂದ ಲಭಿಸಬೇಕಾಗಿದೆ. ಮದ್ಯ ಮಾಂಸ ಇವುಗಳನ್ನು ಅರ್ಪಿಸುವುದರಿಂದಲೂ, ಮೀಮಾಂಸಾ ಶಾಸ್ತ್ರದ ರೀತಿಯಲ್ಲಿ ಕರ್ಮಮಾಡಿದರೂ ನಿನ್ನನ್ನು ತೃಪ್ತಿಪಡಿಸಲು ಸಾಧ್ಯವಿಲ್ಲ. ಆ ಮಾರ್ಗಗಳಿಗೆಲ್ಲಾ ದೂರನಾದವನು ನಾನು. ॥೩೪-೩೫॥

ದೇವಿಯೇ, ದೊಡ್ಡ ಪಾಪರಾಶಿಯೆಂಬ ಮಂಜಿನ ಗುಡ್ಡವನ್ನೂ ಕಗ್ಗತ್ತಲೆಯನ್ನೂ ಕ್ರಮಕ್ರಮವಾಗಿ ಕರಗಿಸಿ ಬೆಳಗಿಸುವ ಸೂರ್ಯನಂತೆ ನೀನು ಶೋಭಿಸುತ್ತಿರುವೆಯಲ್ಲವೆ! ಇಂತಹ ನಿನ್ನ ಮಹಿಮೆಯನ್ನು ಕೇಳಿ ತಿಳಿದು ಹೊಗಳಿ ಧನ್ಯನಾಗಿರುವವನು ನಾನೇ ಅಲ್ಲವೆ! ಇದರಲ್ಲಿ ನನಗಿಂತಲೂ ಶ್ರೇಷ್ಠನಾದವನು ಈಗ ಮತ್ತಾರಿರುವನು ? ॥೩೬॥

ಪರ್ವತರಾಜಪುತ್ರಿಯೇ, ಅರ್ಧಚಂದ್ರನಿಂದ ವಿರಾಜಿತವಾದ ಶಿರೋಭಾಗವುಳ್ಳವಳೇ, ಪ್ರಶಸ್ತವಾದ ಹಸ್ತವುಳ್ಳವಳೇ, ಲೋಕದಲ್ಲಿ ಎಲ್ಲವೂ ದುಃಖಮಯವಾದ ವಸ್ತುಗಳೇ ಮತ್ತು ಸ್ವಶಕ್ತಿರಹಿತವಾದ ಪ್ರಾಣಿವರ್ಗಗಳೇ. ಧಾನ್ಯದ ಹೊಟ್ಟಿನಂತೆ

ಕೃಪಾಪಾಂಗಸಂಗೇನ ತೇ ಪ್ಲಾವಿತಾಂಗಂ
ಮದೀಯಂ ಭವೇತ್ಪಾಪತಾಪೈಕಭಂಗಂ ।
ಅತೋ ಮಾಂ ಭಜೇ ತುಂಗಸಾರಂಗರಂಗ
ತ್ತುರಂಗಾದಿಸಂಗಾ ಸದಾಪದ್ಮಸದ್ಮ ॥೩೮॥

ನ ಮೇಹಾಪಿ ಕಾಂತೋರುಪಾದಪ್ರಕಾಶಾ
ನ್ನಚಂದ್ರೇಂದ್ರಲೋಕೇಷು ವಾ ಕಿಂ ದರಿದ್ರಂ ।
ಅತಃ ಸಾಂದ್ರಸೌಖ್ಯೈಕನಿಸ್ಸೀಮತಂದ್ರಾ
ಸುನಿದ್ರಾಸುಷುಪ್ತೌ ಭಜಾಮ್ಯದ್ರಿಕನ್ಯಾಂ ॥೩೯॥

ನ ಮಾನ್ಯೋ ನ ಧನ್ಯೋ ಭಜೇದ್ಯಸ್ತ್ವದನ್ಯಾಂ
ಕಲಂಕೀ ಸ ಶಂಕೀ ಭಜೇಚ್ಛಾಭಜಂ ಸ್ವಾಂ ।
ಖರಸ್ಸೂಕರಃ ಸಂಕರೋ ವಾ ನರೋ ವಾ
ನರಃ ಪಾಮರಃ ಕಾತರೋ ನಿತ್ಯದುಃಖೀ ॥೪೦॥

---

ಸೂಕ್ಷ್ಮವಾಗಿಯೂ ಪರ್ವತಾಧಿಕವಾಗಿ ಮಹತ್ತಾಗಿಯೂ ಆಗುವ ವಸ್ತುವೆಂದರೆ ಪರಾತ್ಪರಶಕ್ತಿಯೆನಿಸಿದ ನೀನೊಬ್ಬಳೇ ಅಲ್ಲವೆ! ॥೩೭॥

ಎಲೌ ದೇವಿಯೇ, ನಿನ್ನ ಕೃಪಾದೃಷ್ಟಿಯಿಂದ ನನ್ನ ದೇಹವು ಒಂದು ಸಾರಿ ಪವಿತ್ರಿತವಾಗುವುದಾದರೆ ನನ್ನ ಜನ್ಮಾಂತರ ಸಂಚಿತವಾದ ಪಾಪರಾಶಿಯೆಲ್ಲವೂ ನಿರ್ಮೂಲನಾದಂತೆಯೇ ಸರಿ. ಅದೂ ಅಲ್ಲದೆ ನಿನ್ನ ಕೃಪಾಪಾತ್ರನಾದೊಡನೆಯೇ ನಾನು ಭಾಗ್ಯಶಾಲಿಯೆನಿಸಿ ಐಹಿಕಭೋಗಸಾಧನಗಳಾದ ಗಜತುರಗಾದಿಗಳಿಂದಲೂ, ಐಶ್ವರ್ಯದಿಂದಲೂ ರಂಜಿಸುತ್ತಾ ಪ್ರಕಾಶಿಸುವೆನು. ॥೩೮॥

ಪಾರ್ವತಿಯೇ, ನಿನ್ನ ಪಾದಪದ್ಮಗಳ ಕಾಂತಿಯೊಂದು ನನಗೆ ಲಭಿಸುವುದಾದರೆ ಚಂದ್ರ, ಇಂದ್ರ ಮುಂತಾದವರ ಲೋಕದಲ್ಲಿ ಯಾವುದು ತಾನೇ ದುರ್ಲಭವೆನಿಸೀತು? ನಿಬಿಡವಾದ ಮತ್ತು ಅನಂತವಾದ ಸುಖಾಭಿಲಾಷೆಯುಳ್ಳವನಾಗಿ ನಾನು ನಿದ್ರಾಕಾಲದಲ್ಲಿಯೂ ಗಾಢನಿದ್ರಾವಸ್ಥೆಯಲ್ಲಿಯೂ ಬಿಡದೆ ನಿನ್ನನ್ನೇ ಧ್ಯಾನಿಸುತ್ತಿರುವೆನು. ॥೩೯॥

ಮಹಾದೇವಿಯೇ, ನಿನ್ನನ್ನು ಬಿಟ್ಟು ಮತ್ತಾವ ದೇವರನ್ನು ಭಜಿಸಿದರೂ ಅವರು ಧನ್ಯರೂ ಮಾನ್ಯರೂ ಎನಿಸಲಾರರು. ಮತ್ತು ಅವರ ಜೀವನವು ನಿತ್ಯ

ಪರಾಕಾದಿಕೃಚ್ಛ್ರಾದಿಕೃತ್ಯಾದ್ವರಾಕಃ
ಸ ರಾಕಾಧಿಪಸ್ಸಾಕ್ಷಿಪದ್ಮೈಕಭೃಂಗಃ ।
ಸ ಶಾಂಗಃ ಸ ತುಂಗಃ ಸ ಗಂಗಾಪ್ರಯಾಗೇ
ಸುಯಜ್ಞಾದಿಕೃತ್ಯಾನ್ನಸಕೃತ್ಸಧನ್ಯಃ ॥೪೧॥

ವಿಶಿಷ್ಟಾಂ ಶಿವಾಮಷ್ಟಪದ್ಯೈಃ ಪ್ರತುಷ್ಟಾಂ
ಕರೋತೀಶನಿಷ್ಠೋ ವರಿಷ್ಠೋ ವಸಿಷ್ಠಾತ್ ।
ನ ಕಷ್ಟಂ ನ ತಷ್ಟಂ ಭವೇತ್ತಸ್ಯ ಕಿಂಚಿ
ತ್ಕದಾಚಿತ್ಕುತಶ್ಚಿತ್ಸದಿಷ್ಟಂ ಲಭೇತ ॥೪೨॥

॥ ಶ್ರೀಸ್ಕಂದ ಉವಾಚ ॥

ಏವಂ ಪದ್ಯಾಷ್ಟಕೈರ್ದೇವೀಂ ಪ್ರತುಷ್ಟಾಮಕರೋದ್ಗಿರಿಃ ।
ಮೇನಯಾಸೌ ಗಿರಿಶ್ರೇಷ್ಠಃ ಸಾ ದೇವೀ ತಮಭಾಷತ ॥೪೩॥

---

ದುಃಖಮಯವಾಗುವುದು. ಮತ್ತು ಕಲಂಕವಿಶಿಷ್ಟವಾಗಿ ನಿಲ್ಲುವುದು. ಒಂದುವೇಳೆ ನಿನ್ನನ್ನು ಬಿಟ್ಟು ಮತ್ತಾರನ್ನು ಭಜಿಸಿದರೂ, ಅವರು ಕತ್ತೆ, ಹಂದಿ, ನಾಯಿ, ಸಂಕರಜಾತಿಯವರು, ಕಾತರಸ್ವಭಾವದವರು ಈ ಜನ್ಮಗಳಲ್ಲಿ ಹುಟ್ಟಿ ತಮ್ಮ ಜೀವನ ವನ್ನು ಮುಂದುವರಿಸುವರು. ॥೪೦॥

ಚಾಂದ್ರಾಯಣಕೃಚ್ಛ್ರವೇ ಮುಂತಾದ ಕರ್ಮಗಳನ್ನು ಮಾಡಿದವರು ಎಂದೂ ಅಲ್ಪರಾಗಿಯೇ ಇರುವರು. ಯಾರು ನಿನ್ನ ಆರಾಧನೆಯಲ್ಲಿ ಸದಾ ನಿರತ ರಾಗಿರುವರೋ, ಅವರೇ ಶಾಂಭವರು. ಅವರೇ ಮಹಾಮಹಿಮರು. ಗಂಗಾಪ್ರಯಾ ಗಾದಿ ಕ್ಷೇತ್ರಗಳಲ್ಲಿ ಯಾಗಾಚರಣೆ ಮಾಡಿದಷ್ಟು ಫಲವನ್ನು ಪಡೆಯುವರು. ॥೪೧॥

ಈ ಎಂಟು ಸ್ತೋತ್ರಗಳೆಂಬ ಕಮಲಪುಷ್ಪಗಳಿಂದ ಯಾರು ಮಹಾದೇವಿಯನ್ನು ಸ್ತುತಿಸಿ ತೃಪ್ತಿಪಡಿಸುವರೋ ಅವರು ಮಹಿಮೆಯಲ್ಲಿ ವಸಿಷ್ಠಮಹರ್ಷಿಗಳನ್ನೂ ಮೀರಿಸುವರು. ಅವರಿಗೆ ಎಂದೂ ಕಷ್ಟನಷ್ಟಗಳು ಸಂಭವಿಸಲಾರವು. ಮತ್ತು ಶೋಭನವಾದ ಐಶ್ವರ್ಯವನ್ನು ಪಡೆದು ಅವರು ಮಹಾಭಾಗ್ಯಶಾಲಿಗಳೆನಿಸುವರು.॥೪೨॥

ಹೀಗೆ ಗಿರಿರಾಜಮೇನೆಯರು ಎಂಟು ಶ್ಲೋಕಗಳಿಂದ ಪಾರ್ವತಿಯನ್ನು ಮನಃಪೂರ್ವಕವಾಗಿ ಸ್ತುತಿಸಲು, ಪಾರ್ವತಿಯು ಗಿರಿರಾಜನನ್ನು ಕುರಿತು ಪ್ರೀತಿ

॥ ದೇವ್ಯುವಾಚ ॥

ಗಿರೇ ಚಿಚ್ಛಕ್ತಿರೇವಾಸ್ಮಿ ಮಹಾದೇವಸ್ಯ ವೇಧಸಃ ।
ಸುರಾಣಾಂ ಕಾರ್ಯಮುದ್ದಿಶ್ಯ ಸಂಜಾತಾಸ್ಮಿ ತವೋದರೇ ॥೪೪॥

ನ ಮತ್ತಃ ಪೃಥಗಸ್ತೀಶಃ ಪ್ರಭಾ ಚಂದ್ರಮಸಂ ವಿನಾ ।
ತಥಾ ವಿನಾ ಭವಾಚ್ಛಕ್ತಿರಸ್ಮ್ಯಹಂ ಪಾರಮೇಶ್ವರೀ ॥೪೫॥

ಮತ್ತೋ ಬ್ರಹ್ಮಾ ಭವೇದ್ವಿಷ್ಣುಃ ಸೇಂದ್ರೋ ದೇವಾ ಮಹರ್ಷಯಃ ।
ಚರಾಚರಮಿದಂ ವಿಶ್ವಂ ಗ್ರಸಾಮಿ ವಿಸೃಜಾಮ್ಯಹಂ ॥೪೬॥

ಮಯ್ಯೇವಾಂತೇ ಲಯಂ ಯಾತಿ ವಟಧಾನೇವ ತತ್ತರುಃ ।
ಸರ್ವೇಶ್ವರೀ ಸರ್ವಶಕ್ತಿರಹಮೇಷಾ ಸನಾತನೀ ॥೪೭॥

ಆಪಃ ಪೃಥ್ವೀ ಚ ಖಂ ವಾಯುಸ್ತೇಜಸಾಂ ಶಕ್ತಿರೀಶ್ವರೀ ।
ಅಸ್ಮ್ಯಹಂ ಸ್ಪಂದಿನೀ ಶಕ್ತಿಃ ಪೃಥಿವ್ಯಾಂ ಗಂಧದಾಯಿನೀ ॥೪೮॥

---

ಯಿಂದ ಹೀಗೆ ನುಡಿದಳು "ಗಿರಿರಾಜನೇ, ಸಕಲ ಪ್ರಪಂಚಕರ್ತನಾದ ಮಹಾದೇವನ ಚಿಚ್ಛಕ್ತಿಯೇ ನಾನು. ನನಗೂ ಸಾವುನೋವುಗಳಿಲ್ಲ. ಈಗ ದೇವತೆಗಳ ಕಾರ್ಯನಿರ್ವಹಣಕ್ಕಾಗಿ ನಿನ್ನ ಹೊಟ್ಟೆಯಲ್ಲಿ ನಾನು ಜನ್ಮತಾಳಿರುವೆನು. ॥೪೩-೪೪॥

ಪರಶಿವನು ನನ್ನನ್ನು ಬಿಟ್ಟು ಎಂದೂ ಬೇರೆ ಇರಲಾರನು. ಚಂದ್ರನನ್ನು ಬಿಟ್ಟು ಚಂದ್ರಿಕೆಯೆಂದಾದರೂ ಚಲಿಸುವುದೇ? ಆ ರೀತಿ ನನಗೂ ಶಿವನಿಗೂ ಅವಿನಾಭಾವವಿರುವುದು. ಬ್ರಹ್ಮ, ವಿಷ್ಣು, ಇಂದ್ರ ಇತರ ದೇವತೆಗಳು, ವರಮಹರ್ಷಿಗಳು ಇವರೆಲ್ಲರೂ ನನ್ನಿಂದ ಜನಿಸಿದವರೇ. ಚರಾಚರಾತ್ಮಕವಾದ ಈ ಪ್ರಪಂಚವನ್ನೇ ನಾನು ನುಂಗಿಬಿಡುವೆನು. ಇಷ್ಟಬಂದಾಗ ಹೊರಬಿಡುವೆನು. ॥೪೫-೪೬॥

ಆಲದ ಮರವು ಬಿಳಲಿನಿಂದ ವೃಕ್ಷಾಂತರಗಳನ್ನು ಸೃಷ್ಟಿಸಿಬಿಡುವಂತೆ ಪ್ರಪಂಚವು ನನ್ನಿಂದ ಬೇರೆಯಾಗಿ ಕಾಣುವುದು. ವಿಚಾರಿಸಿದರೆ, ಬಿಳಲುಗಳು ಆಲದ ಮರದಲ್ಲಿಯೇ ಐಕ್ಯವಾಗುವಂತೆ ಪ್ರಪಂಚವೆಲ್ಲಾ ನನ್ನಲ್ಲಿಯೇ ಲಯಹೊಂದುವುದು. ಸರ್ವೇಶ್ವರಿಯೂ ಸನಾತನಿಯೂ ಸರ್ವಶಕ್ತಿಯೂ ಆದವಳು ನಾನೇ. ನೀರು, ಭೂಮಿ, ಅಂತರಿಕ್ಷ, ವಾಯು, ತೇಜಸ್ಸು ಇವುಗಳಿಗೆ ಶಕ್ತಿಯನ್ನು ಕೊಡು

ವಾಯೌ ಸಂಚಾಲಿನೀ ಶಕ್ತಿಃ ಜ್ಯೋತಿಶ್ಶಕ್ತಿಶ್ಚ ತೈಜಸೀ ।
ಆಕಾಶೇ ವ್ಯಾಪಿಕಾ ಶಕ್ತಿರಸ್ಮ್ಯಹಂ ಭುವನೇಶ್ವರೀ ॥೪೯॥

ಸ್ವಾಹಾಸ್ವಧಾಧೃತಿರ್ಮೇಧಾ ವಿದ್ಯಾವಿದ್ಯಾ ಸರಸ್ವತೀ ।
ಗುಹಾ ಹಿ ತ್ವಾ ಗಹ್ವರೇಶೋ ನಿಷ್ಠಾ ಕಾಷ್ಠಾ ಪ್ರತಿಷ್ಠಿತಾ ॥೫೦॥

ಅಹಮಿಂದ್ರಿಯಜಾಲಂ ಯಚ್ಚೋದಯಾಮಿ ಚ ವಿಗ್ರಹೇ ।
ಸರ್ವೇಷಾಂ ಬ್ರಹ್ಮಕೀಟಾನಾಂ ಜಗತ್ಸಂಸಾರವರ್ತಿನಾಂ ॥೫೧॥

ಕರೋಮಿ ನಿಮಿಷೋನ್ಮೇಷೈರ್ಜಗತ್ಸಂಹರಣೋದಯೌ ।
ಕೇನಾಪಿ ಕಾರಣೇನೈವ ಸಂಜಾತಾಸ್ಮಿ ಗೃಹೇ ತವ ॥೫೨॥

ತಸ್ಮಾತ್ತ್ವಂ ಲೋಕಮಾರ್ಗೇಣ ಮಹೇಶಾಯ ಪ್ರದೇಹಿ ಮಾಂ ।
ಬ್ರಹ್ಮಣೋನುಮತೇನೈವ ದೇಶಕಾಲೋಚಿತೇ ಶುಭೇ ॥೫೩॥

---

ವವಳೂ ನಾನೇ. ಸ್ಪಂದಿನೀ ಶಕ್ತಿಯು ನಾನು. ಗಂಧವತ್ತ್ವರೂಪವಾದ ವಿಶೇಷ ಗುಣವನ್ನು ಭೂಮಿಗೆ ಕೊಟ್ಟಿರುವವಳು ನಾನು. ॥೪೭-೪೮॥

ವಾಯುವಿನಲ್ಲಿರುವ ಚಲನಶಕ್ತಿಯೂ, ತೇಜಸ್ಸಿನಲ್ಲಿರುವ ಜ್ಯೋತಿಶ್ಶಕ್ತಿಯೂ ಆಕಾಶದಲ್ಲಿರುವ ಸರ್ವವ್ಯಾಪಕಶಕ್ತಿಯೂ ನಾನೇ. ಸ್ವಾಹಾ, ಸ್ವಧಾ, ಧೃತಿ, ಮೇಧಾ, ವಿದ್ಯಾ, ಅವಿದ್ಯಾ, ಸರಸ್ವತೀ ಈ ದೇವತೆಗಳೆಲ್ಲರೂ ನಾನೇ. ಗಹ್ವರಗಳಿಗೆ ಒಡೆಯನಾದ ಗಿರಿಯೂ, ಗುಹೆಯೂ, ದಿಕ್ಕೂ, ವಿದಿಕ್ಕೂ ಇವು ಎಲ್ಲವೂ ನನ್ನಿಂದ ಆವೃತವಾದವುಗಳೇ. ॥೪೯-೫೦॥

ನಾನು ಇಂದ್ರಿಯಗಳನ್ನು ಶರೀರದಲ್ಲಿ ನಿಲ್ಲಿಸಿ ಪ್ರಾಣಿವರ್ಗವನ್ನು ನಿಮಿಷ ಮಾತ್ರದಲ್ಲಿ ಸೃಷ್ಟಿಸುವೆನು. ಬ್ರಹ್ಮನಿಂದ ಹಿಡಿದು ಕ್ರಿಮಿಕೀಟಪರ್ಯಂತವಾಗಿರುವ ಜಗತ್ತಿನ ಪ್ರಾಣಿಸಮುದಾಯವನ್ನೆಲ್ಲಾ ಸಂಸಾರದಲ್ಲಿ ಬಂಧಿಸಿಡುವವಳು ನಾನೇ. ಜಗತ್ತಿನ ಸೃಷ್ಟಿಲಯಗಳನ್ನು ಕ್ಷಣಮಾತ್ರದಲ್ಲಿ ನಿರ್ವಹಿಸುವ ಶಕ್ತಿ ನನಗುಂಟು. ಯಾವುದೋ ಕಾರಣದಿಂದ ಈಗ ನಿನ್ನ ಮನೆಯಲ್ಲಿ ಅವತಾರಮಾಡಿರುವೆನು. ॥೫೧-೫೨॥

ನೀನಾದರೋ ಲೋಕಮರ್ಯಾದೆಯನ್ನನುಸರಿಸಿ ನನ್ನನ್ನು ಮಹೇಶ್ವರನಿಗೆ ದಾನಮಾಡು. ಆ ವಿವಾಹಕ್ಕೆ ಬ್ರಹ್ಮನ ಅನುಮತಿಯನ್ನು ಪಡೆದು, ಸಾಮಾನ್ಯ

 

ಮುಹೂರ್ತೇ ಋಷಿಭಿಸ್ಸಾರ್ಧಂ ಮಾಂ ಮಾಯಾಂ ಮಾಯಿನಂಗಿರೇ ।
ತೇನಾಹಂ ಸುಪ್ರಸನ್ನಾಸ್ಮಿ ತ್ವಯಿ ನಿತ್ಯಂ ಸುಮೇನಯಾ ॥೫೪॥

ಧನ್ಯಸ್ತ್ವಂ ಮತ್ಪ್ರಸಾದೇನ ಭೋಗಭಾಕ್ಸಂಭವಿಷ್ಯಸಿ ।
ನಾನ್ಯಸ್ಮೈ ಸತ್ಯಮೇತನ್ಮಾಂ ಶರ್ವೇ ದಾತುಂ ತ್ವಮರ್ಹಸಿ ॥೫೫॥

ಇತ್ಯುಕ್ತ್ವಾ ಸಾ ಹೈಮವತೀ ಪುನರ್ಬಾಲವದಾಸ್ಥಿತಾ ।
ತಾಂ ಲಾಲಯಂತಿ ಗಿರಯೋ ಗಿರಿಪತ್ನ್ಯಃ ಸಮಾಗತಾಃ ॥೫೬॥

ವಿಂಧ್ಯಮಂದರಕೈಲಾಸ ಮೈನಾಕಾದ್ಯಾ ಸದರ್ದುರಾಃ ।
ನೀಲಶ್ಚ ಶತಶೃಂಗೋಥ ವರಾಹೋ ರೈವತಸ್ತಥಾ ॥೫೭॥

ಮೇರುಸ್ಸಹ್ಯೋ ಮಹೇಂದ್ರಶ್ಚ ತತ್ರ ಗೋವರ್ಧನೋ ಗಿರಿಃ ।
ಗಿರಿರಾಜಂ ನಮಸ್ಕೃತ್ಯ ತುಷ್ಟುವುರ್ಗಿರಯಸ್ತದಾ ॥೫೮॥

---

ಜನರು ನೋಡುವಂತೆ ಶುಭಮುಹೂರ್ತಸಮಯದಲ್ಲಿ ಋಷಿಜನರೊಡಗೂಡಿ ಲೋಕಮರ್ಯಾದೆಯನ್ನು ಬಿಡದೆ ನನ್ನ ವಿವಾಹವನ್ನು ಬೆಳಸು. ಆದರಿಂದ ನಾನು ನಿನಗೂ ಮತ್ತು ಮೇನಾದೇವಿಗೂ ಪ್ರಸನ್ನಳಾಗುವೆನು. ॥೫೩-೫೪॥

ನನ್ನ ಕೃಪೆಯಿಂದ ಈಗ ನೀನು ಧನ್ಯನಾಗಿರುವೆ. ನಿನಗೆ ಸಕಲ ಸಂಪತ್ತೂ ಸಂಭವಿಸುವುವು. ಆದರೆ ನನ್ನನ್ನು ಮಾತ್ರ ಮತ್ತಾರಿಗೂ ದಾನಮಾಡಬೇಡ. ಪರಮೇಶ್ವರನಿಗೇ ನೀನು ವಿವಾಹಮಾಡಬೇಕು" ಎಂದು ಹೇಳುತ್ತಾ ಹಿಮವತ್ಪುತ್ರಿಯು ಮತ್ತೆ ಶಿಶುಭಾವವನ್ನು ಪಡೆದಳು. ಅದನ್ನು ನೋಡಿ ಅಚ್ಚರಿಯಿಂದ ಇತರ ಪರ್ವತಗಳೂ, ಪರ್ವತಪತ್ನಿಯರೂ ಆ ಶಿಶುವನ್ನು ಆದರಿಸತೊಡಗಿದರು. ॥೫೫-೫೬॥

ಆಗ ಅಲ್ಲಿಗೆ ವಿಂಧ್ಯ, ಮಂದರ, ಕೈಲಾಸ, ಮೈನಾಕ, ದರ್ದುರ, ನೀಲ, ಶತಶೃಂಗ, ವರಾಹ, ರೈವತ, ಮೇರು, ಸಹ್ಯ, ಮಹೇಂದ್ರ, ಗೋವರ್ಧನ ಮುಂತಾದ ಪರ್ವತಗಳು ಬಂದಿದ್ದುವು. ಅವರೆಲ್ಲರೂ ಗಿರಿರಾಜನಿಗೆ ನಮಸ್ಕರಿಸಿ ಅವನನ್ನು ಈ ರೀತಿ ಹೊಗಳಲು ಆರಂಭಿಸಿದರು. ॥೫೭-೫೮॥

|| ಗಿರಯ ಊಚುಃ ||

ಧನ್ಯಸ್ತ್ವಂ ಹಿಮಶೈಲೇಶ ಯಸ್ಯ ಮಾಯಾ ಸನಾತನೀ ।
ಪುತ್ರೀ ಭವೇತ್ ಭವಾಯೈವ ದೇಯಾ ಕನ್ಯಾ ಮನೋರಮಾ ||೫೯||

ಸ ಏವ ಸರ್ವಾಧಿಪತಿಃ ಪತಿತ್ವೇಽಸ್ಯಾ ಮಹೇಶ್ವರಃ ।
ತ್ವಯಾ ವರೋ ಹರೋ ವೀರೋ ಲೋಕನೀಯಸ್ಸುರೋತ್ತಮಃ ||೬೦||

ಸ ಮಾಯೀ ಪುರುಷೋ ಗೌರೀ ತಸ್ಯೇಯಂ ಪ್ರಕೃತಿಃ ಪರಾ ।
ತೇನಾಸನ್ನಾ ಮಹಾದೇವಾ ತ್ವಯಾ ಧನ್ಯೇನ ಚೇತಸಾ ||೬೧||

ದೇಯಾ ದೇವಾಯ ವಿಧಿವತ್ತೇನಾಸ್ಮತ್ಕುಲಮುನ್ನತಂ ।
ವಿಖ್ಯಾತಂ ಗಿರಿವರ್ಯಾಣಾಂ ಭವಿಷ್ಯತಿ ನ ಸಂಶಯಃ ||೬೨||

ಇತ್ಯುಕ್ತ್ವಾ ಗಿರಿರಾಜಾನಂ ಗಿರಯಃ ಸರ್ವ ಏವ ತೇ ।
ಗಿರೀಶಾಯ ಮಹೇಶಾಯ ದಾತುಂ ಚಕ್ರುರ್ಮತಿಂ ನಗಾಃ ||೬೩||

ಸಾಪ್ಯವರ್ಧತ ಕಾಲೇನ ಕಿಂಚಿದ್ಯೌವನಮಾಪ್ಯ ಚ ।
ಧೂಲಿಕ್ರೀಡಾಸ್ವಪಿ ಶಿವಂ ಪೂಜಯಾಮಾಸ ಶಂಕರೀ ||೬೪||

---

ಹಿಮಗಿರಿರಾಜನೇ, ನೀನೇ ಧನ್ಯನು. ಮಾಯಾಶಕ್ತಿಯೆನಿಸಿದ ಪರಶಿವ ಪತ್ನಿಯು ನಿನಗೆ ಪುತ್ರಿಯಾಗಿರುವಳು. ಇವಳನ್ನು ನೀನು ಪರಶಿವನಿಗೆ ದಾನವಾಗಿ ಕೊಡಲಿರುವೆ. ಆ ಪರಶಿವನಾದರೋ ಸರ್ವಲೋಕಾಧಿಪತಿಯು. ವೀರನು. ಸುರೋತ್ತಮನು. ಅಂತಹವನನ್ನು ವರನನ್ನಾಗಿ ಪಡೆಯುವ ನಿನ್ನ ಭಾಗ್ಯಕ್ಕೆ ನಾವು ಏನೆಂದು ಹೇಳೋಣ! ||೫೯-೬೦||

ಆ ಮಾಯಾವಿಶಿಷ್ಟನೆನಿಸಿ ಮಾಯಿಯಾಗುವವನು ಪರಶಿವನೇ. ಪರಾಪ್ರಕೃತಿಯಾದ ಪಾರ್ವತಿಗಿಂತ ಪರಶಿವನು ಎಂದೂ ಬೇರೆಯಾಗಲಾರನು. ಆದರಿಂದ ನೀನು ಭಕ್ತಿಪೂರ್ವಕವಾಗಿ ಪಾರ್ವತಿಯನ್ನು ಪರಶಿವನಿಗೆ ಸಮರ್ಪಿಸು. ಇದರಿಂದ ನಮ್ಮ ಪರ್ವತಕುಲವೇ ಪವಿತ್ರವೆನಿಸುವುದು. ||೬೧-೬೨||

ಹೀಗೆ ಎಲ್ಲ ಪರ್ವತಗಳು ಗಿರಿರಾಜನನ್ನು ಶ್ಲಾಘಿಸಿ, ಪರ್ವತರಾಜಪುತ್ರಿಯಾದ ಪಾರ್ವತಿಯನ್ನು ಪರಶಿವನಿಗೇ ಅರ್ಪಿಸಬೇಕೆಂದು ಸಂಕಲ್ಪಮಾಡಿಕೊಂಡು ಪಾರ್ವತಿ

ಪಾಲಿಕಾಭಿಸ್ತತೋಲೀಭಿಃ ಕಂದುಕೈರ್ಹಲ್ಲಿಲಾಸ್ಯಕೈಃ ।
ವೃಕ್ಷಾಂದೋಲೈಃ ಕುಮಾರೀಣಾಂ ಕ್ರೀಡಾಶ್ಚಕ್ರೇ ಮಹೇಶ್ವರೀ ॥೬೫॥

ನಾಗಗಂಧರ್ವಕನ್ಯಾಸ್ತಾಸ್ತತ್ರ ತತ್ಪರ್ವತಸ್ಥಿತಾಃ ।
ಮುನಿಕನ್ಯಾಸ್ತಥಾ ಚಾನ್ಯಾ ಗಿರಿಕನ್ಯಾಃ ಸಿಷೇವಿರೇ ॥೬೬॥

ಲಾಸ್ಯೋಲ್ಲಾಸ್ಯೈಸ್ತಥಾ ಹಾಸ್ಯೈಃ ಸಾ ಪಿತುರ್ಮುದಮಾದಧತ್ ।
ಮೇನಾಪಿ ಧನ್ಯಾ ಕನ್ಯಾಂ ತಾಂ ವಿಲೋಕ್ಯಾತೀವ ಹರ್ಷಿತಾ ॥೬೭॥

ತಸ್ಯಾ ಯೌವನಸೌಂದರ್ಯಂ ನಾನ್ಯತ್ರ ಸ್ಥಿತಮೀಕ್ಷ್ಯ ಸಾ ।
ಸಾಸ್ರಾವಿಲಾಕ್ಷಿತಾಂ ನಿತ್ಯಮಪಶ್ಯದ್ದೀನಚೇತಸಾ ॥೬೮॥

ಕಂ ಪತಿಂ ಪ್ರಾಪ್ಸ್ಯಸೇ ದೇವಿ ವರಂ ನರಸುರೇಷು ವಾ ।
ತಾಂ ವೀಕ್ಷ್ಯ ವಿಸ್ಮಿತೌ ತತ್ರ ಮೇನಾ ಚ ಹಿಮಭೂಧರಃ ॥೬೯॥

---

ಯಾದರೋ ಕಾಲಕ್ರಮದಲ್ಲಿ ಯುವತಿಯಾದಳು. ಬಾಲ್ಯದಲ್ಲಿ ಪಾರ್ವತಿಯು ದೂಳಿನ ಆಟವಾಡುವಾಗಲು ಶಿವಪೂಜೆಯನ್ನು ತಪ್ಪದೆ ನಡೆಸುತ್ತಿದ್ದಳು. ॥೬೩-೬೪॥

ತನ್ನ ಜೊತೆಗಾತಿಯರೊಡನೆ ಪಾರ್ವತಿಯು ಚೆಂಡು, ಹಲ್ಲೀಸನಾಟ್ಯ, ಮರದ ಕೊಂಬೆಯಮೇಲೆ ಕುಳಿತು ತೂಗಿಕೊಳ್ಳುವುದು, ಇವೇ ಮುಂತಾದ ಕ್ರೀಡಾರಸದಲ್ಲಿ ಮಗ್ನಳಾಗುತ್ತಿದ್ದಳು. ನಾಗರು, ಗಂಧರ್ವರು, ಮುನಿಕನ್ನಿಕೆಯರು, ಇವರೇ ಮೊದಲಾಗಿ ಆ ಪರ್ವತದಲ್ಲಿದ್ದ ಬಾಲಿಕೆಯಾದ ಪಾರ್ವತಿಯನ್ನು ಪರಿಪರಿಯಾಗಿ ಸೇವಿಸುತ್ತಿದ್ದರು. ॥೬೫-೬೬॥

ಪಾರ್ವತಿಯು ಹೀಗೆ ಅಭಿವೃದ್ಧಳಾಗಿ ಬೆಳೆದು, ಆಟ, ನಾಟ್ಯ ಗಾನ ಇವೇ ಮುಂತಾದ ಕಲೆಗಳಿಂದ ತಂದೆಯನ್ನು ಬಹಳವಾಗಿ ಸಂತೋಷಪಡಿಸಿದಳು. ಅಂತಹ ಮಗಳನ್ನು ನೋಡಿ ಮೇನಾದೇವಿಯು ತಾನೇ ಧನ್ಯಳೆಂದೂ, ತನ್ನ ಕಣ್ಣುಗಳು ತನ್ನ ಮಗಳನ್ನು ನೋಡುವುದರಿಂದ ಧನ್ಯವಾಯಿತೆಂದೂ ತಿಳಿದು ಆನಂದಪಡುತ್ತಿದ್ದಳು. ಮತ್ತು ಯುವತಿಯಾಗಿರುವ ತನ್ನ ಮಗಳ ಸೌಂದರ್ಯವನ್ನು ಮತ್ತೆಲ್ಲಿಯೂ ಕಾಣೆನು ಎಂದು ಆಶ್ಚರ್ಯಪಡುತ್ತಿದ್ದಳು. ॥೬೭-೬೮॥

ಮೇನಾದೇವಿಯು ತನ್ನ ಮನಸ್ಸಿನಲ್ಲಿ ಮಗಳಿಗೆ ಮದುವೆಯ ವಯಸ್ಸು ಬಂದುದನ್ನೂ ನೋಡಿ, ಮುಂದೆ ದೇವಿಯಾದ ತನ್ನ ಪುತ್ರಿಯು, ನರಸುರರಲ್ಲಿ ಯಾರನ್ನು

ತಾಂ ವರ್ಣಯಾಮಾಸತುಸ್ತಾ ಪಾರ್ವತೀಂ ಕನ್ಯಕಾಮಿಮಾಂ ॥೭೦॥

ಶ್ರೋಣೀ ಸ್ಸೈಕತಥೋರಣೀವ ರಮಣೀ ರತ್ನಸ್ಯ ನಾಣೀಯಸೀ
ವಾಣೀ ಫಾಣಿತವರ್ಷಿಣೀ ಕುಚತಟೀ ಕ್ಷೋಣೀಭೃದಾಕ್ಷೇಪಿಣೀ ।
ಪಾಣೀ ಪದ್ಮತೃಣೀಕೃತ ಕ್ಷಮಘೃಣೀ ವೇಣೀ ಕೃಪಾಣೀವ ತೇ
ಬಾಣೀ ಭೂತಮಣೀವ ಕಸ್ಯ ಹರಿಣೀ ಧಿಕ್ಕಾರಿಣೀ ಚಾಕ್ಷಿಣೀ ॥೭೧॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀ ಸಂವಾದೇ
ಪಾರ್ವತೀ ಜನ್ಮೋತ್ಸವನಿರೂಪಣಂ ನಾಮ ನವಮೋಧ್ಯಾಯಃ

---

ಪತಿಯನ್ನಾಗಿ ವರಿಸುವಳೋ ಎಂದು ಮನಸ್ಸಿನಲ್ಲಿ ಯೋಚಿಸುತ್ತಿದ್ದಳು. ಹೀಗೆ ಗಿರಿ ರಾಜ ದಂಪತಿಗಳು ತಮ್ಮ ಮಗಳ ಯೌವನವನ್ನು ನೋಡಿ ತಾವೇ ಆನಂದಪಡುತ್ತಾ ಈರೀತಿ ಮಗಳನ್ನು ವರ್ಣಿಸುತ್ತಿದ್ದರು. ॥೬೯-೭೦॥

ರತ್ನಪ್ರಾಯಳಾದ ಪಾರ್ವತಿಯ ಸೊಂಟಭಾಗವು ಅತ್ಯಂತ ಸೂಕ್ಷ್ಮವಾಗಿ ಕಾಣುತ್ತಿರುವುದು. ಮರಳಿನ ಗುಡ್ಡೆಯಂತೆ ಪಶ್ಚಾದ್ಭಾಗವು ದುಂಡಾಗಿ ಕಾಣುತ್ತಿರುವುದು. ಮೃದುನುಡಿಯಾದರೋ ಅಮೃತವೃಷ್ಟಿಯನ್ನೇ ತರುವುದು. ಕುಚಭಾಗವು ಪರ್ವತದಂತೆ ದುಂಡಾಗಿರುವುದು. ಪಾಣಿತಲವಾದರೋ ಪದ್ಮಪತ್ರದಂತೆ ವಿಶಾಲವಾಗಿರುವುದು. ನೀಳವಾದ ಜಟೆಯು ಕತ್ತಿಯಂತೆ ಸೌಂದರ್ಯವನ್ನು ಬೀರುತ್ತಿರುವುದು. ಕಣ್ಣುಗಳಾದರೊ ಜಿಂಕೆಯ ಕಣ್ಣುಗಳ ಸೌಂದರ್ಯವನ್ನು ತಿರಸ್ಕರಿಸುತ್ತಿರುವುದು. ಇಂತಹ ಪುತ್ರೀಸೌಂದರ್ಯವು ಯಾರ ಮನಸ್ಸನ್ನು ತಾನೆ ಭೂತಮಣಿಯಂತೆ ಆಕರ್ಷಿಸಲಾರದು. ಎಂದು ಗಿರಿರಾಜದಂಪತಿಗಳು ಮಗಳ ಸೌಂದರ್ಯವನ್ನು ಬಹಳ ವಾಗಿ ವರ್ಣಿಸುತ್ತಾ ತಾವೇ ಆನಂದಪಡುತ್ತಿದ್ದರು. ॥೭೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ಒಂಬತ್ತನೆಯ ಅಧ್ಯಾಯವು ಮುಗಿದುದು.

ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ದಶಮೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಇತ್ಥಂ ಚಿಂತಯಿತೋಃ ಪಿತ್ರೋಃ ಸ್ತೋಷಿತುಂ ಪರಮೇಶ್ವರೀ ।
ಪಾರ್ವತೀಪರ್ವತಸುತಾ ತಪಸ್ತಪ್ತುಂ ಮನೋದಧೇ ||೧||

ಕದಾಚಿತ್ಪಿತುರಂಕಸ್ಥಾ ಮೇನಯಾ ಲಾಲಿತಾ ತದಾ ।
ಪ್ರಾಹ ನಮ್ರಮುಖೀ ಬಾಲಾ ಪಿತರಂ ಹಿಮಭೂಧರಂ ||೨||

|| ಪಾರ್ವತ್ಯುವಾಚ ||

ತಾತಾಹಂ ತಪ್ತುಮಿಚ್ಛಾಮಿ ಕುತಸ್ತಪ್ತುಂ ವರಾಶ್ರಮಂ ।
ನಾನಾಮುನಿಜನಾಕೀರ್ಣಂ ಸಂಕೀರ್ಣಂ ಮೃಗಪಕ್ಷಿಭಿಃ ||೩||

---

## ಹತ್ತನೆಯ ಅಧ್ಯಾಯ

ಪಾರ್ವತಿಗೆ ತಕ್ಕ ವರನಾರು ಎಂದು ಯೋಚಿಸುತ್ತಿದ್ದ ಮಾತಾಪಿತೃಗಳಾದ ಮೇನಾ ಹಿಮವಂತರನ್ನು ಸಂತೋಷಗೊಳಿಸಲು ಪಾರ್ವತಿಯು ತಂದೆಯ ತೊಡೆಯ ಮೇಲೆ ಕುಳಿತು, ಮೇನಾದೇವಿಯಿಂದ ಲಾಲಿತಳಾಗಿ ವಿನಯದಿಂದ ತಂದೆಯೊಡನೆ ಈ ರೀತಿ ನುಡಿದಳು. ||೧-೨||

"ತಂದೆಯೇ, ಈಗ ನಾನು ಯೋಗ್ಯಪತಿಪ್ರಾಪ್ತಿಗಾಗಿ ತಪಸ್ಸುಮಾಡಲಿಷ್ಟ ಪಡುವೆನು. ಮುನಿಜನರಿಂದ ಕೂಡಿ, ಮೃಗಪಕ್ಷಿಗಳಿಂದ ಸೇವಿತವಾದ ಫಲಪುಷ್ಪ

ಸ್ವಚ್ಛಾಂಬುಫಲವೃಕ್ಷಾಢ್ಯಂ ಯತ್ರ ಮೇ ಸ್ಯಾದ್ರತಿಪ್ರದಂ ।
ತತ್ರಾಹಂ ತಪ್ತುಮಿಚ್ಛಾಮಿ ಮಾಮನುಜ್ಞಾತುಮರ್ಹಸಿ ॥೪॥

॥ ಹಿಮವಾನುವಾಚ ॥

ಸ ಪಾರ್ವತೀವಚಶ್ಶ್ರುತ್ವಾ ಪರ್ವತೇಂದ್ರಸ್ಸಮೇನಯಾ ।
ಉವಾಚ ಬಾಷ್ಪಪೂರ್ಣಾಕ್ಷಸ್ತಾಂ ಕನ್ಯಾಂ ಸ್ವಾಂಕಸಂಸ್ಥಿತಾಂ ॥೫॥

ಆಃ ಕಿಮುಕ್ತಂ ತ್ವಯಾ ಬಾಲೇ ತಪಃ ಕ್ವನು ತನುಃ ಕ್ವ ತೇ ।
ಶಿರೀಷಪುಷ್ಪಮೃದುಲಾ ಕಥಂ ವಿದ್ಯೋತಿತಾತಪೇ ॥೬॥

ಸಹತೇ ವರ್ಷಧಾರಾಣಾಮಾಸಾರಂ ಹಿಮಸಂಭವಂ ।
ಸಿಂಹಶಾರ್ದೂಲಶರಭವೃಕಭಲ್ಲೂಕನಾದತಃ ॥೭॥

ಕಥಂ ನ ಭೀತಿಮಾಪ್ನೋಷಿ ಭಾಮಿನೀ ವನಸಂಕಟೇ ।
ಕಂಟಕೈರಾವೃತತಲೇ ಮಾತಂಗವರಸಂಕುಲೇ ॥೮॥

---

ಜಲಭರಿತವಾದ ತಪೋವನವೊಂದನ್ನು ತಪಸ್ಸಿಗಾಗಿ ಹುಡುಕುತ್ತಿರುವೆನು. ಆ ರೀತಿ ನನಗೆ ತಪಸ್ಸುಮಾಡಲು ಅನುಮತಿಯನ್ನು ಕೊಡುವವನಾಗು." ॥೩-೪॥

ಹಾಗೆ ತಪಸ್ಸಿಗೆ ಅನುಮತಿಬೇಡುವ ಪುತ್ರಿಯಾದ ಪಾರ್ವತಿಯನ್ನು ನೋಡಿ, ಹಿಮವಂತನು ಮತ್ತು ಮೇನಾದೇವಿಯರು ದುಃಖಾಕುಲಚಿತ್ತರಾಗಿ ಕಳವಳಪಟ್ಟರು. ಆಗ ತೊಡೆಯ ಮೇಲೆ ಕುಳಿತಿದ್ದ ಪಾರ್ವತಿಯನ್ನು ನೋಡುತ್ತಾ ಗಿರಿರಾಜನು ಹೀಗೆಂದನು—"ಅಮ್ಮಾ, ಪಾರ್ವತಿ ಏನು ಹೀಗೆ ಹೇಳುವೆ? ಕಠಿನವಾದ ತಪಃ ಕರ್ಮವೆಲ್ಲಿ? ಕೋಮಲವಾದ ನಿನ್ನ ಈ ದೇಹವೆಲ್ಲಿ? ಮೊದಲು ಭಯಂಕರವಾದ ಬಿಸಿಲನ್ನು ನಿನ್ನ ಬಾಗೆಯ ಹೂವಿನಂತೆ ಕೋಮಲವಾದ ಈ ದೇಹವು ತಡೆದೀತೆ? ॥೫-೬॥

ಮಳೆಯ ಏಟನ್ನೂ ಹಿಮಪೂರಿತವಾದ ಗಾಳಿಯನ್ನೂ ನೀನು ತಡೆಯಬಲ್ಲೆಯಾ! ಅದೂ ಅಲ್ಲದೆ ಕಾಡಿನಲ್ಲಿ ಸಿಂಹ, ಹುಲಿ, ಶರಭ, ತೋಳ, ಕರಡಿ ಮುಂತಾದ ದುಷ್ಟಪ್ರಾಣಿಗಳ ಗರ್ಜನೆಯನ್ನು ಕೇಳಿ ನೀನು ಧೈರ್ಯದಿಂದಿರಲು ಸಾಧ್ಯವೆ? ಕಾಡಿನಲ್ಲಿ ಎಲ್ಲಿ ನೋಡಿದರೂ ಮುಳ್ಳು, ಕಲ್ಲುಗಳಿರುವುವು. ಆನೆಗಳ ಹಿಂಡು ತಂಡತಂಡವಾಗಿ ಸಂಚರಿಸುವುವು. ॥೭-೮॥

ಸದಾ ದುಃಖಕರಂ ಬಾಲೇ ತಪೋ ಮುನಿನಿಷೇವಿತಂ ।
ಸಂಜಾತಾ ಬ್ರಾಹ್ಮಣಕುಲೇ ವರ್ಣಿನೋ ವೇದಧಾರಿಣಃ ॥೯॥

ಗುರವೇ ದಕ್ಷಿಣಾಂ ದತ್ವಾ ಗೃಹಸ್ಥಾ ಯಜ್ಞಯಾಜಿನಃ ।
ಪುತ್ರಾನುತ್ಪಾದ್ಯ ವನ್ಯಾಸ್ತೇ ಭವಂತಿ ಕಿಲ ಬಾಲಕೇ ॥೧೦॥

ತತೋಽಪಿ ತೇ ವಿರಜ್ಯೈವ ಸಂನ್ಯಾಸಾಶ್ರಮಮಾಶ್ರಿತಾಃ ।
ಏಕಾಕಿನೋ ನಿರ್ಭಯೇನ ಸಂಚರಂತಿ ವನೇ ಸದಾ ॥೧೧॥

ಅತಸ್ತ್ವಂ ಭೂಷಣೈರ್ಯುಕ್ತಾ ಖೇಲತೀ ಪಾಲಿಕಾಗಣೈಃ ।
ಬಾಲಿಕಾಭಿಃ ಸದಾ ಬಾಲೇ ವಿದಧಂತೀ ಮುದಂ ಮಮ ॥೧೨॥

ವಸಾತ್ರ ನ ಸಹಾಮೀದಂ ವಿಯೋಗಂ ತವ ಪಾರ್ವತಿ ।
ಇತ್ಯುಕ್ತ್ವಾ ಭೂಧರೇಣಾಂಬಾ ಪುನಸ್ತಂ ಸಮಭಾಷತ ॥೧೩॥

॥ ಪಾರ್ವತ್ಯುವಾಚ ॥

ಮಹಾದೇವಂ ಮಹಾತ್ಮಾನಂ ತಪಸಾ ತೋಷ್ಯ ಶಂಕರಂ ।
ಅವಾಪ್ತುಂ ಪತಿಮೀಶಾನಂ ತಪ್ಸ್ಯಾಮಿ ಪರಮಂ ತಪಃ ॥೧೪॥

---

ತಪೋವನವು ಒಟ್ಟಿನಲ್ಲಿ ಬಹು ದುಃಖಪ್ರದವಾದುದು. ಬ್ರಾಹ್ಮಣಕುಲದಲ್ಲಿ ಹುಟ್ಟಿದವರು ಮೊದಲು ಬ್ರಹ್ಮಚಾರಿಯಾಗಿದ್ದು ಗುರುಮುಖೇನ ವೇದಾಧ್ಯಯನ ಮಾಡಿ, ಗುರುದಕ್ಷಿಣೆ ಕೊಟ್ಟು, ಗುರ್ವನುಮತಿಯಿಂದ ವಿವಾಹಮಾಡಿಕೊಂಡು, ಸಂತಾನವನ್ನು ಪಡೆದು ಅನಂತರ ವಾನಪ್ರಸ್ಥಾಶ್ರಮವನ್ನು ಆಶ್ರಯಿಸಿ ಅರಣ್ಯದಲ್ಲಿ ನೆಲಸುವರು. ॥೯-೧೦॥

ಹಾಗೂ ವೈರಾಗ್ಯವನ್ನು ಪಡೆಯದೆ, ಅವರು ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಒಂಟಿಯಾಗಿ ನಿರ್ಭಯದಿಂದ ಅರಣ್ಯದಲ್ಲಿ ಓಡಾಡುತ್ತಾರೆ. ಅಂತಹವರೂ ಅಷ್ಟು ವಯಸ್ಸಾದ ಮೇಲೆ ಅರಣ್ಯವನ್ನು ಸೇರುವಾಗ ನೀನು ಈ ಚಿಕ್ಕವಯಸ್ಸಿನಲ್ಲಿಯೇ ಒಡವೆವಸ್ತುಗಳಿಂದ ಅಲಂಕೃತಳಾಗಿ, ಗೆಳತಿಯರಿಂದ ಸಂತೋಷವಾಗಿ ಓಡಾಡುವುದನ್ನು ಬಿಟ್ಟು ತಪೋವನವನ್ನು ಪ್ರವೇಶಿಸುವುದು ಯಾವ ಧರ್ಮ? ॥೧೧-೧೨॥

ಅದೂ ಅಲ್ಲದೆ ಪುತ್ರೀರತ್ನವೆನಿಸಿದ ನಿನ್ನನ್ನು ಅರಣ್ಯಕ್ಕೆ ಕಳುಹಿಸಿ ನಾವು ಸಂತೋಷದಿಂದಿರಲು ಸಾಧ್ಯವಾಗಲಾರದು.'' ಎಂದು ಹೇಳಿದ ತಂದೆಯ ಮಾತನ್ನು

ಮಾ ದುಃಖಂ ಕುರು ಮೇ ತಾತ ಪರ್ವತೇಂದ್ರವಿಯೋಗಜಂ ।
ತವೈವ ಕುಲಮುತ್ಕೃಷ್ಟಂ ಭವೇನ ಯದಿ ಸಂಗತಾ ॥೧೫॥

ಮಾ ನಿರ್ಬಂಧಂ ಕುರುಷ್ವಾತ್ರ ಕಾರಣೇನ ತವೋದರೇ ।
ಸಂಜಾತಾಸ್ಮಿ ಚ ಮೇನಾಯಾಂ ಪ್ರಕೃತ್ಯಹಮಿಹಸ್ಥಿತಾ ॥೧೬॥

ತಸ್ಯಾಃ ಸುವಚಸಾ ತತ್ರ ಮೇನಯಾ ಸಹ ಭೂಧರಃ ।
ಸಂಮಂತ್ರ್ಯ ಸ ಶುಭೇ ಲಗ್ನೇ ದೇವೀಂ ಸ್ನಾಪ್ಯ ಸುಭೂಷಣೈಃ ॥೧೭॥

ವಾಸೋಭಿರ್ಗಂಧಪುಷ್ಪಾದ್ಯೈರಲಂಕೃತ್ಯ ಚ ಪಾರ್ವತೀಂ ।
ತದ್ವಿಯೋಗಾಸಹೋ ವಾಚಮುವಾಚಾಸ್ರಾವಿಲೇಕ್ಷಣಃ ॥೧೮॥

॥ ಹಿಮವಾನುವಾಚ ॥

ಹಿತಂ ವದಾಮಿ ತೇ ಪುತ್ರಿ ಶೃಣು ಮತ್ತಸ್ತಪಸ್ಥಿತಾ ।
ಮಮೈವ ಮೌಲೌ ನಿವಸ ಕೇದಾರಾರ್ಚನತತ್ಪರಾ ॥೧೯॥

---

ಕೇಳಿ ಪಾರ್ವತಿಯು ತನ್ನ ಅಭೀಷ್ಟವನ್ನು ಹೀಗೆಂದುಸುರಿದಳು — ತಂದೆಯೇ, ನಾನು ಮಹಾತ್ಮನಾದ ಮಹಾದೇವನನ್ನು ತಪಸ್ಸಿನಿಂದ ತೃಪ್ತಿಪಡಿಸಿ, ಆ ಪರಮೇಶ್ವರನನ್ನೇ ಪತಿಯನ್ನಾಗಿ ಮಾಡಿಕೊಳ್ಳಲು ಇಷ್ಟಪಡುವೆನು. ॥೧೩-೧೪॥

ಪರ್ವತರಾಜನೇ, ಈ ವಿಷಯದಲ್ಲಿ ನೀನು ದುಃಖಪಡಬೇಡ. ನಾನು ಪರಶಿವನನ್ನು ಒಲಿಸಿ ವಿವಾಹವಾದೆನಾದರೆ ನೀನೂ ನಿನ್ನ ಕುಲವೂ ಪವಿತ್ರವಾಗುವುದು. ನಿನ್ನ ಏಳಿಗೆಗಾಗಿ ಶ್ರಮಿಸುವ ನನ್ನ ವಿಷಯದಲ್ಲಿ ನೀನು ನಿರ್ಬಂಧವಿಡಬೇಡ. ನಿಜವಾಗಿಯೂ ನನಗೆ ಉತ್ಪತ್ತ್ಯಾದಿಗಳಿಲ್ಲ. ಆದರೂ ಲೋಕಮಾರ್ಗವನ್ನನುಸರಿಸಿ ನಿನ್ನ ಮತ್ತು ನಿನ್ನ ಪತ್ನಿಯಾದ ಮೇನಾದೇವಿಗೆ ಮಗಳಾಗಿ ಜನಿಸಿರುವೆನು." ॥೧೫-೧೬॥

ಹೀಗೆಂದ ಮಗಳ ಮಾತಿಗೆ ಒಪ್ಪಿಗೆಯಿತ್ತು ಗಿರಿರಾಜನು ಪತ್ನಿಯೊಡಗೂಡಿ ಶುಭಲಗ್ನದಲ್ಲಿ ಮಗಳಿಗೆ ಮಂಗಳಸ್ನಾನಮಾಡಿಸಿ, ಗಂಧಪುಷ್ಪಾದಿಗಳಿಂದಲೂ ಪಾರ್ವತಿಯನ್ನು ಅಲಂಕರಿಸಿ, ಕೊನೆಗೆ ಮಗಳನ್ನು ಅರಣ್ಯಕ್ಕೆ ಕಳುಹಿಸಿಕೊಡಲಾರದೆ ಕಣ್ಣೀರಿಡುತ್ತಾ ಹೀಗೆಂದನು. ॥೧೭-೧೮॥

ಪ್ರಿಯಪುತ್ರಿಯೇ, ನಿನಗೆ ಹಿತಕರವಾದ ಒಂದು ಮಾತನ್ನಾಡುವೆನು ಕೇಳು. ನೀನು ತಪಸ್ಸುಮಾಡುವುದಾದರೂ ನನ್ನ ಗಿರಿಶಿಖರದಲ್ಲಿಯೇ ಆಗಲಿ. ಅಲ್ಲಿ

ನಾನಾಮುನಿಜನಾಕೀರ್ಣೇ ನಾನಾಶಾಖಿವಿರಾಜಿತೇ ।
ನಾನಾಪಕ್ಷಿರುತಾಪಾರಮೃಗಸಂಘನಿಷೇವಿತೇ ॥೨೦॥

ಸರೋವರೈಕಬಹುಲೇ ಪ್ರಫುಲ್ಲಕಮಲೋತ್ಪಲೇ ।
ಅತ್ರ ಕೇದಾರನಾಥಸ್ಯ ಪೂಜನಾನ್ಮುಕ್ತಿಭಾಜ್ನರಃ ॥೨೧॥

ಬಹವೋತ್ರ ಸಮಭ್ಯರ್ಚ್ಯ ಸುರಾಶ್ಚ ಮುನಯಃ ಪುರಾ ।
ಲೇಭಿರೇ ವಾಂಛಿತಾನ್ಕಾಮಾಂಸ್ತಪಸಾ ತೋಷ್ಯ ಶಂಕರಂ ॥೨೨॥

ಇತ್ಯುಕ್ತ್ವಾ ತಾಂ ಸಮಾಲಿಂಗ್ಯ ಮೇನಯಾ ಹಿಮಭೂಧರಃ ।
ಪಾರ್ವತೀಯೈರ್ಗಣೈರ್ಯುಕ್ತೋ ನಾನಾವರ್ಣೈರ್ದುರಾಸದೈಃ ॥೨೩॥

ಮೇನಯಾ ಚ ಸ ಮೈನಾಕೋ ಗಿರಿಃ ಕನ್ಯಾಯುತೋ ಯಯೌ ।
ನಾನಾ ದುಂದುಭಿನಿರ್ಘೋಷೈಃ ಪಟಹಾನಕಗೋಮುಖೈಃ ॥೨೪॥

ಪುಷ್ಪಜಾಲೋರುವರ್ಷೇಣ ಹರ್ಷೇಣ ಮಹತಾಯುತಃ ।
ದೇವ್ಯಾ ವಿಮಾನಮಾರುಹ್ಯ ಪುಷ್ಪದಾಮಾವಲಂಬಿನಾ ॥೨೫॥

---

ಕೇದಾರೇಶ್ವರಲಿಂಗವಿರುವುದು. ಅನೇಕ ಮುನಿಜನರೂ, ಉನ್ನತವಾದ ತರುರಾಜಿಯೂ, ವಿಧವಿಧವಾದ ಮೃಗಪಕ್ಷಿಗಳೂ ಅಲ್ಲಿ ಸಂತೋಷದಿಂದಿದ್ದು ಆ ಪ್ರದೇಶವನ್ನು ರಮಣೀಯವನ್ನಾಗಿ ಮಾಡಿರುವುವು. ॥೧೯-೨೦॥

ಅಲ್ಲಿ ಅನೇಕ ಅರಳಿದ ಕಮಲಕಲ್ಹಾರಗಳಿಂದ ಶೋಭಿತಗಳಾದ ಸರೋವರಗಳಿರುವುವು. ಕೇದಾರೇಶ್ವರಾರ್ಚನೆಯು ಮಾನವರಿಗೆ ಮುಕ್ತಿಪ್ರದವಾದುದು. ಹಿಂದೆ ಅನೇಕ ಋಷಿಗಳೂ, ದೇವತೆಗಳೂ ಕೇದಾರೇಶ್ವರನನ್ನು ಸೇವಿಸಿ, ತಪಸ್ಸಿನಿಂದ ತೃಪ್ತಿಪಡಿಸಿ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪೂರ್ಣವಾಗಿ ಪಡೆದಿರುವರು. ॥೨೧-೨೨॥

ಹೀಗೆ ಮಗಳನ್ನು ಆಶ್ವಾಸನೆಮಾಡಿ, ಆಲಿಂಗಿಸಿಕೊಂಡು, ತನ್ನ ಗಣಗಳೊಡಗೂಡಿ ಪತ್ನೀಪುತ್ರಿಯರೊಡನೆ ಆ ಪ್ರದೇಶಕ್ಕೆ ಹೊರಟನು. ಆಗ ಗಿರಿರಾಜನ ಸೈನಿಕರು ತಮಟೆ, ನಗಾರಿ ಮುಂತಾದ ವಾದ್ಯಗಳಿಂದ ಧ್ವನಿಮಾಡುತ್ತಾ ರಾಜನನ್ನು ಹಿಂಬಾಲಿಸಿದರು. ॥೨೩-೨೪॥

ದೇವಿಯ ಪ್ರಯಾಣಕಾಲದಲ್ಲಿ ಪುಷ್ಪವೃಷ್ಟಿಯಾಯಿತು. ಗಿರಿರಾಜನು ದೇವಿಯೊಡನೆ ವಿಮಾನಾರೂಢನಾಗಿ ಪ್ರಯಾಣಹೊರಟನು. ಆ ವಿಮಾನವು ಪುಷ್ಪಮಾಲೆ

ಪತಾಕಾಚಾಮರಭ್ರಾಜಿದಿವ್ಯಛತ್ರೇಣ ಭಾಸ್ವತಾ ।
ನೀರಾಜಯಂತಿ ತಾಂ ದೇವೀಂ ಗಿರಿಸಂಸ್ಥಾ ವರಾಂಗನಾಃ ॥೨೬॥

ತಪಸ್ಯಭಿಪ್ರಯಾತಾಂ ತಾಂ ದೇವೀಂ ದೇವಾ ದಿವಿ ಸ್ಥಿತಾಃ ।
ಸುಮನೋಭಿರ್ವವರ್ಷುಶ್ಚ ತದಾ ಗಂಧರ್ವಾಪ್ಸರಸೋ ಜಗುಃ ॥೨೭॥

ನನೃತುರ್ಮುನಯಸ್ತತ್ರ ಜೇಪುಃ ಶಾಂತಿಂ ತದಾಖಿಲಾಃ ।
ವಿಮಾನಾದವರುಹ್ಯಾಶು ಕೇದಾರಂ ಶಿಖರೇ ಸ್ವಕೇ ॥೨೮॥

ಉತ್ಫುಲ್ಲಸಹಕಾರಾಢ್ಯೇ ತಮಾಲಾಲಿವಿರಾಜಿತೇ ।
ತಾಲಸಂಘರ್ಷಿಮರುತಾ ರಾವಿತಂ ಪನಸಾವನೈಃ ॥೨೯॥

ಫುಲ್ಲಮಂದಾರವಿಪಿನೇ ಕರ್ಣಿಕಾರಾಲಿಶೋಭಿತೇ ।
ಕದಂಬಕೇತಕೀಗುಚ್ಛಸಂಛನ್ನಾಲಿವಿರಾಜಿತೇ ॥೩೦॥

---

ಗಳಿಂದ ಅಲಂಕೃತವಾಗಿದ್ದಿತು. ಸುಂದರವಾದ ಧ್ವಜಪತಾಕೆಗಳಿಂದಲೂ ಶ್ವೇತಚ್ಛತ್ರಿಯಿಂದಲೂ ಅದು ಪ್ರಕಾಶಿತವಾಗಿದ್ದಿತು. ಹೀಗೆ ವಿಮಾನಾರೂಢಳಾಗಿ ಪ್ರಯಾಣ ಮಾಡುತ್ತಿರುವ ದೇವಿಗೆ ಆ ಗಿರಿಯಲ್ಲಿದ್ದ ಸ್ತ್ರೀಯರು ಪ್ರೀತಿಯಿಂದ ಆರತಿಯೆತ್ತಿದರು. ॥೨೫-೨೬॥

ತಪಸ್ಸಿಗಾಗಿ ಪ್ರಯಾಣಬೆಳೆಸುವ ದೇವಿಯನ್ನು ನೋಡಿ ದೇವತೆಗಳು ದೇವಿಯ ಮೇಲೆ ಹೂಮಳೆಗರೆದರು. ಗಂಧರ್ವರು ಗಾನಮಾಡಿದರು. ಅಪ್ಸರಸ್ತ್ರೀಯರು ನರ್ತನಮಾಡಿದರು. ಮುನಿಗಳು ಶಾಂತಿಮಂತ್ರಗಳನ್ನು ಪಠಿಸಿದರು. ಈ ರೀತಿ ವೈಭವದಿಂದ ಪ್ರಯಾಣಮಾಡಿ ಕೇದಾರ ಶಿಖರಕ್ಕೆ ಹೋಗಿ ಅಲ್ಲಿ ವಿಮಾನದಿಂದಿಳಿದು ಗಿರಿರಾಜನು ಪಾರ್ವತಿಯೊಡಗೂಡಿ ಆ ಶಿಖರಪ್ರದೇಶಕ್ಕೆ ಹೋದನು. ॥೨೭-೨೮॥

ಅರಳಿದ ಹೂವುಗಳಿಂದ ಮಾವಿನಮರ, ಹೊಂಗೆಯಮರ ಇವು ಅಲ್ಲಿ ಬಹು ಸುಂದರವಾಗಿ ಕಾಣುತ್ತಿದ್ದುವು. ತಾಲವೃಕ್ಷದ ಗರಿಗಳನ್ನು ಧ್ವನಿಗೈಸುತ್ತಾ ಮಂದ ಮಾರುತವು ಬೀಸುತ್ತಿದ್ದಿತು. ಹಲಸಿನ ಹಣ್ಣುಗಳಿಂದ ತುಂಬಿದ ಮರಗಳೂ, ಮಂದಾರ ವೃಕ್ಷಗಳೂ, ಕರ್ಣಿಕಾರಗಿಡಗಳೂ, ಕದಂಬ, ಕೇತಕೀ ಮುಂತಾದ ಪುಷ್ಪಗಳೂ, ಅವುಗಳ ಮೇಲೆ ಹಾರಾಡುವ ದುಂಬಿಗಳೂ ಅಲ್ಲಿ ನಯನಮನೋಹರವಾಗಿ ಕಂಡು ಬರುತ್ತಿದ್ದುವು. ॥೨೯-೩೦॥

ದಾಡಿಮೀನಿಬಿಡೈರ್ವೃಕ್ಷೈಃ ಫಲಪುಷ್ಪಾಸನಾಮಭಿಃ । (?)
ಚಂಪಕೋದ್ದಾಮಗಂಧಾಢ್ಯೇ ಕೃತಮಾಲಾವಿರಾಜಿತೇ ॥೩೧॥

ಅಶೋಕದೇವದಾರೂಣಾಂ ತರುಭಿರ್ಬಿಲ್ವಸಂಯುತೇ ।
ಅಶೋಕೈಶ್ಶೋಕನಾಶಾಢ್ಯೈ ರ್ಮಾತುಲಿಂಗೈಃ ಫಲಾನತೈಃ ॥೩೨॥

ಕರಂಜಕಕುಭೈಶ್ಚೈವ ಕಪಿತ್ಥಬದರ್ಯೈರ್ಯುತೇ ।
ಸಾರಂಗರಾಜಿತೇ ತತ್ರ ಪಕ್ಷಿಸಂಘವಿರಾಜಿತೇ ॥೩೩॥

ನದನ್ ದಾತ್ಯೂಹಕಾರಂಡ ಚಕ್ರನಾಕೋಪಳೂಜಿತೇ ।
ಭ್ರಮತ್ಸಾರಂಗಮಾತಂಗ ಕುಸುಮವ್ರಜಷಟ್ಪದೇ ॥೩೪॥

ಮುನೀನಾಮಾಶ್ರಮಯುತೇ ಶ್ರಮಹಾರಿಣಿ ವಾರಿಣಿ ।
ಉತ್ಫುಲ್ಲಕರವೀರಾಲಿ ಕದಲೀದಳ ಲಾಲಿತೇ ॥೩೫॥

ನಾರಿಕೇಲಭರಾಸ್ಫಾಲ ಸಂವಿದಾರಿತಮಾರುತೇ ।
ಶಿಖಂಡಿ ತಾಂಡವಕೃತ ಕೇಕಾಲಾಪಿದಿಗಂತರೇ ॥೩೬॥

---

ದಾಡಿಮೀ ವೃಕ್ಷಗಳ ಸಾಲುಗಳು ಫಲಪುಷ್ಪಭರಿತಗಳಾಗಿ ಕಂಗೊಳಿಸುತ್ತಿದ್ದುವು. ಸಂಪಿಗೆ ಹೂಗಳ ಪರಿಮಳವು ಸರ್ವತ್ರ ವ್ಯಾಪಿಸಿದ್ದಿತು. ಅಶೋಕ, ದೇವದಾರು, ಬಿಲ್ವ, ಮಾದಳ ಮುಂತಾದ ಮರಗಳು ಫಲಭಾರದಿಂದ ಬಗ್ಗಿ ನಿಂತಿದ್ದುವು. ॥೩೧-೩೨॥

ಕರಂಜ (ಹೊಂಗೆ), ಕಕುಭ (ದೇವದಾರು), ಬೇಲ, ಬದರಿ, ಕಿತ್ತಲೆ ಮೊದಲಾದ ವೃಕ್ಷಗಳೂ, ಕಾಲಕಂಟಕ, ಚಕ್ರವಾಕ ಮುಂತಾದ ಪಕ್ಷಿಗಳೂ, ಸಾರಗ, ಆನೆ ಮುಂತಾದ ಪ್ರಾಣಿಗಳೂ, ಮಕರಂದ ಪಾನಕ್ಕಾಗಿ ಹಾರಾಡುವ ಭ್ರಮರಗಳೂ ಆ ವನದಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತಿದ್ದುವು. ॥೩೩-೩೪॥

ಅಲ್ಲಿ ಅನೇಕ ಮುನಿಗಳ ಆಶ್ರಮವು ವಿರಾಜಿಸುತ್ತಿದ್ದಿತು. ಶ್ರಮಪರಿಹಾರಕವಾದ ನೀರಿನಿಂದಲೂ, ಸುತ್ತಲೂ ಹೂವರಳಿ ನಿಂತಿರುವ ಕಣಿಗಳು ಗಿಡಗಳಿಂದಲೂ ಬಾಳೆಮರಗಳ ಪಂಕ್ತಿಗಳಿಂದಲೂ ಶೋಭಿಸುವ ಸರೋವರಗಳು ಅಲ್ಲಿ ಕಂಗೊಳಿಸುತ್ತಿದ್ದುವು. ಫಲಭರಿತಗಳಾದ ತೆಂಗಿನಮರಗಳನ್ನು ವೇಗವಾದ ಗಾಳಿಯು ಅಲುಗಾಡಿ

ಪುಂಸ್ಕೋಕಿಲೋರುವಿರುತೇ ಹಂಸಕ್ರೇಂಕಾರಘೋಷಿತೇ ।
ಸಮುತ್ಫುಲ್ಲಾಬ್ಜಿನೀಗಾಹಂ ಪರಿಧಾಯ ದುಕೂಲಕಂ ॥೩೭॥

ಗಿರಿಶಾ ಸಮನುಜ್ಞಾತಾ ತಪಸೇ ಧೃಢನಿಶ್ಚಯಂ ।
ಧೃತತ್ರಿಪುಂಡ್ರರುದ್ರಾಕ್ಷಾ ಕಂಕಣಾಂಗದವರ್ಜಿತಾ ॥೩೮॥

ಸೂಕ್ಷ್ಮಪರ್ಣೈಕವಸನಾ ಅಪರ್ಣಾಬಹ್ವಶೋಭತಾ ।
ಕೃತಧಮ್ಮಿಲ್ಲಜಟಿಲಾ ಸಖೀಭಿಸ್ಸಾ ಮನೋರಮಾ ॥೩೯॥

ವಿಮುಕ್ತಮುಕ್ತಾಮಾಲಾಢ್ಯಾ ಸಾ ದೇವೀ ಭೂಷಯದ್ವನಂ ।
ಸ್ವವಕ್ತ್ರಜಾತಸೌಂದರ್ಯಪದ್ಮೇಷು ನಿದಧೇ ಶಿವಾ ॥೪೦॥

ಸ್ವನೇತ್ರನೀಲಿಮಾನಂ ಸಾ ದದೌ ನೀಲೋತ್ಪಲೇ ಶಿವಾ ।
ಸ್ವನಾಸಾಪುಟಸಂಶೋಭಾಂ ದದೌ ಚಂಪಕಕುಟ್ಮಲೇ ॥೪೧॥

---

ಸುತ್ತಿತ್ತು. ನವಿಲುಗಳೂ, ಕೋಗಿಲೆಗಳೂ ನಾಟ್ಯ, ಗಾನ ಇವುಗಳಿಂದ ಬಂದವರಿಗೆ ಆನಂದವನ್ನುಂಟುಮಾಡುತ್ತಿದ್ದವು. ||೩೫-೩೬||

ಪುಂಸ್ಕೋಗಿಲೆಗಳು ಧ್ವನಿಗೈಯುತ್ತಲೂ, ಹಂಸಪಕ್ಷಿಗಳು ಕ್ರೇಂಕಾರಮಾಡುತ್ತಲೂ, ಸುಂದರವಾಗಿದ್ದ ಸರೋವರದಲ್ಲಿ ಪಾರ್ವತಿಯು ಮೊದಲು ಸ್ನಾನಮಾಡಿದಳು. ಪೀತಾಂಬರವನ್ನು ತೆಗೆದಿಟ್ಟಳು. ತಂದೆಯಿಂದ ಅಪ್ಪಣೆ ಪಡೆದು ತಪಸ್ಸಿಗೆ ಸಿದ್ಧಳಾಗಿ ಭಸ್ಮತ್ರಿಪುಂಡ್ರಗಳನ್ನೂ ರುದ್ರಾಕ್ಷಿಮಾಲೆಯನ್ನೂ ಧರಿಸಿದಳು. ಕೈಬಳೆ, ತೋಳುಬಳೆಗಳನ್ನು ತೆಗೆದುಹಾಕಿದಳು. ಸಣ್ಣ ಎಲೆಗಳಿಂದ ಕೂಡಿದ ಚಿಗುರನ್ನು ಬಟ್ಟೆಯನ್ನಾಗಿ ಮಾಡಿಕೊಂಡಳು. ಸಖಿಯರೊಡಗೂಡಿ ತನ್ನ ಜಡೆಯನ್ನು ಬಿಚ್ಚಿಕೊಂಡು ಕೂದಲನ್ನು ಸೇರಿಸಿ ಒಂದು ಗಂಟುಹಾಕಿಕೊಂಡಳು. ||೩೭-೩೮-೩೯||

ತಾನು ಹಾಕಿಕೊಂಡಿದ್ದ ಮುತ್ತಿನ ಸರವನ್ನು ತೆಗೆದು ಆ ವನದೇವತೆಗೆ ಅರ್ಪಿಸಿದಳು. ತನ್ನ ಮುಖಸೌಂದರ್ಯವನ್ನು ಪದ್ಮಗಳಿಗೆ ಕೊಟ್ಟಳು. ತನ್ನ ಕಣ್ಣುಗಳ ನೀಲಕಾಂತಿಯನ್ನು ನೀಲೋತ್ಪಲಗಳಲ್ಲಿಟ್ಟಳು. ಮೂಗಿನ ಸೌಂದರ್ಯವನ್ನು ಸಂಪಿಗೆಯ ಮೊಗ್ಗುಗಳಿಗಿತ್ತಳು. ||೪೦-೪೧||

ಸ್ವಾಧರೇಪಿ ಚ ಯದ್ರಾಗಂ ಯದ್ಬಿಂಬೇಷು ನ್ಯಧಾತ್ತದಾ ।
ರದನಾವಲಿಸಂಶೋಭಾಂ ಕುಂದೇಷು ಸಮಕಲ್ಪಯತ್ ॥೪೨॥

ಕಪೋಲಯೋರ್ಯತ್ಸೌಂದರ್ಯಮಾದರ್ಶೇಷು ದದೌ ತದಾ ।
ಕಂಠಮಂಡಲಶೋಭಾಂ ಚ ಶಂಖೇಷು ಪರಿತನ್ವತೇ ॥೪೩॥

ಕರ್ಣಯೋರ್ಯಾ ತದಾ ಶೋಭಾ ಷಷ್ಕುಲೀಷು ದದೌ ಶಿವಾ ।
ಮಾತುಲಿಂಗೇ ಕುಚೋತ್ತುಂಗಂ ದದೌ ಸಾ ಪರಮೇಶ್ವರೀ ॥೪೪॥

ನಾಭೀಜಘನಶೋಭಾಂ ಚ ಕುಂಭೀಮಸ್ತೇ ದದೌ ತದಾ ।
ಸ್ವೋರುಭಾರಂ ಚ ರಂಭಾಯಾಂ ಸೈವಾಂಬಾ ಸಮಕಲ್ಪಯತ್ ॥೪೫॥

ಪ್ರಪದೇ ಯಚ್ಚ ಲಾವಣ್ಯಂ ಕಮಠೇಷು ದದೌ ಶಿವಾ ।
ಕಟ್ಯಾಂ ಯತ್ತತ್ರ ಸೌಂದರ್ಯಂ ಸಿಂಹೇಷು ಪ್ರದದೌ ಶಿವಾ ॥೪೬॥

ನಖಾನಾಂ ಚ ರುಚಿಂ ದೇವಿ ಸಾಮಿಚಂದ್ರೇ ದದೌ ತದಾ ।
ಭೂಶಯ್ಯಾ ಸಾ ಭವದ್ಬಾಲಾ ವರ್ಷಂ ಪವನಭೋಜನಾ ॥೪೭॥

---

ಪಾರ್ವತಿಯ ಅಧರರಾಗವು ತೊಂಡೆಯಹಣ್ಣುಗಳಲ್ಲಿಯೂ, ದಂತಪಂಕ್ತಿಯ ಶೋಭೆಯು ಕೋಲು ಮಲ್ಲಿಗೆ ಹೂವುಗಳಲ್ಲಿಯೂ, ಕಪೋಲಗಳ ಕಾಂತಿಯು ಕನ್ನಡಿಯಲ್ಲಿಯೂ, ಕಂಠಮಂಡಲದ ಸೊಬಗು ಶಂಖದಲ್ಲಿಯೂ ಅಡಗಿನಿಂತಿತು. ॥೪೨-೪೩॥

ದೇವಿಯು ತನ್ನ ಕಿವಿಗಳ ಸೌಂದರ್ಯವನ್ನು ಚಕ್ಕುಲಿಗೂ, ಕುಚಗಳ ದಪ್ಪವನ್ನು ಮಾದಲದ ಹಣ್ಣುಗಳಿಗೂ, ಜಘನಪ್ರದೇಶಗಳ ಸ್ಥೂಲಾಂಶವನ್ನು ಆನೆಯ ಕುಂಭಸ್ಥಳಕ್ಕೂ, ತೊಡೆಗಳ ವರ್ತುಲತ್ವಸೌಕುಮಾರ್ಯಾದಿಗಳನ್ನು ಬಾಳೆಯ ಮರಕ್ಕೂ ವಿಶ್ವಾಸದಿಂದ ಕೊಟ್ಟುಬಿಟ್ಟಳು. ॥೪೪-೪೫॥

ಪಾದಾಗ್ರದ ಸೌಂದರ್ಯವು ಆಮೆಗೂ, ಸೊಂಟದ ಸೊಬಗು ಸಿಂಹಕ್ಕೂ, ಉಗುರುಗಳ ಆಕಾರವು ಅರ್ಧಚಂದ್ರನಿಗೂ ಹೋಗಿ ಸೇರಿತು. ಹೀಗೆ ಮಂಕಾದ ದೇಹಸೌಂದರ್ಯದಿಂದ ಕೂಡಿ ಪಾರ್ವತಿಯು ನೆಲದ ಮೇಲೆ ಮಲಗುತ್ತಾ ವರ್ಷ ಪರ್ಯಂತ ವಾಯ್ವಾಹಾರದಿಂದಿದ್ದಳು. ॥೪೬-೪೭॥

ವರ್ಷಂ ಪರ್ಣಫಲಾಹಾರಾ ನಿರಾಹಾರಾ ಚ ಹಾಯನಂ ।
ಹೇಮಂತೇ ಜಲಮಧ್ಯಸ್ಥಾ ವಸಂತೇ ಸ್ಥಂಡಿಲೇಶಯಾ ॥೪೮॥

ಗ್ರೀಷ್ಮೇ ಪಂಚಾಗ್ನಿನಿರತಾ ವರ್ಷಾಸ್ವಭ್ರಾವಕಾಶಗಾ ।
ರುದ್ರಮಾವರ್ತಯಂತೀ ಸಾ ಪಂಚಾಕ್ಷರಪರಾಯಣಾ ॥೪೯॥

ತಪಸ್ಯಂತೀಂ ತದಾ ದೇವೀಂ ಮುದಾ ತತ್ರ ಮಹರ್ಷಯಃ ।
ಸಮವೇತಾಃ ಸದಾರಾಸ್ತೇ ವಿಸ್ಮಯಂತಶ್ಚ ಸಂಸ್ಥಿತಾಃ ॥೫೦॥

ಸಿಕತ್ಯಂ ಸಿಕತಾಲಿಂಗೇ ಪೂಜಯಾಮಾಸ ಶಾಂಭವೀ ।
ತತ್ರತ್ಯವೃಕ್ಷಾಶ್ಚ ಮೃಗಾಃ ಪಕ್ಷಿಣೋ ರಕ್ಷಯಂತಿ ತಾಂ ॥೫೧॥

ಕರಿಣಃ ಪುಷ್ಕರಾಸಾರೈಸ್ತಸ್ಯಾಂಗಂ ಸಮಶೀತಯನ್ ।
ಶಿಖಂಡಿನಃ ಸ್ವಪಿಂಛಾಗ್ರೈರ್ಘರ್ಮವಾರ್ತಾಂ ತಾಮನೀಜಯನ್ ॥೫೨॥

---

ಎಲೆ, ಹಣ್ಣು ಇವುಗಳನ್ನು ತಿನ್ನುತ್ತಾ ಒಂದು ವರ್ಷ ಕಳೆದಳು. ಯಾವ ಆಹಾರವೂ ಇಲ್ಲದೆ ಮತ್ತೊಂದು ವರ್ಷವನ್ನು ನೀಗಿದಳು. ಚಳಿಗಾಲದ ಹಿಮಂತ ಋತುವಿನಲ್ಲಿ ನೀರಿನ ಮಧ್ಯೆಯೂ, ವಸಂತ ಋತುವಿನಲ್ಲಿ ಅಗ್ನಿವೇದಿಕೆಯಲ್ಲಿಯೂ ಬೇಸಗೆಯಲ್ಲಿ ಪಂಚಾಗ್ನಿಗಳ ಮಧ್ಯೆಯೂ, ಮಳೆಗಾಲದಲ್ಲಿ ಬಯಲಿನಲ್ಲಿಯೂ ನಿಂತು ಸದಾ ರುದ್ರಾಧ್ಯಾಯವನ್ನೂ, ಶಿವಪಂಚಾಕ್ಷರಿಯನ್ನೂ ಜಪಿಸುತ್ತಾ ದೇವಿಯು ತಪಸ್ಸನ್ನು ಮುಂದುವರಿಸಿದಳು. ॥೪೮-೪೯॥

ಹಾಗೆ ಉಗ್ರಮಾರ್ಗದಿಂದ ತಪಸ್ಸುಮಾಡುತ್ತಿರುವ ಪಾರ್ವತಿಯನ್ನು ನೋಡಿ ಅಲ್ಲಿದ್ದ ಮಹರ್ಷಿಗಳು ಪತ್ನೀಸಮೇತರಾಗಿ ಬಂದು ನೋಡಿ ಆಶ್ಚರ್ಯಪಡುತ್ತಿದ್ದರು. ಪಾರ್ವತಿಯು ಮರಳಿನಿಂದ ಶಿವಲಿಂಗವನ್ನು ಮಾಡಿಕೊಂಡು ಪೂಜಿಸುತ್ತಿದ್ದಳು. ಅಲ್ಲಿದ್ದ ಮರಗಳೂ, ಮೃಗಗಳೂ, ಪಕ್ಷಿಗಳೂ ಆ ಪಾರ್ವತೀದೇವಿಯ ವಿಷಯದಲ್ಲಿ ಕರುಣೆಯನ್ನು ತೋರಿಸುತ್ತಿದ್ದುವು. ॥೫೦-೫೧॥

ಆನೆಗಳು ತಮ್ಮ ಸೊಂಡಿಲುಗಳಿಂದ ನೀರನ್ನು ತಂದು ದೇವಿಯ ದೇಹದ ಮೇಲೆ ಎರಚಿ ತಂಪುಮಾಡುತ್ತಿದ್ದುವು. ನವಿಲುಗಳು ತಮ್ಮ ಗರಿಗಳಿಂದ ದೇವಿಗೆ ಗಾಳಿ ಬೀಸುತ್ತಿದ್ದುವು. ಚಮರೀ ಮೃಗಗಳು ತಮ್ಮ ರೆಕ್ಕೆಗಳಿಂದ ದೇವಿಯ ದೇಹದ ಮೇಲೆ ಹಾರಾಡುವ ನೊಣಗಳನ್ನು ಹಾರಿಸುತ್ತಿದ್ದುವು. ಕೋಗಿಲೆಗಳು ತಮ್ಮ

ಚಮರಾಪುಚ್ಛಗುಚ್ಛೈಸ್ತಾಂ ಧೂನ್ವಂತೌ ದಂಶವಾರಕಾಃ ।
ಕೋಕಿಲಾರಾವಸಲ್ಲಾಪೈಃ ಸ್ತುವಂತ ಇವ ಸಂಸ್ಥಿತಾಃ ॥೫೩॥

ಶಾಖಿನಃ ಸ್ವಸ್ವಶಾಖಾಭಿಶ್ಛಾದಯಂತ್ಯಾತಪಾರ್ದಿತಾಂ ।
ಗಿರಿರಾಡಪಿ ತಾಂ ದೇವೀಂ ವಿಲೋಕ್ಯಾಯಾತಿ ಯಾತಿ ಚ ॥೫೪॥

ಸದ್ಯೋಭವಂಸ್ತದಾ ತಸ್ಯಾಃ ಮುನಿಪತ್ನ್ಯಃ ಕುಮಾರಿಕಾಃ ।
ಸುಪುಷ್ಪೋಪಚಯಂಸ್ತತ್ರ ಕಂದಮೂಲಫಲಾದಿಭಿಃ ॥೫೫॥

ಶೀತಪಾನೀಯದಾನೇನ ತಾಃ ಸೇವಂತೇ ಮಹೇಶ್ವರೀಂ ।
ಕೇದಾರೇಶ್ವರಪೂಜಾಯಾಂ ನಿರತಾ ದ್ವಾದಶಾಬ್ದಕಂ ॥೫೬॥

ಪಂಚಾಮೃತಾಸೇಚನೇನ ಗಂಧೈಃ ಪುಷ್ಪೈರ್ಮನೋಹರೈಃ ।
ಧೂಪೈರ್ದೀಪೈಶ್ಚ ನೈವೇದ್ಯೈಃ ಪ್ರಣಾಮಪ್ರಕ್ರಮಾದಿಭಿಃ ॥೫೭॥

ಪೂಜಯಾಮಾಸ ಸಾ ದೇವೀ ಗಿರಿರಾಜಸುಮೌಲಿಗಾ ।
ತೇನ ಸಂಪ್ರೇಷಿತೇನೈವ ಸಂಭಾರೇಣ ಪರಾಶಿವಾ ॥೫೮॥

---

ಇಂಪಾದ ಕಂಠದಿಂದ ದೇವಿಯನ್ನು ಸ್ತುತಿಸುತ್ತಿವೆಯೋ ಎಂಬಂತೆ ಕೂಗುತ್ತಿದ್ದವು. ||೫೨-೫೩||

ಮರಗಳು ಪಾರ್ವತಿಗೆ ಬಿಸಿಲಿನ ವೇಗವನ್ನು ಕಮ್ಮಿಮಾಡಲು ತಮ್ಮ ಕೊಂಬೆಗಳನ್ನು ಪಾರ್ವತಿಯ ಕಡೆಗೆ ತಿರುಗಿಸುತ್ತಿದ್ದವು. ಗಿರಿರಾಜನಾದರೋ ಆಗಾಗ ಬಂದು ಮಗಳ ತಪಸ್ಸಿನ ಕ್ರಮವನ್ನು ನೋಡಿಕೊಂಡು ಹೋಗುತ್ತಿದ್ದನು. ಮುನಿಪತ್ನಿಯರು, ಮುನಿಪುತ್ರಿಯರು ತಪಸ್ಸುಮಾಡುತ್ತಿದ್ದ ದೇವಿಗೆ ಹೂವು, ಗೆಡ್ಡೆ, ಗೆಣಸು, ಹಣ್ಣು, ನೀರು ಇವುಗಳನ್ನು ತಂದುಕೊಡುತ್ತಾ ಕ್ರಮವಾಗಿ ಗೆಳತಿಯರಾದರು. ||೫೪-೫೫||

ಅನಂತರ ಪಾರ್ವತಿಯು ಹನ್ನೆರಡು ವರ್ಷಪರ್ಯಂತ ಕೇದಾರೇಶ್ವರಲಿಂಗವನ್ನು ಪೂಜಿಸಿದಳು. ಪಂಚಾಮೃತಾಭಿಷೇಕ, ಗಂಧಪುಷ್ಪಾದಿಗಳ ಅಲಂಕಾರ, ಧೂಪದೀಪ ನೈವೇದ್ಯಗಳ ಉಪಚಾರ, ಪ್ರಣಾಮಪೂರ್ವಕವಾದ ಸ್ತುತಿವಚನ ಇವೇ ಮೊದಲಾದುವುಗಳಿಂದ ಗಿರಿಶಿಖರದಲ್ಲಿ ನೆಲಸಿ ಕೇದಾರೇಶ್ವರನನ್ನು ಭಯಭಕ್ತಿಯಿಂದ

ಸಂಪೂಜಯುಂಸ್ತುವನ್ ದೇವಂ ಸ್ತೋತ್ರೇಣ ಪರಮೇಶ್ವರಂ ।
ಭಾದ್ರಶುಕ್ಲೆ ತೃತೀಯಾಯಾಂ ಸಿಕತಾಯಾಂ ಮಹೇಶ್ವರಂ ॥೫೯॥

ಸಮರ್ಚಯತಿ ರಾತ್ರೌ ಸಾ ಬಿಲ್ವಪತ್ರೈರ್ಮಹೇಶ್ವರಂ ।
ಸಾಕರೋಜ್ಜಾಗರಂ ದೇವೀ ಕೇದಾರೇಶಸ್ತವೇ ರತಾ ॥೬೦॥

ವಿರತಾ ಸರ್ವಭೋಗೇಭ್ಯಃ ಶರ್ವೇ ಸಂನ್ಯಸ್ತಮಾನಸಾ ॥೬೧॥

॥ ಪಾರ್ವತ್ಯುವಾಚ ॥

ಪ್ರಭಾಕರ ನಿಶಾಕರಪ್ರಥಿತಲೋಚನಂ ಶಂಕರಂ
ವತಂಸಿತಸುಧಾಕರಂ ಗರಧರಂ ಚ ಗಂಗಾಧರಂ ।
ಭಜಾಮಿ ಶಿವಮವ್ಯಯಂ ಪರಗುಣೌಘರತ್ನಾಕರಂ
ಯಮಾಂಧಕಹರಂ ಹರಂ ಫಣಿಗಣೇಶಹಾರಂ ಶಿವಂ ॥೬೨॥

ಅರುಣಂ ಚರಣಂ ಮಹೇಶ ತೇದ್ಯ
ಶರಣಂ ಮರಣಕ್ಷಣೇಪಿ ಯಾಮಿ ।

---

ಪೂಜಿಸಿದಳು. ಗಿರಿರಾಜನು ಈ ಪೂಜಾಸಾಮಗ್ರಿಗಳನ್ನು ಮಗಳಿಗೆ ಆಗಾಗ ಒದಗಿಸುತ್ತಿದ್ದನು. ॥೫೬-೫೭-೫೮॥

ಪಾರ್ವತಿಯು ಪೂಜಾನಂತರದಲ್ಲಿ ಪರಶಿವನನ್ನು ಬಹುವಾಗಿ ಸ್ತುತಿಸಿದಳು. ಭಾದ್ರಪದ ಶುದ್ಧ ತದಿಗೆಯ ರಾತ್ರಿ ಮರಳಿನಲ್ಲಿ ಮಹೇಶ್ವರಲಿಂಗವನ್ನು ನಿರ್ಮಿಸಿಕೊಂಡು ಬಿಲ್ವಪತ್ರಾದಿಗಳಿಂದ ಪೂಜಿಸಿ ಕೇದಾರೇಶ್ವರಲಿಂಗವನ್ನು ಸ್ತುತಿಸುತ್ತಾ ಜಾಗರಣೆಯಿಂದ ಕಾಲವನ್ನು ಕಳೆಯುವಳು. ಸಕಲ ಭೋಗಸಾಮಗ್ರಿಗಳನ್ನೂ ದೂರಮಾಡಿ ಈಶ್ವರನಲ್ಲಿಯೇ ಸ್ಥಿರಮನಸ್ಸುಳ್ಳವಳಾಗಿದ್ದಳು. ಮತ್ತು ಆಗಾಗ ಹೀಗೆ ಶಂಕರನನ್ನು ಪ್ರಾರ್ಥಿಸುವಳು. ॥೫೯-೬೦-೬೧॥

ಸೂರ್ಯಚಂದ್ರರನ್ನೇ ನೇತ್ರಗಳನ್ನಾಗಿಯೂ, ಚಂದ್ರನನ್ನೇ ಶಿರಸ್ಸಿನ ಅಲಂಕಾರವಸ್ತುವನ್ನಾಗಿಯೂ ಧರಿಸಿ, ವಿಷವನ್ನು ಕಂಠದಲ್ಲಿಯೂ, ಗಂಗೆಯನ್ನು ಶಿರಸ್ಸಿನಲ್ಲಿಯೂ ಹೊತ್ತಿರುವ ಪರಶಿವನನ್ನು ಸದಾ ಸೇವಿಸುವೆನು. ನಾಶರಹಿತನೂ, ವರಗುಣರತ್ನಗಳಿಗೆ ಸಮುದ್ರದಂತೆಯೂ ಇದ್ದು ಯಮ ಮತ್ತು ಅಂಧಕಾಸುರ ಇವರಿಗೆ ಭಯಪ್ರದನಾದ ನಾಗಾಭರಣನಾದ ಶಂಕರನನ್ನು ಯಾವಾಗಲೂ ಧ್ಯಾನಿಸುವೆನು. ॥೬೨॥

ಮಹೇಶ್ವರನೇ, ನಿನ್ನ ನಸುಗೆಂಪಾದ ಪಾದಕಮಲವನ್ನು ಮರಣಕಾಲ

ಕರುಣಾವರುಣಾಲಯೋಽಸಿ ಶಂಭೋ
ಪ್ರಣಮಂತೀಮಭಿವೀಕ್ಷ್ಯ ದೇವ ಪಾಹಿ ॥೭೩॥

ಕುಂಭೀಂದ್ರ ಕುಂಭಸ್ಥಿತ ಪಾದಪದ್ಮಂ
ಕುಂಭಿತ್ವಚೋತ್ಕೃತ್ತಿ ಗಲದ್ರುಧಿರಾಂಗವಸ್ತ್ರಂ(?) ।
ಕುಂಭಾಸ್ಯಸೂನುಸುರಕುಂಭಭವಾದಿಪೂಜ್ಯಂ
ಕುಂಭೀಶ್ವರಂ ಪ್ರಣತಕುಂಭಿ ಸಮುಗ್ರಕಾಯಂ ॥೭೪॥

ಕೇದಾರೇಶಮಹೇಶಶಂಕರ ವಿಭೋ ಕಾಕೋದರಾಕಲ್ಪಕಾ ।
ಹಂ ವಿಶ್ವಾಧಿಕ ಶಂಬರಾಂಕ ಸುಮಹತ್ಸಚ್ಛೇಖರಾಂಕಪ್ರಭೋ ॥
ಗಿರಿರಾಜ ಶಿರೋಧರೈಕವಾಸ
ವರದಿಗ್ವಾಸ ಸುಕೃತ್ತಿವಾಸ ಪಾಹಿ ॥೭೫॥

॥ ಸೂತ ಉವಾಚ ॥

ಇತ್ಥಂ ಸಾಸ್ತುವದೀಶ್ವರೇಶ್ವರಮುಮಾ ಕೇದಾರಮೇವಾದರಾತ್
ಆರಾದ್ವಾರಿತಪಾತಕಾ ಗಿರಿವರೇ ಧೀರೈಕವೀರಸ್ಥಿತಾ ।

---

ದಲ್ಲಿಯೂ ತಪ್ಪದೆ ಸೇವಿಸುವೆನು. ಶಂಭುವೇ, ನೀನು ದಯಾಸಮುದ್ರನೆನಿಸಿರುವೆ. ನಿನ್ನನ್ನೇ ಶರಣುಹೊಂದಿ ಸದಾ ನಿನಗೇ ವಂದಿಸುತ್ತಿರುವ ದಾಸಿಯಾದ ನನ್ನನ್ನು ಸರ್ವದಾ ಕಾಪಾಡು. ॥೭೩॥

ಐರಾವತದ ಕುಂಭಸ್ಥಳದಲ್ಲಿಟ್ಟ ಪಾದಪದ್ಮವುಳ್ಳವನೂ, ರಕ್ತಮಯವಾದ ಆನೆಯ ಚರ್ಮವನ್ನೇ ವಸ್ತ್ರವನ್ನಾಗಿ ಧರಿಸಿರುವವನೂ, ಗಜಮುಖನಿಂದಲೂ ದೇವತೆಗಳಿಂದಲೂ, ಅಗಸ್ತ್ಯನೇ ಮೊದಲಾದ ಮಹರ್ಷಿಗಳಿಂದಲೂ ಪೂಜ್ಯನಾದವನೂ, ನಮಸ್ಕರಿಸಲ್ಪಟ್ಟ ಗಜಾಸುರನುಳ್ಳವನೂ ಆದ ಕುಂಭೀಶ್ವರನಿಗೆ ಸದಾ ವಂದನೆಗಳು. ॥೭೪॥

ಕೇದಾರೇಶ್ವರನೇ, ಮಹೇಶ್ವರನೇ, ಆದಿಶೇಷನನ್ನೇ ಹಾರವನ್ನಾಗಿ ಉಳ್ಳವನೇ, ವಿಶ್ವಾಧಿಕನೇ, ಚಂದ್ರಶೇಖರನೇ ನನ್ನನ್ನು ಕಾಪಾಡು. ಮಹಾದೇವನೇ ನೀನು ಗಿರಿರಾಜನಾದ ಹಿಮವಂತನ ಶಿಖರಪ್ರದೇಶದಲ್ಲಿ ವಾಸಿಸುವವನು. ದಿಗಂಬರನು, ಚರ್ಮಾಂಬರನು. ಇಂತಹ ಮಹಾಮಹಿಮನಾದ ನೀನು ನನ್ನನ್ನು ರಕ್ಷಿಸು. ॥೭೫॥

ಈರೀತಿ ಪಾರ್ವತಿಯು ಪರಶಿವನನ್ನು ಸ್ತುತಿಸುತ್ತಾ ಕೇದಾರನಾಥೇಶ್ವರ

ಮಾರಾದ್ದದೃಶುಃ ಸುರಾಸುರಗಣಾ ದೇವೀಂ ಪ್ರಣಮ್ಯಾಮುರಾ
ಧಾತಾರಂ ಪ್ರಯಯುಯುಶ್ಚ ತಾರಕಮಹಾಶೂರೇಣ ಸಂಪೀಡಿತಾಃ॥೬೬॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಪಾರ್ವತೀತಪಶ್ಚರಣವರ್ಣನಂ ನಾಮ ದಶಮೋಽಧ್ಯಾಯಃ

---

ಸನ್ನಿಧಿಯಲ್ಲಿ ನಿಂತು ಪಾಪಮುಕ್ತಳಾಗಿ ಧೀರಳಂತೆ ಕಾಣುತ್ತಿದ್ದಳು. ಹೀಗೆ ಪರಶಿವ ಧ್ಯಾನ ತತ್ಪರಳಾದ ದೇವಿಯನ್ನು ಸಕಲ ದೇವರಾಕ್ಷಸರ ಗುಂಪು ನೋಡಿ ಅಚ್ಚರಿಗೊಳ್ಳುತ್ತಿದ್ದಿತು. ಅಷ್ಟರಲ್ಲಿ ತಾರಕಾಸುರನಿಂದ ಪೀಡಿತರಾದ ದೇವತೆಗಳು ತಮ್ಮ ಕಷ್ಟಗಳನ್ನು ಬ್ರಹ್ಮನಲ್ಲಿ ಹೇಳಿಕೊಳ್ಳುವ ಉದ್ದೇಶದಿಂದ ಬ್ರಹ್ಮನ ಸಮೀಪಕ್ಕೆ ಹೋದರು. ॥೬೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಏಕಾದಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಏಕಸ್ಮಿನ್ನೇವ ಕಾಲೇತು ತಾರಕೋ ನಾಮ ದಾನವಃ ।
ತಾರಕಾತ್ಮಾ ಮಹಾತೇಜಾ ಬಭೂವ ದಿತಿನಂದನಃ ॥೧॥

ತಸ್ಯ ಪುತ್ರಾಸ್ತ್ರಯಶ್ಚೈವ ತಾರಕಾಕ್ಷೋ ಮಹಾಬಲಃ ।
ವಿದ್ಯುನ್ಮಾಲೀ ಚ ಬಲವಾನ್ ಕಮಲಾಕ್ಷಶ್ಚ ವೀರ್ಯವಾನ್ ॥೨॥

ತಸ್ಯಾಭವತ್ಸುತೋ ವೀರೋ ತಾರೋ ನಾಮ ಮಹಾಬಲಃ ।
ತಪಸಾ ಲಬ್ಧವೀರ್ಯಶ್ಚ ಪ್ರಸಾದಾದ್ಬ್ರಹ್ಮಣಃ ಪ್ರಭೋಃ ॥೩॥

ಸೋಽಪಿ ತಾರೋ ಮಹಾತೇಜಾಸ್ತ್ರೈಲೋಕ್ಯಂ ಸ ಚರಾಚರಂ ।
ವಿಚಿಂತ್ಯ ಸಮರೇ ಪೂರ್ವಂ ವಿಷ್ಣುನಾ ಚ ನಿಷೂದಿತಃ ॥೪॥

---

## ಹನ್ನೊಂದನೆಯ ಅಧ್ಯಾಯ

ಅದೇ ಸಮಯದಲ್ಲಿ ದಿತೀದೇವಿಯ ಮಗನಾದ ತಾರಕಾಸುರನೆಂಬ ಮಹಾ ಶೂರನೊಬ್ಬನು ಪ್ರಬಲನಾಗಿದ್ದನು. ಆತನಿಗೆ ತಾರಾಕ್ಷ, ವಿದ್ಯುನ್ಮಾಲೀ, ಕಮಲಾಕ್ಷ ರೆಂಬ ಮೂವರು ಮಕ್ಕಳಿದ್ದರು. ಅವರೆಲ್ಲರೂ ಮಹಾಶೂರರೂ ತೇಜಸ್ವಿಗಳೂ ಆಗಿದ್ದರು. ॥೧-೨॥

ಅವರಲ್ಲಿ ತಾರಕನೆಂಬುವನು ಮಹಾಬಲಿಷ್ಠನಾಗಿ, ಘೋರವಾದ ತಪಸ್ಸನ್ನಾ ಚರಿಸಿ, ಬ್ರಹ್ಮನಿಂದ ವಿಶೇಷ ಶೌರ್ಯಾದಿಗಳನ್ನು ಪಡೆದನು. ಬ್ರಹ್ಮವರಬಲದಿಂದ ಆ

ತಥಾ ಸಮಭವದ್ಯುದ್ಧಂ ತುಮುಲಂ ರೋಮಹರ್ಷಣಂ ।
ದಿವ್ಯಂ ವರ್ಷಸಹಸ್ರಂ ತು ದಿವಾರಾತ್ರಮವಿಶ್ರಮಂ ॥೫॥

ಸರಥಂ ವಿಷ್ಣುಮಾದಾಯ ಸಸರ್ಜ ಶತಯೋಜನಂ ।
ತಾರೇಣ ನಿರ್ಜಿತಶ್ಚೈವ ದುದ್ರಾವ ಗರುಡಧ್ವಜಃ ॥೬॥

ತಾರಾಚ್ಛತಗುಣಂ ತಪ್ತ್ವಾ ಲಬ್ಧ್ವಾ ಶತಗುಣಂ ಬಲಂ ।
ಪಿತಾಮಹಾಜ್ಜಗತ್ಸರ್ವಂ ಅವಾಪ ದಿತಿನಂದನಃ ॥೭॥

ದೇವೇಶಪ್ರಮುಖಾನ್ ಜಿತ್ವಾ ದೇವಾನ್ ದೈತ್ಯವರೇಶ್ವರಃ ।
ವಾರಯಾಮಾಸ ವೈ ದೇವಾಂತ್ಸರ್ವಲೋಕೇಷು ಮಾಯಯಾ ॥೮॥

ದೇವತಾಶ್ಚ ಸಹೇಂದ್ರೇಣ ತಾರಕಾದ್ಭಯವೇದಿನಃ ।
ನ ಶಾಂತಿಂ ಲೇಭಿರೇ ಶೂರಾಃ ಶರಣಂ ವಾ ಭಯಾರ್ದಿತಾಃ ॥೯॥

---

ತಾರಕನು ಮೂರು ಲೋಕಗಳಲ್ಲಿಯೂ ಸಂಚರಿಸಿ ಎಲ್ಲವನ್ನೂ ತನ್ನ ವಶವನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿದನು. ಅದಕ್ಕಾಗಿ ಮೊದಲು ವಿಷ್ಣುವಿನ ಮೇಲೆ ಯುದ್ಧಕ್ಕೆ ತೆರಳಿದನು. ॥೩-೪॥

ಇವರಿಬ್ಬರಿಗೂ ದೇವತೆಗಳ ಸಹಸ್ರವರ್ಷ ಪರ್ಯಂತವಾಗಿ ಹಗಲು ರಾತ್ರಿ ಬಿಡದೆ ಅವಿಚ್ಛಿನ್ನವಾಗಿ ಘೋರಯುದ್ಧ ನಡೆಯಿತು. ಕೊನೆಯಲ್ಲಿ ಬ್ರಹ್ಮವರ ಮತ್ತನಾದ ತಾರನು ವಿಷ್ಣುವನ್ನು ರಥಸಮೇತವಾಗಿ ನೂರು ಯೋಜನ ದೂರ ಹಿಂದಕ್ಕೆ ಅಟ್ಟಿಬಿಟ್ಟನು. ಆದರಿಂದ ಹೆದರಿ ಗರುಡಧ್ವಜನಾದ ವಿಷ್ಣುವು ಓಡಿಹೋದನು. ॥೫-೬॥

ಈ ತಾರಾಕ್ಷನಿಗಿಂತಲೂ ನೂರರಷ್ಟು ಉಗ್ರವಾಗಿ ತಪಸ್ಸುಮಾಡಿ ದಿತೀಪುತ್ರನಾದ ತಾರಕನು ಬ್ರಹ್ಮನನ್ನು ಮೆಚ್ಚಿಸಿ ಶತಾಧಿಕವಾದ ಬಲವೀರ್ಯಾದಿಗಳನ್ನು ಪಡೆದನು. ಅವನೂ ಸಹ ದೇವಲೋಕಕ್ಕೆ ಹೋಗಿ ಸಕಲ ದೈತ್ಯರನ್ನೂ ಸೋಲಿಸಿ ತನ್ನ ಮಾಯಾಬಲದಿಂದ ದೇವತೆಗಳೆಲ್ಲರೂ ನಿಂತಲ್ಲಿಯೇ ನಿಲ್ಲುವಂತೆ ಮಾಡಿದನು. ॥೭-೮॥

ಆಗ ದೇವೇಂದ್ರನಿಗೂ ಇತರ ದೇವತೆಗಳಿಗೂ ತಾರಕಾಸುರನಿಂದ ವಿಶೇಷ ಭಯವುಂಟಾಯಿತು. ಅದನ್ನು ತಪ್ಪಿಸುವವರಾರು ಎಂದು ಯೋಚಿಸತೊಡಗಿದರು. ಅವರಿಗೆ ಯಾವ ರೀತಿಯಲ್ಲಿಯೂ ಧೈರ್ಯತೋರಲಿಲ್ಲ. ಆಗ ದೇವೇಂದ್ರನು ಇತರ

ತಥಾಮರಪತಿಶ್ಶ್ರೀಮಾನ್ ಸನ್ನಿವಾರ್ಯಾಮರಾನ್ ಪ್ರಭುಃ ।
ಉವಾಚಾಂಗಿರಸಂ ದೇವೋ ದೇವಾನಾಮಪಿ ಸನ್ನಿಧೌ ॥೧೦॥

ಭಗವಂಸ್ತಾರಕೋ ನಾಮ ತಾರೇಯೋ ದಾನವಾಂಬುದಃ ।
ತೇನಾಸ್ಮಿ ನಿರ್ಜಿತಾಸ್ಸರ್ವೇ ವತ್ಸಾ ಗೋಪತಿನಾ ಯಥಾ ॥೧೧॥

ಭಯಾತ್ತಸ್ಮಾನ್ಮಹಾಭಾಗ ಬೃಹದ್ಯುದ್ಧೇ ಬೃಹಸ್ಪತೇ ।
ಅನಿರುದ್ಧಾ ಭ್ರಮಂತ್ಯೇತೇ ಶಕುಂತಾ ಇವ ಪಂಜರೇ ॥೧೨॥

ಅಸ್ಮಾಕಂ ಯಾನ್ಯಮೋಘಾನಿ ಆಯುಧಾನ್ಯಂಗಿರಾಂ ವರ ।
ತಾನಿ ಮೋಘಾನಿ ಜಾಯಂತೇ ಪ್ರಭಯಾ ಅಸುರಾರಿಣಃ ॥೧೩॥

ದಶವರ್ಷಸಹಸ್ರಾಣಿ ದ್ವಿಗುಣಾನಿ ಬೃಹಸ್ಪತೇ ।
ವಿಷ್ಣುನಾ ಯೋಧಿತೋ ಯುದ್ಧೇ ವಿಷ್ಣುನಾ ಪ್ರಭವಿಷ್ಣುನಾ ॥೧೪॥

ಕಥಮಸ್ಮದ್ವಿಧಾತಸ್ಯ ಸ್ಥಾಸ್ಯಂತೇ ಸಮರೇಗ್ರತಃ ।
ಏವಮುಕ್ತಸ್ತು ಶಕ್ರೇಣ ಜೀವಸ್ಸಾರ್ಧಂ ಸುರಾಧಿಕೈಃ ॥೧೫॥

---

ದೇವತೆಗಳೊಡಗೂಡಿ ಆಚಾರ್ಯನಾದ ಬೃಹಸ್ಪತಿಯೊಡನೆ ಈ ರೀತಿ ಯೋಚಿಸ ತೊಡಗಿದನು. ॥೯-೧೦॥

"ಪೂಜ್ಯಗುರುವೇ, ತಾರಕ ಮತ್ತು ಅವನ ಪುತ್ರನಾದ ತಾರಾಕ್ಷ ಈ ಇಬ್ಬರು ರಾಕ್ಷಸರು ಮಹಾಬಲಿಷ್ಠರಾಗಿ ನಮ್ಮೆಲ್ಲರನ್ನೂ, ಗೂಳಿಯು ಕರುಗಳನ್ನು ಹೆದರಿಸಿ ಓಡಿಸುವಂತೆ ದಿಕ್ಕಾಪಾಲಾಗಿ ಚದುರಿಸುತ್ತಿರುವರು. ನಮ್ಮೊಡನೆ ಘೋರಯುದ್ಧವನ್ನೆಸಗುವರು. ಯುದ್ಧದಲ್ಲಿ ಇವರಿಗೆ ಜಯದೊರೆಯುತ್ತಿದೆ. ಪಂಚರದಲ್ಲಿ ಹಕ್ಕಿಗಳು ಓಡಾಡುವಂತೆ ಈ ರಾಕ್ಷಸರು ತಡೆಯಿಲ್ಲದವರಾಗಿ ಸುತ್ತಲೂ ಸುತ್ತುತ್ತಿರುವರು. ॥೧೧-೧೨॥

ನಮ್ಮ ಬಲಿಷ್ಠಗಳಾದ ಅಸ್ತ್ರಶಸ್ತ್ರಗಳೆಲ್ಲಾ ಈಗ ಅವರ ತೇಜಸ್ಸಿನಿಂದ ವ್ಯರ್ಥಗಳಾಗಿವೆ. ಇಪ್ಪತ್ತು ಸಹಸ್ರ ವರ್ಷಪರ್ಯಂತ ಅವರು ವಿಷ್ಣುವಿನೊಡನೆ ಹೋರಾಡಿದರು. ಅತಿ ಪರಾಕ್ರಮಿಯಾದ ವಿಷ್ಣುವೂ ಸಹ ಅವರ ಮುಂದೆ ನಿಲ್ಲಲಾರದೆ ಹೋದನು. ॥೧೩-೧೪॥

ಹೀಗಿರುವಾಗ ನಾವು ಅವರ ಮುಂದೆ ನಿಲ್ಲುವುದಾದರೂ ಹೇಗೆ?" ಎಂದು

ಸಹಸ್ರಾಕ್ಷೇಣ ಚ ವಿಭುಂ ಸಂಪ್ರಾಪ್ಯಾಹ ಕುಶಧ್ವಜಂ ।
ಸೋಽಪಿ ತಸ್ಯ ಮುಖಾಚ್ಛ್ರುತ್ವಾ ಪ್ರಣತಿಂ ಪ್ರಣತಾರ್ತಿಹಾ ॥೧೬॥

ದೇವೈರಶೇಷೈಃ ಸೇಂದ್ರೈಸ್ತು ಜೀವಮಾಹ ಪಿತಾಮಹಃ ।
ಜಾನೇ ಚಾರ್ತಿಂ ಸುರೇಂದ್ರಾಣಾಂ ತಥಾಪಿ ಶೃಣು ಸಾಂಪ್ರತಂ ॥೧೭॥

ವಿನಿಂದ್ಯ ದಕ್ಷಂ ಯಾ ದೇವೀ ಸತೀ ರುದ್ರಾಂಗಸಂಭವಾ ।
ಉಮಾ ಹೈಮವತೀ ಜಜ್ಞೇ ಸರ್ವಲೋಕನಮಸ್ಕೃತಾ ॥೧೮॥

ತಸ್ಯಾಶ್ಚೈವೇಹ ರೂಪೇಣ ಯೂಯಂ ದೇವಾ ಸುರೋತ್ತಮಾಃ ।
ವಿಭೋರ್ಯವೀರ್ಯತತ್ತ್ವಂ ರುದ್ರಸ್ಯ ತಸ್ಯಾ ದೇವ್ಯಾ ಮಹಾತ್ಮನಃ ॥೧೯॥

ತಯೋರ್ವೀರ್ಯೇಣ ಸಂಭೂತಃ ಸ್ಕಂಧಶ್ಶಕ್ತಿಧರಃ ಪ್ರಭುಃ ।
ಷಡಾಸ್ಯೋ ದ್ವಾದಶಭುಜಃ ಸೇನಾನೀಃ ಪಾವಕಪ್ರಭಃ ॥೨೦॥

---

ಇಂದ್ರನು ವ್ಯಥೆಪಟ್ಟುದನ್ನು ಕೇಳಿ ಬೃಹಸ್ಪತಿಯು ಎಲ್ಲ ದೇವತೆಗಳನ್ನೂ ಕರೆದುಕೊಂಡು ಬ್ರಹ್ಮನ ಸಮೀಪಕ್ಕೆ ಹೋದನು. ಬ್ರಹ್ಮನಾದರೋ ಬೃಹಸ್ಪತ್ಯಾಚಾರ್ಯರ ಮೂಲಕ ಎಲ್ಲವನ್ನೂ ತಿಳಿದು, ಸಕಲ ದೇವತೆಗಳನ್ನೂ ಇಂದ್ರನನ್ನೂ ನೋಡುತ್ತಾ ಬೃಹಸ್ಪತಿಯೊಡನೆ ಹೀಗೆ ನುಡಿದನು. ॥೧೫-೧೬॥

"ಬೃಹಸ್ಪತಿಯೇ, ಈ ದೇವತೆಗಳ ಕಷ್ಟವನ್ನು ನಾನು ಬಲ್ಲೆನು. ಅವರ ಕಷ್ಟವು ಈರೀತಿ ಪರಿಹಾರವಾಗಬೇಕು. ಹಿಂದೆ ದಕ್ಷಬ್ರಹ್ಮನ ಯಾಗಮಂಟಪದಲ್ಲಿ ದಕ್ಷನನ್ನು ನಿಂದಿಸಿ ಸತೀದೇವಿಯು ದೇಹತ್ಯಾಗಮಾಡಿದಳಷ್ಟೆ. ಈಗ ಅದೇ ದೇವಿಯು ಹಿಮವಂತನ ಮಗಳಾಗಿ ಜನಿಸಿ, ಉಮಾ, ಹೈಮವತೀ ಎಂಬ ಹೆಸರಿನಿಂದ ಲೋಕಪೂಜ್ಯಳಾಗಿರುವಳು. ॥೧೭-೧೮॥

ಅದೇ ಪಾರ್ವತೀದೇವಿಯ ಉದರದಿಂದ ರುದ್ರಾಂಶದಲ್ಲಿ ರುದ್ರರೂಪಿಯಾಗಿಯೇ ಸ್ಕಂದನೆಂಬುವನು ಜನಿಸುವನು. ಶಿವವೀರ್ಯೋತ್ಪನ್ನನೂ, ಶಕ್ತ್ಯಾಯುಧಧಾರಿಯೂ ಆದ ಅವನಿಗೆ ಆರುಮುಖಗಳೂ, ಹನ್ನೆರಡು ಭುಜಗಳೂ ಇರುವುವು. ಅವನೇ ವೀರಸೇನಾಪತಿಯೆನಿಸುವನು. ಅಗ್ನಿಯಂತೆ ಅವನ ರೂಪು ಯಾವಾಗಲೂ ಜ್ವಲಿಸುತ್ತಿರುವುದು. ॥೧೯-೨೦॥

ಸ್ವಾಹೇಯಃ ಕಾರ್ತಿಕೇಯಶ್ಚ ಗಾಂಗೇಯಃ ಶರಧಾನಜಃ ।
ಜ್ಞೇಯಶ್ಶಾಖೋ ವಿಶಾಖಶ್ಚ ನೈಜಮೇಷ ಸುವೀರ್ಯವಾನ್ ॥೨೧॥

ಸೇನಾಪತಿಃ ಕುಮಾರಾಖ್ಯಃ ಸರ್ವಲೋಕನಮಸ್ಕೃತಃ ।
ಲೀಲಯೈವ ಮಹಾದೇವ ಸಬಲಂ ತಾರಕಾಸುರಂ ॥೨೨॥

ಬಾಲೋಪಿ ವಿನಿಹತ್ಯೈಕೋ ದೇವಾಂತ್ಸಂತಾರಯಿಷ್ಯತಿ ।
ಏವಮುಕ್ತಸ್ತದಾ ತೇನ ಬ್ರಹ್ಮಣಾ ಪದ್ಮಯೋನಿನಾ ॥೨೩॥

ಬೃಹಸ್ಪತಿಸ್ತದಾ ದೇವಂ ದೇವೈಸ್ಸೇಂದ್ರೈಃ ಪ್ರಣಮ್ಯ ಚ ।
ಮೇರೋಶ್ಶಿಖರಮಾಸಾದ್ಯ ಸ್ಮರಂತ್ಸಂಸಾರಸುವ್ರತಃ ॥೨೪॥

ಸ್ಮರಣಾದೇವ ಜೀವಸ್ಯ ಸ್ಮರೋಪಿ ಸಹ ಭಾರ್ಯಯಾ ।
ರತ್ಯಾ ಸಮಂ ಸಮಾಗತ್ಯ ನಮಸ್ಕೃತ್ವಾ ಕೃತಾಂಜಲಿಃ ॥೨೫॥

ಸ ಶಕ್ರಮಾಹ ತಂ ಜೀವಂ ಗತಜೀವಂ ದ್ವಿಜೋತ್ತಮಾಃ ।
ಸ್ಮೃತೋಹಂ ಭವತಾ ಜೀವ ಹಂತವ್ಯೋ ನ ಬೃಹಸ್ಪತೇ ॥೨೬॥

---

ಸ್ವಾಹಾದೇವಿಗೂ, ಗಂಗಾದೇವಿಗೂ, ಕೃತ್ತಿಕಾನಕ್ಷತ್ರಗಳಿಗೂ ಅವನು ಮಗನೆನಿಸುವನು. ಶರವಣದಲ್ಲಿ ಅವನ ಜನನವಾಗುವುದು. ಅವನಿಗೆ ಶಾಖ, ವಿಶಾಖ ಎಂಬ ಹೆಸರುಗಳು ಪ್ರಸಿದ್ಧಿಗೆ ಬರುವುವು. ಅವನೇ ಮುಂದೆ ನಿಮ್ಮ ಸೈನ್ಯಕ್ಕೆ ಯಜಮಾನನೆನಿಸುವನು. ಸರ್ವಜನಪೂಜ್ಯನೆನಿಸಿ ಲೀಲಾಜಾಲದಿಂದ ಬಲಿಷ್ಠನಾಗಿರುವ ತಾರಕಾಸುರನನ್ನು ಅವನು ಕ್ಷಣಕಾಲದಲ್ಲಿ ಧ್ವಂಸಮಾಡಿಬಿಡುವನು ॥೨೧-೨೨॥

ಕುಮಾರಸ್ವಾಮಿಯು ಬಾಲಕನಾಗಿದ್ದಾಗಲೇ ತಾರಕನನ್ನು ಕೊಂದು ನಿಮ್ಮ ಬಂಧನವನ್ನು ತಪ್ಪಿಸುವನು " ಎಂದು ಪದ್ಮಗರ್ಭಜಾತನಾದ ಬ್ರಹ್ಮನು ಹೇಳಲು ಬೃಹಸ್ಪತಿಯು ಆ ಮಾತಿನಿಂದ ಧೈರ್ಯಗೊಂಡು ಇಂದ್ರಾದಿ ದೇವತೆಗಳೊಡನೆ ಮೇರು ಶಿಖರವನ್ನು ಸೇರಿ ಪರಶಿವಧ್ಯಾನದಿಂದ ವಾಸಿಸುತ್ತಿದ್ದನು. ॥೨೩-೨೪॥

ಕೆಲವುಕಾಲ ಕಳೆದ ಮೇಲೆ ಒಂದುಸಾರಿ ಬೃಹಸ್ಪತಿಯು ಮನ್ಮಥನನ್ನು ಮನಸಾ ಸ್ಮರಿಸಿಕೊಂಡನು. ಕೂಡಲೇ ಮನ್ಮಥನು ಪತ್ನಿಯಾದ ರತಿಯೊಡಗೂಡಿ

ದೇವೈಃ ಸೇಂದ್ರೈರಶೇಷೈಶ್ಚ ಸ್ಮೃತ ಏವ ನ ಚಾನ್ಯಥಾ ।
ಗತ್ವಾ ತದಾಶ್ರಮಂ ಶಂಭೋಸ್ತಯಾ ರತ್ಯಾ ಮಹಾಬಲಃ ॥೨೭॥

ವಸಂತೇನ ಸಹಾಯೇನ ದೇವಂ ಯೋದ್ಧುಮನಾಭವತ್ ।
ತತಃ ಸಂಪ್ರೇಕ್ಷ್ಯ ಮದನಂ ಸ ಚ ದೇವಸ್ತ್ರಿಯಂಬಕಃ ॥೨೮॥

ಸ ತು ನೇತ್ರತೃತೀಯೇನ ಸಾರ್ಧಂ ಮದನಮೈಕ್ಷತ ।
ತತೋಽಸ್ಯ ನೇತ್ರಜೋ ವಹ್ನಿರ್ಮದನಂ ಪಾರ್ಶ್ವತಃ ಸ್ಥಿತಂ ॥೨೯॥

ಅದಹತ್ತತ್ಕ್ಷಣಾದೇವ ವಿಲಪತ್ಕರುಣಂ ರತಿಃ ।
ರತ್ಯಾ ಪ್ರಲಾಪಮಾಕರ್ಣ್ಯ ದೇವದೇವೋ ವೃಷಧ್ವಜಃ ॥೩೦॥

ಘೃಣಯಾ ಪರಯಾ ಪ್ರಾಹ ಕಾಮಪತ್ನೀಂ ನಿರೀಕ್ಷ್ಯ ಚ ।
ಅಮೂರ್ತೋಽಪಿ ಧ್ರುವಂ ಭದ್ರೇ ಕಾರ್ಯಂ ಸರ್ವಂ ಪತಿಸ್ತವ ॥೩೧॥

---

ಬೃಹಸ್ಪತ್ಯಾಚಾರ್ಯನ ಸಮೀಪಕ್ಕೆ ಬಂದು ವಂದಿಸಿ ನನ್ನನ್ನು ಸ್ಮರಿಸಿಕೊಳ್ಳಲು ಕಾರಣವೇನೆಂದು ಭಯಭಕ್ತಿಯಿಂದ ಕೇಳಿಕೊಂಡನು. ॥೨೫-೨೬॥

ಆಗ ಬೃಹಸ್ಪತಿಯು ಮನ್ಮಥನನ್ನು ಸ್ಮರಿಸಿಕೊಳ್ಳಲು ಕಾರಣವನ್ನು ದೇವೇಂದ್ರಾದಿಗಳು ತಿಳಿಸಿದರು. ಗುರುವಿನ ಅಂತರಂಗವನ್ನೆಲ್ಲಾ ತಿಳಿದ ಮನ್ಮಥನು ತನ್ನ ಪತ್ನಿಯಾದ ರತೀದೇವಿಯೊಡನೆಯೂ, ವಸಂತಋತುವಿನೊಡನೆಯೂ ಹೊರಟು ಈಶ್ವರನೊಡನೆ ಯುದ್ಧಮಾಡಲು ತೊಡಗಿದನು. ಹಾಗೆ ತನ್ನೊಡನೆ ಪ್ರತಿಭಟಿಸಿ ನಿಂತ ಮದನನ ಮೇಲೆ ಕೋಪಿಸಿಕೊಂಡು ತನ್ನ ಅಗ್ನಿನೇತ್ರವನ್ನು ಅವನ ಮೇಲೆ ತೆರೆದನು ॥೨೭-೨೮॥

ಕ್ಷಣಕಾಲದಲ್ಲಿಯೇ ಈಶ್ವರನ ಫಾಲನೇತ್ರಾಗ್ನಿಯು ಮನ್ಮಥನನ್ನು ಸುಟ್ಟು ಧ್ವಂಸಮಾಡಿತು. ಅದನ್ನು ನೋಡಿ ಪಕ್ಕದಲ್ಲಿಯೇ ನಿಂತಿದ್ದ ರತೀದೇವಿಯು ವಿಶೇಷವಾಗಿ ಪ್ರಲಾಪಿಸುತ್ತಾ ಈಶ್ವರನನ್ನೇ ಮೊರೆಹೊಕ್ಕಳು. ಇದನ್ನು ಕಂಡು ಕರುಣಾಕರನೂ, ದೇವದೇವನೂ ಆದ ಪರಶಿವನು ರತೀದೇವಿಯ ಸಂಕಟವನ್ನರಿತನು. ॥೨೯-೩೦॥

ಮತ್ತು ದಯೆಯಿಂದ ಕೂಡಿ ಪರಶಿವನು ರತೀದೇವಿಯನ್ನು ಕುರಿತು "ಭದ್ರೆ, ರತೀದೇವಿಯೇ, ದುಃಖಪಡಬೇಡ. ರತಿಕಾಲದಲ್ಲಿ ಮನ್ಮಥನು ಅಮೂರ್ತವಾದ ಆಕಾರದಿಂದ ಅಂದರೆ ಕಣ್ಣಿಗೆ ಕಾಣದ ಅನಂಗನೆನಿಸಿ ನಿನಗೆ ಸಕಲ ವಿಧವಾದ

ರತಿಕಾಲೇ ಧ್ರುವಂ ಬಾಲೇ ಕರಿಷ್ಯತಿ ನ ಸಂಶಯಃ ।
ಯದಾ ವಿಷ್ಣುಶ್ಚ ಭವಿತಾ ವಸುದೇವಸುತಃ ಶುಭೇ ॥೩೨॥

ಶಾಪಾದ್ಭೃಗೋರ್ಮಹಾತೇಜಾಃ ಸರ್ವಲೋಕಹಿತಾಯ ವೈ ।
ಯದಾ ತಸ್ಯ ಸುತೋ ಯಃ ಸ್ಯಾತ್ಸ ಪತಿಸ್ತೇ ಭವಿಷ್ಯತಿ ॥೩೩॥

ಪ್ರಣಮ್ಯ ಚ ತದಾ ರುದ್ರಂ ಕಾಮಪತ್ನೀ ಶುಚಿಸ್ಮಿತಾ ।
ಜಗಾಮ ಮದನಂ ಲಬ್ಧ್ವಾ ವಸಂತೇನ ವರಾನನಾ ॥೩೪॥

॥ ಶ್ರೀಸ್ಕಂದ ಉವಾಚ ॥

ಸತೀ ಕಾಂತಚಿತ್ತಂ ಪ್ರಲೋಬ್ಧುಂ ವಸಂತೋ
ಮುದಾ ತತ್ರ ಚಕ್ರೇ ವನಂ ತಂ ಸುರಾಂತಂ ।
ಗಿರೌ ಮಂದರೇ ಮಂದಿರಾಭೇ ಶಿವಸ್ಯ
ತದಾ ಮಂದಿರಾಂ ಪ್ರಾಪ ಸಾಯಂತನೇಷು ॥೩೫॥

---

ಸಂತೋಷವನ್ನೂ ಉಂಟುಮಾಡುವನು. ಈ ವಿಷಯದಲ್ಲಿ ನೀನು ದುಃಖಿಸಬೇಡ. ಮುಂದೆ ವಿಷ್ಣುವು ವಸುದೇವಪುತ್ರನಾಗಿ ಭೂಲೋಕದಲ್ಲಿ ಅವತರಿಸುವನು. ॥೩೧-೩೨॥

ಭೃಗುಮಹರ್ಷಿಯ ಶಾಪದಿಂದಲೂ, ಸರ್ವಲೋಕದಲ್ಲಿ ದುಷ್ಟರನ್ನು ನಾಶಗೊಳಿಸುವ ಉದ್ದೇಶದಿಂದಲೂ ವಿಷ್ಣುವಿಗೆ ಕೃಷ್ಣಜನ್ಮ ಬರುವುದು. ಆದೇ ಕೃಷ್ಣನ ಮಗನಾಗಿ ನಿನ್ನ ಪತಿಯು ಮತ್ತೆ ಜನಿಸುವನು. ಆಗ ಅತನು ನಿನಗೆ ಪ್ರತ್ಯಕ್ಷ ಪತಿಯಾಗಿ ನಿಲ್ಲುವನು. ದುಃಖಿಸಬೇಡ ಹೋಗು" ಎಂದು ಅಭಯಕೊಡಲು, ಆಗ ರತೀದೇವಿಯು ಅನಂಗನಾದ ಮನ್ಮಥನನ್ನೂ, ಸ್ನೇಹಿತನಾದ ವಸಂತನನ್ನೂ ಜೊತೆಮಾಡಿಕೊಂಡು ಹಿಂದಿರುಗಿದಳು. ॥೩೩-೩೪॥

ಕಾಮನ ಪ್ರಿಯಸ್ನೇಹಿತನಾದ ವಸಂತನು ಸತೀದೇವಿಯ ಪತಿಯಾದ ಪರಶಿವನ ಚಿತ್ತವನ್ನು ಕ್ಷೋಭೆಗೊಳಿಸಿ ಪಾರ್ವತಿಯ ವಿವಾಹಕ್ಕೆ ಒಪ್ಪುವಂತೆ ಮಾಡಲು ಪರಶಿವನು ತಪಸ್ಸುಮಾಡುತ್ತಿದ್ದ ಮಂದರಗಿರಿಯ ತಪೋವನಕ್ಕೆ ಹೋದನು. ಅಲ್ಲಿ ಆ ವನವನ್ನೆಲ್ಲಾ ಸೌಂದರ್ಯಗೊಳಿಸಿ, ಸಾಯಂಕಾಲವಾಗುತ್ತಲೇ ಶಿವನಿರುವ ಸ್ಥಳವನ್ನು ಪ್ರವೇಶಿಸಿದನು. ॥೩೫॥

ಪ್ರಭಾಕರ ಕರಸ್ಫುರತ್ಕಮಲಕೋಶ ಲೀನಾಲಯಃ
ಪರಾಗರಸರಂಜಿತಾಃ ಪರಿಪತಂತಿ ಪುಷ್ಪದ್ರುಮಾನ್ ।
ಪಲಾಶ ಕುಸುಮಾವಲೀಮಿವ ಶುಕಾಸ್ಯಭಾಗೇ ತದಾ
ಶುಕಾ ಅಪಿ ಮುಖಾಗತಾನ್ ವಿಕಲಯಂತಿ ಜಂಬೂಮಿವ ॥೩೬॥

ಅತಾಮ್ರಪಲ್ಲವಗಳನ್ಮಧುಸೌರಭೋದ್ಯನ್
ಸತ್ಕೋರಕೈಃ ಕುಸುಮ ಭರಾವೃತ ಸಚ್ಛಲಾಟುಃ ।
ತದ್ಗಂಧ ಮೇದುರ ವನಾಂತ ದಿನಾಂತ ವಿಕಾಸಿ ಮಲ್ಲೀ
ಪ್ರಫುಲ್ಲ ಹಲ್ಲಕ ಗತೈರ್ವನಶೀತವಾತೈಃ ॥೩೭॥

---

ಆ ವಸಂತನ ಮಹಿಮೆಯಿಂದ ಬೆಳಗಾಗುತ್ತಲೇ ತಾವರೇ ಹೂವುಗಳೆಲ್ಲಾ ಸೂರ್ಯಕಿರಣಗಳಿಂದ ಅರಳಿಬಿಡುತ್ತಿದ್ದುವು. ರಾತ್ರಿ ವೇಳೆ ಭ್ರಮರಗಳು ಕಮಲಗಳ ಒಳಭಾಗದಲ್ಲಿ ಅಡಗಿದ್ದು, ಅವು ಅರಳಿದ ಕ್ಷಣವೇ ಕಮಲಪರಾಗ ಮತ್ತು ಪುಷ್ಪರಸ ಇವುಗಳನ್ನು ಕುಡಿದು ಕೊಬ್ಬಿ ಮೇಲೆ ಹಾರಾಡುತ್ತಾ ಹೂವಿನ ಮರಗಳ ಮೇಲೆ ಹಾರಾಡುವುವು. ಆ ಮರಗಳಲ್ಲಿ ಕೆಂಪಾದ ಕೊಕ್ಕಿನಿಂದ ಕೂಡಿ ಕುಳಿತಿರುವ ಗಿಳಿಗಳನ್ನು ಕಂಡು ಅವು ಮುತ್ತುಗದ ಹೂವುಗಳೆಂಬ ಭ್ರಾಂತಿಯಿಂದ ಆ ಗಿಳಿಗಳ ಕೊಕ್ಕಿನ ಮೇಲೆ ಕುಳಿತುಕೊಳ್ಳಲು ಹೋಗುವುವು. ಹಾಗೆ ಕಪ್ಪುಬಣ್ಣದಿಂದ ದಪ್ಪದಪ್ಪವಾಗಿ ಬಂದ ಭ್ರಮರಗಳನ್ನು ನೋಡಿ ಆ ಗಿಳಿಗಳು ನೇರಳೇ ಹಣ್ಣುಗಳೆಂಬ ಭ್ರಮೆಯಿಂದ ಅವುಗಳನ್ನು ತಿನ್ನಲು ಪ್ರಯತ್ನಿಸುವುವು. ಹೀಗೆ ಪುಷ್ಪಗಳು, ಭ್ರಮರಗಳು, ಗಿಳಿಗಳು, ಮರಗಳು ಇವೆಲ್ಲವೂ ಮದಮತ್ತಗಳಾಗಿ ತಮ್ಮ ನೈಸರ್ಗಿಕ ಸೌಂದರ್ಯವನ್ನು ಸರ್ವತ್ರ ಬೀರತೊಡಗಿದವು. ॥೩೬॥

ಕೆಂಪು ಚಿಗುರುಗಳಿಂದಲೂ, ಸುವಾಸನೆ ಬೀರುವ ಮೊಗ್ಗುಗಳಿಂದಲೂ ಕುಸುಮಮಾಲೆಗಳಿಂದಲೂ ವಿರಾಜಿಸುವ ಶಲಾಟು (        ) ವೃಕ್ಷದ ಸುವಾಸನೆಯು ವನಪ್ರದೇಶದಲ್ಲೆಲ್ಲಾ ವ್ಯಾಪಿಸಿದ್ದಿತು. ಹಾಗೆಯೇ ಸಾಯಂಕಾಲದ ವೇಳೆ ಅರಳಿ ಗಮಗಮಿಸುವ ಮಲ್ಲಿಗೆ, ಕಲ್ಹಾರ ಮುಂತಾದ ಪುಷ್ಪಗಳಿಂದಲೂ ಅವುಗಳ ಮೇಲೆ ಬೀಸುವ ಶೀತಮಾರುತದಿಂದಲೂ ಆ ತಪೋವನವು ಹೃದಯಂಗಮವಾಗಿ ಕಾಣುತ್ತಿದ್ದಿತು. ॥೩೭॥

ಕುರಬಕನಿಕಸತ್ಪರಾಗಗಂಧೈಃ
ಪರಿಫುಲ್ಲಾರ್ಜುನ ಜಂಬುಕೇತಕಾವಲೀಭಿಃ ।
ಸುರಪುನ್ನಾಗಕರಂಜ ಮಂಜರೀಭಿ
ಸ್ತಗರಾರಬ್ಧ ಸುಪುಷ್ಪಗಂಧವಾತೈಃ ॥೩೮॥

ಕುರಂಡಕುಟಜಾವಲೀ ವಿಧೃತಪುಷ್ಪಸತ್ಕೋರಕೈಃ
ಶಮೀಕುಸುಮಪಾಟಲೀ ಪಟಲಗಂಧ ಬಂಧಾನಿಲೈಃ ।
ಸುಬಿಲ್ವಕುಸುಮೋತ್ಕರಪ್ರಭವಗಂಧಸನ್ಮೇದುರೇ
ವಿಭಾತಿ ಕಿಲ ಮಂದರಃ ಕುಸುಮಶಾಖಿಸಚ್ಛೇಖರಃ ॥೩೯॥

ಸುಮಂದರ ಸರೋವರ ಪ್ರಥಿತ ತೀರ ಮಂದಾರಜೈಃ
ಸಿತಾಸಿತ ಸುಮೋದ್ಗತೈರ್ವಿಮಲವಾತಗಂಧೋದ್ಯತೈಃ ।
ಸುಪರ್ವಸುಮಗುಚ್ಛಕೈರ್ವರಸುಕರ್ಣಿಕಾರೋದ್ಭವೈಃ
ಕನತ್ಕನಕಪುಷ್ಪವಚ್ಛಿಖರಮತ್ರ(?)ಮಾಭಾತಿ ವೈ ॥೪೦॥

---

ಕುರಬಕ ಪುಷ್ಪಗಳ ಪರಾಗಗಳು, ಅರಳಿದ ಅರ್ಜುನಪುಷ್ಪ, ನೇರಳೇಹೂವು, ತಾಳೆಹೂವು, ಸುರಗೀ, ಕದಂಬ, ತಗರಪುಷ್ಪ ಇವೇಮೊದಲಾದ ಪುಷ್ಪಗಳ ಗುಚ್ಛಗಳಿಂದಲೂ, ಗಮುಗಮಿಸುವ ವಾಸನೆಯನ್ನು ಹೊತ್ತು ತರುವ ಸುಗಂಧಮಾರುತದಿಂದಲೂ ಆ ಉದ್ಯಾನವನವು ಕಂಗೊಳಿಸುತ್ತಿದ್ದಿತು. ॥೩೮॥

ಕಾಡುಸೋಗೆ, ಗೋರಂಟೆ, ಈ ಮೊಗ್ಗುಗಳೂ ಬನ್ನೀ, ಪಾದರಿ, ಈ ಮರಗಳಿಂದ ತೋರಿಬರುವ ಕುಸುಮವಾಸನೆಯೂ, ಮಂದರಪರ್ವತವನ್ನು ಸುಗಂಧಮಯವನ್ನಾಗಿ ಮಾಡಿದ್ದಿತು. ಮತ್ತು ಬಿಲ್ವವೇ ಮೊದಲಾದ ಶಿವಪ್ರೀತಿಕರಗಳಾದ ವೃಕ್ಷಗಳು ಕುಸುಮಾದಿಗಳಿಂದ ಪಲ್ಲವಿಸುತ್ತಾ ತಮ್ಮ ಸುಗಂಧಮಾರುತದಿಂದ ಆ ಮಂದರಗಿರಿಯನ್ನೇ ಅಲಂಕರಿಸಿದ್ದುವು. ॥೩೯॥

ಅಲ್ಲಲ್ಲಿ ವಿಶಾಲವಾದ ಸರೋವರಗಳೂ, ಅವುಗಳ ತೀರದಲ್ಲಿ ಬಿಳುಪಾಗಿ, ಕಪ್ಪಾಗಿ, ಕೆಂಪಾಗಿ ಅರಳಿ ಆಲುಗಾಡುತ್ತಿರುವ ಪುಷ್ಪಗುಚ್ಛಗಳೂ, ಅವುಗಳಿಂದ ಹೊರಡುವ ಮಕರಂದವನ್ನು ಹೊತ್ತುತರುವ—ಮಂದಮಾರುತವೂ, ಸುಂದರವಾದ ಎಲೆ, ಹೂವು, ಇವುಗಳಿಂದ ರಮ್ಯವಾಗಿರುವ ಕಣಿಗಲು ಗಿಡಗಳೂ, ಚಿನ್ನದ

ಧರಣೀಭೃತ್ಪರಭೃದ್ವಿಶಾಲರಾಗೈ
ರ್ವನದಾತ್ಯೂಹರುತೈಸ್ತ್ವವನ್ನಿವೇಶಂ ।
ವನಖಂಡೇಷು ಶಿಖಂಡಿತಾಂಡವನೈ
ರ್ವರಕೇಕಾಸರಸೀಸ್ಥಸಾರಸಾನಾಂ ॥೪೧॥

ಉತ್ಫುಲ್ಲನೀಲಕುಮುದೋತ್ಪಲಪುಂಡರೀಕ
ಆರಕ್ತಹಲ್ಲಕಸುಪಂಕಜಗಂಧಭೃಂಗಂ ।
ತದ್ಗಂಧಸುಂದರರಜಃ ಪ್ರವಿಕೀರ್ಣಪಕ್ಷಾ
ಹಂಸಾಲಿಜಾಲನರವೈರ್ದಿವಮುತ್ಪತಂತಿ ॥೪೨॥

ಕ್ರೌಂಚಾಕ್ರಾಂತಬಕೋರುಪಕ್ಷಚಲನೈರ್ಲೀನಾಶ್ಚ ಮೀನಾಶ್ಚ ತೇ
ಸಾರಸ್ಯಾಃ ಸರಸೀರುಹೇಷು ಮಧುಪಾಃ ಶ್ರಾಮ್ಯಂತಿ ಭ್ರಾಮ್ಯಂತ್ಯಪಿ ।
ಏವಂ ಸಾ ವನರಾಜೀರಾಜತಿ ಪರಂ ದೃಷ್ಟ್ವಾ ಪ್ರಹೃಷ್ಟೋಽಹರಃ ॥೪೩॥

---

ಹೂವುಗಳಂತೆ ಅರಳಿರುವ ಸಂಪಿಗೆ ಹೂವುಗಳು ಇವುಗಳಿಂದ ಆ ಮಂದರಗಿರಿಶಿಖರವು ಸುಂದರವಾಗಿ ಕಾಣುತ್ತಿದ್ದಿತು. ॥೪೦॥

ಕೋಗಿಲೆಗಳ ಇಂಚರವೂ, ಕಾಲಕಂಟಕಪಕ್ಷಿಗಳ ಝೇಂಕಾರವೂ, ನವಿಲುಗಳ ಮನೋಹರವಾದ ನಾಟ್ಯವೂ, ಸಾರಸಪಕ್ಷಿಗಳ ಮತ್ತು ಕೋಗಿಲೆಗಳಿಂದ ಸುತ್ತುವರಿದ ಸರೋವರಗಳೂ ಆ ಮಂದರಗಿರಿಯನ್ನು ಅಂದಗೊಳಿಸಿದ್ದುವು. ॥೪೧॥

ಅರಳಿದ ನೀಲಕಮಲ, ರಕ್ತೋತ್ಪಲ, ಕಲ್ಹಾರ, ಮುಂತಾದ ಪುಷ್ಪಗಳ ಮಕರಂದಕ್ಕೆ ಮುತ್ತುವ ಭೃಂಗಗಳೂ, ಮತ್ತು ಮೇಲೆ ಹೇಳಿದ ಪುಷ್ಪಪರಾಗಗಳನ್ನು ತಮ್ಮ ಗರಿಗಳ ಗಾಳಿಯಿಂದ ಚದುರಿಸುವ ಹಂಸಪಕ್ಷಿಗಳೂ ಒಟ್ಟಾಗಿ ಮೇಲ್ಭಾಗಕ್ಕೆ ಹಾರುತ್ತಿದ್ದುವು. ॥೪೨॥

ಕ್ರೌಂಚಪಕ್ಷಿಗಳು, ಬಕಪಕ್ಷಿಗಳು ಇವುಗಳ ವಿಶಾಲವಾದ ರೆಕ್ಕೆಗಳ ಹೊಡೆತಕ್ಕೆ ಸಿಕ್ಕದೆ ಮೀನುಗಳು ಸರೋವರದ ಒಳಗೆ ಅಡಗಿಕೊಳ್ಳುತ್ತಿದ್ದುವು. ಪ್ರತಿಸರೋವರದಲ್ಲಿಯೂ ಕಮಲಗಳು ಅರಳಿ, ಅವುಗಳ ಮೇಲೆಲ್ಲಾ ದುಂಬಿಗಳು ಹಾರಾಡುತ್ತಿದ್ದುವು. ಹೀಗೆ ಆ ವನರಾಜಿಯು ಸುಂದರವಾಗಿ ಕಾಣುತ್ತಿರಲು ಶಂಕರನು ಅದೆಲ್ಲವನ್ನೂ ನೋಡಿ ಸ್ವಲ್ಪವಾಗಿ ಚಂಚಲಮನಸ್ಕನಾದನು. ॥೪೩॥

ಕುರಬಕವಿಕಸತ್ಪರಾಗಗಂಧೈಃ
ಪರಿಫುಲ್ಲಾರ್ಜುನ ಜಂಬುಕೇತಕಾವಲೀಭಿಃ ।
ಸುರಪುನ್ನಾಗಕರಂಜ ಮಂಜರೀಭಿ
ಸ್ತಗರಾರಬ್ಧ ಸುಪುಷ್ಪಗಂಧವಾತೈಃ ॥೩೮॥

ಕುರಂಡಕುಟಜಾವಲೀ ವಿಧೃತಪುಷ್ಪಸತ್ಕೋರಕೈಃ
ಶಮೀಕುಸುಮಪಾಟಲೀ ಪಟಲಗಂಧ ಬಂಧಾನಿಲೈಃ ।
ಸುಬಿಲ್ವಕುಸುಮೋತ್ಕರಪ್ರಭವಗಂಧಸನ್ಮೇದುರೇ
ವಿಭಾತಿ ಕಿಲ ಮಂದರಃ ಕುಸುಮಶಾಖಿಸಚ್ಛೇಖರಃ ॥೩೯॥

ಸುಮಂದರ ಸರೋವರ ಪ್ರಥಿತ ತೀರ ಮಂದಾರಜೈಃ
ಸಿತಾಸಿತ ಸುಮೋದ್ಗತೈರ್ವಿಮಲವಾತಗಂಧೋದ್ಧತೈಃ ।
ಸುಪರ್ವಸುಮಗುಚ್ಛಕೈರ್ವರಸುಕರ್ಣಿಕಾರೋಧ್ಭವೈಃ
ಕನತ್ಕನಕಪುಷ್ಪವಚ್ಛಿಖರಮತ್ರ(?)ಮಾಭಾತಿ ವೈ ॥೪೦॥

---

ಕುರಬಕ ಪುಷ್ಪಗಳ ಪರಾಗಗಳು, ಅರಳಿದ ಅರ್ಜುನಪುಷ್ಪ, ನೇರಳೇಹೂವು, ತಾಳೆಹೂವು, ಸುರಗೀ, ಕದಂಬ, ತಗರಪುಷ್ಪ ಇವೇಮೊದಲಾದ ಪುಷ್ಪಗಳ ಗುಚ್ಛಗಳಿಂದಲೂ, ಗಮಗಮಿಸುವ ವಾಸನೆಯನ್ನು ಹೊತ್ತು ತರುವ ಸುಗಂಧಮಾರುತದಿಂದಲೂ ಆ ಉದ್ಯಾನವನವು ಕಂಗೊಳಿಸುತ್ತಿದ್ದಿತು. ॥೩೮॥

ಕಾಡುಸೋಗೆ, ಗೋರಂಟಿ, ಈ ಮೊಗ್ಗುಗಳೂ ಬನ್ನೀ, ಪಾದರಿ, ಈ ಮರಗಳಿಂದ ತೋರಿಬರುವ ಕುಸುಮವಾಸನೆಯೂ, ಮಂದರಪರ್ವತವನ್ನು ಸುಗಂಧಮಯವನ್ನಾಗಿ ಮಾಡಿದ್ದಿತು. ಮತ್ತು ಬಿಲ್ವವೇ ಮೊದಲಾದ ಶಿವಪ್ರೀತಿಕರಗಳಾದ ವೃಕ್ಷಗಳು ಕುಸುಮಾದಿಗಳಿಂದ ಪಲ್ಲೈಸುತ್ತಾ ತಮ್ಮ ಸುಗಂಧಮಾರುತದಿಂದ ಆ ಮಂದರಗಿರಿಯನ್ನೇ ಅಲಂಕರಿಸಿದ್ದುವು. ॥೩೯॥

ಅಲ್ಲಲ್ಲಿ ವಿಶಾಲವಾದ ಸರೋವರಗಳೂ, ಅವುಗಳ ತೀರದಲ್ಲಿ ಬಿಳುಪಾಗಿ, ಕಪ್ಪಾಗಿ, ಕೆಂಪಾಗಿ ಅರಳಿ ಅಲುಗಾಡುತ್ತಿರುವ ಪುಷ್ಪಗುಚ್ಛಗಳೂ, ಅವುಗಳಿಂದ ಹೊರಡುವ ಮಕರಂದವನ್ನು ಹೊತ್ತುತರುವ—ಮಂದಮಾರುತವೂ, ಸುಂದರವಾದ ಎಲೆ, ಹೂವು, ಇವುಗಳಿಂದ ರಮ್ಯವಾಗಿರುವ ಕಣಿಗಲು ಗಿಡಗಳೂ, ಚಿನ್ನದ

ಧರಣೀಭೃತ್ಪರಭೃದ್ವಿಶಾಲರಾಗೈ
ರ್ವನದಾತ್ಮೋಹರುತೈಸ್ತ್ವವನ್ನಿವೇಶಂ ।
ವನಖಂಡೇಷು ಶಿಖಂಡಿತಾಂಡವೈ
ರ್ವರಕೇಕಾಸರಸೀಸ್ಥ ಸಾರಸಾನಾಂ ॥೪೧॥

ಉತ್ಫುಲ್ಲನೀಲಕುಮುದೋತ್ಪಲಪುಂಡರೀಕ
ಆರಕ್ತಹಲ್ಲಕಸುಪಂಕಜಗಂಧಭೃಂಗಂ ।
ತದ್ಗಂಧಸುಂದರರಜಃ ಪ್ರವಿಕೀರ್ಣಪಕ್ಷಾ
ಹಂಸಾಲಿಚಾಲನರವೈರ್ದಿವಮುತ್ಪತಂತಿ ॥೪೨॥

ಕ್ರೌಂಚಾಕ್ರಾಂತಬಕೋರುಪಕ್ಷಚಲನೈರ್ಲೀನಾಶ್ಚ ಮೀನಾಶ್ಚ ತೇ
ಸಾರಸ್ಯಾಃ ಸರಸೀರುಹೇಷು ಮಧುಪಾಃ ಶ್ರಾಮ್ಯಂತಿ ಭ್ರಾಮ್ಯಂತ್ಯಪಿ ।
ಏವಂ ಸಾ ವನರಾಜೀರಾಜತಿ ಪರಂ ದೃಷ್ಟ್ವಾ ಪ್ರಹೃಷ್ಟೋಽಹರಃ ॥೪೩॥

---

ಹೂವುಗಳಂತೆ ಅರಳಿರುವ ಸಂಪಿಗೆ ಹೂವುಗಳು ಇವುಗಳಿಂದ ಆ ಮಂದರಗಿರಿಶಿಖರವು ಸುಂದರವಾಗಿ ಕಾಣುತ್ತಿದ್ದಿತು. ॥೪೦॥

ಕೋಗಿಲೆಗಳ ಇಂಚರವೂ, ಕಾಲಕಂಟಕಪಕ್ಷಿಗಳ ಝೇಂಕಾರವೂ, ನವಿಲುಗಳ ಮನೋಹರವಾದ ನಾಟ್ಯವೂ, ಸಾರಸಪಕ್ಷಿಗಳ ಮತ್ತು ಕೋಗಿಲೆಗಳಿಂದ ಸುತ್ತುವರಿದ ಸರೋವರಗಳೂ ಆ ಮಂದರಗಿರಿಯನ್ನು ಅಂದಗೊಳಿಸಿದ್ದುವು. ॥೪೧॥

ಅರಳಿದ ನೀಲಕಮಲ, ರಕ್ತೋತ್ಪಲ, ಕಲ್ಹಾರ, ಮುಂತಾದ ಪುಷ್ಪಗಳ ಮಕರಂದಕ್ಕೆ ಮುತ್ತುವ ಭೃಂಗಗಳೂ, ಮತ್ತು ಮೇಲೆ ಹೇಳಿದ ಪುಷ್ಪಪರಾಗಗಳನ್ನು ತಮ್ಮ ಗರಿಗಳ ಗಾಳಿಯಿಂದ ಚದುರಿಸುವ ಹಂಸಪಕ್ಷಿಗಳೂ ಒಟ್ಟಾಗಿ ಮೇಲ್ಭಾಗಕ್ಕೆ ಹಾರುತ್ತಿದ್ದುವು. ॥೪೨॥

ಕ್ರೌಂಚಪಕ್ಷಿಗಳು, ಬಕಪಕ್ಷಿಗಳು ಇವುಗಳ ವಿಶಾಲವಾದ ರೆಕ್ಕೆಗಳ ಹೊಡೆತಕ್ಕೆ ಸಿಕ್ಕದೆ ಮೀನುಗಳು ಸರೋವರದ ಒಳಗೆ ಅಡಗಿಕೊಳ್ಳುತ್ತಿದ್ದುವು. ಪ್ರತಿಸರೋವರದಲ್ಲಿಯೂ ಕಮಲಗಳು ಅರಳಿ, ಅವುಗಳ ಮೇಲೆಲ್ಲಾ ದುಂಬಿಗಳು ಹಾರಾಡುತ್ತಿದ್ದುವು. ಹೀಗೆ ಆ ವನರಾಜಿಯು ಸುಂದರವಾಗಿ ಕಾಣುತ್ತಿರಲು ಶಂಕರನು ಅದೆಲ್ಲವನ್ನೂ ನೋಡಿ ಸ್ವಲ್ಪವಾಗಿ ಚಂಚಲಮನಸ್ಕನಾದನು. ॥೪೩॥

ರತಿಪತಿರತಿಲಾಘವೇನ ಶಂಭುಂ
ಹೃದಯೇಶಂ ಗಿರಿಶಂ ಬಿಭೇದ ಪುಷ್ಪೈಃ ।
ಸುರಸಾಧಾರಣತೋಽವಧೀರಣಾಂ
ಕೃತವಾನಸುಹೃತ್ಸುಕರ್ಮಣೀಸೌ ॥೪೪॥

ಕುಸುಮೇಷುಶರಾವಧೂತಧೈರ್ಯೋ
ಗಿರಿವರ್ಯೋ ಪ್ರವಿಚಾಲ್ಯ ದೃಷ್ಟಿಲೌಲ್ಯಂ ।
ಕುಸುಮಿತವರಶಾಖಿಪಕ್ಷಿಗುಲ್ಮಂ
ರಮಣೀಯಂ ರಮಣೀಮನೋಹರೋ ಭೂತ್ ॥೪೫॥

ಕುಸುಮೇಷು ಕುಸುಮಾವಲೀಢದೇಹಂ
ಸುಮವೃಕ್ಷಾಂತರಗುಲ್ಮಮಧ್ಯದೃಷ್ಟ್ಯಾ ।
ಪರಿವೀಕ್ಷ್ಯಾನಲಾಕ್ಷಿಕೋಣಲಕ್ಷ್ಯಭಕ್ಷ್ಯಂ
ಗರಕಂಠಃ ಪ್ರಕರೋದನಂಗತಾಖ್ಯಾಂ ॥೪೬॥

ಭಸ್ಮೀಭೂತಮನಂಗಸುಂದರತನುಂ ದೃಷ್ಟ್ವೈವ ತತ್ಪೃಷ್ಠಗಾ ।
ಸಾಸ್ರಾಕ್ಷೀರತಿರೇವ ಶಂಕರಕೃಪಾಪಾತ್ರಂಸ್ತುವನ್ ಚುಕ್ರುಶೇ ॥೪೭॥

---

ರತಿಪತಿಯಾದ ಮನ್ಮಥನಾದರೋ ಪರಶಿವನ ಹೃದಯಕುಹರವನ್ನು ತನ್ನ ಪುಷ್ಪಬಾಣಗಳಿಂದ ಹೊಡೆದು ನೋಯಿಸಿದನು. ಈಶ್ವರನು ಸಾಮಾನ್ಯದೇವನಲ್ಲ ವೆಂದು ತಿಳಿದಿದ್ದರೂ ಶತ್ರುಸಂಹಾರ ಕಾರ್ಯದಲ್ಲಿ ಈಶ್ವರನಿಂದ ಸಹಾಯಪಡೆಯಲು ಮನ್ಮಥನು ಈಶ್ವರನ ಮೇಲೆ ಪುಷ್ಪಬಾಣವನ್ನು ಪ್ರಯೋಗಿಸಿ ಅವನ ಮನಸ್ಸನ್ನು ಕಳವಳಗೊಳಿಸಿದನು. ॥೪೪॥

ಆಗ ಮಹೇಶ್ವರನು ಮನ್ಮಥನ ಬಾಣದ ಪೆಟ್ಟಿನಿಂದ ಧೈರ್ಯಹೀನನಾಗಿ ಕಣ್ಣುತೆರೆದು ಮಂದರಗಿರಿಯಲ್ಲಿ ಅರಳಿದ ಪುಷ್ಪಗಳುಳ್ಳ ಮರಗಳನ್ನು ನೋಡಿದನು. ಹಕ್ಕಿಗಳ ಇಂಚರವನ್ನು ಕೇಳಿದನು. ಸುಂದರ ವಸ್ತುಗಳ ದರ್ಶನದಿಂದ ಸ್ತ್ರೀ ವ್ಯಾಮೋಹಕ್ಕೆ ಕಟ್ಟುಬಿದ್ದನು. ॥೪೫॥

ಕುಸುಮಬಾಣಗಳನ್ನು ಪ್ರಯೋಗಿಸಿ ತರುಗುಲ್ಮಮಧ್ಯವರ್ತಿಯಾಗಿರುವ ಮದನನನ್ನು ಪರಶಿವನು ತನ್ನ ಅಗ್ನಿನೇತ್ರಕೋಣದಿಂದ ವೀಕ್ಷಿಸಲು ಕೂಡಲೆ

॥ ರತಿರುವಾಚ ॥

ಹೇ ವಾಸುದೇವನಯನಾರ್ಚಿತಕಾಮದೇವ
ಭಸ್ಮಾಂಗರಾಗವರಭೂಷಿತವಾಮದೇವ ।
ಶ್ರೀ ವಾಮದೇವವರತೋಷಿತಭೂಮಿದೇವ
ಪೂಜ್ಯ ಪ್ರಸೀದ ಪರಮೇಶ್ವರ ದೇವದೇವ ॥೪೮॥

ಮಹಾದೇವ ದೇವಾಧಿದೇವ ಪ್ರಸೀದ
ಪ್ರಸೀದ ಪ್ರಸೀದ ಪ್ರಭೋ ಕಾಲಕಾಲ ।
ಪ್ರಪನ್ನಾಂ ವಿಷಾದೇನ ಸೀದಾಮಿ ಮೋದಾಮಿ ಶಶ್ವತ್
ಪ್ರಸಾದೇನ ತೇ ಸ್ಯಾತ್ಕೃಪಾ ಮಾಂ ಯದಾ ವೈ ॥೪೯॥

ವಿಭೋ ಮಾರ ಸರ್ವಸ್ವ ಮಯ್ಯಂತರಂಗಂ
ಸದಾ ಖರ್ವಗರ್ವಾಧಿರೂಢಂ ಪ್ರಮೂಢಂ ।

---

ಮನ್ಮಥನು ದಗ್ಧದೇಹಿಯಾದನು. ಮನ್ಮಥನ ಸುಂದರ ದೇಹವು ಸುಟ್ಟು ಬೂದಿಯಾಯಿತು. ಅದನ್ನು ನೋಡಿ ರತೀದೇವಿಯು ಬಹಳವಾಗಿ ಗೋಳಿಡುತ್ತಾ ರತೀದೇವಿಯು ಕಣ್ಣೀರನ್ನು ಚುಮುಕಿಸುತ್ತಾ ಈರೀತಿ ಶಂಕರನನ್ನು ಪ್ರಾರ್ಥಿಸಿಕೊಂಡಳು. ॥೪೬-೪೭॥

"ಮಹಾವಿಷ್ಣುವಿನ ನಯನಗಳಿಂದ ಪೂಜಿತವಾದ ದೇಹವುಳ್ಳವನೇ, ಮನ್ಮಥನ ದೇಹಭಸ್ಮದಿಂದ ಲಿಪ್ತವಾದ ಅಂಗರಾಗವುಳ್ಳವನೇ, ವಾಮದೇವ ಮೂರ್ತಿಯೇ, ವಾಮದೇವಾದಿ ಋಷಿಜನರನ್ನು ವರದಿಂದ ತೃಪ್ತಿಗೊಳಿಸಲ್ಪಟ್ಟವನೇ, ಪರಮೇಶ್ವರನೇ, ದೇವದೇವನೇ ನಮ್ಮನ್ನು ರಕ್ಷಿಸು. ॥೪೮॥

ದೇವಾಧಿದೇವನೇ, ಕಾಲಕಾಲನೇ, ನನಗೆ ಪ್ರಸನ್ನನಾಗು. ನಿನ್ನ ಅಗ್ನಿನೇತ್ರದ ಉರಿಯಿಂದ ನನ್ನ ಪತಿಯು ಈಗ ಭಸ್ಮವಾಗಿರುವನು. ಅದರ ನಿಮಿತ್ತವಾಗಿ ನಾನೀಗ ಬಹಳವಾಗಿ ವ್ಯಥೆಪಡುತ್ತಿರುವೆನು. ದಯೆಯಿಂದ ನನ್ನನ್ನು ಕೃಪಾಪಾತ್ರಳನ್ನಾಗಿ ಮಾಡಿಕೊ. ॥೪೯॥

ಗೌರೀಪತಿಯೂ, ನಾಗಾಭರಣನೂ, ಅರ್ಧನಾರೀಶ್ವರನೂ, ಆದ ಪರಶಿವನೇ, ಮಹಾಕಾಮನ ದೇಹವನ್ನು ದಹಿಸಿ ನನಗೆ ವಿಶೇಷದುಃಖವನ್ನುಂಟುಮಾಡಿರುವೆ. ಮಹಾ

ಮೃಡಾನೀಪತೇ ಗೂಢಪಾದಭೂಷ
ಯೋಷಾ ವಿಶೇಷಾಂಗ ಕಾಮಾಂಗನಾಶಪ್ರಸೀದ ॥೫೦॥

॥ ಸೂತ ಉವಾಚ ॥

ರತ್ಯಾಸ್ಸ್ತುತ್ಯಾ ಚ ನತ್ಯಾ ಗಿರಿವರಶಿಖರೇ ಸತ್ಯವಾಚಾ ವಿಹೃತ್ಯ
ಪಾತಿವ್ರತ್ಯಾನುಭೂತ್ಯಾ ಸ ಕಿಲ ಪುರಹರಸ್ತಾಮನಂಗೇನಯೋಜ್ಯ ।
ಕಾಲೇ ದೇವ್ಯಾಃ ಕಟಾಕ್ಷೈಸ್ತವಪತಿರಮರೋ ಜಾಯತೇ ಇತ್ಯಶಾಂತಾಂ
ಕಾಂತಪ್ರದಾನಾದ್ಗಿರಿಶವರ ಕೃಪಾಪಾತ್ರಭೂತಾಂ ರತಿಂತಾಂ ॥೫೧॥

ದೇವಾಸ್ತೇ ಪ್ರಯಯುಃ ಸ ಭೀತಹೃದಯಾ ತೇ ಕಾಂದಿಶೀಕಾ ಭವನ್
ಕ್ರೋಧಾಂಧೀಕೃತಲೋಚನಸ್ಯ ಪುರತಃ ಸ್ಥಾತುಂ ನ ಶೇಕುಸ್ತದಾ ।
ಇಂದ್ರಾಗ್ನ್ಯಾನಿಲವಾಯುವಃ ಸವರುಣಾಸೋಮಾರ್ಯಮಾದ್ಯಾಃ ಸುರಾಃ
ಪ್ರಖ್ಯಾತುಂ ವರಮನ್ಮಥಾಂಗದಹನಂ ದೇವೇನ ತದ್ಬ್ರಹ್ಮಣೇ ॥೫೨॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀ ಸಂವಾದೇ ಶಿವತಪೋವಿಘ್ನಕೃತ ಮನ್ಮಥದಹನಕಥಾವರ್ಣನೇ ಏಕಾದಶೋಽಧ್ಯಾಯಃ

---

ಗರ್ವಿಷ್ಠಳಾಗಿ ಏನೂ ಅರಿಯದ ನನ್ನ ಮೇಲೆ ದಯೆಯಿಟ್ಟು, ನನ್ನ ಮಾನಸಿಕವಾದ ಅಹಂಕಾರವನ್ನು ಹೋಗಲಾಡಿಸು. ನನ್ನನ್ನು ಈ ಸಮಯದಲ್ಲಿ ರಕ್ಷಿಸು." ॥೫೦॥

ಈ ರೀತಿ ರತೀದೇವಿಯು ನಾನಾರೀತಿಯಲ್ಲಿ ಸ್ತುತಿಸಿ, ನಮಸ್ಕರಿಸಿ ತನ್ನ ಪತಿವ್ರತಾಧರ್ಮವನ್ನು ವಿಶೇಷವಾಗಿ ತೋರ್ಪಡಿಸಲು ಆಗ ಪರಮೇಶ್ವರನು ಅವಳ ಭಕ್ತಿಗೆ ಮೆಚ್ಚಿ ರತಿಪತಿಯಾದ ಮನ್ಮಥನನ್ನು ಅನಂಗನನ್ನಾಗಿ ಮಾಡಿ ಪತ್ನಿಗೆ ಒಪ್ಪಿಸಿದನು. ಮತ್ತು ಆ ಮನ್ಮಥನು ಸದಾ ಯುವಕನಾಗಿರುವಂತೆಯೇ ವರವಿತ್ತು ತನ್ಮೂಲಕ ರತೀದೇವಿಗೆ ಪತಿಭಿಕ್ಷೆಯನ್ನು ನೀಡಿ, ತನ್ನ ದಯಾಪಾತ್ರಳನ್ನಾಗಿ ಮಾಡಿಕೊಂಡನು. ॥೫೧॥

ಆ ರೀತಿ ಪರಶಿವನು ತನ್ನ ಕ್ರೋಧಾಗ್ನಿಯಿಂದ ಮನ್ಮಥನನ್ನು ದಹನ ಮಾಡಿದ ಕಾಲದಲ್ಲಿ ಸಮಸ್ತ ದೇವತೆಗಳೂ ಹೆದರಿ ದಿಕ್ಕಾಪಾಲಾಗಿ ಚದುರಿ ಹೋದರು. ಮಹಾಕೋಪವನ್ನು ತಾಳಿದ ಉಗ್ರರೂಪಿಯಾದ ಪರಶಿವನ ಎದುರಿನಲ್ಲಿ ನಿಂತು ವಿರೋಧಿಸಲು ಅವರಾರೂ ಸಮರ್ಥರಾಗಲಿಲ್ಲ. ಇಂದ್ರ, ಅಗ್ನಿ ವಾಯು

ವರುಣ, ಸೋಮ, ಅರ್ಯಮ ಮುಂತಾದವರು ಮನ್ಮಥನಾಶಕನಾದ ಪರಮೇಶ್ವರನ ಮಹಿಮೆಯನ್ನು ಕೊಂಡಾಡುತ್ತಾ ಸ್ವಸ್ಥಳಗಳಿಗೆ ಪ್ರಯಾಣಮಾಡಿದರು. ||೫೨||

ಇಲ್ಲಿಗೆ ಶ್ರೀಶಿವರಹಸ್ಯದ ದ್ವಾದಶಾಂಶದಲ್ಲಿ ಶಿವತಪೋವಿಘ್ನಕಾರಿಯಾದ
ಮನ್ಮಥನನ್ನು ದಹಿಸಿದ ವಿಷಯವನ್ನು ತಿಳಿಸುವ ಹನ್ನೊಂದನೆಯ
ಅಧ್ಯಾಯವು ಸಮಾಪ್ತವಾದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ ,

## ದ್ವಾದಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಯಯುರಿಂದ್ರಾದಯೋ ದೇವಾ ಬ್ರಹ್ಮಲೋಕಂ ಸನಾತನಂ ।
ಸುವರ್ಣಸೌಧಸಂಬಾಧಪ್ರಾಕಾರವರಗೋಪುರಂ ॥೧॥

ಪುಷ್ಪಕಲ್ಪಕವೃಕ್ಷಾಢ್ಯಂ ದೋಧೂಯಿತಪತಾಕಕಂ ।
ರತ್ನಾಗಾರಮಹಾಕುಂಭಂ ಸಂಘಭಾಸುರಮುತ್ಕಟಂ ॥೨॥

ಪುಷ್ಪಗಂಧಾದಿಬಹುಳಧೂಪದೀಪವಿದೀಪಿತಂ ।
ತತ್ರ ಸತ್ಯೇ ಸುರಾ ಲೋಕೇ ಆಲೋಕಂತ ಪಿತಾಮಹಂ ॥೩॥

---

## ಹನ್ನೆರಡನೆಯ ಅಧ್ಯಾಯ

ಅನಂತರ ಇಂದ್ರಾದಿದೇವತೆಗಳು ಬ್ರಹ್ಮಲೋಕವನ್ನು ಕುರಿತು ತೆರಳಿದರು. ಆ ಲೋಕವಾದರೋ, ಸುವರ್ಣಮಯವಾದ ಸೌಧಗಳಿಂದಲೂ, ಉನ್ನತವಾದ ಪ್ರಾಕಾರ ಗೋಪುರಗಳಿಂದಲೂ, ಪುಷ್ಪಮಯಗಳಾದ ಮರಗಳಿಂದಲೂ, ಗಾಳಿಗೆ ಚಲಿಸುತ್ತಾ ಹೊಳೆಯುವ ಧ್ವಜಪತಾಕೆಗಳಿಂದಲೂ ರತ್ನಮಯವಾದ ಕಲಶಗಳಿಂದಲೂ, ಗುಂಪುಗುಂಪಾಗಿ ಹೊಳೆಯುವ ಸುಂದರ ವಸ್ತುಗಳಿಂದಲೂ ಶೋಭಿಸುತ್ತಿತ್ತು. ॥೧-೨॥

ಹೂವು, ಗಂಧ, ಧೂಪ, ದೀಪ ಇವುಗಳಿಂದ ಆ ನಗರವೇ ಶೋಭಿಸುತ್ತಿದ್ದಿತು. ಆ ಸತ್ಯಲೋಕವು ದೇವತೆಗಳಿಗೆ ಆವಾಸಸ್ಥಾನವಾಗಿದ್ದಿತು. ಇಂದ್ರಾದಿ

ಬ್ರಹ್ಮೇಶ್ವರಾಲಯಂ ತತ್ರ ವಜ್ರಪ್ರಾಕಾರಮನೋಹರಮ್ ।
ಕನತ್ಕಲಶಕುಂಭಾಗ್ರೇ ನಾನಾವೃಷವರಾಶ್ರಯೇ ॥೪॥

ಧೂಪಿತೇ ದೀಪಿತೇ ಶಂಭೋರಾಲಯೇ ಕಮಲಾಲಯೇ ।
ವೈಖಾನಸೇ ವಾಲಖಿಲ್ಯೈರ್ಮುನಿಭಿಸ್ಸಂವೃತಸ್ತದಾ ॥೫॥

ಗಾಯತ್ರ್ಯಾ ಚೈವ ಸಾವಿತ್ರ್ಯಾ ಸಂವೃತಂ ಪಾರ್ಶ್ವಯೋರ್ದ್ವಯೋಃ
ವೇದಾಂತನಿಷ್ಠೈರ್ಯತಿಭಿಃ ಸಂವೃತಂ ಭಸ್ಮಭೂಷಿತೈಃ ॥೬॥

ಪಂಚಾಸ್ಯಧ್ಯಾನನಿರತಶ್ಚತುರ್ವಕ್ತ್ರಃ ಪ್ರಜಾಪತಿಃ ।
ಚತುಷ್ಕರಾಕ್ತ ಸುಭಗಭಸ್ಮದಿವ್ಯ ತ್ರಿಪುಂಡ್ರಕಃ ॥೭॥

ರುದ್ರಾಕ್ಷರತ್ನಾಭರಣೋ ಪೂಜಯನ್ ಶಂಕರಂ ಸ್ಥಿತಃ ।
ಪತ್ರೈರ್ಬಿಲ್ವೈರ್ಮಹಾದೇವಂ ಬ್ರಹ್ಮೇಶಂ ಸತ್ಯಲೋಕಗಮ್ ॥೮॥

ಸ್ತುವಂತಮೇವಂ ದೇವೇಶಂ ಚತುರ್ವಕ್ತ್ರಃ ಪ್ರಜಾಪತಿಃ ॥೯॥

---

ದೇವತೆಗಳು ಆ ಸತ್ಯಲೋಕದಲ್ಲಿ ಬ್ರಹ್ಮನನ್ನು ಕಾಣಲು ಹೋದರು. ಆ ನಗರ ಮಧ್ಯದಲ್ಲಿ ಬ್ರಹ್ಮೇಶ್ವರಾಲಯವಿದ್ದಿತು. ಅದಕ್ಕೆ ಸುತ್ತಲೂ ವಜ್ರಮಯವಾದ ಪ್ರಾಕಾರವೂ, ಪ್ರಾಕಾರಗಳ ಮೇಲೆ ಚಿನ್ನದ ಕಲಶಗಳೂ, ಅಲ್ಲಲ್ಲಿ ವೃಷಭವಿಗ್ರಹ ಗಳೂ ವಿರಾಜಿಸುತ್ತಿದ್ದುವು. ||೩-೪||

ಆ ಬ್ರಹ್ಮೇಶ್ವರ ದೇವಾಲಯವು ಧೂಪದೀಪಗಳಿಂದ ಶೋಭಿಸುತ್ತಾ ಐಶ್ವರ್ಯಕ್ಕೆ ಆಶ್ರಯವಿತ್ತಿತ್ತು. ವಾಲಖಿಲ್ಯಾದಿ ಸಕಲ ಮಹರ್ಷಿಗಳೂ ಗಾಯತ್ರೀ ಸಾವಿತ್ರೀದೇವಿಯರೂ, ವೇದಾಂತಮಾರ್ಗಾನುಯಾಯಿಗಳಾದ ಭಸ್ಮಭೂಷಿತರಾದ ಯತಿಗಳೂ ಅಲ್ಲಿ ವಿರಾಜಿಸುತ್ತಿದ್ದರು. ||೫-೬||

ಚತುರ್ಮುಖ ಬ್ರಹ್ಮನಾದರೋ ಪರಶಿವನ ಧ್ಯಾನದಲ್ಲಿಯೇ ಸದಾ ತತ್ಪರ ನಾಗಿದ್ದನು. ನಾಲ್ಕು ಕೈಗಳಿಂದಲೂ ಭಸ್ಮತ್ರಿಪುಂಡ್ರಾದಿಗಳನ್ನೂ ಧರಿಸುತ್ತಾ ರುದ್ರಾಕ್ಷಮಾಲೆಯನ್ನು ಹಾಕಿಕೊಂಡು ಸರ್ವದಾ ಶಂಕರನನ್ನು ಪೂಜಿಸುತ್ತಾ ಬಿಲ್ವಪತ್ರಾದಿಗಳಿಂದ ಬ್ರಹ್ಮೇಶ್ವರನನ್ನು ಸದಾ ಆರಾಧಿಸುತ್ತಿದ್ದನು. ||೭-೮||

ಬ್ರಹ್ಮನು ಪ್ರತಿದಿನವೂ ಶಿವಪೂಜಾನಂತರದಲ್ಲಿ ಈರೀತಿ ಶಿವನನ್ನು ಸ್ತುತಿಸು ತ್ತಿದ್ದನು. 'ಮಹಾದೇವನೇ, ನಿನಗೆ ಕನಕಾಚಲವೇ ತ್ರಿಪುರಸಂಹಾರಕಾಲದಲ್ಲಿ

ಶಂಭೋ ತ್ವಂ ಕನಕಾದ್ರಿಚಾಪಶರಥಿರ್ವಾಗೀಹಿ ಕೃತೋನ್ನಾಯುಕಃ
ಪಾಹೀಶ ಕ್ಷಿತಿಸುಂದರೋತ್ತಮರಥೋ ಯಂತಾಸ್ಮಿ ಜಿಷ್ಣುಃ ಶರಃ ।
ಮೌರ್ವೀ ತೇ ಮಣಿಪುಂಗವಸ್ತವವರೇ ಚಕ್ರೇ ಚ ಕೇಂದೂತ್ತಮೋ
ಲಕ್ಷ್ಯಂ ತೇ ತ್ರಿಪುರಂ ಸುರಾ ಭಟಗಣಾ ಕಸ್ತೇ ನಮಸ್ತೇ ನಮಃ ॥೧೦॥

ತಾದೃಶಂ ತತ್ರ ಬ್ರಹ್ಮಾಣಂ ದದೃಶುಸ್ತ್ರಿದಶಾಸ್ತದಾ ।
ಪ್ರಣಮ್ಯ ತತ್ರ ತೇ ದೇವಾ ಬ್ರಹ್ಮಾಣಂ ಪ್ರೋಚುರತ್ರ ಹಿ ॥೧೧॥

॥ ಸುರಾ ಊಚುಃ ॥

ನಮಸ್ತೇ ಭಗವನ್ ಬ್ರಹ್ಮನ್ ರತ್ಯಾ ದೇವಃ ಪ್ರಸಾದಿತಃ ।
ತಾಂ ಕೃಪಾಪಾತ್ರಭೂತಾಂ ಚ ತ್ರಿಣೇತ್ರಶ್ಚಾಕರೋದ್ವಿಭೋ ॥೧೨॥

ಕರವಾಮ ಕಿಮದ್ಯಾತ್ರ ತಾರಕೇಣ ನಿಪೀಡಿತಾಃ ।
ಪ್ರಯಾತಾಃ ಶರಣಂ ಸರ್ವೇ ತ್ವಾಮೇವಾದ್ಯ ಪಿತಾಮಹಂ ॥೧೩॥

---

ಧನುಸ್ಸಾಯಿತು. ಸಮುದ್ರವೇ ಬತ್ತಳಿಕೆಯಾಯಿತು. ವೇದಗಳು ಕುದುರೆಗಳಾದುವು. ಭೂಮಿಯು ರಥದಂತೆ ನಿಂತಿತು. ನಾನೇ ಸಾರಥಿಯಾದೆನು. ವಿಷ್ಣುವು ಬಾಣವಾದನು. ಆದಿಶೇಷನು ಧನುಸ್ಸಿನ ಹೆದೆಯಾಗಿಯೂ, ಸೂರ್ಯಚಂದ್ರರು ಚಕ್ರಗಳಾಗಿಯೂ ದೇವತೆಗಳೆಲ್ಲರೂ ಸೈನಿಕರಾಗಿಯೂ ಸೇರಿದರು. ಇಂತಹ ಮಹಾಮಹಿಮನಾದ ಮಹಾದೇವನೇ, ನಿನಗೆ ಸದಾ ವಂದನೆಗಳು'. ॥೯-೧೦॥

ಈರೀತಿ ಶಿವಧ್ಯಾನತತ್ಪರನಾಗಿದ್ದ ಬ್ರಹ್ಮನನ್ನು ದೇವತೆಗಳೆಲ್ಲರೂ ನೋಡಿ, ವಂದಿಸುತ್ತಾ ಈರೀತಿ ಮೊರೆಯಿಟ್ಟರು "ಪರಬ್ರಹ್ಮನೇ, ಈಗ ಪರಮೇಶ್ವರನು ತಪಸ್ಸಿನಿಂದ ಎಚ್ಚೆತ್ತು, ಮನ್ಮಥನನ್ನು ಧ್ವಂಸಮಾಡಿ, ಅನಂತರ ಶಾಂತನಾಗಿ ಗೋಳಿಡುತ್ತಿದ್ದ ರತೀದೇವಿಯನ್ನು ಸಂತೈಸಿ ವರವಿತ್ತಿರುವನು. ಅಂದರೆ ತಪಸ್ಸಿನಿಂದ ಬಹಿರ್ಮುಖನಾಗಿರುವನು. ॥೧೧-೧೨॥

ಚತುರ್ಮುಖನೇ, ನಾವೀಗ ತಾರಕಾಸುರನಿಂದ ಪೀಡಿತರಾಗಿದ್ದೇವೆ. ನಮಗೆ ಯಾವ ದಿಕ್ಕೂ ತೋಚದೆ ಈಗ ನಿನ್ನನ್ನು ಮೊರೆಹೊಕ್ಕಿರುವೆವು. ಈಗ ಏನಾದರೂ ಉಪಾಯಮಾಡಿ ಈಶ್ವರಪಾರ್ವತಿಯರಿಗೆ ವಿವಾಹವಾಗುವಂತೆ ಮಾಡು. ಅದರಿಂದ ನಮ್ಮ ಕಾರ್ಯವು ಸುಗಮವಾಗುವುದು," ಎಂದು ದೇವತೆಗಳೆಲ್ಲರೂ ಪ್ರಾರ್ಥಿಸಲು ಆಗ

ಉಪಾಯಂ ಚಿಂತ್ಯತಾಮತ್ರ ಹರೋದ್ವಾಹೇ ಪ್ರಜಾಪತೇ ।
ತದಾ ದೇವವಚಶ್ಶ್ರುತ್ವಾ ವಿಧಿಸ್ತತ್ರ ವಿಚಿಂತ್ಯ ತತ್ ॥೧೪॥

ಉವಾಚ ಸಾಂತ್ವಯನ್ ದೇವಾಂಸ್ತಾರಕಂ ಪ್ರತಿ ಸಂಯುಗಂ ॥೧೫॥

॥ ಬ್ರಹ್ಮೋವಾಚ ॥

ಮಾಭೈಷ್ಟಯೂಯಂ ವಿಬುಧಾಸ್ತ್ರಿವಿಷ್ಟಪನಿವಾಸಿನಃ ।
ಶಿಪಿವಿಷ್ಟೋರುಕೋಪೇನ ಸ್ಮರಃ ಸ್ಮಾರ್ಯತನುರ್ಭವೇತ್ ॥೧೬॥

ಭವಿತವ್ಯಂ ತಥೈವಾತ್ರ ಕಿಮದ್ಯ ಕರವಾಣ್ಯಹಂ ।
ಹೈಮವತ್ಯಾ ಮಹೇಶಸ್ಯ ಉದ್ವಾಹೇ ಪ್ರಯತಾಮಹೇ ॥೧೭॥

ತಯೋರ್ಯಸ್ಸಂಭವೇತ್ಸೂನುಃ ಸ ನಸ್ತಾರಕನಾಶಕಃ ।
ತಮೇವಂ ಸಂಪ್ರಸಾದ್ಯೈವ ಸೇನಾಪತ್ಯೇ ನಿಯುಜ್ಮಹೇ ॥೧೮॥

ಸ ತಾರಕಂ ಮೃಧೇ ಹತ್ವಾ ಭೋಗಂ ವಃ ಸಂಪ್ರದಾಸ್ಯತಿ ।
ಇತ್ಯುಕ್ತ್ವಾ ತ್ರಿದಶೈಸ್ಸಾರ್ಧಂ ವೈಕುಂಠಂ ಪ್ರಯಯೌ ಹರಿಃ ॥೧೯॥

---

ಬ್ರಹ್ಮನು ಅವರ ಮಾತನ್ನು ಸಾವಧಾನವಾಗಿ ಪರ್ಯಾಲೋಚಿಸಿ, ಅವರನ್ನು ಸಮಾಧಾನಗೊಳಿಸುತ್ತಾ ಈರೀತಿ ನುಡಿದನು. ॥೧೪-೧೫॥

"ಸ್ವರ್ಗವಾಸಿಗಳಾದ ದೇವತೆಗಳಿರಾ, ನೀವು ಹೆದರಬೇಡಿ. ಪರಶಿವನ ಪ್ರಚಂಡಕೋಪಾಗ್ನಿಯಿಂದ ಮನ್ಮಥನು ದೇಹತ್ಯಾಗಮಾಡಿದನು. ಆದರಿಂದ ನಾವು ಈಗ ಏನು ಮಾಡಲಾದೀತು? ಆಗಬೇಕಾದ ಕಾರ್ಯವನ್ನು ತಡೆಗಟ್ಟಲು ನಮ್ಮಿಂದ ಸಾಧ್ಯವೇ? ಈಗ ಪಾರ್ವತೀಪರಿಣಯಕ್ಕೆ ಏನಾದರೂ ಪ್ರಯತ್ನಪಡುತ್ತೇನೆ. ॥೧೫-೧೬-೧೭॥

ಅವರಿಬ್ಬರಿಂದ ಜನಿಸುವ ಮಗನೇ ತಾರಕಾಸುರನನ್ನು ಕೊಲ್ಲಲು ಸಮರ್ಥನಾಗುವನು. ಮುಂದೆ ಅವನನ್ನೇ ದೇವಸೇನಾಪತಿಯನ್ನಾಗಿ ಮಾಡೋಣ. ಅವನು ತನ್ನ ಪರಾಕ್ರಮದಿಂದ ತಾರಕನನ್ನು ಕೊಂದು ನಿಮ್ಮೆಲ್ಲರಿಗೂ ಎಂದಿನಂತೆ ಸಕಲ ಭೋಗಭಾಗ್ಯಗಳನ್ನು ಕರುಣಿಸುವನು." ಎಂದು ಹೇಳಿ ಬ್ರಹ್ಮನು ಆ ದೇವತೆಗಳನ್ನೂ ಕರೆದುಕೊಂಡು, ಅದೇ ಕಾರ್ಯನಿರ್ವಹಣಕ್ಕಾಗಿ ವೈಕುಂಠಲೋಕದಲ್ಲಿರುವ ವಿಷ್ಣುವನ್ನು ನೋಡಲು ಹಂಸಾರೂಢನಾಗಿ ಪ್ರಯಾಣ ಬೆಳೆಸಿದನು. ॥೧೮-೧೯॥

ಹಂಸಮಾರುಹ್ಯ ರಭಸಾ ಶಿವಸ್ಯೋದ್ವಾಹಕರ್ಮಣೇ ।
ನಾನಾರತ್ನಪ್ರಭಾಭಾಸಿಪ್ರಾಕಾರವರಗೋಪುರಂ ॥೨೦॥

ರಾಜತ್ಕುಂಭಪತಾಗಾಗ್ರ್ಯೈಃ ಶೋಭಮಾನಂ ಮನೋರಮಂ ।
ವೈಷ್ಣವೈರ್ಗಣಪೈರ್ಯುಕ್ತಂ ಶಂಖಚಕ್ರಧರೈರ್ವೃತಂ ॥೨೧॥

ತಾರ್ಕ್ಷ್ಯೇಣ ವಿಶ್ವಕ್ಸೇನೇನ ಸಂಸ್ಥಿತಂ ದ್ವಾರಿ ವೈಷ್ಣವೈಃ ।
ತತ್ರ ವೈಕುಂಠ ಭುವನೇ ಪ್ರಾಕಾರವರಗೋಪುರಂ ॥೨೨॥

ರತ್ನಮಂಟಪಸಂಬಾಧಂ ದಿವ್ಯೋತ್ತುಂಗವೃಷಾಶ್ರಿತಂ ।
ಇಂದ್ರನೀಲಮಣಿಜ್ಯೋತಿರ್ಲಿಂಗಂ ವಿಷ್ಣ್ವೀಶ್ವರಾಭಿಧಂ ॥೨೩॥

ಪೂಜಯಂತಂ ಮಹಾಲಕ್ಷ್ಮ್ಯಾ ಸರ್ವದಾ ವರಿವಸ್ಯಯಾ ।
ಬಿಲ್ವಪತ್ರೈಃ ಸ ಕಲ್ಹಾರೈಃ ಕಮಲೋತ್ಪಲಮಂಡಿತೈಃ ॥೨೪॥

ಧೂಪದೀಪೈಶ್ಚ ನೈವೇದ್ಯೈರ್ನೀರಾಜನಮನೋಹರೈಃ ।
ಸ್ತುತಿಭಿಸ್ಸಂಸ್ತುವಂತಂ ತಂ ವಿಷ್ಣುಂ ಕಮಲಲೋಚನಂ ॥೨೫॥

---

ವೈಕುಂಠಲೋಕವು ನಾನಾರತ್ನಗಳಿಂದ ನಿರ್ಮಿತವಾದ ಪ್ರಾಕಾರಗಳಿಂದಲೂ, ಗೋಪುರಗಳಿಂದಲೂ ಪ್ರಕಾಶಿಸುತ್ತಿದ್ದಿತು. ಕಲಶಕನ್ನಡಿಗಳಿಂದಲೂ, ಶಂಖಚಕ್ರ ಗದಾಧಾರಿಗಳಾದ ವೈಷ್ಣವಗಣಗಳಿಂದಲೂ ಬಹಳವಾಗಿ ಶೋಭಿಸುತ್ತಿದ್ದಿತು. ॥೨೦-೨೧॥

ವಿಷ್ಣುಗೃಹ ದ್ವಾರದ ಎರಡು ಭಾಗಗಳಲ್ಲಿಯೂ, ಗರುಡನೂ, ವಿಶ್ವಕ್ಸೇನನೂ ನಿಂತಿದ್ದರು. ವಿಷ್ಣುಭವನದ ಮುಂದೆ ಸುಂದರವಾದ ಗೋಪುರಗಳೂ, ರತ್ನಮಯವಾದ ಮಂಟಪಗಳೂ, ಎತ್ತರವಾದ ವೃಷಭರಾಜಿಗಳೂ, ಇಂದ್ರನೀಲಮಣಿ ರಂಜಿತವಾದ ಶಿವಲಿಂಗ ಇವುಗಳಿಂದ ಶೋಭಿಸುವ ವಿಷ್ಣ್ವೀಶ್ವರ ದೇವಾಲಯವೊಂದು ರಂಜಿಸುತ್ತಿದ್ದಿತು. ॥೨೨-೨೩॥

ಅಲ್ಲಿ ಮಹಾವಿಷ್ಣುವು ಸದಾ ತನ್ನ ಪತ್ನಿಯಾದ ಮಹಾಲಕ್ಷ್ಮಿಯೊಡಗೂಡಿ, ಬಿಲ್ವಪತ್ರೆಗಳಿಂದಲೂ, ಕಲ್ಹಾರಪುಷ್ಪಗಳಿಂದಲೂ, ಕಮಲದ ಹೂವುಗಳಿಂದಲೂ, ಧೂಪದೀಪನೈವೇದ್ಯನೀರಾಜನ ಇವುಗಳಿಂದಲೂ ಶಿವಲಿಂಗವನ್ನು ಪೂಜಿಸಿ, ವಿಷ್ಣುವು ಅನನ್ಯಭಕ್ತಿಯಿಂದ ಈ ರೀತಿ ಶಂಕರನನ್ನು ಸ್ತುತಿಸುತ್ತಿದ್ದನು. ॥೨೪-೨೫॥

ಭಸ್ಮತ್ರಿಪುಂಡ್ರಫಾಲಂ ತಂ ಫಾಲಲೋಚನಪೂಜಕಂ ।
ಧೃತರುದ್ರಾಕ್ಷಹಾರಾಢ್ಯಂ ಪೀತಕೌಶೇಯವಾಸಸಂ ॥೨೬॥

ದದೃಶುಸ್ತೇ ತದಾ ವಿಷ್ಣುಂ ಸ್ತುವಂತಂ ಪರಮೇಶ್ವರಂ ॥೨೭॥

॥ ವಿಷ್ಣುರುವಾಚ ॥

ಗಂಗಾಚಂದ್ರಕಳಾಲಲಾಮ ಭಗವನ್ ಹೇಮಾಂಗಬಾಣಾಸನೋ
ಭೂಮಾ ತ್ವಂ ಶ್ರುತಿಸಾಮಭಾಮಮಹಿಮಾರಾಮಾಕೃತಾರ್ಧಾಂಗತಃ ।
ಸೋಮಾಗ್ನೀ ಹರಿಸಾಯಕಃ ಕ್ಷಿತಿರಥೋ ವಾಹೀಕೃತಾಮ್ನಾಯಕಃ
ಸರ್ವೇಷಾಂ ಚ ಪುಮರ್ಥದೋಸಿ ಭಗವನ್ ಮಾಂ ಪಾಹಿ ಸಾಂಬ ಪ್ರಭೋ
॥೨೮॥

ಇತ್ಥಂ ಸ್ತುವಂತಂ ದದೃಶುರ್ಹರಿಂ ವಿಧಿಮುಖಾಃ ಸುರಾಃ ।
ತಾನ್ ದೃಷ್ಟ್ವಾ ಸ ತದಾ ವಿಷ್ಣುಃ ಸಮುತ್ಥಾಯ ವಿಧಿಂ ತದಾ ॥೨೯॥

---

ಆಗ ವಿಷ್ಣುವು ಭಸ್ಮತ್ರಿಪುಂಡ್ರಗಳನ್ನೂ, ರುದ್ರಾಕ್ಷಮಾಲೆಗಳನ್ನೂ ಪೀತಾಂಬರವನ್ನೂ ಧರಿಸಿ, ಫಾಲಲೋಚನನೆನಿಸಿದ ಪರಶಿವನನ್ನು ನಾನಾರೀತಿ ಸ್ತೋತ್ರ ಮಾಡುತ್ತಿದ್ದನು. ॥೨೬-೨೭॥

ಗಂಗೆಯನ್ನೂ, ಚಂದ್ರನನ್ನೂ ಶಿರಸ್ಸಿನಲ್ಲಿ ಧರಿಸಿರುವ ಮಹೇಶ್ವರನೇ, ಪರಮಪೂಜ್ಯನೇ, ಸುವರ್ಣಾವಯವಧಾರಿಯೇ, ನೀನು ವೇದವೇದಾಂತಗಳಿಂದ ಸ್ತುತಿಸಲ್ಪಡುವ ಮಹಾಮಹಿಮೆಯುಳ್ಳವನು. ಪಾರ್ವತಿಯನ್ನೇ ಅರ್ಧಶರೀರದಲ್ಲಿ ಧರಿಸಿರುವವನು. ಚಂದ್ರಸೂರ್ಯಾಗ್ನಿಗಳೇ, ನಿನ್ನ ನೇತ್ರತ್ರಯಗಳು. ವಿಷ್ಣುವೇ ನಿನಗೆ ಬಾಣವಾಗಿರುವವನು. ಭೂಮಿಯೇ ನಿನ್ನ ರಥ. ವೇದಗಳೇ ಕುದುರೆಗಳು. ಇಂತಹ ಮಹಾಮಹಿಮನಾದ ನೀನು ನಿನ್ನ ಭಕ್ತರಿಗೆಲ್ಲಾ ಧರ್ಮಾದಿಪುರುಷಾರ್ಥಗಳನ್ನು ಸುಲಭವಾಗಿ ದಯಪಾಲಿಸುವೆ. ಪಾರ್ವತೀಪತಿಯೇ, ನಿನಗೆ ವಂದನೆ.” ॥೨೮॥

ಹೀಗೆ ಸದಾ ಈಶ್ವರನನ್ನು ಸ್ತುತಿಸುತ್ತಲಿದ್ದ ಮಹಾವಿಷ್ಣುವಿನ ಸಮೀಪಕ್ಕೆ ಬ್ರಹ್ಮಾದಿ ಸಕಲ ದೇವತೆಗಳೂ ಹೋದರು. ಆರೀತಿ ಬಂದ ದೇವತೆಗಳನ್ನು ನೋಡಿ ವಿಷ್ಣುವು ಪ್ರೀತಿಯಿಂದ ಅವರನ್ನು ಆದರಿಸಿ ಬ್ರಹ್ಮನಿಗೆ ಮರ್ಯಾದಾಪೂರ್ವಕವಾಗಿ ತನ್ನ ಪೀಠವನ್ನೇ ಅವನಿಗಿತ್ತು, ಉಳಿದ ದೇವತೆಗಳಿಗೆಲ್ಲಾ ಸುವರ್ಣಾಸನವನ್ನು

ಸ್ವಾಸನೇ ಚೋಪಸಂವೇಶ್ಯ ಸುರಾನ್ ಹೈಮಾಸನೇಷು ಚ ।
ಉಪವೇಶ್ಯಾರ್ಹಣಾಂ ಚಕ್ರೇ ಗಂಧಪುಷ್ಪಾದಿಭಿಸ್ತದಾ ॥೩೦॥

ಶಿವನೈವೇದ್ಯಶೇಷೇಣ ವಿಧಿನಾ ಭೋಜ್ಯ ಸತ್ತಮಃ ।
ಉವಾಚ ದೇವಸ್ತಾನ್ ದೇವಾನ್ ಬ್ರಹ್ಮೇಂದ್ರಪ್ರಮುಖಾನ್ ಹರಿಃ ॥೩೧॥

॥ ಹರಿರುವಾಚ ॥

ಕುತಸ್ಸಮಾಗತಂ ಸರ್ವೇ ಕಿಂ ವಃ ಕಾರ್ಯಂ ಉಪಸ್ಥಿತಂ ।
ತ್ರಿಶೂಲಪಾಣಿಸ್ಮರಣಾತ್ಕರವಾಣಿ ಚ ವೋ ಮುದಂ ॥೩೨॥

ತದಾ ವಿಷ್ಣುವಚಶ್ಶ್ರುತ್ವಾ ವಿಬುಧಾಃ ಪ್ರವಚನ್ನಚಃ ।
ವಿಧಿನಾ ತೇ ತದಾ ವಿಷ್ಣುಂ ತಾರಕಾಸುರಸಂಗರಃ ॥೩೩॥

ಪರಾಜಯಂ ಚ ಸರ್ವೇಷಾಂ ವಿಬುಧಾನಾಂ ಚ ವಿಷ್ಣವೇ ॥೩೪॥

॥ ಸುರಾ ಊಚುಃ ॥

ಸಂಗತ್ಯ ಸರ್ವೇ ವಿಬುಧಾಃ ವಯಂ ಸ್ಮರಯುತಾ ಹರೇ ।
ಗತಾ ಯೋಕ್ತುಂ ಮಹಾದೇವೇ ದೇವೀಂ ಗಿರಿಸುತಾಂ ತದಾ ॥೩೫॥

---

ಕೊಟ್ಟು ಕುಳ್ಳಿರಿಸಿದನು. ಅನಂತರ ಗಂಧಪುಷ್ಪಾದಿಗಳಿಂದ ಅವರನ್ನು ವಿಧವಿಧವಾಗಿ ಪೂಜಿಸಿ ಸತ್ಕರಿಸಿದನು. ॥೨೯-೩೦॥

ಶಿವನೈವೇದ್ಯಶೇಷವನ್ನು ಸಕಲ ದೇವತೆಗಳೊಡನೆ ವಿಷ್ಣುವೂ ಭುಂಜಿಸಿದನು. ಅನಂತರ ವಿಷ್ಣುವು ದೇವತೆಗಳನ್ನು ಕುರಿತು "ಸುರಶ್ರೇಷ್ಠರಿರಾ, ನೀವು ಏತಕ್ಕಾಗಿ ಇಲ್ಲಿಗೆ ಇಷ್ಟು ಆತುರದಿಂದ ಬಂದಿರುವಿರಿ. ನಿಮ್ಮ ಕಷ್ಟಗಳನ್ನು ಹೇಳಿರಿ. ಶಿವನಾಮ ಸ್ಮರಣೆಯಿಂದ ನಿಮಗೆ ಸುಖವನ್ನುಂಟುಮಾಡುವೆನು" ॥೩೧-೩೨॥

ಹಾಗೆ ಹೇಳಿದ ವಿಷ್ಣುವಿನ ಮಾತನ್ನು ಕೇಳಿ ದೇವತೆಗಳು ಬ್ರಹ್ಮನ ಮೂಲಕ ತಾರಕಾಸುರನ ಹಾವಳಿಯನ್ನೂ, ತಾರಕಾಸುರನಿಂದ ತಮಗಾದ ಪರಾಭವವನ್ನೂ, ದೇವತೆಗಳಿಗೊದಗಿದ ಕಷ್ಟದ ಸನ್ನಿವೇಶವನ್ನೂ ತಿಳಿಯಪಡಿಸಿದರು. ಮುಂದುವರಿದು ಈರೀತಿ ನುಡಿದರು "ಮಹಾವಿಷ್ಣುವೇ, ನಾವೆಲ್ಲರೂ ಮನ್ಮಥನೊಡಗೂಡಿ, ತಪಸ್ಸುಮಾಡುತ್ತಿರುವ ಪರಶಿವನನ್ನು ಪಾರ್ವತಿಯಲ್ಲಿ ಅನುರಾಗಿಯನ್ನಾಗಿ ಮಾಡಲೋಸುಗ ಪರಶಿವನ ಸಮೀಪಕ್ಕೆ ಹೋದೆವು. ॥೩೩-೩೪-೩೫॥

ತಪಸ್ಯಭಿರತಂ ದೇವಂ ಊರ್ಧ್ವರೇತಸಮೀಶ್ವರಂ ।
ಸ್ಮರೋಽಪಿ ದೇವಕಾರ್ಯಾರ್ಥಮುದ್ಯುಕ್ತೋ ಭಸ್ಮಸಾತ್ಕೃತಃ ॥೩೬॥

ತಸ್ಯಾಂ ದೇವ್ಯಾಂ ಮಹಾಸೇನಂ ಯದೋತ್ಪನ್ನಂ ಸುರೋತ್ತಮಂ ।
ಸೇನಾಪತ್ಯೇ ನಿಯೋಜ್ಯೈವ ಭವಾಮ ವಿಗತಜ್ವರಾಃ ॥೩೭॥

ಯದತ್ರ ಕಾರ್ಯಮುಚಿತಂ ತಚ್ಛೀಘ್ರಂ ಸಂನಿಧೀಯತಾಂ ।
ತದಾ ದೇವವಚಶ್ಶ್ರುತ್ವಾ ಸಾಶ್ರುನೇತ್ರೋಽಬ್ರವೀದ್ಧರಿಃ ॥೩೮॥

ಮನ್ಮಥಂ ತಂ ತದಾ ನಷ್ಟಂ ಜ್ಞಾತ್ವಾ ಪುತ್ರಂ ದೃಶೇಶಿತುಃ ।
ಲಕ್ಷ್ಮ್ಯಾ ದುಃಖಮವಾಪಾಯಂ ಹರಿರ್ವೈ ಪುತ್ರಕಾರಣಾತ್ ॥೩೯॥

ಉವಾಚ ಚ ತತೋ ದೇವಾನ್ ಕಿಂ ಕೃತಂ ಸ್ವಾರ್ಥಲಿಪ್ಸುಭಿಃ ।
ನಿಯೋಜ್ಯೋ ಹಿ ಪ್ರಸಾದ್ಯೈವ ಹೈಮವತ್ಯಾ ಮಹೇಶ್ವರಃ ॥೪೦॥

---

ಆಗ ಪರಮೇಶ್ವರನು ತಪಸ್ಸಿನಲ್ಲಿ ತೊಡಗಿದ್ದನು. ಅವನ ರೇತಸ್ಸು (ತೇಜಸ್ಸು) ಊರ್ಧ್ವಗಾಮಿಯಾಗುತ್ತಿತ್ತು. ಇಂತಹ ಸಮಯದಲ್ಲಿ ದೇವಸೇನಾಪತಿಯನ್ನು ಪಡೆಯಲಿಷ್ಟದಿಂದ ಮನ್ಮಥನು ಪರಶಿವನನ್ನು ಎಚ್ಚರಗೊಳಿಸಿಬಿಟ್ಟನು. ಅದರಿಂದ ಕುಪಿತನಾದ ಶಂಕರನು ಅಗ್ನಿನೇತ್ರದಿಂದ ಮನ್ಮಥನನ್ನು ಬೂದಿಯನ್ನಾಗಿ ಮಾಡಿದನು. ಈಗ ಮಹಾದೇವನು ಪಾರ್ವತಿಯೊಡಗೂಡಿ ಮಹಾಸೇನಾಪತಿಯೊಬ್ಬನನ್ನು ಕರುಣಿಸಿದರೆ ಆಗ ನಾವು ನಿರ್ಭಯರಾಗಿ ಅವನಿಂದ ಜಯಪಡೆಯುವೆವು.॥೩೬-೩೭॥

ಮಹಾವಿಷ್ಣುವೇ, ಇನ್ನು ಮುಂದೆ ನಾವೇನು ಮಾಡಬೇಕೆಂಬುದನ್ನು ಕರುಣೆಯಿಂದ ಹೇಳು" ಎಂದು ಪ್ರಾರ್ಥಿಸುತ್ತಿರುವ ದೇವಸಮೂಹವನ್ನು ನೋಡುತ್ತಾ ವಿಷ್ಣುವು ತನ್ನ ಪುತ್ರನಾದ ಮನ್ಮಥನು ಪರಶಿವನ ಕೋಪಾಗ್ನಿಗೆ ಆಹುತಿಯಾದುದನ್ನು ಕೇಳಿ, ಲಕ್ಷ್ಮೀದೇವಿಯೊಡಗೂಡಿ ಮೊದಲು ಬಹಳವಾಗಿ ಗೋಳಾಡಿದನು. ಅಂತಹ ಸುಂದರನಾದ ಪುತ್ರನೊಬ್ಬನು ಮೃತನಾದುದಕ್ಕಾಗಿ ವಿಶೇಷ ರೀತಿಯಲ್ಲಿ ವಿಷ್ಣುವು ದುಃಖಿಸಿದನು. ॥೩೮-೩೯॥

ಮತ್ತೆ ದೇವತೆಗಳನ್ನು ಕುರಿತು "ಸ್ವಾರ್ಥಸಾಧಕರಾದ ದೇವತೆಗಳಿರಾ, ನೀವು ನನ್ನ ಸುಕುಮಾರನನ್ನು ಪರಶಿವನ ಕೋಪಾಗ್ನಿಗೆ ಆಹುತಿಮಾಡಿದಿರಲ್ಲಾ! ಸಿಂಹದ ಮುಂದೆ ನರಿಯು ನಿಲ್ಲಬಲ್ಲುದೆ? ಸಿಂಹದ ಒಂದು ಉಗುರಿನ ಹೊಡೆತವ

ಸ್ವಾಸನೇ ಚೋಪಸಂವೇಶ್ಯ ಸುರಾನ್ ಹೈಮಾಸನೇಷು ಚ ।
ಉಪವೇಶ್ಯಾರ್ಹಣಾಂ ಚಕ್ರೇ ಗಂಧಪುಷ್ಪಾದಿಭಿಸ್ತದಾ ॥೩೦॥

ಶಿವನೈವೇದ್ಯಶೇಷೇಣ ವಿಧಿನಾ ಭೋಜ್ಯ ಸತ್ತಮಃ ।
ಉವಾಚ ದೇವಸ್ತಾನ್ ದೇವಾನ್ ಬ್ರಹ್ಮೇಂದ್ರಪ್ರಮುಖಾನ್ ಹರಿಃ ॥೩೧॥

॥ ಹರಿರುವಾಚ ॥

ಕುತಸ್ಸಮಾಗತಂ ಸರ್ವೇ ಕಿಂ ವಃ ಕಾರ್ಯಂ ಉಪಸ್ಥಿತಂ ।
ತ್ರಿಶೂಲಪಾಣಿಸ್ಮರಣಾತ್ಕರವಾಣಿ ಚ ವೋ ಮುದಂ ॥೩೨॥

ತದಾ ವಿಷ್ಣುವಚಶ್ಶ್ರುತ್ವಾ ವಿಬುಧಾಃ ಪ್ರವಚನ್ನ ಚಃ ।
ವಿಧಿನಾ ತೇ ತದಾ ವಿಷ್ಣುಂ ತಾರಕಾಸುರಸಂಗರಃ ॥೩೩॥

ಪರಾಜಯಂ ಚ ಸರ್ವೇಷಾಂ ವಿಬುಧಾನಾಂ ಚ ವಿಷ್ಣವೇ ॥೩೪॥

॥ ಸುರಾ ಊಚುಃ ॥

ಸಂಗತ್ಯ ಸರ್ವೇ ವಿಬುಧಾಃ ವಯಂ ಸ್ಮರಯುತಾ ಹರೇ ।
ಗತಾ ಯೋಕ್ತುಂ ಮಹಾದೇವೇ ದೇವೀಂ ಗಿರಿಸುತಾಂ ತದಾ ॥೩೫॥

---

ಕೊಟ್ಟು ಕುಳ್ಳಿರಿಸಿದನು. ಅನಂತರ ಗಂಧಪುಷ್ಪಾದಿಗಳಿಂದ ಅವರನ್ನು ವಿಧವಿಧವಾಗಿ ಪೂಜಿಸಿ ಸತ್ಕರಿಸಿದನು. ॥೨೯-೩೦॥

ಶಿವನೈವೇದ್ಯಶೇಷವನ್ನು ಸಕಲ ದೇವತೆಗಳೊಡನೆ ವಿಷ್ಣುವೂ ಭುಂಜಿಸಿದನು. ಅನಂತರ ವಿಷ್ಣುವು ದೇವತೆಗಳನ್ನು ಕುರಿತು "ಸುರಶ್ರೇಷ್ಠರಿರಾ, ನೀವು ಏತಕ್ಕಾಗಿ ಇಲ್ಲಿಗೆ ಇಷ್ಟು ಆತುರದಿಂದ ಬಂದಿರುವಿರಿ. ನಿಮ್ಮ ಕಷ್ಟಗಳನ್ನು ಹೇಳಿರಿ. ಶಿವನಾಮ ಸ್ಮರಣೆಯಿಂದ ನಿಮಗೆ ಸುಖವನ್ನುಂಟುಮಾಡುವೆನು" ॥೩೧-೩೨॥

ಹಾಗೆ ಹೇಳಿದ ವಿಷ್ಣುವಿನ ಮಾತನ್ನು ಕೇಳಿ ದೇವತೆಗಳು ಬ್ರಹ್ಮನ ಮೂಲಕ ತಾರಕಾಸುರನ ಹಾವಳಿಯನ್ನೂ, ತಾರಕಾಸುರನಿಂದ ತಮಗಾದ ಪರಾಭವವನ್ನೂ, ದೇವತೆಗಳಿಗೊದಗಿದ ಕಷ್ಟದ ಸನ್ನಿವೇಶವನ್ನೂ ತಿಳಿಯಪಡಿಸಿದರು. ಮುಂದು ವರಿದು ಈರೀತಿ ನುಡಿದರು "ಮಹಾವಿಷ್ಣುವೇ, ನಾವೆಲ್ಲರೂ ಮನ್ಮಥನೊಡಗೂಡಿ, ತಪಸ್ಸುಮಾಡುತ್ತಿರುವ ಪರಶಿವನನ್ನು ಪಾರ್ವತಿಯಲ್ಲಿ ಅನುರಾಗಿಯನ್ನಾಗಿ ಮಾಡಲೋಸುಗ ಪರಶಿವನ ಸಮೀಪಕ್ಕೆ ಹೋದೆವು. ॥೩೩-೩೪-೩೫॥

ತಪಸ್ಯಭಿರತಂ ದೇವಂ ಊರ್ಧ್ವರೇತಸಮೀಶ್ವರಂ ।
ಸ್ಮರೋಽಪಿ ದೇವಕಾರ್ಯಾರ್ಥಮುದ್ಯುಕ್ತೋ ಭಸ್ಮಸಾತ್ಕೃತಃ ॥೩೬॥

ತಸ್ಯಾಂ ದೇವ್ಯಾಂ ಮಹಾಸೇನಂ ಯದೋತ್ಪನ್ನಂ ಸುರೋತ್ತಮಂ ।
ಸೇನಾಪತ್ಯೇ ನಿಯೋಕ್ಷ್ಯೈವ ಭವಾಮ ವಿಗತಜ್ವರಾಃ ॥೩೭॥

ಯದತ್ರ ಕಾರ್ಯಮುಚಿತಂ ತಚ್ಛೀಘ್ರಂ ಸಂನಿಧೀಯತಾಂ ।
ತದಾ ದೇವವಚಶ್ಶ್ರುತ್ವಾ ಸಾಶ್ರುನೇತ್ರೋಽಬ್ರವೀದ್ಧರಿಃ ॥೩೮॥

ಮನ್ಮಥಂ ತಂ ತದಾ ನಷ್ಟಂ ಜ್ಞಾತ್ವಾ ಪುತ್ರಂ ದೃಶೇಶಿತುಃ ।
ಲಕ್ಷ್ಮ್ಯಾ ದುಃಖಮವಾಪಾಯಂ ಹರಿರ್ವೈ ಪುತ್ರಕಾರಣಾತ್ ॥೩೯॥

ಉವಾಚ ಚ ತತೋ ದೇವಾನ್ ಕಿಂ ಕೃತಂ ಸ್ವಾರ್ಥಲಿಪ್ಸುಭಿಃ ।
ನಿಯೋಜ್ಯೋ ಹಿ ಪ್ರಸಾದ್ಯೈವ ಹೈಮವತ್ಯಾ ಮಹೇಶ್ವರಃ ॥೪೦॥

---

ಆಗ ಪರಮೇಶ್ವರನು ತಪಸ್ಸಿನಲ್ಲಿ ತೊಡಗಿದ್ದನು. ಅವನ ರೇತಸ್ಸು (ತೇಜಸ್ಸು) ಊರ್ಧ್ವಗಾಮಿಯಾಗುತ್ತಿತ್ತು. ಇಂತಹ ಸಮಯದಲ್ಲಿ ದೇವಸೇನಾಪತಿಯನ್ನು ಪಡೆಯಲಿಷ್ಟದಿಂದ ಮನ್ಮಥನು ಪರಶಿವನನ್ನು ಎಚ್ಚರಗೊಳಿಸಿಬಿಟ್ಟನು. ಆದರಿಂದ ಕುಪಿತನಾದ ಶಂಕರನು ಅಗ್ನಿನೇತ್ರದಿಂದ ಮನ್ಮಥನನ್ನು ಬೂದಿಯನ್ನಾಗಿ ಮಾಡಿದನು. ಈಗ ಮಹಾದೇವನು ಪಾರ್ವತಿಯೊಡಗೂಡಿ ಮಹಾಸೇನಾಪತಿಯೊಬ್ಬನನ್ನು ಕರುಣಿಸಿದರೆ ಆಗ ನಾವು ನಿರ್ಭಯರಾಗಿ ಅವನಿಂದ ಜಯಪಡೆಯುವೆವು.॥೩೬-೩೭॥

ಮಹಾವಿಷ್ಣುವೇ, ಇನ್ನು ಮುಂದೆ ನಾವೇನು ಮಾಡಬೇಕೆಂಬುದನ್ನು ಕರುಣೆಯಿಂದ ಹೇಳು'' ಎಂದು ಪ್ರಾರ್ಥಿಸುತ್ತಿರುವ ದೇವಸಮೂಹವನ್ನು ನೋಡುತ್ತಾ ವಿಷ್ಣುವು ತನ್ನ ಪುತ್ರನಾದ ಮನ್ಮಥನು ಪರಶಿವನ ಕೋಪಾಗ್ನಿಗೆ ಆಹುತಿಯಾದುದನ್ನು ಕೇಳಿ, ಲಕ್ಷ್ಮೀದೇವಿಯೊಡಗೂಡಿ ಮೊದಲು ಬಹಳವಾಗಿ ಗೋಳಾಡಿದನು. ಅಂತಹ ಸುಂದರನಾದ ಪುತ್ರನೊಬ್ಬನು ಮೃತನಾದುದಕ್ಕಾಗಿ ವಿಶೇಷ ರೀತಿಯಲ್ಲಿ ವಿಷ್ಣುವು ದುಃಖಿಸಿದನು. ॥೩೮-೩೯॥

ಮತ್ತೆ ದೇವತೆಗಳನ್ನು ಕುರಿತು ‘‘ ಸ್ವಾರ್ಥಸಾಧಕರಾದ ದೇವತೆಗಳಿರಾ, ನೀವು ನನ್ನ ಸುಕುಮಾರನನ್ನು ಪರಶಿವನ ಕೋಪಾಗ್ನಿಗೆ ಆಹುತಿಮಾಡಿದಿರಲ್ಲಾ! ಸಿಂಹದ ಮುಂದೆ ನರಿಯು ನಿಲ್ಲಬಲ್ಲುದೆ? ಸಿಂಹದ ಒಂದು ಉಗುರಿನ ಹೊಡೆತವ

ಸಿಂಹಸ್ಯ ಪುರತೋ ದೇವಾ ನಿಯುಕ್ತೋ ಕ್ರೋಷ್ಟುಕೋಽಬಲಃ ।
ತಸ್ಮಾತ್ರ ನಖರಾಘಾತಂ ಸ್ಮರಃ ಕಿಂ ಪ್ರಸಹಿಷ್ಯತಿ ॥೪೧॥

ಕಿಂ ವಾ ಪ್ರಸಾದಿತಸ್ತೇನ ಪುನರುಜ್ಜೀವನೇ ಸ್ಮರಃ ।
ರತ್ಯಾಪ್ರಲಾಪಮಾಕರ್ಣ್ಯ ಸಹಮಾನೇನ ಕಿಂ ಸುರಾಃ ॥೪೨॥

॥ ದೇವಾ ಊಚುಃ ॥

ರತ್ಯಾ ಪ್ರಸಾದಿತಸ್ತತ್ರ ಮಹಾದೇವೋ ಬ್ರವೀತ್ತದಾ ।
ಹೈಮವತ್ಯಾ ಸಮೇಷ್ಯಾಮಿ ಶೀಘ್ರಮೇವ ನ ಸಂಶಯಃ ॥೪೩॥

ಮತ್ಕಟಾಕ್ಷಫಲವೇನೈವ ಸಮುಜ್ಜೀವತಿ ತೇ ಪತಿಃ ।
ಸರ್ವೇಷಾಮಪ್ಯನಂಗೋಽಯಂ ತ್ವಯಿ ಸಾಂಗೋಽಸ್ತು ಮಾ ಶುಚ ॥೪೪॥

ಇತ್ಯುಕ್ತ್ವಾ ಪ್ರೇಷಯಂಸ್ತತ್ರ ಮಹಾದೇವಸ್ತದಾ ಹರೇ ।
ಸ ತಚ್ಛ್ರುತ್ವಾ ದೇವವಚೋ ಹರ್ಷಂ ಲೇಭೇ ಹರಿಸ್ತದಾ ॥೪೫॥

---

ನ್ನಾದರೂ ನರಿಯು ಸಹಿಸಬಲ್ಲುದೆ? ದುರ್ಬಲನಾದ ಮನ್ಮಥನು ಮಹಾತೇಜಸ್ವಿಯಾದ ಶಂಕರನನ್ನು ಪ್ರತಿಭಟಿಸಬಲ್ಲನೆ? ಅನ್ಯಾಯ ಮಾಡಿದಿರಲ್ಲಾ! ಅದಿರಲಿ. ಜೊತೆಯಲ್ಲಿ ರತೀದೇವಿಯಿರಲಿಲ್ಲವೆ? ಅವಳ ಪ್ರಲಾಪಕ್ಕಾಗಿ ಶಂಕರನು ಮರುಗಿದನೇ?" ಈ ವಿಷಯವನ್ನು ನನಗೆ ತಿಳಿಸಿ ಎಂದನು. ॥೪೧-೪೨॥

ದೇವತೆಗಳು ವಿಷ್ಣುವಿನೊಡನೆ "ಮಹಾವಿಷ್ಣುವೇ, ದುಃಖಿಸಬೇಡ. ರತಿಯ ಪ್ರಲಾಪಕ್ಕೆ ಮರುಗಿ ಪರಶಿವನು, ತಾನು ಪಾರ್ವತಿಯನ್ನು ವರಿಸುವೆನೆಂದೂ, ತನ್ನ ಕೃಪಾಕಟಾಕ್ಷದ ಫಲವಾಗಿ ಮನ್ಮಥನು ಮತ್ತೆ ಜನಿಸುವನೆಂದೂ ಈಗ ದಗ್ಧನಾಗಿ ಅನಂಗನಾದರೂ, ರತೀದೇವಿಯ ವಿಷಯದಲ್ಲಿ ಮಾತ್ರ ಅಂಗಸಹಿತನಾಗಿರುವನೆಂದೂ ಕರುಣಿಸಿರುವನು" ಎಂದು ಹೇಳಿದರು. ॥೪೩-೪೪॥

ಹೀಗೆಂದ ದೇವತೆಗಳ ಮಾತನ್ನು ಕೇಳಿ ಹರಿಯು ಸಂತೋಷಗೊಂಡು, ಮುಂದೆ ತಾರಕಾಸುರನನ್ನು ಕೊಲ್ಲಿಸುವ ಸಲುವಾಗಿ, ದೇವಸೇನಾಪತಿಯೊಬ್ಬನನ್ನು ಪಡೆಯಲು ಮೊದಲು ಪಾರ್ವತೀವಿವಾಹವನ್ನು ನೆರವೇರಿಸಬೇಕೆಂದು ಬ್ರಹ್ಮನೊಡನೆ

ಬ್ರಹ್ಮಣಾ ಚಾಥ ಸಂಮಂತ್ರ್ಯ ದೇವೋದ್ವಾಹಾಯ ತತ್ರ ವೈ
ತಾರಕಸ್ಯ ವಿನಾಶಾರ್ಥಂ ದೇವಾನಾಂ ಚ ತಥಾ ಮುದೇ ॥೪೬॥

ಪುನಃ ಸ್ಮರೋಜ್ಜೀವನಾರ್ಥಂ ಉದ್ವಾಹಾರ್ಥಂ ತಥೇಶಿತುಃ ।
ನಾರದಂ ಚ ಸಮಾಹೂಯ ಪ್ರೇಷಯದ್ಧಿಮಭೂಧರಂ ॥೪೭॥

॥ ಹರಿರುವಾಚ ॥

ನಾರದಾಗಚ್ಛ ಭದ್ರಂ ತೇ ಯಾಹಿ ತಂ ಹಿಮಭೂಧರಂ ।
ತಪಸ್ಯಂತೀಂ ಮಹಾದೇವೀಂ ಕೇದಾರೇಶಾರ್ಚನೇ ರತಾಂ ॥೪೮॥

ಪ್ರದೇಹಿ ದೇವದೇವಾಯ ಮಹಾದೇವಾಯ ಶಾಂಭವೇ ।
ತೇನ ತೇ ಕುಲಮುತ್ಕೃಷ್ಟಂ ಭವೇದ್ಗಿರಿವರೇಷು ಚ ॥೪೯॥

ಪ್ರಯಾಮ ಸರ್ವೇ ದೇವೇನ ತವ್ಯೆವ ಶಿಖರಂ ಗಿರೇ ।
ತದತ್ರ ಸಂವಿಧಸ್ವಾಶು ಅಮುನಾ ವಿಶ್ವಕರ್ಮಣಾ ॥೫೦॥

---

ಆಲೋಚಿಸಿದನು. ಆದರಿಂದಲೇ ದೇವತೆಗಳಿಗೆ ಸಂತೋಷವೊದಗುವುದೆಂದೂ ತೀರ್ಮಾನಿಸಿಕೊಂಡನು. ||೪೫-೪೬||

ಮತ್ತೆ ಮನ್ಮಥನನ್ನು ಬದುಕಿಸುವುದಕ್ಕೂ ಪಾರ್ವತೀಪರಿಣಯವೇ ಮುಖ್ಯ ಸಾಧನವೆಂದು ತಿಳಿದು ವಿಷ್ಣುವು ನಾರದಮುನಿಯನ್ನು ಕರೆದು, ಗಿರಿರಾಜನ ಸಮೀಪಕ್ಕೆ ಹೋಗಿ ಹೀಗೆ ಹೇಳಲು ಅಪ್ಪಣೆ ಮಾಡಿದನು. “ಅಯ್ಯಾ ಗಿರಿರಾಜನೇ, ನಿನ್ನ ಮಗಳಾದ ಪಾರ್ವತಿಯು ಕೇದಾರೇಶ್ವರನನ್ನು. ಅರ್ಚಿಸುತ್ತಾ ತಪೋನಿರತಳಾಗಿ ಗಿರಿಶಿಖರದಲ್ಲಿ ನೆಲಸಿರುವಳಷ್ಟೆ.! ||೪೭-೪೮||

ಅಂತಹ ನಿನ್ನ ಕುಲಪುತ್ರಿಯನ್ನು ಮಹಾದೇವನಿಗೆ ಕೊಟ್ಟು ವಿವಾಹ ಮಾಡು. ಆದರಿಂದ ನೀನೂ ನಿನ್ನ ಕುಲವೂ ಉದ್ಧಾರವಾಗುವುದು” ಎಂಬ ಈ ಮಾತನ್ನು ಗಿರಿರಾಜನಿಗೆ ಹೇಳಿ ಅದಕ್ಕೊಪ್ಪಿಸು ಎಂದು ನಾರದನಿಗೆ ಹೇಳುತ್ತಾ ವಿಷ್ಣುವು “ಅಯ್ಯಾ ನಾರದಮಹರ್ಷಿಯೇ, ಇದಕ್ಕಾಗಿ ನಾವೂ ಸಹ ಈಗಲೇ ಹಿಮಗಿರಿ ಶಿಖರಕ್ಕೆ ಹೊರಡಲಿರುವೆವು. ನಾವು ಅಲ್ಲಿ ವಾಸಿಸುವುದಕ್ಕಾಗಿಯೂ, ಪಾರ್ವತೀ ಪರಿಣಯವು ಬಹು ವಿಜೃಂಭಣೆಯಿಂದ ನಡೆಯುವುದಕ್ಕಾಗಿಯೂ, ಈ ವಿಶ್ವಕರ್ಮನನ್ನು ಜೊತೆಯಲ್ಲಿ ಕರೆದುಕೊಂಡುಹೋಗಿ, ಇವನಿಂದ ದಿವ್ಯಮಂಟಪವೊಂದನ್ನು ನಿರ್ಮಾಣಮಾಡಿಸು” ಎಂದು ಆಜ್ಞಾಪಿಸಿದನು. ||೪೯-೫೦||

ವಿಶ್ವಕರ್ಮಾಣಮಾಹೂಯ ವಿಷ್ಣುರ್ವಚನಮಬ್ರವೀತ್ ॥೫೧॥

॥ ವಿಷ್ಣುರುವಾಚ ॥

ವಿಶ್ವಕರ್ಮನ್ ಹಿಮಗಿರಿಂ ನಾರದೇನ ವ್ರಜಾಧುನಾ ।
ತತ್ರ ತಚ್ಛಿಖರೇ ರಮ್ಯೇ ಹರಸ್ಯೋದ್ವಾಹಸಂಭ್ರಮೇ ॥೫೨॥

ಸುರಾಣಾಂ ಭೂಸುರಾಣಾಂ ಚ ಪ್ರಮಥಾನಾಂ ಮಹಾತ್ಮನಾಂ ।
ಅಸಂಬಾಧಂ ಸುವಿಸ್ತೀರ್ಣಂ ನಾನಾರತ್ನೈಕಭಾಸುರಂ ॥೫೩॥

ಮಂಟಪಾಲಿಂ ಕುರುಷ್ವಾಢ್ಯ ನಾನಾವಿಭವವಿಸ್ತರಂ ।
ಭಕ್ಷ್ಯಭೋಜ್ಯಾನ್ನಸಹಿತಂ ಫಲಮೂಲಜಲಾವೃತಂ ॥೫೪॥

ಸಿಂಹಾಸನಂ ಮಹೇಶಸ್ಯ ಸ್ವಯಂವರಕೃತಾಸನಂ ।
ಮಣಿಭಿಃ ಖಚಿತಂ ತತ್ರ ಮುಕ್ತಾಮಾಲಾಪರಿಷ್ಕೃತಂ ॥೫೫॥

ಸುಗಂಧಪುಷ್ಪಮಾಲಾಢ್ಯಮಮ್ಲಾನೈಶ್ಚ ಸುಪಂಕಜೈಃ ।
ಪತಾಕಾಕುಂಭಸಹಿತಂ ವಿತಾನೋತ್ತಾನಿತಾಂಬರಂ ॥೫೬॥

---

ಮತ್ತು ಅಲ್ಲಿಯೇ ಇದ್ದ ವಿಶ್ವಕರ್ಮನನ್ನು ಕರೆದು “ ವಿಶ್ವಕರ್ಮನೇ ಈಗಲೇ ನೀನು ನಾರದನೊಡಗೂಡಿ ಹಿಮಗಿರಿಶಿಖರಕ್ಕೆ ಹೋಗು. ಅಲ್ಲಿ ಶಿವಶಿವೆಯರ ವಿವಾಹವು ನಡೆಯುವುದು. ತದರ್ಥವಾಗಿ ಒಂದು ದಿವ್ಯಮಂಟಪವನ್ನು ನಿರ್ಮಿಸು. ಅದು ದೇವತೆಗಳಿಗೂ, ಬ್ರಾಹ್ಮಣರಿಗೂ, ಪ್ರಮಥಗಣಗಳಿಗೂ ಆಶ್ರಯ ಕೊಡುವಂತೆ ವಿಸ್ತಾರವಾಗಿರಬೇಕು. ನಾನಾರತ್ನಸಮೂಹಗಳಿಂದ ಅದು ಶೋಭಿಸುತ್ತಿರುವಂತೆ ನಿರ್ಮಾಣಮಾಡು. ॥೫೨-೫೩॥

ಆ ವಿವಾಹಮಂಟಪದಲ್ಲಿ ನಾನಾವೈಭವಯುತಗಳಾದ ವಸ್ತುಗಳಿರುವಂತೆ ಮಾಡು. ಭಕ್ಷ್ಯ, ಭೋಜ್ಯಾದಿಗಳೂ, ಖುಷ್ಯಾಹಾರವಾದ ಕಂದಮೂಲಾದಿಗಳು ಇವೆಲ್ಲವೂ ಇರುವಂತೆ ಏರ್ಪಡಿಸು. ಮಹೇಶ್ವರನು ಕುಳಿತುಕೊಳ್ಳಲು ಮುಕ್ತಾಹಾರಗಳಿಂದಲೂ, ನವರತ್ನಗಳಿಂದಲೂ ಹೊಳೆಯುವ ದಿವ್ಯಸಿಂಹಾಸನವೊಂದನ್ನು ನಿರ್ಮಾಣಮಾಡು. ॥೫೪-೫೫॥

ವಿವಾಹಮಂಟಪವು ಸುಗಂಧಮಯವಾದ ಪುಷ್ಪಮಾಲೆಗಳಿಂದಲೂ, ಯಾವಾಗಲೂ ಬಾಡದಿರುವ ಕಮಲಪುಷ್ಪಗಳಿಂದಲೂ, ಅಲಂಕೃತವಾಗಿರಲಿ.

ಮಣಿದೀಪೈಸ್ತಥಾ ಧೂಪೈಃ ಕೌಪಾಸ್ತೀರ್ಣೋಪಧಾನಕೈಃ ।
ಕುರು ತ್ವಂ ದೇವದೇವಸ್ಯ ಉದ್ವಾಹೋಚಿತಮಾದರಾತ್ ॥೫೭॥

ಅನಲ್ಪಶಿಲ್ಪಸಹಿತಂ ಶಿಲ್ಪಿಭಿಸ್ತ್ವಂ ವ್ರಜಾಧುನಾ ।
ಸ ವಿಶ್ವಕರ್ಮಾ ವಚನಾನ್ನಾರದೇನ ಯಯೌ ದ್ರುತಂ ॥೫೮॥

ನತ್ವಾ ವಿಷ್ಣುವಿಧೀನ್ ದೇವಾಂಛಿವಾರ್ಪಿತಹೃದಂತರಃ ।
ಸಂಗತೌ ಗಿರಿರಾಜಾನಂ ತೌ ತೇನಾಪ್ಯರ್ಚಿತೌ ತದಾ ॥೫೯॥

ಪ್ರೀತಿಮೀಯತುರುದ್ಯುಕ್ತೌ ವಾಚಂ ತಾವೂಚತುರ್ಗಿರಿಂ ॥೬೦॥

॥ ನಾರದವಿಶ್ವಕರ್ಮಾಣಾವೂಚತುಃ ॥

ಬ್ರಹ್ಮವಿಷ್ಣ್ವಾದಿಭಿರ್ದೇವೈರಾಜ್ಞಪ್ತೌ ತ್ವಾಂ ಸಮಾಗತೌ ।
ದೇವಾಯ ದೇಯಾ ದೇವೀ ಸಾ ತ್ವಯಾ ಭೂಧರಸತ್ತಮ ॥೬೧॥

ತ್ವಂ ಕೃತಾರ್ಥೀ ಕುರು ಕ್ಷಿಪ್ರಮಾತ್ಮಾನಂ ಗಿರಿಭಿಸ್ಸಹ ।
ಧನ್ಯೋ ಮಾನ್ಯೋಽಸಿ ತ್ವಂ ಸರ್ವೈಃ ಶರ್ವಾಯ ತ್ವಂ ಮಹೇಶ್ವರೀಂ ॥೬೨॥

---

ಕಲಶ ಕನ್ನಡಿಗಳೂ, ಧ್ವಜಪತಾಕೆಗಳೂ, ಸುಂದರವಾದ ಮೇಲ್ಕಟ್ಟುಗಳೂ ಮಧ್ಯೆ ಮಧ್ಯೆ ರತ್ನಮಯದೀಪಗಳೂ, ಸುಗಂಧವನ್ನು ಬೀರುವ ಧೂಪಗಳೂ, ಮೆತ್ತನೆಯ ತಲೆದಿಂಬುಗಳೂ ಆ ಮಂಟಪವನ್ನು ಅಲಂಕರಿಸಲಿ. ಶಿಲ್ಪಶಾಸ್ತ್ರದಲ್ಲಿ ಅತ್ಯಂತ ನಿಪುಣರಾದವರೊಡಗೂಡಿ ಈಗಲೇ ಗಿರಿಶಿಖರಕ್ಕೆ ಹೊರಡು, ಎಂದು ವಿಷ್ಣುವು ಹೇಳಲು, ವಿಶ್ವಕರ್ಮನು ಮಹಾವಿಷ್ಣುವಿನ ಮಾತಿನಂತೆ ನಾರದಮಹರ್ಷಿಯೊಡಗೂಡಿ ಹಿಮವದ್ಗಿರಿಶಿಖರವನ್ನು ಕುರಿತು ಪ್ರಯಾಣ ಮಾಡಿದನು. ॥೫೬-೫೭-೫೮॥

ನಾರದ ವಿಶ್ವಕರ್ಮರಿಬ್ಬರೂ, ಬ್ರಹ್ಮವಿಷ್ಣುಗಳಿಗೆ ವಂದಿಸಿ, ದೇವತೆಗಳನ್ನೆಲ್ಲಾ ಬೀಳ್ಕೊಂಡು, ಪರಶಿವನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಾ ಗಿರಿರಾಜನಾದ ಹಿಮವಂತನ ಬಳಿಗೆ ಬಂದರು. ಗಿರಿರಾಜನು ಅತಿಥಿಗಳಾಗಿ ಬಂದ ನಾರದ ವಿಶ್ವಕರ್ಮರಿಬ್ಬರನ್ನೂ ಎದುರ್ಗೊಂಡು ಸತ್ಕಾರಗಳಿಂದ ತೃಪ್ತಿಪಡಿಸಿದನು. ಆಗ ನಾರದ ವಿಶ್ವಕರ್ಮರು ಗಿರಿರಾಜನನ್ನು ಈ ರೀತಿ ಪ್ರಾರ್ಥಿಸಿದರು. ॥೫೯-೬೦॥

"ಗಿರಿರಾಜನೇ, ನಿನ್ನ ಮಗಳಾದ ಪಾರ್ವತಿಯನ್ನು ಪರಶಿವನಿಗೆ ಕೊಟ್ಟು ವಿವಾಹಮಾಡಬೇಕೆಂದು ಬ್ರಹ್ಮವಿಷ್ಣ್ವಾದಿಗಳು ನಮ್ಮ ಮೂಲಕ ನಿನಗೆ ತಿಳಿಸುತ್ತಿರು

ತ್ರಿನೇತ್ರಂ ಪಾತ್ರಮುತ್ಕೃಷ್ಟಂ ಕನ್ಯಾಂ ಧನ್ಯಾಂ ಪ್ರಸಾದಯ ।
ಯತ್ಪಾದಪಂಕಜಪ್ರೀತ್ಯೈ ದಾನಾನಿ ಕುರುತೇ ಮುದಾ ॥೬೩॥

ಷೋಡಶೈರ್ಮುನಿಭಿರ್ದೇವೈಃ ರಾಜಭಿಶ್ಚ ನಗೋತ್ತಮ ।
ಯತ್ಪಾದಪಂಕಜಪ್ರೀತ್ಯೈ ಕರ್ಮಾಣಿ ಕುರುತೇ ನರೈಃ ॥೬೪॥

ತಮೇವ ಶರಣಂ ಯಾಹಿ ಗಿರೇ ದೇವ್ಯಾಃ ಪ್ರದಾನತಃ ।
ಕಾರಣಂ ತನ್ನಿಮಿತ್ತಂ ಚ ಮಾಯಾ ಸಾ ಸ ಪುಮಾನ್ ಹರಃ ॥೬೫॥

ಯಯೋರ್ಜಾತಮಿದಂ ವಿಶ್ವಂ ತ್ರೈಲೋಕ್ಯಂ ಸಚರಾಚರಂ ।
ಸುರಾಣಾಂ ವಚನೇನೈವಮಾವಾಭ್ಯಾಂ ಪ್ರೋಕ್ತಮೇವ ತೇ ॥೬೬॥

---

ವರು. ಹೀಗೆ ಪರಮೇಶ್ವರನಿಗೆ ಕನ್ಯಾದಾನಮಾಡುವುದರ ಮೂಲಕ ನೀನು, ನಿನ್ನ ವಂಶದ ಇತರ ಪರ್ವತಗಳೊಡನೆ ಕೃತಾರ್ಥನಾಗುವೆ. ಅಷ್ಟು ಅಲ್ಲದೆ ಪ್ರಪಂಚದಲ್ಲಿರುವ ಸರ್ವರೂ ನಿನ್ನನ್ನು ಧನ್ಯನೆಂದು ಭಾವಿಸಿ ಪೂಜಿಸುವರು. ॥೬೧-೬೨॥

ಈಗ ನೀನು ಕನ್ಯಾದಾನಮಾಡುವುದಾದರೆ ಶಂಕರನಿಗಿಂತ ಉತ್ತಮನಾದ ಪಾತ್ರ ವರನೊಬ್ಬನು ಬೇರೆ ಇರುವನೆ? ಸಕಲ ದಾನಗಳನ್ನೂ ಈಶ್ವರಾರ್ಪಣಬುದ್ಧಿಯಿಂದ ಈಶ್ವರತೃಪ್ತಿಗಾಗಿಯೇ ಮಾಡುವರು. ಹಿಂದೆ ಅನೇಕ ರಾಜಾಧಿರಾಜರು, ಮುನಿಜನರೂ ಷೋಡಶಮಹಾದಾನಗಳನ್ನು ಪರಶಿವನು ತೃಪ್ತನಾಗಲಿ ಎಂಬ ಉದ್ದೇಶದಿಂದಲೇ ನೆರವೇರಿಸಿರುವರು. ॥೬೩-೬೪॥

ಆದ್ದರಿಂದ ನೀನು ನಿನ್ನ ಪುತ್ರಿಯನ್ನು ಸ್ವಾಮಿಗೆ ಅರ್ಪಿಸುವುದರ ಮೂಲಕ ಮಹಾದೇವನನ್ನೇ ಶರಣುಹೊಂದು. ಪ್ರಪಂಚವನ್ನು ಬೆಳೆಸುವ ನಿಮಿತ್ತದಿಂದಲೇ ಮಾಯಾರೂಪಿಣಿಯಾದ ದೇವಿಯು ನಿನ್ನ ಮಗಳಾಗಿಯೂ, ಪುರುಷರೂಪಿಯಾದ ಮಹಾದೇವನು ಶಂಕರರೂಪದಿಂದಲೂ ಈಗ ತೋರುತ್ತಿರುವರು. ಅವರಿಬ್ಬರ ಸಂಪರ್ಕದಿಂದಲೇ ಈ ಚರಾಚರಾತ್ಮಕವಾದ ಪ್ರಪಂಚವೆಲ್ಲಾ ಆವಿರ್ಭವಿಸಿರುವುದು. ಈ ವಿಷಯವನ್ನೆಲ್ಲಾ ದೇವತೆಗಳು ನಮಗೆ ತಿಳಿಸಿ ನಮ್ಮಿಂದ ನಿನಗೆ ಈಗ ತಿಳಿಯಪಡಿಸುತ್ತಿರುವರು. ॥೬೫-೬೬॥

ತ್ವದೀಯೋ ಶಿಖರೇ ಚಾರು ಚಿತ್ರಮಂಟಪಗೋಪುರಂ ।
ನಿರ್ಮಾತುಮುಹಮಿಚ್ಛಾಮಿ ದೇವೋದ್ವಾಹಾಯ ಮಂಗಲಂ ॥೬೭॥

ಸಮಾಜ್ಞಾಪಯ ಶೈಲೇಶ ದ್ರುತಂ ದೇವವಚೋ ಯಥಾ ।
ವಿಶ್ವಕರ್ಮಾ ನಾರದೋಕ್ತವಚಸಾ ಹರ್ಷಿತೋ ನಗಃ ॥೬೮॥

ಪ್ರಾಹ ಪ್ರಾಂಜಲಿರೇವೇತ್ಥಂ ತದಾ ಸ ಗಿರಿರಾಣ್ಮುದಾ ॥೬೯॥

॥ ಶೈಲೇಶ್ವರ ಉವಾಚ ॥

ಧನ್ಯೋಽಹಂ ಸರ್ವಮಾನ್ಯೋಽಹಂ ದೇವಾನಾಂ ವಚನಂ ಯಥಾ ।
ದದಾಮಿ ಕನ್ಯಾಂ ದೇವಾಯ ಮಹಾದೇವಾಯ ಶಂಭವೇ ॥೭೦॥

ಕಾರಣಂ ಲೋಕವಾದೋತ್ರ ಸೈವ ದೇವೀ ಸನಾತನೀ ।
ಮಾಯಾ ಸಾ ಪುರುಷೋ ದೇವೋ ಮಹಾದೇವೋ ಮಹೇಶ್ವರಃ ॥೭೧॥

ಯದತ್ರ ಸಂವಿಧಾತವ್ಯಂ ದೇವೋದ್ವಾಹನಕರ್ಮಣಿ ।
ವಿಶ್ವಕರ್ಮನ್ನಮಸ್ತೇಸ್ತು ತತ್ಕುರುಷ್ವಾವಿಚಾರಿತಂ ॥೭೨॥

---

ಪಾರ್ವತೀಪರಿಣಯದ ನಿಮಿತ್ತವಾಗಿ ಒಂದು ದೊಡ್ಡ ಮಂಟಪವನ್ನು ಚಿತ್ರವಿಚಿತ್ರವಾದ ಗೋಪುರಾದಿಗಳಿಂದ ನಿರ್ಮಿಸಲು ನಾನೇ ಇಲ್ಲಿಗೆ ಈಗ ಬಂದಿರುವೆನು. ಗಿರಿರಾಜನೇ ನಮಗೆ ಜಾಗ್ರತೆ ಅಪ್ಪಣೆಕೊಡು" ಎಂದು ವಿಶ್ವಕರ್ಮ ಮತ್ತು ನಾರದರು ಪ್ರಾರ್ಥಿಸಲು ಸಂತೋಷದಿಂದ ಹಿಗ್ಗುತ್ತಾ ಹಿಮವಂತನು ಹೀಗೆಂದನು. ॥೬೭-೬೮-೬೯॥

"ಆಹಾ ಈಗ ನಾನು ಧನ್ಯನಾದೆನು. ಸರ್ವರಿಂದಲೂ ನಾನು ಪೂಜ್ಯನೆನಿಸಿದೆನು. ದೇವತೆಗಳ ಅಪ್ಪಣೆಯಂತೆ ಈಗಲೇ ನಾನು ಶಂಕರನಿಗೆ ಕನ್ಯಾದಾನ ಮಾಡಲು ಸಿದ್ಧನಿರುವೆನು. ನನ್ನ ಮಗಳೆನಿಸಿದ ಪಾರ್ವತಿಯು ಸನಾತನಿಯಾದ ಮಾಯೆಯೆಂದೂ, ಪುರುಷನೇ ಸಾಕ್ಷಾನ್ಮಹಾದೇವನೆಂದೂ ಲೋಕವಾದವಿರುವುದು. ಇದೇ ತತ್ತ್ವವನ್ನೇ ದೇವತೆಗಳೂ ಹೇಳುತ್ತಿರುವರು. ॥೭೦-೭೧॥

ವಿಶ್ವಕರ್ಮನೇ, ನಿನಗೆ ನಮಸ್ಕಾರ. ಈ ಗಿರಿಜಾವಿವಾಹಕರ್ಮಾಂಗವಾಗಿ ಯಾವ ಯಾವ ಮಂಟಪಾದಿಗಳು ನಿರ್ಮಾಣವಾಗಬೇಕೋ. ಅವೆಲ್ಲವನ್ನೂ ಶೀಘ್ರವಾಗಿ ನಿರ್ಮಾಣಮಾಡಿಸು. ಯಾವ ವಿಷಯವನ್ನೂ ಇನ್ನು ಮುಂದೆ ನೀನು

ಗಚ್ಛ ನಾರದ ಭದ್ರಂ ತೇ ದೇವೇಷು ಬ್ರೂಹಿ ಮಾ ಚಿರಂ ।
ದೇವ ದೇವೇನ ಯಾಂತ್ವದ್ಯ ಪ್ರಸಾದ್ಯ ಪರಮೇಶ್ವರಂ ॥೨೩॥

ಸಮಾಯಾಂತು ಸುರಾಸ್ಸರ್ವೇ ಮುನಯೋ ದೇವಪತ್ನಿಭಿಃ ।
ಗಣೇಶೈಶ್ಚ ಮಹೇಶಸ್ಯ ಯಾಂತ್ವದ್ಯ ಸ ಚರಾಚರಂ ॥೨೪॥

ಸ ನಾರದೋ ಗಿರಿವಚನೇನ ದೇವಾನ್
ಸಮಾಯಯೌ ವಚನಮುದಾರವಾಕ್ ಸಃ ।
ಅಥಾಬ್ರವೀದ್ಗಿರಿವರ ಧನ್ಯತರೋರುವಾಚಂ
ದದಾತಿ ಕನ್ಯಾಂ ಭವತಾಂ ಚ ವಾಕ್ಯತಃ ॥೨೫॥

ಮುದಾ ಮಹೇಶಾಯ ಸ ಮೇನಯಾ ಗಿರಿ
ರ್ಮೈನಾಕಯುಕ್ತಃ ಪ್ರವಿನೀತಚೇತಸಾ ।

---

ನನ್ನಲ್ಲಿ ವಿಚಾರಮಾಡಬೇಕಿಲ್ಲ. ನಾರದಮಹರ್ಷಿಯೇ, ಇಗೋ ನಿನಗೆ ವಂದಿಸುವೆನು. ಈಗಲೇ ವಿಷ್ಣ್ವಾದಿ ದೇವತೆಗಳ ಸಮೀಪಕ್ಕೆ ಹೋಗಿ, ನನ್ನ ಸಿದ್ಧತೆಯನ್ನು ಅವರಿಗೆ ತಿಳಿಯಪಡಿಸಿ, ದೇವದೇವನಾದ ಪರಶಿವನೊಡನೆ ಎಲ್ಲರೂ ಇಲ್ಲಿಗೆ ಬರುವಂತೆ ಏರ್ಪಡಿಸಬೇಕು. ಪರಮೇಶ್ವರನು ಪ್ರಸನ್ನನಾಗಿ ಇಲ್ಲಿಗೆ ಬರುವಂತೆ ಮಾಡತಕ್ಕುದು ನಿನ್ನ ಕರ್ತವ್ಯ. ॥೨೨-೨೩॥

ಈ ವಿವಾಹಕಾರ್ಯ ನಿರ್ವಹಣಕ್ಕೆ ಸಕಲ ದೇವತೆಗಳೂ, ಮುನಿಗಳೂ ದೇವತಾಸ್ತ್ರೀಯರೂ, ಋಷಿಪತ್ನಿಯರೂ, ಮಹೇಶ್ವರನ ಪ್ರಮಥಗಣಗಳೂ ಮತ್ತೂ ಇತರ ಚರಾಚರವಸ್ತುಗಳೂ ಇಲ್ಲಿಗೆ ಬಂದು ನೆರೆಯಲಿ. ಆ ರೀತಿ ನನ್ನ ಮಾತಿನಿಂದ ಎಲ್ಲರನ್ನೂ ಪ್ರಾರ್ಥಿಸು " ಎಂದು ನಾರದಮಹರ್ಷಿಯನ್ನು ಗಿರಿರಾಜನು ಪ್ರಾರ್ಥಿಸಿಕೊಂಡನು. ನಾರದಮಹರ್ಷಿಯಾದರೋ ಗಿರಿರಾಜನ ಮಾತಿನಂತೆ ದೇವತೆಗಳನ್ನು ಬಂದು ನೋಡಿ, ಧನ್ಯನಾದ ಹಿಮವಂತನ ಬಾಯಿಂದ ಬಂದ ಸಕಲ ವಿಚಾರಗಳನ್ನೂ ಸಂತೋಷಚಿತ್ತನಾಗಿ ದೇವತೆಗಳಿಗೆ ತಿಳಿಯಪಡಿಸಿದನು. ಒಟ್ಟಿನಲ್ಲಿ ನಿಮ್ಮ ಮಾತಿನಂತೆ ಗಿರಿರಾಜನು ಪಾರ್ವತಿಯನ್ನು ಶಂಕರನಿಗೆ ಪ್ರದಾನಮಾಡಲು ಸಿದ್ಧನಾಗಿರುವನೆಂದು ನಾರದಮಹಾಮುನಿಯು ಸಮಸ್ತ ದೇವತೆಗಳಿಗೆ ಅರುಹಿದನು. ॥೨೪-೨೫॥

ಮತ್ತೂ ನಾರದರು " ದೇವತೆಗಳಿರಾ, ಗಿರಿರಾಜನು ಪತ್ನಿಯಾದ ಮೇನಾದೇವಿಯೊಡನೆಯೂ, ಪುತ್ರನಾದ ಮೈನಾಕನಿಂದಲೂ ಕೂಡಿ, ಪಾರ್ವತಿಯನ್ನು

ಪ್ರಸಾದ್ಯ ದೇವಂ ತಪಸಿ ಸ್ಥಿತಂ ಸುರಾ
ವ್ರಜಾಮ ಸರ್ವೇ ವಿಬುಧೈಶ್ಚ ಮಾ ಚಿರಂ ॥೭೬॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಶಿವೋದ್ವಾಹ ಸಮಾರಂಭೋ ನಾಮ ದ್ವಾದಶೋಧ್ಯಾಯಃ

---

ಸಂತೋಷದಿಂದ ಪರಶಿವನಿಗೆ ಅರ್ಪಿಸಲು ತ್ವರೆಗೊಳ್ಳುತ್ತಿರುವನು. ಮತ್ತು ತಪಸ್ಸಿನಲ್ಲಿ ಆಸಕ್ತನಾಗಿರುವ ಪರಶಿವನನ್ನು ಎಚ್ಚರಿಸಲು ಗಿರಿರಾಜನು ಪ್ರಯತ್ನಿಸುತ್ತಿರುವನು. ಆದ್ದರಿಂದ ನಾವೆಲ್ಲರೂ ಈಗಲೇ ಸಪರಿವಾರರಾಗಿ ಹಿಮಗಿರಿಶಿಖರಕ್ಕೆ ಹೋಗೋಣ'' ಎಂದು ಹೇಳಿದರು. ॥೭೬॥

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ಶಿವೋದ್ವಾಹ ಸಮಾರಂಭವನ್ನು
ತಿಳಿಸುವ ಹನ್ನೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ತ್ರಯೋದಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತದಾ ಹಿಮವತೋ ಮೌಲೌ ಶಿವೋದ್ವಾಹೋಚಿತಂ ಶುಭಂ ।
ಪ್ರಾಗುದಕ್ಪ್ರವಣಂ ತತ್ರ ಶಿಖರಂ ಚಾರುಭೂತಲಂ ॥೧॥

ನಿರ್ಮಾಯ ಯದಮೋಯಾತ್ಮಾ ದಶಸಾಹಸ್ರಯೋಜನಂ ।
ನಾನಾಶಿಲ್ಪಯುತಂ ತತ್ರ ಪ್ರಾಕಾರವರಮಂಟಪಂ ॥೨॥

ಗೋಪುರಾಟ್ಟಾಲಕೋಪೇತಂ ಸೌಧಪಂಕ್ತಿವಿಭೂಷಿತಂ ।
ಕ್ವಚಿದ್ರತ್ನಪ್ರಭಾಜಾಲಂ ಕ್ವಚಿದ್ವಿದ್ರುಮಕುಟ್ಟಿಮಂ ॥೩॥

---

## ಹದಿಮೂರನೆಯ ಅಧ್ಯಾಯ

ವಿಶ್ವಕರ್ಮನು ಶಿವಪಾರ್ವತಿಯರ ವಿವಾಹಾರ್ಥವಾಗಿ ಹಿಮವದ್ಗಿರಿಶಿಖರದಲ್ಲಿ ಪೂರ್ವ ಮತ್ತು ಉತ್ತರದಿಕ್ಕಿಗೆ ವೃದ್ಧಿಯನ್ನು ಕಲ್ಪಿಸಿಕೊಂಡು, ಸುಂದರವಾದ ಶಿಖರಗಳಿಂದಲೂ, ಮನೋಹರವಾದ ನೆಲದಿಂದಲೂ, ಪ್ರಾಕಾರ ಮತ್ತು ಮಂಟಪಗಳಿಂದಲೂ ಅತ್ಯಂತ ರಮಣೀಯವಾದ ಮತ್ತು ಶಿಲ್ಪಕಲಾಚಾತುರ್ಯವನ್ನು ಬೆಳಗಿಸುವ ದಿವ್ಯ ಮಂಟಪವೊಂದನ್ನು ನಿರ್ಮಾಣಮಾಡಿದನು. ||೧-೨||

ಆ ಮಂಟಪದಲ್ಲಿ ಅನೇಕ ಗೋಪುರಗಳು, ಅಟ್ಟಲೆಗಳು, ದೊಡ್ಡ ದೊಡ್ಡ ಉಪ್ಪರಿಗೆಗಳು ಬಹು ಸುಂದರವಾಗಿ ಕಾಣುತ್ತಿದ್ದವು. ರತ್ನಪ್ರಭೆಯಿಂದ ಬೆಳಗುತ್ತಿರುವ ಹವಳದ ಜಗುಲಿಗಳೂ, ಪಚ್ಚೆ, ಗೋಮೇದಕ ಮುಂತಾದ ದಿವ್ಯರತ್ನ

ಕ್ವಚಿನ್ಮರಕತಚ್ಛಾಯಂ ಕ್ವಚಿದ್ಧ್ಯೋಮೋದಸುಂದರಂ ।
ಹೀರಾವೃತಂ ಮಣಿದ್ವಾರಂ ಗಾರುತ್ಮತ್ಕೀಲಿತಾಂತರಂ ॥೪॥

ಕ್ವಚಿದ್ವೈಡೂರ್ಯಖಚಿತ ಮಂಟಪಾದಿತಲೈರ್ಯುತಂ ।
ಕ್ವಚಿನ್ನೀಲಾಮಲಮಣಿಭ್ರಾಜತ್ತಲಸುವೇದಿತಂ ॥೫॥

ಕ್ವಚಿತ್ಪುಷ್ಪಕರಾಗಾದಿಮಣಿಮಂಡಪಭೂಷಿತಂ ।
ಕ್ವಚಿನ್ಮುಕ್ತಾವಿತಾನಾಢ್ಯಂ ಸರ್ವರ್ತುಕಕುಸುಮೋಜ್ಜ್ವಲಂ ॥೬॥

ಪದ್ಮರಾಗಮಹಾರಾಗಯುತಂ ಚ ಮಣಿವೇದಿಕಂ ।
ಅಖಂಡವರಮಾಣಿಕ್ಯಸರಾವಲಿವಿಭೂಷಿತಂ ॥೭॥

ಕ್ವಚಿಚ್ಛಂಖಾಖ್ಯಧವಲಂ ಪ್ರವಾಲಲಲಿತಂ ಕ್ವಚಿತ್ ।
ಪಟ್ಟಾಂಬರವಿತಾನಾಢ್ಯಂ ಚಲಚ್ಚಾಮರಭೂಷಿತಂ ॥೮॥

ವರಹೇಮಮಹಾಚಿತ್ರಚಿತ್ರಿತಂ ತ್ರಿದಿವಾಧಿಕಂ ।
ಇಂದ್ರಗೋಪಕಸಂಕಾಶತಲಕುಟ್ಟಿಮಭೂಷಿತಂ ॥೯॥

---

ಗಳಿಂದ ತುಂಬಿದ ಬಾಗಿಲುಗಳೂ ಅಲ್ಲಲ್ಲಿ ಗರುಡಮಣಿಗಳ ಹೊಳಪೂ, ಆ ಮಂಟಪವನ್ನೂ ಮತ್ತೂ ಅಲಂಕರಿಸುತ್ತಿದ್ದುವು. ॥೩-೪॥

ವೈಡೂರ್ಯಮಣಿಗಳಿಂದ ಅಲಂಕೃತವಾಗಿರುವ ಮಂಟಪಗಳ ಒಳಭಾಗವೂ, ನೀಲಮಣಿಗಳಿಂದ ಶೋಭಿಸುವ ನೆಲವೂ, ಹೂವಿನಂತೆ ತೋರಿಬರುವ ರತ್ನಮಯಗಳಾದ ಚಪ್ಪರಗಳೂ, ಅಲ್ಲಲ್ಲಿ ಮುತ್ತಿನಸರಗಳ ಗೊಂಚಲುಗಳೂ ಎಲ್ಲ ಋತುಗಳಲ್ಲಿಯೂ ಬಿಡುವ ಪುಷ್ಪಸಮೂಹವೂ ಆ ಮಂಟಪವನ್ನು ಹೆಚ್ಚಾಗಿ ಕಳೆಗಟ್ಟಿಸುತ್ತಿದ್ದುವು. ॥೫-೬॥

ಪದ್ಮರಾಗಮಣಿಗಳ ಕಾಂತಿಯಿಂದ ಶೋಭಿಸುವ ರತ್ನವೇದಿಕೆಯೂ, ಅಖಂಡವಾದ ಮಾಣಿಕ್ಯಸರಗಳಿಂದ ರಂಜಿಸುವ ಪೀಠವೂ, ಅಲ್ಲಿ ಕಂಗೊಳಿಸುತ್ತಿದ್ದುವು. ಶಂಖದಂತೆ ಶುಭ್ರವಾಗಿದ್ದ, ಹವಳದಂತೆ ಕೋಮಲವಾಗಿದ್ದ ಆ ಮಂಟಪವು ಪೀತಾಂಬರಗಳ ಮೇಲ್ಕಟ್ಟಿನಿಂದಲೂ ಅಲುಗಾಡುತ್ತಿರುವ ಚಾಮರಗಳಿಂದಲೂ ಅಲಂಕೃತವಾಗಿದ್ದಿತು. ॥೭-೮॥

ಸುವರ್ಣಗಳಿಂದಲೂ ನವರತ್ನಗಳಿಂದಲೂ ಚಿತ್ರವಿಚಿತ್ರವಾಗಿರುವ ಆ

ರಮ್ಯಾನಂತಮಹಾದ್ವಾರಗವಾಕ್ಷವಲಭೀಯುತಂ ।
ಪರ್ಯಂತಪ್ರಚ್ಛದಪಟ್ಟೈರ್ಭೂಷಿತಂ ಮಣಿಚಿತ್ರಿತಂ ॥೧೦॥

ಇಂದ್ರಚಾಪನಿಭೈರ್ಗೇಹೈರ್ನಿಚಿತಂ ಮಣಿಕಾಂತಿಭಿಃ ।
ಧೂಪಧೂಮಾದಿಬಹುಲಗಂಧ ಸಿಕ್ತಾಂಬು ರೂಷಿತೈಃ ॥೧೧॥

ಕಮಲೋತ್ಪಲಮಾಲಾಢ್ಯಂ ಫುಲ್ಲಹಲ್ಲಕಶೋಭಿತೈಃ ।
ಕದಂಬಕುಂದಕುಮುದಮಲ್ಲೀಮಾಲಾವಿರಾಜಿತಂ ॥೧೨॥

ಅಮ್ಲಾನಕೇತಕೀಪುಷ್ಪೈರಾಲೋಲೈರ್ಭೂಷಿತಾಂತರಂ ।
ದಮನೋಶೀರಮರುವವಿತಾನಾಚ್ಛಾದಿತಾಂಬರಂ ॥೧೩॥

ಮಾತುಲಿಂಗಾಮ್ರಪನಸಕದಲೀ ನಾಲಿಕೇರಕೈಃ ।
ನಾರಂಗ ಪೂಗ ನಿಂಬಾಲಿ ಕೇತಕೀಫಲಕೀಲಿತೈಃ ॥೧೪॥

---

ಮಂಟಪವು ಸ್ವರ್ಗದ ಸೊಬಗನ್ನೂ ಮೀರಿಸಿದ್ದಿತು. ಕಾಮನ ಬಿಲ್ಲಿನಂತೆ ನಾನಾ ವಿಧಗಳಾದ ಬಣ್ಣಗಳಿಂದ ಆ ನೆಲವು ಅಲಂಕೃತವಾಗಿದ್ದಿತು. ಆ ಮಂಟಪಕ್ಕೆ ಅನೇಕ ಮುಂಜೂರುಗಳೂ, ಅನಂತವಾದ ಚಿಕ್ಕ ಮನೆಗಳೂ ಅದರ ಸುತ್ತಲೂ ಮಣಿಮಯವಾದ ಬಟ್ಟೆಗಳೂ ಆ ವಿವಾಹಮಂಟಪವನ್ನು ಅಂದಗೊಳಿಸಿದ್ದುವು. ||೯-೧೦||

ಕಾಮನಬಿಲ್ಲಿನಂತೆ ಬಣ್ಣಬಣ್ಣಗಳ ರತ್ನಗಳ ಕಾಂತಿಯಿಂದಲೂ, ಧೂಪಧೂಮ ದಿಂದಲೂ, ಪನ್ನೀರಿನಿಂದಲೂ ಸುಗಂಧಮಯವಾದ ನೆಲದಿಂದಲೂ ಕಮಲ ಮತ್ತು ನೈದಿಲೆಗಳ ಮಾಲೆಗಳಿಂದಲೂ, ಅರಳಿದ ಕಲ್ಹಾರಪುಷ್ಪಗಳಿಂದಲೂ, ಕದಂಬ, ಕುಮುದ, ಮಲ್ಲಿಗೆ ಮೊದಲಾದ ಹೂಗಳ ಮಾಲೆಗಳಿಂದಲೂ ವಿವಾಹ ಮಂಟಪವು ಅತಿಯಾಗಿ ಶೋಭಿಸುತ್ತಿದ್ದಿತು. ||೧೧-೧೨||

ಅಲ್ಲಲ್ಲಿ ಯಾವಾಗಲೂ ಬಾಡದಿರುವ ತಾಳೆಹೂವಿನ ಗೊಂಚಲುಗಳು ನೇತು ಹಾಕಲ್ಪಟ್ಟಿದ್ದುವು. ದವನ, ಲಾಮಂಚ, ಮರುಗ ಮುಂತಾದ ಸುಗಂಧಪತ್ರಗಳಿಂದ ಕೂಡಿದ ವಸ್ತ್ರವು ಅಲ್ಲಲ್ಲಿ ಗಮಗಮಿಸುತ್ತಿದ್ದಿತು. ಮಾದಳ, ಮಾವು, ಹಲಸು, ಬಾಳೆ, ತೆಂಗು, ಕಿತ್ತಲೆ, ಅಡಕೆ, ನಿಂಬೆ, ಕೇತಕೀ ಇವುಗಳ ಫಲಗಳನ್ನು ಚಪ್ಪರದ ಮಧ್ಯೆ ಮಧ್ಯೆ ಗೊಂಚಲು ಗೊಂಚಲಾಗಿ ಫಲವಸ್ತುರೂಪದಲ್ಲಿ ಕಟ್ಟಿದ್ದರು. ||೧೩-೧೪||

ಮಾಲಿಕಾಲೋಲಿತಾತ್ಯಚ್ಛಪಂಕ್ತಿಭಿಶ್ಶೋಭಿತಾಂತರಂ ।
ಸ್ವರ್ಣಪಟ್ಟೈಸ್ತಥಾ ಲೋಲೈರ್ಭೂಷಿತಂ ಮಣಿಮಂಟಪೈಃ ॥೧೫॥

ಸ್ವಚ್ಛಾದರ್ಶೋರುಫಲಕೈಃ ಕೀಲಿತಂ ಮಣಿಮೌಕ್ತಿಕೈಃ ।
ಮುಕ್ತಾಗುಚ್ಛಸರಾಲೋಲ ರತ್ನಪಂಕಜಶೋಭಿತೈಃ ॥೧೬॥

ಸುವರ್ಣಕುಂಭವಿತತೈಶ್ಶಾತಕುಂಭಾಂಬರಾವೃತೈಃ ।
ಮಣಿಪ್ರದೀಪ್ತಹಸ್ತಾಬ್ಜಪುತ್ತಲೀಗಣಸಂಯುತೈಃ ॥೧೭॥

ಮಯೂರವರಮಾತಂಗಸಾರಂಗಾಕೃತಿಶೋಭಿತೈಃ ।
ಶಾರ್ದೂಲಚಮರೋದ್ದಾಮಪುಚ್ಛಚಾಮರಕೀಲನೈಃ ॥೧೮॥

ವೀಚಿತೈಃ ಪುರುಷಾಕಾರಚಲಹಸ್ತೋರುವೀಜನೈಃ ।
ಮಯೂರಪಿಂಛಕಳ್ಪತೈರ್ವ್ಯಜನಾದರ್ಶಸತ್ಕರೈಃ ॥೧೯॥

ಪುರುಷೈರ್ಹಸ್ತಕೀಲಾಭಿಃ ಕೀಲಿತೈರ್ಭೂಷಣೈರ್ಯುತೈಃ ।
ಅಕೃತ್ರಿಮಮಿವಾಭಾತಿ ನಿರ್ಮಿತಂ ವಿಶ್ವಕರ್ಮಣಾ ॥೨೦॥

---

ಚಪ್ಪರದ ಮಧ್ಯದಲ್ಲಿ ಸಾಲಾಗಿ ಕಟ್ಟಲ್ಪಟ್ಟಿರುವ ಪುಷ್ಪಮಾಲಿಕೆಗಳು ಗಾಳಿಯಿಂದ ಒಂದೇ ಸಮನಾಗಿ ಚಲಿಸುತ್ತಿದ್ದುವು. ಚಿನ್ನದ ತಗಡುಗಳಿಂದ ಆ ಮಣಿ ಮಂಟಪವು ನಿರ್ಮಿತವಾಗಿತ್ತು. ಮಧ್ಯೆ ಮಧ್ಯೆ ವಿಶಾಲವಾದ ಮತ್ತು ನಿರ್ಮಲವಾದ ಕನ್ನಡಿಗಳೂ, ಮಣಿಮೌಕ್ತಿಕಗಳೂ, ಮುತ್ತಿನ ಸರಗಳೂ, ರತ್ನಮಯವಾದ ಕಮಲಗಳೂ ಅಂದವಾಗಿ ಕಂಗೊಳಿಸುತ್ತಿದ್ದುವು. ||೧೫-೧೬||

ಚಿನ್ನದ ಕಲಶಗಳೂ, ಸುವರ್ಣಮಯವಾದ ವಸ್ತ್ರಾದಿಗಳೂ ರತ್ನದೀಪಗಳನ್ನು ಹಿಡಿದಿರುವ ದೀಪದ ಮಲ್ಲಿಗಳ ಸಾಲು, ನವಿಲು, ಆನೆ, ಸಾರಗ ಮುಂತಾದ ಪ್ರಾಣಿಗಳ ಆಕಾರದ ಬೊಂಬೆಗಳೂ, ಹುಲಿ ಚಮರೀಮೃಗ ಮುಂತಾದುವುಗಳ ಸುಂದರವಾದ ಬಾಲಗಳನ್ನು ಕಟ್ಟಿ ಬಿಗಿದಿರುವ ರತ್ನವಸ್ತುಗಳೂ ಅಲ್ಲಲ್ಲಿ ಸುಂದರವಾಗಿ ಕಾಣುತ್ತಿದ್ದುವು. ||೧೭-೧೮||

ಪುರುಷಾಕಾರದ ಬೊಂಬೆಗಳು ಅಲ್ಲಲ್ಲಿ ತಮ್ಮ ಕೈಗಳಿಂದ ಬೀಸಣಿಗೆಗಳನ್ನು ಹಿಡಿದು ಅಲುಗಾಡಿಸುತ್ತಿದ್ದುವು. ಮತ್ತೆ ಕೆಲವು ಬೊಂಬೆಗಳ ಕೈಯಲ್ಲಿ ನವಿಲುಗರಿಗಳಿಂದ ಮಾಡಿದ ಬೀಸಣಿಗೆಗಳೂ, ಚಾಮರಗಳೂ ಕನ್ನಡಿಗಳೂ ವಿರಾಜಿಸುತ್ತಿ

ದೇವಾನಾಂ ನಿಲಯೈಸ್ತತ್ರ ಭೂತಾನಾಂ ನಿಲಯೈರಪಿ ।
ಮುನೀನಾಮಾಶ್ರಮಯುತಂ ಶ್ರಮಹಾರಿಸರೋವರೈಃ ॥೨೦॥

ತೀರಸಂಬಂಧಸೋಪಾನೈಃ ಫುಲ್ಲಪದ್ಮವಿರಾಜಿತೈಃ ।
ತತ್ತೀರವಿಸ್ತೃತಾಪಾರಸ್ತಂಭಮಂಟಪಭಾಸುರೈಃ ॥೨೧॥

ಭೂಸುರಾಣಾಂ ಚ ಶರಣೈಃ ಸ್ವಚ್ಛೋದೈರ್ಹಲ್ಲಕಾದಿಭಿಃ ।
ಹೇಮಮೀನೈಃ ಕಚ್ಛಪೈಶ್ಚ ಯುತೈಃ ಸಾರಸಪಂಙ್ಕ್ತಿಭಿಃ ॥೨೨॥

ಹಂಸಪಕ್ಷಾಲಿಚಲನೈರ್ವ್ಯಾಧೂತಾಬ್ಜೈರ್ಮನೋಹರೈಃ ।
ಬ್ರಹ್ಮವಿಷ್ಣ್ವಾದಿದೇವಾನಾಮಿಂದ್ರಾದಿಮರುತಾಮಪಿ ॥೨೪॥

ನಿವಾಸೈಃ ಶ್ರೀನಿವಾಸೈಶ್ಚ ತತ್ತಲ್ಲೋಕಾಧಿಕೈಸ್ತದಾ ।
ಭಕ್ಷ್ಯಭೋಜ್ಯಾನ್ನಬಹುಲೈರ್ವಾಸೋಲಂಕಾರಸಂಯುತೈಃ ॥೨೫॥

---

ದ್ದುವು. ಕೈಕಾಲುಗಳಿಗೆ ಒಡವೆಗಳನ್ನು ಹಾಕಿ, ಅವು ಅಲ್ಪಸ್ವಲ್ಪ ಚಲಿಸುವಂತೆ ಮಾಡಿರುವ ವಿಶ್ವಕರ್ಮ ನೈಪುಣ್ಯಪ್ರಕಾಶಕಗಳಾದ ಬೊಂಬೆಗಳು ನಿಜವಾದ ಪುರುಷವ್ಯಕ್ತಿಗಳಂತೆ ಕಂಗೊಳಿಸುತ್ತಿದ್ದುವು. ॥೧೯-೨೦॥

ಅಲ್ಲಲ್ಲಿ ದೇವಾಲಯಗಳು, ಭೂತಾಲಯಗಳು, ಮುನಿಗಳ ಆಶ್ರಮಗಳು, ವಿಹಾರಾರ್ಥವಾದ ಕೃತ್ರಿಮಸರೋವರಗಳು, ಅದರ ಅಕ್ಕಪಕ್ಕಗಳಲ್ಲಿ ದಿವ್ಯ ಸೋಪಾನಗಳು, ಸರೋವರದಲ್ಲೆಲ್ಲಾ ಅರಳಿದ ಕಮಲಕಲ್ಹಾರಾದಿಗಳು, ಅವುಗಳ ಸಮೀಪದಲ್ಲಿಯೇ ಕಂಬಸಾಲಿನ ಮಂಟಪಗಳೂ ತಾನೇ ತಾನಾಗಿ ಶೋಭಿಸುತ್ತಿದ್ದುವು. ॥೨೧-೨೨॥

ಬ್ರಾಹ್ಮಣರ ನಿವಾಸ ಗೃಹಗಳೂ, ಸ್ನಾನಪಾನಾದಿಗಳಿಗೆ ನಿರ್ಮಲವಾದ ಕೊಳಗಳೂ, ಅದರಲ್ಲಿ ಓಡಾಡುವ ಚಿನ್ನದ ಮೀನು, ಆಮೆ, ಸಾರಸಪಕ್ಷಿಗಳು, ಹಂಸಗಳೂ ಇವುಗಳ ಓಡಾಟದಿಂದ ಅಲುಗಾಡುವ ಮನೋಹರಗಳಾದ ಕಮಲಗಳೂ, ಅಲ್ಲಿ ರಮಣೀಯವಾಗಿದ್ದುವು. ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಗೆ ಅವರವರ ಲೋಕದ ಅರಮನೆಗಳಿಗಿಂತ ಸುಂದರಗಳಾದ ವಾಸಗೃಹಗಳು ಸಂಪದ್ಭರಿತಗಳಾಗಿ ನಿರ್ಮಿತವಾಗಿದ್ದುವು. ಪ್ರತಿನಿವಾಸದಲ್ಲಿಯೂ ಬೇಕುಬೇಕಾದ ಭಕ್ಷ್ಯಭೋಜ್ಯಾದಿಗಳೂ, ವಸ್ತ್ರಾಲಂಕಾರಾದಿಗಳೂ ಕೇಳಿದಾಗ ಸಿದ್ಧವಾಗುವಂತಿದ್ದುವು. ॥೨೩-೨೪-೨೫॥

ವಿಚಿತ್ರೈರ್ಮಣಿಮಾಣಿಕ್ಯೈಃ ಸ್ವಚ್ಛೋದೈಶ್ಚ ಸರೋವರೈಃ ।
ದೇವಾಂಗನಾ ವಿಹಾರೈಶ್ಚ ಭ್ರಮದ್ಗೃಹವರೈರಪಿ ॥೨೬॥

ಶೀಕರಾಸಾರಕುಂಭೈಶ್ಚ ಸಭಾಮಧ್ಯವಿರಾಜಿತೈಃ ।
ಭ್ರಮದ್ದೀಪಗೃಹೈಶ್ಚಿತ್ರೈರ್ವಿತಾನಾಲಂಬಿತೈಸ್ತದಾ ॥೨೭॥

ಧೂಪವೃಕ್ಷೈರ್ದೀಪವೃಕ್ಷೈರ್ಭೂಷಿತೈರ್ಮಣಿಪಂಕ್ತಿಭಿಃ ।
ಗಣಾನಾಂ ಪುಷ್ಪನಿಲಯೈರಸಂಬಾಧೈರ್ವಿಭೂಷಿತಂ ॥೨೮॥

ಸಹಸ್ರಯೋಜನೋಚ್ಛೇದೇ ಮಂಟಪೇ ವಿಸ್ತೃತೇ ತದಾ ।
ನವರತ್ನಪ್ರಭಾಜಾಲೈರ್ಭೂಷಿತೇ ತಪ್ತಕಾಂಚನೈಃ ॥೨೯॥

ಖಚಿತೇ ಕುಟ್ಟಿಮತಲೇ ಸರ್ವಚಿತ್ರವಿಚಿತ್ರಿತೇ ।
ದೇವದಾನವಗಂಧರ್ವಯಕ್ಷರಾಕ್ಷಸಮೂರ್ತಿಭಿಃ ॥೩೦॥

---

ಮಣಿಮಾಣಿಕ್ಯಗಳಿಂದ ನಿರ್ಮಿತವಾಗಿ ಶುದ್ಧೋದಕದಿಂದ ತುಂಬಿದ ಸರೋವರಗಳೂ, ದೇವತಾಸ್ತ್ರೀಯರ ವಿಹಾರಸ್ಥಾನಗಳೂ, ಬೇಕಾದ ಕಡೆಗೆ ಬರುವ ಗೃಹಗಳೂ, ತುಂತುರುಗಳನ್ನು ಎರಚುವ ಕಲಶಗಳೂ, ಸಭಾಮಧ್ಯಭಾಗದಲ್ಲಿ ಸಂಚರಿಸುವ ದೀಪಮಾಲೆಗಳೂ, ಅದರ ಮೇಲೆ ಸುಂದರವಾಗಿ ಚಿತ್ರವಿಚಿತ್ರಿತಗಳಾಗಿರುವ ಮೇಲ್ಕಟ್ಟುಗಳೂ ರಮಣೀಯವಾಗಿ ಕಾಣುತ್ತಿದ್ದುವು. ॥೨೬-೨೭॥

ಧೂಪ ಮತ್ತು ದೀಪಗಳಿಂದ ಕೂಡಿರುವ ವೃಕ್ಷಾಕಾರದ ಸ್ತಂಭಗಳೂ, ಮಣಿಮಯಗಳಾದ ಪುಷ್ಪನಿಲಯಗಳೂ, ಶಿವಗಣಗಳಿಗಾಗಿ ಒಟ್ಟೊಟ್ಟಿಗೆ ನಿರ್ಮಿತವಾಗಿದ್ದುವು. ಆ ಮಂಟಪವು ಸಹಸ್ರ ಯೋಜನ ವಿಸ್ತಾರವಾಗಿದ್ದಿತು. ನವರತ್ನಗಳ ಕಾಂತಿಯಿಂದಲೂ, ಅಪರಂಜೀ ಚಿನ್ನದ ಹೊಳಪಿನಿಂದಲೂ ಕೂಡಿ, ಸರ್ವಚಿತ್ರ ವಿಚಿತ್ರಗಳಾಗಿದ್ದ ಜಗಲಿಗಳು ಅಲ್ಲಲ್ಲಿ ಆಹ್ಲಾದಕರಗಳಾಗಿದ್ದುವು. ದೇವತೆಗಳ, ರಾಕ್ಷಸರ, ಗಂಧರ್ವರ, ಯಕ್ಷರಾಕ್ಷಸರ ವಿಗ್ರಹಗಳು ಅಲ್ಲಲ್ಲಿ ನಿಲ್ಲಿಸಲ್ಪಟ್ಟಿದ್ದುವು. ॥೨೮-೨೯-೩೦॥

ಪರಮೇಶ್ವರನ ಇಪ್ಪತ್ತೈದು ಲೀಲಾಮೂರ್ತಿಗಳೂ, ಮಣಿಮಯಗಳಾಗಿ ಅಲ್ಲಲ್ಲಿ ನಿಲ್ಲಿಸಲ್ಪಟ್ಟಿದ್ದುವು. ಗವಾಕ್ಷಗಳೆಲ್ಲಾ ಅಲಂಕೃತಗಳಾಗಿದ್ದುವು. ಮಣಿಮಯವಾದ ಸೋಪಾನವೇದಿಕೆಗಳು ಅಲ್ಲಲ್ಲಿ ಕಾಣುತ್ತಿದ್ದುವು. ಮಣಿಮಯವಾದ ಆ ಸೋಪಾನ

ಪಂಚವಿಂಶನ್ಮಹೇಶಸ್ಯ ಮೂರ್ತಿಭಿರ್ಮಣಿಚಿತ್ರಿತೈಃ ।
ವಿಚಿತ್ರಿತಗವಾಕ್ಷೈಶ್ಚ ಸಮುತ್ಕೀರ್ಣೈರಿವಾಸ್ತೃತೈಃ ॥೩೧॥

ವಿಸ್ತೃತೈರ್ಮಣಿಸೋಪಾನವೇದಿಕಾಭಿರಲಂಕೃತೈಃ ।
ಮಯೂರ ಹಂಸ ಸಾರಂಗ ವೃಕ ವ್ಯಾಘ್ರಮತಂಗಜೈಃ ॥೩೨॥

ವ್ಯಾಲೀ ಪಾಲೀ ಮಯೂರಾಲೀ ಶರಭಾವಲಿಭೂಷಿತೈಃ ।
ಸ್ತಂಭೈಃ ಕುಂಭೈಶ್ಚ ಭಾಭಾತಿ ಧೂಪದೀಪೈರ್ಮಣೀಂದ್ರಜೈಃ ॥೩೩॥

ಉತ್ಫುಲ್ಲಾರಕ್ತ ಕಮಲಮಾಲಾಭಿಃ ಶೋಭಿತಾಂತರಂ ।
ವಿತಾನಪ್ರಚ್ಛದಪಟ ಮುಕ್ತಾಗುಚ್ಛಾಲಿಲಂಬಿತೈಃ ॥೩೪॥

ದೇವಸಿಂಹಾಸನೈರ್ಹೈಮೈರ್ಮಣಿಮಾಣಿಕ್ಯಭೂಷಿತೈಃ ।
ಪರಾರ್ಘ್ಯಾಸ್ತರಣಾಸ್ತೀರ್ಣೈರ್ವಿಸ್ತೀರ್ಣೈಃ ಪಟಕಾಂತಿಭಿಃ ॥೩೫॥

ತನ್ಮಧ್ಯೇ ವೇದಿಕಾ ರಮ್ಯಾ ನಾನಾಮಣಿವಿಚಿತ್ರಿತಾ ।
ಪತಾಕಾಗ್ರಮಹಾಕುಂಭಂ ಪುಣ್ಯಸೌಧಂ ಮನೋಹರಂ ॥೩೬॥

---

ವೇದಿಕೆಗಳ ಮತ್ತು ದೇವತಾ ವಿವಾಹಮಂಟಪದ ಸುತ್ತಲೂ ನವಿಲು, ಹಂಸ, ಸಾರಗ, ತೋಳ, ಹುಲಿ, ಆನೆ ಮುಂತಾದ ಪ್ರಾಣಿಗಳ ಆಕಾರವು ಸುವರ್ಣಮಯವಾಗಿ ತೋರುತ್ತಿದ್ದಿತು. ॥೩೧-೩೨॥

ಮಂಟಪದ ಕಂಬಗಳಲ್ಲಿ, ಹಾವುಗಳು, ನವಿಲುಗಳು, ಶರಭಗಳು ಇವುಗಳ ಆಕಾರವು ಚಿತ್ರಿತವಾಗಿತ್ತು. ಧೂಪದೀಪಾದಿಗಳಿಂದಲೂ ಮಣಿಮಯಗಳಾದ ಧೂಪದೀಪಗಳ ಸಾಮಗ್ರಿಗಳಿಂದಲೂ, ಅರಳಿದ ಕೆಂಪುಕಮಲಮಾಲೆಗಳಿಂದಲೂ, ಮೇಲ್ಕಟ್ಟುಗಳಲ್ಲಿ ಗೊಂಚಲುಗೊಂಚಲಾಗಿ ನೇತಾಡುವ ಮುತ್ತಿನ ಸರಗಳಿಂದಲೂ ಆ ಮಂಟಪವು ರಂಜಿತವಾಗಿದ್ದಿತು. ॥೩೩-೩೪॥

ಅಲ್ಲಲ್ಲಿ ರತ್ನಖಚಿತವಾದ ದಿವ್ಯಸಿಂಹಾಸನಗಳು ಮೆತ್ತೆಯಿಂದ ಕೂಡಿದ್ದಾಗಿ ವಸ್ತ್ರಾದಿಗಳಿಂದಲಂಕೃತಗಳಾಗಿ ರಂಜಿಸುತ್ತಿದ್ದುವು. ಅವುಗಳ ಮಧ್ಯೆ ಒಂದು ವೇದಿಕೆಯು ಮಣಿಮಯವಾದ ಚಿತ್ರವಿಚಿತ್ರಾಲಂಕಾರಗಳಿಂದ ಕೂಡಿದ ಕಲಶಗಳಿಂದ ರಂಜಿಸುತ್ತಿದ್ದಿತು. ಅವುಗಳನ್ನೊಳಗೊಂಡ ಎತ್ತರವಾದ ಉಪ್ಪರಿಗೆಯೂ ಮನೋಹರವಾಗಿದ್ದಿತು. ॥೩೫-೩೬॥

ಸ್ವಚ್ಛಾದರ್ಶತಲಚ್ಛನ್ನಂ ಪುಷ್ಪಮಾಲಾಪರೀವೃತಂ ।
ದಮನೋಶೀರಜಾಜೀಭಿಃ ಪದ್ಮಚಂಪಕಸಂಯುತೈಃ ॥೩೭॥

ಮಣಿಮಾಲಾದಿನಿಚಿತಂ ಆಪೀಠಾಲಂಬಿಸುಂದರಂ ।
ಪತಾಕಾಭಿರ್ವಿತಾನೈಶ್ಚ ಶೋಭಿತಂ ಧೂಪಿತಂ ತದಾ ॥೩೮॥

ಫಲಪಲ್ಲವಪಾತ್ರೈಶ್ಚ ದೂರ್ವಾಲಾಜಾಕ್ಷತೈರ್ಯುತಂ ।
ಗಂಧಚಂದನಪಾತ್ರೈಶ್ಚ ಪೂರ್ಣಕುಂಭಾಲಿತೋರಣೈಃ ॥೩೯॥

ಪಲ್ಲವೋರ್ಧ್ವಮುಖೈಸ್ತತ್ರ ಕದಲೀಸ್ತಂಭಭೂಷಿತೈಃ ।
ಸ್ತಂಭೈರಯುತಸಾಹಸ್ರೈರ್ಮಣಿತೋರಣಭೂಷಣೈಃ ॥೪೦॥

ಕುಂಭೈಃ ಕರಂಭಪಾತ್ರೈಶ್ಚ ಸೌವರ್ಣಪರಿಕಲ್ಪಿತಾಃ ।
ಭೃಂಗಾರಾಃ ಕನಕಾ ಕೂಪ್ಯಾಂ ರೌಪ್ಯೇನೈವ ಸಹಸ್ರಶಃ ॥೪೧॥

ಭಕ್ಷ್ಯಭೋಜ್ಯಾನ್ನಗಿರಯಃ ಫಲಾದ್ರಿವರಕಲ್ಪನೈಃ ।
ಶಾಕಸೂಪಾಪೂಪಯುತರಾಶೀನಾಂ ನಿಯುತೈರಪಿ ॥೪೨॥

---

ಆ ಉಪ್ಪರಿಗೆಯ ಸುತ್ತಲೂ ಸ್ವಚ್ಛವಾದ ಕನ್ನಡಿಗಳಿದ್ದುವು. ದವನ, ಲಾಮಂಚ, ಜಾಜೀ, ಕಮಲ, ಸಂಪಿಗೆ ಮುಂತಾದ ಪುಷ್ಪಗಳಿಂದ ರಚಿತವಾದ ಹೂವಿನ ಸರಗಳು ಮೇಲಿನಿಂದ ಕೆಳಗಿನವರೆಗೂ ಗೊಂಚಲು ಗೊಂಚಲಾಗಿ ಕಾಣು ತ್ತಿದ್ದುವು. ಮಣಿಮಯವಾದ ಪತಾಕೆಗಳು, ಮೇಲ್ಕಟ್ಟುಗಳಿಂದ ಸುಗಂಧಮಯ ವಾಗಿ ಸೌಧವು ಶೋಭಿಸುತ್ತಿದ್ದಿತು. ॥೩೭-೩೮॥

ಆ ವಿವಾಹಮಂಟಪದಲ್ಲಿ ಫಲ ಮತ್ತು ಚಿಗುರುಗಳಿಂದ ಕೂಡಿದ ಪಾತ್ರೆಗಳೂ, ಗರಿಕೆ, ಅರಳು, ಅಕ್ಷತೆಗಳ ತಟ್ಟೆಗಳೂ, ಗಂಧದ ಬಟ್ಟಲುಗಳೂ, ಪೂರ್ಣಕುಂಭ ಪರಿವೃತಗಳಾದ, ಬಾಳೆಯ ಕಂಬಗಳೂ, ಅವುಗಳ ಮೇಲೆ ಮಾವಿನ ಚಿಗುರುಗಳೂ ನವರತ್ನಮಯಗಳಾದ ಸಹಸ್ರಾರು ಸ್ತಂಭಗಳೂ ಪ್ರಕಾಶಿಸುತ್ತಿದ್ದುವು. ॥೩೯-೪೦॥

ಸುಣ್ಣಬಳಿದ ಕುಂಭಗಳೂ ಸುವರ್ಣಮಯಗಳಾಗಿದ್ದುವು. ಬೆಳ್ಳಿಯ ಕಲಶಗಳಿಗೆ ಚಿನ್ನದ ಮುಚ್ಚಳ ಮತ್ತು ಹಿಡಿಗಳು ಹಾಕಲ್ಪಟ್ಟಿದ್ದುವು. ಭಕ್ಷ್ಯ ಭೋಜ್ಯಗಳು, ಫಲರಾಶಿಗಳು, ಹುಳಿ, ತೊವ್ವೆ, ಒಬ್ಬಟ್ಟು ಮೊದಲಾದ ಭೋಜ್ಯ ವಸ್ತುಗಳು ಪರ್ವತಾಕಾರದಲ್ಲಿ ಕಾಣುತ್ತಿದ್ದುವು. ॥೪೧-೪೨॥

ಖಾದ್ಯಾನಾಂ ಚೈವ ಮಾಂಸಾನಾಂ ರಾಶಯಸ್ಸಂಪ್ರದೃಶ್ಯತೇ ।
ಘೃತಪಾಯಸನದ್ಯಶ್ಚ ಪ್ರವಹಂತಿ ಮಧುಸ್ರವಾಃ ॥೪೩॥

ಶರ್ಕರಾರಾಶಯಸ್ತತ್ರ ದೃಶ್ಯಂತೇ ತನ್ನಗೋಪಮಾಃ ।
ದಧಿಕ್ಷೀರವಹಾ ನದ್ಯೋ ವಹಂತಿ ಸರಿತೋ ಯಥಾ ॥೪೪॥

ಮೋದಕಾ ವಟಿಕಾಪೂಪಘಾರಿಕಾಫೇಣಿಮಂಡಕಾಃ ।
ಗಿರಿರೂಪಾಃ ಪ್ರದೃಶ್ಯಂತೇ ಗಂಧಾನಾಂ ಗಿರಯಸ್ತಥಾ ॥೪೫॥

ಪುಷ್ಪತಾಂಬೂಲಪೂಗಾನಾಂ ಗಿರಯಃ ಕಲ್ಕಸಂಯುತಾಃ ।
ಮುಕ್ತಾಚೂರ್ಣೋರುಗಿರಯಃ ಪಟವಾಸಸುವಾಲಕಾಃ ॥೪೬॥

ಕಲ್ಪಿತಾ ಮನಸಾ ತೇನ ಶಂಕರೋದ್ವಾಹಹೇತವೇ ।
ನೃತ್ಯಂತ್ಯಪ್ಸರಸಸ್ತತ್ರ ತಾಲರಾಗಲಯಾನುಗಂ ॥೪೭॥

ಗಾಯಂತಿ ರುದ್ರವೀಣಾಭಿರ್ಗಂಧರ್ವಾಶ್ಚಾರುಮೂರ್ತಯಃ ।
ಪುಲೋಮಜಾವಿಪ್ರಚಿತ್ತಿರ್ಮೇನಕಾ ಸಹಜನ್ಯಕಾ ॥೪೮॥

---

ತಿನ್ನುವ ಮಾಂಸರಾಶಿಗಳೂ, ತುಪ್ಪ, ಹಾಲು, ಜೇನು ಇವುಗಳ ನದಿಗಳೂ, ಸಕ್ಕರೆಯ ರಾಶಿಗಳೂ ಅಲ್ಲಿ ನಿರ್ಮಿತವಾಗಿದ್ದುವು. ಹಾಲು ಮೊಸರಂತೂ ನದೀ ಪ್ರವಾಹದಂತೆ ಅಲ್ಲಲ್ಲಿ ಹರಿಯುತ್ತಿದ್ದಿತು. ॥೪೩-೪೪॥

ಕಡುಬು, ವಡೆ, ಒಬ್ಬಟ್ಟು, ಗಾರಿಗೆ, ಫೇಣಿ, ಮಂಡಿಗೆ ಈ ಭಕ್ಷ್ಯಗಳು ಬೆಟ್ಟಗಳಂತೆ ಬಿದ್ದಿದ್ದುವು. ಗಂಧ, ಹೂವು, ಎಲೆ, ಅಡಕೆ, ಮುತ್ತಿನಚಿಪ್ಪಿನ ಸುಣ್ಣ ಇವು ರಾಶಿರಾಶಿಯಾಗಿ ಅಲ್ಲಲ್ಲಿ ಬಿದ್ದಿದ್ದುವು. ಇದರ ಪಕ್ಕದಲ್ಲಿಯೇ ಸುವಾಸನೆಯುಳ್ಳ ಮುಖ ಬಟ್ಟೆಯೂ ಕಾಣುತ್ತಿದ್ದಿತು. ॥೪೫-೪೬॥

ಇಷ್ಟೆಲ್ಲಾ ಭೋಗ್ಯವಸ್ತುಗಳನ್ನೂ ವಿಶ್ವಕರ್ಮನು ಶಿವಗಿರಿಜೆಯರ ಕಲ್ಯಾಣಕ್ಕಾಗಿ ಮನಸಾ ಸೃಷ್ಟಿಮಾಡಿದ್ದನು. ಆ ಮಂಟಪದಲ್ಲಿ ರಾಗ ತಾಲ ಲಯಬದ್ಧವಾಗಿ ಗಂಧರ್ವರು ರುದ್ರವೀಣೆಯನ್ನು ಬಾರಿಸುತ್ತಾ ಹಾಡಿದರು. ಅದನ್ನನುಸರಿಸಿ ನರ್ತನಮಾಡುತ್ತಿದ್ದರು. ॥೪೭-೪೮॥

ಅಲಂಬುಷಾ ಮಿಶ್ರಕೇಶೀ ಘೃತಾಚೀ ಮೇನಕಾದಯಃ ।
ನೃತ್ಯಂತಿ ತತ್ರ ಸದಸಿ ಸ್ತುವಂತಿ ಕಿಲ ಚಾರಣಾಃ ॥೪೯॥

ಶಿವಾಪ್ರದಾನವಿಜಯಂ ಗಂಧರ್ವಾ ಲಲಿತಂ ಜಗುಃ ।
ವೇದಾ ಮೂರ್ತಾಸ್ತದಾ ತತ್ರ ರುದ್ರಾನ್ ಜೇಪುರ್ದ್ವಿಜೈಸ್ಸಹ ॥೫೦॥

ಸ್ವಾಹಾಕಾರವಷಟ್ಕಾರೌ ಸ್ತುವಂತಃ ಪರಮೇಶ್ವರಂ ।
ವಸವೋ ಮರುತಸ್ತತ್ರ ಸೂದಾ ಆಸನ್ ಸದೈವತೈಃ ॥೫೧॥

ಮರುತಃ ಪರಿವೇಷ್ಟಾರೋ ವಿವಾಹೇ ಶಂಕರಸ್ಯ ಹಿ ।
ರುದ್ರಾ ಗಂಧಕರಾಸ್ತತ್ರ ಸಂಚರಂತ್ಯರ್ಚನೇ ರತಾಃ ॥೫೨॥

ಸರ್ವೇಷಾಂ ದ್ವಾದಶಾದಿತ್ಯಾಃ ಫಲತಾಂಬೂಲದಾಯಕಾಃ ।
ಪುಷ್ಪಮಾಲಾಕರಾ ಆಸನ್ ವಿಶ್ವೇದೇವಾಃ ಸಹಸ್ರಶಃ ॥೫೩॥

ಮಾತರಃ ಪಿತರಸ್ತತ್ರ ನಿಯುಕ್ತಾಃ ಪರಿವೇಷಣೇ ।
ಪಟವಾಸಕರಾವಾಸ್ತಾಂ ಭಿಷಜೌ ತತ್ರ ಸಂಸದಿ ॥೫೪॥

---

ಪುಲೋಮಜಾ, ವಿಪ್ರಚಿತ್ತಿ, ಮೇನಕೆ, ಸಹಜನ್ಯ, ಅಲಂಬುಷಾ, ಮಿಶ್ರಕೇಶೀ, ಘೃತಾಚೀ ಇವರೇ ಮೊದಲಾದ ಸ್ತ್ರೀಯರು ನಾಟ್ಯವಾಡಿದರು. ಚಾರಣರು ನಾನಾ ರೀತಿಯಾಗಿ ಶಿವನನ್ನು ಹೊಗಳಿದರು. ಪಾರ್ವತಿಯ ಪ್ರದಾನ ವೈಭವವನ್ನು ಗಂಧರ್ವರು ಸುಲಭವಾಗಿ ಪದ್ಯರೂಪದಲ್ಲಿ ಹಾಡಿದರು. ಚತುರ್ವೇದಗಳೂ ಮೂರ್ತಿ ಮತ್ತಾಗಿ ಬಂದು, ಅಲ್ಲಿಗೆ ಬಂದಿದ್ದ ಬ್ರಾಹ್ಮಣರೊಡಗೂಡಿ ಶ್ರೀ ರುದ್ರಪಾರಾಯಣ ಮಾಡತೊಡಗಿದುವು. ॥೪೯-೫೦॥

ಸ್ವಾಹಾಕಾರ ವಷಟ್ಕಾರಗಳೇ ಈಶ್ವರನ ಅಕ್ಕಪಕ್ಕದಲ್ಲಿ ನಿಂತು ಹೋಮ ಕಾರ್ಯಗಳನ್ನು ಮಾಡುತ್ತಿದ್ದರು. ವಸುಗಳು ಮರುದ್ಗಣಗಳೂ ಕೆಲವು ದೇವತೆಗಳ ಸಹಾಯದಿಂದ ಅಡಿಗೆ ಪರಿಚಾರಕರಾಗಿ ನಿಂತರು. ಏಕಾದಶರುದ್ರರೂ ಬಂದವರಿಗೆ ಗಂಧ ಹೂವುಗಳನ್ನು ಕೊಡುವ ಕಾರ್ಯಭಾರವನ್ನು ವಹಿಸಿಕೊಂಡರು. ॥೫೧-೫೨॥

ದ್ವಾದಶಾದಿತ್ಯರು ಬಂದವರಿಗೆ ಫಲ ತಾಂಬೂಲಗಳನ್ನು ಕೊಡಲು ನಿಂತರು. ವಿಶ್ವೇದೇವತೆಗಳು ಸಾವಿರಾರು ಮಂದಿ ಹೂವಿನ ಸರಗಳನ್ನು ಹಿಡಿದು ಅತಿಥಿಗಳಿಗೆ ಸರ ಹಾಕಲು ಸಿದ್ಧರಾದರು. ಮಾತೃಗಣಗಳೂ, ಪಿತೃದೇವತೆಗಳೂ ಲಘು ಭೋಜ

ಪಾತ್ರಪ್ರಯೋಜಕಾ ಆಸನ್ ಋಭವೋ ಸ್ವರ್ಣಭಾಜನೈಃ ।
ಗಂಧಾಕ್ಷತಪ್ರದಾತಾರಃ ಸುಧನ್ವಾನಸ್ತದಾ ಮುದಾ ॥೫೫॥

ಪ್ರತಿಪಾತ್ರಂ ಪ್ರತಿಸುರಂ ಭಕ್ಷ್ಯಭೋಜ್ಯಾನ್ನರಾಶಿಭಿಃ ।
ಪಾನೀಯಫಲದಾನೈಶ್ಚ ಪೂಜಯಂತಿ ಗಣೇಶ್ವರಾಃ ॥೫೬॥

ನಂದ್ಯಾದ್ಯಾ ವೀರಭದ್ರಾದ್ಯಾ ವಿಷ್ಣುಬ್ರಹ್ಮಾದಯೋಽಪಿ ಚ ।
ವಸ್ತ್ರಾಭರಣದಾನೇ ಚ ಗಿರೀಣಾಂ ಪೂಜನೇ ತಥಾ ॥೫೭॥

ನಿಯುಕ್ತಾ ಶ್ರೀಮಹೇಶೇನ ಗೀತವಾದ್ಯೋರುನರ್ತನೇ ।
ವಿದ್ಯಾಧರಾಪ್ಸರಾಃ ಸಿದ್ಧಾಃ ಸಾಧ್ಯಾ ಮನ್ವಂತರಾಗ್ರಹಾಃ ॥೫೮॥

ನಕ್ಷತ್ರಾಣಿ ತಥಾ ವಾಯುರ್ಯಮೋ ನಿಋತಿರೇವ ಚ ।
ವರುಣೋ ಧನಪೋ ದಿಕ್ಪಾ ದ್ವಿಜಾನಾಮರ್ಚನೇ ರತಾಃ ॥೫೯॥

ಭಕ್ಷ್ಯೇ ಭೋಜ್ಯೇ ಚ ಪೇಯೇ ಚ ಗಂಧಪುಷ್ಪನಿವೇದನೇ ।
ತ್ರಿಷಷ್ಟಿಕೋಟಿಋಷಯೋ ರುಕ್ಮಪಾತ್ರೇಷು ಭುಂಜತೇ ॥೬೦॥

---

ಗಳನ್ನು ಕೊಡುವವರಾಗಿ ನಿಯುಕ್ತರಾದರು. ಅಶ್ವಿನೀದೇವತೆಗಳು ತಮ್ಮ ಎರಡು ಕೈಗಳಲ್ಲಿಯೂ ಪಟ್ಟೆವಸ್ತ್ರಗಳನ್ನು ಹಿಡಿದು ಮರ್ಯಾದಾರ್ಥವಾಗಿ ಬೀಸುತ್ತಿದ್ದರು. ॥೫೩-೫೪॥

ಋಭು ದೇವತೆಗಳು ಕುಡಿಯಲು ಸುವರ್ಣ ಪಾತ್ರೆಗಳನ್ನು ಒದಗಿಸುತ್ತಿದ್ದರು. ಸುಧನ್ವಗಣಗಳು ಗಂಧ, ಅಕ್ಷತೆ ಇವುಗಳನ್ನು ಕೊಡುವವರಾದರು. ಪ್ರತಿದೇವತೆಗಳಿಗೂ ಬೇರೆ ಬೇರೆ ಊಟದ ಪಾತ್ರೆಗಳನ್ನೂ ಭೋಜ್ಯ ವಸ್ತುಗಳನ್ನೂ ತಪ್ಪದೆ ಒದಗಿಸುವ ಕಾರ್ಯಕ್ಕೆ ಶಿವನ ಪ್ರಮಥಗಣಗಳೇ ನಿಂತರು. ॥೫೫-೫೬॥

ನಂದಿ, ವೀರಭದ್ರ, ವಿಷ್ಣು, ಬ್ರಹ್ಮ ಮುಂತಾದವರು, ಅತಿಥಿಗಳಾಗಿ ಬಂದ ಪರ್ವತಗಳಿಗೆ ವಸ್ತ್ರ, ಆಭರಣ ಇವುಗಳನ್ನು ಕೊಡುವವರಾದರು. ಮಹೇಶ್ವರನೇ ತನ್ನ ವಿವಾಹಕಾಲದಲ್ಲಿ ಗೀತ, ವಾದ್ಯ, ನಾಟ್ಯ ಇವುಗಳಿಗಾಗಿ ವಿದ್ಯಾಧರರು, ಅಪ್ಸರಸ್ಸುಗಳು, ಸಿದ್ಧರು, ಸಾಧ್ಯರು ಇವರನ್ನು ನಿಯಮಿಸಿದನು. ॥೫೭-೫೮॥

ಉಳಿದ ಸಾಧ್ಯರು, ಮನ್ವಂತರಗಳು, ನಕ್ಷತ್ರಗಳು, ವಾಯು, ಯಮ, ನಿಋತಿ, ವರುಣ, ಕುಬೇರ, ದಿಕ್ಪಾಲಕರು ಇವರೆಲ್ಲರೂ ಬ್ರಾಹ್ಮಣರ ಸತ್ಕಾರಕ್ಕೆ

ಭೈರವಾ ನವಕೋಟ್ಯೋಽಥ ಯೋಗಿನ್ಯೋ ದಶಕೋಟಿಕಾಃ ।
ರುದ್ರಾಗಣಾಸ್ತಥೈಕೋನಪಂಚಾಶತ್ಕೋಟಿಸಂಖ್ಯಯಾ ॥೬೧॥

ಚಾಮುಂಡಾಕೋಟಿರೇವೈಕಾ ದೈತ್ಯದಾನವಕೋಟಯಃ ।
ತ್ರಿಂಶತ್ತ್ರಿಕೋಟಿದೇವಾನಾಂ ಗಂಧರ್ವಾಪ್ಸರಕೋಟಿಕಂ ॥೬೨॥

ದಾನಮಾನಾರ್ಹಣಾಭೋಜ್ಯೈರ್ಭುಂಜಂತಸ್ತತ್ರ ಆಸತೇ ।
ಶ್ರೀ ಮಹೇಶಮಹಾಗೌರ್ಯಾಸ್ತದಾ ವೈವಾಹಿಕೇ ವಿಧೌ ॥೬೩॥

ಶಯ್ಯಾಗಂಧಫಲೈಃ ಪುಷ್ಪೈರ್ಭೋಗೈಸ್ಸಂಪೂಜ್ಯ ಸರ್ವಶಃ ॥೬೪॥

ಏವಂ ವಿಶ್ವೈಕಶರ್ವಾ ಸಕಲದಿವಿಷದಾಂ ಶ್ರೀಮಹೇಶಾಜ್ಞಯಾಸೌ
ಭಕ್ಷ್ಯೈರ್ಭೋಜ್ಯೈರ್ವರಾನ್ನೈಃ ಶ್ರುತಿಸುಖನಿರತೈರ್ಗಾನಧಾರಾವಿಶೇಷೈಃ ।
ಕೃತ್ವಾ ಸತ್ವಾ ಮುದಾ ತಂ ಹರಿಮುಮುರವರಂ ಪ್ರಾಪ್ಯವಿಜ್ಞಾಪ್ಯ ಸರ್ವಂ
ಸೌಧಾಲಿಂ ಗಿರಿಶೇಖರೇತ್ರ ವಿಹಿತಾಂ ನಿರ್ಮಾಯಯುಕ್ತೋ ಭವತ್ ॥೬೫॥

---

ನಿಂತರು. ಅರವತ್ತುಮೂರುಕೋಟಿ ಋಷಿಗಳು ಆ ಸಮಾರಂಭದಲ್ಲಿ ಭಕ್ಷ್ಯ, ಭೋಜ್ಯ, ಪಾನೀಯ ಇವುಗಳನ್ನೂ ಪಡೆದು ಸುವರ್ಣಮಯ ಪಾತ್ರೆಗಳಲ್ಲಿ ಊಟ ಮಾಡಿ, ಗಂಧಪುಷ್ಪಾದಿಗಳನ್ನು ಸ್ವೀಕರಿಸುತ್ತಿದ್ದರು. ॥೫೯-೬೦॥

ಒಂಬತ್ತುಕೋಟಿ ಭೈರವಗಣಗಳೂ, ಹತ್ತುಕೋಟಿ ಯೋಗಿನಿಯರೂ, ನಲವತ್ತೊಂಬತ್ತುಕೋಟಿ ರುದ್ರಗಣಗಳೂ, ಒಂದು ಕೋಟಿ ಚಾಮುಂಡೀಗಣಗಳೂ, ಇನ್ನೂ ಅಸಂಖ್ಯಾತ ದೈತ್ಯದಾನವರೂ, ಮೂವತ್ತುಮೂರುಕೋಟಿ ದೇವತೆಗಳೂ, ಗಂಧರ್ವ, ಅಪ್ಸರಸ್ಸು ಇವರೇ ಮೊದಲಾದವರೂ ಅಲ್ಲಿ ನೆರೆದಿದ್ದರು. ॥೬೧-೬೨॥

ಇವರೆಲ್ಲರಿಗೂ ಪಾರ್ವತೀಪರಶಿವರ ಆ ವಿವಾಹಕಾಲದಲ್ಲಿ ಅವರವರ ಯೋಗ್ಯತಾನುಸಾರವಾದ ದಾನ, ಮಾನ, ಸತ್ಕಾರ, ದಿವ್ಯಭೋಜನ ಇವು ತೃಪ್ತಿಕರವಾಗಿ ನೆರವೇರಿದುವು. ಶಯನ, ಗಂಧ, ಹೂವು ಮುಂತಾದ ಅನಂತಭೋಗಗಳಿಂದ ಅವರೆಲ್ಲರೂ ತೃಪ್ತರಾಗಿ ಆನಂದದಿಂದಿದ್ದರು. ॥೬೩-೬೪॥

ಈ ರೀತಿ ಪಾರ್ವತೀಪರಶಿವರ ವಿವಾಹಾಂಗವಾದ ಮಂಟಪ, ಆಹಾರವಿಹಾರ, ಭಕ್ಷ್ಯಭೋಜ್ಯಗಳ ಸಿದ್ಧತೆ, ಸಂಗೀತನಾಟ್ಯಗೋಷ್ಠಿ ಇವೇ ಮೊದಲಾದ ಸಕಲ

ಇತಿ ಶ್ರೀ ಶಿವರಹಸ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಶಿವವಿವಾಹಮಂಟಪನಿರ್ಮಾಣನಿರೂಪಣಂ
ನಾಮ ತ್ರಯೋದಶೋಽಧ್ಯಾಯಃ

---

ಸಿದ್ಧತೆಗಳನ್ನೂ ಲೋಕಸೃಷ್ಟಿಕಾರಕನಾದ ವಿಶ್ವಕರ್ಮನು ಕ್ಷಣಮಾತ್ರದಲ್ಲಿ ಗಿರಿಶಿಖರದಲ್ಲಿ ನಿರ್ಮಾಣಮಾಡಿ, ಆ ವಿಷಯವನ್ನೆಲ್ಲಾ ದೇವತೆಗಳಿಗೂ ವಿಷ್ಣುವಿಗೂ ತಿಳಿಯಪಡಿಸಲು ಬಂದನು. ನಿಜವಾಗಿಯೂ ದೇವತೆಗಳಿಂದ ಆಜ್ಞಪ್ತನಾದ ವಿಶ್ವಕರ್ಮನು ವಿವಾಹಸಿದ್ಧತೆಯನ್ನು ಸಂಪೂರ್ಣವಾಗಿ ಮುಗಿಸಿಯೇ ಇದ್ದನು. ||೬೫-೬೬||

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ಶಿವಪಾರ್ವತಿಯರ ಸಂವಾದ
ರೂಪವಾಗಿ ಶಿವವಿವಾಹಮಂಟಪನಿರ್ಮಾಣ ಕ್ರಮವನ್ನು ತಿಳಿಸುವ
ಹದಿಮೂರನೆಯ ಅಧ್ಯಾಯವು ಮುಗಿದುದು.

ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಚತುರ್ದಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಅವಶ್ಯಾಯೋ ಗಿರಿವರೋಽಪ್ಯಪಶ್ಯತ್ಪರಮಾದ್ಭುತಂ ।
ನಿರ್ಮಿತಂ ಮಂಟಪಂ ದಿವ್ಯಂ ಸ್ವರ್ಗಾದಪಿ ಮನೋಹರಂ ||೧||

ದೇವೋದ್ವಾಹೇ ತ್ವರಾಯುಕ್ತೋ ಮೇನಯಾ ಹಿಮಭೂಧರಃ ।
ನಾಕಿಪ್ರಭಂ ತಂ ಮೈನಾಕಮುವಾಚ ಪುರತಃ ಸ್ಥಿತಂ ||೨||

|| ಹಿಮವಾನುವಾಚ ||

ಗಚ್ಛ ಮೈನಾಕಭದ್ರಂತೇ ಪರ್ವತಾನಾನಯ ದ್ರುತಂ ।
ಪತ್ನೀಭಿಃ ಸಹಿತಾಂತ್ಸರ್ವಾನ್ ಗೌರ್ಯುದ್ವಾಹಂ ವದಾದ್ಯ ತಾನ್ ||೩||

---

## ಹದಿನಾಲ್ಕನೆಯ ಅಧ್ಯಾಯ

ಹಿಮಗಿರಿರಾಜನಾದರೋ ವಿಶ್ವಕರ್ಮನು ಗಿರಿಜಾವಿವಾಹಕ್ಕಾಗಿ ನಿರ್ಮಿಸಿರುವ ಆಶ್ಚರ್ಯವಾದ ವಿವಾಹಮಂಟಪವನ್ನು ನೋಡಿ, ಅದು ಸ್ವರ್ಗಕ್ಕಿಂತಲೂ ಹೆಚ್ಚು ಮನೋಹರವಾಗಿರುವುದನ್ನು ಕಂಡು ಆಶ್ಚರ್ಯಪಟ್ಟನು. ದೇವದೇವನಾದ ಪರಶಿವನಿಗೆ ಮಗಳನ್ನು ಕೊಟ್ಟು ವಿವಾಹ ನಡೆಸುವ ಸಂಭ್ರಮದಿಂದ ಕೂಡಿ, ಗಿರಿರಾಜನು ಪತ್ನಿಯಾದ ಮೇನಾದೇವಿಯೊಡನೆ ಮಗನನ್ನು ಕುರಿತು ಈರೀತಿ ನುಡಿದನು. ||೧-೨||

“ ಪುತ್ರವರ್ಯನಾದ ಮೈನಾಕನೇ, ನಿನಗೆ ಮಂಗಳವಾಗಲಿ. ನೀನು ಈಗಲೇ ಎಲ್ಲಿ ಗಿರಿಗಳ ಸಮೀಪಕ್ಕೆ ಹೋಗಿ, ಆ ಗಿರ್ಯಧಿಪತಿಗಳಿಗೆ ಪಾರ್ವತೀಪರಿಣಯದ

ಯತ್ರೇಷು ರತ್ನಮಾಂಸಾದಿ ಫಲಮೂಲಮಧುಸ್ರವಂ ।
ಚಂದನಾಗರುಪುಷ್ಪಾಣಿ ತೈಸ್ಸಮಾನಯ ಮಾಚಿರಂ ॥೪॥

ಗಿರಿರಾಜಾಜ್ಞಯಾ ತತ್ರ ಮೈನಾಕಃ ಸ್ವಗಣೈರ್ಯುತಃ ।
ವಿಮಾನೇನ ಯಯೌ ತತ್ರ ಗಂಧಪುಷ್ಪವಿಭೂಷಿತಃ ॥೫॥

ಪರ್ವತಾನ್ ಪ್ರಯಯೌ ತತ್ರ ತೇಷು ಪ್ರೋಚ್ಯಾಥಮಂಗಲಂ ।
ತೈಶ್ಚ ಸಂಪೂಜಿತೋಭ್ಯಾಗಾದ್ವಿಮಾನೈರರ್ಕಸನ್ನಿಭೈಃ ॥೬॥

ಮೇರುಮಂದರ ಕೈಲಾಸ ಹೇಮಕೂಟಾದಿ ನೀಲಕಾಃ ।
ಶತಶೃಂಗೋ ರೈವತಶ್ಚ ನಿಷಧೋ ಗಂಧಮಾದನಃ ॥೭॥

ಕುಮುದಃ ಪನಸೋ ರೈಭ್ಯೋ ತ್ರಿಕೂಟಶ್ಚಿತ್ರಕೂಟಕಃ ।
ಕಲಿಂಗೋ ದುಂದುಭಿಃ ಸಹ್ಯೋ ದರ್ದುರೋವಿಂಧ್ಯ ಏವಚ ॥೮॥

ಪಾರಿಯಾತ್ರಶ್ಚ ಕುಮುದೋ ದರಾವಾನ್ ವೇಗವಾಂಸ್ತಥಾ ।
ಮಹೇಂದ್ರೋ ಮಲಯೋ ಗೌರೋ ಉದಯಾಸ್ತಮಯಾಚಲೌ ॥೯॥

---

ವಿಷಯವನ್ನು ತಿಳಿಸಿ ಅವರೆಲ್ಲರೂ ಅವರವರ ಪತ್ನೀಸಮೇತರಾಗಿ ಬರುವಂತೆ ಆಹ್ವಾನಿಸು. ಮತ್ತು ಆಯಾ ಗಿರಿಗಳಲ್ಲಿ ಶ್ರೇಷ್ಠವಸ್ತುಗಳೆಸಿರುವ ರತ್ನಗಳು, ಮಾಂಸಾದಿ ವಸ್ತುಗಳು, ಹಣ್ಣು ಹೂವುಗಳು, ಚಂದನಾಗರು ಸುಗಂಧದ್ರವ್ಯಗಳು ಅವೆಲ್ಲವನ್ನೂ ಈ ಪಾರ್ವತಿಯ ಕಲ್ಯಾಣಕ್ಕಾಗಿ ತೆಗೆದುಕೊಂಡು ಬಾ. ಸಾವಕಾಶಮಾಡಬೇಡ." ॥೩-೪॥

ಹೀಗೆ ಆಜ್ಞಪ್ತನಾದ ಮೈನಾಕನು ತಂದೆಯ ಅಪ್ಪಣೆಯಂತೆ ಮಿತಪರಿವಾರದೊಂದಿಗೆ ವಿಮಾನಾರೂಢನಾಗಿ ಗಂಧ ಪುಷ್ಪಾದಿಗಳಿಂದ ಅಲಂಕೃತನಾಗಿ ಹೊರಟು, ಸಮಸ್ತ ಗಿರಿಗಳ ಸಮೀಪಕ್ಕೂ ಹೋಗಿ, ಅವರಿಗೆಲ್ಲಾ ವಿವಾಹದ ವಿಷಯವನ್ನು ತಿಳಿಸಿ, ಅವರನ್ನೂ ಆಹ್ವಾನಿಸಿ, ಅವರಿಂದ ಸತ್ಕೃತನಾಗಿ ಸೂರ್ಯಪ್ರಕಾಶಮಾನವಾದ ವಿಮಾನದಲ್ಲಿ ಕುಳಿತು ಬಂದನು. ॥೫-೬॥

ಮೇರುಪರ್ವತ, ಮಂದರ, ಕೈಲಾಸ, ಹೇಮಕೂಟ, ಚಿತ್ರಕೂಟ, ಕಲಿಂಗ, ದುಂದುಭಿ, ಸಹ್ಯ, ದರ್ದುರ, ವಿಂಧ್ಯ, ಪಾರಿಯಾತ್ರ, ಕುಮುದ, ದರಾವಾನ್, ವೇಗವಾನ್, ಮಹೇಂದ್ರ, ಮಲಯ, ಗೌರ, ಉದಯಾಚಲ, ಅಸ್ತಾಚಲ, ಬರ್ಬರ

ಬರ್ಬರೋ ಧೌಂಡಕೋದಂಡಃ ಕಕುಭಃ ಪದ್ಮ ಏವ ಚ ।
ಶೇಷಾಚಲಶ್ಚ ಶ್ರೀಶೈಲೋ ಕದಂಬೋ ಬಂಭರೋ ಮಹಾನ್ ॥೧೦॥

ಏತೇ ಪ್ರಾಧಾನ್ಯತಃ ಶೈಲಾಸ್ತಥಾ ಷಟ್ಕೋಟಿಯೋ ಪದೇ ।
ಗಿರಿರಾಜಾಜ್ಞಯಾ ತತ್ರ ಸಮಾಗಚ್ಛತ್ಸಹಸ್ರಶಃ ॥೧೧॥

ಮೈನಾಕೇನಾರ್ಕವರ್ಣೇನ ವಿಮಾನೇನ ಸದಾರಕಾಃ ।
ಊಹ್ಯಮಾನೈಃ ಸ್ವಪುರುಷೈಃ ಫಲಮೂಲಕುಲಂ ಬಹು ॥೧೨॥

ಮಧುಮೈರೇಯಮುತ್ಕೃಷ್ಟಂ ಗಂಧಚಂದನಚಾರುಭಿಃ ।
ಏಣೇಯ ಮತ್ಸ್ಯಮಾಂಸಾನಿ ಶುಷ್ಕಾದ್ರಾಣಿ ಚ ಪರ್ವತಾಃ ॥೧೩॥

ಗಜಾಶ್ಚ ಗೋಗಣಂ ತತ್ರ ಸಾರಂಗಾಶ್ಚ ಶುನಸ್ತಥಾ ।
ಏಲಾಲವಂಗಕರ್ಪೂರ ಸಪ್ತಛದಭವಂ ಶುಭಂ ॥೧೪॥

ತಥಾ ಮೃಗಮದಂ ಚಿತ್ರಂ ಕಸ್ತೂರೀಚಾಮರಾಣ್ಯಪಿ ।
ಮನಶ್ಶಿಲಾಧಾತುರಸಂ ನಿಶಾಕುಂಕುಮರೋಚನಾಃ ॥೧೫॥

---

ಧೌಂಡಕೋದಂಡ, ಕಕುಭ, ಪದ್ಮ, ಶೇಷಾಚಲ, ಶ್ರೀಶೈಲ, ಕದಂಬ, ಬಂಭರ ಈ ಪರ್ವತಗಳು ಪ್ರಧಾನಭೂತಗಳಾಗಿ ಆಹ್ವಾನಿಸಲ್ಪಟ್ಟವು. ॥೭-೮-೯-೧೦॥

ಇವಲ್ಲದೆ ಆರುಕೋಟಿ ಶೈಲಗಳೂ ಗಿರಿರಾಜನ ಅಪ್ಪಣೆಯಂತೆ ಗುಂಪು ಗುಂಪಾಗಿ ಗಿರಿಜಾಕಲ್ಯಾಣಕ್ಕಾಗಿ ಬಂದು ನೆರೆದರು. ಅವರನ್ನೆಲ್ಲಾ ಸೂರ್ಯನಷ್ಟು ತೇಜಸ್ವಿಯಾದ ಮೈನಾಕನು ಆದರದಿಂದ ಬರಮಾಡಿಕೊಂಡನು. ಆ ಪರ್ವತಗಳು ಬರುವಾಗ ತಮ್ಮಲ್ಲಿರುವ ಉತ್ಕೃಷ್ಟವಸ್ತುಗಳನ್ನು ತಮ್ಮ ತಮ್ಮ ಸೇವಕರಿಂದ ಹೊರಿಸಿಕೊಂಡು ತಂದು ಇಲ್ಲಿಗೆ ಕೊಡುತ್ತಿದ್ದರು. ॥೧೧-೧೨॥

ಉತ್ಕೃಷ್ಟವಾದ ಮದ್ಯ, ದಿವ್ಯವಾದ ಗಂಧ ಚಂದನಾದಿಗಳು, ಜಿಂಕೆ ಮೀನು ಇವುಗಳ ಮಾಂಸವನ್ನೂ, ಹಸಿಯದಾದ ಮತ್ತು ಒಣಗಿದ ನಾನಾ ಆಹಾರ ವಸ್ತುಗಳನ್ನೂ, ಆನೆ, ಹಸುಗಳು, ಜಿಂಕೆಗಳು, ನಾಯಿಗಳು, ಏಲಕ್ಕಿ, ಲವಂಗ, ಕರ್ಪೂರ, ಏಳೆಲೆಗಳುಳ್ಳ ಬಾಳೆಗಿಡಗಳು, ಇವೆಲ್ಲವನ್ನೂ ಗಿರಿಗಳು ತರುತ್ತಿದ್ದುವು. ॥೧೩-೧೪॥

ಅದೂ ಅಲ್ಲದೆ ದಿವ್ಯಕಸ್ತೂರಿ, ಚಾಮರಗಳು, ಮನಶ್ಶಿಲೆಯೇ ಮೊದಲಾದ ಧಾತುರಸ, ಕುಂಕುಮ, ಗೋರೋಚನ, ಜಾತೀಪತ್ರೆ, ಸುವರ್ಣ, ರಜತ, ಮುತ್ತು,

ಜಾತೀಪತ್ರಫಲಂ ತತ್ರ ಹೇಮರೌಪ್ಯಂ ಸ ಮೌಕ್ತಿಕಂ ।
ಮಣಿವಜ್ರಪ್ರವಾಲಾನಾಂ ಪುಷ್ಯರಾಗವಿಡೂರಕೈಃ ॥೧೬॥

ಗೋಮೇದ ನೀಲಮಾಣಿಕ್ಯವಾಸೋಭಾರೈಸ್ಸಹಸ್ರಶಃ ।
ಖದಿರಾಸಾರತಕ್ಕೋಲಹಿಂಗುಸರ್ಜರಸಂ ಬಹು ॥೧೭॥

ತಗರಾಗರುಭಾರೈಶ್ಚ ದೇವದಾರುಭರೈಸ್ತಥಾ ।
ಪೂಗೀಫಲೈರ್ನಾರಿಕೇಳೈಃ ಕದಲೀಫಲಮಂಡಲೈಃ ॥೧೮॥

ಪನಸಾನಾಂ ಚ ಗಿರಿಭಿಃ ಶರ್ಕರಾಗುಡಮುತ್ಕಟಂ ।
ಜ್ಯೋತಿಷ್ಮತೀಲತೋದ್ಭೂತಂ ತೈಲಂ ಚ ವಿವಿಧಂ ಘೃತಂ ॥೧೯॥

ನಾರಂಗಮಾತುಲಿಂಗಾಲಿ ಆಮ್ರದಾಡಿಮಪರ್ವತೈಃ ।
ಕೇತಕೀತಾಲಫಲಕೈಃ ಪುಷ್ಪಾಣಿ ಸುರಭೀಣಿ ಚ ॥೨೦॥

ಉಪಾಯನಮುಪಾಜಗ್ಮುಃ ಗಿರಿರಾಜವಿಲೋಕನೇ ।
ಗೌರ್ಯುದ್ವಾಹಂ ಸಮಾಕರ್ಣ್ಯ ಗಿರಯೋ ಹರ್ಷನಿರ್ಭರಾಃ ॥೨೧॥

ಸದಾರತನಯಾಸ್ತತ್ರ ಮೈನಾಕೇನಾಯುಯುರ್ವೃತಂ ।
ವಿಮಾನಾದವರುಹ್ಯಾಶು ಗಿರಿರಾಜಂ ಪ್ರಣಮ್ಯ ತು ॥೨೨॥

---

ರತ್ನ, ವಜ್ರ, ಹವಳ, ಪುಷ್ಯರಾಗ, ವೈಡೂರ್ಯ, ಗೋಮೇದಕ, ನೀಲ, ಮಾಣಿಕ್ಯ, ದಿವ್ಯವಸ್ತ್ರಗಳು, ಇವುಗಳನ್ನು ಸಹಸ್ರ ಸಂಖ್ಯೆಯಲ್ಲಿ ತರುತ್ತಿದ್ದರು. ಕಗ್ಗಲೀ, ಸಾರ ವೃಕ್ಷ, ತಕ್ಕೋಲ ಹಿಂಗುರಸ, ಸರ್ಜರಸ ಇಂತಹ ಅಪೂರ್ವ ವಸ್ತುಗಳನ್ನು ಕೆಲವು ಗಿರಿಗಳು ಒದಗಿಸಿದುವು. ॥೧೫-೧೬-೧೭॥

ತಗರು, ಅಗರು, ದೇವದಾರು, ಅಡಕೆ, ತೆಂಗು, ಬಾಳೆ, ಹಲಸು, ಮುಂತಾದ ಮರಗಳ ಸಾರವನ್ನೂ ಹಣ್ಣುಗಳನ್ನೂ ಒದಗಿಸಿದರು. ಸಕ್ಕರೆ, ಬೆಲ್ಲ, ಜ್ಯೋತಿಷ್ಮತೀಲತಾತೈಲ, ನಾನಾವಿಧವಾದ ತುಪ್ಪ, ಕಿತ್ತಲೆ, ಮಾದಲ, ಮಾವು, ದಾಳಿಂಬೆ ಮುಂತಾದ ಫಲಗಳನ್ನೂ, ಕೇತಕೀ, ಮುಂತಾದ ಸುಗಂಧಭರಿತಗಳಾದ ಹೂವುಗಳ ಬುಟ್ಟಿ ಬುಟ್ಟಿಗಳನ್ನೂ ಶಿವಾಪರಿಣಯಕ್ಕಾಗಿ ತಂದೊದಗಿಸಿದರು. ॥೧೮-೧೯-೨೦॥

ಮತ್ತು ಇನ್ನೂ ಅಪೂರ್ವವಾದ ಕೆಲವು ವಸ್ತುಗಳನ್ನು ಗಿರಿರಾಜನಾದ ಹಿಮವಂತನಿಗೆ ಇತರ ಗಿರಿಗಳು ಕೈಗಾಣಿಕೆಯಾಗಿ ಕೊಟ್ಟರು. ಗೌರೀದೇವಿಯ

ಊಚುಃ ಪ್ರಾಂಜಲಯಃ ಸರ್ವೇ ಗಿರಯೋ ಗಿರಿನಾಯಕಂ ॥೨೩॥

ಪರ್ವತಾ ಊಚುಃ

ಗಿರಿರಾಜ ನಮಸ್ತೇಽಸ್ತು ಮೈನಾಕೇನ ಸಹಾಗತಾಃ ।
ಅಪರ್ಣಾಯಾಃ ಸಮುದ್ವಾಹಂ ಶ್ರುತ್ವಾ ಪೂರ್ಣಮನೋರಥಾಃ ॥೨೪॥

ತೂರ್ಣಂ ವಯಂ ಸಮಾಯಾತಾಃ ಸದಾರತನಯಾ ಗಿರೇ ।
ಧನ್ಯಾ ವಯಂ ಸರ್ವಮಾನ್ಯಾ ಭವಿಷ್ಯಾಮೋಽದ್ಯ ಸಂಗತಾಃ ॥೨೫॥

ಸಂಬಂಧೇನ ಮಹೇಶಸ್ಯ ಗಿರಿಶಸ್ಯ ತ್ವಯಾ ಸಹ ।
ಮೈನಾಕೇನ ಸಹಾಯಾತಾಸ್ತ್ವದಾಜ್ಞಾಕಾರಿಣೋ ವಯಂ ॥೨೬॥

ಫಲಮೂಲಂ ಚ ವಿಪುಲಂ ವಾಸೋ ರತ್ನಭರಾದಿಕಂ ।
ವಿಲೋಕಯ ಗಿರಿಶ್ರೇಷ್ಠ ಯದತ್ರಾನೀತಮದ್ಯ ನಃ ॥೨೭॥

---

ಮದುವೆಯ ವಿಷಯವನ್ನರಿತು ಸಮಸ್ತ ಗಿರಿಗಳೂ ಪತ್ನೀಪುತ್ರ ಸಮೇತರಾಗಿ ಮೈನಾಕನಿಂದ ಸ್ವಾಗತಿಸಲ್ಪಟ್ಟು ವಿಮಾನದಿಂದಿಳಿದು, ಗಿರಿರಾಜನ ಸಮೀಪಕ್ಕೆ ಬಂದು, ಗಿರಿನಾಯಕನಾದ ಆತನಿಗೆ ಕೈಮುಗಿದು ಈರೀತಿ ಪ್ರಾರ್ಥನೆಮಾಡುತ್ತಿದ್ದರು. ||೨೧-೨೨-೨೩||

"ಗಿರಿರಾಜನೇ ನಿನಗೆ ನಮಸ್ಕಾರ. ನಾವು ಮೈನಾಕನಿಂದ ಗಿರಿಜಾಕಲ್ಯಾಣದ ವಿಷಯವನ್ನು ಕೇಳಿ, ಸಂಪೂರ್ಣವಾದ ಇಷ್ಟಾರ್ಥಸಿದ್ಧಿಯನ್ನು ಕಂಡು, ಪತ್ನೀಪುತ್ರ ಸಮೇತರಾಗಿ ಜಾಗ್ರತೆ ಇಲ್ಲಿಗೆ ಬಂದಿರುವೆವು. ಮುಂದೆ ನಡೆಯುವ ಪಾರ್ವತೀ ಪರಶಿವರ ವಿವಾಹ ಸಂಭ್ರಮವನ್ನು ನೋಡಿ ಧನ್ಯರಾಗುವೆವು. ಮತ್ತು ನಮ್ಮ ಕುಲವೇ ಇಂದು ಪವಿತ್ರವೂ ಪೂಜ್ಯವೂ ಎನಿಸುವುದು. ||೨೪-೨೫||

ಗಿರೀಶನಾದ ನಿನಗೂ ಮಹೇಶ್ವರನಾದ ಪರಶಿವನಿಗೂ ಈರೀತಿ ಬಾಂಧವ್ಯ ವೊದಗಿದುದನ್ನು ಮೈನಾಕನಿಂದ ಕೇಳಿ, ನಿನ್ನ ಅಧೀನರಾದ ನಾವೆಲ್ಲಾ ನಮ್ಮ ಶಕ್ತ್ಯನುಸಾರವಾದ ಫಲಮೂಲಾದಿಗಳನ್ನೂ, ರತ್ನಾಭರಣಾದಿಗಳನ್ನೂ ತೆಗೆದು ಕೊಂಡು ಈ ಕಾರ್ಯವನ್ನು ನೆರವೇರಿಸಲು ಬಂದಿರುವೆವು. ಇಗೋ ಇಲ್ಲಿ ನೋಡು. ಈ ಕೈಗಾಣಿಕೆಯ ವಸ್ತುಗಳೆಲ್ಲಾ ರಾಶಿರಾಶಿಯಾಗಿ ಇಲ್ಲಿ ಬಿದ್ದಿರುವುವು. ||೨೬-೨೭||

॥ ಹಿಮವಾನುವಾಚ ॥

ಇತಿ ತತ್ಪುರತೋ ನ್ಯಸ್ತೈಃ ಪ್ರಣೇಮುರ್ಧರಣೀಧರಾಃ ।
ತೇಷಾಂ ವಚನಮಾನೇನ ಹರ್ಷಾದಾಹ ಗಿರೀಶ್ವರಃ ॥೨೮॥

ಧನ್ಯಾ ಯೂಯಂ ಸದಾ ಮಾನ್ಯಾ ವಚನಾನ್ಮೇ ಸಮಾಗತಾಃ ।
ಭವದ್ಭಿರ್ದೇವಮೀಶಾನಂ ಸಮಭ್ಯರ್ಚ್ಯ ಸುರೋತ್ತಮಾನ್ ॥೨೯॥

ಗಣಶ್ರೇಷ್ಠಾನಪಿ ನಗಾಃ ವೈವಾಹಿಕಸುಮಂಗಲಂ ।
ಭೋಕ್ತುಮಿಚ್ಛಾಮಿ ಸುಭಗಾ ಸದಾರತನಯೋದ್ಯ ಮೇ ॥೩೦॥

ಮಾ ತಂದ್ರಂ ನೈವ ವಿಸ್ರಂಭಂ ಕುರ್ವಂತೂದ್ವಾಹಕರ್ಮಣಿ ।
ಮೇರೋ ತ್ವಮೇಭಿರ್ಗಿರಿಭಿಃ ಸುರಾಸುರಸಮರ್ಚನೇ ॥೩೧॥

ಮಾ ತಂದ್ರೋ ಭವ ನಿರ್ನಿದ್ರಃ ಸಂಭಾರಾಲೋಕನೋದ್ಯತಃ ।
ಮಂದರಾಗಚ್ಛ ಭದ್ರಂ ತೇ ತ್ವಂ ವಿಂಧ್ಯಾತ್ರ ಗೃಹೇ ವಸ ॥೩೨॥

---

ಹೀಗೆಂದು ಎಲ್ಲಾ ಪರ್ವತಗಳೂ ರಾಶಿರಾಶಿಯಾಗಿ ತಾವು ತಂದಿದ್ದ ವಸ್ತುಜಾಲವನ್ನೆಲ್ಲಾ ಹಿಮಗಿರಿಯ ಮುಂದೆ ಹಾಕಿ ಎರಗಿದರು. ಆದರಿಂದ ಸಂತುಷ್ಟನಾದ ಹಿಮಗಿರಿರಾಜನು ಪರ್ವತಗಳನ್ನು ಕುರಿತು ಹೀಗೆಂದನು. "ಪರ್ವತಗಳಿರಾ, ನೀವೇ ಇಂದು ಧನ್ಯರು. ನನ್ನ ಮಾತಿನಂತೆ ಪರಶಿವನ ಕಲ್ಯಾಣೋತ್ಸವ ದರ್ಶನಾರ್ಥವಾಗಿ ಇಲ್ಲಿಗೆ ಎಲ್ಲರೂ ಬಂದಿರುವಿರಿ. ನಿಮ್ಮಿಂದ ಕೂಡಿ ನಾನು ಪತ್ನೀಪುತ್ರಸಮೇತನಾಗಿ ಪರಶಿವನನ್ನು ಆರಾಧಿಸಿ ಅವನ ಗಣದೇವತೆಗಳನ್ನೂ ತೃಪ್ತಿಪಡಿಸಿ ಧನ್ಯನಾಗಬೇಕೆಂದು ಬಯಸುತ್ತಿರುವೆನು. ॥೨೮-೨೯-೩೦॥

ನೀವು ಮಾತ್ರ ಈ ವಿವಾಹಕಾರ್ಯ ಸಮಾರಂಭದಲ್ಲಿ ಉದಾಸೀನಮಾಡದೆ ಚಟುವಟಿಕೆಯಿಂದ ಕೆಲಸಮಾಡಿರಿ. ಮೇರುಗಿರಿಯೇ, ನೀನು ನಿನ್ನ ಕೆಲವು ಗಿರಿಗಳ ಸಹಾಯದಿಂದ ದೇವರಾಕ್ಷಸರನ್ನು ಸತ್ಕರಿಸುವ ಕಾರ್ಯದಲ್ಲಿ ನಿರತನಾಗು. ಅದಕ್ಕೆ ಬೇಕಾದ ವಸ್ತುಗಳನ್ನು ಎಚ್ಚರಿಕೆಯಿಂದ ಈಗಲೇ ತರಿಸಿಕೊ. ಮಂದರವೇ, ವಿಂಧ್ಯವೇ, ನೀವು ಕುಶಲವಾಗಿದ್ದೀರಾ! ಬನ್ನಿ ನೀವು ಈ ಗೃಹದಲ್ಲಿ ನೆಲಸಿರಿ. ॥೩೧-೩೨॥

ಯದತ್ರಾನಂತರಂ ಕಾರ್ಯಂ ಕುರು ಕ್ಷಿಪ್ರಮತಂದ್ರಿತಃ ।
ಸಮಾಯಾಸ್ಯತಿ ದೇವೇಶೋ ಗೌರ್ಯುದ್ವಾಹಾಯ ಚಾಮರೈಃ ॥೩೩॥

ಗಣೇಂದ್ರೈರ್ಮುನಿಭಿಃ ಸಾರ್ಧಂ ತತ್ಪೂಜಾನಿರತೋ ಭವ ।
ಫಲಮೂಲಾಶನೈಃಪಾದ್ಯೈರ್ಗಂಧಪುಷ್ಪನಿವೇದನೈಃ ॥೩೪॥

ಪಾರಿಯಾತ್ರ ಸಮಾಗಚ್ಛ ಭಕ್ಷ್ಯಭೋಜ್ಯೇಷು ಸಂವಸ ।
ಪರ್ವತೈಸ್ಸಹಕೋಟ್ಯೈವ ಸುರಾಣಾಂ ಪರಿವೇಷಕಃ ॥೩೫॥

ಭವ ಮಾ ತಂದ್ರಿತೋ ಭೂತ್ವಾ ನ ನ್ಯೂನಂ ನಾಧಿಕಂ ಭವೇತ್ ।
ಕುಮುದಾಗಚ್ಛ ಭದ್ರಂ ತೇ ತಾಂಬೂಲಾನಾಂ ನಿವೇದನೇ ॥೩೬॥

ಸುರೇಷು ಗಣವರ್ಯೇಷು ಮುನಿಷ್ವಪಿ ಸದಾ ಮುದಾ ।
ಯಾವದಿಚ್ಛಂ ಪ್ರದೇಹ್ಯಾಶು ಅತ್ರ ಮಾತಂದ್ರಿತೋ ಭವ ॥೩೭॥

ನೃತ್ತವಾದ್ಯೇಷು ಪಾನೀಯೇ ಅಂಜನ ತ್ವಂ ವಿಲೋಕಗಃ ।
ವಸ ಮಾತಂದ್ರಿತೋ ಭೂತ್ವಾ ಶಯ್ಯಾಸನಸಮರ್ಪಣೇ ॥೩೮॥

---

ವಿಂಧ್ಯಗಿರಿಯೇ, ಇನ್ನು ಮುಂದಿನ ಕಾರ್ಯವನ್ನು ನೀನು ನಡೆಸು. ಪರಮೇಶ್ವರನು ಪಾರ್ವತಿಯನ್ನು ವರಿಸಲು ಸಮಸ್ತ ಗಣದೇವತೆಗಳಿಂದಲೂ ಮುನಿವರ್ಗದಿಂದಲೂ ಕೂಡಿ ಛತ್ರಿಚಾಮರಾದಿಗಳಿಂದ ಸೇವಿತನಾಗಿ ಇಲ್ಲಿಗೆ ಬರುವನು. ಆಗ ನೀನು ಅವನನ್ನು ಅರ್ಘ್ಯಪಾದ್ಯಾದಿಗಳಿಂದಲೂ, ಗಂಧಪುಷ್ಪಾದಿಗಳಿಂದಲೂ ಪೂಜಿಸು. ಈ ಕೆಲಸದಲ್ಲಿ ನೀನು ತ್ವರೆಯಿಂದ ನಡೆದುಕೋ. ಇದೇ ನಿನ್ನ ಕರ್ತವ್ಯವಾಗಿರಲಿ. ॥೩೩-೩೪॥

ಎಲೈ ಪಾರಿಯಾತ್ರನೇ, ಇಲ್ಲಿ ಬಾ. ನೀನು ಕೋಟಿಪರ್ವತಗಳ ಸಹಾಯದಿಂದ ಈ ವಿವಾಹಾರ್ಥವಾಗಿ ಬರುವ ದೇವತೆಗಳಿಗೆ ಆಹಾರಾದ್ಯುಪಚಾರಗಳು ಹೆಚ್ಚುಕಮ್ಮಿಯಾಗದಂತೆ ನೋಡಿಕೊಳ್ಳುವ ಭಾರ ನಿನ್ನದು. ಇದರಲ್ಲಿ ನಮಗೆ ಯಾವ ಆಕ್ಷೇಪಣೆಯೂ ಬರದಂತೆ ನೋಡಿಕೋ. ॥೩೫-೩೬॥

ಕುಮುದಗಿರಿಯೇ, ಕ್ಷೇಮವಾಗಿದ್ದೀಯಾ. ನೀನು ವಿವಾಹಾರ್ಥವಾಗಿ ಬಂದಿರುವ ದೇವತೆಗಳಿಗೂ, ಗಣಗಳು, ಮುನಿಗಳು ಇವರಿಗೂ ಭೋಜನಾನಂತರ ತಾಂಬೂಲವನ್ನೊದಗಿಸುವ ಕಾರ್ಯವನ್ನು ನೋಡಿಕೊ. ಅವರಿಗೆ ತೃಪ್ತಿಯಾಗುವಷ್ಟು

ದರ್ದುರಾತಂದ್ರಿತೋ ಭೂತ್ವಾ ವಸೇಹ ಪ್ರತಿಪಾಲಯ ।
ಭವತ್ಸು ನ್ಯಸ್ತಭಾರೋಸ್ಮಿ ಮೈನಾಕೇನ ಸುಖಂ ವಸೇ ॥೩೯॥

ಕುಮುದೋ ವಸ್ತ್ರಭೂಷಾಂಗಾಂ ಪ್ರದಾನೇ ನಿರತೋ ಭವೇತ್ ।
ಪರ್ವತೇಂದ್ರಾಂಗನಾಃ ಸರ್ವಾ ಮೇನಯಾ ಸಹ ಸಾದರಂ ॥೪೦॥

ವೈವಾಹಿಕೇತ್ರ ಕನ್ಯಾಯಾಃ ಮಂಗಲಾಚರಣೇ ರತಾಃ ।
ಸುವಾಸಾಭರಣೈಃ ಪುಷ್ಪೈರ್ಗಂಧೈಶ್ಚಾತ್ರ ವಿಭೂಷಿತಾಃ ॥೪೧॥

ಭಕ್ಷ್ಯೈರ್ಭೋಜ್ಯೈಃ ಸಮರ್ಚಂತು ಶಿವಂ ಸುರಗಣೈರ್ದ್ವಿಜೈಃ ।
ನೈವಾಜ್ಞಾಪ್ರಸರಃ ಕಾರ್ಯೋ ಭವದ್ಭಿರ್ಮೇ ವಿಚಾರಿತಂ ॥೪೨॥

ಕರ್ತವ್ಯಂ ಸಾವಧಾನೇನ ನಾವಿಸ್ರಬ್ಧೇನ ಚೇತಸಾ ।
ನಾವಿನೀತೈಃ ಸದಾ ಭಾವ್ಯಮುಭಯಾಂಗೈಃ ಕದಾಚನ ॥೪೩॥

---

ತಾಂಬೂಲವನ್ನು ಕೊಡುವ ಭಾರ ನಿನ್ನದು. ಅಂಜನಗಿರಿಯೇ, ನೃತ್ತವಾದ್ಯಾದಿಗಳನ್ನು ನಡೆಸುತ್ತಾ ಬಾಯಾರಿದವರಿಗೆ ಪಾನೀಯಾದಿಗಳನ್ನೂ ನಿದ್ದೆಮಾಡುವವರಿಗೆ ಹಾಸಿಗೆಗಳನ್ನೂ ಒದಗಿಸುವ ಕಾರ್ಯದಲ್ಲಿ ನೀನು ತತ್ಪರನಾಗು. ಇದೇ ನಿನ್ನಿಂದ ನಡೆಸಲ್ಪಡುವ ಕಾರ್ಯ. ॥೩೭-೩೮॥

ದರ್ದುರನೇ, ಇದೇ ಕೆಲಸದಲ್ಲಿ ನೀನೂ ಸಹಾಯಕನಾಗು. ಈರೀತಿ ನಿಮ್ಮೆಲ್ಲರಿಗೂ ಒಂದೊಂದು ಅಧಿಕಾರವನ್ನಿತ್ತು, ನಾನು ಮೈನಾಕನೊಡನೆ ಸುಖದಿಂದಿರುವೆನು. ಕುಮುದನು ವಸ್ತ್ರಭೂಷಣಗಳಿಂದ ಅಲಂಕೃತಳಾದ ವಧುವನ್ನು ವಿವಾಹಮಂಟಪಕ್ಕೆ ಕರೆತರಲಿ. ನಿಮ್ಮ ನಿಮ್ಮ ಪತ್ನಿಯರೆಲ್ಲಾ ಮೇನಾದೇವಿಯೊಡಗೂಡಿ ಉಪಯುಕ್ತವಾದ ಕಾರ್ಯನಿರ್ವಹಣದಲ್ಲಿ ಸಹಾಯಕರಾಗಿರಲಿ. ॥೩೯-೪೦॥

ಈ ವಿವಾಹದಲ್ಲಿ ಮಂಗಳಕಾರ್ಯನಿರ್ವಾಹಾರ್ಥವಾಗಿರುವ ಕನ್ನಿಕೆಯರಿಗೆಲ್ಲಾ ದಿವ್ಯವಾದ ವಸ್ತ್ರಾಭರಣಗಳನ್ನೂ, ಗಂಧಪುಷ್ಪಾದಿಗಳನ್ನೂ ಕೊಟ್ಟು ಸತ್ಕರಿಸಿರಿ. ಶಿವನಿಗೂ, ಶಿವಾನುಯಾಯಿಗಳಾದ ದೇವತೆಗಳಿಗೂ, ಭೂಸುರರಿಗೂ ಭಕ್ಷ್ಯಭೋಜ್ಯಾದಿಗಳು ಯಥೇಚ್ಛವಾಗಿ ದೊರಕುವಂತೆ ಏರ್ಪಡಿಸಿರಿ. ಇದೇ ನನ್ನ ಅಪ್ಪಣೆ. ಈ ಅಪ್ಪಣೆಯನ್ನು ವಿಚಾರಮಾಡಿ ತಪ್ಪದೆ ನಡೆಸುವುದು ನಿಮ್ಮ ಈಗಿನ ಕರ್ತವ್ಯ. ॥೪೧-೪೨॥

ನೀವು ನಿಮ್ಮ ನಿಮ್ಮ ಕರ್ತವ್ಯಗಳನ್ನು ಸಾವಧಾನದಿಂದಲೂ, ಎಚ್ಚರಿಕೆ

ಮೇನಾ ಮೇನೇ ಸ್ವಮಾತ್ಮಾನಂ ಪರ್ವತೇಂದ್ರಾಂಗನಾವೃತಂ ।
ತಾನ್ ಸಂವಿಭಜ್ಯ ಸಾ ದೇವೀ ವಸ್ತ್ರಾಲಂಕಾರಭೂಷಣೈಃ ॥೪೪॥

ಭಕ್ಷ್ಯಭೋಜ್ಯೈಶ್ಚ ಪಾನೀಯೈರ್ಗಂಧಪುಷ್ಪಪ್ರದಾಪನೈಃ ।
ಸ್ವಪುತ್ರನಿರ್ವಿಶೇಷಾನ್ ಸಾ ಗಿರೀನ್ ಸಂತೋಷ್ಯ ಸುವ್ರತಾ ॥೪೫॥

ಪತಿವ್ರತಾ ತದಾ ಮೇನಾ ಮಂಗಲಾಚರಣೋದ್ಯತಾ ।
ಪರೇಹ್ನಿ ಗಿರಿರಾಟ್ತತ್ರ ಕೃತಕೌತುಕಮಂಗಲಃ ॥೪೬॥

ಮೈನಾಕಮಾಹ ಪುತ್ರಂ ತಂ ಗಿರೀನಾನಯ ಮೇಂತಿಕಂ ।
ಸ್ನಾತಾನ್ ದಿವ್ಯಾಂಬರಧರಾನ್ ಗಂಧಸ್ರಗ್ಭೂಷಣೈರ್ಯುತಾನ್॥೪೭॥

ಸದಾರತನಯಾ ತತ್ರ ವಿಮಾನಂ ಮೇ ದ್ರುತಂ ಸುತ ।
ಸುತೋರಣಪತಾಕಾಢ್ಯಂ ರತ್ನಪುಷ್ಪಸರಾವೃತಂ ॥೪೮॥

---

ಯಿಂದಲೂ ನಡೆಸಿರಿ. ಅವಿನೀತರಾಗಿ ವರ್ತಿಸಬೇಡಿ. ಅಲಂಕಾರಾದಿಗಳಿಂದ ನೀವು ಮೊದಲು ಭೂಷಿತರಾಗಿರಿ. ಮೇನಾದೇವಿಯೂ ಸಹ ಸ್ವಕರ್ತವ್ಯವನ್ನು ಗ್ರಹಿಸಿರುವಳು. ಅದರ ಜೊತೆಗೆ ಪರ್ವತರಾಣಿಯರೆಲ್ಲಾ ಆಕೆಗೆ ಸಹಾಯಕರಾಗಿರುವರು. ಅವರ ಅಲಂಕಾರಾದಿ ಸಾಮಗ್ರಿಗಳನ್ನೂ ನೀವು ತಪ್ಪದೆ ಒದಗಿಸಿರಿ. ||೪೩-೪೪||

ಮೇನಾದೇವಿಯು ಆ ಪರ್ವತಸ್ತ್ರೀಯರಿಗೂ ಮತ್ತು ಆಜ್ಞಾನುವರ್ತಿಗಳಾದ ಪರ್ವತಗಳಿಗೂ ಮಕ್ಕಳ ಅಭಿಮಾನವನ್ನು ತೋರಿಸುತ್ತಾ, ಅವರಿಗೆ ಗಂಧಪುಷ್ಪಾದಿಗಳನ್ನೂ, ಭಕ್ಷ್ಯಭೋಜ್ಯಾದಿಗಳನ್ನೂ ಕಾಲಕಾಲಕ್ಕೆ ಒದಗಿಸುತ್ತಾ ಉತ್ಸಾಹದಿಂದಿದ್ದಳು. ವಿವಾಹಕ್ಕೆ ಮೂರುದಿನ ಮುಂಚಿತವಾಗಿಯೇ ಮೇನಾದೇವಿಯು ಮಂಗಳಸ್ನಾನ ಮಾಡಿದಳು. ಮುಂದಿನ ದಿನ ಗಿರಿರಾಜನು ಮಂಗಳಸ್ನಾನಾದಿಗಳನ್ನು ನೆರವೇರಿಸಿಕೊಂಡನು. ||೪೫-೪೬||

ಅನಂತರ ಮಗನಾದ ಮೈನಾಕನನ್ನು ಕರೆದು "ಅಯ್ಯಾ, ಈಗಲೇ ಅಲಂಕೃತರಾಗಿರುವ ಪರ್ವತಗಳೆಲ್ಲರೂ ಪತ್ನೀ ಸ್ನಾನಮಾಡಿ ವಸ್ತ್ರಗಂಧಾದಿಗಳಿಂದ ಅಲಂಕೃತರಾಗಿರುವ ಪರ್ವತಗಳೆಲ್ಲರೂ ಪತ್ನೀ ಪುತ್ರ ಸಮೇತರಾಗಿ ಇಲ್ಲಿಗೆ ಬರುವಂತೆ ಆಜ್ಞಾಪಿಸು. ಮತ್ತು ದಿವ್ಯವಾದ ವಿಮಾನವೊಂದನ್ನು ತೆಗೆದುಕೊಂಡು ಬಾ. ಅದು ದಿವ್ಯವಾದ ತೋರಣ, ಪತಾಕೆ, ರತ್ನ ಪುಷ್ಪಮಾಲೆ ಇವುಗಳಿಂದ ಅಲಂಕೃತವಾಗಿರಲಿ. ||೪೭-೪೮||

ವಿತಾನಪಟ್ಟವಸ್ತ್ರೈಶ್ಚ ಭಾಸುರಂ ಸಮಲಂಕೃತಂ ।
ಭ್ರಾಜತ್ಕುಂಭಪತಾಕಾಢ್ಯಂ ಧೂಪಿತಂ ಮಣಿದೀಪಿತಂ ॥೪೯॥

ಸ ಗಿರಿಃ ಸ ಪಿತುರ್ವಾಕ್ಯಂ ನತ್ವಾ ಜಗ್ರಾಹ ಸಾದರಂ ।
ಗಿರೀಂದ್ರವಚಸಾ ತತ್ರ ಗಿರೀನಾಹ ತದಾ ಮುದಾ ॥೫೦॥

ಮೈನಾಕಃ ಸ ತದಾ ವಾಕ್ಯಂ ಸುವಿನೀತೇನ ಚೇತಸಾ ॥೫೧॥

॥ ಮೈನಾಕ ಉವಾಚ ॥

ಗಿರಿರಾಜಂ ಗಿರಿಶ್ರೇಷ್ಠಂ ದ್ರಷ್ಟುಮಿಚ್ಛಥ ಸಾದರಂ ।
ಸದಾರತನಯಾಸ್ಸರ್ವೇ ವಸ್ತ್ರಾಭರಣಭೂಷಿತಾಃ ॥೫೨॥

ಗೌರೀಂ ಚಿರಂತಪಃಕ್ಲಿಷ್ಟಾಂ ಭವದ್ಭಿರ್ದ್ರಷ್ಟುಮಿಚ್ಛತಿ ।
ಇತಿ ಮೈನಾಕವಚಸಾ ಗಿರಯಸ್ಸತ್ವರಾಸ್ತದಾ ॥೫೩॥

ಗಂಧಾಲಂಕಾರವಾಸೋಭಿಃ ಸದಾರತನಯಾಸ್ತದಾ ।
ಭೂಷಿತಾ ಗಿರಿರಾಜಾನಂ ಆಯಯುಸ್ತೇ ಪ್ರಣಮ್ಯ ಚ ॥೫೪॥

---

ವಿಮಾನಕ್ಕೆ ರೇಶ್ಮೆಯ ಮೇಲ್ಕಟ್ಟುಗಳನ್ನು ಕಟ್ಟಿಸು. ಕಲಶ ಕನ್ನಡಿಗಳಿಂದ ಅದನ್ನು ಅಲಂಕರಿಸು. ಧೂಪದಿಂದ ಗಮಗಮವನ್ನಾಗಿಮಾಡು " ಎಂದು ಅಪ್ಪಣೆ ಮಾಡಲು, ಮೈನಾಕನು ತಂದೆಯ ಆಜ್ಞೆಯಂತೆ ಸಂತೋಷದಿಂದ ಹೋಗಿ, ಇತರ ಗಿರಿದೇವತೆಗಳೊಡನೆ, ವಿನಯಪೂರ್ವಕವಾಗಿ ಈರೀತಿ ನುಡಿದನು. ॥೪೯-೫೦-೫೧॥

" ಗಿರಿಶ್ರೇಷ್ಠರಿರಾ, ನಿಮಗೆ ರಾಜನಾಗಿರುವ ನಗರಾಜನು ನಿಮ್ಮ ಪತ್ನೀಪುತ್ರರೊಡನೆ ನಿಮ್ಮನ್ನು ನೋಡಲಿಚ್ಛಿಸುತ್ತಾನೆ. ಆದ್ದರಿಂದ ವಸ್ತ್ರಾಭರಣಭೂಷಿತರಾಗಿ ಈಗಲೇ ನಮ್ಮ ತಂದೆಯ ಸಮೀಪಕ್ಕೆ ಹೊರಡಿರಿ. ನಿಮ್ಮೆಲ್ಲರ ಜೊತೆಯಲ್ಲಿ ಬಹುಕಾಲ ತಪಸ್ಸಿನಿಂದ ಖಿನ್ನಳಾಗಿ ಕೃಶಳಾಗಿರುವ ಮಗಳಾದ ಗೌರಿಯನ್ನು ನೋಡಲು ಈಗ ತೆರಳುವನು " ಹೀಗೆಂದು ಮೈನಾಕನ ವಾಕ್ಸುಧೆಯನ್ನು ಕೇಳಿ ಸಮಸ್ತ ಗಿರಿಗಳೂ ಅಲಂಕೃತರಾಗಿ ಹೊರಡಲನುವಾದರು. ॥೫೨-೫೩॥

ಗಂಧಪುಷ್ಪಾದಿಗಳಿಂದಲಂಕೃತರಾಗಿ ಸಮಸ್ತ ಗಿರಿಗಳೂ, ಪತ್ನೀಪುತ್ರಸಹಿತರಾಗಿ ಗಿರಿರಾಜನ ಸಮೀಪಕ್ಕೆ ಬಂದು ಕೈಜೋಡಿಸಿ ನಿಂತು " ಮುಂದೇನಪ್ಪಣೆ !

ಊಚುಃ ಪ್ರಾಂಜಲಯಸ್ಸರ್ವೇ ಕಿಮತ್ರ ಕರವಾಮ್ಹತೇ ।
ತ್ವದಾಜ್ಞಯೈವ ಸರ್ವತ್ರ ವಿಹಿತಂ ಸಿದ್ಧಮೇವ ತೇ ॥೫೫॥

॥ ಹಿಮವಾನುವಾಚ ॥

ಸರ್ವಸಂಪೂರ್ಣಮೇವಾದ್ಯ ತ್ವಯಿ ಶಾಸತಿ ಭೂಧರೇ ।
ನ ನ್ಯೂನಂ ಕಿಂಚಿದೇವಾತ್ರ ಸಂವಿಧಾನಂ ವಿಧಸ್ವ ನಃ ॥೫೬॥

ತದಾ ಗಿರೀಶಾಂ ವಚನಾತ್ಸ್ರಹೃಷ್ಟೋ ವಾಚಮಬ್ರವೀತ್ ॥೫೭॥

ಅಪರ್ಣಾಂ ಪರ್ಣವಸನಾಂ ಕ್ಲಿಷ್ಟಾಂ ದೇವೀಂ ತಪೋರತಾಂ ।
ಸಮಾನಯಾಮಿ ತಾಂ ದೇವೀಂ ಭವದ್ಭಿಃ ಕೃತಮಂಗಲಾಂ ॥೫೮॥

ತಪೋವನಾನ್ಮಹೇಶಸ್ಯ ಸಮುದ್ವಾಹೋರುಮಂಗಲೇ ।
ಸಮಾರುಹಂತು ಭದ್ರಂ ವೋ ವಿಮಾನಂ ಮೇ ಸದಾರಕಾಃ ॥೫೯॥

ತದಾ ತಸ್ಯಾಜ್ಞಯಾ ಸರ್ವೇ ವಿಮಾನಮಧಿರುಹ್ಯತೇ ।
ಮೇನಾಪಿ ನಗನಾರೀಭಿಃ ಕೃತಕೌತುಕಮಂಗಲಾ ॥೬೦॥

---

ನಿನ್ನ ಆಜ್ಞಾನುಸಾರವಾಗಿ ಇಗೋ ನಾವೆಲ್ಲರೂ ಸಿದ್ಧರಾಗಿ ಬಂದಿರುವೆವು. ನಿನ್ನ ಉದ್ದಿಷ್ಟಕಾರ್ಯಗಳೆಲ್ಲವನ್ನೂ ನಾವು ಸಿದ್ಧಗೊಳಿಸಿರುವೆವು. ॥೫೪-೫೫॥

ಮಹಾರಾಜನೇ, ನಿನ್ನ ಆಳ್ವಿಕೆಯಲ್ಲಿ ಯಾವುದಕ್ಕೆ ಏನು ಕೊರತೆ ಇದೆ? ಮುಂದಿನ ಕಾರ್ಯವನ್ನು ಆಜ್ಞಾಪಿಸು. ಇಲ್ಲಿ ಎಲ್ಲವೂ ಜಯಪ್ರದವಾಗಿ ಸಿದ್ಧವಾಗಿದೆ' ಎಂದು ಪ್ರಾರ್ಥಿಸಿದರು. ಆಗ ಹಿಮವಂತನು ಅವರೊಡನೆ ಹೀಗೆಂದನು. "ಗಿರಿಸ್ನೇಹಿತರಿರಾ, ನನ್ನ ಮಗಳು ಬಹುಕಾಲದಿಂದ ಶಿವನನ್ನು ಪತಿಯನ್ನಾಗಿ ವರಿಸಲು ಘೋರತಪಸ್ಸು ಮಾಡಿರುವಳು. ಚಿಗುರೆಲೆಯನ್ನು ಸಹ ಭಕ್ಷಿಸದೆ, ಎಲೆಯುಡುಗೆಯುಟ್ಟು ಕೃಶಾಂಗಳಾಗಿರುವಳು. ಈಗ ಮಂಗಳಸ್ನಾನಮಾಡಿ ವಿವಾಹಕ್ಕೆ ಸಿದ್ಧಳಾಗಿರುವಳು. ಅಂತಹ ಗೌರೀದೇವಿಯನ್ನು ನಿಮ್ಮೊಡನೆ ಹೋಗಿ ತಪೋವನದಿಂದ ಇಲ್ಲಿಗೆ ಕರೆತರಬೇಕಾಗಿದೆ. ॥೫೬-೫೭-೫೮॥

ಈಗ ನೀವೆಲ್ಲರೂ ವಿಮಾನಾರೂಢರಾಗಿ ಪತ್ನಿಸಮೇತರಾಗಿ ಹೊರಡಿರಿ. ಗಿರಿರಾಜನ ಈ ಅಪ್ಪಣೆಯಂತೆ ಎಲ್ಲರೂ ವಿಮಾನವನ್ನು ಹತ್ತಿದರು. ಇತ್ತ

ಪರ್ವತೇಂದ್ರಸ್ಯ ಮೈನಾಕೋ ಯಯೌ ಸ ನಗಸತ್ತಮೈಃ ।
ಸುಮನೋವರ್ಷನಿಕರೈ ರ್ಗಾಯನ್ ಗಂಧರ್ವಸತ್ತಮೈಃ ॥೬೧॥

ನೃತ್ಯಂತ್ಯಪ್ಸರಸಾಂ ಸಂಘೈರ್ಭೇರೀ ಪಟಹನಿಸ್ವನೈಃ ।
ನೀರಾಜನಕರೈಸ್ತತ್ರ ಯಯೌ ದೇವೀಂ ವಿಲೋಕಿತುಂ ॥೬೨॥

ಗತ್ವಾ ತಪೋವನಂ ದೇವ್ಯಾ ಗಿರಿಭಿರ್ಗಿರಿನಾಯಕಃ ।
ಮೇನಯಾ ಗಿರಿಪತ್ನೀಭಿಸ್ತಾಂ ವಿಲೋಕ್ಯ ತಪಸ್ವಿನೀಂ ॥೬೩॥

ರೂಷಿತಾಂ ರಜಸಾ ತತ್ರ ಜಟಿಲಾಲಕಸಂಯುತಾಂ ।
ತಾಮುತ್ಥಾಪ್ಯ ಸ್ವಕೋತ್ಸಂಗೇ ಸಂನಿವೇಶ್ಯ ಗಿರೀಶ್ವರಃ ॥೬೪॥

ಉವಾಚ ಸಾಂತ್ವಯನ್ ಗೌರೀಂ ಪರ್ವತೈರ್ಮೇನಯಾ ಸಹ ॥೬೫॥

॥ ಹಿಮವಾನುವಾಚ ॥

ಚಿರಂ ಕ್ಲಿಷ್ಟಾಸಿ ತಪಸಾ ಸಫಲಸ್ತೇ ಮನೋರಥಃ ।
ನಾರದೇನ ಸುರೈಃ ಪ್ರೋಕ್ತಂ ಶರ್ವಸ್ಯಾಗಮನಂ ಮಮ ॥೬೬॥

---

ಮೇನಾದೇವಿಯೂ ಸಹ ಸಂಭ್ರಮದಿಂದ ಮಂಗಳದ್ರವ್ಯಗಳಿಂದ ಕೂಡಿ ಪತಿಯೊಡನೆ ಪ್ರಯಾಣಸನ್ನದ್ಧಳಾದಳು. ॥೫೯-೬೦॥

ಹಿಮವಂತನು ಪತ್ನೀಪುತ್ರಾದಿಗಳೊಡಗೂಡಿ ಹೊರಟಾಗ ಗಂಧರ್ವರು ಗಾನಮಾಡಿದರು. ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತು. ಅಪ್ಸರಸ್ತ್ರೀಯರು ದೇವವಾದ್ಯಗಳನ್ನು ಬಾರಿಸುತ್ತಾ, ಆರತಿಯ ತಟ್ಟೆಯನ್ನು ಕೈಯಲ್ಲಿ ಹಿಡಿದು ದೇವಿಯ ದರ್ಶನಾರ್ಥವಾಗಿ ಕುತೂಹಲದಿಂದ ಮುಂದುವರಿದರು. ॥೬೧-೬೨॥

ತಪೋವನದಲ್ಲಿ ಉಗ್ರರೀತಿಯಿಂದ ತಪಸ್ಸು ಮಾಡಿ ಕೃಶಾಂಗಿನಿಯಾಗಿರುವ ಗೌರೀದೇವಿಯನ್ನು ಗಿರಿರಾಜನು ನೋಡಿದನು. ಪಾರ್ವತಿಯ ದೇಹವು ಧೂಳಿನಿಂದ ತುಂಬಿಹೋಗಿತ್ತು. ಜಟೆಯೊಡನೆ ಮುಂಗುರುಳು ಕೂಡಿಹೋಗಿದ್ದಿತು. ಇಂತಹ ಮಗಳನ್ನು ನೋಡುತ್ತಾ ಹಿಮವಂತನು ಜಾಗ್ರತೆ ಸಮೀಪಕ್ಕೆ ಹೋಗಿ ಗೌರೀದೇವಿಯನ್ನು ಸಮಾಧಾನಪಡಿಸುತ್ತಾ, ತನ್ನ ತೊಡೆಯಮೇಲೆ ಕೂರಿಸಿಕೊಂಡು ಈರೀತಿ ಮಾತನಾಡಲಾರಂಭಿಸಿದನು. ॥೬೩-೬೪-೬೫॥

"ಪುತ್ರೀರತ್ನವೇ, ನೀನು ಬಹುಕಾಲದಿಂದ ತಪಸ್ಸುಮಾಡಿ ಕೊನೆಗೆ

ತಪೋದ್ವಾಹೋತ್ರ ಸುಭಗೇ ಮಂಡಪಸ್ನಾತ್ಮನಸ್ತಸುಂ ।
ಇತ್ಯುಕ್ತ್ವಾ ಪಾರ್ವತೀ ಹೃಷ್ಟಾ ಸಮಾಪ್ಯ ನಿಯಮಂ ವನಾತ್ ॥೬೭॥

ತಪೋವನಾಂಗನಾಸ್ಸರ್ವಾಃ ಸಂತೋಷ್ಯ ವರವಾಸಸಾ ।
ನಿಶಾಗಂಧೈಃ ಕುಂಕುಮೈಶ್ಚ ಗಂಧಪುಷ್ಪೈಸ್ಸ ದಕ್ಷಿಣಾ ॥೬೮॥

ವಿಭಾಜಯನ್ ಮುನಿಗಣಂ ಹಿಮಶೈಲಕೃತಾಶ್ರಮಂ ।
ಗೋಭಿರ್ಹಿರಣ್ಯವಾಸೋಭಿರಭಿಪೂಜ್ಯ ಚ ಸಾ ತದಾ ॥೬೯॥

॥ ಪಾರ್ವತ್ಯುವಾಚ ॥

ಉತ್ಥಾಯ ನತ್ವಾ ಗಿರಿಣಾ ಕೇದಾರಂಚಾಭಿಪೂಜ್ಯ ಚ ।
ಗಂಧಮಾಲ್ಯೈರ್ಬಿಲ್ವಪತ್ರೈಃ ಪಂಚಾಮೃತನಿಷೇಚನೈಃ ॥೭೦॥

ಧೂಪೈರ್ದೀಪಾವಲೀಭಿಶ್ಚ ಖಂಡಕರ್ಪೂರಸೋಜ್ಜ್ವಲೈಃ ।
ನತ್ವಾ ತುಷ್ಟಾವ ಹೃಷ್ಟಾ ಸಾ ಮೇನಯಾ ಭೂಧರೇಣ ಚ ।೭೧॥

---

ಆದರ ಫಲವನ್ನೂ ಪಡೆದಿರುವೆ. ನಾರದಮಹರ್ಷಿಗಳ ಮೂಲಕ ದೇವತೆಗಳು ಶಂಕರನು ಪಾರ್ವತಿಯನ್ನು ವರಿಸುವನೆಂಬ ಸಮಾಚಾರವನ್ನು ಹೇಳಿಕಳುಹಿಸಿರುವರು. ಆದ್ದರಿಂದ ದೇವಿಯೇ, ಈ ತಾಪಸಿಯ ವೇಷವನ್ನು ತೊರೆದು ವಿವಾಹ ವಧುವಿನ ಅಲಂಕಾರವನ್ನು ಧರಿಸು" ಎಂದು ಹಿಮವಂತನು ಆಡಿದ ಮಾತುಗಳನ್ನು ಕೇಳಿ ಪಾರ್ವತಿಯು ಸಂತುಷ್ಟಳಾಗಿ ತನ್ನ ತಪೋನಿಯಮವನ್ನು ತೊರೆದು ನಗರಕ್ಕೆ ಹೊರಡಲು ಸಿದ್ಧಳಾದಳು ॥೬೬-೬೭॥

ಹೊರಡುವಾಗ ತಪೋವನದಲ್ಲಿದ್ದ ಋಷಿಪತ್ನಿಯರನ್ನು ದಿವ್ಯಗಂಧವಸ್ತ್ರಾದಿಗಳಿಂದಲೂ, ಅರಿಶಿನಕುಂಕುಮ ದ್ರವ್ಯದಕ್ಷಿಣಾದಿಗಳಿಂದಲೂ ತೃಪ್ತಿಪಡಿಸಿ, ಅಲ್ಲಿಯೇ ತಪಸ್ಸು ಮಾಡುತ್ತಿದ್ದ ಋಷಿವರ್ಗಕ್ಕೆ ಗೋವು, ಸುವರ್ಣ, ವಸ್ತ್ರ ಇವೇ ಮೊದಲಾದ ವಸ್ತುಜಾಲವನ್ನು ದಾನರೂಪವಾಗಿತ್ತು, ಅಲ್ಲಿಂದ ಕೇದಾರೇಶ್ವರ ದೇವಾಲಯಕ್ಕೆ ಬಂದಳು. ಅಲ್ಲಿ ಗಂಧಮಾಲ್ಯಾದಿಗಳಿಂದಲೂ ಬಿಲ್ವಪತ್ರೆ, ಪಂಚಾಮೃತದ್ರವ್ಯ, ಧೂಪ, ದೀಪ, ಕರ್ಪೂರ ನೀರಾಜನ ಇವುಗಳಿಂದಲೂ ವಿಧಿವತ್ತಾಗಿ ಪೂಜಿಸಿ, ಸಂತುಷ್ಟಾಂತರಂಗವುಳ್ಳವಳಾಗಿ ತಂದೆ ತಾಯಿಯರೊಡಗೂಡಿ ಕೇದಾರೇಶ್ವರನನ್ನು ಈರೀತಿ ಸ್ತೋತ್ರಮಾಡಿದಳು. ॥೬೮-೬೯-೭೦॥

"ಭಕ್ತರ ಪಾಪನಾಶಕನೇ, ಮುರಾರಿಯೆನಿಸಿದ ಮಹಾವಿಷ್ಣುವಿನಿಂದಲೂ .

ಹರ ಹರ ಮುರಜಿತ್ಪ್ರಪೂಜಿತಾಂಘ್ರೇ
ವರಕಾಕೋದರ ಹಾರಸೋಮಚೂಡ ।
ಗರಕಂದಾನಲ ಚಾರುನೇತ್ರ ಶಂಭೋ
ಸದಯಂ ಮಾಮವಲೋಕಯಾಶು ದೀನಾಂ ॥೨೨॥

ಸ್ತುತ್ವಾ ನತ್ವಾ ಚ ಸಾ ದೇವೀ ಕೇದಾರಾನುಜ್ಞಯಾ ಶಿವಾ ।
ಸಮಾಪ್ಯ ಚ ತಪಸ್ತತ್ರ ಮೇನಯಾ ಸಹ ನಿರ್ಯಯೌ ॥೨೩॥

ವಿಚಿತ್ರಮಂಟಪೇ ತತ್ರ ರತ್ನಸಿಂಹಾಸನೇ ಸ್ಥಿತಾ ।
ಪರ್ವತೇಂದ್ರಾಂಗನಾ ದೇವೀಂ ಪರಿತಸ್ತತ್ರ ಆಸತೇ ॥೨೪॥

ವಿಶೋಧ್ಯ ತಾ ಜಟಾಂ ದೇವ್ಯಾ ಕಂಕತ್ಯೈರುತ್ಕಿರತ್ಯಥ ।
ಗಂಧತೈಲೈಸ್ತಥಾಭ್ಯಜ್ಯ ಮೇನಯಾ ತಾಂ ನಗಾಂಗನಾಃ ॥೨೫॥

ಹರಿದ್ರಾಪಟವಾಸೋದ್ಯೈಃ ಕವೋಷ್ಣೈರಭಿಷಿಚ್ಯ ತಾಂ ।
ರಜಸಾ ರೂಷಿತಾಂ ದೇವೀಂ ಚಿರಮುಭ್ಯಜ್ಯತಾಂ ತದಾ ॥೨೬॥

---

ಪೂಜಿತವಾದ ಪಾದಪದ್ಮವುಳ್ಳವನೇ, ನೀನು ಆದಿಶೇಷನನ್ನು ಹಾರವನ್ನಾಗಿಯೂ, ಅರ್ಧಚಂದ್ರನನ್ನು ಅಲಂಕಾರ ವಸ್ತುವನ್ನಾಗಿಯೂ, ವಿಷರಾಶಿಯನ್ನು ನೀಲಮಣಿಯನ್ನಾಗಿಯೂ ಧರಿಸಿರುವೆ. ಅಗ್ನಿಯೇ ನಿನಗೊಂದು ನೇತ್ರವೆನಿಸಿರುವುದು. ಇಂತಹ ಮಹಾಮಹಿಮನಾದ ನೀನು ದೀನಳಾದ ನನ್ನನ್ನು ದಯೆಯಿಂದ ನೋಡಿ ಸರ್ವ ಪ್ರಕಾರದಿಂದಲೂ ನನ್ನನ್ನು ಸಲಹು.'' ॥೨೧-೨೨॥

ಹೀಗೆ ಕೇದಾರೇಶ್ವರನನ್ನು ಸ್ತುತಿಸಿ, ನಮಿಸಿ, ಅನುಜ್ಞೆ ಪಡೆದು, ತನ್ನ ತಪಶ್ಚರ್ಯೆಯನ್ನು ಅಲ್ಲಿಗೆ ನಿಲ್ಲಿಸಿ, ತಾಯಿಯೊಡಗೂಡಿ ತಂದೆಯುಮನೆಗೆ ಬಂದಳು. ಅಲ್ಲಿ ತನ್ನ ವಿವಾಹಕ್ಕಾಗಿ ಸಿದ್ಧಗೊಳಿಸಿದ್ದ ವಿಚಿತ್ರಮಂಟಪದಲ್ಲಿ ರತ್ನಸಿಂಹಾಸನಾರೂಢಳಾಗಿ ಕುಳಿತು, ಪರ್ವತಪತ್ನಿಯರಿಂದ ಸೇವಿಸಲ್ಪಡುತ್ತಿದ್ದಳು. ॥೨೩-೨೪॥

ಪರ್ವತಸ್ತ್ರೀಯರು ಪಾರ್ವತಿಯ ಜಟೆಯನ್ನು ನಿದಾನವಾಗಿ ಬಿಚ್ಚಿ ಬಾಚಣಿಗೆಯಿಂದ ಬಾಚಿ, ಸುಗಂಧತೈಲಗಳನ್ನು ತೊಡೆದು ಮೊದಲು ಮೇನಾದೇವಿಯೊಂದಿಗೆ ಪಾರ್ವತಿಗೆ ಮಂಗಳಸ್ನಾನಮಾಡಿಸಿದರು. ಅರಿಶಿನ ಮಿಶ್ರವಾಗಿ ಸುಖೋಷ್ಣವಾಗಿರುವ ನೀರಿನಿಂದ ಮಣ್ಣಿನ ಧೂಳಿನಿಂದ ವ್ಯಾಪ್ತವಾಗಿದ್ದ ಆ ಪಾರ್ವತಿಯ ದೇಹವನ್ನು ಶುದ್ಧಿಗೊಳಿಸಿದರು. ॥೨೫-೨೬॥

ತದಂಗಜಂ ಮಲಂ ತತ್ರ ಪಿಂಡೀಚಕ್ರುರ್ನಗಾಂಗನಾಃ ।
ಅಪರ್ಣಾಪರ್ಣವಸನಂ ತತ್ಯಜುರ್ಗಿರಿಪತ್ನಯಃ ॥೭೭॥

ಖೇಲಂತೀ ಸಾ ತದಾ ದೇವೀ ಸ್ವಾಂಗಜಾತಮಲೇನ ವೈ ।
ವಿಧಾಯ ಮೂರ್ತಿಂ ರುಚಿರಾಂ ಗಜಾಸ್ಯಾಂ ವರ್ಣಮಂಡಿತಾಂ ॥೭೮॥

ಭೂಷಣೈರ್ಮಕುಟೇನೈವ ಕಟಿಸ್ತುತಮಧುವ್ರತಾಂ ।
ಸಂಪ್ರೋಕ್ಷ್ಯೋಜ್ಜೀವ್ಯ ತಾಂ ಮೂರ್ತಿಂ ಪಶ್ಯಂತೀನಾಂ ಚ ವಿಸ್ಮಯಂ ॥೭೯॥

ಉವಾಚ ಗಿರಿಜಾ ತತ್ರ ದೃಷ್ಟ್ವಾ ತತ್ರ ಗಜಾನನಂ ।
ಪುತ್ರೋ ಮೇ ಭವ ದೇವೇಶ ವಿಘ್ನರಾಜಸ್ತ್ವಮೇವ ಮೇ ॥೮೦॥

ತ್ವಾಮರ್ಚಯಾಮ್ಯಥಾದೌ ಮೇ ನಿರ್ವಿಘ್ನಂ ಮಂಗಲಂ ಭವೇತ್ ।
ಭವೇ ತ್ವಂ ಸರ್ವಕಾರ್ಯೇಷು ಪೂಜ್ಯಃ ಸರ್ವಸುರಾಸುರೈಃ ॥೮೧॥

---

ಪಾರ್ವತಿಯ ದೇಹದಲ್ಲಿ ಮೆತ್ತಿಕೊಂಡಿದ್ದ ತಪಶ್ಚರ್ಯಾಕಾಲದ ಕೊಳೆಯನ್ನೆಲ್ಲಾ ತೆಗೆದು ಒಂದು ಉಂಡೆಮಾಡಿಬಿಟ್ಟರು. ಗಿರಿಜೆಯುಟ್ಟಿದ್ದ ಎಲೆಯುಡುಗೆಯನ್ನು ತೆಗೆದು ದಿವ್ಯಪೀತಾಂಬರವನ್ನುಡಿಸಿದರು. ಪಾರ್ವತಿಯಾದರೋ ತನ್ನ ಮೈಕೊಳೆಯನ್ನು ನೋಡಿ ನಗುತ್ತಾ ಕ್ರೀಡಾರ್ಥವಾಗಿ ತನ್ನ ದೇಹದ ಕೊಳೆಮಣ್ಣಿನಿಂದ ಗಜಮುಖನ ಆಕಾರವನ್ನು ಮಾಡಿದಳು. ॥೭೭-೭೮॥

ಆ ಗಜಮುಖನಿಗೆ ವಿಧವಿಧವಾದ ಆಭರಣಗಳನ್ನೂ, ಮದೋದಕಧಾರೆಯನ್ನೂ ಕಲ್ಪಿಸಿದಳು. ಅನಂತರ ಜಲಧಾರೆಯಿಂದ ಅದನ್ನು ಪ್ರೋಕ್ಷಿಸಿ ಉಜ್ಜೀವನಗೊಳಿಸಿದಳು. ಅದನ್ನು ನೋಡಿದ ಪರ್ವತಸ್ತ್ರೀಯರೆಲ್ಲಾ ಆಶ್ಚರ್ಯಪಡುತ್ತಿದ್ದರು. ಅನಂತರ ಗಿರಿಜೆಯು ಆ ಗಜಾನನಮೂರ್ತಿಯನ್ನು ನೋಡಿ "ಗಜಮುಖನೇ, ದೇವೇಶ್ವರನೇ, ನೀನು ಇಲ್ಲಿಂದ ಮುಂದೆ ನನ್ನ ಪುತ್ರನೆನಿಸು. ಸಕಲ ವಿಘ್ನಗಳಿಗೂ ನಿವಾರಕನೆನಿಸಿ ನೀನು ಸರ್ವಪೂಜ್ಯನಾಗು. ॥೭೯-೮೦॥

ವಿವಾಹಕ್ಕೆ ಮೊದಲು ನಾನೇ ನಿನ್ನನ್ನು ಪೂಜಿಸುವೆನು. ಮುಂದಿನ ಕಾರ್ಯವನ್ನು ನಿರ್ವಿಘ್ನವಾಗಿ ನೀನು ಆಗಗೊಳಿಸು. ಸಕಲ ದೇವರಾಕ್ಷಸರೂ ಸಹ ತಮ್ಮ ಕಾರ್ಯಾರಂಭದಲ್ಲಿ ನಿನ್ನನ್ನು ತಪ್ಪದೆ ಆರಾಧಿಸಲಿ. ಅದರಿಂದ ಅವರ ಇಷ್ಟಕಾರ್ಯವು ಸಿದ್ಧಿಹೊಂದಲಿ. ಇದೇ ನಾನು ನಿನಗೆ ಕೊಟ್ಟಿರುವ ವರ. ಯಾರು ನಿನ್ನನ್ನು

ಏಷ ಮೇ ವರದಾನೇನ ಕೃತಃ ಪುತ್ರೋ ಗಜಾನನಃ ।
ಅನಭ್ಯರ್ಚ್ಯಾತ್ರ ಯೇ ದೇವಂ ನನಮುಂತ್ಯಪಿ ಯೇ ಸದಾ ॥೮೨॥

ತೇಷಾಂ ವಿಘ್ನಪ್ರದೋಯಂ ಚ ಭವಿಷ್ಯತಿ ನ ಸಂಶಯಃ ।
ಇತ್ಯುಕ್ತ್ವಾ ಸಾ ತದಾ ಸ್ನಾತ್ವಾ ಮೇನಯಾ ಸಹ ಸಾದರಂ ॥೮೩॥

ಗಂಧಮಾಲ್ಯಾಂಬರೈಶ್ಚಿತ್ರೈರ್ಭೂಷಯಿತ್ವಾತ್ಮನಸ್ತನುಂ ।
ಧಮ್ಮಿಲ್ಲಮಲ್ಲೀವಿಲಸತ್ಕೇತಕೀವರ ಕರ್ಣಿಕಾಂ ॥೮೪॥

ಛತ್ರಾಕಕುಮುದೋತ್ಫುಲ್ಲ ಸೇವಂತೀ ರತ್ನಸಂತತಿಃ ।
ರತ್ನಗ್ರೈವೇಯ ವಲಯೈರ್ಬಾಹುಬಂಧೈರ್ಮನೋಹರೈಃ ॥೮೫॥

ತಿಲಕಾಂಕಿತಸತ್ಫಾಲಾ ಸಿಂಧೂರಾಕೀರ್ಣಫಾಲಕಾ ।
ಕಾಂಚೀ ಖಚಿತಮಧ್ಯಾಂ ಚ ರಣನ್ನೂಪುರಘೋಷಿತಾಂ ॥೮೬॥

ಮುದ್ರಿಕಾಂಗುಷ್ಠವಲಯೈಃ ಪಾದಪದ್ಮವಿಭೂಷಣೈಃ ।
ಅಲಕ್ತಾರಕ್ತಪಾದಾಬ್ಜಾ ಮೇನಯಾಭೂತ್ತದಾಂಬಿಕಾ ॥೮೭॥

---

ಪೂಜಿಸದೆ ಅಥವಾ ನಮಸ್ಕರಿಸದೆ ಕಾರ್ಯ್ಯರಂಭಮಾಡುವರೋ ಅವರಿಗೆ ನಾನಾ ವಿಘ್ನಗಳುಂಟಾಗಿ ಅವರ ಕಾರ್ಯವೇ ಭಂಗವಾಗಲಿ, ಎಂದು ಆ ಮೂರ್ತಿಗೆ ವರವನ್ನು ಕರುಣಿಸುತ್ತಾ ತಾಯಿಯಾದ ಮೇನೆಯೊಡನೆ ತನ್ನ ಮನೆಗೆ ಹಿಂದಿರುಗಿದಳು. ॥೮೧-೮೨-೮೩॥

ಗಂಧಮಾಲ್ಯಾದಿಗಳಿಂದ ತನ್ನ ದೇಹವನ್ನು ಅಲಂಕರಿಸಿಕೊಂಡಳು. ತನ್ನ ತಲೆಯ ತುರುಬಿಗೆ ಮಲ್ಲಿಗೆ ಕೇತಕೀ ಮುಂತಾದ ಹೂವುಗಳನ್ನು ಮುಡಿದುಕೊಂಡಳು. ತಲೆಯ ಹೆರಳಿಗೆ ರತ್ನಮಯವಾದ ಸೇವಂತಿಗೆ ಹೂವನ್ನು ಧರಿಸಿದಳು. ಕಂಠಕ್ಕೆ ರತ್ನದ ಕೊರಳಡ್ಡಿಕೆಯನ್ನೂ ತೋಳುಗಳಿಗೆ ನಾಗಮುರಿಗೆಯನ್ನೂ ಹಾಕಿಕೊಂಡಳು. ॥೮೪-೮೫॥

ಹಣೆಗೆ ತಿಲಕವನ್ನಿಟ್ಟಳು. ಕೆನ್ನೆಗೆ ಅರಿಶಿನವನ್ನು ಬಳಿದುಕೊಂಡಳು. ಸೊಂಟಕ್ಕೆ ಡಾಬನ್ನೂ ಕಾಲಿಗೆ ಧ್ವನಿಮಾಡುವ ಕಾಲುಬಳೆಯನ್ನೂ, ಕೈಬೆರಳುಗಳಿಗೆ ಉಂಗುರಗಳನ್ನೂ, ಕಾಲುಗಳಿಗೆ ಕಾಲುಸರಾದಿಗಳನ್ನೂ ಧರಿಸಿದಳು.

ಕ್ವಣದ್ಧೀರಕತಾಡಂಗ ಮಂಡಿತಾ ರತ್ನನಾಸಿಕಾ ।
ನೀರಾಜ್ಯ ನೀರದೀಪ್ತೈಸ್ತಾಂ ನಗಪತ್ನ್ಯಃ ಮಹೇಶ್ವರೀಂ ॥೮೮॥

ಬುಭುಜುರ್ಭಕ್ಷ್ಯಭೋಜ್ಯೈಶ್ಚ ಕೇದಾರೇಶನಿವೇದಿತೈಃ ।
ಸದಾರತನಯಾಸ್ಸರ್ವೇ ಪರ್ವತೇಂದ್ರೇಣ ಪರ್ವತಾಃ ॥೮೯॥

ಧೃತತಾಂಬೂಲವಕ್ತ್ರಾಂಶ್ಚ ಗಂಧಪುಷ್ಪವಿಭೂಷಿತೈಃ ।
ಸುಮುಹೂರ್ತೇ ಗಿರಿವರಾಃ ವಿಮಾನೇನಾರ್ಕರೋಚಿಷಾ ॥೯೦॥

ಮೇನಯಾ ಚ ತದಾ ದೇವ್ಯಾ ಪರ್ವತಾನಾಂ ಚ ಭಾಮಿನೀಃ ।
ಸಪತ್ನ್ಯ ದೇವತೂರ್ಯೇಷು ಪುಷ್ಪೋತ್ಕೀರ್ಣತಲೇಷು ಚ ॥೯೧॥

ನೃತ್ಯಂತ್ಯಪ್ಸರಸಾಂ ಸಂಘೈಃ ಪ್ರಯಯೌ ಸಾ ಗಿರೇರ್ಗೃಹಂ ।
ಭೂಧರೇಣ ಗಿರಿವ್ರಾತ್ಯೈರ್ಮಂಡಿತಂ ಧೂಪಿತಂ ಮುದಾ ॥೯೨॥

---

ಅರಗಿನ ರಸವನ್ನು ಉಗುರುಗಳಿಗೆ ಬಳಿದುಕೊಂಡು ಪಾರ್ವತಿಯು ತಾಯಿಯೊಡನೆ ಅಲಂಕೃತಳಾಗಿ ನಿಂತುಬಿಟ್ಟಳು. ॥೮೬-೮೭॥

ಕಿವಿಗೂ ಮತ್ತು ಮೂಗಿಗೂ ರತ್ನಮಯವಾದ ಓಲೆ, ಮೂಗುಬೊಟ್ಟು ಇವುಗಳನ್ನು ಧರಿಸಿದ್ದಳು. ಇಂತಹ ಸರ್ವಾಲಂಕಾರ ಭೂಷಿತಳಾದ ಗಿರಿಜೆಗೆ ಪರ್ವತಸ್ತ್ರೀಯರೆಲ್ಲರೂ ದೀಪಾರತಿ ಬೆಳಗಿದರು. ಅನಂತರ ಎಲ್ಲರೊಡನೆ ಕುಳಿತು ಪಾರ್ವತಿಯು ಕೇದಾರೇಶ್ವರ ಪ್ರಸಾದ ರೂಪವಾದ ಭಕ್ಷ್ಯಭೋಜ್ಯಾದಿಗಳನ್ನು ತಿಂದು ತೃಪ್ತಿಪಟ್ಟಳು. ಅತ್ತ ಪರ್ವತರಾಜನೂ ಸಹ ತನ್ನ ಅನುಯಾಯಿಗಳಾದ ಗಿರಿಶ್ರೇಷ್ಠರೊಡಗೂಡಿ ಮೃಷ್ಟಾನ್ನ ಭೋಜನಮಾಡಿದನು. ಎಲ್ಲರೂ ಗಂಧ ತಾಂಬೂಲ ಗಳನ್ನು ಸ್ವೀಕರಿಸಿ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡರು. ॥೮೮-೮೯-೯೦॥

ಹಾಗೆಯೇ ಶುಭಮುಹೂರ್ತದಲ್ಲಿ ಮತ್ತೆ ದಿವ್ಯವಿಮಾನವನ್ನೇರಿ ಪಾರ್ವತಿಯು ಮಾತಾಪಿತೃಗಳೊಡನೆಯೂ, ಗಿರಿಪತ್ನಿಯರೊಡನೆಯೂ ಕೂಡಿ ತಂದೆಯ ಮನೆಗೆ ಬಂದಳು. ಆಗ ದೇವದುಂದುಭಿಗಳು ಮೊಳಗುತ್ತಿದ್ದವು. ಪುಷ್ಪವೃಷ್ಟಿ ಸುರಿಯುತ್ತಿತ್ತು. ಅಪ್ಸರಸ್ತ್ರೀಯರು ನರ್ತನಮಾಡುತ್ತಿದ್ದರು. ಈ ಸಂಭ್ರಮದಿಂದ ಕೂಡಿ ಧೂಪ ದೀಪಾದಿಗಳಿಂದ ಗಮಗಮಿಸುತ್ತಿದ್ದ ತಂದೆಯ ಮನೆಗೆ ಬಂದು ಸೇರಿದಳು. ॥೯೧-೯೨॥

ರತ್ನತೋರಣ ಸಂಬಂಧಂ ರಂಗವಲ್ಲೀತಲಂ ಸದಾ ।
ಕದಲೀವೃಕ್ಷಸಂಬಂಧಂ ಪೂರ್ಣಕುಂಭವಿರಾಜಿತಂ ॥೯೩॥

ನೀರಾಜಯಂತಿ ಗಿರಿಜಾಂ ವರಪರ್ವತೇಂದ್ರ
ಪತ್ನ್ಯಸ್ತದಾ ಪ್ರಮುದಿತಾ ಸ್ವಗೃಹೇಷು ತತ್ರ ।
ಲಾಜೈಃ ಕಿರಂತಿ ಸುಮನೋಭಿರತೀವ ಹೃಷ್ಟಾ
ಗಾಯಂತಿ ತತ್ರ ಮಧುರಂ ಮಹತಾಮುದಾತ್ತಾಃ ॥೯೪॥

ಗಿರಿದ್ವಾರಮಾಸಾದ್ಯ ದೇವೀ ಸ ಮೇನಾ
ಗಿರೀಂದ್ರೇಣ ಮೈನಾಕಯುಕ್ತಾ ಗಿರೀಂದ್ರೈಃ ।
ಅವಾರುಹ್ಯ ಮೋದಾದ್ವಿವೇಶಾಲಯಂ ಸ್ವಂ
ಪಿತುಸ್ತತ್ರ ಭೇರೀರವೋದ್ದಾಮಶಬ್ದೈಃ ॥೯೫॥

ಸ್ಥಿತಾ ಲಾಲಿತಾ ಭೋಗಭಾಗ್ಯೈಶ್ಚ ಪಿತ್ರಾ
ಗಿರೀಂದ್ರೇಣ ಮೇನಾ ಯುತಾ ಪರ್ವತೇಂದ್ರೈಃ ।

---

ಆ ಗಿರಿರಾಜನ ಗೃಹವಾದರೋ ರತ್ನಮಯವಾದ ತೋರಣಗಳಿಂದಲೂ, ಚಿತ್ರವಿಚಿತ್ರವಾದ ರಂಗವಲ್ಲಿಗಳಿಂದಲೂ ಅಲಂಕೃತವಾಗಿದ್ದಿತು. ಮನೆಗೆಲ್ಲಾ ಬಾಳೆ ಮರಗಳನ್ನೂ ಪೂರ್ಣಕುಂಭಗಳನ್ನೂ ಕಟ್ಟಿ ಅಲಂಕರಿಸಿದ್ದರು. ಇಂತಹ ಈ ದಿವ್ಯ ಭವನವನ್ನು ಪಾರ್ವತಿಯು ಪ್ರವೇಶಿಸಿದೊಡನೆಯೇ ಪರ್ವತಪತ್ನಿಯರು ದೇವಿಗೆ ಅಲಂಕಾರ ಅಕ್ಷತೆಗಳನ್ನು ಎರಚಿ ಮೊದಲು ರತ್ನಮಯವಾದ ಆರತಿಯನ್ನು ಬೆಳಗಿದರು. ಪುಷ್ಪಸಹಿತವಾದ ಅರಳುಗಳನ್ನು ಮಂಗಳಾರ್ಥವಾಗಿ ದೇವಿಯ ಮೇಲೆಸೆದರು. ವಯೋವೃದ್ಧರಾದ ಮುತ್ತೈದೆಯರು ಆಶೀರ್ವಾದರೂಪವಾದ ಹಾಡುಗಳನ್ನು ಹಾಡಿದರು. ॥೯೩-೯೪॥

ಮನೆಯ ಬಾಗಿಲಿನಲ್ಲಿಯೇ ಇಷ್ಟು ವೈಭವವು ಸಾಗಿದಮೇಲೆ ಪಾರ್ವತಿಯು ತಾಯಿತಂದೆಯರೊಡಗೂಡಿ, ಮೈನಾಕನ ಜೊತೆಯಲ್ಲಿ ತನ್ನ ತಂದೆಯ ನಿವಾಸವನ್ನು ಪ್ರವೇಶಿಸಿದಳು. ಭೇರೀರವದಿಂದಲೂ, ಶಂಖಧ್ವನಿಗಳಿಂದಲೂ ಉದ್ದಾಮವಾದ ರೀತಿಯಲ್ಲಿ ಆ ಗೃಹವು ಶೋಭಿಸುತ್ತಿದ್ದಿತು. ॥೯೫॥

ತಂದೆಯಾದ ಹಿಮವಂತನಿಂದಲೂ, ತಾಯಿಯಾದ ಮೇನಾದೇವಿಯಿಂದಲೂ ಕೂಡಿ ಪಾರ್ವತಿಯು ಪರ್ವತಸ್ತ್ರೀಯರಿಂದ ಸೇವಿತಳಾಗಿ ವಿಧವಿಧವಾದ ಭಕ್ಷ್ಯ

ತದಾ ಸೇವಿತಾ ಪರ್ವತೇಂದ್ರಾಂಗನಾಭಿಃ
ಶಿವಾ ಭಕ್ಷ್ಯಭೋಜ್ಯೈಸ್ತದಾ ಸೈವ ಸೇವ್ಯಾ ||೯೬||

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀ ಸಂವಾದೇ
ಗಣಪತ್ಯುತ್ಪತ್ತಿ ತಪೋವನಾದ್ದೇವ್ಯಾಗಮನಂ ನಾಮ
ಚತುರ್ದಶೋಽಧ್ಯಾಯಃ

---

ಭೋಜ್ಯಾದಿಗಳಿಂದ ತೃಪ್ತಿಹೊಂದುತ್ತಾ, ಸರ್ವರಿಂದಲೂ ಪೂಜಿತಳಾಗಿ ಆನಂದದಿಂದಿದ್ದಳು. ||೯೬||

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಧ್ಯಾಯದಲ್ಲಿ
ಗಣಪತ್ಯುತ್ಪತ್ತಿ ವರ್ಣನೆಯನ್ನು ತಿಳಿಸುವ ಹದಿನಾಲ್ಕನೆಯ ಅಧ್ಯಾಯವು
ಮುಗಿದುದು.

---

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಪಂಚದಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಸುರನಾರದವಾಕ್ಯೇನ ಸಂತುಷ್ಟಾಪ್ಯಭವಂಸ್ತದಾ ।
ಮಂಡಪಾನಾಂ ಚ ನಿರ್ಮಾಣಂ ಶ್ರುತ್ವಾ ತೇ ವಿಶ್ವಕರ್ಮಣಃ ॥೧॥

ಸಂಮಂತ್ರ್ಯ ಗುರುಣಾ ದೇವಾ ಬ್ರಹ್ಮವಿಷ್ಣುಪುರೋಗಮಾಃ ।
ಯಯುಸ್ತೇ ಮಂದರಗಿರಿಂ ನಾನಾದ್ರುಮಲತಾನ್ವಿತಂ ॥೨॥

ಅಪಶ್ಯನ್ನಾಶ್ರಮಂ ಶಂಭೋಃ ಪ್ರಶಾಂತಮೃಗಸಂಕುಲಂ ।
ಸುಪುಷ್ಪಿತತರುಚ್ಛಾಯಂ ಗಿರಿನಿರ್ಝರಭೂಷಿತಂ ॥೩॥

---

## ಹದಿನೈದನೆಯ ಅಧ್ಯಾಯ

ಇತ್ತಲಾಗಿ ದೇವತೆಗಳು, ನಾರದ ಮತ್ತು ವಿಶ್ವಕರ್ಮ ಇವರ ಸಹಾಯದಿಂದ ಹಿಮವಂತನಿಗೆ ಪಾರ್ವತೀಪರಶಿವರ ಪರಿಣಯದ ವಿಷಯವಾಗಿ ಎಚ್ಚರಿಕೆ ಕೊಟ್ಟು, ವಿವಾಹಮಂಟಪವನ್ನು ನಿರ್ಮಿಸಿಕೊಟ್ಟ ಬಳಿಕ, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳು ಗುರುವಾದ ಬೃಹಸ್ಪತಿಯೊಡನೆ ಕಲೆತು ಮುಂದಿನ ಕಾರ್ಯಭಾರವನ್ನು ಆಲೋಚಿಸಿದರು. ಅದರಂತೆ ಅವರೆಲ್ಲರೂ ಒಟ್ಟುಗೂಡಿ ನಾನಾವಿಧವಾದ ತರು ಗುಲ್ಮಾದಿಗಳಿಂದ ಆವೃತಳಾದ ಮಂದರಗಿರಿಯನ್ನು ಕುರಿತು ಪ್ರಯಾಣ ಬೆಳೆಸಿದರು. ॥೧-೨॥

ಆ ಮಂದರಗಿರಿಯಲ್ಲಿ ರಮ್ಯಗಳಾದ ಅನೇಕ ಸರೋವರಗಳಿದ್ದುವು. ಅಲ್ಲಿಲ್ಲಾ ಅರಳಿದ ಕಮಲ ಕಲ್ಹಾರಗಳೂ, ಮೇಲೆ ಹಾರಾಡುವ ವಿಧವಿಧವಾದ ಪಕ್ಷಿಗಳೂ,

ಕ್ವಚಿತ್ತಾಮ್ರಂ ಕ್ವಚಿನ್ನೀಲಂ ಕ್ವಚಿತ್ಪೀತಾರುಣಪ್ರಭಂ ।
ಉತ್ಫುಲ್ಲಹಲ್ಲಕಾರಕ್ತಕಮಲೈಃಪುಂಡರೀಕಕೈಃ ॥೪॥

ನೀಲೋತ್ಪಲೈರ್ವಿಕಸಿತಕುಮುದಾಲಿ ವಿರಾಜಿತೈಃ ।
ನಾನಾಪಕ್ಷಿಸಮೂಹೈಶ್ಚ ಕೇಕೀಕೋಕಿಲಕೂಜಿತೈಃ ॥೫॥

ಸರೋಭಿಸ್ಸಾಗರಾಕಾರೈಃ ಪರ್ಯಂತಕದಲೀವೃತೈಃ ।
ಬಿಲ್ವೋರುನಿಪಿನೈಶ್ಚೈವ ನಕ್ಷತ್ರಾಲೇಢಿಶಾಖಿಭಿಃ ॥೬॥

ಶಿಖಂಡಿನಃ ಕುಂಡಲಿಭಿಃ ಸಿಂಹಾ ಮೃಗಗಣೈಸ್ಸಹ ।
ವ್ಯಾಘ್ರೀಸ್ತನಂ ವನಗವಾಂ ವತ್ಸಾಸ್ತತ್ರ ಪಿಬಂತ್ಯಪಿ ॥೭॥

ನಕುಲಾ ಸರ್ಪಮೌಲಿಸ್ಥಾ ಗರುಡಾ ಪನ್ನಗೈಸ್ಸಹ ।
ಉಲೂಕಾ ವಾಯಸೈಸ್ತತ್ರ ಕ್ರೀಡಂತಿ ಚ ಯಥಾಸುಖಂ ॥೮॥

---

ಇಂಚರಕೊಡುವ ಕೋಗಿಲೆಗಳೂ, ಸುತ್ತಲೂ ಬೆಳೆದಿರುವ ನೀಳವಾದ ಕದಲೀವೃಕ್ಷಗಳೂ ಬಹು ಮನೋಹರವಾಗಿ ಕಾಣುತ್ತಿದ್ದುವು. ಅಲ್ಲಿ ಅನೇಕ ಬಿಲ್ವವೃಕ್ಷಗಳೂ ಗಗನಚುಂಬಿತಗಳಾಗಿ ಬಹು ಉನ್ನತವಾಗಿ ಬೆಳೆದಿದ್ದುವು. ॥೩-೪॥

ಅಲ್ಲಿ ಶಂಕರನ ಪವಿತ್ರವಾದ ಆಶ್ರಮವಿದ್ದಿತು. ಅದು ಪುಷ್ಪಮಯಗಳಾದ ಮರಗಳಿಂದ ಮುಚ್ಚಲ್ಪಟ್ಟಿದ್ದಿತು. ಸುತ್ತಲೂ ಗಿರಿನದಿಗಳು ಆ ಆಶ್ರಮಕ್ಕೆ ಒಂದು ಅಲಂಕಾರವನ್ನು ಕಲ್ಪಿಸಿದ್ದುವು. ಬಣ್ಣ ಬಣ್ಣದ ತಾವರೆ, ನೈದಿಲೆ, ಕಲ್ಹಾರ ಮುಂತಾದ ಪುಷ್ಪಗಳು ಗುಂಪು ಗುಂಪಾಗಿ ಬೆಳೆದು, ಆಶ್ರಮವನ್ನು ಒಂದು ಕಡೆ ಕೆಂಪಾಗಿಯೂ, ಮತ್ತೊಂದುಕಡೆ ನೀಲವಾಗಿಯೂ, ಬೇರೊಂದುಕಡೆ ಮಿಶ್ರವರ್ಣವುಳ್ಳದ್ದನ್ನಾಗಿಯೂ ಮಾಡಿದ್ದುವು. ॥೫-೬॥

ನವಿಲುಗಳು ಹಾವುಗಳೊಡನೆಯೂ, ಸಿಂಹಗಳು ಜಿಂಕೆಗಳೊಡನೆಯೂ, ಕೂಡಿ ತಮ್ಮ ವೈರವನ್ನು ಮರೆತು ಆಟವಾಡುತ್ತಿದ್ದುವು. ಅಲ್ಲಿನ ಹಸುಗಳ ಕರುಗಳು ಹೆಣ್ಣುಹುಲಿಯ ಸ್ತನ್ಯವನ್ನು ಪಾನಮಾಡುತ್ತಿದ್ದುವು. ಹಾವಿನತಲೆಯಮೇಲೆ ಮುಂಗುಸಿಗಳೂ, ಗರುಡನಮೇಲೆ ಹಾವುಗಳೂ ಓಡಾಡುತ್ತಿದ್ದುವು. ಕಾಗೆಗಳೂ, ಗೂಬೆಗಳೂ ಸ್ನೇಹಿತರಂತೆ ಹಾಡುತ್ತಿದ್ದುವು. ॥೭-೮॥

ತತ್ರ ದೇವಂ ಚ ದದೃಶುರ್ದೇವಾಸ್ತತ್ರ ಮಹೇಶ್ವರಂ ।
ನಂದಿನಾ ವಾರಿತಾ ಆಸನ್ ಗಣೈಶ್ಶೂಲಧರೈಸ್ಸುರಾಃ ॥೯॥

ಸತ್ಪುಂಡರೀಕಧವಲಾಮಲಕೋಶಕಾಶ
ಸಂಕಾಶ ಶಾರದಸುನೀರದಪಾರದಾಭಂ ।
ವಿದ್ಯುತ್ಪಿಶಂಗತಟಿನೀಜಲಕೋಟಿ ಭಾಸ್ವ
ಚ್ಚಂದ್ರಾಂಶುಶೇಖರಮಹೋ ಪ್ರಣತಾಃ ಸ್ತುವಂತಿ ॥೧೦॥

॥ ದೇವಾ ಊಚುಃ ॥

ವಿದ್ಯುತ್ಪುಂಜಪಿಶಂಗ ಚಂಚಲಜಟಾಜೂಟಸ್ಫುರತ್ಸ್ವರ್ಧುನೀ
ಖೇಲದ್ಬಾಲಮರಾಲವಿಭ್ರಮಶಿರಶ್ಶ್ರೀಚಂದ್ರರೇಖಾಂಕಿತಂ ।
ವಾಮಾಂಕಾಹಿತಜಾನಿವಾಂಛಿತಫಲಂ ಪ್ರಾಪ್ತುಂ ಪರಂ ದೇಹಿನಾಂ
ತೇಜಃ ಕಿಂಚನ ಪುಂಜಿತಂ ಸುರದೃಶೋರಭ್ಯರ್ಣಮಾಸೀದಸು ॥೧೧॥

---

ಇಂತಹ ಆಶ್ರಮಕ್ಕೆ ದೇವತೆಗಳೆಲ್ಲರೂ ಹೋಗಿ ಅಲ್ಲಿ ಮಹೇಶ್ವರನನ್ನು ಕಾಣಲು ಯತ್ನಿಸಿದರು. ಆದರೆ ತ್ರಿಶೂಲಧಾರಿಗಳಾದ ಪ್ರಮಥಗಣಗಳೂ, ನಂದೀಶ್ವರನೂ ಅವರನ್ನು ದಾರಿಯಲ್ಲಿಯೇ ತಡೆದುಬಿಟ್ಟರು. ಆಗ ದೇವತೆಗಳೆಲ್ಲರೂ ಒಟ್ಟುಗೂಡಿ, ಬಿಳಿಯನೈದಿಲೆ, ಕಾಶಪುಷ್ಪ, ಶರತ್ಕಾಲದ ಮೇಘ, ಶುಭ್ರವಾದ ಪಾದರಸ ಇವುಗಳಂತೆ ಶೋಭಿಸುವ ದೇಹದಿಂದಲೂ, ಮಿಂಚಿನಂತೆ ಹೊಳೆಯುವ ದೇವಗಂಗಾ, ಜಟಾಜೂಟ, ಚಂದ್ರರೇಖೆ ಇವುಗಳ ಧಾರಣೆಯಿಂದಲೂ ಅತ್ಯಂತ ಪ್ರಕಾಶಮಾನವಾಗಿ ತೋರಿಬರುವ, ಪರಮೇಶ್ವರನನ್ನು ವಂದಿಸಿ ಈರೀತಿ ಸ್ತುತಿಸಲಾರಂಭಿಸಿದರು. ॥೯-೧೦॥

ಆಗ ದೇವತೆಗಳ ಕಣ್ಣಿಗೆ ಒಂದು ತೇಜೋರಾಶಿಯೇ ಗೋಚರವಾದಂತಾಯಿತು. ತಲೆಯಲ್ಲಿ ಮಿಂಚಿನಂತೆ ಹೊಳೆಯುವ ಜಟಾಕಲಾಪವೂ, ಅದರ ಮಧ್ಯದಲ್ಲಿ ಶುಭ್ರವಾಗಿ ರಂಜಿಸುವ ಗಂಗಾಲಹರಿಯೂ, ಅಲ್ಲಲ್ಲಾ ನಿದಾನವಾಗಿ ಸಂಚರಿಸುವ ಬಾಲಹಂಸಗಳೂ, ಮುಂಭಾಗದಲ್ಲಿ ಬೆಳ್ದಿಂಗಳನ್ನು ಕೊಡುವ ಚಂದ್ರರೇಖೆಯೂ, ಆ ತೇಜೋಮಯವಾದ ಶಿವಶರೀರದಲ್ಲಿ ಮತ್ತಷ್ಟು ಕಾಂತಿಯನ್ನು ಹೆಚ್ಚಿಸಿದ್ದುವು. ಎಡಭಾಗದಲ್ಲಿ ಭಕ್ತರ ಇಷ್ಟಾರ್ಥವನ್ನು ಸಲ್ಲಿಸುವ ಶಕ್ತಿಯೊಂದು ಸ್ಫುರಿಸುತ್ತಿದ್ದಿತು.

ಶ್ರೀಮನ್ ದಕ್ಷಾಧ್ವರಘ್ನಧ್ವನಿಮುಖರಿತ ದಿಗ್ವಾಸಿಘಂಟಾರ್ಭಟೀ ಸಂ
ತ್ರಸ್ತ ತ್ರೈಲೋಕ್ಯ ಮಾಪ್ಯದ್ಘನನಿಭಮಹಿಷಾರೂಢಕಾಲಘ್ನ ಶಂಭೋ ।
ಭ್ರಾಜತ್ಕೋಟೀರ ಶೀರ್ಷ ಭ್ರಮದಮರಧುನೀಲೋಲಕಲ್ಲೋಲಖೇಲ
ಚ್ಚಂದ್ರೋದ್ಯಾಂತಾಮೃತಾಸ್ವಾದನ ಮುದಿತ ಮನಃ ಪಾಹಿ ಭೋನಸ್ಸಜಸ್ರಂ
॥೧೨॥

ಘಟಿಕಿತ ಚಕ್ಷುಃ ಶ್ರವಸೇ
ಘಲಿತಾವನತಿಃ ಕರೀಂದ್ರ ಚರ್ಮವಸೇ ।
ಮಸ್ತಕಧೃತಚಂದ್ರಮಸೇ
ಕೈಲಾಸಕ್ಷೇತ್ರವಾಸಿನೇ ಮಹಸೇ ॥೧೩॥

ಭಜಂತು ಕತಿಚಿಚ್ಛ್ರುತಿಂ ನಿಗಮಶೀರ್ಷಭೀಮಾಟವೀಂ
ಚರಂತು ಕತಿಚಿತ್ಸರೇ ಪರಿಚರಂತು ಕರ್ಮಾಟವೀಂ ।

---

ಇಂತಹ ತೇಜಃಪುಂಜವನ್ನು ದೇವತೆಗಳು ಸಂತೋಷದಿಂದ ದರ್ಶನಮಾಡಿದರು. ॥೧೧॥

ಸಂಪದ್ಯುಕ್ತನಾದ ಮಹೇಶ್ವರನೇ, ದಕ್ಷಬ್ರಹ್ಮನ ಯಾಗವನ್ನು ನಾಶಗೊಳಿಸುವ ನೆಪದಿಂದ ಘೋರಧ್ವನಿಗೈಯ್ದು ಜಗತ್ತನ್ನೇ ನಡುಗಿಸಿದವನೇ. ನಿನ್ನ ಆರ್ಭಟಕ್ಕೆ ಮೂರುಲೋಕವೇ ನಡುಗಿಹೋಯಿತಲ್ಲವೆ! ಮಹಿಷಾರೂಢನಾದ ಯಮನನ್ನು ನಿಗ್ರಹಿಸಿದ ಮಹಾದೇವನೇ, ನಿನ್ನ ಪ್ರಕಾಶಮಾನವಾದ ಕಿರೀಟದ ತುದಿಯಿಂದ ನೇರವಾಗಿ ಪ್ರವಹಿಸುವ ದೇವಗಂಗಾ ಪ್ರವಾಹದಲ್ಲಿ, ನಿನ್ನ ಶಿರೋಭೂಷಣವಾಗಿರುವ ಚಂದ್ರಕಾಂತಿಯು ಪ್ರತಿಫಲಿಸಿ ಸರ್ವರಮನಸ್ಸನ್ನೂ ಆನಂದಗೊಳಿಸುವುದಲ್ಲವೆ! ಆದರಿಂದ ನಿನ್ನ ಮನಸ್ಸೂ ಪ್ರಸನ್ನವಾಗುವುದೆಂದು ನಾವು ತಿಳಿದಿರುವೆವು. ಪ್ರಸನ್ನಮನಸ್ಸಿನಿಂದ ನೀನು ನಮ್ಮನ್ನು ಸಮಾಧಾನಗೊಳಿಸು. ॥೧೨॥

ಸರ್ಪಗಳನ್ನೇ ಒಳೆಯನ್ನಾಗಿ ಮಾಡಿಕೊಂಡು, ಗಜಚರ್ಮಾಂಬರಧಾರಿಯಾಗಿ, ಚಂದ್ರಬಿಂಬವನ್ನು ಶಿರಸ್ಸಿನಲ್ಲಿ ಧರಿಸಿಕೊಂಡು, ಕೈಲಾಸಗಿರಿಯಲ್ಲಿ ಸದಾ ನೆಲಸಿರುವ ಶಿವಸ್ವರೂಪವಾದ ತೇಜಸ್ಸಿಗೆ ನಮಸ್ಕಾರವು. ॥೧೩॥

ಕೆಲವರು ವೇದಾಧ್ಯಯನದಿಂದ ಈಶ್ವರಾನುಗ್ರಹವನ್ನು ಪಡೆಯಲಿ. ಮತ್ತೆ ಕೆಲವರು ಉಪನಿಷತ್ತುಗಳೆಂಬ ಮಹಾರಣ್ಯದಲ್ಲಿ ಸಂಚರಿಸಿ ಜ್ಞಾನೋಪಾಸಕರಾಗಿ ಜೀವಿಸಲಿ. ಹಲವರು ಮೀಮಾಂಸಾಶಾಸ್ತ್ರಪ್ರತಿಪಾದ್ಯವಾದ ಕರ್ಮಮಾರ್ಗದಲ್ಲಿ

ವಯಂ ತ್ರಿದಶ ನಿಮ್ನಗಾ ತರುಣಚಂದ್ರಲೇಖಾಲಸ
ಜ್ಜಟಾಮುಕುಟಮಂಡಿತ ಪ್ರಣತಿಭಿಃ ಪ್ರಮೋದಾಮಹೇ ॥೧೪॥

ಯಜಂತಾಂ ದೈತ್ಯಾರಿಂ ಕತಿಚನ ರಮಂತಾಂ ಕ್ರತುಶತೈಃ
ಪರೇ ಕರ್ಮಸ್ವನ್ಯೇ ಸಕಲ ಮನುತೀರ್ಥೇಷು ಕತಿಚಿತ್ ।
ವಯಂ ಶುದ್ಧಸ್ನಿಗ್ಧಸ್ಫಟಿಕಸಮಮಿಶಂ ತ್ರಿನಯನಂ
ಸ್ಮರಂತಃ ಪಾಪಾನಿ ಪ್ರತಿದಿನಮನಂತಾನಿ ಧುನುಮಃ ॥೧೫॥

ಮರುನ್ಮೌಲೌ ಜ್ಯೋತಿರ್ಮಯಮುಕುಟನೀರಾಜಿತಲಸ
ತ್ಪದಾಂಭೋಜದ್ವಂದ್ವಂ ರಜತಗಿರಿಸೌಧೇ ಮಣಿಮಯೇ ।
ಸಮಾಸೀನಂ ಕಲ್ಪದ್ರುಮರುಚಿರಮೂಲೇ ಗಿರಿಜಯಾ
ಸಹೋಪಾಸ್ಯಂ ದೇವಂ ಭವಜಲಧಿಸಂತಾರಣಪಟುಂ ॥೧೬॥

---

ನಡೆದು ಯಾಗಾದಿಗಳನ್ನು ನಡೆಸಲಿ. ನಾವಾದರೋ ಯಾವ ಮಾರ್ಗಕ್ಕೂ ಕಾಲಿಡದೆ, ದೇವಗಂಗೆಯನ್ನೂ ಬಾಲಚಂದ್ರನನ್ನೂ ಜಟಾಜೂಟವನ್ನೂ ಶಿರಸ್ಸಿನಲ್ಲಿ ಪಡೆದಿರುವ ಮಹಾದೇವನಿಗೆ ಸದಾ ನಮಸ್ಕರಿಸುತ್ತಾ ಆನಂದವನ್ನನುಭವಿಸುವೆವು. ಇದೇ ನಮಗೆ ಸಾಕು. ॥೧೪॥

ದೈತ್ಯನಾಶಕನಾದ ಮಹಾವಿಷ್ಣುವನ್ನು ಯಾರುಬೇಕಾದರೂ ಸೇವಿಸಲಿ ಅದು ನಮಗೆ ಬೇಡ. ನೂರಾರುಯಾಗಗಳನ್ನು ನಡೆಸಿ, ಸಮಸ್ತಯಾತ್ರೆ ತೀರ್ಥ ಗಳನ್ನು ಯಾರುಬೇಕಾದರೂ ನಡೆಸಿಕೊಳ್ಳಲಿ, ನಮಗೆ ಅದೂ ಬೇಡ. ಶುದ್ಧಸ್ಫಟಿಕ ದಂತೆ ಶುಭ್ರದೇಹಿಯಾಗಿ, ನೇತ್ರತ್ರಯಗಳಿಂದ ವಿರಾಜಿಸುವ ಪರಶಿವನ ನಾಮ ಸ್ಮರಣೆಯೊಂದಿದ್ದರೆ ಸಾಕು. ನಮ್ಮ ಸಮಸ್ತಪಾಪರಾಶಿಗಳನ್ನೂ ನಾವು ಇದರಿಂದ ಕಳೆದುಕೊಳ್ಳುತ್ತೇವೆ ಮತ್ತು ಮುಕ್ತರಾಗುವೆವು. ॥೧೫॥

ದೇವತೆಗಳ ರತ್ನಕಿರೀಟಕಾಂತಿಯಿಂದ ಬೆಳಗುತ್ತಿರುವ ಪಾದಪದ್ಮಗಳುಳ್ಳ ವನೂ, ಕೈಲಾಸಾಚಲದ ಮಣಿಮಯವಾದ ಉಪ್ಪರಿಗೆಯಲ್ಲಿ ವಿರಾಜಿಸುವವನೂ ಮಹಾಮಹಿಮೆಯುಳ್ಳ ಕಲ್ಪವೃಕ್ಷದ ಬುಡದಲ್ಲಿ ಪಾರ್ವತಿಯಿಂದ ಸೇವಿತನಾಗಿರು ವವನೂ, ಭಕ್ತರನ್ನು ಸಂಸಾರಸಾಗರದಿಂದ ಉದ್ಧರಿಸುವವನೂ ಆದ ಮಹೇಶ್ವರ ನನ್ನು ನಾವು ತಪ್ಪದೆ ಸೇವಿಸುವೆವು. ॥೧೬॥

ಪುಣ್ಯಪ್ರಖ್ಯಾತ ದಿವ್ಯೋತ್ಸವ ಭವ ಪರಮಾನಂದ ಸಂಪೂರ್ಣಮೂರ್ತಿಃ
ಸರ್ವೈರ್ದೇವೈಃ ಸಮೇತೈರ್ದಿವಿ ಭುವಿ ಮನುಜೈಃ ಶ್ರೀಮಹಾದೇವಮೂರ್ತಿಃ ।
ಚಿತ್ರಂ ಸಂಗೀಯಮಾನೋ ಮಣಿಗಣವಿಲಸತ್ಪುಷ್ಪಕೇ ಯೋ ವಿಮಾನೇ
ಭಾತಿ ಶ್ರೀಶೈಲಕನ್ಯಾತಟಿಭುವಿ ಸಗಣಃ ಪಾತುನಃಸೋಽಯಮೀಶಃ ॥೧೭॥

ವಿಪಕ್ಷದಕ್ಷಕರ್ತೃಕಾಧ್ವರಾರಿ ಭೀಮ ಕೋಪಜ
ತ್ರಿಶೂಲಪಾಣಿವೀರಭದ್ರ ಸದ್ಗಣಾಗಮೇ ಸತಿ ।
ಶ್ರಿಯಃಪತಿಃ ಕ್ವ ವಾಕ್ಪತಿಃ ಶಚೀಪತಿಃ ಕ್ವ ರೈಕ್ಪತಿಃ
ಕ್ವ ಹವ್ಯವಾಡತೋ ಹತೋ [1]............ ಹಿ ತನ್ಮಖಃ ॥೧೮॥

ಯತ್ಪಾದಾಘಾತ ಗಾಢತ್ರುಟಿತಮಹದುರೋ ನಿರ್ಗಲದ್ರಕ್ತಧಾರಾ
ಸಂಲಿಪ್ತಾಪಾದಶೀರ್ಷಃ ದಿನಕರತನಯಃ ಶೀರ್ಣಶೈಲಾಯಿತೋ ಭೂತ್ ।
ಮಾರ್ಕಂಡೇಯಂ ಸ್ವಭಕ್ತಂ ನಿರವಧಿಕರುಣಃ ಷೋಡಶಾಬ್ದಾಯುಷಂ ಯಃ
ಸಂಚಕ್ರೇ ನೇಕಕಲ್ಪಾಯುಷಮವತು ಸ ನೋ ಈಶ್ವರೋನಂತಶಕ್ತಿಃ॥೧೯॥

---

ಪುಣ್ಯರಾಶಿಯಿಂದ ರಂಜಿತರಾದವರ ಮನಸ್ಸಿಗೆ ಪರಮಾನಂದವನ್ನುಂಟು ಮಾಡುವ ಆನಂದಮೂರ್ತಿಯೂ, ಸ್ವರ್ಗದಲ್ಲಿ ದೇವತೆಗಳಿಂದಲೂ, ಭೂಮಿಯಲ್ಲಿ ಮಾನವರಿಂದಲೂ ಸ್ತುತಿಸಲ್ಪಡುವವನೂ, ಪುಷ್ಪಕವಿಮಾನದಲ್ಲಿ ಕುಳಿತು ಸರ್ವರಿಂದ ಸ್ತುತಿಸಲ್ಪಡುವವನೂ ಆದ ಪಾರ್ವತೀ ಮುಖ್ಯಪ್ರಾಣನಾದ ಪರಶಿವನು ಗಣಪರಿವೃತನಾಗಿ ಆನಂದದಿಂದಿದ್ದು ನಮ್ಮನ್ನು ಸರ್ವದಾ ರಕ್ಷಿಸುತ್ತಿರಲಿ. ॥೧೭॥

ಶಿವದ್ವೇಷಿಯಾಗಿ ದಕ್ಷಬ್ರಹ್ಮನು ಯಾಗವನ್ನಾರಂಭಿಸಿದಾಗ, ಅದರಿಂದ ಕುಪಿತನಾದ ಪರಮೇಶ್ವರನು ವೀರಭದ್ರನನ್ನು ಸೃಷ್ಟಿಸಿ ತ್ರಿಶೂಲವನ್ನಿತ್ತು ಯಾಗ ಮಂಟಪಕ್ಕೆ ಕಳುಹಿಸಿದಾಗ, ಆ ವೀರಭದ್ರನ ಕೋಪಾಟೋಪಕ್ಕೆ ಹೆದರಿ, ವಿಷ್ಣು, ಬ್ರಹ್ಮ, ಇಂದ್ರ, ಅಗ್ನ್ಯಾದಿ ದಿಕ್ಪಾಲಕರು ದಿಕ್ಕಾಪಾಲಾಗಿ ಚದುರಿ ಓಡಿಹೋದರಲ್ಲವೆ! ಇಂತಹ ಮಹಾಮಹಿಮನಾದ ಪರಶಿವನಿಗೆ ನಾವು ಸರ್ವದಾ ದಾಸರಾಗಿರುವೆವು. ॥೧೮॥

ತನ್ನ ಭಕ್ತನಾದ ಮಾರ್ಕಂಡೇಯನನ್ನು ರಕ್ಷಿಸಲು ಯಮನನ್ನು ತನ್ನ ಕಾಲಿನಿಂದ ಒದ್ದು ಕೆಡವಿ, ಅವನ ದೇಹವು ರಕ್ತಮಯವಾಗುವಂತೆ ಮಾಡಿದ ಪರ

---

1 ಮೂಲದಲ್ಲಿ ಇಲ್ಲಿ ಒಂದು ಪದ ಬಿಟ್ಟುಹೋಗಿದೆ.

ಪಾದೌ ಶೀರ್ಷಂ ಚ ಯಸ್ಯ ದ್ರುಹಿಣಮಧುಭಿದೌ ದ್ರಷ್ಟುಕಾಮೌ ಪ್ರವಿಷ್ಟೌ
ಪಾತಾಲಂ ವ್ಯೋಮ ವೇಗಾನ್ನಿರವಧಿ ಸತತಂ ಮಾರ್ಗಮಾಣಾ ಭೃಶಾರ್ತೌ।
ಲಜ್ಜಾವಿಷ್ಟಾವಭೂತಾಂ ಶ್ರುತಿಗಣವಚಸಾಮಪ್ಯಗಮ್ಯೋ ಮಹೇಶಃ
ಸೋಽಯಂ ಸಚ್ಚಿತ್ಸುಖಾತ್ಮಾ ಸುರಮನಸಿ ಸದಾ ಸನ್ನಿಧತ್ತಾಂ ಗಿರೀಶಃ॥೨೦॥

ಅಂತರ್ಯಾಮಿತ್ವಮೀಶ ತ್ವಯಿ ವಸತಿ ಯದಿ ಕ್ಷಿಪ್ರಮೇವಾಸ್ಮದೀಯಂ
ಚಿತ್ತಂ ತ್ವತ್ಪಾದಪದ್ಮೇ ನಿರುಪಮಸುಖದೇ ವಜ್ರಲೇಪಾಯಿತಂ ಸ್ಯಾತ್ ।
ಲೋಕೇ ಶೇತ್ಯಾಭಿಮಾನಪ್ರತಿಹತಧಿಷಣಾ ಬ್ರಹ್ಮ ಶಕ್ರಾದಯೋ ಯತ್
ಧ್ಯಾನಸ್ಮೃತ್ಯಾದಿವಂಧ್ಯಾಸ್ತ್ರಿಜಗತಿ ಬಹವಃ ಕುರ್ವತೇ ಚಕ್ರಕೃತ್ಯಂ ॥೨೧॥

---

ಮೇಶ್ವರನೇ ನಿನಗೆ ವಂದನೆ. ಆ ಕಾಲದಲ್ಲಿ ಯಮನು ಬಿರಿದುಹೋದ ಬೆಟ್ಟದಂತೆ ನಿನ್ನ ಪಾದಘಾತವನ್ನು ಸಹಿಸಲಾರದೆ ನೆಲಕ್ಕೆ ಬಿದ್ದನಲ್ಲವೆ! ಮತ್ತು ಕೇವಲ ಹದಿನಾರುವರ್ಷ ಆಯುರ್ದಾಯವುಳ್ಳ ಆ ನಿನ್ನ ಭಕ್ತನು ನಿನ್ನ ವರಬಲದಿಂದ ಅನೇಕ ಕಲ್ಪಗಳ ಪರ್ಯಂತ ಆಯುಸ್ಸನ್ನು ಪಡೆದು ಈಗ ಚಿರಜೀವಿಯೆನಿಸಿರುವನಷ್ಟೆ. ಇಂತಹ ಮಹಾಮಹಿಮನೂ ಭಕ್ತಜನರಕ್ಷಕನೂ ಆದ ಪರಮೇಶ್ವರನಲ್ಲಿ ನಮಗೆ ಸರ್ವದಾ ಭಕ್ತಿಯಿರಲಿ. ಇದೇ ನಾವು ಮಹಾದೇವನಲ್ಲಿ ಕೇಳಿಕೊಳ್ಳುವ ವರ. ॥೧೯॥

ಹಿಂದೆ ಬ್ರಹ್ಮ, ವಿಷ್ಣು ಇವರಿಬ್ಬರೂ ಪರಶಿವಲಿಂಗದ ಊರ್ಧ್ವ ಮತ್ತು ಅಧೋಭಾಗವನ್ನು ಕಂಡುಹಿಡಿಯಲು ವಿಷ್ಣುವು ಪಾತಾಳಕ್ಕೂ, ಬ್ರಹ್ಮನು ಅಂತರಿಕ್ಷಕ್ಕೂ ತಮ್ಮ ತಮ್ಮ ವಾಹನಾರೂಢರಾಗಿ ಹೋದರು. ಆದರೆ ಅದು ಅಷ್ಟು ಸುಲಭಸಾಧ್ಯವೇ? ವೇದರಾಶಿಗಳಿಗೂ ಗೋಚರನಾಗದ ಆದ್ಯಂತರಹಿತನಾದ ಮಹಾದೇವನು ಸಾಮಾನ್ಯದೇವತೆಗಳಿಗೆ ಎಂದಾದರೂ ಗೋಚರನಾಗುವನೆ? ಕೊನೆಗೆ ಪ್ರಯತ್ನಿಸಿದ ಆ ಬ್ರಹ್ಮ ವಿಷ್ಣುಗಳಿಬ್ಬರೂ ನಾಚಿಗೆಯಿಂದ ಕೂಡಿ ಆ ಆಸೆಯನ್ನು ಬಿಟ್ಟುಬಿಟ್ಟರು. ಇಂತಹ ಮಹಾಮಹಿಮನಾದ ಪರಶಿವನು ಸದಾ ದೇವತೆಗಳ ಹೃದಯಾಂತರಾಳದಲ್ಲಿ ಸ್ಥಿರವಾಗಿ ನಿಲ್ಲಲಿ. ॥೨೦॥

ಸರ್ವಾಂತರ್ಯಾಮಿಯಾದ ಪರಮೇಶ್ವರನೇ, ನಿಜವಾಗಿಯೂ ನೀನು ನಮ್ಮ ಚಿತ್ತದಲ್ಲಿಯೇ ಪಾದವಿಟ್ಟಿರುವುದಾದರೆ, ನಮ್ಮ ಮನಸ್ಸು ಆನಂದಪ್ರದವಾದ ನಿನ್ನ ಆ ಪಾದಪದ್ಮದಲ್ಲಿ ವಜ್ರಲೇಪದಂತೆ ಸ್ಥಿರವಾಗಿ ನಿಂತಿರಲಿ. ಆದರಿಂದ ನಾವು ಮುಕ್ತರಾಗುವೆವು. ಬ್ರಹ್ಮ, ವಿಷ್ಣ್ವಾದಿದೇವತೆಗಳು ಲೋಕೇಶ್ವರರೆಂಬ ಭ್ರಾಂತಿ

ಯದ್ಭ್ರೂಸ್ಪಂದ ಪ್ರಯುಕ್ತತ್ರಿದಶಪತಿರಮಾಧೀಶವಾಣೀಶಮುಖ್ಯಾಃ
ಸ್ವಸ್ವಸ್ಫೀತಾಧಿಕಾರಂ ದೃಢತರಮನಿಶಂ ಕುರ್ವತೇऽದ್ಯೈವಸಂಘಾಃ ।
ಯದ್ದ್ವಾರಸ್ಥಾಯಿನಂದೀಶ್ವರನಿಕಟಗತಾ ಬದ್ಧಹಸ್ತಾऽವಿನೀತಾ ।
ಕಾಂಕ್ಷಂತೇ ತೇ ಯದಾಜ್ಞಾಂ ನಿವಸತು ಹೃದಯೇ ಸರ್ವಗಃಸೋಯುಮೀಶಃ ॥೨೨॥

ಭಾಂಡಂ ಕಾಂಡಪ್ರಚಂಡಂ ವರಯುವತಿ ಲಸತ್ತುಂಡಮುಂಡಂ ಕರಂಡಂ
ವೇತಂಡಂ ಚಾರುಶುಂಡಂ ರುಚಿನಿಧಿಶಶಭೃತ್ಖಂಡಪೂರ್ಣಂ ಶಿಖಂಡಂ ।
ಕೋದಂಡಂ ದಂಡಷಂಡಂ ಸುರಯುವತಿಕೃತಂ ತಾಂಡವಾದಿಪ್ರಕಾಂಡಂ
ಹಿತ್ವಾ ಶ್ರೀ ದೇವಚಂದ್ರಂ ದ್ರುತಮಮರವರಾ ದ್ರಷ್ಟುಮಾಯಾಂತಿ ಹಿ ತ್ವಾಂ ॥೨೩॥

---

ಯಿಂದ ಅನೇಕರು ಅವರನ್ನೇ ಧ್ಯಾನಿಸಿ, ಸ್ತುತಿಸಿ ಕೊನೆಗೆ ಆದರಿಂದ ಯಾವ ಫಲವನ್ನೂ ಪಡೆಯದೆ ಚಕ್ರಭ್ರಮಣದಂತಿರುವ ಸಂಸಾರ ಸಾಗರದಲ್ಲಿಯೇ ಬಿದ್ದು ತೊಳಲುತ್ತಿರುವರು. ಆದ್ದರಿಂದ ನಿಜವಾದ ಮುಕ್ತಿಯನ್ನು ಕರುಣಿಸುವವನು ಪರಶಿವನೊಬ್ಬನೇ ಅಲ್ಲವೆ! ಅಂತಹ ಮಹಾದೇವನಿಗೆ ವಂದನೆಗಳು. ॥೨೧॥

ಯಾವ ಪರಮೇಶ್ವರನ ಕಟಾಕ್ಷಪಾತದಿಂದಲೇ ಹೆದರಿ, ಬ್ರಹ್ಮ, ವಿಷ್ಣು, ಇಂದ್ರ ಮುಂತಾದ ದೇವತೆಗಳು ತಮ್ಮ ತಮ್ಮ ಕಾರ್ಯವನ್ನು ಅಕ್ಷೇಪಣೆ ಬರದಂತೆ ನಡೆಸುವರೋ, ಯಾವ ಮಹಾದೇವನ ಗೃಹದ್ವಾರದಲ್ಲಿ ನಂದೀಶ್ವರನಿಂದ ತಡೆಯಲ್ಪಟ್ಟು ಸಮಸ್ತ ದೇವತೆಗಳೂ ಕೈಕಟ್ಟಿ ಪರಮೇಶ್ವರನ ಆಜ್ಞಾನಿರೀಕ್ಷಕರಾಗಿ ನಿಂತಿರುವರೋ, ಅಂತಹ ಮಹಾದೇವನು ಸರ್ವದಾ ನಮ್ಮ ಹೃದಯಾಂತರಾಳದಲ್ಲಿ ಸ್ಫುರಿಸುತ್ತಿರಲಿ. ॥೨೨॥

ಮಹಾದೇವನೇ, ನಕ್ಷತ್ರಮಂಡಲವನ್ನೂ, ಬ್ರಹ್ಮಲೋಕವನ್ನೂ, ಅಪ್ಸರಸ್ತ್ರೀಯರ ವಿಲಾಸಭೋಗವನ್ನೂ, ಮನೋಹರವಾದ ಐರಾವತಾರೋಹಣವನ್ನೂ, ತಂಪಾದ ಕಾಂತಿಯನ್ನು ಬೀರುವ ಚಂದ್ರನ ಸಹವಾಸವನ್ನೂ, ಮಹಾಬಲಿಷ್ಠವಾದ ಆಯುಧಗಳನ್ನೂ, ರಂಭಾದ್ಯಪ್ಸರಸ್ತ್ರೀಯರ ನರ್ತನಾದಿಗಳನ್ನೂ ತಿರಸ್ಕರಿಸಿ ಆನಂದಮಯವಾದ ಮುಕ್ತಿಸಾಮ್ರಾಜ್ಯವನ್ನು ಪಡೆಯಲು ದೇವತೆಗಳೆಲ್ಲರೂ ದೇವದೇವನಾದ ನಿನ್ನನ್ನೇ ಅರಸಿಕೊಂಡು ಬಂದಿರುವರು. ॥೨೩॥

ಕುಂಭಾಸಂಭಾಸಿ ಡಿಂಭಾಕೃತಿಗತಿಮತುಲಂ ಭೂರಿಜಂಭಾರಿವಂದ್ಯಂ
ರಂಭಾರಂಭಾತಿಡಂಭಂ ವಿಧಿಯುವತಿ ಸುವಾಗ್ಗುಂಭಸಂಭಾವಿತಂ ಯತ್ ।
ಸಿಂಭಃ ಶತ್ರೂಭಿದಂಭೋಧರ ಭೃಶಮಥನೇ ಕಲ್ಪಜಂಝಾನಿಲೈಕಂ
ತೇಜಃ ಶ್ರೀ ಶಂಭುಸಂಜ್ಞಂ ನಿವಸತು ಹೃದಯೇ ಸರ್ವದಾ ಸೌಖ್ಯದಂ ತತ್
॥ ೨೪॥

ಕಾಂತಂ ದಾಂತಂ ಪ್ರಶಾಂತಂ ಸಕಲದಿವಿಷದಸ್ತೋಷಯಂತಂ ಜ್ವಲಂತಂ
ಕಂ ತಂ ಸಂತಂ ಮಹಾಂತಂ ಮುನಿಹೃದಿ ಸತತಂ ಸಂವಸಂತಂ ವಿಭಾಂತಂ।
ಶಾಂತಾ ದಾಂತಾ ಮಹಾಂತಃ ಶ್ರುತಿಶಿರಸಿ ಸದಾ ಸ್ವಾಂತಸಂಕ್ರಾಂತಚಿತ್ತಾಃ
ಯೇ ಧ್ಯಾಯಂತಿ ಕ್ಷಣಾರ್ಧಂ ಗಿರಿಶಮನುಪಮಾಸ್ತೇಭ್ಯ ಏವಾನತಿರ್ನಃ
॥ ೨೫॥

---

ಬ್ರಹ್ಮಾಂಡಾಂತರ್ಗತವಾದ ಸಮಸ್ತ ವಸ್ತುರೂಪದಿಂದ ಪ್ರಕಾಶಿಸುವವನೂ, ಜಂಭಾರಿಯಾದ ಇಂದ್ರನಿಂದ ವಂದ್ಯನಾದವನೂ, ರಂಭಾದಿ ಅಪ್ಸರಸ್ತ್ರೀಯರ ನರ್ತನಕ್ಕೆ ವಿಷಯನಾದವನೂ, ಸರಸ್ವತೀದೇವಿಯ ವಾಗ್ವೈಖರಿಯಿಂದ ಸ್ತುತ್ಯನಾದವನೂ, ಶತ್ರುಸಮೂಹವೆಂಬ ಮೇಘರಾಶಿಯನ್ನು ಕಲ್ಪಾಂತದ ಬಿರುಗಾಳಿಯಂತೆ ಚದುರಿಸುವವನೂ ಆದ ಮಹಾದೇವನು ಒಂದು ದಿವ್ಯತೇಜಸ್ಸಿನಂತೆ ಕಂಗೊಳಿಸುವನು. ಆರೀತಿಯಾದ ದಿವ್ಯತೇಜಸ್ಸು ಸೌಖ್ಯಪ್ರದವಾಗಿ ಸದಾ ನಮ್ಮ ಹೃದಯದಲ್ಲಿ ನೆಲಸಿರಲಿ. ॥೨೪॥

ಮಹಾದೇವನು ಸರ್ವರಿಗೂ ಮನೋಹರನಾದವನು. ಇಷ್ಟಾರ್ಥಪ್ರದನು. ಶಾಂತಸ್ವಭಾವದವನು. ಸಮಸ್ತ ದೇವತೆಗಳನ್ನೂ ತೃಪ್ತಿಪಡಿಸುವವನು. ತೇಜಸ್ಸಿನಿಂದ ಜ್ವಲಿಸುತ್ತಿರುವವನು. ಪರಬ್ರಹ್ಮಸ್ವರೂಪನು. ಸತ್ಪುರುಷನು. ಮುನಿಗಳ ಹೃದಯದಲ್ಲಿ ಸರ್ವದಾ ನೆಲಸಿರುವವನು. ಸರ್ವತ್ರ ಶೋಭಿಸುವವನು. ಇಂತಹ ಗುಣಗಣವರಿಷ್ಠನಾದ ಮಹೇಶ್ವರನನ್ನು, ಶಾಂತರೂ, ದಾಂತರೂ, ಉದಾತ್ತರೂ ಉಪನಿಷದರ್ಥವನ್ನು ಪೂರ್ಣವಾಗಿ ಅರಿತವರೂ ಆದ ಮಹಾತ್ಮರು ಸರ್ವದಾ ಅನುಸಂಧಾನಮಾಡುತ್ತಿರುವರು. ಹಾಗೆ ಅರ್ಧಕ್ಷಣಕಾಲ ಮಹೇಶ್ವರನನ್ನು ಧ್ಯಾನಿಸುವವರು ಸಹ ನಮಗೆ ಪೂಜ್ಯರೆನಿಸುವರು. ಇಂತಹ ಮಹಾತ್ಮರಿಗೆ ಸದಾ ನಮ್ಮ ನಮಸ್ಕಾರವಿರಲಿ. ॥೨೫॥

ವೇದಾಂತಪ್ರತಿಪಾದ್ಯವಸ್ತುವಿಜಯಪ್ರೌಢಾತ್ಮಲಾಭಪ್ರಮು
ತ್ಪಾರಾವಾರ ನಿಮಗ್ನ ಚಿತ್ತ ಸನಕಶ್ರೇಷ್ಠಾಥ ಯೋಗೀಶ್ವರಾಃ ।
ಜಾನಂತಿ ಪ್ರಭವಂ ನ ಯಸ್ಯ ನಿಗಮಾ ವಕ್ತುಂ ನ ದಕ್ಷಾಶ್ಚ ಯತ್
ಶೈವಂ ತತ್ಸವಿತುರ್ವರೇಣ್ಯಮತುಲಂ ಜ್ಯೋತಿಃಪರಂ ಧೀಮಹಿ ॥ ೨೬ ॥

ಧೂತಂ ಯದ್ವಿಭವೇನ ಖಂ ಸುಮನಸಾಂ ವೃಂದೈರ್ಯದಾಜ್ಞೋಹ್ಯತೇ
ಮಾಯೇವಾತುಲಶೇವಧಿಂ ಶ್ರುತಿಶಿರೋಭೀಮಾಟವೀಮಧ್ಯಗಾಂ ।
ಧನ್ಯಾ ಮೂಲಿಕಯಾಧಿಯಾಪಿ ಸುಖದಂ ಯನ್ಮಾರ್ಗಯಂತೇ ಸದಾ
ಶೈವಂ ತತ್ಸವಿತುರ್ವರೇಣ್ಯಮತುಲಂ ಜ್ಯೋತಿಃ ಪರಂಧೀಮಹಿ ॥ ೨೭ ॥

ಶುಕ್ಲಾಶುಕ್ಲಸಮಸ್ತಧರ್ಮಕರಣಂ ಚಿತ್ತಂ ಯದೀಯೇಕ್ಷಣಾ
ಭೇದಧ್ಯಾನಕಲಾಂ ಸಹಸ್ರಶತಿಕಾಂ ನಾರ್ಹತ್ಯಹೋ ಸರ್ವದಾ ।

---

ಉಪನಿಷದರ್ಥತತ್ಪರರಾಗಿ, ಆದರಲ್ಲಿ ನಿಪುಣರೆನಿಸಿ, ಜ್ಞಾನಿಗಳಾಗಿ, ಆನಂದಾಂಬುಧಿಯಲ್ಲಿ ಮುಳುಗಿದವರಾದ ಸನಕಸನಂದನಾದಿ ಯೋಗಿಗಳೂ ಸಹ ಪರಶಿವನ ಉತ್ಪತ್ತಿಯನ್ನು ಕೂಲಂಕಷವಾಗಿ ಅರಿಯಲಾರದೆ ಹೋದರು. ಉಪನಿಷದಾದಿಗಳೂ ಪರಮೇಶ್ವರನ ಪೂರ್ಣ ಮಹಿಮೆಯನ್ನು ತಿಳಿಸಲಾರದೆ ನಿಂತವು. ಇಂತಹ ಮಹಾದೇವನ ಅಥವಾ ಜ್ಯೋತಿಸ್ಸೂರ್ಯನ ಸಂಪೂರ್ಣವಾದ ತೇಜೋರಾಶಿಗೆ ಸದಾ ನಾವು ನಮಸ್ಕರಿಸುವೆವು. ಶಿವತೇಜಸ್ಸೆಂಬುದು ಸರ್ವರಿಗೂ ಪೂಜ್ಯವಾದುದು. ॥೨೬॥

ಶಿವತೇಜಸ್ಸೆಂಬುದು ಅಂತರಿಕ್ಷಭಾಗವನ್ನೇ ವ್ಯಾಪಿಸತಕ್ಕುದಾಗಿದೆ. ಶಿವತೇಜಸ್ಸಿನ ಆಜ್ಞೆಯು ದೇವತೆಗಳ ಗುಂಪಿನಿಂದ ವಹಿಸಲ್ಪಡುವುದಾಗಿದೆ. ಪ್ರಪಂಚದ ಸಮಸ್ತ ವಸ್ತುಜಾಲಕ್ಕೂ ಆಶ್ರಯವಿತ್ತಿದೆ. ವೇದವೇದಾಂತಗಳೆಂಬ ಭಯಂಕರವಾದ ಅರಣ್ಯದ ಮಧ್ಯವರ್ತಿಯಾಗಿದೆ. ಶ್ರೇಷ್ಠತಮವಾದ ಜ್ಞಾನಮಾರ್ಗದಲ್ಲಿ ಮುಂದುವರಿಯುವವರಿಗೆ ಸುಖಪ್ರದವೆನಿಸಿದೆ. ಸರ್ವರೂ ಸಹ ಈ ಶಿವತೇಜಸ್ಸನ್ನು ಸರ್ವದಾ ಹುಡುಕುತ್ತಿರುವರು. ಇಂತಹ ಸೂರ್ಯತೇಜೋಧಿಕವಾಗಿ ಜಗತ್ತನ್ನೇ ಮರುಳುಗೊಳಿಸುವ ಶೈವತೇಜಸ್ಸನ್ನು ನಾವು ಸರ್ವದಾ ಆಶ್ರಯಿಸುವೆವು. ॥೨೭॥

ಇದು ಬಿಳುಪು, ಇದು ಕಪ್ಪು ಮುಂತಾದ ಧರ್ಮಕ್ರಮವನ್ನು ಮಾತ್ರ ತಿಳಿಸಲು ಸಾಧ್ಯವಾದ ಮಾನವರ ಚಿತ್ತವು ಶಿವಧ್ಯಾನ ಮಾರ್ಗದ ಸಾವಿರದೊಂದು

ಜ್ಯೋತೀಂಷಿ ಪ್ರವರಾಣ್ಯತೀಂದ್ರಿಯದಶಾಂ ಯತ್ರೋದಯಂ ಯಾಂತಿ ಖೇ
ಶೈವಂ ತತ್ಸವಿತುರ್ವರೇಣ್ಯಮತುಲಂ ಜ್ಯೋತಿಃ ಪರಂ ಧೀಮಹಿ ॥೨೮॥

ಪ್ರಮುದ್ವತ್ತೋ ಲೋಕಃ ತ್ರಿಪುರಹರ ಶಂಭೋ ಕಥಮಹೋ
ತ್ವದೀಯೋಽಹಂ ದೂತೋ ವಸತಿ ತದಿಶೋಽಹಂ ಯದಿವದೇಃ ।
ಭವೇಯುಸ್ತ್ವದ್ದೂತಾ ನ ಹಸಿತವಿಧೀಂದ್ರಾದಿಪತಯಃ
ಅತಸ್ತ್ರಾಯಸ್ವೇಮಂ ನಲಿನರುಗಪಾಂಗೈಕಕೃಪಯಾ ॥೨೯॥

ಪ್ರಜೋತ್ಪತ್ತಿಂ ಯಸ್ಯ ದ್ರುಹಿಣ ಸುರನಾಥಪ್ರಭೃತಯ
ಸ್ತ್ವನಾರಬ್ಧಾ ನೋಕ್ಷಕ್ಷುಭಿತಹೃದಯಾ ನಿರ್ಜರಗಣಾಃ ।
ಪ್ರಸಾದ್ಯಸ್ತೋತ್ರೈರ್ಯತ್ಸಕಲಸುರಸೇನಾಪತಿಮಗು
ರ್ವರೇಣ್ಯಂ ತದ್ಭರ್ಗಃ ಸವಿತುರಿತಿ ಭೀಮ್ಯೈರನುಪಮಂ ॥೩೦॥

---

ಅಂಶವನ್ನೂ ಅರಿಯಲಾರದು. ಸೂರ್ಯಾದಿ ದೃಗ್ಗೋಚರವಾಗುವ ಜ್ಯೋತಿಸ್ಸುಗಳೂ ಅಂತರಿಕ್ಷದಲ್ಲಿ ಈ ಶಿವತೇಜಸ್ಸಿನ ಪ್ರಭಾವದಿಂದ ಅಂತರಿಕ್ಷದಲ್ಲಿ ಉದಯಿಸುವುವು. ಹಾಗೆಯೇ ಅಸ್ತಮಾನವಾಗುವುವು. ಇಂತಹ ತತ್ಸವಿತೃರೂಪವಾದ ದಿವ್ಯತೇಜಸ್ಸನ್ನು ಸರ್ವದಾ ಧ್ಯಾನಿಸುವೆವು. ॥೨೮॥

ತ್ರಿಪುರನಾಶಕನಾದ ಶಂಭುವೇ, ಅಹಂಕಾರದಿಂದ ಕೊಬ್ಬಿದ ಜನವು ನಿನ್ನ ಸಮೀಪಕ್ಕೆ ಬಂದು ವಿನಯದಿಂದ "ನಾನು ನಿನ್ನ ಸೇವಕನಾಗಿದ್ದೇನೆ" ಎಂದು ಹೇಳಿದ ಮಾತ್ರಕ್ಕೆ ನೀನು ಅವನಿಗೆ ರಕ್ಷಕನಾಗಿಬಿಡುವೆ. ಅಂತಹ ನಿನ್ನ ಭಕ್ತನನ್ನು ಬ್ರಹ್ಮವಿಷ್ಣ್ವಾದಿ ಯಾವ ದೇವತೆಗಳೂ ಹಿಂಸಿಸಲಾರರು. ಅವರೆಲ್ಲರಿಗೂ ಅವನು ಸರಿಸಮನೆನಿಸುವನು. ಮಹಾದೇವನೇ, ಇಂತಹ ಮಹಾಮಹಿಮನಾದ ನೀನು ನಿನ್ನ ಕರುಣಾಕಟಾಕ್ಷದಿಂದ ಈ ನಮ್ಮ ಗುಂಪನ್ನು ನೋಡಿ ರಕ್ಷಿಸು. ॥೨೯॥

ಬ್ರಹ್ಮ, ಇಂದ್ರ ಮುಂತಾದ ದೇವತೆಗಳು ತಾರಕಾಸುರನಿಂದ ರಕ್ಷಣೆಯನ್ನು ಹೊಂದದೆ ಎಲ್ಲರೂ ಹೆದರಿ ತಮ್ಮ ಸೈನ್ಯಕ್ಕೆ ವೀರಸೇನಾಪತಿಯೊಬ್ಬನನ್ನು ಕರುಣಿಸಬೇಕೆಂದು ಯಾವ ಪರಮೇಶ್ವರನಿಂದ ಅಪತ್ಯೋತ್ಪತ್ತಿಯನ್ನು ಯಾಚಿಸಿದರೋ ಅಂತಹ ದೇವಾಧಿದೇವನೂ, ಜಗತ್ಸೂರ್ಯರೂಪಿಯೂ ಭಯಂಕರತೇಜಶ್ಶಾಲಿಯೂ ಆದ ತೇಜೋರೂಪಿಯಾದ ಪರಶಿವನನ್ನು ನಾವು ಮೊರೆಹೋಗುತ್ತೇವೆ. ॥೩೦॥

ಸರ್ವೈರಾಂಗಿರಸ್ಸೈರಪಿ ಪ್ರತಿಹಿತಂ ಕೃತ್ಯಾನಿಕಂ ಯತ್ಸ್ಮೃತಿ
ಧ್ವಸ್ತಂ ಸ್ಯಾತ್ಸ್ಫೃತಿಸಾಧ್ಯವಸ್ತುಗಿರಿಶಃ ಸಚ್ಚಿತ್ಸುಖಾತ್ಮಾ ಶಿವಃ ।
ಯಸ್ಮಾತ್ತಾಂ ರವಿಮಂಡಲಾಂತರಗತಾಂ ಜ್ಯೋತಿರ್ಮಯೀಂ ಜ್ಞಾನದಾಂ
ಗಾಯತ್ರೀಂ ಸ್ಮೃತಿ ಭಾವಯಾಮಿ ಸತತಂ ತತ್ಸ್ವೈಕಧೀಸಿದ್ಧಯೇ ॥೩೧॥

ಯಸ್ಯ ಶ್ರೀಮುಖಸರ್ವದೇವವನಿತಾ ನೃತ್ಯಂತಿ ಗಾಯಂತಿ ತತ್
ಭರ್ತಾರಸ್ತು ಮಹಾಪ್ರದೋಷಸಮಯೇ ಮಾರ್ದಂಗಿಕಾ ಕೇಚನ ।
ಪ್ರೌಢಾಃ ಕೇಚನ ವೇಣುತಾಲಕೃತಿನಃ ಪ್ರೀತಿಂ ಸುರಾಃ ಕುರ್ವತೇ
ಶೈವಂ ತತ್ಸವಿತುರ್ವರೇಣ್ಯಮತುಲಂ ಜ್ಯೋತಿಃ ಪರಂಧೀಮಹಿ ॥೩೨॥

ಯೋಽಪಾರಾದ್ಭವಸಾಗರಾತ್ಸಕೃದಪಿಧ್ಯಾನಸ್ಯನಾಮಸ್ಮೃತಿ
ಪ್ರೀತಸ್ತಾರಯತಿ ಪ್ರಭುಃ ಕರುಣಯಾ ಪರ್ಣಾಶನಾನಾಮಪಿ ।

---

ಅಂಗಿರಸ್ಸೇ ಮೊದಲಾದ ಜ್ಞಾನಿಗಳು ಯಾವ ಪರಶಿವನ ನಾಮಸ್ಮರಣ ಮಾತ್ರ ದಿಂದಲೇ ತಮ್ಮ ಅಜ್ಞಾನಕೃತವಾದ ಕರ್ಮಫಲವನ್ನೆಲ್ಲಾ ಕಳೆದುಕೊಂಡು, ಪರಬ್ರಹ್ಮವಸ್ತುಸಾಕ್ಷಾತ್ಕಾರದಿಂದ ಸಚ್ಚಿದಾನಂದರೂಪವಾದ ಶಿವಸಾಯುಜ್ಯವನ್ನು ಪಡೆಯುವರೋ, ಅಂತಹ ಶಂಕರನಿಗೆ ನಮಸ್ಕಾರ. ಅಲ್ಲದೆ ಶಿವಜ್ಯೋತೀರೂಪ ದಿಂದ ಸೂರ್ಯಮಂಡಲಮಧ್ಯವರ್ತಿಯಾಗಿ, ಜ್ಞಾನಮಯಿಯಾಗಿ ಗಾಯತ್ರೀ ನಾಮದಿಂದ ತನ್ನನ್ನು ಧ್ಯಾನಮಾಡುವವರನ್ನು ರಕ್ಷಿಸುತ್ತಿರುವ ಶಿವಶಕ್ತಿಯನ್ನು ನಾವು ಬಿಡದೆ ಸುಜ್ಞಾನಪ್ರಾಪ್ತಿಗಾಗಿ ಆಶ್ರಯಿಸುವೆವು. ॥೩೧॥

ಮಹಾಪ್ರದೋಷಕಾಲದಲ್ಲಿ ಪರಮೇಶ್ವರನು ತಾಂಡವೋತ್ಸವದಲ್ಲಿ ನಿರತ ನಾದಾಗ ಲಕ್ಷ್ಮಿಯೇ ಮೊದಲಾದ ದೇವತಾಸ್ತ್ರೀಯರೆಲ್ಲರೂ ನರ್ತನಕ್ಕೆ ಆರಂಭಿಸು ವರು. ಅವರ ಪತಿಯರಾದ ವಿಷ್ಣುವೇ ಮೊದಲಾದವರಲ್ಲಿ ಕೆಲವರು ಮದ್ದಲೆಯನ್ನು ಬಾರಿಸುವರು. ಮತ್ತೆ ಕೆಲವರು ಕೊಳಲನ್ನೂದುವರು. ಹಲವರು ತಾಳಹಾಕು ವರು. ಇದನ್ನೆಲ್ಲಾ ನೋಡುತ್ತಾ ಸಮಸ್ತ ದೇವತೆಗಳೂ ಆನಂದಭರಿತರಾಗುವರು. ಇಂತಹ ಅದ್ಭುತಶಕ್ತಿಯುಳ್ಳ ಸೂರ್ಯತೇಜೋಧಿಕರೂಪಿಯಾದ ಶಾಂಕರಮಹಾ ತೇಜಸ್ಸನ್ನು ನಾವು ಸರ್ವದಾ ಧ್ಯಾನಿಸುವೆವು. ॥೩೨॥

ತನ್ನನ್ನು ಸ್ಮರಿಸಿ, ತನ್ನ ನಾಮಧ್ಯಾನಮಾಡುವ ಅಸಂಖ್ಯಾತ ಭಕ್ತವೃಂದಕ್ಕೆ ಮಹೇಶ್ವರನು ಅಪಾರವಾದ ಭವಸಾಗರದ ದಡವನ್ನು ಕಾಣಿಸುವನು ಅಂದರೆ

ಧ್ಯಾನಾಗಮ್ಯತನುಃ ಶ್ರುತಿಪ್ರವಚಸಾಂ ದೂರೀಕೃತಾತ್ಮಾಪರ
ಸ್ತಂ ಶಂಭುಂ ರವಿಮಂಡಲಾಂತರಗತಂ ಜ್ಯೋತಿರ್ಮಯಂ ಧೀಮಹಿ ॥೩೩॥

ಪ್ರಾಪ್ತಂ ನಿತ್ಯಯುವತ್ವಮಾಯುರಚಿತಂ ದೇವ್ಯೈಃ ಮೃಕಂಡೋಃ ಪರಂ
ಪುತ್ರೇಣಾಮಿತತೇಜಸಾ ಧನದತಾ ಸರ್ವಾತಿಶಾಯಿನ್ಯಹೋ ।
ಯಕ್ಷೇಶೇನ ಯದೀಯಭಕ್ತಿಕಲನಾದಧ್ಯಾತ್ಮವಿದ್ಯರ್ಷಿಭಿಃ
ತಂ ಶೈವಂ ಸವಿತುರ್ವರೇಣ್ಯಮತುಲಂ ಜ್ಯೋತಿಃ ಪರಂ ಧೀಮಹಿ ॥೩೪॥

ಧಾತುಃ ಸೃಷ್ಟಿಪರಂಪರಾ ಚತುರತಾ ಸರ್ವಜ್ಞತಾ ಚೇಚ್ಛ್ರುತಾ
ಪ್ರೋಕ್ತಂ ವ್ಯಾಕರಣಂ ಸಮಸ್ತಮುನಿಷು ಖ್ಯಾತೇಷು ವಿಖ್ಯಾತಿತಂ ।

---

ಅವರು ಎಂದಿಗೂ ಸಾಂಸಾರಿಕವಾದ ದುಃಖರಾಶಿಯನ್ನು ಹೊಂದದಂತೆ ಕರುಣಿಸುವನು. ಆದರೆ ಮಹಾದೇವನು ಎಲ್ಲರಿಗೂ ಸುಲಭನಲ್ಲ. ಯುಗಯುಗಾಂತರಗಳಿಂದ ಪರ್ಣಾಶನರಾಗಿದ್ದು, ವೇದವಾಕ್ಯಗಳಿಗೆ ಆಗೋಚರನಾಗಿರುವ ಪರಮೇಶ್ವರನನ್ನು ನಾನಾರೀತಿಯಿಂದ ಧ್ಯಾನಮಾಡಿದರೂ, ಅವರಿಗೆ ತಾನು ಸುಲಭವಾಗಿ ಗೋಚರಿಸಲಾರನು. ಅಂತಹ ಮಹೇಶ್ವರನು ಸೂರ್ಯಮಂಡಲಾಂತರ್ವರ್ತಿಯಾಗಿ ಸದಾ ಸ್ಫುರಿಸುವನು. ಆ ಮಹಾದೇವನಿಗೆ ವಂದನೆಗಳು. ಅವನನ್ನೇ ನಾವು ಸರ್ವದಾ ಧ್ಯಾನಾನುಸಂಧಾನಮಾಡುವೆವು. ॥೩೩॥

ಮೃಕಂಡು ಮಹರ್ಷಿಯ ಪುತ್ರನಾದ ಮಾರ್ಕಂಡೇಯನು ಯಾವ ದೇವನ ಅನುಗ್ರಹದಿಂದ ನಿತ್ಯಯೌವನವನ್ನೂ ಸ್ಥಿರಾಯುಷ್ಯವನ್ನೂ ಪಡೆದನೋ, ಯಾವ ಈಶ್ವರನ ಕೃಪೆಯಿಂದ ಯಕ್ಷಾಧಿಪತಿಯಾದ ಕುಬೇರನು ಧನಾಧಿಪತ್ಯವನ್ನು ಹೊಂದಿದನೋ, ಯಾವ ದಕ್ಷಿಣಾಮೂರ್ತಿಯ ಉಪದೇಶದಿಂದ ಸಮಸ್ತ ಮಹರ್ಷಿಗಳೂ ಅಧ್ಯಾತ್ಮವಿದ್ಯಾಪಾರಂಗತರಾದರೋ, ಅಂತಹ ಕರುಣಾಸಿಂಧುವೂ, ಸೂರ್ಯಮಂಡಲಾಂತರ್ವರ್ತಿಯೂ ಆದ ದಿವ್ಯಶಿವತೇಜಸ್ಸನ್ನು ನಾವು ಸರ್ವದಾ ಧ್ಯಾನಿಸುವೆವು. ॥೩೪॥

ಮಹೇಶ್ವರನ ಅನುಗ್ರಹಬಲದಿಂದಲೇ ಚತುರ್ಮುಖ ಬ್ರಹ್ಮನು ಪ್ರಪಂಚ ಸೃಷ್ಟಿಕರ್ತನೆನಿಸಿದನು. ಹಾಗೆಯೇ ಸರ್ವಜ್ಞನೆಂಬ ಹೆಸರನ್ನೂ ಪಡೆದನು. ಮುನಿಶ್ರೇಷ್ಠನಾದ ಪಾಣಿನಿಯು ವಿದ್ಯಾವಂತರಲ್ಲಿ ಅತ್ಯಂತ ಪ್ರಸಿದ್ಧವಾದ ಮತ್ತು ಅರ್ಥಗರ್ಭಿತವಾದ ಸೂತ್ರರೂಪದಿಂದ ಪ್ರಸಿದ್ಧವಾಗಿರುವ ವ್ಯಾಕರಣಶಾಸ್ತ್ರವನ್ನು ಪರಶಿವನ ಕರುಣಾಪೂರಿತವಾದ ಡಮರುಗಧ್ವನಿಯ ಸಹಾಯದಿಂದಲೇ ರಚಿಸಿದ

ಕೃತ್ಸ್ನಂ ಪಾಣಿನಿನಾ ಪುರಾತಿಗಹನಂ ಯದ್ವ್ಯಕ್ತಿತಃ ಸೂತ್ರತಃ
ತದ್ವ್ಯಾಖ್ಯಾತಂ ಮಹೇಶ್ವರೇಣ ಸ ಪರಾಂ ವಾಚಂ ಪ್ರದಿಶ್ಯಾಚ್ಛಿವಃ ॥೩೫॥

ವೇದಾಶೇಷಪುರಾಣಭಾರತಚಿರಂ ಪ್ರಖ್ಯಾತಸರ್ವಾಮರ
ಬ್ರಹ್ಮರ್ಷಿತ್ರಿದಶರ್ಷಿ ಸರ್ವಮನುಜಪ್ರೋದ್ಗೀಯಮಾನಂ ಸದಾ ।
ಯಸ್ಮಾತ್ತ್ವಯ್ಯಮರೇಶ್ವರತ್ವಮತುಲಂ ನಿತ್ಯಂ ವಿಜೇಜೀಯತೇ
ಶೈವಂ ತತ್ಸವಿತುರ್ವರೇಣ್ಯಮತುಲಂ ಜ್ಯೋತಿಃ ಪರಂ ಧೀಮಹಿ ॥೩೬॥

ಪ್ರಾಪ್ಯಂತೇ ಬಹುಧಾನ್ಯರತ್ನಕನಕಸ್ತ್ರೀರತ್ನಸದ್ಮೋತ್ತಮ
ಕ್ರೀಡಾಚಾಮರಶಾರದೇಂದುರುಚಿರಛತ್ರೇಭಘೋಟಾದಯಃ ।
ವೈರಿಂಚಂ ಪದಮೈಂದಿರೇಮರಪುರೇಶತ್ವಂ ಚ ಯಸ್ಯಾಜ್ಞಯಾ
ಶೈವಂ ತತ್ಸವಿತುರ್ವರೇಣ್ಯಮತುಲಂ ಜ್ಯೋತೀಪರಂ ಧೀಮಹಿ ॥೩೭॥

---

ನಲ್ಲವೆ! ಅದೇ ಪಾಣಿನಿಯ ವ್ಯಾಕರಣಕ್ಕೆ ಪತಂಜಲಿಮಹರ್ಷಿಗಳು ಭಾಷ್ಯ ಬರೆದದ್ದು ಸಹ ಮಹಾದೇವನ ಅನುಗ್ರಹಬಲದಿಂದಲ್ಲವೆ! ಹೀಗೆ ಸರ್ವಶಕ್ತನಾದ ಮಹಾದೇವನು ನಮ್ಮೆಲ್ಲರಿಗೂ ಸಂರಕ್ಷಕನಾಗಿರಲಿ. ॥೩೫॥

ಸಮಸ್ತ ವೇದಗಳು, ಪುರಾಣೇತಿಹಾಸಗಳು, ಮಹಾಭಾರತಾದಿ ಐತಿಹಾಸಿಕ ಗ್ರಂಥಗಳು ಮತ್ತು ದೇವತೆಗಳು, ರಾಜರ್ಷಿಬ್ರಹ್ಮರ್ಷ್ಯಾದಿಗಳು, ಮಾನವವೃಂದ ಇವರೆಲ್ಲರಿಂದಲೂ ನಾನಾರೀತಿ ಸ್ತುತಿಸಲ್ಪಡುವ ಮತ್ತು ಆರೀತಿ ತನ್ನನ್ನು ಸ್ತುತಿಸಿದ ಗ್ರಂಥರತ್ನಗಳಿಗೂ ದೇವತಾಸಮೂಹಕ್ಕೂ ಭಕ್ತಶ್ರೇಷ್ಠರಿಗೂ ಸರ್ವಶ್ರೇಷ್ಠತೆಯನ್ನು ಕೊಟ್ಟಿರುವ ದೇವಾಧಿದೇವನೂ ಸೂರ್ಯಮಂಡಲಗತನೂ ಆದ ಶೈವತೇಜೋರೂಪಿಯಾದ ಶಂಕರನಿಗೆ ಸದಾ ವಂದನೆಗಳು. ॥೩೬॥

ಯಾವ ಪರಮೇಶ್ವರನ ಅನುಗ್ರಹದಿಂದ ಭಕ್ತರು ಧನಧಾನ್ಯರಾಶಿಯನ್ನೂ, ಹೇಮರತ್ನಾದಿಗಳನ್ನೂ, ರಮಣೀ, ದಾಸೀ ಗೃಹಾದಿ ಭೋಗಸಾಮಗ್ರಿಗಳನ್ನೂ, ಶುಭ್ರವಾದ ಛತ್ರಿಚಾಮರಾದಿಗಳನ್ನೂ, ಆನೆಕುದುರೆಗಳನ್ನೂ ಅನಾಯಾಸವಾಗಿ ಹೊಂದುವರೋ, ಅದೂ ಅಲ್ಲದೆ ಭಕ್ತನ ಭಕ್ತಿಗೆ ಅನುಸಾರವಾಗಿ ಬ್ರಹ್ಮಪದವಿ, ಲಕ್ಷ್ಮೀಸ್ಥಾನ, ಇಂದ್ರಾಧಿಕಾರ ಇಂತಹವುಗಳೂ ಯಾವ ದೇವನ ದಿವ್ಯಜ್ಯೋತಿಯಿಂದ ದೊರೆಯುವುವೋ ಅಂತಹ ಶ್ರೇಷ್ಠವಾದ ಸೂರ್ಯಾಧಿಕ ಶೈವತೇಜಸ್ಸನ್ನು ನಾವು ಸದಾ ಧ್ಯಾನಿಸುವೆವು. ॥೩೭॥

ಶೈವೇ ನಾಮನಿ ಸಂಪ್ರಮಾಥಿನಿ ಮಹಾಪಾಪವ್ರಜಾನಾಂ ಸದಾ
ಕಾ ಚಿಂತಾ ನರಕಾನುಭೂತಿವಿಷಯೇ ಮಾ ಭೈಷ್ಟ ಭೋ ಭೋ ಜನಾಃ ।
ತನ್ನಾಶ್ಯಾನಿ ಚ ಪಾತಕಾನಿ ಭುವನೇ ಸತ್ಯಂ ಹಿ ಸತ್ಯಂ ವದಾ
ಮ್ಯತ್ರೈವಾಖಿಲಧರ್ಮಶಾಸ್ತ್ರನಿಗಮಾಃ ಸಂತಿ ಪ್ರಮಾಣಾನ್ಯಹೋ ॥೩೮॥

ಶಂಭೋರ್ವಿಕ್ರಮಮಪ್ರಮೇಯಮನುತೇ ತಜ್ಜ್ಞಾನತಾಂ ಮಾಧವ
ಶ್ರೀಷ್ಮಾನಾಮಸುರದ್ವಿಷಾಂ ಪುರವಧೇ ಕೈಂಕರ್ಯಮಾತನ್ವತಾಂ ।
ಮತ್ವಾ ನಾರದಮಂತರಂಗಜನಿತಂ ತಸ್ಮಿನ್ ಕ್ಷಣೇ ಗೋಽಧಿದೃಕ್
ದಗ್ಧಂ ತತ್ಪುರಮೀದೃಶಾಯ ಭವತೇ ನಿತ್ಯಂ ನಮಃ ಕುರ್ಮಹೇ ॥೩೯॥

ಯದ್ಗ್ರೀವೋದ್ಭಾಸಿಘಂಟಾಧ್ವನಿಪರಿನಯನಪ್ರೌಢಮೌಲಿಪ್ರಹಾರ
ಪ್ರೋದ್ದಂಡೈಕಪ್ರಚಾರೈರ್ಘನಘನರವತತ್ಪತ್ರಮಾಭರ್ಾಧಿಕಾರಿಂ ।

---

ಅಜ್ಞಾನಿಗಳಾದ ಜನಗಳಿರಾ, ನಿಮ್ಮ ಸಮಸ್ತ ಪಾಪರಾಶಿಯನ್ನೂ ನಾಶಗೊಳಿಸುವ ಮಹಾದೇವನ ನಾಮಪರಂಪರೆಯಿರುವಾಗ ನಿಮಗೆ ನರಕವಾಸದ ಭಯವೆಲ್ಲಿಂದ ಬಂದೀತು? ಈಶ್ವರಭಜನೆಮಾಡುವ ನೀವು ಎಂದೂ ನರಕಕ್ಕೆ ಹೆದರಬೇಡಿ. ಎಂತಹ ಪಾಪರಾಶಿಯಾದರೂ ಈಶ್ವರನಾಮಸ್ಮರಣೆಯಿಂದ ನಾಶವಾಗುವುದೆಂಬುದರಲ್ಲಿ ಸಂಶಯವಿಲ್ಲ. ಈ ಅಭಿಪ್ರಾಯವನ್ನು ಸಮರ್ಥನಗೊಳಿಸುವ ಧರ್ಮಶಾಸ್ತ್ರವಾಕ್ಯಗಳೂ ವೇದಾಂತವಚನಗಳೂ ಅಸಂಖ್ಯಾತವಾಗಿವೆ. ಆದ್ದರಿಂದಲೇ ನಾವು ಪಾಪದಿಂದ ಉತ್ಪನ್ನವಾಗುವ ನರಕಾದಿಗಳಿಗೆ ಹೆದರಬೇಡಿರೆಂದು ಧೈರ್ಯವಾಗಿ ಹೇಳುವೆನು. ॥೩೮॥

ಪರಮೇಶ್ವರನ ಪರಾಕ್ರಮವು ಅಪ್ರಮೇಯವಾದುದೆಂದು ತಿಳಿದು ತ್ರಿಪುರದಹನಕಾಲದಲ್ಲಿ ಅವನನ್ನು ನಾನಾರೀತಿ ಸೇವಿಸಿದ ವಿಷ್ಣ್ವಾದಿ ದೇವತೆಗಳ ಅಭಿಪ್ರಾಯವನ್ನು ಸರಿಯಾಗಿ ಅರಿತು ನಾರದಮುನಿಯು ಹಿಮವಂತನಿಗೆ ಎಚ್ಚರಿಕೆಯಿತ್ತು ಪಾರ್ವತೀಪರಿಣಯ ಕಾರ್ಯಕ್ಕೆ ಕಾರಣನಾದನು. ಆದರೇನು? ಅಂತಹ ಪವಿತ್ರಕಾರ್ಯದಲ್ಲಿ ಪರಶಿವನ ಅಗ್ನಿನೇತ್ರಕ್ಕೆ ಸಿಕ್ಕಿ ಮನ್ಮಥನು ಕ್ಷಣಕಾಲದಲ್ಲಿ ನಾಶವಾದನಲ್ಲವೆ? ಹೀಗೆ ಕ್ಷಣಕಾಲದಲ್ಲಿ ಮನ್ಮಥನನ್ನು ನಾಶಗೊಳಿಸಿದ ದೇವದೇವನಾದ ಮಹಾದೇವನಿಗೆ ನಿತ್ಯನಮಸ್ಕಾರಗಳು. ॥೩೯॥

ಪರಮೇಶ್ವರನು ತನ್ನ ವಾಹನವೆನಿಸಿದ ಮಹಾವೃಷಭರಾಜನ ಕಂಠದಲ್ಲಿ

ಆರೂಢಸ್ತಂ ಮಹೇಶೋ ವೃಷಮುಗತನಯಾಸ್ಕಂದಪಾರ್ಶ್ವದ್ವಯಾದ್ಯೋ
ನಿಶ್ಚಿತ್ತೇ ಸನ್ನಿಧತ್ತಾಂ ನತನಿಹಿತದಯಃ ಕಾಮುಮುಖ್ಯಾರಿಹಾರೀ ॥೪೦॥

ಉದ್ದಂಡಾರಿಪ್ರಶಾಂತ್ಯೈ ಪುರಹರನಿಟಿಲೇ ಚಿತ್ರಭಾನುಸ್ವರೂಪಂ
ಧತ್ತೇ ನೇತ್ರಂ ಪ್ರದಹಮುದಹಿತಂ ಕರ್ಮಜಾಲಂಬನಂ ತ್ವಂ ।
ಸಂಪ್ರತ್ಯುದ್ದಂಡ ಕಾಮುಪ್ರಮುಖರಿಪುಗಣೋ ಬಾಧತೇ ನಸ್ತ್ವಜಸ್ರಂ
ತನ್ನಿಶ್ಶೇಷಂ ದಹತ್ವಂ ಸುವಿಮಲಹೃದಯಾಸ್ತ್ವಾಂ ಭಜಾಮೋಹ್ಯಜಸ್ರಂ
॥೪೧॥

ಯೋಯಂ ವ್ಯೋಮ್ನಿ ಸ್ವಭಾನುಪ್ರರಚಿತವಿಲಸನ್ಮಂಡಲಸ್ವಪ್ರಕಾಶ
ಜ್ಯೋತಿಷ್ಮಂತಂ ಸ್ಥಿತಂ ತತ್ಪರಮುಶಿವ ರುಚಿಸ್ತೋಮುಸರ್ವಪ್ರಕಾಶಃ ।
ಶರ್ವಾಪತ್ಯಸ್ತ್ವನೇನ ಪ್ರಮುದಿತಹೃದಯಸ್ತಾರಕಾರಿಪ್ರಪೀಡಾಂ
ನಿರ್ವೃತ್ಯಾಕ್ಷ್ಣ ಕಟಾಕ್ಷೈಃ ಸುಖಯತು ಸುರತಾಂ ದೇವಸೇನೇಶದಾನಾತ್
॥೪೨॥

---

ಢಣಢಣಗೊಳಿಸುವ ಘಂಟಾರವದಿಂದಲೂ, ಮೇಘಧ್ವನಿಯನ್ನೇ ಕಮ್ಮಿಮಾಡುವಂತಹ ಗುಟುರು ಧ್ವನಿಯಿಂದಲೂ, ದಿಙ್ಮಂಡಲವನ್ನೇ ನಡುಗಿಸುತ್ತಾ, ಎಡಭಾಗದಲ್ಲಿ ಪಾರ್ವತಿಯನ್ನೂ, ಬಲಪಾರ್ಶ್ವದಲ್ಲಿ ಕುಮಾರಸ್ವಾಮಿಯನ್ನೂ ಕುಳ್ಳಿರಿಸಿಕೊಂಡು ಅಂತರಿಕ್ಷಗಾಮಿಯಾಗುತ್ತಿರುವ, ಪರಶಿವನ ದಿವ್ಯಚಿತ್ರವು ಸದಾ ನಮ್ಮ ಹೃದಯಾಂತರಾಳದಲ್ಲಿರಲಿ. ಮತ್ತು ಆ ಈಶ್ವರನ ಸಂಪೂರ್ಣಕೃಪಾಕಟಾಕ್ಷವು ನಮ್ಮಂತಹ ಭಕ್ತರನ್ನು ಸರ್ವದಾ ರಕ್ಷಿಸುತ್ತಿರಲಿ. ॥೪೦॥

ತ್ರಿಪುರಾರಿಯಾದ ಮಹಾದೇವನೇ, ಲೋಕಕಂಟಕರಾಗಿ ದುಷ್ಟರೆನಿಸಿದ ಕ್ರೂರಶತ್ರುಗಳನ್ನು ನಾಶಗೊಳಿಸಲು ನೀನು ನಿನ್ನ ಹಣೆಯಲ್ಲಿ ಅಗ್ನಿರೂಪವಾದ ನೇತ್ರವನ್ನು ಧರಿಸಿದೆ. ಆದರಿಂದ ನಮಗೆ ಮನ್ಮಥನೇ ಮೊದಲಾದವರ ಹಿಂಸೆಯು ಈಗ ತಪ್ಪಿದಂತಾಗಿದೆ. ಮಹಾದೇವನೇ, ಆದರೆ ನಮ್ಮನ್ನು ಇನ್ನೂ ಕೆಲವು ದುಷ್ಟರು ಪೀಡಿಸುತ್ತಿರುವರು. ಇದೇ ನಿನ್ನ ಅಗ್ನಿನೇತ್ರದಿಂದ ಅವರನ್ನೂ ಅವರ ಕಡೆಯವರನ್ನೂ ಪೂರ್ಣವಾಗಿ ನಾಶಗೊಳಿಸಿ ನಮ್ಮನ್ನುದ್ಧರಿಸು. ನಿರ್ಮಲಚಿತ್ತದಿಂದ ನಾವು ಸದಾ ನಿನ್ನನ್ನು ಧ್ಯಾನಮಾಡುವೆವು. ಪರಮೇಶ್ವರನೇ ನಿನಗೆ ವಂದನೆಗಳು. ॥೪೧॥

ಪರಮೇಶ್ವರನು ತನ್ನ ನೈಸರ್ಗಿಕವಾದ ತೇಜಃಪ್ರಸರದಿಂದ ಅಂತರಿಕ್ಷಭಾಗವನ್ನೆಲ್ಲಾ ಬೆಳಗಿಸಿ, ಸ್ಥಿರಜ್ಯೋತಿಯೊಂದನ್ನು ಸೂರ್ಯರೂಪದಿಂದ ಅಲ್ಲಿ ನಿಲ್ಲಿಸಿ

॥ ಸೂತ ಉವಾಚ ॥

ಶಚೀಪತಿರಪಾಂಪತಿಃ ಪಿತೃಪತಿಸ್ಸ್ವಧಾಯಾಃ ಪತಿ
ರ್ನಮಾಮ ಕಿಲ ಭಾರತೀಪತಿರಥಾಜ್ಞಸದ್ಮಾಪತಿಃ ।
ದಿಶಾಂಚ ಪತಿಭಿಸ್ಸದಾ ಅನಿಲಸೋಮಸೂರ್ಯೈರ್ವಿಭುಂ
ತದಾಹುರ್ವಿನಯಾನತಾಃ ಪುರಹರಂ ಪತೀನಾಂ ಪತಿಂ ॥೪೩॥

॥ ದೇವಾ ಊಚುಃ ॥

ಸುರತಾ ನಿರತಾ ತವಾಬ್ಜಪಾದೇ
ಹರ ಸಂಹಾರಯ ತಾರಕೋರುದುಃಖಂ ।
ಕುರು ಪಾಣಿಗ್ರಹಣಂ ಚ ಮಂಗಳಾಯಾಃ
ಸುರಸೇನಾಪತಿಕಾರಣಾಯ ತದ್ರ್ವಣೇನ ॥೪೪॥

---

ತಾನು ಅದರಲ್ಲಿ ಅಂತರ್ಗತನಾಗಿರುವನು. ಅಂತಹ ಮಹಾದೇವನು ಮಹಾಗಣ ಪತಿಯೇ ಮುಂತಾದವರ ಸ್ತುತಿವಚನಗಳಿಂದ ತೃಪ್ತನಾಗಿ, ತಾರಕಾದಿಗಳಿಂದ ನಮಗೊದಗಿರುವ ಭಯಾದಿಗಳನ್ನು ನಿವಾರಿಸುವಂತಹ ಶ್ರೇಷ್ಠಸೇನಾಪತಿಯೊಬ್ಬ ನನ್ನು ಕರುಣಿಸಿ ನಮ್ಮನ್ನುದ್ಧರಿಸಲಿ ಎಂದು ಸದಾ ದಯಾಸಮುದ್ರನಾದ ಮಹಾ ದೇವನನ್ನು ತಪ್ಪದೆ ಪ್ರಾರ್ಥಿಸುವೆವು. ॥೪೨॥

ಹೀಗೆಂದು ಶಚೀಪತಿಯಾದ ಇಂದ್ರನೂ, ವರುಣನೂ, ಯಮನೂ, ಅಗ್ನಿಯೂ, ಬ್ರಹ್ಮವಿಷ್ಣ್ವಾದಿಗಳೂ, ಹಾಗೆಯೇ ದಿಕ್ಪತಿಗಳೂ, ಸೋಮಸೂರ್ಯಾಗ್ನಿ ಪುರುಷರೂ, ನಾನಾರೀತಿಯಾಗಿ ಪುರಹರನೂ, ದೇವದೇವನೂ ಆದ ಪರಮೇಶ್ವರ ನನ್ನು ನಿವಾರಿಸಬೇಕೆಂದು ಮಹಾದೇವನಲ್ಲಿ ಮೊರೆಯಿಟ್ಟರು. ॥೪೩॥

ಮತ್ತು ದೇವತೆಗಳು ಈ ರೀತಿ ಪ್ರಾರ್ಥಿಸಿದರು. "ಮಹಾದೇವನೇ, ನಿನ್ನಲ್ಲಿಗೆ ದೇವತೆಗಳ ಗುಂಪೇ ಬಂದು ಮೊರೆಯಿಟ್ಟು ನಿನ್ನ ಪಾದದರ್ಶನಕ್ಕಾಗಿ ನಿಂತಿರುವುದು. ಮಹೇಶ್ವರನೇ, ಈಗ ನಮಗೊದಗಿರುವ ತಾರಕಾಸುರನ ಹಿಂಸೆ ಯನ್ನು ತಪ್ಪಿಸಿ ನಮ್ಮನ್ನುದ್ಧರಿಸು. ಅದಕ್ಕಾಗಿ ಸರ್ವಮಂಗಳೆಯೆನಿಸಿದ ಪಾರ್ವತಿ ಯನ್ನು ಪರಿಗ್ರಹಿಸು. ಆದರಿಂದ ಸುರಸೇನಾಪತಿಯೊಬ್ಬನು ನಮಗೆ ಲಭಿಸುವಂತೆ ಏರ್ಪಡಿಸು. ॥೪೪॥

ಸಂತಾರಯಸ್ವಾದ್ಯ ಸುರತಾಂ ಶಿವತಾರಕಾದಿ
ದುಃಖಾಂಬುಧೇಸ್ತ್ವಮಸಿ ದೇವಸುಕರ್ಣಧಾರಃ ।
ಸೇನಾಪತಿರ್ಭವತು ನಃ ಸುಕುಮಾರರೂಪಃ
ಪರ್ಜನ್ಯಘೋರನಿನದೋ ವರತಾರಜನ್ಯೇ ॥೪೫॥

॥ ಶ್ರೀ ಸ್ಕಂದ ಉವಾಚ ॥

ತದಾ ಸ ದೇವಪ್ರವರೋರುವಾಚಂ
ಶ್ರುತ್ವಾ ಮುದಾಹ ಭಗವಾಂತ್ಸುರಸತ್ತಮಾಂಸ್ತಾನ್ ।
ಸೇನಾಪತಿರ್ಭವತು ವಃ ಸುಕುಮಾರರೂಪೋ
ಶೂರಾದಿತಾರಕಹರೋಽಸ್ತು ಮುದಾದ್ಯ ಯಾಮಿ ॥೪೬॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ವಿವಾಹಾರ್ಥಂ ದೇವತಾಸಮೂಹೇನ ಶಿವಪ್ರಾರ್ಥನಾಸ್ತವನ
ನಿರೂಪಣಂ ನಾಮ ಪಂಚದಶೋಽಧ್ಯಾಯಃ

---

ಮಹಾದೇವನೇ, ಲೋಕರಕ್ಷಕನೇ, ತಾರಕಾಸುರನಿಂದ ಲಭಿಸಿರುವ ದುಃಖವೆಂಬ ಮಹಾಸಮುದ್ರವನ್ನು ದಾಟಿಸುವುದರಲ್ಲಿ ನೀನು ನಾವಿಕನಂತೆ ಇದ್ದು ನಮ್ಮನ್ನು ಕಾಪಾಡು. ನಿನಗೆ ಕುಮಾರನಾಗುವ ಷಣ್ಮುಖನು ತಾರಕಾಸುರನನ್ನು ಕೊಲ್ಲುವ ಘೋರ ಯುದ್ಧದಲ್ಲಿ ಮೇಘಗರ್ಜನೆಯನ್ನೆಸಗಿ ನಮ್ಮನ್ನುದ್ಧರಿಸಲಿ. ॥೪೫॥

ಈ ರೀತಿ ದೇವತೆಗಳ ಸ್ತುತಿವಚನಗಳನ್ನು ಕೇಳಿ ಪರಶಿವನು ಆ ದೇವತೆಗಳನ್ನು ಸಮಾಧಾನಪಡಿಸುತ್ತಾ, ಅವರ ಸೈನ್ಯಕ್ಕೆ ಪತಿಯಾಗಿ ತಾರಕಾದಿಗಳನ್ನು ನಾಶಗೊಳಿಸುವಂತಹ ಸುಕುಮಾರನನ್ನು ಪಡೆಯಲೋಸುಗ ಈಗ ಪಾರ್ವತೀ ಪರಿಣಯಾರ್ಥವಾಗಿ ಈಗಲೇ ಹೊರಡುವೆನು ಎಂದು ಮಹಾದೇವನು ದೇವತೆಗಳಿಗೆ ಧೈರ್ಯವಿತ್ತು ತಾನು ಪಾರ್ವತೀ ವಿವಾಹಕ್ಕೆ ಹೊರಡಲನುವಾದನು. ॥೪೬॥

ಪಾರ್ವತೀವಿವಾಹಾಂಗವಾದ ಪೂರ್ವಕಥೆಯನ್ನು ಸೂತಮಹರ್ಷಿಗಳು ಶೌನಕಾದಿ
ಗಳಾದ ಮಹರ್ಷಿಗಳಿಗೆ ಹೇಳಿದರೆಂಬಲ್ಲಿಗೆ ಶ್ರೀಶಿವರಹಸ್ಯದ ಈಶನಾಮಕವಾದ
ದ್ವಾದಶಾಂಶದಲ್ಲಿ ಶಿವಗೌರೀಸಂವಾದ ರೂಪವಾಗಿದೇವತೆಗಳು
ಪರಶಿವನನ್ನು ಸ್ತುತಿಸಿದರೆಂಬ ವಿಷಯವನ್ನು ತಿಳಿಸುವ
ಹದಿನೈದನೆಯ ಅಧ್ಯಾಯವು ಸಮಾಪ್ತವಾದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಷೋಡಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಪ್ರೀತಶ್ಚ ಭಗವಾಂಛರ್ವಃ ಸುರಾಣಾಂ ಸಂಸ್ತವಾತ್ತದಾ ।
ತಪಸಾ ಚ ಮಹಾದೇವ್ಯಾಸ್ತದಾ ಸ ವೃಷಭಧ್ವಜಃ ॥೧॥

ಹಿತಾಯ ಚ ಸುರಾಣಾಂ ಚ ಕ್ರೀಡಾರ್ಥಂ ಭಗವಾನ್ ಭವಃ ।
ತದಾ ಹೈಮವತೀಂ ದೇವೀಂ ವಿವಾಹಸುಮನಾಹ್ಯಭೂತ್ ॥೨॥

ಜಗಾಮ ಚ ವಿಧಿಃ ಪೂರ್ವಂ ಮರೀಚ್ಯಾದ್ಯೈರ್ಮಹರ್ಷಿಭಿಃ ।
ಹಿಮಾಚಲಂ ಮಹಾದೇವೀಂ ಫಲಪುಷ್ಪವಿಭೂಷಣೈಃ ॥೩॥

---

## ಹದಿನಾರನೆಯ ಅಧ್ಯಾಯ

ಪರಮೇಶ್ವರನು ದೇವತೆಗಳ ಸ್ತೋತ್ರದಿಂದಲೂ, ಪಾರ್ವತಿಯ ಏಕಾಗ್ರ ಚಿತ್ತದ ತಪಸ್ಸಿನಿಂದಲೂ ತೃಪ್ತನಾಗಿ ದೇವತೆಗಳನ್ನು ಉದ್ಧರಿಸುವಂತಹ ಒಬ್ಬ ಸುಪುತ್ರನನ್ನು ಪಡೆಯಲು ಪಾರ್ವತೀಪರಿಣಯಕ್ಕೆ ಮನಸ್ಸುಮಾಡಿದನು. ಷಡ್ಗುಣೈಶ್ವರ್ಯಸಂಪನ್ನನಾದ ಪರಶಿವನ ವಿವಾಹರೂಪವಾದ ಒಂದು ಲೀಲೆ ಇದಲ್ಲವೆ? ಆ ಲೀಲೆಯ ಅಂಗವಾಗಿ ಪಾರ್ವತಿಯೊಡನೆ ಕ್ರೀಡಿಸುವ ಕಾರ್ಯಭಾರವನ್ನು ಪರಶಿವನು ಅನುಮೋದಿಸಿದನು. ॥೧-೨॥

ಒಡನೆಯೇ ಬ್ರಹ್ಮನು ಮರೀಚಿಯೇ ಮೊದಲಾದ ಮಹರ್ಷಿಗಳೊಡಗೂಡಿ ನಾನಾವಿಧವಾದ ಫಲಪುಷ್ಪಾಭರಣಗಳನ್ನೂ ನೂತನವಸ್ತ್ರಗಳನ್ನೂ ತೆಗೆದುಕೊಂಡು

ವಿರಜೋಂಬರಸಂಯುಕ್ತೋ ನಾನಾವಾದ್ಯಕೃತಾರವೈಃ ।
ನೃತ್ಯದ್ಭಿರಪ್ಸರಸ್ಸಂಘೈಃ ಸ್ವಯಂ ತತ್ರ ಪ್ರಜಾಪತಿಃ ॥೪॥

ಸಮಾಗಮಂ ಚ ಬ್ರಹ್ಮಾಣಂ ಶ್ರುತ್ವಾ ನಾರದವಾಕ್ಯತಃ ।
ಪ್ರತ್ಯುದ್ಯಯೌ ಗಿರಿಶ್ರೇಷ್ಠೋ ಗಿರೀಶೈಸ್ಸಾರ್ಥಹಸ್ತತಃ ॥೫॥

ಪ್ರಣಮ್ಯ ಪದ್ಮಜಾತಂ ತಂ ಋಷೀನ್ ಸರ್ವಾನ್ ಗಿರೀಶ್ವರಃ ।
ಉವಾಚ ವಿನಯೋದಾರಮೇನಯಾ ಹಿಮಭೂಧರಃ ॥೬॥

॥ ಹಿಮವಾನುವಾಚ ॥

ಧನ್ಯೋಽಸ್ಮಿ ಗಿರಿವರ್ಯೇಷು ಸ್ವಯಂ ಬ್ರಹ್ಮಾ ಮುನೀಶ್ವರೈಃ ।
ದೇವ್ಯಾಲೋಕನಹರ್ಷಾಯ ಸಮಾಯಾತೋಽಸಿ ಮೇ ಗೃಹಂ ॥೭॥

ಮುಹೂರ್ತೋಽಯಂ ಶುಭೋದರ್ಕೋ ದೇವೀಂ ದ್ರಷ್ಟುಮರ್ಹಸಿ ।
ಗಿರಿರಾಜವಚಶ್ಶ್ರುತ್ವಾ ಬ್ರಹ್ಮಾ ಪ್ರಾಹ ತದಾ ಗಿರಿಂ ॥೮॥

ಅನುಗ್ರಹೇಣ ಸ ತದಾ ಮರೀಚ್ಯಾದ್ಯೈರ್ಮುನೀಶ್ವರೈಃ ॥೯॥

---

ಹಿಮಗಿರಿರಾಜನ ಗೃಹಕ್ಕೆ ತೆರಳಲನುವಾದನು. ಆಗ ಅಪ್ಸರಸ್ತ್ರೀಯರು ವಿಧವಿಧವಾದ ವಾದ್ಯರವಗಳಿಂದ ಕೂಡಿ ನರ್ತನಮಾಡಲಾರಂಭಿಸಿದರು. ॥೩-೪॥

ಆ ವಿಷಯವನ್ನು ಗಿರಿರಾಜನು ನಾರದರ ಮೂಲಕ ತಿಳಿದುಕೊಂಡು ತನ್ನ ಅಧೀನ ಗಿರಿರಾಜರೊಡಗೂಡಿ ಬ್ರಹ್ಮನನ್ನು ಎದುರುಗೊಳ್ಳಲು ಹೊರಟನು. ಋಷಿ ಜನರೊಡಗೂಡಿ ಎದುರಿನಲ್ಲಿ ಬರುವ ಬ್ರಹ್ಮಾದಿದೇವತೆಗಳಿಗೆ ಗಿರಿರಾಜನು ನಮಸ್ಕರಿಸಿ ಅಂಜಲಿಬದ್ಧನಾಗಿ ವಿನಯದಿಂದ ಮೇನಾದೇವಿಯೊಡನೆ ಬ್ರಹ್ಮನನ್ನು ಕುರಿತು ಈ ರೀತಿ ನುಡಿದನು. ॥೫-೬॥

“ ಬ್ರಹ್ಮದೇವನೇ, ಪರ್ವತಕುಲದಲ್ಲಿ ನಾನೇ ಧನ್ಯನು. ಏಕೆಂದರೆ ಸಕಲ ಮಹರ್ಷಿಗಳೊಡನೆ ದೇವಿಯ ದರ್ಶನಾರ್ಥವಾಗಿ ನೀನು ನನ್ನ ಮನೆಗೆ ದಯಮಾಡಿ ಸಿದೆಯಲ್ಲಾ! ದೇವಿಯನ್ನು ದರ್ಶನಮಾಡಲು ಈ ಮುಹೂರ್ತವು ಅತ್ಯಂತ ಪ್ರಶಸ್ತ ವಾಗಿರುವುದಲ್ಲವೆ! ಅಗತ್ಯವಾಗಿ ದಯಮಾಡಿ ನನ್ನನ್ನು ಕೃತಾರ್ಥನನ್ನಾಗಿ ಮಾಡು ” ಎಂದು ಪ್ರಾರ್ಥಿಸಿದ ಗಿರಿರಾಜನ ವಾಣಿಯನ್ನು ಕೇಳಿ ಬ್ರಹ್ಮನು ಮರೀಚ್ಯಾದಿ

ಗಿರಿಶ್ರೇಷ್ಠ ಭವಾನ್ ಕನ್ಯಾಂ ಮಹೇಶೇ ದಾತುಮಿಚ್ಛಸಿ ।
ತ್ವತ್ತೋ ಧನ್ಯತರಃ ಕೋ ವಾ ತೇನ ತೇ ಕುಲಮುನ್ನತಂ ॥೧೦॥

ದೇವೀಂ ದ್ರಷ್ಟುಮಿಹೇಚ್ಛಾಮಿ ಪೂಜಯಾಮಿ ಸುಭೂಷಣೈಃ ।
ದರ್ಶಯಾದ್ಯ ಗಿರಿಶ್ರೇಷ್ಠ ಮೇನಯಾ ನೀಯತಾಂ ಶಿವಾಂ ॥೧೧॥

ಇತ್ಥಂ ಸ ವೇಧಸೋ ವಾಕ್ಯಾತ್ತ್ವರಾಯುಕ್ತೋ ನಯುಂಕ್ಷಿವಾಂ ।
ಮೇನಯಾ ಭೂಷಣೈರ್ಯುಕ್ತಾಂ ವಿರಜಾಂಬರಸಂಯುತಾಂ ॥೧೨॥

ಗಂಧಪುಷ್ಪೈರ್ಭೂಷಿತಾಂ ತಾಂ ತತ್ರಾನೀತಾಂ ಚ ಸಂಸದಿ ।
ಅಥ ಶೈಲಸುತಾ ದೇವೀ ಶಿಬಿಕಾಂ ಸಮಲಂಕೃತಾಂ ॥೧೩॥

ರತ್ನೋಪಧಾನಶಯ್ಯಾಢ್ಯಾಂ ಮುಕ್ತಾಗುಚ್ಛವಿಭೂಷಿತಾಂ ।
ಮೇನಯಾ ಸಹ ಚಾರುಹ್ಯ ಯಯೌ ತತ್ರೈವ ಸಂಸದಿ ॥೧೪॥

---

ಮಹರ್ಷಿಗಳ ಮಾತಿನಂತೆ ಅವರ ಅನುಮತಿಯನ್ನು ಪಡೆದು ಗಿರಿರಾಜನೊಡನೆ ಈರೀತಿ ಉಸುರಿದನು. ॥೭-೮-೯॥

"ಪರ್ವತರಾಜನೇ, ನಿನ್ನ ಮಗಳನ್ನು ಮಹೇಶ್ವರನಿಗೆ ಪ್ರದಾನಮಾಡುವಂತಹ ಧನ್ಯನು ನೀನಾಗಿರುವೆ. ಇನ್ನು ನಿನಗಿಂತ ಶ್ರೇಷ್ಠರು ಲೋಕದಲ್ಲಿ ಯಾರಿರುವರು? ವಿವಾಹಾತ್ಪೂರ್ವದಲ್ಲಿ ನಿನ್ನ ಪುತ್ರಿಯಾದ ದೇವಿಯನ್ನು ಒಮ್ಮೆ ನೋಡಬೇಕೆಂದೂ, ವಿಭೂಷಣಾದಿಗಳಿಂದ ಅಲಂಕರಿಸಬೇಕೆಂದೂ ಅಪೇಕ್ಷಿಸುವೆನು. ಗಿರಿಶ್ರೇಷ್ಠನೇ, ಅಂತಹ ನಿನ್ನ ಪುತ್ರಿಯು ತಾಯಿಯಾದ ಮೇನಾದೇವಿಯೊಡನೆ ಇರುವ ಪ್ರದೇಶವನ್ನು ನನಗೆ ತೋರ್ಪಡಿಸು. ॥೧೦-೧೧॥

ಹೀಗೆ ಬ್ರಹ್ಮನಾಡಿದುದನ್ನು ಕೇಳಿ ಹಿಮವಂತನು ಜಾಗ್ರತೆ ಹೋಗಿ ದಿವ್ಯ ವಸ್ತ್ರಭೂಷಣಾದಿಗಳಿಂದ ಅಲಂಕೃತಳಾಗಿರುವ ಮತ್ತು ತಾಯಿಯೊಡನಿರುವ ದೇವಿಯನ್ನು ಆ ಬ್ರಹ್ಮನಿರುವ ಸಭೆಗೆ ಕರೆದುಕೊಂಡು ಬಂದನು. ಬರುವಾಗ ದೇವಿಯು ಗಂಧಪುಷ್ಪಾದಿಗಳಿಂದ ಅಲಂಕೃತವಾದ ಮೇನದಲ್ಲಿ ಕುಳಿತುಕೊಂಡಿದ್ದಳು. ॥೧೨-೧೩॥

ಆ ಪಲ್ಲಕ್ಕಿಯಲ್ಲಿ ರತ್ನಮಯವಾದ ದಿಂಬೂ, ಮೆತ್ತೆಯೂ ಇದ್ದಿತು. ಮುತ್ತಿನ ಗೊಂಚಲನ್ನು ಸುತ್ತಲೂ ಕಟ್ಟಿದ್ದರು. ಅದರ ಪಕ್ಕದಲ್ಲಿ ಕಾಳಿಂದಿಯು ಸಂಧ್ಯಾಕಾಲದ ಪೂರ್ಣಚಂದ್ರನಂತೆ ಶುಭ್ರವಾಗಿದ್ದು ಸುತ್ತಲೂ ರತ್ನಮಯವಾದ

ಕಾಳಿಂದೀ ಗಿರಿಪುತ್ರ್ಯಸ್ತು ಸಂಧ್ಯಾಪೂರ್ಣೇಂದುಮಂಡಲಂ ।
ಸಿತಾತಪತ್ರಂ ರತ್ನಾಲಿಮುಕ್ತಾಗುಚ್ಛಾನ್ವಿತಂ ದಧೌ ॥೧೫॥

ಚಾಮರೇ ವೀಜಿತುಂ ದೇವ್ಯಾಃ ಪಾರ್ಶ್ವಯೋರತ್ನದಂಡಕೇ ।
ಅಪ್ಸರೋ ಗಣನೃತ್ಯೈಶ್ಚ ಭೇರೀಮರ್ದಲ ಶಂಖಜೈಃ ॥೧೬॥

ಗಂಧರ್ವಗಾನೈರ್ಬಂದೀನಾಂ ಜಯಶಬ್ದೈಸ್ತದಾ ಯಯೌ ।
ಸಿಂದೂರಾರಕ್ತಗಂಡೇನ ಗಣಪೇನ ಪುರಸ್ಸರಂ ॥೧೭॥

ಗಿರಿಮಾತ್ರಶರೀರೇಣ ಸಮಾಯಾತಾ ತದಾಂಬಿಕಾ ।
ಕೋಽಯಮಾಯಾತಿ ಗಣಪೋ ಗಜಾನನವರಾಕೃತಿಃ ॥೧೮॥

ಬ್ರಹ್ಮಾದಿವಿಬುಧೈಸ್ತತ್ರ ಪಶ್ಯದ್ಭಿರ್ವಿಸ್ಮಯಾತ್ತದಾ ।
ಉತ್ಥಾಯ ಪ್ರಣಮದ್ಬ್ರಹ್ಮಾ ಮರೀಚ್ಯಾದ್ಯೈರ್ಮಹರ್ಷಿಭಿಃ ॥೧೯॥

ಸ್ವರ್ಣಪುಷ್ಪೈರ್ವಿಕೀರ್ಯಾಂಬಾ ಪಾದಯೋಃ ಸ ತದಾ ವಿಧಿಃ ।
ಅವರುಹ್ಯ ಮಹಾದೇವೀ ಮೇನಯಾ ಸಂಸ್ಥಿತಾ ತದಾ ॥೨೦॥

---

ತೋರಣದಿಂದ ಶೋಭಿಸುವ ಶ್ವೇತಛತ್ರಿಯನ್ನು ಗೌರವಾರ್ಥವಾಗಿ ಹಿಡಿದು ಕೊಂಡಿದ್ದಳು. ॥೧೪-೧೫॥

ಅಕ್ಕಪಕ್ಕದಲ್ಲಿ ರತ್ನಮಯವಾದ ಚಾಮರಗಳನ್ನು ಹಿಡಿದು ಪಾರ್ವತಿಗೆ ಗಾಳಿ ಬೀಸುತ್ತಿದ್ದರು. ಗಂಧರ್ವರು, ಗಣದೇವತೆಗಳು, ಅಪ್ಸರರು ಮುಂತಾದವರು ಜಯಧ್ವನಿಮಾಡುತ್ತಿದ್ದರು. ಪಾರ್ವತಿಯ ದೇಹಮಲದಿಂದ ನಿರ್ಮಿತವಾಗಿದ್ದ ಗಣಪನು ಸಿಂದೂರವರ್ಣದಿಂದ ರಂಜಿತನಾಗಿ ಮುಂಭಾಗದಲ್ಲಿಯೇ ನಡೆಯುತ್ತಿದ್ದನು. ॥೧೬-೧೭॥

ಹೀಗೆ ವೈಭವದಿಂದ ಬರುತ್ತಿರುವ ದೇವಿಯ ಮುಂದುಗಡೆ ಗಣಪತಿಯು ಗಂಭೀರವಾಗಿ ನಡೆಯುತ್ತಿರುವುದನ್ನು ನೋಡಿ ಬ್ರಹ್ಮಾದಿ ಸಕಲ ದೇವತೆಗಳೂ ಆಶ್ಚರ್ಯಪಡುತ್ತಿದ್ದರು. ಈ ಬಾಲಕನಾರು ಎಂದು ಎಲ್ಲರೂ ಸಂದೇಹಪಡುತ್ತಿದ್ದರು. ಮತ್ತು ಸ್ವರ್ಣಪುಷ್ಪಾದಿಗಳಿಂದ ದೇವಿಯ ಪಾದಪೂಜೆ ಮಾಡಿದರು. ॥೧೮-೧೯॥

ಪಾರ್ವತಿಯು ಪಲ್ಲಕ್ಕಿಯಿಂದಿಳಿದು ತಾಯಿಯಾದ ಮೇನಾದೇವಿಯೊಡನೆ ರತ್ನಮಯವಾದ ಸಿಂಹಾಸನದಲ್ಲಿ ಮಂಡಿಸಿದಳು. ಮುಂಭಾಗದಲ್ಲಿ ಸರ್ವಾಭರಣ

ಸಿಂಹಾಸನೇ ರತ್ನಸಂಸ್ಥೇ ಮಣಿವಿದ್ರುಮಭೂಷಿತೇ ।
ಪುರಃ ಸಂಸ್ಥಾಪ್ಯ ವಿಘ್ನೇಶಂ ಸರ್ವಾಭರಣಭೂಷಿತಂ ॥೨೧॥

ಪಶ್ಯನ್ನಪ್ಸರಸಾಂ ನೃತ್ತಂ ವೀಜಿತಾಮರಚಾಮರೈಃ ।
ತದೋತ್ಥಾಯ ಮುದಾ ಬ್ರಹ್ಮಾ ದೇವ್ಯಾಃ ಪಾದಾಬ್ಜಯೋರ್ಯುಗಂ ॥೨೨॥

ಪ್ರಕ್ಷಾಲ್ಯ ಪಾಣಿನಾ ಮೂರ್ಧ್ನಿ ತಜ್ಜಲಂ ಸ ವಿಧಿರ್ದಧೇ ।
ಗಂಧಪುಷ್ಪೈಶ್ಚ ವಾಸೋಭಿ ರ್ಭೂಷಣೈರುದ್ಯತೋ ವಿಧಿಃ ॥೨೩॥

ಫಲಜಾಲಪುರೋಽನ್ಯಸ್ಯ ಮುನಿಭಿಸ್ತಾಂ ಶಿವಾಂ ತದಾ ।
ಬ್ರಹ್ಮಾಣಮಾಹ ಸಾ ದೇವೀ ತದಾ ವೀಕ್ಷ್ಯ ಗಜಾನನಂ ॥೨೪॥

ಮುಕುಟಾಂಗದಕೇಯೂರಭೂಷಣೈರ್ಭೂಷಿತಂ ಪುರಃ ॥೨೫॥

॥ ದೇವ್ಯುವಾಚ ॥

ಬ್ರಹ್ಮನ್ ಮಹರ್ಷಿಭಿಃ ಪೂಜ್ಯಸ್ಸರ್ವೈರೇಷ ಗಜಾನನಃ ।
ಮಮೈವ ವರದಾನೇನ ಮತ್ಪುತ್ರೋಽಯಂ ಮದಂಶಜಃ ॥೨೬॥

---

ಭೂಷಿತನಾದ ವಿಘ್ನೇಶ್ವರನು ಕುಳಿತಿದ್ದನು. ಇವರ ಎದುರಿನಲ್ಲಿ ದೇವಿಯನ್ನು ತೃಪ್ತಿಪಡಿಸಲು ಅಪ್ಸರಸ್ತ್ರಿಯರು ನರ್ತನಮಾಡಲಾರಂಭಿಸಿದರು. ಬ್ರಹ್ಮನು ಕೂಡಲೆ ಎದ್ದು ದೇವಿಯ ಪಾದಕಮಲಗಳನ್ನು ವಂದಿಸುತ್ತಾ ಶುದ್ಧೋದಕದಿಂದ ತೊಳೆದನು. ॥೨೧-೨೨॥

ದೇವಿಯ ಪಾದೋದಕವನ್ನು ಬ್ರಹ್ಮನು ತನ್ನ ತಲೆಯ ಮೇಲೆ ಪ್ರೋಕ್ಷಿಸಿಕೊಂಡನು. ಹಾಗೆಯೇ ಗಂಧ, ಪುಷ್ಪ, ವಸ್ತ್ರ, ಭೂಷಣ ಇವುಗಳನ್ನು ದೇವಿಯ ಪಾದಕ್ಕೆ ಸಮರ್ಪಿಸಿ, ಕಿರೀಟ, ತೋಳುಬಳೆ ಮುಂತಾದ ಭೂಷಣಾದಿಗಳಿಂದ ಅಲಂಕೃತನಾಗಿರುವ ಗಜಾನನನನ್ನು ನೋಡುತ್ತಾ ಇವನಾರೆಂದು ಸಂಶಯಪಡುತ್ತಾ ದೇವಿಯನ್ನೇ ನೋಡುತ್ತಿದ್ದನು. ॥೨೩-೨೪-೨೫॥

ಆದನ್ನರಿತ ಪಾರ್ವತಿಯು ಬ್ರಹ್ಮಾದಿಗಳೊಡನೆ ಹೀಗೆಂದಳು "ಪರಬ್ರಹ್ಮಾದಿಗಳೇ, ಈ ಆನೆಮೊಗದ ಕುಮಾರನು ನನ್ನಿಂದ ಸೃಷ್ಟನಾದವನು. ಇವನನ್ನು ಸರ್ವರೂ ಪೂಜಿಸಬೇಕು. ನನ್ನ ಅಂಶದಿಂದ ಜನಿಸಿರುವ ಈತನು ಸಕಲ

ಸರ್ವೇಷಾಂ ವಿಘ್ನನಾಶಾಯ ವಿಘ್ನೇಶಃ ಪೂಜ್ಯತಾಮಯಂ ।
ತದ್ವೈವ ದೇವ್ಯಾ ವಚಸಾ ಸಂಪ್ರಣಮ್ಯ ಗಜಾನನಂ ॥೨೭॥

ಮಹರ್ಷಿಭಿಃ ಸಮಭ್ಯರ್ಚ್ಯ ಗಂಧಪುಷ್ಪಾಕ್ಷತಾಸುಮ್ಯೈಃ ।
ಫಲೈಶ್ಚ ಭಕ್ಷ್ಯಭೋಜ್ಯೈಶ್ಚ ವಾಸೋಭಿರ್ಭೂಷಣೈರ್ವರೈಃ ॥೨೮॥

ಸ್ತುತ್ವಾ ಪ್ರಣಮ್ಯ ವಿಘ್ನೇಶಮೇವಮಾಹ ಪ್ರಜಾಪತಿಃ । ॥೨೯॥

॥ ಬ್ರಹ್ಮೋವಾಚ ॥

ಪಾಶಾಂಕುಶಾಕ್ತತರ ಶೋಭಿತ ದೇವೀಸೂನುಂ
ವಿಘ್ನಾದ್ರಿನಾಶಕವರೋದರ ನಾಗಬಂಧಂ ।
ಶುಂಡಾಧೃತೋರುವರಮೋದಕವಿಘ್ನಸಂಘ
ಸನ್ಮೋದಕಂ ಪ್ರಣತ ತಂ ಗಣನಾಥಮದ್ಯ ॥೩೦॥

---

ವಿಘ್ನನಿವಾರಕನಾಗಲೆಂಬ ಮುಖ್ಯವರವನ್ನು ಇವನಿಗೆ ಕರುಣಿಸಿರುವೆನು. ಇನ್ನು ಮುಂದೆ ವಿಘ್ನನಿವಾರಣೆಗಾಗಿ ನೀವು ತಪ್ಪದೆ ಈತನನ್ನು ಆರಾಧಿಸುತ್ತಿರಿ" ಹೀಗೆಂದೊಡನೆಯೇ ಬ್ರಹ್ಮನು ಮೊದಲು ಗಜಾನನನಿಗೆ ವಂದಿಸಿದನು. ॥೨೬-೨೭॥

ಬ್ರಹ್ಮನನ್ನನುಸರಿಸಿ ಸಕಲ ಮಹರ್ಷಿಗಳೂ ಗಂಧಪುಷ್ಪಾಕ್ಷತಾದಿಗಳಿಂದಲೂ ಫಲಭಕ್ಷ್ಯಭೋಜ್ಯಾದಿಗಳಿಂದಲೂ, ವಸ್ತ್ರಭೂಷಣಾದಿಗಳಿಂದಲೂ ಗಜಾನನನನ್ನು ತೃಪ್ತಿಪಡಿಸಿದರು. ವಿಧವಿಧವಾಗಿ ಸ್ತುತಿಸಿದರು. ಅದರಲ್ಲಿ ಬ್ರಹ್ಮನು ಮಾತ್ರ ಈರೀತಿ ವಿಘ್ನೇಶ್ವರನನ್ನು ಹೊಗಳಿದನು. ॥೨೮॥

"ಎಲೈ ದೇವತೆಗಳಿರಾ, ಈ ಗೌರೀಪುತ್ರನೆನಿಸಿದ ಗಜಾನನನು ಪಾಶ ಮತ್ತು ಅಂಕುಶ ಈ ಆಯುಧಗಳನ್ನು ಕೈಯ್ಯಲ್ಲಿ ಧರಿಸಿರುವನು. ವಿಘ್ನವೆಂಬ ಪರ್ವತವನ್ನು ಭೇದಿಸುವುದರಲ್ಲಿ ಅತಿಸಮರ್ಥನು. ತನ್ನ ದಿವ್ಯವಾದ ಉದರದಲ್ಲಿ ಸರ್ಪವನ್ನೇ ಆಭರಣವನ್ನಾಗಿ ಮಾಡಿಕೊಂಡಿರುವನು. ತನ್ನ ಸೊಂಡಲಿನ ತುದಿಯಲ್ಲಿ ದಿವ್ಯವಾದ ಕಡುಬನ್ನು ಧರಿಸಿಕೊಂಡಿರುವನು. ವಿಘ್ನನಾಶಕನೆನಿಸಿದ ಈತನನ್ನು ನಿಮ್ಮ ವಿಘ್ನ ನಿವಾರಣೆಗಾಗಿ ತಪ್ಪದೆ ಪೂಜಿಸಿರಿ. ॥೨೯-೩೦॥

ಜಗತ್ತ್ರಯೇಷು ಸರ್ವತ್ರ ತ್ವಂ ಹಿ ವಿಶ್ವಗಣೇಶ್ವರಃ ।
ಸಂಪೂಜ್ಯಃ ಸರ್ವಕಾರ್ಯೇಷು ನಿರ್ವಿಘ್ನಾರ್ಥಂ ಗಜಾನನ ॥೩೧॥

ತ್ವಾಮಾದೌ ಸರ್ವಕಾರ್ಯೇಷು ಪೂಜಯಂತಿ ಸುರಾಸುರಾಃ ।
ಅನಭ್ಯರ್ಚಯತಾಂ ವಿಘ್ನಂ ಭವತ್ಯೇವ ಪದೇ ಪದೇ ॥೩೨॥

ಇತ್ಥಂ ಪ್ರಸಾದ್ಯ ಗಣಪಂ ವರೇಣ್ಯೈವ ಪ್ರಜಾಪತಿಃ ।
ಗಜಾನನಾಜ್ಞಯಾ ದೇವೀಂ ಪೂಜಯಾಮಾಸ ವೈ ವಿಧಿಃ ॥೩೩॥

ಗಂಧೈಃ ಪುಷ್ಪೈಶ್ಚ ತಾಂಬೂಲೈಸ್ತದಾಂಬಾಂ ತುಷ್ಟುವೇ ವಿಧಿಃ ॥೩೪॥

॥ ಬ್ರಹ್ಮೋವಾಚ ॥

ಧೃತಾಪಾಯೇ ಕಾಯೇ ಭಿಷಗಧಿಪಜಾಯೇ ಮಮ ಮುದೇ
ಮಹೋಚ್ಛ್ರಾಯೇ ಮಾಯೇ ಭವ ವಿಪದುಪಾಯೇ ಗಿರಿಸುತೇ ।
ಜಗದ್ರಕ್ಷಾ ದೀಕ್ಷಾ ಸಕರುಣಕಟಾಕ್ಷಾತ್ತ್ವಮಚಿರಾ
ತ್ಕದಾ ಸಾಕ್ಷಾದ್ದ್ರಾಕ್ಷಾರಸವದಪರೋಕ್ಷಾಯ ಭವಸಿ ॥೩೫॥

---

ಗಜಾನನಪ್ರಭುವೇ, ನೀನು ವಿಶ್ವದಲ್ಲಿರುವ ಸಕಲ ಗಣಗಳಿಗೂ ಅಧಿಪತಿಯೆನಿಸಿರುವೆ. ಎಲ್ಲರೂ ತಮ್ಮ ಕಾರ್ಯಸಿದ್ಧಿಗಾಗಿ ಮೊದಲು ನಿನ್ನನ್ನು ಪೂಜಿಸಲಿ. ಸರ್ವಕಾರ್ಯಾರಂಭದಲ್ಲಿಯೂ ದೇವರಾಕ್ಷಸರೆಲ್ಲರೂ ಭಕ್ತಿಯಿಂದ ಮೊದಲು ನಿನ್ನನ್ನು ಆರಾಧಿಸಿದೆ, ಯಾರು ಯಾವ ಕಾರ್ಯವನ್ನು ಆರಂಭಿಸಿದರೂ ಅವರ ಕಾರ್ಯವು ಕೈಗೂಡದೆ ನಾಶಹೊಂದಲಿ.” ॥೩೧-೩೨॥

ಈ ರೀತಿ ಗಣಪತಿಗೆ ಬ್ರಹ್ಮನೂ ವರಪ್ರದಾನ ಮಾಡಿ ಅವನಿಂದ ಅನುಜ್ಞೆ ಪಡೆದು ಗೌರೀದೇವಿಯನ್ನು ಪೂಜಿಸತೊಡಗಿದನು. ಗಂಧಪುಷ್ಪಾದಿಗಳಿಂದ ಮೊದಲು ಪಾರ್ವತಿಯನ್ನರ್ಚಿಸಿ ಅನಂತರ ಈ ರೀತಿ ಪ್ರಾರ್ಥಿಸತೊಡಗಿದನು. ॥೩೪॥

“ದೇವಿಯೇ, ಮಾನವದೇಹವು ಸದಾ ಅಪಾಯದಿಂದ ಕೂಡಿದುದು. ರೋಗಾದಿಗಳಿಂದ ಪೀಡಿತವಾದ ದೇಹಕ್ಕೆ ವೈದ್ಯನಂತಿರುವ ಪರಶಿವನಿಗೆ ನೀನು ಪತ್ನಿಯೆನಿಸಿದವಳು. ಲೋಕದ ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳಿಗೆ ಮೂಲಕಾರಣಳೆನಿಸಿದ ನೀನು ಮಹಾಮಾಯೆಯೆನಿಸಿರುವೆ. ಗಿರಿಪುತ್ರಿಯೇ, ನಿನ್ನ ಕರುಣಾಕಟಾಕ್ಷಬಲದಿಂದಲೇ ಈ ನಿಖಿಲಜಗತ್ತು ಸಂರಕ್ಷಿತವಾಗಿ ನಿಂತಿರುವುದು. ನಿನ್ನ ಸಾಕ್ಷಾ

ಯಃ ಶಸ್ಕರಸುತಸ್ಕರಂ ಸ್ವರುಚಿ ಧಿಕ್ಕೃತಾಹಸ್ಕರಂ
ಸದಿಂದ್ರಮಣಿಸುಂದರಂ ರುಚಿರಮ್ಯೆಂದಿರಂ ಸುಂದರಂ ।
ಚಿರಂತನ ಪದಂ ಧನಂ ಧನದಯಾವದಿಂಧನಂ ಬಂಧನಂ
ಶಿವಾಯುತಮಿದಂ ಧನಂ ತ್ವದಪರಂ ಧನಂ ದಂಧನಂ ॥೩೬॥

ಇತ್ಥಂ ಸ್ತುತ್ವಾ ತದಾ ದೇವೀಂ ಮುನಿಭಿಸ್ಸಂಸ್ಥಿತೋ ವಿಧಿಃ ।
ಗಿರಿರಾಡ್ಗಿರಿಭಿಸ್ಸಾರ್ಧಂ ಗಂಧಪುಷ್ಪಫಲೈರ್ವಿಧಿಂ ॥೩೭॥

ತಾಂಬೂಲೈಃ ಪೂಜಯಾಮಾಸ ತತ್ರ ಯೇ ಸಂಗತಾ ಮುದಾ ।
ಬ್ರಹ್ಮಾಣಂ ಪ್ರಾಹ ವಿನಯಾತ್ತತ್ರೈವಂ ಗಿರಿರಾಟ್ತದಾ ॥೩೮॥
ಗಿರಿಭಿರ್ಮೇನಯಾ ಚೈವ ಮೈನಾಕೇನ ವಿಧಿಂ ತದಾ ॥೩೯॥

---

ತ್ಕಾರವು ನಮಗೆ ಯಾವಾಗಲೂ ದ್ರಾಕ್ಷಾರಸದಂತೆ ಆಹ್ಲಾದಕರವಾಗಿರಲಿ. ಸದಾ ನಿನ್ನ ಪೂರ್ಣಾನುಗ್ರಹವು ನನ್ನ ಮೇಲೆ ನಿಂತಿರಲಿ. ಇದೇ ನನ್ನ ಪ್ರಾರ್ಥನೆ ॥೩೫॥

ದೇವಿಯೇ, ನೀನು ಕೀರ್ತಿಪ್ರದಳು. ಕೀರ್ತಿಯುತಳು. ನಿನ್ನ ಗುಣಗಳನ್ನು ಅಪಹರಿಸಲು ಯಾರಿಂದಲೂ ಸಾಧ್ಯವಾಗಲಾರದು. ನಿನ್ನ ಕಾಂತಿಯು ಸೂರ್ಯಕಿರಣವನ್ನೂ ಧಿಕ್ಕರಿಸುವಂತಿದೆ. ಇಂದ್ರನೀಲಮಣಿಯಂತೆ ಸುಂದರ ದೇಹಕಾಂತಿಯಿಂದ ನೀನು ರಾರಾಜಿಸುತ್ತಿರುವೆ. ಪರಶಿವನ ನೈಸರ್ಗಿಕವಾದ ಐಶ್ವರ್ಯವೆಂದರೆ ನೀನೇ. ಕುಬೇರನ ಐಶ್ವರ್ಯವೆಲ್ಲಾ ಕೇವಲ ನಾಶವಾಗತಕ್ಕುದೇ. ಈಶ್ವರನಿಗೆ ಸಹಜನಿಧಿಯಂತಿರುವ ನೀನು ನಮ್ಮಲ್ಲಿ ಸ್ಥಿರವಾದ ಕರುಣೆಯನ್ನಿಟ್ಟು ನಮ್ಮನ್ನುದ್ಧರಿಸು. ಇದೇ ನನ್ನ ಪ್ರಾರ್ಥನೆ." ॥೩೬॥

ಹೀಗೆ ಬ್ರಹ್ಮನು ದೇವಿಯನ್ನು ಸ್ತುತಿಸಿ ಮುನಿಗಳೊಡಗೂಡಿ ಕುಳಿತುಕೊಂಡನು. ಗಿರಿರಾಜನಾದರೋ ಅವರೆಲ್ಲರನ್ನೂ ಗಂಧಪುಷ್ಪಾದಿಗಳಿಂದಲೂ, ಫಲತಾಂಬೂಲಾದಿಗಳಿಂದಲೂ ಸತ್ಕರಿಸಿ, ವಿನಯನಮ್ರನಾಗಿ ಬ್ರಹ್ಮನನ್ನು ಕುರಿತು ಹೀಗೆಂದನು. ಗಿರಿರಾಜನ ಜೊತೆಯಲ್ಲಿ ಆಗ ಪತ್ನಿಯಾದ ಮೇನೆಯೂ, ಪುತ್ರನಾದ ಮೈನಾಕನೂ, ಇತರ ಸಾಮಂತರಾದ ಗಿರಿಗಳೂ ನಿಂತಿದ್ದರು. ॥೩೭-೩೮-೩೯॥

॥ ಹಿಮವಾನುವಾಚ ॥

ಪರಾಶಕ್ತಿರಿಯಂ ಸಾಕ್ಷಾತ್ಸಂಜಾತಾ ಕಾರಣಾನ್ಮಮ ।
ಅವಿನಾಭಾವರೂಪೇಯಂ ಶಿವಾನನ್ಯಾ ಮಹೇಶ್ವರೀ ॥೪೦॥

ವಿಚಿತ್ರಶಕ್ತಿಸ್ಸಾ ದೇವೀ ಸರ್ವೇಷಾಂ ಜನನೀ ಶಿವಾ ।
ತ್ವಯಾ ನಿಯುಕ್ತ ಏವಾತ್ರ ಲೋಕಪಾವನಹೇತವೇ ॥೪೧॥

ಲೋಕಧರ್ಮಂ ಸಮಾಶ್ರಿತ್ಯ ತ್ರಿಃ ಸತ್ಯಂ ಪ್ರವದಾಮ್ಯಹಂ ।
ದದಾಮಿ ಶಂಭವೇ ದೇವೀಂ ಮಾಯೇಯಂ ಮಾಯಿನೇ ಶಿವಾಂ॥೪೨॥

ಗಿರೀಣಾಮನುಮತ್ಯೇನ ಸುತಪತ್ನೀಮತೇನ ಚ ।
ತ್ರಿಸ್ಸತ್ಯಂ ಮಾಂ ಮಹಾದೇವಃ ಸಮಾಯಾತು ಸುರೈಸ್ಸಹ ॥೪೩॥

---

"ಬ್ರಹ್ಮಾದಿದೇವತೆಗಳೇ, ಪರಾಶಕ್ತಿರೂಪಿಣಿಯಾದ ಈ ಪಾರ್ವತಿಯು ಪರಶಿವನನ್ನು ಬಿಟ್ಟು ಬೇರೆ ಸ್ಥಳದಲ್ಲಿ ಇರುವುದುಂಟೆ? ಶಿವ, ಶಕ್ತಿಗಳು ಪ್ರತ್ಯೇಕವಾಗಿ ಎಂದೂ ಇರುವುದಿಲ್ಲ. ಆದರೆ ಯಾವುದೋ ಕಾರಣಕ್ಕಾಗಿ ಅದೇ ಶಿವಶಕ್ತಿಯು ವಿಚಿತ್ರಸ್ವಭಾವವುಳ್ಳದಾಗುವುದು. ಯಾವ ಕಾಲದಲ್ಲಿ ಈ ಶಕ್ತಿಯು ಯಾವ ರೀತಿ ಪರಿಣಾಮಗೊಳ್ಳುವುದೆಂಬುದನ್ನು ತಿಳಿಸಲು ಯಾರಿಂದಲೂ ಸಾಧ್ಯವಿಲ್ಲ. ಈ ದೇವಿಯು ನಿಮ್ಮೆಲ್ಲರಿಗೂ ಜನನೀಸ್ವರೂಪಳು. ಲೋಕಸೃಷ್ಟಿಗಾಗಿ ನಿನ್ನನ್ನು ನೇಮಿಸಿದ್ದರೂ ಸೃಷ್ಟಿಯಾಗುವುದು ಮಾತ್ರ ಇವರ ಪ್ರಭಾವದಿಂದಲೇ. ॥೪೦-೪೧॥

ಹೀಗಿರುವಾಗ ಈ ದೇವಿಯನ್ನು ಪರಶಿವನಿಗೆ ನಾನು ಅರ್ಪಿಸುವುದೆಂದರೇನು? ಅವನು ವಿವಾಹವಾಗುವುದು ನಿಜವೆ? ಇದೆಲ್ಲಾ ಸುಳ್ಳು. ಆದರೂ ಜನಮೆಚ್ಚುಗೆಗಾಗಿ ಲೋಕವ್ಯವಹಾರವನ್ನನುಸರಿಸಿ ನನ್ನ ಪುತ್ರಿಯನ್ನು ಶಂಕರನಿಗೆ ದಾನಮಾಡುವೆನು. ನನ್ನ ಪುತ್ರಿಯೇ ಆದಿಮಾಯೆಯು. ಈ ಮಾಯಾಸಹಿತನೇ ಪರಶಿವಮೂರ್ತಿಯು. ಈಗ ಇಂತಹ ಅಸಾಧಾರಣ ಶಕ್ತಿರೂಪಿಣಿಯಾದ ದೇವಿಯನ್ನು ಇಲ್ಲಿ ನೆರೆದಿರುವ ಪರ್ವತಗಳ ಮತ್ತು ಪತ್ನೀಪುತ್ರರ ಅನುಮತಿಯನ್ನು ಪಡೆದು ಪ್ರಮಾಣಪೂರ್ವಕವಾಗಿ ದೇವಿಯನ್ನು ದೇವನಿಗೆ ಸಮರ್ಪಿಸುವೆನು. ನೀವೆಲ್ಲರೂ ಪರಶಿವನೊಡನೆ ಜಾಗ್ರತೆ ದಯಮಾಡಿಸಬೇಕು. ॥೪೨-೪೩॥

ಸಾನಿತುಂ ಮತ್ಕುಲಂ ಬ್ರಹ್ಮನ್ ಶ್ವಃಪ್ರಭಾತೇ ಮಹೇಶ್ವರಃ ।
ಸ ಏವ ಭಗವಾನೀಶೋ ಗಣಾನಾಮಧಿಪಶ್ಶಿವಃ ॥೪೪॥

ಸರ್ವಾತ್ಮಾ ಸರ್ವಗೋ ದೇವಃ ಪರಮಾತ್ಮಾ ಸನಾತನಃ ।
ವಿಶ್ವಾಧಿಕೋ ಮಹಾದೇವೋ ಗೌರ್ಯಾಃ ಪತಿರುಮಾಪತಿಃ ॥೪೫॥

ದತ್ವಾ ಗೌರೀಂ ಮಹೇಶಾಯ ಕೃತಕೃತ್ಯೋ ಭವಾಮ್ಯಹಂ ।
ಮೈನಾಕೇನ ಗಿರಿಪ್ರಾತ್ರೈರ್ಮೇನಯಾ ಕೃತಮಂಗಲಃ ॥೪೬॥

ಪ್ರತೀಕ್ಷ್ಯೇಹಂ ಮುದಾ ತ್ರ್ಯಕ್ಷಂ ಗೌತಮೇನ ಸಹಾದರಾತ್ ।
ಅಸ್ಮಿನ್ ಪಾಣಿಗ್ರಹೇ ದೇವ್ಯಾಃ ಸಂವಿಧಸ್ವ ವಿಧೇ ದ್ವಿಜೈಃ ॥೪೭॥

ಮಾಂ ಪ್ರಸಾದಯ ದೇವೇಶ ನಿವೃತ್ತೋ ನಿವಸಾಮ್ಯಹಂ ।
ವಿಧಿರ್ಗಿರಿವಚಃ ಶ್ರುತ್ವಾ ಪ್ರಭಾತೇ ಕೃತನೈತ್ಯಕಃ ॥೪೮॥

ಭೃಂಗಾರುಕುಂಭಕಲಶೈಃ ಪಲ್ಲವೋರ್ಧ್ವಮುಖೈರ್ಯುತಾಂ ।
ಧೂಪಪಾತ್ರೈರ್ದೀಪಪಾತ್ರೈಃ ಪಾತ್ರೈರಂಕುರಶೋಭಿತೈಃ ॥೪೯॥

---

ಬ್ರಹ್ಮನೇ, ನಾಳೆಯೇ ನನ್ನ ಕುಲವು ಉದ್ಧಾರವಾಗುವುದು. ದೇವದೇವನೂ ಗಣನಾಯಕನೂ, ಸರ್ವವ್ಯಾಪಿಯೂ, ಪರಮಾತ್ಮನೂ, ಅನಾದಿಪುರುಷನೂ, ವಿಶ್ವಕ್ಕೆ ಸಿಲುಕದವನೂ, ಮಹಾದೇವನೂ, ಆದ ಮಹೇಶ್ವರನು ನನ್ನ ಮನೆಗೆ ಬರುವುದರಿಂದಲೇ ನನ್ನ ವಂಶವು ಉದ್ಧಾರವಾಗುವುದು. ॥೪೪-೪೫॥

ಮೇನಾಮೈನಾಕರೊಡಗೂಡಿ ಈ ಪರ್ವತರಾಜರ ಸೌಹಾರ್ದದಿಂದ ನಾನು ಮಹೇಶ್ವರನಿಗೆ ಗೌರಿಯನ್ನು ಅರ್ಪಿಸುವುದರಿಂದ ನಾನು ಧನ್ಯತಮನೆನಿಸುವೆನು. ಅಂತಹ ಕಾಲವು ಯಾವಾಗ ಸಮೀಪಿಸುವುದೋ ಎಂದು ತವಕಪಡುತ್ತಿರುವೆನು. ಬ್ರಹ್ಮನೇ, ಜಾಗ್ರತೆ ಗೌತಮಋಷಿಯೊಡಗೂಡಿ ಮಹಾದೇವನು ಇಲ್ಲಿಗೆ ಬರುವಂತೆ ಏರ್ಪಡಿಸು. ಪಾಣಿಗ್ರಹಣಕಾಲದಲ್ಲಿ ನೀನು ಇತರ ದ್ವಿಜರೊಡನೆ ಇಲ್ಲಿಯೇ ಇರುವಂತೆಯೂ ನಿನ್ನನ್ನು ಪ್ರಾರ್ಥಿಸುವೆನು. ॥೪೬-೪೭॥

ಹೀಗೆ ಎಲ್ಲವನ್ನೂ ಸಿದ್ಧಗೊಳಿಸಿ ಈ ಕಾರ್ಯಭಾರವನ್ನು ನೆರವೇರಿಸು. ಅದರಿಂದ ನಾನು ಸುಖಿಯೆನಿಸುವೆನು'' ಎಂದು ಗಿರಿರಾಜನು ಪ್ರಾರ್ಥಿಸಲು ಬ್ರಹ್ಮನು ಹಾಗೆಯೇ ಆಗಲೆಂದು ಒಪ್ಪಿ ಆದಿನ ನಿತ್ಯಕರ್ಮಗಳನ್ನು ಮುಗಿಸಿಕೊಂಡು

ಪೂಜಿತೋ ಗಿರಿರಾಜೇನ ತತ್ರೋವಾಸ ಮುನೀಶ್ವರೈಃ ।
ಪುರೋಹಿತಂ ಗೌತಮಂ ತಮನುಮಾನ್ಯ ಪ್ರಜಾಪತಿಃ ॥೪೯॥

ಚಕ್ರೇ ಮುನೀಶ್ವರೈಸ್ಸಾರ್ಧಂ ಗಿರಿಜಾನುಪ್ರಮೋದಿತಃ ।
ವೇದೀಂ ತಾಂ ಸಮಲಂಕೃತ್ಯ ರತ್ನಸೋಪಾನಮಂಡಿತಾಂ ॥೫೦॥

ಪುಷ್ಪಮಂಟಪಸಂಯುಕ್ತಾಂ ವಿತಾನಾಚ್ಛಾದಿತಾಂಬರಾಂ ।
ಉತ್ಫುಲ್ಲಕಮಲೋದಾರ ಮಾಲಿಕಾಸಮಲಂಕೃತಾಂ ॥೫೧॥

ದಿವ್ಯಮಾಣಿಕ್ಯಖಚಿತತೋರಣೇನ ಚ ಮಂಡಿತಾಂ ।
ಪುಂಡರೀಕೋತ್ಪಲಭ್ರಾಜತ್ಕೇತಕಾವಲಿ ಭಾಸುರಾಂ ॥೫೨॥

ದಿವ್ಯಸಿಂಹಾಸನೋಪೇತಾಂ ಸ್ವಾಸ್ತೃತಾಂ ಚಿತ್ರಬರ್ಹಣೈಃ ।
ಧೂಪಿತಾಂ ತಗರಾಮೋದೈರ್ದೀಪವೃಕ್ಷೈರಲಂಕೃತಾಂ ॥೫೩॥

ಪಾದ್ಯಾರ್ಘ್ಯಾಚಮನೈಸ್ತತ್ರ ಗಂಧಪುಷ್ಪಸುಗಂಧಿಭಿಃ ।
ಪಂಚಾಮೃತೈಃ ಪಂಚಪಾತ್ರೈರ್ಮಧುಪರ್ಕವಿರಾಜಿತೈಃ ॥೫೪॥

---

ಗಿರಿರಾಜನಿಂದ ಸತ್ಕಾರವನ್ನು ಪಡೆದು ಋಷಿಜನರೊಡನೆ ಅಲ್ಲಿಯೇ ವಾಸಮಾಡಿದನು. ಮತ್ತು ಗಿರಿರಾಜನ ಇಷ್ಟದಂತೆ ವಿವಾಹದ ಪುರೋಹಿತರನ್ನಾಗಿ ಗೌತಮಋಷಿಯನ್ನು ಪ್ರಾರ್ಥಿಸಿ ಆ ಮಹರ್ಷಿಯಿಂದಲೂ ಒಪ್ಪಿಗೆ ಪಡೆದನು. ॥೪೮-೪೯॥

ಇತ್ತ ಹಿಮವಂತನೂ ಮಗಳಾದ ಗಿರಿಜೆಯ ಅನುಮತಿಯನ್ನು ಪಡೆದು ಋಷಿಜನರೊಡಗೂಡಿ ಕಲ್ಯಾಣವೇದಿಕೆಯನ್ನು ನಿರ್ಮಾಣಮಾಡಿಸಿದನು. ಅದಕ್ಕೆ ಸುತ್ತಲೂ ಹೂವಿನಿಂದ ಚಪ್ಪರವೂ, ರತ್ನಮಯವಾದ ಮೆಟ್ಟಲುಗಳೂ, ವಿಶಾಲವಾದ ಮೇಲ್ಕಟ್ಟೂ ನಿರ್ಮಿತವಾದುವು. ಕಮಲಕಲ್ಹಾರಗಳ ಮಾಲಿಕೆಗಳು ಸಾಲುಸಾಲಾಗಿ ಕಟ್ಟಲ್ಪಟ್ಟವು. ಮಾಣಿಕ್ಯಸಾಲುಗಳಿಂದ ತೋರಣವೂ, ಅದರ ಮಧ್ಯಭಾಗದಲ್ಲೆಲ್ಲಾ ಬಿಳಿಯ ಕಮಲಗಳೂ, ಹೊಂಬಣ್ಣದ ತಾಳೆಹೂವುಗಳೂ ಸೇರಿ ಅದರ ಸೌಂದರ್ಯವನ್ನು ಅತಿಯಾಗಿಸಿದ್ದುವು. ॥೫೦-೫೧-೫೨॥

ಆ ವೇದಿಕೆಯ ಮೇಲೆ ದಿವ್ಯಸಿಂಹಾಸನವೊಂದು ಇಡಲ್ಪಟ್ಟಿತು. ಅದರ ಮೇಲೆ ಚಿತ್ರವಿಚಿತ್ರವಾದ ಬಟ್ಟೆಯು ಹಾಸಲ್ಪಟ್ಟಿತು. ತಗರು ಮುಂತಾದ ಸುಗಂಧ ದ್ರವ್ಯಗಳಿಂದಲೂ ದೀಪಮಾಲೆಗಳಿಂದಲೂ, ಚಿಗುರುಗಳಿಂದ ಆಚ್ಛಾದಿತವಾಗಿರುವ

ಹೇಮರೂಪ್ಯಸಮುದ್ಭೂತೈಃ ರತ್ನಪಾತ್ರೈಸ್ತಥಾವಿಧೈಃ ।
ಫಲಪಾತ್ರೈಃ ಪೂರ್ಣಪಾತ್ರೈಃ ಪುಷ್ಪಪಾತ್ರ್ಯಕ್ಷತಾಯುತೈಃ ॥೫೬॥

ದಿವ್ಯಚಂದನಪಾತ್ರೈಶ್ಚ ತಾಂಬೂಲೇಷು ಗುಡಂ ಹವಿಃ ।
ಲಾಜಾಶ್ಚ ಯವಗೋಧೂಮಾಃ ಪ್ರಣೀತಾಃ ಪ್ರೋಕ್ಷಣೀ ತಥಾ ॥೫೭॥

ಪ್ರಾಜ್ಯಾಜ್ಯಪಾತ್ರೈರ್ವಿಪುಲೈರಿಧ್ಮಬರ್ಹಿಯುತೈಸ್ತದಾ ।
ನೀರಾಜನಾಕ್ಷತಾಪಾತ್ರೈರ್ನಾರಿಕೇಲಾಮ್ರಪಾನಸೈಃ ॥೫೮॥

ರಂಭಾಫಲೈಶ್ಚ ತಕ್ಕೋಲಕರ್ಪೂರಾಗರುಚಂದನೈಃ ।
ಗಣಾಧಿಪಂ ಚ ತತ್ರಸ್ಥಂ ಚಕಾರ ಪರಮಾಸನೇ ॥೫೯॥

ಭೂಷಣೈರ್ಭಾಸುರಂ ಬ್ರಹ್ಮಾ ಗಂಧಪುಷ್ಪನಿರಾಜಿತಂ ।
ಸೇವಿತಂ ಪ್ರಮುಖೈಸ್ತಸ್ಯ ಚಲಚ್ಚಾಮರವೀಜನೈಃ ॥೬೦॥

---

ಚಿನ್ನದ ಕಲಶಗಳೂ, ಧೂಪದೀಪಗಳನ್ನಿಡುವ ಪಾತ್ರೆಗಳೂ, ಅಂಕುರಾರ್ಪಣಕ್ಕೆ ಉಪಯೋಗಿಸುವ ಸ್ವರ್ಣಪಾಲಿಕೆಗಳೂ ವಿಶೇಷವಾಗಿದ್ದುವು. ॥೫೩-೫೪॥

ಪಾದ್ಯ, ಅರ್ಘ್ಯ, ಆಚಮನೀಯ ಇವುಗಳಿಗೆ ಬೇಕಾದ ಗಂಧ, ಪುಷ್ಪಾದಿಗಳೂ, ಪಂಚಾಮೃತ, ಪಂಚಗವ್ಯ, ಮಧುಪರ್ಕಾದಿಗಳಿಗೆ ಬೇಕಾದ ಪದಾರ್ಥಗಳೂ, ಅವುಗಳನ್ನಿಡುವ ಚಿನ್ನದ, ಬೆಳ್ಳಿಯ ಮತ್ತು ರತ್ನದ ಪಾತ್ರೆಗಳೂ ಫಲ, ಪುಷ್ಪ, ಅಕ್ಷತೆ ಇವುಗಳಿಂದ ತುಂಬಿದ ದೊಡ್ಡ ದೊಡ್ಡ ಹರಿವಾಣಗಳೂ ಅಲ್ಲಿ ಸಿದ್ಧವಾದುವು. ॥೫೫-೫೬॥

ಗಂಧದ ಬಟ್ಟಲುಗಳೂ, ತಾಂಬೂಲದ ಹರಿವಾಣಗಳೂ, ಕಬ್ಬು, ಬೆಲ್ಲ, ಹವಿಸ್ಸು, ಅರಳು, ಅಕ್ಕಿ, ಗೋಧಿ ಮುಂತಾದ ವಿವಾಹೋಪಯೋಗಿದ್ರವ್ಯಗಳೂ, ಪ್ರಣೀತಾಪಾತ್ರೆ, ಪ್ರೋಕ್ಷಣಪಾತ್ರೆ, ಆಜ್ಯಪಾತ್ರೆ ಮುಂತಾದ ಹೋಮೋಪಯೋಗಿಯಾದ ಪಾತ್ರೆಗಳೂ, ಇಧ್ಮ, ಬರ್ಹಿಸ್ಸು, ಮಂಗಳಾರತಿಯ ಮತ್ತು ಅಕ್ಷತೆಯ ಬಟ್ಟಲುಗಳೂ ಹೋಮಕಾರ್ಯಕ್ಕಾಗಿ ಸಿದ್ಧವಾದುವು. ಇನ್ನೂ ಬಗೆಬಗೆಯ ಹಣ್ಣುಗಳೂ ಸಾಲಾಗಿ ಅಲ್ಲಲ್ಲಿ ಜೋಡಿಸಲ್ಪಟ್ಟುವು. ॥೫೭-೫೮॥

ತೆಂಗಿನಕಾಯಿ, ಮಾವಿನಹಣ್ಣು, ಹಲಸಿನಹಣ್ಣು, ಬಾಳೆಯ ಹಣ್ಣು ಮುಂತಾದ ಹಣ್ಣುಗಳೂ, ತಕ್ಕೋಲ, ಕರ್ಪೂರ, ಅಗರು, ಚಂದನ ಮುಂತಾದ

ಸಪ್ತಾರ್ಚಿಷಂ ಪ್ರತಿಷ್ಠಾಪ್ಯ ಸ್ವಧಯಾ ಚಾರುವಿಗ್ರಹಂ ।
ಭೂಷಿತಂ ಭೂಷಣೈರಗ್ನಿಂ ಪ್ರದಕ್ಷಿಣಶಿಖಸ್ಥಿತಂ ॥೬೧॥

ಮುನಿಭಿರ್ವಾಲಖಿಲ್ಯೈಶ್ಚ ವೈಖಾನಸಕುಲೈಸ್ತಥಾ ।
ವಸಿಷ್ಠೋ ಗೌತಮೋ ಗಾರ್ಗ್ಯೋ ಧೌಮ್ಯೋ ದಕ್ಷಸ್ತಥಾಂಗಿರಾಃ ॥೬೨॥

ಭೃಗುಶ್ಚೈವಾಂಗಿರಾಶ್ಚಾಪಿ ಪುಲಸ್ತ್ಯಃ ಪುಲಹೋತ್ರಿಕಃ ।
ವಿಶ್ವಾಮಿತ್ರೋ ಭರದ್ವಾಜ ಅಗಸ್ತ್ಯೋ ಬಭ್ರುರೇವ ಚ ॥೬೩॥

ಶಾಂತಿಂ ಪ್ರತಿಸರಂ ತತ್ರ ಕಾರಯಾಮಾಸ ವೈ ವಿಧಿಃ ।
ತಾನ್ ಪ್ರತೋಷ್ಯಾನ್ನಪಾನಾದ್ಯೈರ್ಗೋಹಿರಣ್ಯಾಂಬರಾದಿಭಿಃ ॥೬೪॥

ಸಂಪೂಜ್ಯ ಗಣನಾಥಂ ತಂ ಸ್ವಸ್ತಿವಾಚ್ಯದ್ವಿಜೈಸ್ಸಹ ।
ಆಕಾಂಕ್ಷಂಸ್ತ್ರ್ಯಕ್ಷಪಾದಾಬ್ಜಂ ವೀಕ್ಷಿತುಂ ಭಗವಾನಜಃ ॥೬೫॥

---

ಸುಗಂಧವೃಕ್ಷದ ಚಕ್ಕೆಗಳೂ ಅಲ್ಲಿ ಸಿದ್ಧವಾದುವು. ಆ ವೇದಿಕೆಯ ಮುಂಭಾಗದಲ್ಲಿ ಗಣಪತಿಗಾಗಿ ಒಂದು ದಿವ್ಯಪೀಠವೇರ್ಪಟ್ಟಿತು. ಅದೂ ಸಹ ಭೂಷಣಗಳಿಂದ ಭೂಷಿತವಾಗಿ ಗಂಧಪುಷ್ಪಾದಿಗಳಿಂದ ಅಲಂಕೃತವಾಗಿತ್ತು. ಪ್ರಮಥಗಣಗಳು ಚಾಮರಾದಿಗಳನ್ನು ಹಿಡಿದು ಅಲ್ಲಿ ಸುತ್ತಲೂ ಮಂಡಿಸಿದರು. ॥೫೯-೬೦॥

ಮುಂಭಾಗದಲ್ಲಿ ಸ್ವಧಾಸಮೇತನಾದ ಅಗ್ನಿಮೂರ್ತಿಯನ್ನು ಪ್ರತಿಷ್ಠಿಸಿ ಅದನ್ನು ಭೂಷಣಾದಿಗಳಿಂದ ಅಲಂಕರಿಸಿದರು. ಅಲ್ಲಿಯೇ ಪ್ರದಕ್ಷಿಣಾಕಾರವಾದ ಜ್ವಾಲೆಯುಳ್ಳ ಅಗ್ನಿಯನ್ನು ಪ್ರತಿಷ್ಠಾಪಿಸಿದರು. ಕೂಡಲೇ ವಾಲಖಿಲ್ಯರು, ವೈಖಾನಸರು, ವಸಿಷ್ಠ, ಗೌತಮ, ಗಾರ್ಗ್ಯ, ಧೌಮ್ಯ, ದಕ್ಷ, ಅಂಗಿರಸ್ಸು, ಭೃಗು, ಪುಲಸ್ತ್ಯ, ಪುಲಹ, ಅತ್ರಿ, ವಿಶ್ವಾಮಿತ್ರ, ಭರದ್ವಾಜ, ಅಗಸ್ತ್ಯ, ಬಭ್ರು ಮುಂತಾದ ಮಹರ್ಷಿಗಳೆಲ್ಲರೂ ಅಲ್ಲಿಗೆ ಬಂದು ಸೇರಿದರು. ॥೬೧-೬೨-೬೩॥

ಅನಂತರ ಕಂಕಣಪೂಜೆಯನ್ನೂ ಶಾಂತಿಕರ್ಮಗಳನ್ನೂ ಬ್ರಹ್ಮನೇ ನೆರವೇರಿಸಿದನು. ಬಂದಿದ್ದ ಋಷಿಜನರಿಗೆಲ್ಲಾ ಅನ್ನಪಾನಾದಿಗಳನ್ನೂ, ಗೋವು, ಸುವರ್ಣ, ವಸ್ತ್ರಾದಿಗಳು ಇವುಗಳನ್ನೂ ಇತ್ತು, ಗಣಪತಿಯನ್ನು ಪೂಜಿಸಿ ಬ್ರಹ್ಮನು ಸ್ವಸ್ತಿವಾಚನಗಳನ್ನು ಬ್ರಾಹ್ಮಣರ ಮೂಲಕ ಹೇಳಿಸುತ್ತಾ ಪರಶಿವನ ಆಗಮನವನ್ನೇ ನಿರೀಕ್ಷಿಸುತ್ತಿದ್ದನು. ॥೬೪-೬೫॥

ನಾರದಂ ಪ್ರೇಷಯಾಮಾಸ ಶಿವಾಗಮನಕಾರಣಾತ್ ।
ಸ ಸಂಭ್ರಮೇಣ ಮಹತಾ ಗಿರಿಭಿರ್ಮುನಿಭಿರ್ವಿಧಿಃ ॥೬೬॥

ಕಮಲಾಲಿರಿವ ಪ್ರತೀಕ್ಷ್ಯ ಮಿತ್ರಂ
ವಿಧಿರಾಸ್ತೇ ದ್ವಿಜಪುಂಗವೈರ್ಮಹೇಶಂ ।
ಗಿರಿಭಿಃ ಸುರಸತ್ತಮೈಸ್ತದಾನೀಂ
ಪರಿಬದ್ಧಾಂಜಲಿರೀಶಪಾದಸಕ್ತಃ ॥೬೭॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ವಿವಾಹನಿಶ್ಚಿತಾರ್ಥ ಗಣೇಶಾರಾಧನಗ್ರಹಮುಖಾದಿ ಮಂಗಲಾಚರಣ ಸ್ವಸ್ತಿವಾಚನ ಪುಣ್ಯಾಹಾದಿ ವಿವಾಹಪೂರ್ವಕೃತ್ಯವರ್ಣನಂ ನಾಮ ಷೋಡಶೋಧ್ಯಾಯಃ

---

ಮತ್ತು ಪರಮೇಶ್ವರನಿಗೆ ಈ ವಿಷಯವನ್ನು ತಿಳಿಸಲು ನಾರದಮಹರ್ಷಿಯನ್ನು ಮತ್ತೆ ಪರಶಿವನಲ್ಲಿಗೆ ಕಳುಹಿಸಿದರು. ನಾರದನಾದರೋ ಅತಿ ಸಂಭ್ರಮದಿಂದ ಗಿರಿಗಳಿಂದಲೂ ಮುನಿಗಳಿಂದಲೂ ಕೂಡಿದವನಾಗಿ ಮಹೇಶ್ವರನನ್ನು ಆಹ್ವಾನಿಸಲು ಹೊರಟನು. ಇತ್ತ ಬ್ರಹ್ಮನಾದರೊ, ವಿವಾಹಮಂಟಪದಲ್ಲಿ ಕುಳಿತು, ಕಮಲಗಳು ಸೂರ್ಯೋದಯಕಾಲವನ್ನೇ ನಿರೀಕ್ಷಿಸುತ್ತಿರುವಂತೆ, ಸಮಸ್ತ ಮುನಿವರ್ಗದೊಡಗೂಡಿ, ಪರಶಿವನು ಬರುವ ಕಾಲವನ್ನೇ ಎದುರುನೋಡುತ್ತಿದ್ದನು. ವಿವಾಹಕ್ಕೆ ಬಂದಿದ್ದ ದೇವತೆಗಳೂ ಪರ್ವತಗಳೂ ಸದಾ ಶಿವಪಾದದರ್ಶನ ಕುತೂಹಲಿಗಳಾಗಿ ಮನಸ್ಸಿನಲ್ಲಿ ಪರಶಿವನ ಪಾದವನ್ನೇ ಧ್ಯಾನಮಾಡುತ್ತಾ ಆನಂದದಿಂದಿದ್ದರು. ॥೬೬-೬೭॥

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ದ್ವಾದಶಾಂಶದಲ್ಲಿ
ಗಿರಿಜಾಕಲ್ಯಾಣಾಂಗವಾಗಿ ನಿಶ್ಚಿತಾರ್ಥಾದಿ ವಿಷಯುಗಳನ್ನು ವಿವರಿಸುವ
ಹದಿನಾರನೆಯ ಅಧ್ಯಾಯುವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಸಪ್ತದಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ನಾರದೋ ದೇವದೇವೇಶಂ ಪ್ರಣಮ್ಯ ಪ್ರಾರ್ಥಯುತ್ಯಸೌ ।
ವಿಷ್ಣ್ವಾದಿಭಿರ್ದೇವಗಣೈರ್ನಂದಿ ಭೃಂಗೀಶ್ವರಾದಿಭಿಃ ॥೧॥
ಸಮಾವೃತಂ ಸ್ಥಿತಂ ತತ್ರ ಮಂದರೇ ಚಾರುಕಂದರೇ ॥೨॥

॥ ನಾರದ ಉವಾಚ ॥

ತವಾಜ್ಞಯಾ ವಿಧಿಃ ಪೂರ್ವಂ ಸಂಗತೋ ಗಿರಿಶೇನ ಹಿ ।
ಸಂಭೃತ್ಯ ಸರ್ವಸಂಭಾರಂ ಮುನೀಂದ್ರೈಸ್ತ್ವಾಂ ಪ್ರತೀಕ್ಷತೇ ॥೩॥

---

## ಹದಿನೇಳನೆಯ ಅಧ್ಯಾಯ

ಬ್ರಹ್ಮಾದಿಗಳಿಂದ ಕಳುಹಿಸಲ್ಪಟ್ಟ ನಾರದಮಹರ್ಷಿಯು ಜಾಗ್ರತೆ ಪರಮೇಶ್ವರನ ಸಮೀಪಕ್ಕೆ ಬಂದನು. ದೇವದೇವನಾದ ಪರಶಿವನು ವಿಷ್ಣುವೇ ಮೊದಲಾದ ದೇವತೆಗಳಿಂದಲೂ ಮತ್ತು ನಂದಿ, ಭೃಂಗಿ ಮುಂತಾದ ಪ್ರಮಥಗಣನಾಯಕರೊಡಗೂಡಿಯೂ ಮಂದರಪರ್ವತದ ಸುಂದರವಾದ ಗುಹೆಯೊಂದರಲ್ಲಿ ಕುಳಿತಿದ್ದನು. ಅಲ್ಲಿಗೆ ನಾರದಮಹರ್ಷಿಯು ಬಂದು ಕೈಮುಗಿದು ನಮಸ್ಕರಿಸಿ ಅಂಜಲಿಬದ್ಧನಾಗಿ ನಿಂತು, “ ಸ್ವಾಮಿ, ಚತುರ್ಮುಖಬ್ರಹ್ಮನು ನಿನ್ನ ಅಪ್ಪಣೆಯಂತೆ ಗಿರಿರಾಜನೊಡನೆ ನಿಶ್ಚಿತಾರ್ಥವನ್ನು ನೆರವೇರಿಸಿಕೊಂಡು ವಿವಾಹಕಾರ್ಯಕ್ಕೆ ಸಕಲ ಸಂಭಾರಗಳನ್ನೂ

ಗಿರಿಶೋಽಪಿ ಸಮ್ಯೈನಾಕೋ ಮೇನಯಾ ದ್ವಾರಿ ತಿಷ್ಠತಿ ।
ಅನುಗ್ರಾಹ್ಯೋಽಯಮಧುನಾ ಮುಹೂರ್ತಸ್ತ್ವಹಯಾ ಪ್ರಭೋ ॥೪॥

ತಸ್ಮಾರದವಚಶ್ಶ್ರುತ್ವಾ ತಪಸೋತ್ಥಾಯ ಶಂಕರಃ ।
ಯಥೇಷ್ಟಮಿತಿ ಲೋಕೇಶಃ ಪ್ರಾಹ ದೇವೋ ಮಹೇಶ್ವರಃ ॥೫॥

॥ ಶ್ರೀ ಶಿವ ಉವಾಚ ॥

ನಂದಿನ್ ಮದ್ಗಣಪಾ ಯೇತ್ರ ಸಮಾಯಾಂತು ಮದಂತಿಕಂ ।
ವಿಷ್ಣೋ ಸನ್ನಹ್ಯತಾಂ ಸೇನಾಂ ಸುರಾಣಾಮಸ್ತ್ರಶೋಭಿತಾಂ ॥೬॥

ನಂದೀವಿಷ್ಣೂ ಪ್ರಣಮ್ಯೇಶಂ ಶಕ್ರಮಾಜ್ಞಾಪಯನ್ತದಾ ॥೭॥

॥ ಹರಿರುವಾಚ ॥

ಸನ್ನಹ್ಯತಾಂ ಮಹಾಸೇನಾ ಸುರಾಣಾಂ ಸ ಪತಾಕಿನೀ ।
ಮಾ ವಿಲಂಬೋ ಭವತ್ವತ್ರ ನಿರ್ಗಚ್ಛತಿ ಮಹೇಶ್ವರಃ ॥೮॥

ಗಿರೀಶಸ್ಯಾಲಯಂ ದೇವ್ಯಾಃ ಕರ್ತುಂ ಪಾಣಿಗ್ರಹಂ ವಿಭುಃ ।
ದೇವಾನಾಂ ಪತ್ನಯೋ ಯಾಶ್ಚ ಮಾತರೋ ಭೂಷಣಾನ್ವಿತಾಃ ॥೯॥

---

ಒದಗಿಸಿಕೊಂಡು, ಮುನಿಜನರೊಡಗೂಡಿ ನಿನ್ನನ್ನೇ ನಿರೀಕ್ಷಿಸುತ್ತಲಿರುವನು. ॥೧-೨-೩॥

ಹಿಮವಂತನೂ ಸಹ ಪತ್ನೀಪುತ್ರಾದಿಗಳೊಡಗೂಡಿ ನಿನ್ನಾಗಮನವನ್ನೇ ನಿರೀಕ್ಷಿಸುತ್ತಾ ಬಾಗಿಲಿನಲ್ಲಿಯೇ ನಿಂತಿರುವನು. ಶುಭಮುಹೂರ್ತದಲ್ಲಿ ನೀನು ಈಗಲೇ ಅಲ್ಲಿಗೆ ದಯಮಾಡಿಸಬೇಕು'' ಎಂದು ಪ್ರಾರ್ಥಿಸಲು, ಆ ನಾರದನ ಪ್ರಾರ್ಥನೆಯನ್ನು ಕೇಳಿ ತಪಸ್ಸಿನಲ್ಲಿ ನಿರತನಾಗಿದ್ದ ಪರಶಿವನು ಬಹಿರ್ಮುಖನಾಗಿ ಅಲ್ಲಿ ನೆರೆದಿದ್ದ ತನ್ನ ಪರಿವಾರವನ್ನು ಕುರಿತು ಈರೀತಿ ನುಡಿದನು. ॥೪-೫॥

"ನಂದಿಯೇ, ನನ್ನ ಗಣನಾಯಕರನ್ನೆಲ್ಲಾ ಈ ಕೂಡಲೇ ಇಲ್ಲಿಗೆ ಬರುವಂತೆ ಆಜ್ಞಾಪಿಸು. ವಿಷ್ಣುವೇ, ದೇವಸೈನ್ಯವು ಅಸ್ತ್ರಸಜ್ಜಿತವಾಗಿ ನನ್ನನ್ನು ಹಿಂಬಾಲಿಸುವಂತೆ ಮಾಡು'' ಎಂದು ಆಜ್ಞಾಪಿಸಲು ಆಗ ನಂದಿ ಮತ್ತು ವಿಷ್ಣು ಇವರಿಬ್ಬರೂ ಇಂದ್ರನಿಗೆ ಈರೀತಿ ಅಪ್ಪಣೆಯಿತ್ತರು. ॥೬-೭॥

"ಮಹೇಂದ್ರನೇ, ನಿನ್ನ ದೇವಸೈನ್ಯವೆಲ್ಲಾ ಈಗಲೇ ಸಿದ್ಧವಾಗಲಿ. ಮಹೇಶ್ವ

ಮಂಡಯಿತ್ವಾ ಸ್ವಕಾಂಗಾನಿ ವಾಸೋ ಭೂಷಣಗಂಧಕೈಃ ।
ಸಮಾಗಚ್ಛಂತು ದೇವಸ್ಯ ಪಾಣಿಗ್ರಹಣಮಂಗಲೇ ।
ಇಂದ್ರೋಽಪ್ಯಾಜ್ಞಾಪಯಾಮಾಸ ಆನೇತುಂ ಮಾತಲಿಂ ಪ್ರತಿ ॥೧೧॥

ಸ ಮಾತಲಿಸ್ತ್ವರಾಯುಕ್ತೋ ದೇವಸೇನಾಸ್ಸಮಾನಯತ್ ।
ಶಕ್ರಸ್ಯ ಗಣಪಾ ಯೇ ವೈ ವಜ್ರೋದ್ಯತಕರಾಸ್ತ್ವಭಾಃ ॥೧೨॥

ಮುಕುಟೋಜ್ಜ್ವಲಮುಸ್ತಾಸ್ತೇ ಯುವಾನೋ ಮೃಷ್ಟಕುಂಡಲಾಃ ।
ರಕ್ತಚಂದನಲಿಪ್ತಾಂಗಾಃ ಕೋಟ್ಯೇಕಾ ತತ್ರ ಚಾಗತಾ ॥೧೩॥

ಪತಾಕಾವೈಜಯಂತೀಭಿಃ ಪಟಹಾನಕನಿಸ್ವನೈಃ ।
ತಥಾ ಯಮಗಣಾಸ್ತತ್ರ ಕೃಷ್ಣಾಂಗಾ ವಿಕೃತಾಯುಧಾಃ ॥೧೪॥

---

ರನು ಪಾರ್ವತೀಪರಿಣಯಕ್ಕಾಗಿ ಹಿಮಗಿರಿಗೆ ಪ್ರಯಾಣಹೊರಟಿರುವನು. ಇನ್ನು ಸಾವಕಾಶ ಮಾಡಕೂಡದು. ದೇವತಾಸ್ತ್ರೀಯರೂ, ಮಾತೃಗಣಗಳೂ, ವಸ್ತ್ರಭೂಷಣಾದಿಗಳಿಂದ ಅಲಂಕೃತರಾಗಿ, ಅಂಗರಾಗಾದಿಗಳಿಂದ ಶೋಭಿತರಾಗಿ ಆರತಿಗಳನ್ನು ಕೈಯಲ್ಲಿ ಹಿಡಿದು ಪ್ರಯಾಣಸನ್ನದ್ಧರಾಗಲಿ." ॥೮-೯-೧೦॥

ಎಂದು ವಿಷ್ಣುವು ಇಂದ್ರನಿಗೆ ಅಪ್ಪಣೆಕೊಡಲು, ಇಂದ್ರನು ತನ್ನ ಮಾತಲಿಯನ್ನು ಕರೆದು ದೇವಸೈನ್ಯವನ್ನೆಲ್ಲಾ ಕರೆತರುವಂತೆ ಆಜ್ಞಾಪಿಸಿದನು. ಕೂಡಲೇ ಇಂದ್ರನ ಸೇನಾನಾಯಕರೆಲ್ಲರೂ ವಜ್ರಾಯುಧಧಾರಿಗಳಾಗಿ ಗುಂಪುಗುಂಪಾಗಿ ಬಂದು ನೆರೆದರು. ॥೧೧-೧೨॥

ಅವರಲ್ಲಿ ಯುವಕರಾದ ಕೋಟಿಸಂಖ್ಯೆಯ ದೇವಸೈನಿಕರು ಪ್ರಕಾಶಮಾನವಾದ ಕಿರೀಟವನ್ನೂ, ಪ್ರಜ್ವಲಿಸುವ ಕರ್ಣಕುಂಡಲವನ್ನೂ ಧರಿಸಿ ರಕ್ತಚಂದನವನ್ನು ಶರೀರಕ್ಕೆಲ್ಲಾ ಲೇಪಿಸಿಕೊಂಡು ಹೊರಹೊರಟರು. ಸೈನ್ಯದಲ್ಲೆಲ್ಲಾ ಪತಾಕೆಗಳೂ, ವೈಜಯಂತೀಮಾಲೆಗಳೂ, ತಮಟೆ, ಮದ್ದಲೆ ಮುಂತಾದ ವಾದ್ಯಗಳೂ ಧ್ವನಿಗೈಯ್ಯುತ್ತಿದ್ದುವು. ಇವರ ಜೊತೆಯಲ್ಲಿ ಯಮನ ಸೈನ್ಯವೂ ಬಂದಿತು. ಆ ಸೈನಿಕರೆಲ್ಲರೂ ಕೃಷ್ಣದೇಹಿಗಳಾಗಿ ವಿಕಾರವಾದ ರೂಪಿನಿಂದ ಕೂಡಿ ಭಯಂಕರರಾಗಿದ್ದರು. ॥೧೩-೧೪॥

ಕರಾಳದಂಷ್ಟ್ರೋರುಶಿಖಾ ಮುಸಲಾಯುಧಪಾಣಯಃ ।
ಸಮಾಗತಾ ಯಮೇನೈವ ಪಾಶಹಸ್ತಾಯುತತ್ರಯಂ ॥೧೫॥

ವಾರುಣಾ ಗಣಪಾಸ್ತತ್ರ ಹರಿತಾ ಬಾಹುಶಾಲಿನಃ ।
ಪಾಶಖಡ್ಗಕರಾಸ್ಸರ್ವೇ ನಿಯುತಂ ವರುಣೇನ ಹಿ ॥೧೬॥

ಯಕ್ಷಾಧಿಪೇನ ಸಹಿತಾ ಯಕ್ಷಾ ಶಿಕ್ಷಾವಿಶಾರದಾಃ ।
ಪ್ರಯುತಂ ಖಡ್ಗಖೇಟಾಭಿಃ ಸಮಾಯಾತಾ ಮಹೋದ್ಧತಾಃ ॥೧೭॥

ವಾಯುನಾ ವಾಯುಗಣಪಾ ತೋಮರಾಸಕ್ತಪಾಣಯಃ ।
ಸಮಾಗತಾಸ್ತೇ ಬಲಿನೋ ಯುವಾನೋ ನಿಯುತಂ ತದಾ ॥೧೮॥

ಅಗ್ನಿನಾ ಚಾಗ್ನಿಗಣಪಾ ರಕ್ತವರ್ಣಾ ಗದಾಧರಾಃ ।
ಸಮಾಯಾತಾಯುತಂ ತತ್ರ ಗಂಧಸ್ರಗ್ವರಭೂಷಿತಾಃ ॥೧೯॥

ನಿಋುತೇರ್ಗಣಪಾ ಯೇತ್ರ ಪ್ರಾಸಾಸಿವರಪಾಣಯಃ ।
ದೇವೇನ ತೇನ ಚಾಯಾತಾ ಆಯುತಂ ಭೂಷಣಾನ್ವಿತಾಃ ॥೨೦॥

---

ಅವರ ಕೋರೆಹಲ್ಲು ಭಯಂಕರವಾಗಿದ್ದಿತು. ದೀರ್ಘವಾದ ಕೇಶಪಾಶವುಳ್ಳವರಾಗಿ, ಮುಸಲಾಯುಧಗಳನ್ನು ಕೈಯ್ಯಲ್ಲಿ ಹಿಡಿದು, ಹತ್ತು ಸಹಸ್ರಸಂಖ್ಯೆಯಲ್ಲಿ ಅವರು ಯಮನೊಡಗೂಡಿ ಅಲ್ಲಿಗೆ ಬಂದಿದ್ದರು. ಹಾಗೆಯೇ ವರುಣನ ಸೈನಿಕರು ಹರಿದ್ವರ್ಣದವರಾಗಿ ಪಾಶ, ಖಡ್ಗ ಇವುಗಳನ್ನು ಹಿಡಿದು ವರುಣನೊಡಗೂಡಿ ಹತ್ತುಲಕ್ಷ ಸಂಖ್ಯೆಯಲ್ಲಿ ಬಂದು ಸೇರಿದರು. ||೧೫-೧೬||

ಯಕ್ಷಗಣಗಳು ತಮ್ಮ ನಾಯಕನಾದ ಕುಬೇರನೊಡಗೂಡಿ, ರಣಶಿಕ್ಷಿತರಾಗಿ ಖಡ್ಗಖೇಟಾದಿಗಳನ್ನು ಹಿಡಿದು; ಉದ್ಧತರಾಗಿ ಕೋಟಿಸಂಖ್ಯೆಯಲ್ಲಿ ಬಂದಿಳಿದರು. ಆದೇ ರೀತಿ ವಾಯುಗಣವೂ ಕೂಡ ತೋಮರಾಯುಧಧಾರಿಗಳಾಗಿ, ಬಲಪ್ರದರ್ಶನ ಮಾಡುತ್ತಾ ಲಕ್ಷಾಂತರ ಸಂಖ್ಯೆಯಲ್ಲಿ ವಾಯುವಿನೊಡಗೂಡಿ ಶಿವನಿದ್ದಲ್ಲಿಗೆ ಬಂದು ನೆರೆದರು. ||೧೭-೧೮||

ಕೆಂಪುಬಣ್ಣದಿಂದ ವಿರಾಜಿಸುತ್ತಾ ಗದಾಧಾರಿಗಳಾದ ಅಗ್ನಿಗಣಗಳು ಅಗ್ನಿಯೊಡಗೂಡಿ, ಗಂಧಮಾಲ್ಯಾದಿಗಳಿಂದಲಂಕೃತರಾಗಿ ಹತ್ತುಸಹಸ್ರ ಸಂಖ್ಯೆ

ಈಶಾನೋ ಗಣಸ್ಯೈಸ್ತತ್ರ ಸಮಾಯಾತಃ ಸಹಸ್ರಶಃ ।
ನಿಷಂಗಿಭಿಃ ಕವಚಿಭಿರ್ಹೇತಿತೋಮರಪಾಣಿಭಿಃ ॥೨೧॥

ಇಷುಮದ್ಭಿಶ್ಚಾಪಧೃಗ್ಭಿರ್ದೇವಿ ಭೂವ್ಯಂತರಿಕ್ಷಗೈಃ ।
ಅಥಾಯಾತಾಶ್ಚ ಮರುತಃ ಸಹಸ್ರಾಣ್ಯತ್ರ ಷೋಡಶ ॥೨೨॥

ವಸವೋ ಬಲಿನಸ್ತತ್ರ ತ್ರಿಂಶತ್ಸಾಹಸ್ರಮೂರ್ಜಿತಾಃ ।
ಆದಿತ್ಯಾ ದ್ವಾದಶಾಸ್ತತ್ರ ಸಹಸ್ರೇಣ ಪೃಥಕ್ಪೃಥಕ್ ॥೨೩॥

ಸುಧನ್ವಾನಃ ಸಹಸ್ರೇಣ ಧನುರ್ಬಾಣಧರಾಗತಾಃ ।
ಅಶ್ವಿನೌ ದ್ವಿಸಹಸ್ರೇಣ ಬಲೇನ ಶರಪಾಣಿನಾ ॥೨೪॥

ನಾಗಾಃ ಕಿಂಪುರುಷಾಃ ಸಿದ್ಧಾಃ ಗಂಧರ್ವಾ ವಾದ್ಯವಾದಕಾಃ ।
ಪಿಶಾಚಾ ಗರುಡಾ ಯಕ್ಷಾ ರಾಕ್ಷಸಾ ದೈತ್ಯನಾಯಕಾಃ ॥೨೫॥

ನಾಗಾಪ್ಸರಾವಯೋರೂಪಲಾವಣ್ಯಾಗೀತಪೇಶಲಾಃ ।
ಪಿತರೋ ಯಾತುಧಾನಾಶ್ಚ ಡಾಕಿನ್ಯೋ ಯೋಗಿನೀಗಣಾಃ ॥೨೬॥

---

ಯಿಂದ ಅಲ್ಲಿಗೆ ಬಂದರು. ಹಾಗೆಯೇ ಪ್ರಾಸ, ಶಕ್ತಿ ಮುಂತಾದ ಆಯುಧಗಳನ್ನು ಹಿಡಿದು ತಮ್ಮ ಯಜಮಾನನಾದ ನಿಋುಋುತಿಯೊಡನೆ ಅಲ್ಲಿಗೆ ಬಂದು ಸೇರಿದರು. ॥೧೯-೨೦॥

ಬತ್ತಳಿಕೆ, ಬಾಣ, ಕವಚ, ತೋಮರ ಮುಂತಾದ ಆಯುಧಗಳನ್ನು ಹಿಡಿದು ಈಶಾನಗಣಗಳು ಈಶಾನನೊಡಗೂಡಿ ಅಲ್ಲಿಗೆ ಬಂದರು. ಮರುದ್ಗಣಗಳೂ ಸಹ ಬಾಣ, ಬಿಲ್ಲು ಇವುಗಳನ್ನು ಹಿಡಿದು ಭೂವ್ಯಂತರಿಕ್ಷಗಳಲ್ಲೆಲ್ಲಾ ಸಂಚರಿಸುತ್ತಾ ಹದಿನಾರುಸಾವಿರ ಸಂಖ್ಯೆಯಲ್ಲಿ ಅಲ್ಲಿಗೆ ಬಂದಿಳಿದರು. ॥೨೧-೨೨॥

ಮೂವತ್ತುಸಾವಿರ ಬಲಿಷ್ಠರಾದ ವಸುಗಣಗಳೂ, ಹನ್ನೆರಡು ಹನ್ನೆರಡು ಸಹಸ್ರ ಸಂಖ್ಯೆಯಿಂದ ಕೂಡಿದ ದ್ವಾದಶಾದಿತ್ಯರ ತಂಡವೂ, ಧನುರ್ಬಾಣಸಹಿತರಾದ ಒಂದು ಸಾವಿರ ಸುಧನ್ವದೇವಗಣವೂ, ಬಾಣಪಾಣಿಗಳಾದ ಎರಡು ಸಾವಿರ ಅಶ್ವಿನೀದೇವತೆಗಳ ಗುಂಪೂ ಅಲ್ಲಿಗೆ ಬಂದಿಳಿಯಿತು. ॥೨೨-೨೪॥

ನಾಗರು, ಕಿಂಪುರುಷರು, ಸಿದ್ಧರು, ಗಂಧರ್ವರು, ವಾದ್ಯಗಳನ್ನು ಬಾರಿಸುತ್ತ ಬಂದರು. ಪಿಶಾಚಗಳು, ಗರುಡರು, ಯಕ್ಷರೂ, ರಾಕ್ಷಸರೂ, ದೈತ್ಯರೂ, ನಾಗರೂ,

ಕಿನ್ನರಾ ಭೈರವಾಸ್ತತ್ರ ಚಾಮುಂಡಾ ಶಾಕಿನೀ ಗಣಾಃ ।
ಗಾವೋಽಥ ಮಾತರಸ್ತತ್ರ ಸಮಾಯಾತಾಃ ಸುಪೇಶಲಾಃ ॥೨೭॥

ಸರ್ವಾಭರಣಭೂಷಾಢ್ಯಾಃ ಸ್ರಗ್ಗಂಧಾಶ್ಚ ಸುವಾಸಸಃ ।
ಧೃತನಾನಾವಿಧಾಸ್ತ್ರಾಶ್ಚ ನಾನಾವಾದ್ಯಕೃತಾದರಾಃ ॥೨೮॥

ಅಥಾದಿತಿರ್ದಿತಿರ್ಲಕ್ಷ್ಮೀರ್ದನುರ್ವಾಣೀ ಚ ಕಾಲಿಕಾ ।
ಪುಲೋಮಾ ವಿಪುಲಾಚೈವ ಸಿಂಹಿಕಾ ಸುರಸಾ ತಥಾ ॥೨೯॥

ಸಿದ್ಧಿಃ ಋದ್ಧಿಃ ಕ್ರಿಯಾ ದುರ್ಗಾ ಸ್ವಧಾ ಸ್ವಾಹಾ ದನುಃ ಕುಹೂಃ ।
ರಾಕಾ ಸ್ಪೃಹಾ ಸಿನೀವಾಲೀ ಸ್ವಸಾ ಬುದ್ಧಿರ್ಮತಿಃ ಶಚೀ ॥೩೦॥

ಅರುಂಧತೀ ಚ ಸಾವಿತ್ರೀ ಗಾಯತ್ರೀ ರೋಹಿಣೀಮುಖಾಃ ।
ಗಾರ್ಗೀ ಮೈತ್ರಾಯಣೀ ಚೈವ ಅನಸೂಯಾ ಪತಿವ್ರತಾ ॥೩೧॥

---

ಅಪ್ಸರಸ್ಸುಗಳೂ, ರೂಪಲಾವಣ್ಯಾದಿಗಳಲ್ಲಿಯೂ, ಗಾನವೈವಿಧ್ಯದಲ್ಲಿಯೂ ಕುಶಲ ರಾದವರು, ಪಿತೃದೇವತೆಗಳೂ, ರಾಕ್ಷಸರೂ, ಡಾಕಿನೀಯರೂ, ಯೋಗಿನಿಯರೂ ಅಲ್ಲಿಗೆ ಗುಂಪುಗುಂಪಾಗಿ ಬಂದು ಸೇರಿದರು. ॥೨೫-೨೬॥

ಕಿನ್ನರರು, ಭೈರವರು, ಚಾಮುಂಡಾಗಣಗಳು, ಶಾಕಿನೀಗಣಗಳು, ಗೋದೇವತಾಗಣಗಳು, ಮಾತೃಗಣಗಳು ಇವರೆಲ್ಲರೂ ನಾನಾವಿಧವಾದ ಆಭರಣಾದಿ ಗಳಿಂದ ಅಲಂಕೃತರಾಗಿ ಪುಷ್ಪ, ಗಂಧ, ದಿವ್ಯವಸ್ತ್ರ ಇವುಗಳಿಂದ ಭೂಷಿತರಾಗಿ ನಾನಾವಿಧವಾದ ಅಸ್ತ್ರಗಳನ್ನು ಹಿಡಿದು, ವಿಧವಿಧವಾದ ವಾದ್ಯಗಳನ್ನು ಘೋಷಿ ಸುತ್ತಾ ಬಂದು ನೆರೆದರು. ॥೨೭-೨೮॥

ಹಾಗೆಯೇ, ಅದಿತಿ, ದಿತಿ, ಲಕ್ಷ್ಮೀ, ವಾಣೀ, ದನು, ಕಾಳಿ, ಪುಲೋಮಜೆ, ವಿಪುಲಾ, ಸಿಂಹಿಕೆ, ಸುರಸೆ, ಸಿದ್ಧಿ, ಋದ್ಧಿ, ಕ್ರಿಯೆ, ದುರ್ಗಿ, ಸ್ವಧಾ, ಸ್ವಾಹಾ, ಕುಹೂಃ, ರಾಕಾ, ಸ್ಪೃಹಾ, ಸಿನೀವಾಲೀ, ಸ್ವಸಾ, ಬುದ್ಧಿ, ಮತಿ, ಶಚಿ ಇವರೆಲ್ಲರೂ ಗೌರೀ ವಿವಾಹದರ್ಶನಕಾಂಕ್ಷಿಗಳಾಗಿ ಬಂದು ನೆರೆದರು. ॥೨೯-೩೦॥

ಅರುಂಧತೀ, ಸಾವಿತ್ರೀ, ಗಾಯತ್ರೀ, ರೋಹಿಣೀ, ಗಾರ್ಗೀ, ಮೈತ್ರಾಯಣೀ ಅನಸೂಯಾ, ಲೋಪಾಮುದ್ರಾ, ಗಾರ್ಗೀ, ಸನ್ನತಿ, ಸುನೀತಿ, ಕ್ರುಥಾ, ರಂಭಾ, ಅಲಂಬುಸಾ, ಮೇನಕಾ, ಸಹಜನ್ಯಕೆ, ವಿಪ್ರಚಿತ್ತಿ, ಮಿಶ್ರಕೇಶೀ, ಊರ್ವಶೀ,

ಲೋಪಾಮುದ್ರಾ ತಥಾ ಗಾರ್ಗೀ ಸನ್ನತಿಃ ಸುನೀತಿಃ ಕ್ರುಧಾ ।
ರಂಭಾ ಆಲಂಬುಸಾ ಚೈವ ಮೇನಕಾ ಸಹಜನ್ಯಕಾ ॥೩೨॥

ವಿಪ್ರಚಿತ್ತಿರ್ಮಿಶ್ರಕೇಶೀ ಊರ್ವಶೀ ಮೇನಕಾ ತಥಾ ।
ವಿಶ್ವಚಿತ್ತಿರ್ಘೃತಾಚೀ ಚ ಮಿತ್ರಂ ವಿಂದಾಮುರಾಲಿಕಾ ॥೩೩॥

ಏತಾಶ್ಚಾಪ್ಸರಸಃ ಶ್ರೇಷ್ಠಾ ಅಪ್ಸರಾಃ ಕೋಟಿಯೋ ನವ ।
ಹಾವಭಾವಮನೋಜ್ಞೇನ ತೌರ್ಯತ್ರಿಕಯುತಾ ಯಯುಃ ॥೩೪॥

ಸಾಗರಾ ಗಿರಯೋ ಮೇಘಾಃ ನದ್ಯಸ್ಸಂವತ್ಸರಾಗ್ರಹಾಃ ।
ಸೋಮೇನ ಸಹ ತೇ ಸರ್ವೇ ಸಮಾಯಾತಾಸ್ತ್ರಿಕೋಟಿಯಃ ॥೩೫॥

ಮನೋಹರೇಣ ವೇಷೇಣ ಋಕ್ಷಾಣಿ ಋಷಯೋ ಮನೂಃ ।
ವೇದಾ ಮಂತ್ರಾಸ್ತಥಾ ಯಜ್ಞಾಃ ಛಂದಾಂಸಿ ಪ್ರಣವಸ್ತಥಾ ॥೩೬॥

ಮಂತ್ರಗ್ರಾಮಂ ತಥಾ ಸರ್ವಂ ಪುರಾಣಾನಿ ಚ ಶಾಸ್ತ್ರಕಂ ।
ಸ್ವರೂಪವೇಷಾಭರಣಾಸ್ತತ್ರ ಜಗ್ಮುಶ್ಚ ಸಂಘಶಃ ॥೩೭॥

---

ಮೇನಕೆ, ವಿಶ್ವಚಿತ್ತಿ, ಘೃತಾಚೀ, ಮಿತ್ರವಿಂದಾ, ಮುರಾಲಿಕಾ ಇವರೇ ಮೊದಲಾದ ಪತಿವ್ರತಾಸ್ತ್ರೀಯರೂ, ಜೊತೆಯಲ್ಲಿ ಅಪ್ಸರಸ್ತ್ರೀಯರೂ, ಹಾವಭಾವವಿಲಾಸಾದಿಗಳಿಂದ ಮನೋಹರರಾಗಿ ಕಾಣುತ್ತಾ, ತುತ್ತೂರಿಯ ವಾದ್ಯಧ್ವನಿಯಿಂದ ಕೂಡಿದವರಾಗಿ ಮಂದರಪರ್ವತಕ್ಕೆ ಬಂದು ನೆರೆದರು. ॥೩೧-೩೨-೩೩-೩೪॥

ಸಾಗರಗಳು, ಗಿರಿಗಳು, ಮೇಘಗಳು, ನದಿಗಳು, ಸಂವತ್ಸರಗಳು, ಗ್ರಹಗಳು, ಇವರೆಲ್ಲರೂ ಚಂದ್ರನೊಡಗೂಡಿ ಮೂರುಕೋಟಿ ಸಂಖ್ಯೆಯಲ್ಲಿ ಬಂದು ಸೇರಿದರು. ಮನೋಹರವಾದ ಆಕಾರದಿಂದ ನಕ್ಷತ್ರಗಳೂ, ಋಷಿಗಳೂ, ಮನುಗಳೂ, ನಾಲ್ಕು ವೇದಗಳೂ, ತದಂತರ್ಗತಗಳಾದ ಮಂತ್ರಾಭಿಮಾನಿದೇವತೆಗಳೂ, ಯಜ್ಞಗಳೂ, ಛಂದಸ್ಸುಗಳೂ, ಪ್ರಣವವೂ ಒಟ್ಟಾಗಿ ಮಂದರಗಿರಿಗೆ ಬಂದರು. ॥೩೫-೩೬॥

ಮಂತ್ರಗಳೂ, ಪುರಾಣಗಳೂ, ಶಾಸ್ತ್ರಗಳೂ, ಮೂರ್ತಿಮತ್ತಾಗಿ ಸರ್ವಾಲಂಕಾರ ಭೂಷಿತಗಳಾಗಿ ಅಲ್ಲಿಗೆ ಬಂದು ಸೇರಿದುವು. ದೇವದೇವನಾದ ವಿಷ್ಣುವಿನ

ಉದ್ವಾಹಶ್ಶಂಕರಸ್ಯೇತಿ ದೇವದೇವಾಜ್ಞಯಾ ತದಾ ।
ಭಾಸಯಂತೋ ಭೂಷಣೈಶ್ಚ ಶಾಸ್ತ್ರಾಣಾಂ ವಾದನಿಸ್ವನೈಃ ॥೩೮॥

ತ್ರಿಷಷ್ಟಿಕೋಟಿತುರಗಾಃ ರುಕ್ಮಭಾಂಡಪರಿಚ್ಛದಾಃ ।
ಜವಿನೋ ಬಲಸಂಪನ್ನಾಃ ಸಂಸ್ಥಿತಾಃ ಸುರಸಾರಿನಃ । ॥೩೯॥

ಖುರಘೃಷ್ಟಾಂ ಮಹೀಂ ಚಕ್ರುರ್ಹೇಷಾ ಭೂಷೈಕಸನ್ಮುಖಾಃ ।
ತೋಮರಾಂಕುಶ ಬಾಣಾಗ್ರಪತಾಕಾವಲಿಭೂಷಿತಾಃ ॥೪೦॥

ಗಜಾಮಹಾಮಾತ್ರಯುತಾ ದಂತವೇಷ್ಟಶರಾಗ್ರಕಾಃ ।
ಉದ್ಯತ್ಕುಂಭಾ ಕರ್ಣತಾಲಲಂಬಿತಾಲೋಲಚಾಮರಾಃ ॥೪೧॥

ತ್ರಿಂಶತ್ಕೋಟ್ಯೋ ಯಯುಸ್ತತ್ರ ನೀಲಾ ಇವ ಭುವಂಗತಾಃ ।
ರಥಾಃ ಪಂಚಾಶತಂ ಕೋಟ್ಯೋ ಸುತುರಂಗಾಃ ಸುಚಕ್ರಕಾಃ ॥೪೨॥

---

ಅಪ್ಪಣೆಯಂತೆ ಶಂಕರನ ವಿವಾಹದರ್ಶನಾರ್ಥವಾಗಿ ಸಕಲ ಶಾಸ್ತ್ರಗಳೂ ಮೂರ್ತಿ ಮತ್ತಾಗಿ ಶಾಸ್ತ್ರಚರ್ಚೆಯನ್ನು ಸ್ವಯಂ ನಡೆಸುತ್ತಾ ಸಂತೋಷದಿಂದ ಅಲ್ಲಿಗೆ ಬಂದು ನೆರೆದರು. ॥೩೭-೩೮॥

ಅರುವತ್ತುಮೂರುಕೋಟಿ ಕುದುರೆಗಳು, ಸುವರ್ಣಮಯವಾದ ಜೀನು ಲಗಾಮುಗಳನ್ನು ಹೊಂದಿ, ದೇವತೆಗಳ ಸವಾರರೊಡನೆ ಬಂದು ನೆರೆದುವು. ಅವೆಲ್ಲವೂ ಬಹು ವೇಗವಾಗಿ ಓಡುವ ಬಲಿಷ್ಠವಾದ ಕುದುರೆಗಳೆನಿಸಿದ್ದುವು. ಆ ಕುದುರೆಗಳ ಅಕ್ಕಪಕ್ಕದಲ್ಲಿ ಸವಾರರಿಗೆ ಬೇಕಾದ ತೋಮರ, ಅಂಕುಶ, ಬಾಣ, ಪತಾಕ ಇವೆಲ್ಲವೂ ಅಳವಡಿಸಿ ಇಡಲ್ಪಟ್ಟಿದ್ದುವು. ಇಂತಹ ಕುದುರೆಗಳ ಗೊರಸಿನ ತುಳಿತದಿಂದ ಭೂಮಿಯೆಲ್ಲ ರಜೋಮಯವಾಗಿದ್ದಿತು. ಅವುಗಳ ಕೆನೆತ ಮತ್ತು ಭೂಷಣಾದಿಗಳಿಂದ ಅವುಗಳ ಮುಖವು ಬಹು ಸುಂದರವಾಗಿ ತೋರಿಬರುತ್ತಿದ್ದಿತು. ॥೩೯-೪೦॥

ಹಾಗೆಯೇ ಬಲಿಷ್ಠರಾದ ಮಾವಟಿಗರಿಂದ ಕೂಡಿ, ತಮ್ಮ ದೊಡ್ಡ ದೊಡ್ಡ ದಂತಾಗ್ರಗಳಲ್ಲಿ ಬಾಣಗಳನ್ನು ಕಟ್ಟಿಸಿಕೊಂಡು, ಉನ್ನತವಾದ ಕುಂಭಸ್ಥಳದಿಂದ ವಿರಾಜಿಸುತ್ತಾ, ಕಿವಿಗಳ ಮೇಲೆ ನೇತಾಡುವ ಚಾಮರಗಳನ್ನು ಧರಿಸಿದ ಮೂವತ್ತು ಕೋಟಿ ಆನೆಗಳು ನೀಲಮೇಘಗಳಂತೆ ಮಂದರಗಿರಿಪ್ರಾಂತವನ್ನು ಆಕ್ರಮಿಸಿ ನಿಂತುವು. ॥೪೧-೪೨॥

ಸುಪತಾಕಾಸ್ಸ್ವವರೋಥಾಃ ಸದಶ್ವಾ ಯಂತ್ರಚೋದಿತಾಃ ।
ರಥನೇಮಿಸ್ವನೈಸ್ತತ್ರ ಗಜಾಶ್ವರವಬೃಂಹಿತೈಃ ॥೪೩॥

ಧೂಯಮಾನಪತಾಕಾಗ್ರೈಃ ಶಂಖದುಂದುಭಿನಿಸ್ವನೈಃ ।
ಬಧಿರೀಕೃತದಿಕ್ಚಕ್ರಾಃ ಪಂಕ್ತಿಶಃ ಸಂಸ್ಥಿತಾಸ್ಸುರೈಃ ॥೪೪॥

ಪ್ರಣೇತುಂ ಶ್ರೀ ಮಹೇಶಾನಂ ತತ್ರ ತತ್ರ ಸ್ವಕಾಃ ಸ್ವಕಾಃ ।
ಗಣೇಂದ್ರಾ ವಾರಣೇಂದ್ರಾಭಾ ನಂದಿಕೇಶಾಜ್ಞಯಾ ಗತಾಃ ॥೪೫॥

ಉದ್ವಾಹಶ್ಶಂಕರಸ್ಯೇತಿ ತತ್ರಾಜಗ್ಮುಃ ಪೃಥಕ್ ಪೃಥಕ್ ।
ಸೂರ್ಯಾಭಾಸಾಃ ಖವರ್ಣಾಶ್ಚ ರಕ್ತನೀಲಾರುಣಪ್ರಭಾಃ ॥೪೬॥

ಸುಪೀತಾ ಹರಿತಾಸ್ತತ್ರ ಯುವಾನೋ ಬಲಶಾಲಿನಃ ।
ಕೋಟ್ಯೋಥ ಸಂಖ್ಯಾ ತೇಷಾಂ ತು ತತ್ರ ನಾಮಾನಿ ಮೇ ಶೃಣು॥೪೭॥

---

ಹಾಗೆಯೇ ಐವತ್ತುಕೋಟಿ ರಥಗಳೂ ಸಿದ್ಧವಾದುವು. ದಿವ್ಯವಾದ ಕುದುರೆಗಳನ್ನು ಕಟ್ಟಿ ಧ್ವಜಪತಾಕೆಗಳನ್ನು ಬಿಗಿದು ಸುಂದರವಾದ ಚಕ್ರಗಳಿಂದ ಶೋಭಿಸುತ್ತಾ ಆ ರಥಗಳು ರಥಿಕರೊಡಗೂಡಿ ಗಂಭೀರಧ್ವನಿಯಿಂದ ಮುಂದುವರಿಯುತ್ತಿದ್ದುವು. ರಥಾಗ್ರದಲ್ಲಿರುವ ಪತಾಕೆಗಳು ಗಾಳಿಗೆ ಶಬ್ದಮಾಡುತ್ತಿದ್ದುವು. ಶಂಖ, ದುಂದುಭಿಧ್ವನಿಯು ಅಲ್ಲಿಂದ ಹೊರಟು ದಿಕ್ಕುಗಳನ್ನೆಲ್ಲಾ ಕಿವುಡಾಗಿಸುತ್ತಿದ್ದುವು. ದೇವತೆಗಳು ಶಿವಸ್ಥಾನದ ಮುಂದೆ ಸಾಲುಸಾಲಾಗಿ ನಿಂತರು. ॥೪೩-೪೪॥

ಅನಂತರ ಮೊದಲು ಮಹಾದೇವನಿಗೆ ನಮಸ್ಕರಿಸಲಿಚ್ಛೆಯಿಂದ ನಂದಿಕೇಶನ ಅನುಮತಿಯಂತೆ ದಿಕ್ಪಾಲಕರೇ ಮೊದಲಾದ ಗಣಾಧಿಪತಿಗಳು ತಮ್ಮ ತಮ್ಮ ಮರ್ಯಾದೆಗಳೊಡನೆ ಮದ್ದಾನೆಗಳಂತೆ ನಿಧಾನವಾಗಿ ಮುಂದೆ ಬಂದು ನಮಸ್ಕರಿಸಿ ಹಿಂದಕ್ಕೆ ಹೋಗುತ್ತಿದ್ದರು. ಪರಶಿವನಿಗೆ ಮದುವೆಯೆಂದು ತಾವಾಗಿಯೇ ತಿಳಿದು ಇನ್ನೂ ಅನೇಕ ಗಣನಾಯಕರು, ಸೂರ್ಯನಂತೆ ಪ್ರಕಾಶಿಸುತ್ತಾ ಕೆಲವರು ಆಕಾಶ ವರ್ಣದವರಾಗಿಯೂ ಮತ್ತೆ ಕೆಲವರು ಕೆಂಪು, ನೀಲಿ ಮುಂತಾದ ವರ್ಣಗಳಿಂದ ಶೋಭಿಸುತ್ತಲೂ ಅಲ್ಲಿಗೆ ಬಂದು ಸೇರುತ್ತಿದ್ದರು. ॥೪೫-೪೬॥

ಅಲ್ಲಿಗೆ ಬಂದಿದ್ದ ಗಣನಾಯಕರಲ್ಲಿ ಕೆಲವರು ಹಳದಿ, ಹಸುರು ಬಣ್ಣಗಳಿಂದ ಶೋಭಿಸುತ್ತಿದ್ದರು. ಅವರೆಲ್ಲರೂ ಬಲಶಾಲಿಗಳಾಗಿಯೂ ಯುವಕರಾಗಿಯೂ ಸುಂದರ

ನಂದಿಕೇಶೋಽಥ ದಶಭಿರ್ಭೈರವೋಽಷ್ಟಾಭಿರೇವ ಚ ।
ಭೃಂಗೀ ದ್ವಿಕೋಟಿಭಿಸ್ತತ್ರರಿಟಿ ಕೋಟ್ಯಾ ಸಮಾಯಯೌ ॥೪೮॥

ಸೋಮನಂದೀ ಚ ಅಯುತಂ ಮಹಾನಂದೀ ನಿಯುತ್ವತಃ ।
ದಶಭಿಃ ಕೇಸರಾಕ್ಷಶ್ಚ ವಿದ್ಯುತೋಽಷ್ಟಾಭಿರೇವ ಚ ॥೪೯॥

ನವಕೋಟ್ಯಾ ವೀರಭದ್ರೋ ಕಾಲಾಗ್ನಿರ್ದಶಭಿಸ್ತಥಾ ।
ಬಾಣತ್ರಯೇಣ ವಿಬಭೌ ಚಂಡೀಶೋ ಪಂಚಭಿರ್ವೃತಃ ॥೫೦॥

ಪಂಚಭಿಸ್ತು ಕಪಾಲೀಶಃ ಷಡ್ಭಿಶ್ಚಾತ್ರ ಪಿಚಂಡಿಲಃ ।
ಕುಂಭಕಶ್ಚ ತುಹುಂಡಶ್ಚ ದ್ವೇ ದ್ವೇ ಕೋಟ್ಯೌ ಸಮಾಯಯುತುಃ ॥೫೧॥

ವಿಷ್ಟಂಭೋ ಕೋಟಿಗಣಪೈರ್ಭೇರುಂಡಶ್ಚಾತ್ರ ಕೋಟಿಶಃ ।
ಪಿಪ್ಪಲಃ ಸನ್ನಥಶ್ಚೈವ ಪ್ರಯುತಂ ನಿಯುತಂ ತಥಾ ॥೫೨॥

---

ರಾಗಿಯೂ ಇದ್ದರು. ಒಬ್ಬೊಬ್ಬ ಪ್ರಮಥನಾಯಕರ ಅಧೀನದಲ್ಲಿ ಈ ಸೈನಿಕರು ಕೋಟ್ಯಂತರ ಸಂಖ್ಯೆಯಲ್ಲಿದ್ದರು. ಅದರಲ್ಲಿ ನಂದಿಕೇಶ್ವರನು ಹತ್ತುಕೋಟಿ, ಭೈರವನು ಎಂಟುಕೋಟಿ, ಭೃಂಗಿಯು ಎರಡುಕೋಟಿ, ರಿಟಿಯು ಒಂದುಕೋಟಿ, ಈ ಸಂಖ್ಯೆಯಲ್ಲಿ ಸೈನಿಕರನ್ನು ಹೊಂದಿದ್ದರು. ॥೪೭-೪೮॥

ಸೋಮನಂದಿಗೆ ಹತ್ತುಸಾವಿರ, ಮಹಾನಂದಿಗೆ ಒಂದು ಲಕ್ಷ, ಕೇಸರಾಕ್ಷನಿಗೆ ಹತ್ತುಸಾವಿರ, ವಿದ್ಯುತನಿಗೆ ಎಂಟುಸಾವಿರ, ವೀರಭದ್ರನಿಗೆ ಒಂಬತ್ತುಕೋಟಿ, ಕಾಲಾಗ್ನಿರುದ್ರನಿಗೆ ಹತ್ತುಕೋಟಿ, ಈರೀತಿ ಸೈನಿಕರ ಸಂಖ್ಯೆಯು ಅವರಿಗೆ ಸಂಬಂಧಿಸಿದ್ದಿತು. ಚಂಡೀಶನು ಮೂರು ಬಾಣಗಳಿಂದಲೂ, ಐದುಕೋಟಿ ಸೈನಿಕರಿಂದಲೂ ಕೂಡಿ ಶೋಭಿಸುತ್ತಿದ್ದನು. ॥೪೯-೫೦॥

ಕಪಾಲೀಶನು ಐದುಕೋಟಿ, ಪಿಚಂಡಿಲನು ಆರುಕೋಟಿ, ಕುಂಭಕ ಕುಹುಂಡರು ಎರಡೆರಡುಕೋಟಿ, ವಿಷ್ಟಂಭ, ಭೇರುಂಡ, ಇವರಿಬ್ಬರು ಒಂದೊಂದು ಕೋಟಿ, ಪಿಪ್ಪಲ ಮತ್ತು ಸನ್ನಥ ಇವರಿಬ್ಬರೂ ಐವತ್ತುಲಕ್ಷ, ಇಪ್ಪತ್ತುಲಕ್ಷ (ಅನಿಯುತ) ಈ ಸಂಖ್ಯೆಯ ಸೈನಿಕರಿಂದ ಕೂಡಿ ಶೋಭಿಸುತ್ತಿದ್ದರು. ॥೫೧-೫೨॥

ಆವೇಶನಸಹಸ್ರೇಣ ನವತ್ಯಾ ದುಂಧುಲೋ ಗಣಃ ।
ಸಪ್ತಾಶೀತಿಸಹಸ್ರೇಣ ಮಹಾಕಾಲಸ್ತು ಕೋಟಿಯುಃ ॥೫೩॥

ಅಭಿಶೋ ದಶಸಾಹಸ್ರೈಃ ಸುಮುಖಃ ಪಂಚಸಾಹಸ್ರಂ ।
ಪಿಂಗಲಸ್ತ್ರಿಂಶತ್ಸಾಹಸ್ರೈಃ ಕುಮುದೋಽಷ್ಟಸಹಸ್ರಕೈಃ ॥೫೪॥

ಪೂರ್ಣಭದ್ರೋಽಯುತೋ ನಾಗಾ ಸುಭದ್ರಃ ಸಪ್ತಭಿರ್ಯಯೌ ।
ವಿಲೋಮಾ ದಶಸಾಹಸ್ರೈಃ ಪಿಂಶಲೋಽಥಾಷ್ಟಭಿರ್ಯಯೌ ॥೫೫॥

ಕುಂಭಾಂಡಃ ಷಟ್‌ಸಹಸ್ರೇಣ ರಣಭದ್ರೋಽಥ ವಿಂಶತಿಃ ।
ಪ್ರಯುಧಾನೋ ವಿಧಾನಶ್ಚ ಅಷ್ಟಾಶೀತಿ ಸಹಸ್ರಕೈಃ ॥೫೬॥

ಏತೇ ಗಣೇಶ್ವರಾಸ್ತತ್ರ ಸಮಾಯಾತಾಃ ಪೃಥಕ್ಪೃಥಕ್ ।
ಏತೇ ಚಾನ್ಯೇಽಪ್ಯಸಂಖ್ಯಾತಾ ತತ್ರಾಜಗ್ಮುರ್ಧೃತಾಯುಧಾಃ ॥೫೭॥

ಸರ್ವೇ ಭಸ್ಮಾವದಾನಾಶ್ಚ ಜಟಾ ಮುಕುಟಧಾರಿಣಃ ।
ನೀಲಕಂಠಾಸ್ತ್ರಿನೇತ್ರಾಶ್ಚ ಹಾರಕೇಯೂರಪನ್ನಗಾಃ ॥೫೮॥

---

ದುಂಧುಲಗಣವು ತೊಂಬತ್ತು ಸಹಸ್ರ, ಮಹಾಕಾಲ ಗಣವು ಎಂಬತ್ತೇಳು ಸಹಸ್ರಕೋಟಿಸಂಖ್ಯೆಯಲ್ಲಿದ್ದುವು. ಅಭಿತನು ಹತ್ತುಸಾವಿರ, ಸುಮುಖನು ಐದು ಸಾವಿರ, ಪಿಂಗಲನು ಮೂವತ್ತುಸಾವಿರ, ಕುಮುದನು ಎಂಟುಸಾವಿರ ಈ ಸಂಖ್ಯೆಯಲ್ಲಿ ಸೈನಿಕರನ್ನು ಹೊಂದಿದ್ದರು. ॥೫೩-೫೪॥

ಪೂರ್ವಭದ್ರನು ಹತ್ತುಸಾವಿರ, ಸುಭದ್ರನು ಏಳುಸಾವಿರ, ವಿಲೋಮನು ಹತ್ತುಸಾವಿರ, ಪಿಂಶಲನು ಎಂಟುಸಾವಿರ, ಕುಂಭಾಂಡನು ಆರುಸಾವಿರ, ರಣಭದ್ರನು ಇಪ್ಪತ್ತುಸಾವಿರ, ಪ್ರಯುಧಾನ ಮತ್ತು ವಿಧಾನರು ಎಂಬತ್ತೆಂಟುಸಾವಿರ ಸಂಖ್ಯೆಯ ಆನೆಗಳ ಸೈನ್ಯವನ್ನು ತಂದಿದ್ದರು. ॥೫೫-೫೬॥

ಹೀಗೆ ಆಯಾಯಾ ಗಣನಾಯಕರು ತಮ್ಮ ತಮ್ಮ ಪರಿವಾರದೊಡನೆ ಪ್ರತ್ಯೇಕಪ್ರತ್ಯೇಕವಾಗಿ ಅಸಂಖ್ಯಾತರೆನಿಸಿ ಆಯುಧಧಾರಿಗಳಾಗಿ ಅಲ್ಲಿಗೆ ಬಂದರು. ಅವರೆಲ್ಲರೂ ಶುಭ್ರವಾದ ಭಸ್ಮವನ್ನು ದೇಹಕ್ಕೆಲ್ಲಾ ಬಳಿದುಕೊಂಡು, ಜಟಾಮುಕುಟಗಳನ್ನು ಧರಿಸಿ, ನೀಲವರ್ಣದ ಕಂಠದಿಂದಲೂ, ಮೂರುಕಣ್ಣುಗಳಿಂದಲೂ, ಹಾರ ಕೇಯೂರಾದಿಗಳಿಂದಲೂ, ನಾಗಾಭರಣಗಳಿಂದಲೂ ವಿರಾಜಿಸುತ್ತಿದ್ದರು. ॥೫೭-೫೮॥

ನಿಷಂಗಿಣೋದಸನ್ನಾಂಗಾ ಶರಕಾರ್ಮುಕಪಾಣಯಃ ।
ಸಮಾಗತಾಂಸ್ತಾನ್ ಗಣಪಾನ್ ನಿವೇದ್ಯ ಸುರಸತ್ತಮಾನ್ ॥೫೯॥

ನಂದಿಕೇಶಃ ಪುರಾ ತಸ್ಥೌ ಹರಿಣಾ ಜಿಷ್ಣುನಾ ತಥಾ ।
ತಾನಾಗತಾನಥ ಜ್ಞಾತ್ವಾ ಮಹಾದೇವೋ ವೃಷಂ ತದಾ ॥೬೦॥

ಚಕ್ರೇ ತುರಂಗಮಾಕಾರಂ ಶ್ವೇತಾಭ್ರಶಿಖರೋಪಮಂ ।
ರತ್ನಪಲ್ಯಾಣಸಂಯುಕ್ತಂ ಮುಖಲೀನಾಸ್ಯಫೇನಿಲಂ ॥೬೧॥

ಸ್ವಯಂ ಚ ಮುಕುಟೋದ್ದಾಮಶೋಭೀ ಚಂದ್ರಾರ್ಕಭಾಸುರಃ ।
ರತ್ನಮುಕ್ತಾಲಸದ್ಧಾರೋ ರತ್ನಗ್ರೈವೇಯಕಾಂಗದಃ ॥೬೨॥

ತ್ರಿಲೋಚನಾರವಿಂದಾಕ್ಷೋ ಲಸದ್ದಿವ್ಯಾಂಬರೋ ಬಭೌ ।
ಸುಮನೋ ವರ್ಷಣಕರ್ೈರಭಿದಷ್ಟೋ ಮಹೇಶ್ವರಃ ॥೬೩॥

---

ಈಶ್ವರನ ಮುಂಭಾಗದಲ್ಲಿ ನಂದೀಶ್ವರನೂ, ವಿಷ್ಣುವೂ, ದೇವೇಂದ್ರನೂ ನಿಂತುಕೊಂಡು, ಅಲ್ಲಿಗೆ ನಮಸ್ಕರಿಸಲು ಧನುರ್ಬಾಣಬತ್ತಳಿಕೆಗಳಿಂದ ಕೂಡಿ ಬಂದಿದ್ದ ಗಣನಾಯಕರ ಪರಿಚಯವನ್ನು ಪರಶಿವನಿಗೆ ಮಾಡಿಕೊಡುತ್ತಿದ್ದರು. ಮಹಾದೇವನು ಹಾಗೆ ಬಂದ ಗಣನಾಯಕರನ್ನು ನೋಡಿ ಸಂತೋಷಪಟ್ಟು, ಅನಂತರ ಮಹೇಶ್ವರನು ತನ್ನ ವಾಹನವಾದ ವೃಷಭವನ್ನು ನೋಡಿದನು ॥೫೯-೬೦॥

ಮತ್ತು ಆ ವೃಷಭವನ್ನು ಮಹಾದೇವನು ಒಂದು ಕುದುರೆಯನ್ನಾಗಿ ಮಾಡಿದನು. ಅದು ಆಗ ಶುಭ್ರವಾದ ಮೇಘದಂತೆ ಬಿಳಿಯ ಕುದುರೆಯಾಯಿತು. ಅದಕ್ಕೆ ರತ್ನಮಯವಾದ ಲಗಾಮು ಅದರ ಬಾಯಿನ ನೊರೆಯಿಂದ ಕೂಡಿದ್ದಾಗಿ ಪ್ರಕಾಶಿಸತೊಡಗಿತು. ಪರಮೇಶ್ವರನು ಸ್ವಯಂ ಸೂರ್ಯಚಂದ್ರರಂತೆ ಶೋಭಿಸುವ ದಿವ್ಯಕಿರೀಟವನ್ನು ಧರಿಸಿಕೊಂಡನು. ರತ್ನ ಮತ್ತು ಮುತ್ತುಗಳಿಂದ ನಿರ್ಮಿತವಾದ ಹಾರವನ್ನು ಕಂಠಕ್ಕೂ, ಪ್ರಕಾಶಮಾನವಾದ ತೋಳು ಬಳೆಯನ್ನು ಭುಜಕ್ಕೂ ಧರಿಸಿಕೊಂಡನು. ॥೬೧-೬೨॥

ಸುಂದರವಾದ ಮೂರು ಕಣ್ಣುಗಳಿಂದಲೂ, ದಿವ್ಯಾಂಬರದಿಂದಲೂ ಮಹೇಶ್ವರನು ಪ್ರಕಾಶಿಸತೊಡಗಿದಾಗ ಕೂಡಲೇ ದೇವತೆಗಳು ಹೂಮಳೆಗರೆದರು. ದೇವ

ದುಂದುಭೀನಾಂ ನಿನಾದೈಶ್ಚ ವೇದಬಂದೀಕೃತಸ್ತವೈಃ ।
ಜಯೇತಿ ಗಣದೇವಾನಾಂ ಸ್ತವೈರ್ನೀರಾಜನೈಃ ಸ್ತ್ರಿಯಾಂ ॥೬೪॥

ನಂದಿನೋ ಹಸ್ತಮಾಲಂಬ್ಯ ತಂಡುಸಂಧೃತಛತ್ರಕಃ ।
ವೀರಭದ್ರೇಣ ಭದ್ರೇಣ ಪಾರ್ಶ್ವೇ ಚಾಮರವೀಜಿತಃ ॥೬೫॥

ರತ್ನಪಾದುಕಪಾದಾಬ್ಜೋ ನಿರ್ಯಯೌ ಸ ಗಣೈಸ್ಸಹೈಃ ।
ಹರಿಣಾ ಚಾಥ ಶಕ್ರೇಣ ಪ್ರೋತ್ಸಾರಿತಸುರಾಸುರಾಃ ॥೬೬॥

ಆಲೋಕನೇನ ಸರ್ವೇಷಾಂ ಪ್ರಣಾಮಾಲಿಂ ಪ್ರಗೃಹ್ಯ ಚ ।
ನದತ್ಸು ಗಜಭೇರೀಷು ಶಂಖಾಧ್ಮಾತಾಸು ದಿಕ್ಷ್ವಪಿ ॥೬೭॥

ವರ್ಷತ್ಸು ಕುಸುಮಾಸಾರಂ ನೃತ್ಯತೀಷ್ವಪ್ಸರಸ್ಸು ಚ ।
ನಾರದಸ್ತುಂಬುರಶ್ಚೈವ ಗೀತೈರ್ಗಾಯಂಶ್ಚ ತತ್ರ ವೈ ॥೬೮॥

---

ದುಂದುಭಿಗಳು ಭೋರ್ಗರೆದುವು. ವೇದಘೋಷಮಾಡುತ್ತಾ ಗಣದೇವತೆಗಳು ಜಯಕಾರಮಾಡಿದರು. ದೇವತಾಸ್ತ್ರೀಯರು ನೀರಾಜನವನ್ನೆತ್ತಿದರು. ॥೬೩-೬೪॥

ಮಹಾದೇವನು ನಂದಿಯ ಕೈಯನ್ನು ಹಿಡಿದು ಮೇಲೆದ್ದನು. ತಂಡುವು ಛತ್ರಿಯನ್ನು ಹಿಡಿದನು. ವೀರಭದ್ರ ಮತ್ತು ಭದ್ರ ಇವರಿಬ್ಬರೂ ಎರಡು ಕಡೆಗಳಲ್ಲಿಯೂ ನಿಂತು ಚಾಮರವನ್ನು ಬೀಸತೊಡಗಿದರು. ರತ್ನಮಯವಾದ ಹಾವುಗೆಗಳನ್ನು ಮೆಟ್ಟಿಕೊಂಡು ಪರಮೇಶ್ವರನು ಅಲ್ಲಿಂದ ಹೊರಡಲು, ಮುಂದುಗಡೆ ವಿಷ್ಣು ಮತ್ತು ಇಂದ್ರ ಇವರಿಬ್ಬರೂ ದೇವರಾಕ್ಷಸರನ್ನು ಮುಂದಕ್ಕೆ ತಳ್ಳುತ್ತಾ ಪರಮೇಶ್ವರನಿಗೆ ದಾರಿಬಿಡಿಸುತ್ತಾ ಬರುತ್ತಿದ್ದರು. ॥೬೫-೬೬॥

ಮಹಾದೇವನು ಅಕ್ಕಪಕ್ಕದಲ್ಲಿ ತನಗೆ ನಮಸ್ಕರಿಸುತ್ತಿರುವವರನ್ನು ನೋಡುತ್ತಾ, ಅವರ ಪ್ರಣಾಮಗಳನ್ನು ಸ್ವೀಕರಿಸುತ್ತಾ ಮುಂದುವರಿದನು. ಆಗ ಆನೆಯ ನಗಾರಿಗಳ ಧ್ವನಿ, ಶಂಖಧ್ವನಿ ಇವು ದಿಗಂತಗಳನ್ನು ವ್ಯಾಪಿಸಿದುವು. ಪುಷ್ಪವೃಷ್ಟಿಯು ಸುರಿಯಲಾರಂಭವಾಯಿತು. ಅಪ್ಸರಸ್ತ್ರೀಯರು ನರ್ತಿಸತೊಡಗಿದರು. ನಾರದರು, ತುಂಬುರರು, ವಿಧವಿಧವಾದ ಶಿವಸ್ತುತಿಗಳನ್ನು ಹಾಡತೊಡಗಿದರು. ॥೬೭-೬೮॥

ತುಂಗಂ ತುರಂಗಮಧಿರುಹ್ಯ ಪಿನಾಕಪಾಣಿ
ರಕ್ಷಾಧಿಪೈಃ ಸುರವರೈರ್ಗಣವೃಂದಸಂಘೈಃ ।
ಪಾದಾತಿಭಿರ್ಹರಿಮುಖಾಮರಸಿದ್ಧಸಾಧ್ಯೈಃ
ಸಂಪೂಜಿತೋ ಗಿರಿವರಸ್ಯ ಗೃಹಂ ಜಗಾಮ ॥೬೯॥

ತುಂಗಾತ್ತುರಂಗ ಮುಖಲೀನವಿಚಾಲನೇನ
ನೃತ್ಯತ್ಪದಾಹತಿಮುಖೋದ್ಧೃತಪಾದಯುಗ್ಮಂ ।
ಮಾಯೂರವೀಜನ ಸುವೀಜಿತ ಚಾಮರೋಘೈ
ಶ್ಛತ್ರಾವೃತಾಸ್ಯಮಗಜಾಪತಿಮೀಕ್ಷ್ಯ ಹೃಷ್ಟಾಃ ॥೭೦॥

ಹಿಮಾಚಲಗೃಹಂ ಯಯೌ ಸುರವರೈರ್ಗಣೇಂದ್ರೈರ್ಹರೋ
ನದತ್ಸು ಗಜಪೃಷ್ಠಗಾ ಸುಜಿತಶಾಬ್ಧಿ ಭೇರೀರವೈಃ ।
ಸುವರ್ಷಿತ ಸುರಾಂಗನಾ ಕುಸುಮಸಾರಸಾದ್ರಾರ್ಕ್ಷತೈಃ
ಸುರೋರುಸುಪತಾಕಿನೀ ಜಲದಸಾರವೃಂತಾಗ್ರಕೈಃ ॥೭೧॥

---

ಈ ವೈಭವದಲ್ಲಿ ಪಿನಾಕಪಾಣಿಯಾದ ಮಹಾದೇವನು ತನ್ನ ಆ ಎತ್ತರವಾದ ಕುದುರೆಯನ್ನೇರಿ, ಸುರವರರಿಂದಲೂ, ತನ್ನ ಪ್ರಮಥಗಣಗಳಿಂದಲೂ, ಪದಾತಿ ಸೈನ್ಯದಿಂದಲೂ, ವಿಷ್ಣುವೇ ಮೊದಲಾದ ದೇವತೆಗಳಿಂದಲೂ, ಕೂಡಿ ಸೇವಿಸಲ್ಪಡುತ್ತಾ ಹಿಮಗಿರಿರಾಜನ ಗೃಹಾಭಿಮುಖವಾಗಿ ಪ್ರಯಾಣಬೆಳೆಸಿದನು. ॥೬೯॥

ಪರಶಿವನು ಎತ್ತರವಾದ ಕುದುರೆಯ ಮೇಲೆ ಕುಳಿತು ಅದರ ಬಾಯಿಂದ ಬಂದಿರುವ ಕಡಿವಾಣವನ್ನು ಹಿಡಿದೆಳದೊಡನೆಯೇ ಆ ಕುದುರೆಯು ತನ್ನ ಸ್ವಾಭಾವಿಕವಾದ ಕುಣಿತದಿಂದ ಮಹಾದೇವನ ಶರೀರವು ಅಲ್ಲಾಡುವಂತೆ ಮಾಡುತ್ತಿದ್ದಿತು. ಅಲ್ಲದೆ ಅಕ್ಕಪಕ್ಕದಲ್ಲಿ ನವಿಲುಗರಿಯ ಬೀಸಣಿಗೆಗಳಿಂದಲೂ, ಚಾಮರಗಳಿಂದಲೂ ಸೇವಿಸಲ್ಪಡುವ ಶಂಕರನ ಮುಖವು ಶ್ವೇತಚ್ಛತ್ರಿಯಿಂದ ಆಗಾಗ ನೋಡುವವರಿಗೆ ಸುಲಭವಾಗಿ ಕಾಣುತ್ತಿರಲಿಲ್ಲ. ಇಂತಹ ಮಹೇಶ್ವರಮೂರ್ತಿಯನ್ನು ನೋಡಿ ಎಲ್ಲರೂ ಆನಂದಪಡುತ್ತಿದ್ದರು. ॥೭೦॥

ಆನೆಯ ಮೇಲೆ ಬಾರಿಸುವ ನಗಾರಿಯ ಶಬ್ದವು ಸಮುದ್ರಘೋಷವನ್ನು ತಿರಸ್ಕರಿಸುತ್ತಿದ್ದಿತು. ದೇವತಾಸ್ತ್ರೀಯರು ಪುಷ್ಪವೃಷ್ಟಿಯನ್ನೂ ನೆನೆದ ಅಕ್ಷತೆಯನ್ನೂ ಸಂತೋಷಾರ್ಥವಾಗಿ ಸುರಿಸುತ್ತಿದ್ದರು. ದೇವತೆಗಳು ಗುಂಪುಗುಂಪಾಗಿ ಮುಂದುವರಿ

ನದತ್ಸು ಗಜಬೃಂಹಿತೈರ್ಹಯವರೋರುಹೇಷಾಸ್ವನೈಃ ।
ರಥಾಂಗಪರಿವರ್ತನೈಃ ಶ್ರುತಿವರಾಸ್ಯಸಾರಸ್ತವೈಃ ॥೭೨॥

ದ್ಯೋತಂತಿ ತತ್ರ ಗಣಪಾಃ ಕಿಲ ಕಾಮರೂಪಾಃ
ಶೂಲಾಸಿಬಾಣವರಹಸ್ತಧೃತೋರ್ಧ್ವಚಾಪಾಃ ।
ದೇಹಪ್ರಭಾವಿಜಿತತಪ್ತಸುಜಾತರೂಪಾ
ಯೂಪಾ ಇವೋಗ್ರನಿಕರಾ ಅಪಿ ಭೂಪರೂಪಾಃ ॥೭೩॥

ಕೂಪಾ ಇವಾಕ್ಷ್ಯನಲರೂಕ್ಷಜಗದ್ವಿಭೂಪಾಃ ।
ಈಶಾನಪೂಜನನಿರಸ್ತಸಮಸ್ತಪಾಪಾಃ ॥೭೪॥

---

ಯುತ್ತಾ, ಮೇಲಿನಿಂದ ಬೀಳುವ ಹೂಗೊಂಚಲುಗಳನ್ನು ನೋಡಿ ಆನಂದಪಡು ತ್ತಿದ್ದರು. ಈರೀತಿ ವೈಭವದಿಂದ ಮಹಾದೇವನು ಹಿಮಗಿರಿಗೆ ಪ್ರಯಾಣಬೆಳೆಸಿದನು. ॥೭೧॥

ಆನೆಗಳು ಘೀಂಕರಿಸುತ್ತಿದ್ದುವು. ಕುದುರೆಗಳು ಸಂತೋಷದಿಂದ ಕೆನೆಯು ತ್ತಿದ್ದುವು. ರಥ ಚಕ್ರ ಧ್ವನಿಯು ಮೃದುವಾಗಿ ಕೇಳಿಬರುತ್ತಿದ್ದಿತು. ಋಷಿಗಳೂ ವೇದಮಂತ್ರೋಚ್ಚಾರಣೆಯಿಂದ ಮಹಾದೇವನನ್ನು ನಾನಾರೀತಿ ಸ್ತುತಿಸುತ್ತಿದ್ದರು. ಇಂತಹ ಪ್ರಯಾಣ ವೈಭವದಿಂದ ಮಹಾದೇವನು ಹಿಮಗಿರಿಗೆ ತೆರಳಿದನು. ॥೭೨॥

ಗಣನಾಯಕರು ತಮ್ಮ ಇಷ್ಟಬಂದ ಆಕಾರವನ್ನು ಧರಿಸಿದವರಾಗಿ ಕೈಯಲ್ಲಿ ತ್ರಿಶೂಲ, ಕತ್ತಿ, ಬಾಣ, ಬಿಲ್ಲು ಮುಂತಾದುವುಗಳನ್ನು ಹಿಡಿದು ಪರಶಿವನನ್ನು ಹಿಂಬಾಲಿಸುತ್ತಿದ್ದರು. ಅವರೆಲ್ಲರೂ ಪರಮೇಶ್ವರನ ದೇಹಕಾಂತಿಯಿಂದ ಕೂಡಿ ಸುವರ್ಣಮಯವಾದ ಯೂಪಸ್ತಂಭದಂತೆ ವಿರಾಜಿಸುತ್ತಾ ರಾಜಸದೃಶವಾದ ವೇಷ ದಿಂದ ಕೂಡಿದವರಾಗಿ ನೋಡುವುದಕ್ಕೆ ಭಯಂಕರರೂ ಆಗಿದ್ದರು. ॥೭೩॥

ಪರಶಿವನ ನೇತ್ರಾಗ್ನಿಯಿಂದ ಧ್ವಂಸವಾಗುವ ಜಗತ್ತಿಗೆ ತಂಪಾದ ಬಾವಿ ಯಂತಿರುವ ಆ ಶಿವಗಣಗಳು ಈಶ್ವರ ಪಾದಪೂಜಾಬಲದಿಂದ ತಮ್ಮ ಪಾಪರಾಶಿ ಯನ್ನೆಲ್ಲಾ ಕಳೆದುಕೊಂಡಿರುವರು. ಆ ಗಣನಾಯಕರು ಅನೇಕ ಬಿಲ್ಲು ಬಾಣ ಗಳನ್ನು ಹಿಡಿದು, ತಮ್ಮ ಶಿರೋಭಾಗದಲ್ಲಿ ಚಂದ್ರಲೇಖೆಯನ್ನೂ ಜಟಾಜೂಟ ವನ್ನೂ ಧರಿಸಿ, ಸಾಕ್ಷಾದೀಶ್ವರಸ್ವರೂಪದಿಂದಲೇ ತೋರಿಬರುತ್ತಿದ್ದರು. ಹಣೆಯಲ್ಲಿ

ಧೃತಬಾಣಗಣಾ ಗಣೇಶ್ವರಾಢ್ಯಾ
ಭಗಣೇಶಾನವಿಲಾಸಿಸತ್ಕಪರ್ದಾಃ ।
ಫಣಿಭಸ್ಮವಿಭೂಷಣಾ ಯಯುರ್ವೈ
ಉಗಣಂ ತೇ ಶರಣಂ ಹೃದಾ ಪ್ರಪನ್ನಾಃ ॥೭೫॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಶಿವಸೇನಾವರ್ಣನಂ ವಿವಾಹಾರ್ಥಂ ಮಂದರಾದ್ರಿಮಾಚಲಂ
ಪ್ರತ್ಯಾಗಮನಂ ನಾಮ ಸಪ್ತದಶೋಽಧ್ಯಾಯಃ

---

ಶುದ್ಧಭಸ್ಮವನ್ನೂ ಸರ್ಪವನ್ನೂ ಅಲಂಕರಿಸಿಕೊಂಡು ಸದಾ ತಮ್ಮ ಹೃದಯದಲ್ಲಿ ಪರಶಿವನನ್ನೇ ಸ್ಮರಿಸುತ್ತಾ ಶಂಕರನ ಉತ್ಸವ ಸಮಾರಂಭದಲ್ಲಿ ಭಾಗವಹಿಸಿ ಸಂತೋಷದಿಂದ ಮುಂದುವರಿಯುತ್ತಿದ್ದರು. ॥೭೪-೭೫॥

ಇಲ್ಲಿಗೆ ಹನ್ನೆರಡನೆಯ ಅಂಶದಲ್ಲಿ ಶಿವಸೇನಾವರ್ಣನೆ ಮತ್ತು ಮಂದರಗಿರಿಯಿಂದ
ಹಿಮಾಚಲಕ್ಕೆ ಶಿವಪ್ರಯಾಣವರ್ಣನೆ ಇವುಗಳನ್ನು ತಿಳಿಸುವ
ಹದಿನೇಳನೆಯ ಅಧ್ಯಾಯವು ಮುಗಿದುದು.

ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಅಷ್ಟಾದಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ವೃಷಾಶ್ವಾದವರುಹ್ಯೇಶೋ ನಂದಿನಾ ದತ್ತಸತ್ಕರಃ ।
ರತ್ನಭ್ರಾಜಿತಪಾದಾಬ್ಜಯುಗಲಾಲಂಬಿಪಾದುಕಃ ॥೧॥

ಗಿರಿರಾಜಸುವಿಸ್ತೀರ್ಣದ್ವಾರಿರೋಧಸುರಾಸುರಾಃ ।
ಹರಿಶಕ್ರಕರಸ್ಫೂರ್ಜದ್ವೇತ್ರಪ್ರೋತ್ಸಾರಿತಾಮರಃ ॥೨॥

ರತ್ನಪಾತ್ರಕರದ್ಯೋತಿನೀರಾಜ್ಯಾತಿಸುವಸೌಕ್ತಿಕಃ ।
ಅಕ್ಷತೋತ್ಕೀರ್ಣಮುಕುಟಿಸ್ತಾರಾ ಇವ ನಭಚ್ಯುತಾಃ ॥೩॥

---

## ಹದಿನೆಂಟನೆಯ ಅಧ್ಯಾಯ

ಹಿಮಾಚಲವನ್ನು ಸೇರಿದ ಮೇಲೆ ಪರಮೇಶ್ವರನು ಅಶ್ವರೂಪಿಯಾಗಿದ್ದ ವೃಷಭದಿಂದ ಕೆಳಗಿಳಿದು ನಂದೀಶ್ವರನಿಂದ ಕರಾವಲಂಬನವನ್ನು ಹೊಂದಿ, ರತ್ನಮಯವಾದ ಪಾದುಕೆಗಳಿಂದ ವಿರಾಜಿಸುವ ಪಾದಯುಗಳಗಳಿಂದ ನಿಧಾನವಾಗಿ ಮುಂದುವರಿದನು. ಶಿವನ ಮುಂದೆ ಮತ್ತು ಹಿಂದೆ ಬಂದಿದ್ದ ದೇವರಾಕ್ಷಸರೆಲ್ಲಾ ಗಿರಿರಾಜನ ಅರಮನೆಯ ಬಾಗಿಲಿನಲ್ಲಿಯೇ ನಿಂತುಬಿಟ್ಟರು. ವಿಷ್ಣುವೂ, ಇಂದ್ರನೂ, ತಮ್ಮ ಕೈಗಳಲ್ಲಿ ಬೆತ್ತವನ್ನು ಹಿಡಿದು ಮೇಲೆ ಮೇಲೆ ಬರುವ ದೇವತೆಗಳನ್ನೆಲ್ಲಾ ಹಿಂದಕ್ಕೆ ತಳ್ಳುತ್ತಿದ್ದರು. ॥೧-೨॥

ಪರಶಿವನಿಗೆ ಸುವಾಸಿನಿಯರು ರತ್ನಪಾತ್ರೆಗಳಲ್ಲಿ ಬೆಳಗುವ ನೀರಾಜನವನ್ನೂ, ಮುತ್ತಿನಾರತಿಯನ್ನೂ ಬೆಳಗಿದರು. ಪರಶಿವನ ಮೇಲೆ ಎರಚಿದ ಅಕ್ಷತೆಯು

ನಗಾಂಗನಾಕರಾಕೀರ್ಣಸುಮಲಾಜಾಹಿರಣ್ಮಜೈಃ ।
ವಿಕಿರಂತ್ಯೇವ ಗಿರಯಃ ಪ್ರಣಾಮಮುಖರಾಃ ಶಿವಂ ॥೪॥

ತದಾ ವಿವೇಶ ಭಗವಾನ್ ಗಿರಿರಾಜಗೃಹಂ ಮಹತ್ ।
ವಿವಾಹಮಂಡಪಂ ಚಿತ್ರಂ ಬ್ರಹ್ಮಣಾ ಮುನಿಭಿರ್ಯುತಂ ॥೫॥

ಸ ಬ್ರಹ್ಮಾದ್ಯಾಶ್ಚ ಮುನಯಃ ಪ್ರಣೇಮುರ್ಭಕ್ತಿನಿರ್ಭರಾಃ ।
ಪುರಃಸ್ಥಿತಂ ಗಣೇಶಾನಂ ಪ್ರಣತಂ ಪಾದಯೋಶ್ಶಿವಂ ॥೬॥

ಉತ್ಥಾಪ್ಯಾಲಿಂಗ್ಯ ಚಾಘ್ರಾಯ ಕುಂಭಾಸ್ಯೋದ್ಗತಕುಂಭಿತತ್ ।
ಬ್ರಹ್ಮಣಾಜ್ಞಾಪಿತೋ ದೇವೋ ಗೌರ್ಯಾಃ ಪುತ್ರಃ ಪ್ರಪೂಜ್ಯತಾಂ ॥೭॥

ಇತ್ಥಂ ಗಣೇಶಂ ದೇವೇಶಃ ಸುರೈರ್ದ್ವಿಜಗಣೈರ್ಗಣೈಃ ।
ಸಂಪೂಜ್ಯ ಪುಷ್ಪಗಂಧೈಶ್ಚ ಫಲೈರ್ವಾಸೋವಿಭೂಷಣೈಃ ॥೮॥

---

ಆಕಾಶದಿಂದ ಬೀಳುವ ನಕ್ಷತ್ರಗಳಂತೆ ಕಂಗೊಳಿಸುತ್ತಿದ್ದುವು. ಗಿರಿರಾಜಪತ್ನಿಯರು ಹೂವು, ಅರಳು, ಸುವರ್ಣ ಇವುಗಳಿಂದ ಪರಶಿವನನ್ನು ಪೂಜಿಸಿದರು. ಇತರ ಗಿರಿಗಳು ಪರಮೇಶ್ವರನಿಗೆ ವಂದಿಸಿದರು. ॥೩-೪॥

ಪರಶಿವನು ಪ್ರೀತಿಯಿಂದ ಗಿರಿರಾಜಗೃಹದ ಒಳಹೊಕ್ಕು, ಮನೋಹರವಾಗಿ ನಿರ್ಮಿತವಾಗಿದ್ದ ವಿವಾಹಮಂಟಪವನ್ನು, ಬ್ರಹ್ಮನಿಂದಲೂ ಇತರ ಮಹರ್ಷಿಗಳಿಂದಲೂ ಕೂಡಿದವನಾಗಿ ಪ್ರವೇಶಿಸಿದನು. ಕೂಡಲೆ ಅಲ್ಲಿ ನೆರೆದಿದ್ದ ಬ್ರಹ್ಮಾದಿ ಮಹರ್ಷಿಗಳೆಲ್ಲರೂ ಭಕ್ತಿಸಂಪನ್ನರಾಗಿ ಮಹಾದೇವನಿಗೆ ವಂದಿಸಿದರು. ಅಲ್ಲಿಯೇ ಗಣಪತಿಯೂ ಸಹ ಪರಶಿವನ ಪಾದಗಳಿಗೆ ಭಕ್ತಿಯಿಂದ ನಮಸ್ಕರಿಸಿದನು. ॥೫-೬॥

ಪರಶಿವನು ಆ ತನ್ನ ಪ್ರಿಯಪುತ್ರನನ್ನು ಎತ್ತಿಕೊಂಡು ಆಲಿಂಗಿಸಿ ಆ ಗಜಮುಖನನ್ನು ಯಥಾಸ್ಥಾನದಲ್ಲಿ ಕುಳ್ಳಿರಿಸಿದನು. ಅನಂತರ ಬ್ರಹ್ಮನು ಸಕಲ ದೇವತೆಗಳನ್ನೂ ಕೂಗಿ, "ಈತನು ಗೌರೀದೇವಿಯ ಪುತ್ರನು. ಈತನನ್ನು ಸರ್ವರೂ ಪೂಜಿಸಿರಿ" ಎಂದು ಆಜ್ಞಾಪಿಸಲು ಬ್ರಹ್ಮನ ಆಜ್ಞೆಯಂತೆ ಎಲ್ಲಾ ದೇವತೆಗಳೂ, ಗಣನಾಯಕರೂ ಆ ಗಜಮುಖನನ್ನು ಹೂವು, ಗಂಧ, ಫಲ, ವಸ್ತ್ರ, ಭೂಷಣ ಇವುಗಳಿಂದ ವಿಶೇಷವಾಗಿ ಪೂಜಿಸಿದರು. ॥೭-೮॥

॥ ಶ್ರೀ ಈಶ್ವರ ಉವಾಚ ॥

ಉವಾಚ ವರದೋ ದೇವೋ ಮಹಾದೇವಸ್ತದಾ ಮುದಾ ॥೯॥

ಮಾಂ ವಾ ನಾರಾಯಣಂ ವಾಪಿ ಬ್ರಹ್ಮಾಣಂ ವಾಪಿ ಪುತ್ರಕ ।
ತ್ವಾಮನಭ್ಯರ್ಚ್ಯ ಕಾರ್ಯೇಷು ವಿಘ್ನಸ್ತೇಷಾಂ ಭವಿಷ್ಯತಿ ॥೧೦॥

ತ್ವಾಂ ಗಂಧಪುಷ್ಪಧೂಪಾದ್ಯೈಃ ಪರಿಪೂಜ್ಯಾದಿಮಂ ಸುರಾಃ ।
ಲಭಂತಿ ವಾಂಛಿತಾನ್ ಕಾಮಾನ್ ತ್ರಿಸ್ಸತ್ಯಂ ಪ್ರವದಾಮ್ಯಹಂ ॥೧೧॥

ಬ್ರಹ್ಮವಿಷ್ಣ್ವಾದಯೋ ದೇವಾ ಗಣೈರ್ದ್ವಿಜವರೈಸ್ಸಹ ।
ಗೌರ್ಯಾಃ ಪುತ್ರಂ ಚ ಮತ್ಪ್ರೀತ್ಯೈ ಗಣಪಃ ಪೂಜ್ಯತಾಂ ಸ್ತವೈಃ ॥೧೨॥

ಶಿವಾಜ್ಞಾಂ ಶಿರಸಾ ಗೃಹ್ಯ ಬ್ರಹ್ಮವಿಷ್ಣ್ವಾದಯೋ ಗಣಾಃ ।
ಸಂಪೂಜ್ಯ ಫಲಪುಷ್ಪಾದ್ಯೈರ್ಭಕ್ಷ್ಯಭೋಜ್ಯೈಸ್ಸ್ತವನ್ತದಾ ॥೧೩॥

॥ ದೇವಾ ಊಚುಃ ॥

ಪಾಶಾಂಕುಶಕರಾಸಕ್ತಮೋದಕಂ ವಿಘ್ನಮೋದಕಂ ।
ಬೋಧಕಂ ಸರ್ವಶಾಸ್ತ್ರಾಣಾಂ ಭಜಾಮೋ ವಿಘ್ನನಾಶಕಂ ॥೧೪॥

---

ಆ ಸಮಯದಲ್ಲಿ ಮಹಾದೇವನು ಗಣಪತಿಗೆ ಈರೀತಿ ಉತ್ತರವಿತ್ತನು. "ಪುತ್ರನೇ, ಇನ್ನು ಮುಂದೆ ನನ್ನನ್ನಾಗಲಿ, ವಿಷ್ಣು ಬ್ರಹ್ಮರನ್ನಾಗಲಿ ಅರ್ಚಿಸಬೇಕಾದರೆ ಮೊದಲು ನಿನ್ನನ್ನು ಪೂಜಿಸಬೇಕು. ಹಾಗೆ ಮೊದಲು ಮಾಡುವ ನಿನ್ನ ಅರ್ಚನೆಯನ್ನು ತಿರಸ್ಕರಿಸಿದವರಿಗೆ ನಾನಾವಿಧವಾದ ವಿಘ್ನಗಳು ಅವರಿಗೆ ಒದಗಲಿ. ದೇವತೆಗಳು ತಮ್ಮ ಕಾರ್ಯಸಿದ್ಧಿಯನ್ನು ಪಡೆಯಬೇಕಾದರೆ ಮೊದಲು ನಿನ್ನನ್ನು ಅವರು ಗಂಧಪುಷ್ಪಾದಿಗಳಿಂದ ಅರ್ಚಿಸಬೇಕು. ಹಾಗಾದರೇ ಅವರ ಇಷ್ಟಾರ್ಥಗಳು ಕೈಗೂಡುವುವು. ಇದು ಸತ್ಯ. ಶಪಥಪೂರ್ವಕವಾಗಿ ಬಾರಿಬಾರಿಗೂ ಹೇಳುವೆನು. ॥೯-೧೦-೧೧॥

ಈಗ ಬ್ರಹ್ಮ, ವಿಷ್ಣು ಮುಂತಾದ ಎಲ್ಲ ದೇವತೆಗಳೂ, ಗಣನಾಯಕರೂ, ದ್ವಿಜವರರೂ, ಗೌರಿಯ ಪುತ್ರನಾದ ಈ ಗಣಪತಿಯನ್ನು ನನ್ನ ಪ್ರೀತ್ಯರ್ಥವಾಗಿ ಪೂಜಿಸಲಿ" ಎಂದು ಶಿವನು ಆಜ್ಞಾಪಿಸಿದುದನ್ನು ಕೇಳಿ ಬ್ರಹ್ಮವಿಷ್ಣ್ವಾದಿ ಸಕಲ ದೇವತೆಗಳೂ ಗಣನಾಯಕನನ್ನು ಗಂಧಪುಷ್ಪಾದಿಗಳಿಂದಲೂ, ಭಕ್ಷ್ಯಭೋಜ್ಯಾದಿಗಳಿಂದಲೂ ತೃಪ್ತಿಪಡಿಸಿ ಈರೀತಿ ಸ್ತೋತ್ರಮಾಡಿದರು. ॥೧೨-೧೩॥

ನೇತಂಡಗಂಡಶಶಿಖಂಡಚೂಡಂ
ದಾನೋದಗಂಡಂ ನತದೇವಷಂಡಂ ।
ಸ್ವಭಕ್ತವಿಘ್ನಾರ್ತಿಹರಪ್ರಚಂಡಂ
ನಮಾಮ್ಯಖಂಡಂ ಸುಬೃಹತ್ಪಿಚಂಡಂ ॥೧೫॥

ನಾಕಿನಾಯಕನತಾಬ್ಜಪಾದುಕಂ
ವಿಘ್ನನಾಶಕವಿನಾಯಕಂ ಭಜೇ ।
ವಿಷ್ಣುಸಾಯಕಸುಭಕ್ತಿದಾಯಕಂ
ಪ್ರಣಮತಾದ್ಯ ಸುರಾ ಗಣನಾಯಕಂ ॥೧೬॥

ಹೃದಂತರ್ವಿಭಾಂತಂ ಧಿಯಾಂ ಚೋದಯಂತಂ
ಉಮಾಕಾಂತಮೋದಪ್ರದಂ ಸತ್ಸುತಂ ತಂ ।
ಪ್ರಶಾಂತಂ ಸುದಂತಂ ಹಸಂತಂ ನದಂತಂ
ವಸಂತಂ ಮುದಾ ತಂ ಭಜಾಮ್ಯೇಕದಂತಂ ॥೧೭॥

---

" ಪಾಶ, ಅಂಕುಶ, ಕಡುಬು ಮುಂತಾದುವುಗಳನ್ನು ಕೈಯಲ್ಲಿ ಹಿಡಿದು, ಭಕ್ತರ ವಿಘ್ನಗಳನ್ನೆಲ್ಲಾ ಪರಿಹರಿಸುವ ವಿಘ್ನೇಶ್ವರನೇ, ನೀನು ಸರ್ವಶಾಸ್ತ್ರ ಬೋಧಕನು. ವಿಘ್ನನಾಶಕನು. ಗಜಮುಖನು. ನೀನು ಚಂದ್ರಕಲೆಯನ್ನು ಶಿರಸ್ಸಿನಲ್ಲಿ ಧರಿಸಿರುವೆ. ಮದೋದಕವನ್ನು ಸುರಿಸುತ್ತಾ ದೇವಸಮೂಹದಿಂದ ವಂದಿತನಾಗಿ, ತನ್ನ ಭಕ್ತರ ಪೀಡೆಯನ್ನೆಲ್ಲಾ ಪರಿಹರಿಸುವ ಮಹೋದರನೆನಿಸಿದ ಮಹಾಗಣಪನೇ, ನಿನಗೆ ವಂದನೆ. ಸದಾ ನಿನಗೆ ಎರಗುವೆನು. ॥೧೪-೧೫॥

ದೇವೇಂದ್ರನಿಂದಲೂ ಪೂಜಿತನಾಗಿ ಸಕಲ ವಿಘ್ನವಿನಾಶಕನಾದ ವಿನಾಯಕ ನನ್ನು ನಾನು ತಪ್ಪದೆ ಸೇವಿಸುವೆನು. ವಿಷ್ಣುವಿಗೂ ಬಾಣರಾಶಿಯನ್ನೂ ಭಕ್ತಿಯನ್ನೂ ದಯಪಾಲಿಸುವಂತಹ ದೇವಗಣನಾಯಕನಾದ ವಿಘ್ನೇಶ್ವರನನ್ನು, ಎಲೈ ದೇವತೆ ಗಳಿರಾ ತಪ್ಪದೆ ಧ್ಯಾನಮಾಡಿರಿ. ಸರ್ವದಾ ಪೂಜೆಮಾಡಿರಿ. ॥೧೬॥

ಭಕ್ತರ ಹೃದಯಕುಹರದಲ್ಲಿ ಸ್ಫುರಿಸುವವನೂ, ಬುದ್ಧಿಪ್ರಚೋದಕನೂ, ಪಾರ್ವತೀಪತಿಗೆ ಸಂತೋಷಪ್ರದನೂ, ದೇವದೇವನ ಸತ್ಪುತ್ರನೂ, ಶಾಂತಸ್ವಭಾವ ದವನೂ, ಶ್ರೇಷ್ಠವಾದ ದಂತಭಾಗವುಳ್ಳವನೂ, ಸದಾ ಪ್ರಸನ್ನನಾಗಿದ್ದು ಸರ್ವದಾ ತೃಪ್ತನಾಗಿರುವವನೂ ಆದ ಏಕದಂತನನ್ನು ಸದಾ ಧ್ಯಾನಿಸುವೆನು. ॥೧೭॥

ಸುರಾವನಂ ಸುಪಾವನಂ ರಣಾವನೀಹುತಾಶನಂ
ಸತಾಂ ಹೃದೈಕವಾಸಿನಂ ಭಜಾಮ ತಂ ಗಜಾನನಂ ।
ಸನಾತನಂ ನಿರಂಜನಂ ಫಲಾದಿಸಾರಭೋಜನಂ
ಸ್ವಭಕ್ತವಿಘ್ನನಾಶನಂ ಭಜಾಮ ತಂ ಗಜಾನನಂ ॥೧೮॥

ಚರಾಚರಾದಿಕಾರಣಂ ಸ್ವಭಕ್ತಪಾಪಹಾರಿಣಂ
ಭವಾಂಬುಧೇಸ್ಸುತಾರಣಂ ಪ್ರಶಾಂತಕಾಮಪೂರಣಂ ।
ಗಜಾನನಂ ಪ್ರಸಾದನಂ ಪಠಂತಿ ಯೇ ಮನೀಷಿಣೋ
ನ ತೇಷು ದುಃಖಿತಾನನಂ ಭವೇನ್ಮಹಾಘಭೇದನಂ ॥೧೯॥

ಇತಿ ಸಂಸ್ತುತ್ಯ ಸಂಪೂಜ್ಯ ಗಣೇಶಂ ಸುರಸತ್ತಮಾಃ ।
ಸಮಾಯಾತಾಥ ಗಿರಿರಾಣ್ಮೇನಯಾ ಸಹ ತತ್ರ ವೈ ॥೨೦॥

ವೇದಿಂ ಪ್ರವೇಶಯಾಮಾಸ ಮಹಾದೇವಂ ಸುರೈಸ್ತದಾ ।
ರತ್ನಸಿಂಹಾಸನೇ ದಿವ್ಯೇ ಸಂಸ್ಥಾಪ್ಯ ಪರಮೇಶ್ವರಂ ॥೨೧॥

---

ಗಜಮುಖನೆನಿಸಿದ ವಿಘ್ನೇಶ್ವರನು ದೇವತೆಗಳನ್ನೂ ರಕ್ಷಿಸುವವನು. ಅವನು ಸರ್ವದಾ ಪವಿತ್ರಮೂರ್ತಿಯು. ರಣರಂಗದಲ್ಲಿ ಅಗ್ನಿಯಂತೆ ಜ್ವಲಿಸುವವನು. ಸತ್ಪುರುಷರ ಹೃದಯಕುಹರವಾಸಿಯು. ಆದ್ಯಂತರಹಿತನು. ಪಾಪದೂರನು. ಫಲಸಾರವನ್ನು ಭಕ್ಷಿಸುವವನು. ಭಕ್ತರ ವಿಘ್ನರಾಶಿಯನ್ನು ದೂರೀಕರಿಸುವವನು. ಇಂತಹ ಮಹಾದೇವನನ್ನು ಸದಾ ಸೇವಿಸೋಣ. ॥೧೮॥

ಚರಾಚರಾತ್ಮಕವಾದ ಸಕಲ ಜಗತ್ತಿಗೂ ಮೂಲಕಾರಣನೆನಿಸಿ ಭಕ್ತರ ಪಾಪರಾಶಿಯನ್ನು ನಿರ್ಮೂಲಗೊಳಿಸುವ ವಿಘ್ನೇಶ್ವರನು ಸಂಸಾರಸಾಗರದಿಂದ ಭಕ್ತರನ್ನು ಉದ್ಧರಿಸಬಲ್ಲನು. ಮತ್ತು ಶಾಂತಾತ್ಮರಾದವರ ಇಷ್ಟಾರ್ಥವನ್ನು ಪೂರ್ಣಗೊಳಿಸಬಲ್ಲನು.. ಇಂತಹ ಗಜಾನನನಿಗೆ ತೃಪ್ತಿಕರವಾದ ಈ ಸ್ತೋತ್ರವನ್ನು ಯಾರು ಭಕ್ತಿಯಿಂದ ಪಠಿಸುವರೋ, ಅವರು ಎಂದಿಗೂ ದುಃಖವನ್ನು ಹೊಂದಲಾರರು. ಮತ್ತು ಸಮಸ್ತ ಪಾಪರಾಶಿಯನ್ನೂ ಕಳೆದುಕೊಂಡು ಪವಿತ್ರಾತ್ಮರೆನಿಸಿಕೊಳ್ಳುವರು.” ॥೧೯॥

ಹೀಗೆ ದೇವತೆಗಳೆಲ್ಲರೂ ಗಣಪತಿಯನ್ನು ಸ್ತುತಿಸಿ ಪೂಜಿಸಲು, ಗಿರಿರಾಜನು ತನ್ನ ಪತ್ನಿಯಾದ ಮೇನಾದೇವಿಯೊಡಗೂಡಿ ಬಂದು ಮಹಾದೇವನನ್ನು ವಿವಾಹ

ಪಾದೌ ಪ್ರಕ್ಷಾಲ್ಯ ದೇವಸ್ಯ ರತ್ನಭೃಂಗಾರುಜೈರ್ಜಲೈಃ ।
ಮೇನಾಕರಾಂತನಿರ್ಯಾತೈಃ ಸಂಪ್ರೋಕ್ಷ್ಯಾಥ ಸ್ವಮೌಲಿಷು ॥೨೨॥

ಬ್ರಹ್ಮವಿಷ್ಣ್ವಾದಿವಿಬುಧಾಃ ಕೃತಾರ್ಥಾ ಗಿರಿಣಾ ಸಹ ।
ತತ್ರಾಹ ವಿಷ್ಣುರ್ದೇವೈಶ್ಚ ಬ್ರಹ್ಮಾಣಂ ತಂ ವಿಲೋಕಯನ್ ॥೨೩॥

ಭವಾನಹಂ ಸಮುತ್ಪನ್ನೌ ದೇವಸ್ಯ ಭುಜಯೋಃ ಪುರಾ ।
ಲಲಾಟತಟತೋ ರುದ್ರಃ ಸುರಾಮುನಿಗಣೈಸ್ಸಹ ॥೨೪॥

ಯಸ್ಯ ಮೂರ್ತಿರಿಯಂ ಶೈಲೀ ಗಿರಿರಾಜಾಖ್ಯಯಾ ಸ್ಥಿತಾ ।
ಏಷಾ ಹೈಮವತೀ ಗೌರೀ ಮಾಯಾ ಸಾ ಪರಮೇಷ್ಠಿನಃ ॥೨೫॥

ಸ ಜಾನನ್ ಲೋಕಸಿದ್ಧ್ಯರ್ಥಮುದ್ವಾಹಾರ್ಥಮಿಹಾಗತಃ ।
ಭವೋಽಸೌ ಜಗತಾಂ ಧಾತಾ ಪಿತಾ ತವ ಮಮಾಪಿ ಚ ॥೨೬॥

---

ವೇದಿಕೆಗೆ ಕರೆದೊಯ್ದನು. ಅಲ್ಲಿ ಪರಶಿವನಿಗಾಗಿ ಕಲ್ಪಿಸಿದ್ದ ರತ್ನಮಯವಾದ ಸಿಂಹಾಸನದಲ್ಲಿ ಮಹಾದೇವನನ್ನು ಕುಳ್ಳಿರಿಸಿದನು. ॥೨೦-೨೧॥

ಅನಂತರ ಗಿರಿರಾಜನು ರತ್ನಮಯವಾದ ಗಿಂಡಿಯನ್ನು ಹಿಡಿದು ಮೇನಾದೇವಿಯು ನೀರನ್ನು ಹಾಕುತ್ತಿರಲು, ತಾನೇ ಪರಶಿವನ ಕಾಲನ್ನು ಹಿಡಿದು ತೊಳೆದು, ಆ ಪಾದೋದಕವನ್ನು ತನ್ನ ಮತ್ತು ಪತ್ನಿಯ ತಲೆಯ ಮೇಲೆ ಪ್ರೋಕ್ಷಿಸಿಕೊಂಡನು. ಬ್ರಹ್ಮವಿಷ್ಣ್ವಾದಿಗಳೂ ಸಹ ಅದೇ ನೀರನ್ನು ತಮ್ಮ ತಲೆಗಳ ಮೇಲೆ ಎರಚಿಕೊಂಡು ಗಿರಿರಾಜನಂತೆ ತಾವೂ ಪವಿತ್ರರಾದರು. ಆಗ ವಿಷ್ಣುವು ಬ್ರಹ್ಮಾದಿದೇವತೆಗಳನ್ನು ನೋಡುತ್ತಾ ಬ್ರಹ್ಮನೊಡನೆ ಹೀಗೆಂದನು. ॥೨೨-೨೩॥

ಬ್ರಹ್ಮನೇ, ನೀನು ಮತ್ತು ನಾನು ಇಬ್ಬರೂ ಈ ಪರಶಿವನ ಭುಜದಿಂದ ಹುಟ್ಟಿದವರಲ್ಲವೆ ? ರುದ್ರನೂ ದೇವಮುನಿಗಣಗಳೂ ಶಿವನ ಹಣೆಯಿಂದ ಜನಿಸಿದರು. ಈ ಗಿರಿರಾಜನೆಂಬ ಹೆಸರಿನ ಹಿಮಗಿರಿಯೂ ಶಂಕರನ ಒಂದು ಮೂರ್ತಿಯಲ್ಲವೆ ? ಗಿರಿರಾಜಕುಮಾರಿಯಾದ ಗೌರೀದೇವಿಯೇ, ಆ ಪರಾಪರಶಕ್ತಿಯೆನಿಸಿದ ಮಾಯೆಯು. ॥೨೪-೨೫॥

ಈ ವಿಷಯವನ್ನು ತಿಳಿದಿದ್ದರೂ ಲೋಕವ್ಯವಹಾರವನ್ನನುಸರಿಸಿ ಪರಶಿವನು ವಿವಾಹಾರ್ಥವಾಗಿ ಇಲ್ಲಿಗೆ ದಯೆಗೈದಿರುವನು. ಜಗತ್ತಿಗೆ ಈತನೇ ನಿಜವಾದ ಸೃಷ್ಟಿಕರ್ತನು. ನಮಗೂ, ನಿಮಗೂ, ಎಲ್ಲರಿಗೂ ಮಹಾದೇವನೇ ತಂದೆಯು. ನಮಗೆ

ಮಾತಾ ದೇವೀ ಸದಾಸ್ಮಾಕಂ ಯಯೋರುದ್ವಾಹಮಂಗಲಂ ।
ಪಶ್ಯಾಮೋ ಧನ್ಯನೇತ್ರಾಭ್ಯಾಂ ವಿಮುಕ್ತಭವಬಂಧನಾಃ ॥ ೨೭ ॥

ಅಸ್ಯೈವ ಮೂರ್ತಿಭಿರ್ವ್ಯಾಪ್ತಂ ಜಗತ್ಸರ್ವಂ ಚರಾಚರಂ ।
ಕ್ಷಿತ್ಯಗ್ನಿಕೇಂದುಸೂರ್ಯಾತ್ಮಾ ಪವನೋ ದೀಕ್ಷಿತಾತ್ಮಕಃ ॥ ೨೮ ॥

ಮಹಾದೇವೋ ಮಹಾನಾತ್ಮಾ ಸ್ವತಂತ್ರಃ ಸರ್ವಹೃದ್ಗತಃ ।
ತದಾ ಸ ಗಿರಿರಾಟ್ ತತ್ರ ಮೇನಯಾ ಪೂಜಯದ್ಧರಂ ॥ ೨೯ ॥

ಮಧುಪರ್ಕೇಣ ವಿಧಿನಾ ಪುಷ್ಪೈರ್ಗಂಧೈರ್ಮನೋಹರೈಃ ।
ಧೂಪೈರ್ದೀಪೈಶ್ಚ ನೈವೇದ್ಯೈರ್ವಾಸೋಲಂಕಾರಭೂಷಣೈಃ ॥ ೩೦ ॥

ಗಾಮರ್ಘ್ಯಂ ಶಂಭವೇ ದತ್ವಾ ತಾಮನುಜ್ಞಾಪ್ಯ ಶಂಕರಃ ।
ಸಂಸ್ಥಿತಃ ಸುರಸಂಘೈಶ್ಚ ಗಣೈರ್ವೀಜಿತಚಾಮರೈಃ ॥ ೩೧ ॥

ನದತ್ಸು ದೇವತೂರ್ಯೇಷು ಗಾಯತ್ಸು ಚ ಮನೋಹರಂ ।
ಹೇಮಪುಷ್ಪೈಃ ಕಿರಂತ್ಸ್ವೀಶೇ ನೃತ್ಯತ್ಸ್ವಪ್ಸರಸ್ಸು ಚ ॥ ೩೨ ॥

---

ತಾಯಿಯೆನಿಸಿರುವವಳೇ ಪಾರ್ವತಿಯು. ಪ್ರಪಂಚಮಾತಾಪಿತೃಗಳೆನಿಸಿದ ಇವರಿಬ್ಬರ ವಿವಾಹಸಮಾರಂಭವನ್ನು ನೋಡುವ ನಮ್ಮ ಕಣ್ಣುಗಳೇ ಧನ್ಯವಾದವುಗಳು. ಇದರಿಂದ ನಾವು ಈಗ ಸಮಸ್ತಪಾಪಮುಕ್ತರಾಗುವೆವು. ॥೨೬-೨೭॥

ಪರಮೇಶ್ವರನ ಮೂರ್ತಿಯೇ ಈ ಚರಾಚರಾತ್ಮಕವಾದ ಜಗತ್ತು, ಭೂಮಿ, ಅಗ್ನಿ, ಜಲ, ಸೂರ್ಯ, ವಾಯು, ಚಂದ್ರ, ಆಕಾಶ, ದೀಕ್ಷಿತ, ಈ ಎಂಟೂ ಪರಶಿವನ ಅಷ್ಟಮೂರ್ತಿಗಳು. ಮಹಾರೂಪದಿಂದ ತೋರಿಬರುವ ಮಹಾದೇವನು ಸರ್ವಹೃದಯಾಂತರ್ಗತಮೂರ್ತಿಯು. ಹೀಗೆಂದು ಮಹಾದೇವನನ್ನು ಸ್ತುತಿಸಿ ಗಿರಿರಾಜನು ಮೇನಾದೇವಿಯೊಡಗೂಡಿ ಪರಶಿವನನ್ನು ವಿಧಿವತ್ತಾಗಿ ಪೂಜಿಸಿದನು. ॥೨೮-೨೯॥

ಶಾಸ್ತ್ರಕ್ರಮದಂತೆ ಮಹೇಶ್ವರನಿಗೆ ಮಧುಪರ್ಕ, ಪುಷ್ಪ, ಗಂಧ, ಧೂಪ, ದೀಪ, ನೈವೇದ್ಯ, ವಸ್ತ್ರಾಭರಣಗಳು, ಗೋದಾನ ಇವೆಲ್ಲವನ್ನೂ ಸಮರ್ಪಿಸಿ, ಪರಶಿವನ ಅನುಜ್ಞೆಯನ್ನು ಪಡೆದು ಗಿರಿರಾಜನು ಕನ್ಯಾದಾನಕ್ಕೆ ಸಿದ್ಧನಾದನು. ಆಗ ಸುರಗಣಗಳು ಎದ್ದುನಿಂತರು. ಪ್ರಮಥಗಣಗಳು ಚಾಮರವನ್ನು ಬೀಸಿದರು. ದೇವತೆಗಳ ತುತ್ತೂರಿಗಳು ಮೊಳಗಿದುವು. ಗಂಧರ್ವರು ಗಾನಮಾಡಿದರು. ಅಪ್ಸರ

ಸದಸ್ಯೇಷು ಸುರೇಂದ್ರೇಷು ಗಣೇಷು ಚ ಮಹೋತ್ಸವೇ ।
ಗರ್ಗೋದಿತೇ ತದಾ ಲಗ್ನೇ ಗಿರಿರಾಣ್ಮೇನಯಾ ತದಾ ॥೩೩॥

ಗಿರಿಜಾಂ ಸಮಲಂಕೃತ್ಯ ವಿಮಲಾಂಬರಭೂಷಣೈಃ ।
ಸಮಾನೀಯ ಮಹಾದೇವೀಂ ತದಾ ಪ್ರತ್ಯಙ್ಮುಖಸ್ಥಿತಾಂ ॥೩೪॥

ವೀಜಿತಾಂ ಚಾಮರೈಸ್ತತ್ರ ಸಖೀಭಿಸ್ಸಂವೃತಾಂ ಶಿವಾಂ ।
ಮಧ್ಯೇ ಪಟಧರಾವಾಸ್ತಾಂ ತದಾ ಶಕ್ರಹರೀ ಮುದಾ ॥೩೫॥

ಸುರಾಸ್ಸಾದ್ರಾಕ್ಷತಾ ಹಸ್ತಾಸ್ತಸ್ಥುಃ ಪ್ರಾಂಜಲಯೋ ಗಣಾಃ ।
ಸ್ತಿಮಿತೇ ವಾದ್ಯಘೋಷೇ ಚ ಜೇಪುಸ್ತತ್ರ ಮಹರ್ಷಯಃ ॥೩೬॥

ವಸಿಷ್ಠೋ ವಾಮದೇವಶ್ಚ ಗೌತಮೋತ್ರಿರ್ಭೃಗುಸ್ತಥಾ ।
ಜಮದಗ್ನಿಃ ಕಶ್ಯಪಶ್ಚ ಭರದ್ವಾಜೋ ಮಹರ್ಷಯಃ ॥೩೭॥

ಪ್ರತ್ಯೇಕಂ ಮಂಗಲಂ ಹೃದ್ಯಂ ಪದ್ಯಂ ಶಂಭೋರ್ಮಹೋತ್ಸವೇ ॥೩೮॥

---

ಸ್ತ್ರೀಯರು ನರ್ತನಮಾಡಿದರು. ದೇವತೆಗಳು ಸುವರ್ಣಪುಷ್ಪಗಳನ್ನು ಎರಚಿದರು. ॥೩೦-೩೧-೩೨॥

ದೇವಗಣನಾಯಕರು ಸಭೆಯಲ್ಲಿ ಕುಳಿತಿರಲು, ಗರ್ಗಾಚಾರ್ಯರಿಂದ ಮುಹೂರ್ತಮಂಗಳಾಷ್ಟಕವು ಪಠಿಸಲ್ಪಡುತ್ತಿರಲು, ಗಿರಿರಾಜನು ತನ್ನ ಪತ್ನಿಯೊಡನೆ, ತನ್ನ ಪುತ್ರಿಯನ್ನು ದಿವ್ಯಮಾಲ್ಯಾಂಬರಗಳಿಂದ ಅಲಂಕರಿಸಿ ಸಭೆಗೆ ಕರೆದು ತಂದು ಪಶ್ಚಿಮಾಭಿಮುಖವಾಗಿ ಮಹಾದೇವಿಯನ್ನು ನಿಲ್ಲಿಸಿದನು. ॥೩೩-೩೪॥

ಅನೇಕ ಸ್ತ್ರೀಯರು ಪಾರ್ವತಿಯನ್ನು ಚಾಮರಗಳಿಂದ ಬೀಸತೊಡಗಿದರು. ಇಂದ್ರ, ವಿಷ್ಣು ಇವರಿಬ್ಬರೂ ಶಿವಗೌರಿಯರ ಮಧ್ಯೆ ಅಂತರಪಟವನ್ನು ಹಿಡಿದು ನಿಂತರು. ನೆನೆದ ಅಕ್ಕಿಯನ್ನು ಕೈಯ್ಯಲ್ಲಿ ಹಿಡಿದು ದೇವತೆಗಳೆಲ್ಲರೂ ಕೈಜೋಡಿಸಿ ನಿಂತುಕೊಂಡರು. ವಾದ್ಯಘೋಷವನ್ನು ನಿಲ್ಲಿಸಿ ಮಹರ್ಷಿಗಳು ಪ್ರಣವಮಂತ್ರಜಪ ಮಾಡತೊಡಗಿದರು. ॥೩೫-೩೬॥

ವಸಿಷ್ಠ, ವಾಮದೇವ, ಗೌತಮ, ಅತ್ರಿ, ಭೃಗು, ಜಮದಗ್ನಿ, ಕಶ್ಯಪ, ಭರದ್ವಾಜ ಈ ಮಹರ್ಷಿಗಳು ಪ್ರತ್ಯೇಕವಾಗಿ ಒಂದೊಂದು ಮಂಗಳಪದ್ಯವನ್ನು ಹೇಳತೊಡಗಿದರು. ॥೩೭-೩೮॥

॥ ವಸಿಷ್ಠ ಉವಾಚ ॥

ಮೌರ್ವೀ ಮೂರ್ಧ್ನಿ ರಥಃ ಶರಾಸನಶಿರಃ ಸಂಚಾರಿಚಕ್ರದ್ವಯಂ ।
ಚಕ್ರಾಂತರ್ನಿಹಿತಃ ಶರಸ್ತದುದರೇ ಸೂತಸ್ತದಾಸ್ಯೇ ಹಯಾಃ ।
ತೇಷಾಮೇವ ಶಿರಃಪದೇಷು ವಸತಿಃ ಸ್ವಸ್ಯೇತಿ ಯಸ್ಯ ಶ್ರುತಂ ।
ದೇವಶ್ಚಿತ್ರಪರಿಚ್ಛದಃ ಸ ಭಗವಾನ್ ಕುರ್ಯಾತ್ಸದಾ ಮಂಗಳಂ ॥೩೯॥

॥ ವಾಮದೇವ ಉವಾಚ ॥

ಯೋ ದೇವಃ ಶ್ರುತಿಶೇಖರೇಷು ವಿದಿತೋಽಯಂ ಭಾಸಕಂ ಜಾನತೇ ।
ಯೇನ ಭ್ರಾಮ್ಯತಿ ಲೋಕಜಾಲಮಖಿಲಂ ಯಸ್ಮೈ ನಮಃ ಕುರ್ವತೇ ।
ಯಸ್ಮಾನ್ನಾಪರಮಸ್ತಿ ಕಿಂಚಿದಪಿ ವೈ ಯಸ್ಯಾಂಗಮೇತಜ್ಜಗತ್ ।
ಯಸ್ಮಿಂಸ್ತಿಷ್ಠತಿ ಸರ್ವಮೇವ ಭುವನಂ ಕುರ್ಯಾತ್ಸನೋ ಮಂಗಲಂ ॥೪೦॥

---

ಮಹೇಶ್ವರನು ತನಗೆ ಬಿಲ್ಲಿನ ಹಗ್ಗವಾಗಿದ್ದ ಆದಿಶೇಷನನ್ನೇ ತಲೆಯಲ್ಲಿಟ್ಟು ಕೊಂಡಿರುವನು. ರಥವಾದ ಭೂಮಿಯನ್ನೇ ಬತ್ತಳಿಕೆಯಾಗಿದ್ದ ಸಮುದ್ರದ ಶಿರೋ ಭಾಗದಲ್ಲಿಟ್ಟಿರುವನು. ತನಗೆ ಎರಡು ಚಕ್ರಗಳಾಗಿದ್ದ ಸೂರ್ಯಚಂದ್ರರನ್ನು ಸಂಚರಿಸುವಂತೆ ಬಿಟ್ಟಿರುವನು. ತನಗೆ ಬಾಣವಾಗಿದ್ದ ವಿಷ್ಣುವನ್ನು ಚಕ್ರವೆನಿಸಿದ್ದ ಸೂರ್ಯ ಮಂಡಲದ ಮಧ್ಯದಲ್ಲಿ ನಿಲ್ಲಿಸಿರುವನು. ಆ ವಿಷ್ಣುವಿನ ಹೊಟ್ಟೆಯಲ್ಲಿ ಸಾರಥಿಯಾದ ಬ್ರಹ್ಮನನ್ನೂ, ಆ ಸಾರಥಿಯ ಬಾಯಿಯಲ್ಲಿ ಕುದುರೆಗಳಾಗಿದ್ದ ಚತುರ್ವೇದಗಳನ್ನೂ ಸ್ಥಾಪಿಸಿರುವನು. ಅಂತಹ ವೇದಗಳ ಶಿರೋಭೂತವಾಗಿರುವ ಉಪನಿಷತ್ತುಗಳಲ್ಲಿ ತಾನು ನೆಲಸಿರುವನು. ಹೀಗೆ ವಿಚಿತ್ರರೀತಿಯ ಪರಿಕರಗಳನ್ನು ಹೊಂದಿ, ತಾನು ಎಲ್ಲಿಯೋ ನೆಲಸಿ ಮಹಾಮಹಿಮನೆನಿಸಿರುವ ಮಹಾದೇವನು ಸರ್ವರಿಗೂ ಮಂಗಳವನ್ನುಂಟುಮಾಡಲಿ, ಎಂದು ವಸಿಷ್ಠಮಹರ್ಷಿಯು ಮಹಾದೇವನನ್ನು ಹೊಗಳಿದರು. ॥೩೯॥

ಉಪನಿಷತ್ತುಗಳಲ್ಲಿ ಪ್ರತಿಪಾದ್ಯನಾಗಿರುವವನೂ, ಲೋಕಪ್ರಕಾಶಕನೂ, ಲೋಕಜಾಲವನ್ನು ಸುತ್ತಿಸುವವನೂ, ಸಮಸ್ತ ಲೋಕದಿಂದ ಪೂಜಿಸಲ್ಪಡುವವನೂ ಆಗಿರುವ ಮಹಾದೇವನು ಏಕಮಾತ್ರದೇವನು. ಅವನಿಗಿಂತ ಬೇರೆಯಾದ ವಸ್ತುವೇ ಜಗತ್ತಿನಲ್ಲಿಲ್ಲ. ಆ ಮಹಾದೇವನ ಒಂದೊಂದು ಅವಯವವೇ ಈ ಚರಾಚರಾತ್ಮಕವಾದ ಜಗತ್ತು. ದೃಷ್ಟಿಗೋಚರವಾಗುವ ಅಥವಾ ಆಗದಿರುವ ಸಮಸ್ತ ವಸ್ತುಜಾಲವೂ

॥ ಗೌತಮ ಉವಾಚ ॥

ವಿಶ್ವಾತ್ಮಾ ಭಗವಾನ್ ಚರಾಚರತನುರ್ವಿಶ್ವಾಧಿಕೋಽಯಂ ಶಿವೋ ।
ವೇದಾಂತಪ್ರಥಿತೋರುನೈಭವಪದೋ ನಿಶ್ವಾಸವೇದೋ ಹರಃ ।
ಯೋ ಗೌರೀರಮಣೋತ್ರ ನಿರ್ಜರವರೋ ವಿಶ್ವಪ್ರಕಾಶಾತ್ಮಕೋ ।
ವಿಧ್ವಸ್ತಾಖಿಲಭಕ್ತಪಾತಕಕುಲಃ ಕುರ್ಯಾತ್ಸನೋ ಮಂಗಳಂ ॥೪೧॥

॥ ಅತ್ರಿರುವಾಚ ॥

ಯಂ ವೇದಾ ನಹಿ ಜಾನತೇ ಪುರಹರಂ ಶಂಭುಂ ಭವಾನೀಪತಿಂ ।
ವಿಶ್ವಾತ್ಮಾನಮನಂತವಿಷ್ಣುವಿಧಿಭಿಃ ಸಂಸೇವ್ಯಪಾದಾಂಬುಜಂ ।
ತಂ ಸರ್ವಾದಿಗುರುಂ ಮನೋಜ್ಞವಪುಷಂ ಗೌರೀವಿವಾಹೋತ್ಸುಕಂ ।
ತತ್ಪಾದಾಂಬುಜಲೋಕನಾನ್ಮಮ ಚಿರಂ ಭೂಯಾತ್ಸದಾ ಮಂಗಳಂ ॥೪೨॥

---

ಕೊನೆಗೆ ಈ ಪರಶಿವನಲ್ಲಿಯೇ ಅಡಗಿಹೋಗುವುದು. ಅಂತಹ ಮಹಾಮಹಿಮನಾದ ಮಹಾದೇವನು ನಮಗೆ ಸರ್ವತೋಭದ್ರವಾದ ಮಂಗಳವನ್ನುಂಟುಮಾಡಲಿ ಎಂದು ವಾಮದೇವಋಷಿಯು ಪ್ರಾರ್ಥಿಸಿದನು. ॥೪೦॥

ಜಗತ್ಸ್ವರೂಪನೂ, ಚರಾಚರಾತ್ಮಕವಾದ ವಸ್ತುರೂಪಿಯೂ, ವಿಶ್ವಕ್ಕೆ ದೊಡ್ಡವನೆನಿಸಿದವನೂ, ಆದ ಮಹಾದೇವನು ಉಪನಿಷತ್ತಿನಲ್ಲಿ ವಿವರಿಸಲ್ಪಡುವ ಗುಣರಾಶಿಯುಳ್ಳವನು. ಸಮಸ್ತ ವೇದಗಳೂ ಈ ಪರಶಿವನ ನಿಟ್ಟುಸಿರುಗಳು. ಗೌರೀರಮಣನೆನಿಸಿದ ಈ ಮಹಾದೇವನೇ ದೇವದೇವನು. ಲೋಕಪ್ರಕಾಶಕನು. ಈತನೇ ಭಕ್ತರ ಸಮಸ್ತ ಪಾಪರಾಶಿಯನ್ನೂ ನಿರ್ಮೂಲಗೊಳಿಸುವವನು. ಇಂತಹ ಮಹಾದೇವನು ನಮಗೆ ಸರ್ವದಾ ಮಂಗಳವನ್ನುಂಟುಮಾಡಲಿ, ಎಂದು ಗೌತಮ ಮಹರ್ಷಿಯು ಶುಭಾಶಂಸನಮಾಡಿದನು. ॥೪೧॥

ಯಾವ ಮಹಾದೇವನ ಮಹಿಮೆಯನ್ನು ನಾಲ್ಕು ವೇದಗಳೂ ಪೂರ್ಣವಾಗಿ ತಿಳಿಯಲಾರವೋ, ವಿಶ್ವರೂಪಿಯಾದ ಯಾವ ಶಂಕರನು ವಿಷ್ಣುಬ್ರಹ್ಮಾದಿಗಳಿಂದ ಸದಾ ಪೂಜ್ಯನೆನಿಸಿರುವನೋ, ಅಂತಹ ಆದಿಗುರುವೂ ಸುಂದರದೇಹಿಯೂ, ಗೌರೀ ವಿವಾಹದಲ್ಲಿ ಉತ್ಸಾಹವುಳ್ಳವನೂ ಆದ ಮಹೇಶ್ವರನ ಪಾದದರ್ಶನದಿಂದ ನಮಗೆ ಶೀಘ್ರವಾಗಿ ಮಂಗಳವುಂಟಾಗಲಿ ಎಂದು ಅತ್ರಿ ಮಹರ್ಷಿಯು ಪ್ರಾರ್ಥಿಸಿದನು. ॥೪೨॥

॥ ಭೃಗುರುವಾಚ ॥

ಯದ್ಭೀತ್ಯಾ ಪವತೇಽನಿಲೋಽಪಿ ಸಹಸಾ ವಿಶ್ವೋದಯಸ್ತೋ ರವಿ ।
ಸ್ತ್ವಗ್ನಿಶ್ಚೋರ್ಧ್ವಶಿಖೋ ಭವತ್ಯನುದಿನಂ ಶಕ್ರಃ ಸುರಾನ್‌ಪಾತಿ ವೈ ।
ಮೃತ್ಯುರ್ಧಾವತಿ ಯದ್ಭಯೇನ ಸುತರಾಂ ಮೃತ್ಯುಂಜಯಸ್ಯಾಜ್ಞಯಾ ।
ತಂ ಸಾಂಬಂ ಹೃದಯೇ ಭಜಂತಿ ಮುನಯಸ್ತೇಷಾಂ ಸದಾ ಮಂಗಳಂ ॥೪೩॥

॥ ಜಮದಗ್ನಿರುವಾಚ ॥

ಯೋ ವಿಷ್ಣೋರ್ಜನಿತಾ ಸುರಾಸುರಗುರುರ್ವೇದಾಂತವೇದ್ಯೋ ಹರೋ ।
ಯತ್ಪಾದಾಂಬುಜಪೂಜನೇನ ಸುರತಾ ಧನ್ಯಾ ಕೃತಾರ್ಥಾ ಭವೇತ್ ।
ಧನ್ಯೋಽಯಂ ಗಿರಿರಾಜರಾಜತಿಲಕಃ ಕನ್ಯಾಸುಪಾತ್ರಾರ್ಪಣಾತ್ ।
ನಾನ್ಯಂ ಜಾನಥ ಶಂಕರಾತ್ಸುರವರಾಃ ಕುರ್ಯಾತ್ಸ ವೋ ಮಂಗಳಂ ॥೪೪॥

---

ಯಾವ ಮಹಾದೇವನ ಭಯದಿಂದ, ವಾಯುವು ಸದಾ ಬೀಸುತ್ತಿರುವನೋ, ಚಂದ್ರಸೂರ್ಯರು ಉದಯಾಸ್ತಗಳನ್ನು ಸರಿಯಾಗಿ ಪಡೆಯುತ್ತಿರುವರೋ, ಅಗ್ನಿಯು ಊರ್ಧ್ವಶಿಖನಾಗಿ ಜ್ವಲಿಸುತ್ತಿರುವನೋ, ದೇವೇಂದ್ರನು ದೇವತೆಗಳನ್ನು ಕಾಪಾಡುವನೋ, ಮೃತ್ಯುವು ಯಾವ ದೇವನನ್ನು ನೋಡಿದೊಡನೆಯೇ ಓಡಿಹೋಗುವನೋ ಅಂತಹ ಅಂಬಾಸಹಿತನಾದ ಮಹಾದೇವನು ಸಮಸ್ತ ಮುನಿಜನರ ಹೃದಯದಲ್ಲಿ ಸದಾ ಪ್ರಜ್ವಲಿಸುತ್ತಿರುವನು. ಆ ಮಹಾದೇವನು ಸರ್ವರಿಗೂ ಮಂಗಳವನ್ನುಂಟು ಮಾಡಲಿ, ಎಂದು ಭೃಗುಮಹರ್ಷಿಯು ಪ್ರಾರ್ಥಿಸಿದನು. ॥೪೩॥

ವಿಷ್ಣುವಿಗೂ ಜನಕನಾಗಿ, ಸುರಾಸುರರಿಗೆ ಗುರುವಾಗಿ, ಉಪನಿಷದ್ಗೋಚರನಾಗಿರುವ ಮಹಾದೇವನ ಪಾದದರ್ಶನದಿಂದ ಈ ದೇವತೆಗಳ ಗುಂಪೇ ಧನ್ಯತೆಯನ್ನು ಪಡೆದಿರುವುದು. ಅಲ್ಲದೆ ಗಿರಿರಾಜನೆನಿಸಿದ ಹಿಮವಂತನು ತನ್ನ ಸತ್ಪುತ್ರಿಯನ್ನು ಸತ್ಪಾತ್ರನಿಗೆ ಈಗ ಅರ್ಪಿಸುವುದರಿಂದ ಗಿರಿರಾಜಕುಲತಿಲಕನೆನಿಸಿಕೊಂಡಿರುವನು. ಇಂತಹ ಶಂಕರನನ್ನು ಬಿಟ್ಟು ಎಲೈ ದೇವತೆಗಳಿರಾ, ನೀವು ಯಾವಾಗಲೂ ಬೇರೆ ದೇವರನ್ನು ಧ್ಯಾನಿಸಬೇಡಿರಿ. ನಿಮಗೆ ಅಂತಹ ಪರಶಿವನಿಂದ ಸದಾ ಮಂಗಳವುಂಟಾಗಲಿ ಎಂದು ಜಮದಗ್ನಿಮಹರ್ಷಿಯು ಮಂಗಳಪದ್ಯವನ್ನು ಪಠಿಸಿದನು. ॥೪೪॥

ಸೇವಾರ್ಥಾಗತ ವಿಘ್ನರಾಡ್ಗುಹಲಸದ್ವಾಹೇಕ್ಷಣಾಭ್ಯುತ್ಪತ
ತ್ಪ್ರತ್ಯಾಯಾತ ಭುಜಂಗಪೂತ್ಕೃತಿಕನತ್ಫಾಲಾಗ್ನಿ ಕೀಲೋತ್ಕರೈಃ ।
ನಿಷ್ಪಂದೇಂದುಸುಧೋಪಜೀವಿತಕರಿವ್ಯಾಘ್ರಾದಿನಾದಾರ್ಭಟೀ
ಭೀತೋಕ್ಷಾವನತತ್ಪರೋ ಗಿರಿಸುತಾಕಾಂತೇಕ್ಷಣಾನ್ಮಂಗಳಂ ॥೪೫॥

॥ ಭರದ್ವಾಜ ಉವಾಚ ॥

ಕಾರುಣ್ಯಾಮೃತಸಾರಪೂರಿತಲಸನ್ನೇತ್ರಾಂತಸಂವೀಕ್ಷಣಾ-
ತ್ತ್ರೈಲೋಕ್ಯಾವನದೀಕ್ಷಿತಂ ಜಪವಟೀ ರಾಜತ್ಕರಾಂಭೋರುಹಂ ।
ಸಾಂಬಂ ನಿರ್ಜರದೀರ್ಘಿಕಾಪ್ರವಿಲಸತ್ಸಂಫುಲ್ಲ ಪದ್ಮಾವಲೀ
ಧೂಲೀಧೂಸರ ಕರ್ಬುರೋಜ್ಜ್ವಲಜಟಾರೇಖಂ ಭಜೇ ಮಂಗಲಂ ॥೪೬॥

ಏವಂ ಮುನಿಪ್ರವಚನೋರು ಸುಮಂಗಲೇನ
ಸನ್ಮಂಗಲಾವಮೌಲಿವರೇ ತದಾಕ್ಷತಾಃ ।

---

ತಂದೆಯನ್ನು ಸೇವಿಸಲು ಗುಹಗಣಪರು ತಮ್ಮ ವಾಹನಗಳ ಮೇಲೆ ಕುಳಿತುಕೊಂಡು ಬಂದಾಗ ಈಶ್ವರನ ತಲೆಯಮೇಲಿರುವ ಸರ್ಪವು ಫೂತ್ಕಾರಮಾಡುವುದನ್ನು ನೋಡಿ ಪರಶಿವನು ಆ ತನ್ನ ಅಗ್ನಿನೇತ್ರದ ಜ್ವಾಲೆಯಿಂದ ಅದನ್ನು ತಡೆಗಟ್ಟುವನು. ಅಲ್ಲದೆ ಚಂದ್ರಿಕೆಯಿಂದ ಆಹ್ಲಾದಪಡೆಯಲು ಬಂದಿದ್ದ ಆನೆ, ಹುಲಿ ಮುಂತಾದ ಭಯಂಕರ ಪ್ರಾಣಿಗಳ ಆರ್ಭಟದಿಂದ ಹೆದರುವ ತನ್ನ ವಾಹನವಾದ ಎತ್ತನ್ನು ಆಗಾಗ ಮಹಾದೇವನು ಸಂತೈಸುವನು. ಇಂತಹ ದಯಾರಸಪರಿಪೂರ್ಣನಾದ ಮಹಾದೇವನ ಪಾದದರ್ಶನದಿಂದ ಎಲ್ಲರಿಗೂ ಮಂಗಳವುಂಟಾಗಲಿ, ಎಂದು ಕಶ್ಯಪಮಹರ್ಷಿಯು ಮಂಗಳಪದ್ಯವನ್ನು ಪಠಿಸಿದನು. ॥೪೫॥

ದಯಾರಸಪೂರ್ಣವಾದ ತನ್ನ ಕಟಾಕ್ಷಪಾತದಿಂದಲೇ ಮೂರು ಲೋಕಗಳನ್ನೂ ರಕ್ಷಿಸಬಲ್ಲ ಮಹೇಶ್ವರನು ತನ್ನ ಪಾಣಿಪದ್ಮದಲ್ಲಿ ಜಪಸರವನ್ನು ಹೊಂದಿರುವನು. ಇಂತಹ ಮಹೇಶ್ವರನ ತಲೆಯ ಮೇಲೆ ದೇವಲೋಕದ ಕಮಲಗಳು ಮಳೆಯಂತೆ ಬಿದ್ದು ಅದರ ಮಕರಂದದಿಂದ ಪರಶಿವನ ಜಟಾಕಲಾಪವುಧೂಸರಿತವಾಗಿರುವುದು. ಅಂತಹ ಮಹೇಶ್ವರನ ದಯೆಯಿಂದ ಸಮಸ್ತರಿಗೂ ಮಂಗಳವುಂಟಾಗಲಿ ಎಂದು ಭರದ್ವಾಜಮುನಿಯು ಆಶಿಸಿದನು. ॥೪೬॥

ಹೀಗೆ ಸಕಲ ಮಹರ್ಷಿಗಳೂ ಮಂಗಳಪದ್ಯಪಠನೆ ಮಾಡುತ್ತಿರಲು ಮಹೇ

ಮುದೋಕ್ತಿರತ್ನಾಪಿ ಶಶಾಂಕಮೌಲೌ
ಮುದೋಕ್ತಿರದ್ದಕ್ಷಗಣಾ ಇನಾಕ್ಷತಾಃ ॥೪೭॥

ಭೇರೀಮೃದಂಗಪಣವಾನಕ ವಾದ್ಯಘೋಷೈ
ರ್ವೇದಪ್ರಕರ್ಷವರಘೋಷ ಜಿತಾಬ್ಧಿಘೋಷೈಃ ।
ಯೋಷಾಮುಖಂ ಸಮಭಿವೀಕ್ಷ್ಯ ಮುಬೋರುಹರ್ಷ
ಸ್ತ್ರ್ಯಕ್ಷೋಕ್ಷತಾಕ್ಷಹೃದಯೋಖಿಲಮಂಗಲಾಂ ತಾಂ ॥೪೮॥

ಛಾಯಾರವೀ ವಿಧೃತಪಾರ್ಶ್ವಗವೇದಿಕುಂಭ
ಸಂಸ್ಥಾಪನಪ್ರಮುದಿತಾ ಗಿರಿವರ್ಯಸಂಘಾಃ ।
ತತ್ರಾಭಿವೀಕ್ಷ್ಯ ರತಿಮೇವ ಸುದುಃಖಮಪ್ರಾ
ಮಂಬಾಂ ಮುದೈಕ್ಷತ ಶಿವಃ ಸ್ಮರಸಂಪ್ರದಾನೇ ॥೪೯॥

ಸಾ ಶರ್ವವಕ್ತ್ರಕಮಲೋದರಭೃಂಗ ಸಂಗ
ಕಾರುಣ್ಯಸಾಂಗಕಲನೈರ್ಮದನಂ ಸ ದೇಹಂ ।

---

ಶ್ವರನು ಅಕ್ಷತೆಯನ್ನು ಮಂಗಳಾದೇವಿಯ ಶಿರಸ್ಸಿನ ಮೇಲೆ ಹಾಕಿದನು. ಕೂಡಲೇ ಪಾರ್ವತಿಯೂ ಕೂಡ ನಕ್ಷತ್ರಗಳಂತೆ ಸ್ವಚ್ಛವಾಗಿರುವ ಆದ್ರಾಕ್ಷತೆಯನ್ನು ಪರಶಿವನ ಶಿರಸ್ಸಿನ ಮೇಲೆ ಹಾಕಿದಳು. ॥೪೭॥

ದೇವನಗಾರಿಗಳೂ, ಮೃದಂಗಪಣವಾದಿವಾದ್ಯಗಳೂ ಘೋಷಿಸುತ್ತಿರಲು, ಋಷಿ ಜನರು ವೇದಪಠನಮಾಡುತ್ತಿರಲು, ಆ ಧ್ವನಿಯು ಸಮುದ್ರದ ಆರ್ಭಟವನ್ನು ಮುಚ್ಚಿ ದಂತಿದ್ದಿತು. ಇಂತಹ ಸಂಭ್ರಮದಲ್ಲಿ ತ್ರಿಲೋಚನನಾದ ಮಹಾದೇವನು ಸರ್ವ ಮಂಗಳೆಯಾದ ಪಾರ್ವತಿಯ ಮುಖವನ್ನು ನೋಡಿ ಆನಂದತುಂದಿಲನಾದನು. ॥೪೮॥

ದಂಪತಿಗಳಾದ ಛಾಯಾ ಮತ್ತು ಸೂರ್ಯ ಇವರಿಬ್ಬರೂ ಪಾರ್ಶ್ವಭಾಗಗಳಲ್ಲಿ ಕಲಶಗಳನ್ನು ಹಿಡಿದು ನಿಂತಿರುವುದನ್ನು ನೋಡಿ ಗಿರಿಸಂಘಗಳೆಲ್ಲವೂ ಸಂತೋಷ ಪಟ್ಟವು. ಇಂತಹ ಸಮಯದಲ್ಲಿ ಪರಮೇಶ್ವರನು ದುಃಖಿತಳಾಗಿ ಪತಿಯಿಲ್ಲದೆ ನಿಂತಿರುವ ರತೀದೇವಿಯನ್ನು ನೋಡುತ್ತಾ, ಅವಳಿಗೆ ಪತಿದಾನಮಾಡುವ ಮನಸ್ಸಿನಿಂದ ಪಾರ್ವತಿಯ ಮುಖವನ್ನು ಒಂದುಸಾರಿ ದೃಷ್ಟಿಯಿಟ್ಟು ನೋಡಿದನು. ॥೪೯॥

ಕೂಡಲೇ ಪಾರ್ವತಿಯು ಪರಶಿವನ ಮುಖಕಮಲದಿಂದ ಹೊರಟ ದುಂಬಿ ಗಳಂತಿರುವ ಕರುಣಾಕಟಾಕ್ಷಪ್ರಸವದಿಂದಲೇ ಮನ್ಮಥನನ್ನು ದೇಹಸಹಿತನನ್ನಾಗಿ

ಕೃತ್ವಾ ಸುರಾಸುರಸದಂ ಪ್ರತಿ ವೇಶ್ಮರತ್ಯಾ
ತಚ್ಛಾರುಮೌಲಿನಿಲಯಂ ಪದಮಾಪತುಸ್ತೌ ॥೫೦॥

ಅಜೋಽಪಿ ಲಾಜೈರ್ಜ್ವಲದವಹ್ನಿಮೌಲೌ
ಜುಹಾವ ಮಂತ್ರೈರ್ಮುನಿವರ್ಯಜುಷ್ಟೈಃ ।
ಸ್ವಚಾರುವಕ್ತ್ರೈಃ ಶಶಿಖಂಡಭೂಷಣಂ
ವಿಲೋಕ್ಯ ನೇತ್ರೈರ್ಮುದಮಾಪ ವಿಸ್ಮಿತಃ ॥೫೧॥

ದದೌ ಸ ಭೃಂಗಾರುಕರೈಕಧಾರಯಾ
ಸ ಮೇನಯಾ ಭೂಧರನಾಯಕಃ ಕರೇ ।
ಹರಸ್ಯ ತತ್ಪಾಣಿತಲೇ ಭವಾನ್ಯಾಃ
ಪಾಣಿಂ ದಧನ್ಪಾತ್ರಮುಹೋ ಬಭೂವ ॥೫೨॥

---

ಮಾಡಿ ಮತ್ತೆ ಉಜ್ಜೀವನಗೊಳಿಸಿದನು. ಅನಂತರ ರತಿಮದನರು ಆ ದೇವಸಭೆಯಲ್ಲಿ ತಾನೇ ತಾನಾಗಿ ವಿಜೃಂಭಿಸುತ್ತಿರಲು, ಈ ಪಾರ್ವತೀಪರಶಿವರೂ ಸಹ ಆ ಮನ್ಮಥನಿಗೆ ಉಚ್ಚಸ್ಥಾನವನ್ನು ಕೊಟ್ಟು ಸತ್ಕರಿಸಿದರು. (ಅಂದರೆ ಮೋಹಾವಿಷ್ಟರಾದರು). ॥೫೦॥

ಇತ್ತ ಬ್ರಹ್ಮನಾದರೋ ಮುನಿಜನರೊಡಗೂಡಿ ವಿಧಿವತ್ತಾಗಿ ಅಗ್ನಿಯನ್ನು ಪ್ರತಿಷ್ಠಾಪಿಸಿ ವಿವಾಹಾಂಗವಾದ ಲಾಜಾಹೋಮವನ್ನು ನಡೆಸಿದನು. ಮತ್ತು ತನ್ನ ಮುಖಚತುಷ್ಟಯಗಳಿಂದಲೂ ಚಂದ್ರಶೇಖರನೆನಿಸಿದ ಮಹಾದೇವನನ್ನು ನೋಡುತ್ತಾ ಆಶ್ಚರ್ಯಪಡುತ್ತಿದ್ದನು. ॥೫೧॥

ಅನಂತರ ಗಿರಿರಾಜನು ತನ್ನ ಪತ್ನಿಯಾದ ಮೇನಾದೇವಿಯು ಭಂಗಾರದ ಗಿಂಡಿಯಿಂದ ಬಿಡುವ ಜಲಧಾರೆಯನ್ನು ಪಾರ್ವತೀಪರಶಿವರ ಕೈಗಳಿಗೆ ಸೇರುವಂತೆ ಏರ್ಪಡಿಸಿದನು. ಅಂದರೆ ಧಾರಾಪೂರ್ವಕವಾಗಿ ಕನ್ಯಾದಾನಮಾಡಲುದ್ಯುಕ್ತನಾದಾಗ ಮಹೇಶ್ವರನು ಪಾರ್ವತಿಯ ಕೈಕೆಳಗೆ ತನ್ನ ಪಾಣಿತಲವನ್ನಿಟ್ಟು ನಿಂತುಕೊಂಡನು. ಜಗನ್ನಿಯಾಮಕನಾದ ಶಂಕರನು ಹೀಗೆ ಲೌಕಿಕವ್ಯವಹಾರವನ್ನನುಸರಿಸಿ ನಿಂತುದು, ನೋಡುವವರಿಗೆ ಅತ್ಯಾಶ್ಚರ್ಯಕರವಾಗಿದ್ದಿತು. ॥೫೨॥

ಸುರಾ ತದೋಚುರ್ಮುನಯೋ ಗಿರೀಶ್ವರಂ
ಧನ್ಯೋ ಹಿ ಮಾನ್ಯೋ ಹರಪಾತ್ರದಾತಾ ।
ಪ್ರತಿಗೃಹೀತಾಪಿ ಮಹೇಶ್ವರಸ್ಸ್ವಯಂ
ಧನ್ಯಾ ಕಿಲೈಷಾ ಜಗತಾಂ ಜನಿತ್ರೀ ॥೫೩॥

ಪಾಣಿಗ್ರಹೇ ಪರ್ವತರಾಜಪುತ್ರ್ಯಾಃ
ಪಾದಾಂಬುಜಂ ಪಾಣಿಸರೋರುಹಾಭ್ಯಾಂ ।
ಆಶ್ಮಾನಮಾರೋಪಯತಃ ಸ್ಮರಾರೇಃ
ಮಂದಸ್ಮಿತಂ ಮಂಗಳಮಾತನೋತು ॥೫೪॥

ಪ್ರದಕ್ಷಿಣಾವರ್ತಶಿಖಂ ಹಿ ವಹ್ನಿಂ
ಬಿಭ್ಯಂತಮೇವಂ ಕ್ರಮಣೇಸ ತೌ ಶಿವೌ ।
ಪರೀತ್ಯ ಶೇಷಂ ವಿಧಿನಾ ಸಮಾಪ್ಯ
ಮುದಾ ತದಾ ತಸ್ಥತುರೇವ ಹರ್ಷಿತೌ ॥೫೫॥

---

ಆಗ ದೇವತೆಗಳೆಲ್ಲರೂ ಜಗದೀಶ್ವರನಿಗೆ ಕನ್ಯಾದಾನಮಾಡುವಂತಹ ಗಿರಿರಾಜನೇ ಧನ್ಯತಮನೆಂದೂ ಪೂಜ್ಯನೆಂದೂ ಉದ್ಘೋಷಿಸಿದರು. ಜಗನ್ಮಾತೆಯು ಈದಿವಸ ಜಗತ್ಪಿತನನ್ನು ಸೇರಿ ಸ್ವಯಂ ಧನ್ಯಳಾದಳೆಂದು ಪಾರ್ವತಿಯನ್ನೂ ವಿಧವಿಧವಾಗಿ ಸ್ತುತಿಸಲಾರಂಭಿಸಿದರು. ॥೫೩॥

ಪಾರ್ವತಿಯ ಪಾಣಿಗ್ರಹಣಾನಂತರ, ಅಶ್ಮಾರೋಹಣವೆಂಬ ಕರ್ಮವನ್ನು ನಡೆಸುವಾಗ, ಪರಶಿವನೇ ಸಾಕ್ಷಾತ್ತಾಗಿ ತನ್ನ ಕರಕಮಲಗಳಿಂದ ಪಾರ್ವತಿಯ ಪಾದಕಮಲವನ್ನು ಸಾಣೇಕಲ್ಲಿ (ಅಶ್ಮಾ) ನ ಮೇಲೆ ಮುಗುಳ್ನಗೆ ನಗುತ್ತಾ ಇರಿಸಿದನು. ಅಂತಹ ಮಹೇಶ್ವರನ ಅನುಗ್ರಹಸೂಚಕವಾದ ಮುಗುಳ್ನಗೆಯು ಸರ್ವರಿಗೂ ಮಂಗಳವನ್ನುಂಟುಮಾಡಲಿ. ॥೫೪॥

ಅನಂತರ ಪರಶಿವದಂಪತಿಗಳು ಪ್ರದಕ್ಷಿಣಾಕಾರವಾಗಿ ಉರಿಯುತ್ತಾ, ಪರಮೇಶ್ವರನಿಗೆ ಹೆದರಿ ಜ್ವಲಿಸುತ್ತಿರುವ ಅಗ್ನಿಯಲ್ಲಿ ಶೇಷಹೋಮಾದಿಗಳನ್ನು ನಡೆಸಿ, ಪ್ರದಕ್ಷಿಣನಮಸ್ಕಾರಮಾಡಿ ವಿಧಿವತ್ತಾಗಿ ಹೋಮಕಾರ್ಯವನ್ನು ನೆರವೇರಿಸಿ ಸಂತೋಷದಿಂದ ಸ್ವಸ್ಥಾನಗಳಲ್ಲಿ ಕುಳಿತುಕೊಂಡರು. ॥೫೫॥

ನೀರಾಜ್ಯ ಗೌರೀಸಹಿತಂ ಮಹೇಶ್ವರಂ
ಮೇನಾ ತದಾ ಸಾ ಪ್ರಣನಾಮ ಹೃಷ್ಟಾ ।
ಗಿರೀಶ್ವರಶ್ಚಾಪಿ ಗಿರೀಂದ್ರಸಂಜಯೋ
ಮಹೋತ್ಸವೋಭೂದ್ಗಣಭೂಸುರಾಣಾಂ ॥೫೬॥

ತಾಂಬೂಲವಿಶ್ರಾಣನಗಂಧಪುಷ್ಪೈಃ
ಸುರಾಸುರಾನ್ ಭೂಧರನಾಯಕಾಂಶ್ಚ ।
ಚಕಾರ ಪೂಜಾಭಿರತೀವ ಹೃಷ್ಟಾನ್
ತುಷ್ಟಾನ್ ಕರೋಜ್ಜಿಷ್ಣುರಥೋ ಶಿವಾಜ್ಞಯಾ ॥೫೭॥

ಗಾವೋ ಹಿರಣ್ಯಂ ಕನಕಾಂಬರಂ ವಸು
ದ್ವಿಜೇಷು ಸರ್ವರ್ಷಿಷು ಶಂಕರಾಜ್ಞಯಾ ।
ವಿಶ್ರಾಣಕೋ ವೈಶ್ರವಣೋ ಮುದಾಭೂ ।
ತ್ತದಾ ಶಿವಾಯಾಃ ಸುವಿವಾಹಮಂಗಲೇ ॥೫೮॥

---

ಅನಂತರ ಸುವಾಸಿನಿಯರು ಪಾರ್ವತೀಪರಶಿವರಿಗೆ ಆರತಿ ಬೆಳಗಿದರು. ಆಗ ಗಿರಿರಾಜಮೇನಾದೇವಿಯರು ಆ ಶಿವದಂಪತಿಗಳಿಗೆ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡಿದರು. ಆ ವಿವಾಹ ಸಂಭ್ರಮದಲ್ಲಿ ಅತ್ಯಾಸಕ್ತರಾಗಿದ್ದ ಸುರಾಸುರಗಣಗಳು ಅತ್ಯಾನಂದತುಂದಿಲರಾಗಿ ಕಾಲಕಳೆದರು. ॥೫೬॥

ಪರಮೇಶ್ವರನ ಅಪ್ಪಣೆಯಂತೆ ಇಂದ್ರನು ಅಲ್ಲಿಗೆ ಬಂದಿದ್ದ ದೇವರಾಕ್ಷಸರಿಗೂ ಪರ್ವತರಾಜರಿಗೂ ಗಂಧತಾಂಬೂಲಾದಿಗಳನ್ನು ಕೊಟ್ಟು, ಭಕ್ಷ್ಯಭೋಜ್ಯಾದಿಗಳಿಂದ ಅವರನ್ನು ತೃಪ್ತಿಪಡಿಸಿ ವಿಧವಿಧವಾದ ಸತ್ಕಾರಾದಿಗಳಿಂದ ಪೂಜಿಸಿದನು. ॥೫೭॥

ಕುಬೇರನಾದರೋ, ಪರಶಿವನಪ್ಪಣೆಯಂತೆ ಅಲ್ಲಿ ನೆರೆದಿದ್ದ ಬ್ರಾಹ್ಮಣರಿಗೂ ಋಷಿಜನರಿಗೂ ಶ್ರೇಷ್ಠವಾದ ಗೋವುಗಳನ್ನೂ ಸುವರ್ಣರಾಶಿಯನ್ನೂ ವಸ್ತ್ರಭೂಷಣಾದಿಗಳನ್ನೂ ದಾನವಾಗಿಕೊಟ್ಟು, ಪಾರ್ವತಿಯ ವಿವಾಹ ಕಾಲದಲ್ಲಿ ಈರೀತಿ ತಾನು ದಾನಮಾಡಿದ್ದಕ್ಕೆ ತಾನೇ ಆನಂದಪಡುತ್ತಿದ್ದನು. ॥೫೮॥

ರುದ್ರಂ ಹರಿದ್ರಾಂಗಮುಮಾ ಚಕಾರ
ಸಾ ನ್ಯಸ್ತತಂದ್ರಾಪಿ ಸುಚಂದ್ರಶೇಖರಂ ।
ತದಾದ್ರಿಪತ್ನೀಗಣಗೀತಮಂದ್ರೈಃ
ಸುಚಂದನಾದ್ರರ್ಗಂ ಪಟವಾಸರೂಷಿತಂ ॥೫೯॥

ಹರೋಪಿ ದೇವ್ಯಾ ವಿಜಹಾರ ಹರ್ಷಿತ
ಶ್ಚಕಾರ ಪುಷ್ಪೈಃ ಸಹಕಾರಪೂಜಾಂ ।
ಕುಜೋಪಿಪಶ್ಯತ್ಯಗಜಾಮಹೇಶ್ವರಂ
ಗಾಯತ್ಸಮುತ್ಫುಲ್ಲಸಿತಾಬ್ಜವಕ್ತ್ರಂ ॥೬೦॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶ್ರೀಶಿವಗೌರೀ ಸಂವಾದೇ ಗಿರಿಜಾಶಂಕರ ವಿವಾಹಮಂಗಳಮಹೋತ್ಸವ ವಿವರಣಂ ನಾಮ ಅಷ್ಟಾದಶೋಽಧ್ಯಾಯಃ

---

ಅನಂತರ ಗಿರಿಜೆಯು ತನ್ನ ಪತಿಗೆ ಅರಿಶಿನೆಣ್ಣೆಶಾಸ್ತ್ರವನ್ನು ನೆರವೇರಿಸುತ್ತಾ ತನ್ನ ಕಡೆಯ ಪರ್ವತಪತ್ನಿಯರು ನಾನಾವಿಧಗಳಾದ ಧ್ವನಿಯಿಂದ ಹಾಡುಗಳನ್ನು ಹೇಳುತ್ತಿರಲು, ಸ್ವಯಂಚಂದನಭೂಷಿತನೂ, ಸುಗಂಧಭೂಯಿಷ್ಠವಾದ ವಸ್ತ್ರವನ್ನು ಧರಿಸಿರುವವನೂ ಆದ ಚಂದ್ರಶೇಖರನ ಅಂಗಕ್ಕೆ ಅರಿಶಿನವನ್ನು ಸವರಿ ಆ ಶಾಸ್ತ್ರವನ್ನು ನೆರವೇರಿಸಿದಳು. ॥೫೯॥

ಪರಶಿವನೂ ಕೂಡ ಪಾರ್ವತಿಯೊಡಗೂಡಿ ಕೊನೆಯದಾದ ಸಹಕಾರವೃಕ್ಷದ (ಮಾವಿನ ಚಿಗುರು) ಪೂಜೆಯನ್ನು ವಸಂತಮಾಧವಪೂಜೆಯ ನೆಪದಿಂದ ನೆರವೇರಿಸಿದನು. ಆಗ ವಸಂತಮಾಧವನು ಆ ಸಹಕಾರವೃಕ್ಷದ ವ್ಯಾಜದಿಂದ ವಿಶಾಲವಾದ ಮುಖಕಮಲಗಳುಳ್ಳ ಮಹೇಶ್ವರ ಮತ್ತು ಪಾರ್ವತಿಯರನ್ನು ನೋಡಿ ಆನಂದಪಟ್ಟನು, ॥೬೦॥

ಇಲ್ಲಿಗೆ ಶ್ರೀ ಶಿವರಹಸ್ಯದ ದ್ವಾದಶಾಂಶದಲ್ಲಿ ಗಿರಿಜಾಕಲ್ಯಾಣಮಹೋತ್ಸವವನ್ನು ವಿವರಿಸುವ ಹದಿನೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಏಕೋನವಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ತೇ ಶಂಕರಂ ಪ್ರಣಮ್ಯೈವ ಗೌರೀಂ ಚ ಸುರಸತ್ತಮಾಃ ।
ವಿಷ್ಣುಬ್ರಹ್ಮಾದಯೋ ದೇವಾ ಗಣೇಶಾ ಮುನಿಸತ್ತಮಾಃ ॥೧॥

ಯಯುಃ ಸ್ವಾವಸಥಂ ತತ್ರ ಹಿಮಶೈಲೇ ಮನೋರಮೇ ।
ಗಿರಿರಾಜಾಭ್ಯನುಜ್ಞಾತಾ ಅದ್ವಾರಂ ಸುರಸತ್ತಮಾಃ ॥೨॥

ದೇವಭೋಗ್ಯಾನಾವಸಥಾನ್ನಿರ್ಮಿತಾನ್ ವಿಶ್ವಕರ್ಮಣಾ ।
ಭಕ್ಷ್ಯಭೋಜ್ಯಾನ್ನಬಹುಲಾನ್ ವನವಾಟೀವಿರಾಜಿತಾನ್ ॥೩॥

---

## ಹತ್ತೊಂಬತ್ತನೇ ಅಧ್ಯಾಯ

ಹೀಗೆ ಪಾರ್ವತೀಪರಿಣಯವು ಮುಗಿಯಲು ಸಕಲ ದೇವತೆಗಳೂ, ವಿಷ್ಣು ಬ್ರಹ್ಮಾದಿ ದೇವಶ್ರೇಷ್ಠರೂ, ಗಣನಾಯಕರೂ, ಪರಮೇಶ್ವರನಿಗೆ ವಂದಿಸುತ್ತಾ ತಮ್ಮ ತಮ್ಮ ಬಿಡಾರಗಳಿಗೆ ತೆರಳಲುದ್ಯುಕ್ತರಾದರು. ತಾವು ಪ್ರಯಾಣಮಾಡುವಾಗ ಗಿರಿರಾಜನ ಅಪ್ಪಣೆಯನ್ನು ಪಡೆಯಲು ಮನೋಹರವಾದ ಗಿರಿರಾಜಗೃಹಕ್ಕೆ ಹೋದರು. ॥೧-೨॥

ವಿಶ್ವಕರ್ಮನು ಅಲ್ಲಿ ದೇವಭೋಗ್ಯವಾದ ಅನೇಕ ವಾಸಗೃಹಗಳನ್ನು ನಿರ್ಮಿಸಿದ್ದನು. ಅದರಲ್ಲೆಲ್ಲಾ ನಾನಾವಿಧವಾದ ಭಕ್ಷ್ಯಭೋಜ್ಯಗಳು ತುಂಬಲ್ಪಟ್ಟಿದ್ದುವು. ವಾಸಗೃಹಗಳ ಸುತ್ತಲೂ ಉದ್ಯಾನವನರಾಜಿಗಳೂ, ಅಲ್ಲಲ್ಲಿ ಸರೋವರಗಳೂ,

ಭೂಷಣೈಶ್ಚೈವ ವಾಸೋಭಿರ್ಗಂಧಪುಷ್ಪೈರ್ವಿರಾಜಿತಾನ್ ।
ಶಯ್ಯಾಸನವಿಹಾರೈಶ್ಚ ಸರೋವರಕುಲ್ಯೈಸ್ತಥಾ ॥೪॥

ನಂದಿಕೇಶಾದಿಗಣಪಾ ಊಚುಸ್ತತ್ರ ಶಿವಾಜ್ಞಯಾ ।
ಮುನಯೋಽಪ್ಯಾಶ್ರಮೇಷ್ವೇವ ನಿಯತೇಷ್ವಾವಸನ್ ದ್ವಿಜಾಃ ॥೫॥

ಕೃತನಿತ್ಯಕ್ರಿಯಾಸ್ತತ್ರ ಶಿವಲಿಂಗಸಮರ್ಚಕಾಃ ।
ಗಣಾಸ್ಸುರಗಣಾಸ್ತತ್ರ ವಸಂತಿ ತ್ರಿದಿವಾಧಿಕೇ ॥೬॥

ವಿಷ್ಟಪಂ ಕಷ್ಟಮಿವ ತೇ ಅಷ್ಟಮೂರ್ತಿಕೃಪಾವಶಾತ್ ।
ನ ಸ್ಮರಂತಿ ವಸಂತ್ಯತ್ರ ಶಿಪಿವಿಷ್ಟಪದಾರ್ಚಕಾಃ ॥೭॥

ನೃತ್ತೈರ್ಗೇಯೈರ್ಭಕ್ಷ್ಯಭೋಜ್ಯೈಃ ಸದಾರಾಃ ಸುಖಿನೋಽವಸನ್ ।
ಗಿರೀಂದ್ರೋ ಗಿರಿಭಿಸ್ಸಾರ್ಧಂ ಮೈನಾಕೇನ ಚ ಮೇನಯಾ ॥೮॥

ನದತ್ಸು ದೇವತೂರ್ಯೇಷು ನೃತ್ಯಂತೀಷ್ವಪ್ಸರಸ್ಸು ಚ ।
ಗೌತಮೋಽನಾಭ್ಯಗಾನ್ ಸರ್ವಾನ್ ವಿಮಾನೇನಾರ್ಕರೋಚಿಷಾ ॥೯॥

---

ಸುತ್ತಲೂ ಶಯ್ಯಾಸನವಿಹಾರಸ್ಥಾನಗಳೂ, ಇನ್ನೂ ನಾನಾವಿಧವಾದ ವಸ್ತ್ರಭೂಷಣಾದಿಗಳೂ ಯಥೇಚ್ಛವಾಗಿ ಕಂಡುಬರುತ್ತಿದ್ದುವು. ॥೩-೪॥

ನಂದಿಕೇಶಾದಿ ಗಣಶ್ರೇಷ್ಠರು ಅಂತಹ ದಿವ್ಯ ವಾಸಗೃಹಗಳಲ್ಲಿ ಮತ್ತೂ ಕೆಲವು ಕಾಲ ಶಿವಾಜ್ಞೆಯಿಂದ ವಾಸಿಸತೊಡಗಿದರು. ಋಷಿಜನರೂ ಸಹ ತಮ್ಮ ತಮ್ಮ ವಾಸಸ್ಥಳದಲ್ಲಿಯೇ ಬಹುಕಾಲ ಶಿವಾರ್ಚನೆಯಿಂದ ಕಾಲಕಳೆಯುತ್ತಾ ನಿಂತಿದ್ದರು. ಅದೇ ರೀತಿ ದೇವತೆಗಳೂ ಕೂಡ ಸ್ವರ್ಗಕ್ಕಿಂತ ಹೆಚ್ಚು ಸುಖಕರವಾದ ಆ ಸ್ಥಳದಲ್ಲಿಯೇ ಸಂತೋಷದಿಂದ ವಾಸಮಾಡುತ್ತಿದ್ದರು. ॥೫-೬॥

ದೇವತೆಗಳು ಶಿವಸಾನ್ನಿಧ್ಯದಲ್ಲಿಯೇ ವಾಸಮಾಡುತ್ತಾ, ಸದಾ ಶಿವನನ್ನೇ ಅರ್ಚಿಸುತ್ತಾ ತಮ್ಮ ಸ್ವರ್ಗವನ್ನೇ ಸ್ಮರಿಸುತ್ತಿರಲಿಲ್ಲ. ತಂತಮ್ಮ ಪತ್ನಿಯರೊಡಗೂಡಿ ನಾಟ್ಯ, ಗಾನ ಇವುಗಳಲ್ಲಿ ಲೋಲುಪರಾಗಿ, ಮೃಷ್ಟಾನ್ನಭೋಜನಾದಿಗಳಿಂದ ಕಾಲ ಕಳೆಯುತ್ತಿದ್ದರು. ಗಿರಿರಾಜನೂ ಕೂಡ ಇತರ ಗಿರಿಗಳೊಡಗೂಡಿ ಪತ್ನೀಪುತ್ರರೊಂದಿಗೆ ಸಂತೋಷದಿಂದಿದ್ದನು. ॥೭-೮॥

ದೇವತೆಗಳು ವಾದ್ಯಧ್ವನಿಗೈದರು, ಅಪ್ಸರಸ್ತ್ರೀಯರು ನರ್ತನಮಾಡಿದರು.

ನಂದಿಕೇಶಾದಿಗಣಪಾನ್ ವಿಷ್ಣುಬ್ರಹ್ಮಾದಯುಸ್ಸುರಾನ್ ।
ಮುನೀಂತ್ಸಶಿಷ್ಯಾಂಸ್ತತ್ರೈವ ಉದ್ವಾಹಾರ್ಥಂ ಸಮಾಗತಾನ್ ॥೧೦॥

ಗಂಧರ್ವಸಿದ್ಧಸಾಧ್ಯಾಂಶ್ಚ ನಾಗಾನ್ ಕಿಂಪುರುಷಾಪ್ಸರಾನ್ ।
ವಿದ್ಯಾಧರಾಂತ್ಸಾಗರಾಂಶ್ಚ ನದ್ಯಕ್ಷ್ರಾಣಿ ಗ್ರಹಾಂಸ್ತಥಾ ॥೧೧॥

ನಿಮಂತ್ರಯತಿ ಸರ್ವಾಂಸ್ತಾನ್ ಸಾಕ್ಷತಂ ಗಿರಿಸತ್ತಮಃ ।
ತತ್ಪತ್ನ್ಯೋಽಪಿ ನಿಮಂತ್ರ್ಯಾಥ ಮೇನಾ ಸಾ ಹೃಷ್ಟಮಾನಸಾ ॥೧೨॥

ಪೂಜಿತೋ ಗಂಧಪುಷ್ಪಾದ್ಯೈರ್ಗೌತಮೋನ ಗಿರೀಶ್ವರಃ ।
ತಾಂಬೂಲದಾನೈರ್ಗಿರಿಭಿರ್ವಸ್ತ್ರಾಲಂಕಾರಭೂಷಣೈಃ ॥೧೩॥

ದೇವಪತ್ನೀಭಿರಪಿ ಸಾ ಮೇನಾ ನಿರ್ಯಂಗನಾಗಣೈಃ ।
ಗಂಧಪುಷ್ಪೈಶ್ಚ ವಾಸೋಭಿಃ ಪೂಜಿತಾ ನಿರ್ಯಯೌ ತದಾ ॥೧೪॥

---

ಗೌತಮಾದಿಋಷಿಗಳೊಡನೆ ದಿವ್ಯವಿಮಾನದಲ್ಲಿ ಬಂದ ನಂದಿಕೇಶ್ವರಾದಿಗಳನ್ನು ಬ್ರಹ್ಮ ವಿಷ್ಣು ಇವರು ಎದುರುಗೊಂಡು ಅವರವರಿಗೆ ಉಚಿತಸ್ಥಾನಾದಿಗಳನ್ನು ತೋರಿಸಿ ಸತ್ಕರಿಸಿದರು. ಮದುವೆಗಾಗಿ ಬಂದಿದ್ದ ಋಷಿಜನರನ್ನೂ ಅವರ ಶಿಷ್ಯರನ್ನೂ ನಾನಾರೀತಿಯಾಗಿ ಹಿಮವಂತನು ಸತ್ಕರಿಸಿದನು. ॥೯-೧೦॥

ಗಿರಿರಾಜನು ಗಂಧರ್ವರು, ಸಿದ್ಧರು, ಸಾಧ್ಯರು, ನಾಗಗಳು, ಕಿಂಪುರುಷರು, ಅಪ್ಸರಸ್ಸುಗಳು, ವಿದ್ಯಾಧರರು, ಸಾಗರಗಳು, ನದಿಗಳು, ನಕ್ಷತ್ರಗಳು, ಗ್ರಹಗಳು ಇವರೇ ಮೊದಲಾದವರಿಗೆ ಮಂತ್ರಾಕ್ಷತೆಯನ್ನು ಕೊಟ್ಟು ಆಹ್ವಾನಿಸಿದನು. ಅವರ ಪತ್ನಿಯರನ್ನೆಲ್ಲಾ ಮೇನಾದೇವಿಯು ಸಂತೋಷದಿಂದ ಬರಮಾಡಿಕೊಂಡಳು. ॥೧೧-೧೨॥

ಗೌತಮಾದಿಯಾದ ಸಕಲ ಮಹರ್ಷಿಗಳಿಗೂ ಗಿರಿರಾಜನು ಗಂಧ, ಪುಷ್ಪ, ತಾಂಬೂಲ ಮುಂತಾದುವುಗಳನ್ನೂ, ವಸ್ತ್ರ, ಭೂಷಣಾದಿಗಳನ್ನೂ ತನ್ನ ಅನುಯಾಯಿಗಳಾದ ಗಿರಿಗಳ ಸಹಾಯದಿಂದ ಒದಗಿಸಿ ಅವರನ್ನು ತೃಪ್ತಿಪಡಿಸಿದನು. ಇತ್ತ ಮೇನಾದೇವಿಯೂ ಗಿರಿಪತ್ನಿಯರೊಡಗೂಡಿ, ಋಷಿಪತ್ನಿಯರಿಗೂ, ದೇವತಾಸ್ತ್ರೀಯರಿಗೂ ಗಂಧಪುಷ್ಪಾದಿಗಳನ್ನಿತ್ತು ಅವರನ್ನೆಲ್ಲಾ ಸತ್ಕರಿಸಿದಳು. ॥೧೩-೧೪॥

ಗಿರಿಣಾ ಚ ವಿಮಾನೇನ ಪೂಜಾಭಿಸ್ತತ್ರ ತತ್ರ ಹಿ ।
ಏವಂ ಪ್ರತಿಸುರಂ ತತ್ರ ನಿಮಂತ್ರ್ಯ ಗಣಪಾನ್ಮುನೀನ್ ॥೧೫॥

ಶಿವಾಜ್ಞಯಾ ಗಿರಿವರೋ ಗೃಹೇ ಭೋಜಯಿತುಂ ಸುರಾನ್ ।
ತತ್ರಾಪ್ಯಸ್ತಂಗತ ಆದಿತ್ಯೇ ಲಕ್ಷಸ್ತಂಭೋರುಮಂಟಪೇ ॥೧೬॥

ಚಿತ್ರಿತೇ ಗಂಧಪುಷ್ಪಾದ್ಯೈರ್ಧೂಪಿತೇ ಸಿಕ್ತಭೂತಲೇ ।
ಕದಲೀದಳವಿಸ್ತೀರ್ಣಪತ್ರೋಪರಿಸುತಾತ್ಮಕೈಃ ॥೧೭॥

ಪಾತ್ರೈಃ ಪಾತ್ರೀಶತಾಕೀರ್ಣಚಮುಸೈರ್ವರ್ಧನೀಗಣೈಃ ।
ರಂಗವಲ್ಲೀವಿರಚಿತೈಃ ಪ್ರತ್ಯಂತೈಃ ಪ್ರೋಕ್ಷಿತೈಸ್ತದಾ ॥೧೮॥

ನಿಷ್ಟಪ್ತಶಾತಕುಂಭೋರು ದೀಪಸ್ತಂಭೈರಲಂಕೃತೈಃ ।
ಭಕ್ಷ್ಯೈರ್ಯವಜಗೋಧೂಮ ಪಾಯಸಾಪೂಪಮಂಡಕೈಃ ॥೧೯॥

ಫೇಣಿಕಾವಟಿಕೈಶ್ಚೈವ ಪರ್ಪಟೈಃ ಘೃತಪಾಚಿತೈಃ ।
ಶೋಳಹಾರಿಮಹಾಶಾಕೈಃ ಸೋಪದಂಶವಿರಾಜಿತೈಃ ॥೨೦॥

---

ಗಿರಿರಾಜನು ಎಲ್ಲಾ ದೇವತೆಗಳಿಗೂ ವಿಮಾನವನ್ನೂ, ಪೂಜಾಸಾಮಗ್ರಿಗಳನ್ನೂ ಒದಗಿಸಿ, ಎಲ್ಲ ಗಣನಾಯಕರನ್ನೂ ಮುನಿಗಳನ್ನೂ ಅಲ್ಲಿಗೆ, ಆದರಿಂದ ಆಹ್ವಾನಿಸಿದನು. ಅನಂತರ ಶಿವಾಜ್ಞೆಯಂತೆ ಎಲ್ಲರಿಗೂ ಭೋಜನಾರ್ಥವಾದ ಸಮಾರಾಧನೆಯನ್ನು ಏರ್ಪಡಿಸಿದನು. ಲಕ್ಷಸ್ತಂಭಗಳಿಂದ ನಿರ್ಮಿತವಾಗಿದ್ದ ಒಂದು ದೊಡ್ಡ ಮಂಟಪದಲ್ಲಿ ಸೂರ್ಯಾಸ್ತವಾದೊಡನೆಯೇ ಭೋಜನ ಸೌಕರ್ಯವು ಏರ್ಪಾಡಾಯಿತು. ॥೧೫-೧೬॥

ಆ ಭೋಜನಶಾಲೆಯು ಗಂಧಪುಷ್ಪಾದಿಗಳಿಂದ ಅಲಂಕೃತವಾಗಿದ್ದಿತು. ನಾನಾ ವಿಧವಾದ ಅಲಂಕಾರಗಳಿಂದ ಚಿತ್ರವಿಚಿತ್ರವಾಗಿದ್ದಿತು. ನೆಲದಮೇಲೆಲ್ಲಾ ಸಾಲಾಗಿ ವಿಶಾಲವಾದ ಬಾಳೆಎಲೆಗಳನ್ನು ಹಾಕಿದ್ದರು. ಅದರಮೇಲೆ ಬೆಳ್ಳಿಯತಟ್ಟೆಗಳೂ ದೊನ್ನೆಗಳೂ ಅಸಂಖ್ಯಾತವಾದ ರೀತಿಯಲ್ಲಿ ಇಡಲ್ಪಟ್ಟಿದ್ದುವು. ಆ ಎಲೆಗಳ ಮುಂದೆಲ್ಲಾ ರಂಗವಲ್ಲಿಯನ್ನಿಟ್ಟು ಪ್ರೋಕ್ಷಣೆಮಾಡಿದ್ದರು. ॥೧೭-೧೮॥

ಎಲೆಗಳ ಮುಂದೆ ಸುವರ್ಣಸ್ತಂಭಗಳನ್ನಿಟ್ಟು ದೀಪ ಹೊತ್ತಿಸಿದ್ದರು. ಎಲೆಯಮೇಲೆ, ಗೋಧಿ, ಅಕ್ಕಿ ಮೊದಲಾದವುಗಳಿಂದ ಮಾಡಿದ ಭಕ್ಷ್ಯಗಳು,

ಲಡ್ಡುಕೈರ್ಮೋದಕೈಶ್ಚೈವ ದಧಿಕ್ಷೀರಾಜ್ಯಶರ್ಕರಾಃ ।
ಮಾಂಸಮುಚ್ಚಾವಚಂಸ್ತತ್ರ ಮತ್ಸ್ಯೈರ್ಮೈಣೇಯಗೃಂಜಕಾಃ ॥೨೧॥

ನಿಷ್ಟಪ್ತಂ ಘೃತಸಂತಪ್ತಂ ಲವಂಗೇಲಾಸುಪಾಚಿತಂ ।
ಪ್ರಾಜ್ಯಾಜ್ಯಂ ಗಂಧಸುಭಗಂ ವರಪಾತ್ರೇಷ್ವಲಂಕೃತಂ ॥೨೨॥

ವಸಂತಮಲ್ಲೀಕಲಿಕಸವಾನ್ನಂ ಗಂಧಭಾಸುರಂ ।
ಸ ಗಿರಿರ್ಗಿರಿಪತ್ನೀಭಿಃ ಪರಿವೇಷಯದಂಜಸಾ ॥೨೩॥

ಮಾಂಸೋದನೈಸ್ತಥಾ ಚಿತ್ರೈರ್ದಧಿಕ್ಷೀರಾನ್ವಿತೈಸ್ತದಾ ।
ಮಧ್ಯೇ ವೇದ್ಯಾಂ ಮಹಾದೇವ ಪಾತ್ರಂ ಗೌರ್ಯಾಶ್ಚ ಭಾಸುರಂ ॥೨೪॥

ರತ್ನಮುಕ್ತಾವಿಚಿತ್ರೇಣ ರಂಗವಲ್ಲ್ಯಾ ವಿರಾಜಿತಂ ।
ರತ್ನದೀಪಮಹಾಸ್ತಂಭೈಃ ಪರ್ಯಂತೇಷ್ವಪ್ಯಲಂಕೃತಂ ॥೨೫॥

---

ಒಬ್ಬಟ್ಟು ಮೊಸರು, ಫೇಣಿ, ಒಡೆ, ತುಪ್ಪದಲ್ಲಿ ಕರಿದಿದ್ದ ಹಪ್ಪಳಗಳು, ಇನ್ನೂ ನಾನಾವಿಧವಾದ ಕಾಯಿಪಲ್ಯಗಳ ಭಕ್ಷ್ಯಗಳು, ಉಪ್ಪಿನಕಾಯಿಯೇ ಮೊದಲಾದ ವ್ಯಂಜನದ್ರವ್ಯಗಳೂ ಸಿದ್ಧವಾಗಿದ್ದುವು. ॥೧೯-೨೦॥

ಲಾಡು, ಕಡುಬು, ಹಾಲು, ಮೊಸರು, ತುಪ್ಪ, ಸಕ್ಕರೆ ಮುಂತಾದ ತಿಂಡಿಗಳನ್ನೂ, ಮೀನು, ಜಿಂಕೆ, ಮುಂತಾದ ಪ್ರಾಣಿಗಳ ಮಾಂಸವನ್ನೂ, ತುಪ್ಪದಲ್ಲಿ ಕರಿದು, ಲವಂಗ, ಏಲಕ್ಕಿ ಮುಂತಾದವುಗಳಿಂದ ಕೂಡಿಸಿದ ಸಿಹಿಭಕ್ಷ್ಯಗಳನ್ನೂ, ಸುಗಂಧಮಯವಾದ ತುಪ್ಪದ ಪಾತ್ರೆಗಳನ್ನೂ ಊಟಕ್ಕಾಗಿ ಸಿದ್ಧಗೊಳಿಸಿದ್ದರು. ॥೨೧-೨೨॥

ವಸಂತ ಋತುವಿನ ಮಲ್ಲಿಗೆ ಮೊಗ್ಗಿನಂತೆ ಶುಭ್ರವಾಗಿ ಸುಗಂಧವಾಗಿರುವ ಅನ್ನವನ್ನು, ಪರ್ವತಗಳು ಮತ್ತು ಅವರ ಪತ್ನಿಯರು ಎಲ್ಲರ ಭೋಜನಪಾತ್ರೆಗಳಿಗೂ ಬಡಿಸಿದರು. ಮಾಂಸ ಮಿಶ್ರಿತವಾದ ಅನ್ನ, ಚಿತ್ರಾನ್ನ, ಹಾಲು, ಮೊಸರು, ಮುಂತಾದುವುಗಳನ್ನು ಹೇರಳವಾಗಿ ಬಡಿಸಿದರು. ॥೨೩-೨೪॥

ಆ ಊಟದ ಎಲೆಯ ಸುತ್ತಲೂ ರತ್ನ ಮತ್ತು ಮುತ್ತುಗಳಿಂದಲೇ ರಂಗವಲ್ಲಿಯ ಗೆರೆಗಳನ್ನಿಟ್ಟಿದ್ದರು. ರತ್ನಮಯವಾದ ದೀಪಸ್ತಂಭಗಳನ್ನಿಟ್ಟು ದೀಪ ಹೊತ್ತಿಸಿದ್ದರು. ಮೂರು ಕಾಲುಮಣೆಗಳಮೇಲೆ ಎರಡು ರತ್ನಪಾತ್ರೆಗಳನ್ನಿಟ್ಟು ದೇವದೇವ

ತ್ರಿಪದೀವಮೌಲಿಭಾಗಸ್ಥರತ್ನಪಾತ್ರದ್ವಯೇ ತದಾ ।
ದೇವಸ್ಯ ದೇವ್ಯಾ ರುಚಿರಂ ಭಕ್ಷ್ಯಭೋಜ್ಯವಿರಾಜಿತಂ ॥೧೬॥

ಸಿಂಹಾಸನದ್ವಯಂ ತತ್ರ ರತ್ನಪರ್ಯಂತಭಾಸುರಂ ।
ನಿಧಾಯ ಗಿರಿರಾಟ್ತತ್ರ ಸುರಾನಾಹೂಯ ತಾನ್ ಗಣಾನ್ ॥೧೭॥

ಮುನೀನನ್ಯಾನ್ ಗಣಾಂಸ್ತತ್ರ ಪ್ರತಿಪಾತ್ರಂ ನಿವೇಶಯತ್ ।
ಹೇಮಚಿತ್ರೇಷು ಪೀಠೇಷು ಸಂನಿವೇಶ್ಯಾನುಪೂರ್ವಶಃ ॥೧೮॥

ಸುಸ್ನಾತಾಂಸ್ತಾಂತ್ಸುವಸನಾನ್ನಾಚಾಂತಾನ್ ಗಂಧಪುಷ್ಪಿತಾನ್ ।
ಭೃಂಗಾರುಕಲಶೋಪೇತಾನಾಸ್ಥಿತಾನ್ ಪಂಕ್ತಿಶಃ ಸುರಾನ್ ॥೧೯॥

ವಾಮದಕ್ಷಿಣಪಾರ್ಶ್ವೇಽಥ ಮಹೇಶಸ್ಯ ಹರಿಂ ವಿಧಿಂ ।
ನ್ಯವೇಶಯತ್ಗಿರಿಶ್ರೇಷ್ಠೋ ಮುನಿಪಂಕ್ತ್ಯಾ ಮುನೀಶ್ವರಾನ್ ॥೨೦॥

ಶಕ್ರಾದೀನಾಂ ಸುರಾಣಾಂ ಚ ಪಂಕ್ತ್ಯಾ ತೇ ಸುರಸತ್ತಮಾಃ ।
ನಂದಿಕೇಶಾದಿಗಣಪಾಃ ಸ್ವಗಣೈಃ ಪಂಕ್ತಿಶಃ ಸ್ಥಿತಾಃ ॥೨೧॥

---

ನಿಗೂ ಪಾರ್ವತಿಗೂ ಮನೋಹರವಾದ ಭಕ್ಷ್ಯಭೋಜ್ಯಗಳನ್ನಿಟ್ಟು ಸಿದ್ಧಗೊಳಿಸಿದ್ದರು. ॥೧೫-೧೬॥

ಅಲ್ಲಿಯೇ ಎರಡು ರತ್ನಮಯಗಳಾದ ಸಿಂಹಾಸನಗಳನ್ನು ಹಾಕಿದ್ದರು. ಗಿರಿರಾಜನು ಋಷಿಗಳೇ ಮೊದಲಾಗಿ ಎಲ್ಲರನ್ನೂ ಕರೆದು, ಅವರವರಿಗೆ ಉಚಿತವಾದ ಭೋಜನಪಾತ್ರೆಗಳ ಮುಂದೆ ಅವರವರನ್ನು ಕುಳ್ಳಿರಿಸಿದನು. ಎಲ್ಲರಿಗೂ ಸುವರ್ಣಮಯವೂ ಚಿತ್ರವಿಚಿತ್ರವೂ ಆದ ಪೀಠಗಳನ್ನು ಹಾಕಿಸಲಾಗಿತ್ತು. ॥೧೭-೧೮॥

ಭೋಜನಕ್ಕೆ ಬರುವ ಸಕಲಮುನಿಗಳೂ, ದೇವತೆಗಳೂ ಸ್ನಾನಮಾಡಿ, ಮಡಿಬಟ್ಟೆಯುಟ್ಟು ಗಂಧಪುಷ್ಪಾದಿಗಳಿಂದ ಅಲಂಕೃತರಾಗಿದ್ದರು. ಪಾರ್ವತೀಪರಶಿವರ ಅಕ್ಕಪಕ್ಕದಲ್ಲಿ ವಿಷ್ಣುವಿಗೂ ಬ್ರಹ್ಮನಿಗೂ ಊಟದ ಪಾತ್ರೆಗಳನ್ನು ಬಡಿಸಿದ್ದರು. ಋಷಿಜನರೂ ದೇವತೆಗಳೂ ಒಂದೊಂದು ಸಾಲನ್ನು ಹಿಡಿದು ಸಾಲಾಗಿ ಕುಳಿತುಕೊಂಡರು. ॥೧೯-೨೦॥

ದೇವೇಂದ್ರನೂ ಹಾಗೆಯೇ ದೇವಶ್ರೇಷ್ಠರೂ, ನಂದಿಕೇಶ್ವರನೂ, ಇತರ ಗಣನಾಯಕರೂ ಒಂದೊಂದು ಸಾಲನ್ನು ಹಿಡಿದು ಕುಳಿತರು. ಸಮಸ್ತಗಿರಿಗಳೂ ಕೂಡ

ಗಿರಯೋಽಪಿ ಸ್ವಪಂಕ್ತಿಸ್ಥಾ ಮೇಢೀಕೃತ್ಯ ಹಿಮಾಚಲಂ ।
ಮೈನಾಕಮನುತೇ ಸರ್ವೇ ಸಂಸ್ಥಿತಾ ವಿಷ್ಟರೇಷ್ವಥ ॥೩೨॥

ದೇವಾಂಗನಾಗಣಾನಾಂ ಚ ಪತ್ನ್ಯೋ ಮುನಿಪತ್ನಯಃ ।
ಪ್ರಾವೃತಾಂತರ್ಗೃಹೇ ತತ್ರ ಮೇನಯಾ ಗಿರಿಪತ್ನಿಭಿಃ ॥೩೩॥

ರಂಗವಲ್ಯಾದಿರಚಿತೇ ದೀಪಸ್ತಂಭೈರಲಂಕೃತೇ ।
ಪಾತ್ರೇಷು ಭಕ್ಷ್ಯಭೋಜ್ಯಾನ್ನಪೂರ್ಣೇಷ್ವಥ ಸುವಾಸಸಃ ॥೩೪॥

ಸರ್ವಾಂಗಭೂಷಣೋಪೇತಾಃ ನಿಶಾಕುಂಕುಮಭೂಷಿತಾಃ ।
ವಿವಿಧಾಲಾಪಕುಶಲಾ ಅನ್ಯೋನ್ಯಂ ಚಕ್ರಿರೇ ಕಥಾಃ ॥೩೫॥

ಹೇಮಪೀಠೇಷು ಲಕ್ಷ್ಮ್ಯಾದ್ಯಾಃ ಶಚೀವಾಣ್ಯಾದಯೋಂಗನಾಃ ।
ಅರುಂಧತೀಮುಖಾಸ್ತತ್ರ ಸುಯಶಾದ್ಯಾ ಗಣಾಂಗನಾಃ ॥೩೬॥

ಮೇನಯಾ ಪೂಜಿತಾಸ್ತತ್ರ ಸಂಸ್ಥಿತಾ ಕಲಶೈರ್ಯುತಾಃ ।
ದೇವಾನುಪಾವಿಶ್ಯ ಗಿರಿರ್ಗೃಹೇಶಂ ಪ್ರಾಂಜಲಿಸ್ತದಾ ॥೩೭॥

---

ಮಧ್ಯೆ ಹಿಮಗಿರಿರಾಜನನ್ನು ಕೂರಿಸಿಕೊಂಡು ಮೈನಾಕನೊಡನೆ ತಮ್ಮ ತಮ್ಮ ದಿವ್ಯಾಸನಗಳಲ್ಲಿ ಕುಳಿತುಕೊಂಡರು. ॥೩೧-೩೨॥

ದೇವತಾಸ್ತ್ರೀಯರೂ, ಗಣಪಸ್ತ್ರೀಯರೂ, ಋಷಿಪತ್ನಿಯರೂ, ಮೇನಾದೇವಿಯೊಡಗೂಡಿ ಒಳಮನೆಯಲ್ಲಿ ಸಾಲಾಗಿ ಭೋಜನಕ್ಕೆ ಕುಳಿತರು. ಅವರು ಕುಳಿತಿರುವ ಭೋಜನಪಾತ್ರೆಗಳಮುಂದೆ ದೀಪಸ್ತಂಭಗಳೂ, ರಂಗವಲ್ಯಾದಿಗಳೂ ಇಡಲ್ಪಟ್ಟಿದ್ದುವು. ಭೋಜನಪಾತ್ರೆಗಳಲ್ಲಿ ಭಕ್ಷ್ಯಭೋಜ್ಯಗಳೂ, ಅನ್ನರಾಶಿಯೂ ಮನೋಹರವಾಗಿ ಕಾಣುತ್ತಿದ್ದುವು. ಆ ಸ್ತ್ರೀಯರೆಲ್ಲರೂ ಮನೋಹರವಾದ ವಸ್ತ್ರಾಭರಣಗಳಿಂದಲಂಕೃತರಾಗಿದ್ದರು. ॥೩೩-೩೪॥

ಸರ್ವಾಂಗಸುಂದರಿಯರಾಗಿ ಆ ದೇವತಾಸ್ತ್ರೀಯರು ನಿಶಾಕುಂಕುಮವನ್ನಿಟ್ಟು, ಪರಸ್ಪರವಾಗಿ ಮಾತುಕತೆಗಳನ್ನಾಡುತ್ತಾ, ಲಕ್ಷ್ಮೀ, ಸರಸ್ವತೀ, ಶಚೀ, ಅರುಂಧತಿ, ಸುಯಶಾದೇವಿ, ಇವರೇ ಮೊದಲಾದ ದೇವತಾಸ್ತ್ರೀಯರೂ ಋಷಿಪತ್ನಿಯರೂ ಗಣಸ್ತ್ರೀಯರೂ ಕೈಯ್ಯಲ್ಲಿ ಸ್ಥಾಲಿಯನ್ನು ಹಿಡಿದು ಮೇನಾದೇವಿಯಿಂದ ಆಹ್ವಾನಿತರಾಗಿ ಅಲ್ಲಲ್ಲಿ ಊಟಕ್ಕೆ ಕುಳಿತುಕೊಂಡರು. ಇತ್ತ ಗಿರಿರಾಜನು ಅಲ್ಲಿ

ಉವಾಚ ಗೌರ್ಯಾ ಸಹಿತಂ ರತ್ನಮಂಚಸ್ಥಮೀಶ್ವರಂ ॥೩೮॥

ದೇವಾಸ್ಸಮಾಗತಾಃ ಸರ್ವೇ ತವೈವಾಜ್ಞಾಕರಾ ಗಣಾಃ ।
ಮುನಯಃ ಸಹ ಪತ್ನೀಭಿಃ ಸುರಾಣಾಂ ಗಣಸಾಂಗನಾಃ ॥೩೯॥

ಮೇನಯಾ ಸಂಸ್ಥಿತಾಃ ಸರ್ವಾಃ ಪೂಜಿತಾಶ್ಚ ಯಥಾವಿಧಿ ।
ಪಂಕ್ತಿಶಃ ಸಂಸ್ಥಿತಾಸ್ಸರ್ವೇ ಪ್ರತಿಪಾತ್ರೇಷು ಶಂಕರಂ ॥೪೦॥

ತ್ವಾಂ ಪ್ರತೀಕ್ಷಂತಿ ವಿಶ್ವೇಶಂ ಗೌರ್ಯಾ ಭೋಕ್ತುಂ ಸುಜಗ್ಧಿನಃ ।
ತ್ವತ್ಪ್ರಸಾದಾನ್ನಭೋಜ್ಯಾತೋ ಮುಕ್ತಾಸ್ತೇ ಸುರಸತ್ತಮಾಃ ॥೪೧॥

ಹೃತ್ತಮೋನಾಶಕಂ ಶಂಭೋ ತವ ನೈವೇದ್ಯಮುತ್ತಮಂ ।
ಇತ್ಯುಕ್ತೋ ಗಿರಿವರ್ಯೇಣ ಮಹಾದೇವೋಂಬಯಾ ಸಹ ॥೪೨॥

ಸುಸ್ನಾತ್ವಾ ವಾಸಸಾಯುಕ್ತೋ ಭೂಷಣೈರ್ಮಂಡಿತಾಂಗಕಃ ।
ಮುಕುಟೋದ್ಭಾಸಿಚಂದ್ರಾಂಶುಧವಲೀಕೃತದಿಙ್ಮುಖಃ ॥೪೩॥

---

ಕುಳಿತಿದ್ದ ದೇವತೆಗಳನ್ನು ನೋಡಿ, ಗೌರೀದೇವಿಯೊಡನೆ ರತ್ನಮಂಚದಲ್ಲಿ ಕುಳಿತಿರುವ ಮಹೇಶ್ವರನನ್ನು ನೋಡುತ್ತಾ ಹೀಗೆಂದನು. ॥೩೫-೩೬-೩೭-೩೮॥

ಮಹಾದೇವನೇ, ನಿನ್ನ ಆಜ್ಞಾಧಾರಿಗಳಾದ ಸಮಸ್ತ ದೇವತೆಗಳೂ ಮುನಿಗಳೂ ತಮ್ಮ ಪತ್ನಿಯರೊಂದಿಗೆ ಇಲ್ಲಿಗೆ ಭೋಜನಾರ್ಥವಾಗಿ ಬಂದಿರುವರು. ಸಮಸ್ತ ಸ್ತ್ರೀಯರೂ ಮೇನಾದೇವಿಯಿಂದ ಸತ್ಕೃತರಾಗಿ ಭೋಜನಪಾತ್ರೆಗಳ ಮುಂದೆ ಕುಳಿತಿರುವರು. ಎಲ್ಲರೂ ಸಾಲು ಸಾಲಾಗಿ ಕುಳಿತು ಲೋಕಶಂಕರನಾದ ನಿನ್ನನ್ನೇ ನೋಡುತ್ತಿರುವರು. ॥೩೯-೪೦॥

ಮತ್ತು ಗೌರೀದೇವಿಯೊಡನೆ ನೀನು ಊಟಮಾಡುವುದನ್ನೇ ಇವರು ನಿರೀಕ್ಷಿಸುತ್ತಿರುವರು. ನಿನ್ನ ಪ್ರಸಾದವನ್ನು ಭಕ್ಷಿಸುವುದರಿಂದ ಈ ದೇವತೆಗಳೆಲ್ಲರೂ ಈಗ ಮುಕ್ತರಾಗುವರು. ಏಕೆಂದರೆ ಪರಶಿವನ ನೈವೇದ್ಯ ಶೇಷವು ಮನಸ್ಸಿನ ಅಜ್ಞಾನ ರಾಶಿಯನ್ನು ನಿವಾರಿಸಬಲ್ಲುದು. ದಯಮಾಡಬೇಕು. ಎಂದು ಗಿರಿರಾಜನು ಮಹಾದೇವನನ್ನು ಪ್ರಾರ್ಥಿಸುತ್ತಿರಲು, ಆಗ ಶಂಕರನು ಪಾರ್ವತಿಯೊಡಗೂಡಿ ಸ್ನಾನಾದಿಗಳಿಂದ ಶುದ್ಧನಾಗಿ ಭೋಜನ ಶಾಲಾಭಿಮುಖವಾಗಿ ಹೊರಟನು. ॥೪೧-೪೨॥

ಆಗ ಮಹಾದೇವನು ಶುಭ್ರವಸ್ತ್ರಗಳನ್ನು ಧರಿಸಿದ್ದನು. ಸಕಲಾಭರಣ

ತ್ರಿಪುಂಡ್ರಗಂಧರೇಖಾಂಕೋ ಗಂಧಪುಷ್ಪೈರಲಂಕೃತಃ ।
ಗಣೇಶ್ವರೈಃ ಪಾದುಕಾಚ್ಛಪಾದಾಭ್ಯಾಂ ಪರಿವೀಜಿತಃ ॥೪೪॥

ಚಾಮರೈಃ ಸ ತದಾ ಗೌರ್ಯಾ ಸರ್ವಾಭರಣಭೂಷಯಾ ।
ಸ ಯಯೌ ಸುರಪಂಕ್ತಿಂ ತಾಂ ಪ್ರಣಾಮಮುಖರೋತ್ಥಿತಾಂ ॥೪೫॥

ಆಲೋಕ್ಯ ಸೋಮಧಾಮಾಂಶು ಸುಧಾದೃಷ್ಟ್ಯಾ ಸುರಾನ್ ಗಣಾನ್ ।
ಮುನೀನ್ ಗಿರೀಂತ್ಸವಿಶ್ವೇಶೋ ದೇವ್ಯಾ ವೇದ್ಯಾಂ ವರಾಸನೇ ॥೪೬॥

ನಿಷಸಾದ ಮಹಾದೇವಃ ಸೀದತೇತಿ ತದಾಬ್ರವೀತ್ ।
ಶಿವಾಜ್ಞಯಾ ತತಸ್ಸರ್ವೇ ಯಥಾಪೂರ್ವಂ ವ್ಯವಸ್ಥಿತಾಃ ॥೪೭॥

ಬ್ರಹ್ಮವಿಷ್ಣ್ವಾದಯೋ ದೇವಾ ಗಣಾ ಮುನಿಗಣಾಸ್ತಥಾ ।
ರತ್ನಭೃಂಗಾರುಕಲಶೇ ರ್ವರ್ಧನಾಶೀತಲೈರ್ಜಲೈಃ ॥೪೮॥

---

ಗಳಿಂದ ಅಲಂಕೃತನಾಗಿದ್ದನು. ಕಿರೀಟಗಳ ಕಾಂತಿಯಿಂದಲೂ ಚಂದ್ರನ ಚಂದ್ರಿಕೆಯಿಂದಲೂ ಸಕಲ ದಿಕ್ಕುಗಳನ್ನೂ ಬೆಳಗಿಸುತ್ತಿದ್ದನು. ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನೂ, ಶ್ರೀಗಂಧವನ್ನೂ ರೇಖಾಕಾರವಾಗಿ ಧರಿಸಿದ್ದನು. ಗಂಧಪುಷ್ಪಾದಿಗಳಿಂದ ಅಲಂಕೃತನಾಗಿದ್ದನು. ಸುವರ್ಣಮಯವಾದ ಪಾದುಕೆಗಳಿಂದ ವಿರಾಜಿಸುವ ಪಾದವುಳ್ಳವನಾಗಿ ಗಣನಾಯಕರಿಂದ ಚಾಮರಸೇವೆಯನ್ನು ಸ್ವೀಕರಿಸುತ್ತಾ ಮುಂದೆ ಬಂದನು. ॥೪೩-೪೪॥

ಸರ್ವಾಭರಣಭೂಷಿತಳಾದ ಗೌರೀದೇವಿಯೊಡನೆ ಶಂಕರನು ಮೊದಲು ದೇವತೆಗಳು ಮತ್ತು ಮುನಿಗಳು ಕುಳಿತಿದ್ದ ಸಾಲಿನ ಮುಂದೆ ಬಂದನು. ಹಾಗೆ ಮಂದಗಮನದಿಂದ ದಯಮಾಡಿಸಿದ ಪಾರ್ವತೀಪರಶಿವರನ್ನು ನೋಡಿ ಎಲ್ಲರೂ ಎದ್ದುನಿಂತು ನಮಸ್ಕರಿಸಿದರು. ಅಂತಹ ತನ್ನ ಭಕ್ತಗಣವನ್ನೆಲ್ಲಾ ಶಂಕರನು ಕೃಪಾಪಾಂಗದಿಂದ ನೋಡುತ್ತಾ, ತನ್ನ ಶಿರಸ್ಸಿನಲ್ಲಿರುವ ಚಂದ್ರಿಕೆಯಿಂದ ಅವರನ್ನು ಬೆಳಗಿಸುತ್ತಾ ಪತ್ನಿಯೊಡನೆ ವಿವಾಹವೇದಿಕೆಯನ್ನು ಪ್ರವೇಶಿಸಿದನು. ॥೪೫-೪೬॥

ಅಲ್ಲಿ ತಾನೂ ಕುಳಿತುಕೊಂಡು, ಎಲ್ಲರನ್ನೂ ಕುಳಿತುಕೊಳ್ಳುವಂತೆ ಅಪ್ಪಣೆಯಿತ್ತನು. ಒಡನೆಯೇ ಎಲ್ಲರೂ ತಂತಮ್ಮ ಸ್ಥಾನಗಳಲ್ಲಿ ಕುಳಿತುಕೊಂಡರು. ಬ್ರಹ್ಮವಿಷ್ಣ್ವಾದಿದೇವತೆಗಳೂ, ಮುನಿಗಣಗಳೂ ತಂತಮ್ಮ ಸ್ಥಾನಗಳಲ್ಲಿ ಭೋಜನಪಾತ್ರೆ

ದೇವ್ಯಾ ಕರಾಂಬುಜಸ್ಪರ್ಶಿ ಸಂಪ್ರೋಕ್ಷ್ಯ ಪರಿಷಿಚ್ಯ ಚ ।
ಗೌರ್ಯಾ ಸ ಬುಭುಜೇ ಶಂಭುರ್ಗಣೇಶೈಃ ಪರಿವೀಜಿತಃ ॥೪೯॥

ದೇವ್ಯಾ ಸಖೀಗಣೈಸ್ತತ್ರ ವೀಜಿತಾ ಸಾ ಮಹೇಶ್ವರೀ ।
ಶಿವನೈವೇದ್ಯಶೇಷಂ ತದ್ಧಿಕ್ಕೃತಾಮೃತಮುತ್ತಮಂ ॥೫೦॥

ಬುಭುಜೇ ಸಾ ತದಾ ಗೌರೀ ವರಾನ್ನಂ ಪರಯಾ ಮುದಾ ।
ಅನುಜ್ಞಾತಾ ಸುರಾಸ್ತತ್ರ ಮುನಯೋ ಗಿರಯೋ ಗಣಾಃ ॥೫೧॥

ಬುಭುಜುಃ ಶಿವನೈವೇದ್ಯಂ ಗಿರಿರಾಜೇನ ಪೂಜಿತಾಃ ।
ಮೇನಾಪಿ ದೇವಪತ್ನೀಭಿರ್ಬುಭುಜೇ ಪೂಜಯನ್ ಸ್ತ್ರಿಯಃ ॥೫೨॥

ನ ಕಶ್ಚಿದ್ವ್ಯಾಜಹಾರೇಶಸಂನಿಧೌ ಪಂಕ್ತಿಸಂಸ್ಥಿತಃ ।
ಪರಿವೇಷಕರಾಸ್ತತ್ರ ಸಂಚರಂತಿ ತದಾ ಸ್ತ್ರಿಯಃ ॥೫೩॥

---

ಗಳ ಮುಂದೆ ಕುಳಿತರು. ಪರಶಿವನಾದರೋ ಸ್ಥಿರಜಲವುಳ್ಳ ರತ್ನಮಯವಾದ ಕಲಶದಿಂದ ಪಾರ್ವತಿಯು ಹಾಕುತ್ತಿರುವ ಜಲಧಾರೆಯಿಂದ ಪರಿಷೇಚನಮಾಡಿದನು ॥೪೭-೪೮॥

ಅನಂತರ ಶಂಕರನ ಪರಿಚಾರಕರು ಚಾಮರಗಳಿಂದ ಬೀಸುತ್ತಿರಲು, ಗೌರೀದೇವಿಯ ಸಖಿಯರು ಪಾರ್ವತಿಗೆ ಚಾಮರಸೇವೆಯನ್ನು ಸಲ್ಲಿಸುತ್ತಿದ್ದರು. ಶಂಕರನು ತಾನು ಭೋಜನಕ್ಕೆ ಆರಂಭಿಸಲು, ಅವನಿಂದ ಭುಕ್ತಶಿಷ್ಟವಾದ ಪ್ರಸಾದವನ್ನು ಅಮೃತಕ್ಕಿಂತಲೂ ರುಚಿಯಾಗಿರುವುದೆಂದು ಭಾವಿಸುತ್ತಾ ಪಾರ್ವತಿಯು ಊಟಕ್ಕೆ ಪ್ರಾರಂಭಿಸಿದಳು. ॥೪೯-೫೦॥

ಶಿವದಂಪತಿಗಳು ಭೋಜನಕ್ಕೆ ಆರಂಭಿಸಿದೊಡನೆಯೇ, ಎಲ್ಲ ದೇವತೆಗಳೂ, ಋಷಿಜನರೂ, ಗಿರಿಗಳೂ, ಶಿವಾಜ್ಞೆಯನ್ನು ಪಡೆದು ಗಿರಿರಾಜನಿಂದ ಪೂಜಿತರಾಗಿ ಭೋಜನಕ್ಕೆ ಆರಂಭಿಸಿದರು. ಮೇನಾದೇವಿಯು ದೇವಪತ್ನಿಯರೊಡನೆ ಮಾತನಾಡುತ್ತಾ ಎಲ್ಲರನ್ನೂ ಸತ್ಕರಿಸಿ ತಾನೂ ಭೋಜನಕ್ಕೆ ಕುಳಿತಳು. ॥೫೧-೫೨॥

ಈಶ್ವರನ ಪಂಕ್ತಿಯಲ್ಲಿ ಕುಳಿತವರಲ್ಲಿ ಯಾರೊಬ್ಬರೂ ಏನನ್ನೂ ಮಾತನಾಡುತ್ತಿರಲಿಲ್ಲ. ಬಡಿಸುವ ಹೆಂಗಸರು ಮಾತ್ರ ಚಿನ್ನದ ಮತ್ತು ರನ್ನದ ಪಾತ್ರೆಗಳನ್ನು

ಹೇಮಭಾಂಡೈಃ ರತ್ನಪಾತ್ರೀಕರಾ ದರ್ವೀಕರಾಸ್ತಥಾ ।
ರಸವಂತಿ ಚ ಪಾನಾನಿ ಮಧುಮಾಂಸಕರಾಸ್ಸ್ತ್ರಿಯಃ ॥೩೪॥

ಕದಲೀಪಾನಸಾಮ್ರಾದಿಕರಾಸ್ತತ್ರ ವರಸ್ತ್ರಿಯಃ ।
ಸುಪಂಚಪಾಯಸಾಪೂಪಪಾತ್ರೀಕರಧರಾಸ್ಸ್ತ್ರಿಯಃ ॥೩೫॥

ಶರ್ಕರಾಪಾತ್ರಸುಕರಾ ದಧಿಮಂಡಕರಾಸ್ಸ್ತ್ರಿಯಃ ।
ಮಾಂಸಮುಚ್ಚಾವಚಂ ಲೇಹ್ಯಂ ಚೋಷ್ಯಭೂಷ್ಯತ್ಕರಾಸ್ಸ್ತ್ರಿಯಃ ॥೩೬॥

ಸುಶೀತಪಾಟಲೋಶೀರ ಗಂಧಪುಷ್ಪಾಂಬುದಾಯಿನಃ ।
ಪರಿವೇಷಕರಾ ಸೂದಾ ಯುವಾನೋ ಮೃಷ್ಟಕುಂಡಲಾಃ ॥೩೭॥

ರಣನ್ನೂಪುರಪಾದಾಬ್ಜಾ ಕರಕಂಕಣನಿಸ್ವನೈಃ ।
ಸಂಚರಂತಿ ಸ್ತ್ರಿಯಃ ಪಂಕ್ತ್ಯಾ ಸಂಘಶಸ್ತಟಿದುಜ್ಜ್ವಲಾಃ ॥೩೮॥

ಪ್ರತಿಪಾತ್ರಂ ಸಮುದ್ವೀಕ್ಷ್ಯ ಯದ್ಭೋಜ್ಯಂ ಯಸ್ಯ ಯತ್ಪ್ರಿಯಂ ।
ಮನಸಾ ಚಿಂತನಾತ್ಪೂರ್ವಂ ತತ್ಪಾತ್ರೇ ತತ್ಕ್ಷಿಪಂತ್ಯಪಿ ॥೩೯॥

---

ಹಿಡಿದು ಸೌಟುಗಳಿಂದ ಬಡಿಸುತ್ತಿದ್ದರು. ರಸವತ್ತಾದ ಪಾನೀಯಗಳನ್ನೂ ಮಧು ಮಾಂಸಾದಿಗಳನ್ನೂ ಆ ಸ್ತ್ರೀಯರು ಯಥೇಚ್ಛವಾಗಿ ಬಡಿಸುತ್ತಿದ್ದರು. ॥೩೩-೩೪॥

ಬಾಳೆಹಣ್ಣು, ಹಲಸಿನಹಣ್ಣು, ಮಾವಿನಹಣ್ಣು ಇವುಗಳ ರಸವನ್ನು ತಂದು ಕೆಲವರು ಬಡಿಸುತ್ತಿದ್ದರು. ಪಂಚಭಕ್ಷ್ಯಗಳನ್ನೂ, ಪರಮಾನ್ನವನ್ನೂ, ಪಾತ್ರೆಗಳಲ್ಲಿಟ್ಟು ಕೆಲವರು ತರುತ್ತಿದ್ದರು. ಸಕ್ಕರೆ, ಮೊಸರು, ಮಾಂಸ, ಲೇಹ್ಯ, ಚೋಷ್ಯ ಮುಂತಾದುವುಗಳನ್ನು ಹಿಡಿದು ಬಡಿಸುತ್ತಿರುವ ಹೆಂಗಸರು ಸಾಲುಸಾಲಾಗಿ ಬರುತ್ತಿದ್ದರು. ॥೩೫-೩೬॥

ಕೋಮಲವಾದ ಪಾಟಲಪುಷ್ಪ, ಲಾಮಂಚ ಇವುಗಳಂತೆ ಸುಗಂಧಮಯವಾದ ವಸ್ತ್ರಗಳನ್ನುಟ್ಟು ಯುವಕರಾದ ಪರಿಚಾರಕರು ದಿವ್ಯಕುಂಡಲಗಳನ್ನು ಧರಿಸಿ, ಸುಂದರರಾಗಿ ಕಾಣುತ್ತಿದ್ದರು. ಇನ್ನು ಕೈಕಾಲುಗಳಿಗೆ ಬಳೆಗಳನ್ನು ಹಾಕಿಕೊಂಡು, ಧ್ವನಿಯಿಂದ ನಡುಗುತ್ತಾ ಮಿಂಚಿನಂತೆ ಹೊಳೆಯುತ್ತಾ ಸಾಲುಸಾಲಾಗಿ ಬಂದು ಬಡಿಸುತ್ತಿದ್ದರು. ॥೩೭-೩೮॥

ಬಡಿಸುವ ಸ್ತ್ರೀಯರೂ ಮತ್ತು ಪುರುಷರೂ ಪ್ರತಿಪಾತ್ರೆಯ ಸಮೀಪಕ್ಕೂ

ನ ಚಾವಜ್ಞಾಯತೇ ಕಶ್ಚಿತ್ಸಿದ್ಭಿರ್ವಾ ಸೂದಸತ್ತಮೈಃ ।
ಗೃಹ್ಯತಾಮನ್ನಭೋಜ್ಯಾದಿ ಯದ್ಯಸ್ಯಾಭಿಮತಂ ಸ್ಥಿತಂ ॥೬೦॥

ಇತಿ ಸೂದಾ ವದಂತ್ಯೇವ ಪ್ರತಿಪಾತ್ರಂ ಸಹಸ್ರಶಃ ।
ತ್ರಿಂಶತ್ರಿಕೋಟಿದೇವಾನಾಂ ಮುನೀನಾಂ ಕೋಟಿಯೋನವ ॥೬೧॥

ಗಣಾನಾಂ ಪಂಚಕೋಟ್ಯೋಥ ಸ್ತ್ರೀಣಾಂ ಕೋಟಿತ್ರಯಂ ತಥಾ ।
ಗಿರೀಣಾಂ ಷಷ್ಟಿಸಾಹಸ್ರಂ ರುಕ್ಮಪಾತ್ರೇಷು ಭುಂಜತೇ ॥೬೨॥

ತದಾ ಮುದಾ ಗಿರಿಶ್ರೇಷ್ಠೋ ವಾಚಮೂಚೇ ವಿನೀತವತ್ ॥೬೩॥

ಯದ್ವೈಷ್ಣವೇ ತಥಾ ಬ್ರಾಹ್ಮೇ ಯಚ್ಛಾಕ್ತೇ ಚಾಮರಾಲಯೇ ।
ತದಸ್ತು ಭೋಜ್ಯಂ ಸರ್ವೇಷಾಂ ಪ್ರೀತಿಪತ್ತ್ಯರನುಸ್ತು ವೋ ॥೬೪॥

॥ ಗಿರೀಂದ್ರ ಉವಾಚ ॥

ಮಯಿ ಪ್ರೀತ್ಯಾದ್ಯ ಸರ್ವೇ ವೈ ಶಿವನೈವೇದ್ಯಮೀದೃಶಂ ।
ಅವಜ್ಞಯಾ ವಾಲಸ್ಯೇನ ದತ್ತಂ ಯತ್ಕ್ಷಂತುಮರ್ಹಥ ॥೬೫॥

---

ಹೋಗಿ, ಅಲ್ಲಿ ಇಲ್ಲದ ವಸ್ತುಗಳನ್ನು ತಕ್ಷಣವೇ ತಂದು ಒದಗಿಸುತ್ತಿದ್ದರು. ಅವರು ತಂದು ಬಡಿಸುವುದೇ ಯಾರಿಗೂ ಗೊತ್ತಾಗುತ್ತಿರಲಿಲ್ಲ. ನಿಮಗೆ ಇಷ್ಟವಾಗಿರುವುದನ್ನು ತಪ್ಪದೆ ಕೇಳಿರಿ ಎಂದು ಆಗಾಗ ಪರಿಚಾರಕರು ಹೇಳುತ್ತಿದ್ದರು. ॥೫೯-೬೦॥

ಬಡಿಸುವ ಪರಿಚಾರಕರು ಸಹಸ್ರಾರುಸಂಖ್ಯೆಯಲ್ಲಿ ಪ್ರತಿ ಊಟದ ಎಲೆಯ ಮುಂದೆಯೂ ನಿಂತು ಬಡಿಸುತ್ತಿದ್ದರು. ಮೂವತ್ತುಮೂರು ಕೋಟಿ ದೇವತೆಗಳೂ, ಒಂಭತ್ತುಕೋಟಿ ಋಷಿಗಳೂ, ಐದುಕೋಟಿ ಗಣಗಳೂ, ಮೂರುಕೋಟಿ ಹೆಂಗಸರೂ, ಆರು ಸಹಸ್ರ ಪರ್ವತಗಳೂ ಸಾಲಾಗಿ ಕುಳಿತು ಸುವರ್ಣಮಯವಾದ ಪಾತ್ರೆಗಳಲ್ಲಿ ಊಟಮಾಡುತ್ತಿದ್ದರು. ॥೬೧-೬೨॥

ವಿಷ್ಣುಗಣಗಳು, ಬ್ರಹ್ಮಾನುಯಾಯಿಗಳು, ಶಕ್ತಿದೇವತೆಗಳು, ದೇವಲೋಕದವರು ಇವರಿಗೆ, ಅವರವರ ಇಷ್ಟದಂತೆ ಪ್ರತ್ಯೇಕ ಪ್ರತ್ಯೇಕವಾಗಿ ಭಕ್ಷ್ಯಭೋಜ್ಯಾದಿಗಳು ಸಿದ್ಧವಾಗಿವೆ. ಬೇಕಾದುದನ್ನು ಸ್ವೀಕರಿಸಬಹುದು. ಒಂದು ವೇಳೆ ಪಾಕದ ಸಮಾರಂಭದಲ್ಲಿ ಉದಾಸೀನರೂಪವಾದ ದೋಷವೇನಾದರೂ ಇದ್ದರೆ ಶಿವನೈವೇದ್ಯ

॥ ಶ್ರೀಸ್ಕಂದ ಉವಾಚ ॥

ಇತಿ ತತ್ರ ಗಿರೇರ್ವಾಕ್ಯಂ ಶ್ರುತ್ವಾ ತೇ ಸುರಸತ್ತಮಾಃ ।
ಊಚುಃ ಸರ್ವೇ ಮುನಿಶ್ರೇಷ್ಠಾ ಗಣಾಸ್ಸುರಗಣೈಸ್ಸಹ ॥೬೬॥

ಅಹೋ ಧನ್ಯಾ ವಯಂ ಸರ್ವೇ ಧಿಕ್ಕೃತಾಮೃತಮುತ್ತಮಂ ।
ಮಹೇಶಪಂಕ್ತ್ಯಾ ನೈವೇದ್ಯಂ ಶಿವಸ್ಯ ಪರಮಾತ್ಮನಃ ॥೬೭॥

ಭುಕ್ತಿಮಂತೋ ಮುಕ್ತಿಯುಕ್ತಾಃ ಭಕ್ತಿಕೃದ್ಭಕ್ತಿಮಸ್ತು ತೇ ।
ಧರಣೀಭೃದ್ವರೋಸಿ ತ್ವಂ ಬ್ರವೀಷಿ ಮಧುರಂ ವಚಃ ॥೬೮॥

ನ ಬ್ರಾಹ್ಮೇನ ಚ ವೈಕುಂಠೇ ನ ಶಾಕ್ತೇ ಭೋಜ್ಯಮೀದೃಶಂ ।
ಇತಿ ಸಂತರ್ಪಿತಾಃ ಸರ್ವೇ ಶಿವೇನ ಸುರಸತ್ತಮಾಃ ॥೬೯॥

ತದಾನೀಂ ನಾರದೋ ವಾಕ್ಯಮುವಾದೀತ್ಪರಿಹರ್ಷಿತಃ ॥೭೦॥

---

ವೆಂಬ ಭಕ್ತಿಯಿಂದಲೂ, ನನ್ನಮೇಲಿನ ಪ್ರೀತಿಯಿಂದಲೂ ಎಲ್ಲವನ್ನೂ ಕ್ಷಮಿಸಬೇಕು ಎಂದು ಹಿಮವಂತನು ಅಲ್ಲಿ ನೆರೆದಿದ್ದ ಸರ್ವರನ್ನೂ ಆಗಾಗ ಪ್ರಾರ್ಥಿಸಿಕೊಳ್ಳುತ್ತಿದ್ದನು. ॥೬೪-೬೫॥

ಆ ಗಿರಿರಾಜನ ಮಾತುಗಳನ್ನು ಕೇಳಿ ಎಲ್ಲ ದೇವತೆಗಳೂ ಮುನಿಗಳೂ ಆಹಾ, ಈಗ ನಾವೇ ಧನ್ಯರು. ಅಮೃತಕ್ಕಿಂತಲೂ ಹೆಚ್ಚು ರುಚಿಕರವಾದ ಶಿವನಿವೇದಿತವಾದ ಈ ಆಹಾರದಿಂದಲೂ, ಮಹೇಶ್ವರನ ಪಂಕ್ತಿಲಾಭದಿಂದಲೂ ನಾವೇ ಕೃತಾರ್ಥರಾದೆವು. ಇದಕ್ಕಿಂತಲೂ ಹೆಚ್ಚಿನ ಭಾಗ್ಯವು ನಮಗೇನುಬೇಕು? ॥೬೬-೬೭॥

ಗಿರಿರಾಜನೇ, ನೀನೇ ರಾಜಶ್ರೇಷ್ಠನು. ಭುಕ್ತಿ ಮುಕ್ತಿ ಏತದುಭಯಪ್ರದವಾದ ಆಹಾರವನ್ನು ನೀನು ಈಗ ನಮಗೆ ಒದಗಿಸಿದೆ. ಬ್ರಹ್ಮಲೋಕದಲ್ಲಾಗಲಿ, ವೈಕುಂಠದಲ್ಲಾಗಲಿ, ದೇವೀಸನ್ನಿಧಿಯಲ್ಲಾಗಲಿ ನಮಗೆ ಇಂತಹ ಭೋಜನವು ದೊರಕಲಾರದು. ಇದರಿಂದ ನಾವೆಲ್ಲರೂ ತೃಪ್ತರಾಗಿದ್ದೇವೆ. ಎಂದು ಏಕಕಂಠದಿಂದ ಅಲ್ಲಿದ್ದವರೆಲ್ಲಾ ಗಿರಿರಾಜನನ್ನು ಹೊಗಳುತ್ತಿರಲು, ಮಧ್ಯೆ ನಾರದಮಹರ್ಷಿಯು ಸಂತೋಷದಿಂದ ಹೀಗೆಂದನು. ॥೬೮-೬೯-೭೦॥

॥ ನಾರದ ಉವಾಚ ॥

ಶಂಭೋ ಭರ್ಗ ಮಹೇಶ್ವರೇಶ್ವರ ಮಹಾದೇವೇಶ ವಿಶ್ವಾಧಿಕ
ವಿಶ್ವಾಶಾಸ್ಯ ದಯಾನಿಧೇ ಶ್ರುತಿಶತೈರುದ್ಘೋಷಿತೋಽನ್ನಪ್ರದ ।
ತೇನೈವಾದ್ಯ ಸುತಪ್ತದೀಪ್ತಸುರತಾ ಧನ್ಯೈರ್ಮುನೀಂದ್ರೈರ್ಗಣೈಃ
ನಾನ್ಯತ್ರ ಪ್ರವಿಶಾಮ ಶಂಭುಕೃಪಯಾ ನಿತ್ಯಂ ಪ್ರಮೋದಾಮಹೇ ॥೨೦॥

ನಿತ್ಯಂ ಮಂಗಲಮಸ್ತು ತೇ ಪ್ರತಿಪದಂ ಸ್ಯಾನ್ಮಂಗಲಾಖ್ಯಃ ಪತಿಃ
ಇತ್ಯುಕ್ತಂ ಚ ಮುನೇಸ್ತದಾ ಮುನಿಗಣಾಃ ಶ್ರುತ್ವಾ ವಚೋಽಹರ್ಷಿತಾಃ ।
ದೇವಾಸ್ತೇ ಗಣಪಾಃ ಶಿವೇನ ಶಿವಯಾ ಉತ್ತಸ್ಥುರೀಶಾಜ್ಞಯಾ ॥೨೧॥

ಸಂಪ್ರಕ್ಷಾಲ್ಯ ಕರದ್ವಯಂ ಚ ವದನಂ ಪಾದೌ ತದಾ ಶರ್ಕರಾ
ಪಾರಾಪೂರನಿಮಗ್ನಚೇತಸಿ ಸುರಾಸ್ತೇ ಭೂಸುರಾಸ್ತೇ ಗಣಾಃ ।
ದಿವ್ಯಾಂ ತಾಂ ವಿವಿಶುಃ ಸಭಾಂ ದ್ಯುತಿಯುತಾಂ ವಸ್ತ್ರೈಸ್ತಥಾಭೂಷಣೈ
ರ್ಬದ್ಧೋಷ್ಣೀಷಕಿರೀಟಕುಂಡಲಧರಾಸ್ತಸ್ಥುಸ್ತದಾತೇ ಸದಃ ॥೨೨॥

---

ಶಂಕರನೇ, ಸುಖಪ್ರದನೇ, ದೇವದೇವನೇ, ವಿಶ್ವಾತೀತನೇ, ದಯಾನಿಧಿಯೇ, ನೀನು ನೂರಾರು ವೇದವಾಕ್ಯಗಳಿಂದ ಸ್ತುತ್ಯನಾಗಿರುವೆ. ಸರ್ವರಿಗೂ ಅನ್ನಪ್ರದನಾಗಿರುವೆ. ನಿನ್ನ ಈ ವರಪ್ರಸಾದದಿಂದ ಈ ದೇವತೆಗಳೂ, ಮುನಿಜನರೂ, ಗಣನಾಯಕರೂ ಎಲ್ಲರೂ ಧನ್ಯರಾಗಿರುವರು. ನಿನ್ನ ಅನುಗ್ರಹದಿಂದ ಸುಖಪಡೆದಿರುವ ನಾವು ಈ ಸ್ಥಳವನ್ನು ಬಿಟ್ಟು ಎಲ್ಲಿಗೂ ಚಲಿಸುವುದಿಲ್ಲ. ನಿತ್ಯಾನಂದವನ್ನು ಪಡೆಯುತ್ತಾ ನಾವು ಇಲ್ಲಿಯೇ ನಿಲ್ಲುವೆವು. ॥೨೦॥

ಗಿರಿರಾಜನೇ, ನಿನಗೆ ಮಂಗಳಾಪತಿಯ ಅನುಗ್ರಹದಿಂದ ನಿತ್ಯಮಂಗಳವಾಗಲಿ ಎಂದು ಹರಸುತ್ತಾ ಎಲ್ಲ ದೇವತೆಗಳೂ, ಮುನಿಜನರೂ, ನಾರದನಮಾತನ್ನು ಕೇಳಿ ಸಂತೋಷಪಡುತ್ತಾ, ಭೋಜನವನ್ನು ಮುಗಿಸಿಕೊಂಡು ಮೇಲೆದ್ದರು. ಶಿವಪಾರ್ವತಿಯರೂ ಭೋಜನವನ್ನು ಸಮಾಪ್ತಿಗೊಳಿಸಿ ಉತ್ಸಾಹದಿಂದ ಮೇಲಕ್ಕೆದ್ದರು. ॥೨೧॥

ದೇವಋಷಿಬ್ರಾಹ್ಮಣಾದಿಗಳು ತಮ್ಮ ಕೈಕಾಲುಗಳನ್ನೂ, ಮುಖವನ್ನೂ, ಪಾದಗಳನ್ನೂ ತೊಳೆದುಕೊಂಡು, ಸಕ್ಕರೆಯ ಸವಿಯನ್ನು ಅನುಭವಿಸುತ್ತಾ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಅಲ್ಲಿ ದಿವ್ಯ ವಸ್ತ್ರಭೂಷಣಾದಿಗಳನ್ನೂ ಕಿರೀಟ

ನಾಸಂಬಾಧಮುಪಸ್ಥಿತಾಶ್ಚ ಸುಮುಖಾ ಲೇಖಾ ಮಹೇಶೋನ್ಮುಖಾಃ
ಮಾಸ್ಯಾಸ್ತೇ ಗಣಪುಂಗವಾಶ್ಚ ಮುನಯಃ ಸಿಂಹಾಸನಸ್ಥಂ ಶಿವಂ ।
ಗೌರೀಂ ಚಾಪಿ ತದಂಕಸುಂದರಮಹಾಪರ್ಯಂಕಸಂಸ್ಥಾಂ ಸುರಾ
ನೇಮುಸ್ತತ್ರ ಶಶಾಂಕದೀಧಿತಿಧರಂ ಸಂವೀಜಿಸಚ್ಚಾಮರಂ ॥೭೪॥

ಶಂಭುಂ ತತ್ರ ಹಿಮಾಚಲೇನ ಗಿರಿಭಿಃ ಸಂಪೂಜಿತಸ್ವಾಮರೋ
ಗಂಧಸ್ರಗ್ವರಪುಷ್ಪಶೇಖರಕರಾ ತಾಂಬೂಲರಾಗಾಸ್ಯಕಾಃ ।
ವೀಕ್ಷ್ಯಂತಿ ತ್ರಿದಶಾ ಮಹೇಶವದನಂ ನೃತ್ತೇಷು ಸಕ್ತಾದರಾ
ಸ್ತತ್ರಾತೋಽಪ್ಯಸುನರ್ತಿತಾಪ್ಸರವರಂ ಸಾಹಸ್ರಮತ್ಯದ್ಭುತಂ ॥೭೫॥

ತಾಲೋತ್ಥಾಹತಿತಂತ್ರಿಯಂತ್ರಿತನಟನ್ನೃತ್ತಾರ್ಭಟೀಶೋಭಿತೇ
ರಂಗಭ್ರಾಜಿತರಮ್ಯವೇಣುನಿನದೈಃ ಸಂಮರ್ದಲಾನಾಂ ಸ್ವನೈಃ ।

---

ಕುಂಡಲಗಳನ್ನೂ ಧರಿಸಿಕೊಂಡು ದಿವ್ಯಮಂಟಪದ ಮಧ್ಯಭಾಗವನ್ನು ಪ್ರವೇಶಿಸಿ ಅಲ್ಲಿ ಎಲ್ಲರೂ ಸಾಲಾಗಿ ಕುಳಿತರು. ॥೭೩॥

ಆ ದಿವ್ಯಮಂಟಪದಲ್ಲಿ ರತ್ನಸಿಂಹಾಸನಾರೂಢನಾಗಿ ಪಾರ್ವತಿಯನ್ನು ತನ್ನ ತೊಡೆಯಮೇಲೆ ಕೂರಿಸಿಕೊಂಡು, ಸುತ್ತಲೂ ಗಣದೇವತೆಗಳ ಚಾಮರಗಳಿಂದ ಸೇವಿಸಲ್ಪಡುತ್ತಾ, ಪ್ರಸನ್ನಮುಖದಿಂದ ಕುಳಿತಿರುವ ಮಹೇಶ್ವರನ ಎದುರಿನಲ್ಲಿ ಎಲ್ಲ ದೇವತೆಗಳೂ, ಮುನಿಗಳೂ, ಗಣಗಳೂ ನಮಸ್ಕರಿಸಿ ವಿರಳವಾಗಿ ಕುಳಿತುಕೊಂಡರು. ॥೭೪॥

ಹಿಮವಂತನು ಭೋಜನಾನಂತರ ಸುವಾಸನೆಯುಳ್ಳ ಗಂಧ, ಹೂವು, ತಾಂಬೂಲ ಇವುಗಳನ್ನು ಪರಶಿವನಿಗೂ, ಮತ್ತು ಮುನಿಜನರೇ ಮೊದಲಾದ ಎಲ್ಲ ಅತಿಥಿಗಳಿಗೂ ಕೊಟ್ಟನು. ಎಲ್ಲರೂ ತಾಂಬೂಲವನ್ನು ಸವಿಯುತ್ತಾ, ಬಾಯನ್ನು ಕೆಂಪಾಗಿ ಮಾಡಿಕೊಂಡು ಮುಂದೆ ಅಪ್ಸರಸ್ತ್ರೀಯರ ನಾಟ್ಯವನ್ನು ನೋಡುವ ಕುತೂಹಲವುಳ್ಳವರಾಗಿ ಮಹಾದೇವನ ಮುಖವನ್ನೇ ನೋಡುತ್ತಿದ್ದರು. ಇತ್ತ ಅಪ್ಸರಸ್ತ್ರೀಯರೂ ಸಹ ಸಹಸ್ರಾರು ಸಂಖ್ಯೆಯಲ್ಲಿ ನಾಟ್ಯವಾಡಲು ಸಿದ್ಧರಾಗಿದ್ದರು. ॥೭೫॥

ಕೂಡಲೇ ಅದೇ ಸಭೆಯ ಮುಂದುಗಡೆ ಒಂದು ನಾಟ್ಯರಂಗವೇರ್ಪಟ್ಟಿತು. ಅಲ್ಲಿ ತಂತ್ರೀಧ್ವನಿಗಳು, ಮದ್ದಲೆ, ತಾಲ, ವೀಣೆ, ವೇಣು ಮುಂತಾದ ವಾದ್ಯಗಳ

ಭ್ರಾಜದ್ರತ್ನಪರಿಷ್ಕೃತಾಮರಸಭಾಧಿಕ್ಕಾರಿಣೀ ತತ್ಸಭಾ
ರಾಜತ್ಯೇವ ಸಭಾಪತೇಃ ಪ್ರಮುಖತೋ ಧೂಪಾಲಿದೀಪಪ್ರಭಾ ॥೭೬॥

ಮೇನಾ ಚಾಪಿ ಮುದಾನ್ವಿತಾ ಸುರಮಹಾಭಾವಾಯುಷಾ ಪ್ರೋಜಿತಾ
ತಾಂಬೂಲಾಮಲಗಂಧಪುಷ್ಪವಿಲಸದ್ಧಮ್ಮಿಲ್ಲಮಾಲಾಯುತಾ ।
ರಂಭಾದ್ಯಪ್ಸರಸಾಂ ನಟಜ್ಝಣಝಣಾರಾವೈಕಸ್ಪತ್ತಾದರಾ
ವಾಸೋಭಿಃ ಸುನಿಶಾಸು ಕುಂಕುಮವರೈಃ ಸಂಪೂಜಿತಾಃ ತಾಃ ಸ್ತ್ರಿಯಃ ॥೭೭॥

ಏವಂ ವರ್ಷಮಹರ್ನಿಶಂ ಸ ಗಿರಿರಾಟ್ ಸಂಪೂಜ್ಯ ಸರ್ವಾಮರಾನ್
ವಿಪ್ರಾಂಸ್ತದ್ಗಣಪಾಂತ್ಸದಾರತನಯಾನ್ ಮಾನ್ಯಾನುಮಾಸಾದರಾತ್ ।
ಶಂಭುಂ ತಾಂ ಜಗದಂಬಿಕಾಂ ಗಿರಿವರೈರ್ಯುಕ್ತಃ ಸ ಮುಕ್ತೋಽಭವ
ದ್ಭಕ್ತಿಂ ಭಕ್ತಿವಿಭಾವಿತಾತ್ಮಹೃದಯೋ ನಾಸ್ಯದ್ವಿಜಾನಾತ್ಯಯಂ ॥೭೮॥

---

ನಿನಾದವು ಮಧುರವಾಗಿ ಪ್ರಾರಂಭವಾಯಿತು. ಈ ವೈಭವದಿಂದ ಕೂಡಿದ ಆ ಸಭೆಯು ದೇವೇಂದ್ರನ ಸಭೆಯನ್ನೇ ತಿರಸ್ಕರಿಸುವಂತಿದ್ದಿತು. ಸಭಾಪತಿಯಾಗಿದ್ದ ಮಹಾದೇವನ ಮುಂಭಾಗದಲ್ಲಿ ಧೂಪದೀಪಗಳ ವೈಭವವು ಬಹು ಆಕರ್ಷಣೀಯವಾಗಿ ತೋರಿಬರುತ್ತಿದ್ದಿತು. ॥೭೬॥

ಇತ್ತ ಮೇನಾದೇವಿಯೂ ಕೂಡ ಸಂತೋಷದಿಂದ ಕೂಡಿದವಳಾಗಿ ದೇವಲೋಕದ ಇತರ ಸ್ತ್ರೀಯರಿಗೂ, ಋಷಿಪತ್ನಿಯರಿಗೂ, ತಾಂಬೂಲ, ಗಂಧ, ಪುಷ್ಪಾದಿಗಳನ್ನು ಕೊಟ್ಟು ಸತ್ಕರಿಸಿದಳು. ಅವರೆಲ್ಲರೂ ತಮ್ಮ ಕೇಶಪಾಶಗಳಿಗೆ ಹೂವನ್ನು ಮುಡಿದು, ರಂಭಾದ್ಯಪ್ಸರಸ್ತ್ರೀಯರ ನರ್ತನವನ್ನು ನೋಡಬಯಸಿ, ಆ ಅಪ್ಸರಸ್ತ್ರೀಯರ ನರ್ತನಕಾಲದ ಕಿರುಗೆಜ್ಜೆಯ ಝಣಝಣಧ್ವನಿಯನ್ನು ಕೇಳುವ ಕುತೂಹಲವುಳ್ಳವರಾಗಿ, ನಿಶಾಕುಂಕುಮಾದಿಗಳಿಂದಲೂ, ಉತ್ತಮವಾದ ವಸ್ತ್ರಭೂಷಣಾದಿಗಳಿಂದಲೂ ಅಲಂಕೃತರಾದರು. ॥೭೭॥

ಅನಂತರ ಭುವನಮೋಹಕವಾಗಿ ನಡೆದ ಅಪ್ಸರಸ್ತ್ರೀಯರ ನಾಟ್ಯವನ್ನು ನೋಡಿ, ಎಲ್ಲರೂ ಆನಂದಪಟ್ಟು ತಮ್ಮ ತಮ್ಮ ಬಿಡಾರಗಳಿಗೆ ಪತ್ನೀಪುತ್ರಸಮೇತರಾಗಿ ತೆರಳಿದರು. ಇದೇರೀತಿ ಹಗಲು ರಾತ್ರಿಗಳಲ್ಲಿ ವಿಶೇಷರೀತಿಯ ಭೋಜನ, ನಾಟ್ಯ ಮುಂತಾದ ವೈಭವಗಳಿಂದ ಸುರಾಸುರರು, ಮುನಿಜನರು, ಗಣನಾಯಕರು

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಶ್ರೀ ಗೌರೀಶಂಕರವಿವಾಹಮಹೋತ್ಸವೇ ಭೋಜನಸಮಾರಂಭವರ್ಣನಂ
ನಾಮ ಏಕೋನವಿಂಶೋಽಧ್ಯಾಯಃ

---

ಆನಂದ ಹೊಂದುತ್ತಾ ಒಂದು ವರ್ಷಪರ್ಯಂತ ಅಲ್ಲಿಯೇ ಸುಖದಿಂದ ವಾಸಮಾಡಿದರು. ಅನಂತರ ಗಿರಿರಾಜನಿಂದ ಸತ್ಕೃತರಾಗಿ ವಸ್ತ್ರಭೂಷಣಾದಿಗಳ ಉಡುಗೊರೆಗಳನ್ನು ಪಡೆದು ವಿಪ್ರಗಣಗಳು ಆನಂದತುಂದಿಲರಾಗುತ್ತಿದ್ದರು. ಗಿರಿರಾಜನಾದರೋ ತನ್ನ ಅನುಯಾಯಿಗಳಾದ ಇತರ ಗಿರಿಗಳೊಡಗೂಡಿ ಗಿರಿಜಾಕಲ್ಯಾಣವನ್ನು ವೈಭವದಿಂದ ಆಗಗೊಳಿಸಿ, ಶಿವನಲ್ಲಿ ದೃಢವಾದ ಭಕ್ತಿಯನ್ನಿಟ್ಟು ಯಾರೂ ಹೊಂದದಂತಹ ಶ್ರೀಸ್ಮೃತೆಯನ್ನು ಹೊಂದಿ ಮುಕ್ತನಾದನು. ಎಂದು ಕುಮಾರಸ್ವಾಮಿಯು ಶಿವ ಪಾರ್ವತಿಯರ ವಿವಾಹವರ್ಣನೆಯನ್ನು ಜೈಗೀಷವ್ಯಾದಿಗಳಿಗೆ ಅತ್ಯಂತ ವಿಸ್ತಾರವಾಗಿ ತಿಳಿಸಿದನು. ||೭೮||

ಇಲ್ಲಿಗೆ ಶ್ರೀಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ ಗೌರೀವಿವಾಹ ಮಹೋತ್ಸವವನ್ನು ವಿವರಿಸುವ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಏವಂ ಸ್ಥಿತಂ ತದಾ ವೀಕ್ಷ್ಯ ತ್ರ್ಯಕ್ಷಂ ಗಿರಿಜಯಾ ಸಹ ।
ಭೂಧರೇಣಾರ್ಚಿತಂ ದೇವೈಃ ಸುರಕಾರ್ಯಾರ್ಥಮುದ್ಯತಃ ॥೧॥
ವಾಸುದೇವೋ ಗಿರಿಶ್ರೇಷ್ಠಂ ರಹಸಿ ಸ್ವೈರಮಬ್ರವೀತ್ ॥೨॥

॥ ವಿಷ್ಣುರುವಾಚ ॥

ಧನ್ಯೋ ಮಾನ್ಯೋಽಸಿ ಗೋತ್ರೇಷು ಕೃಪಾಪಾತ್ರೋ ಮಹೇಶಿತುಃ
ತವ ಭಾಗ್ಯಸ್ಯ ನಾಂತೋಽಸ್ತಿ ಯತಸ್ತ್ವಂ ಶಂಕರಾರ್ಚಕಃ ॥೩॥

---

## ಇಪ್ಪತ್ತನೆಯ ಅಧ್ಯಾಯ

ಹೀಗೆ ಗಿರಿರಾಜನಿಂದ ಸತ್ಕೃತರಾಗಿ ಮಿತಿಮೀರಿದ ಸಂತೋಷದಿಂದ ಕೂಡಿ ಶೋಭಿಸುವ ಪಾರ್ವತೀಪರಶಿವರನ್ನು ನೋಡುತ್ತಾ ವಾಸುದೇವನು ದೇವತಾಕಾರ್ಯ ನಿರ್ವಹಣದಲ್ಲಿ ಮನಸ್ಸಿಟ್ಟು, ಒಂದುಸಾರಿ ಗಿರಿರಾಜನೊಡನೆ ವಿಷ್ಣುವು ಏಕಾಂತದಲ್ಲಿ ಈರೀತಿ ನುಡಿದನು. ॥೧-೨॥

"ಗಿರಿರಾಜನೇ, ನೀನೇ ಮಾನ್ಯನು. ಪರಶಿವನಲ್ಲಿ ಭಕ್ತಿಯಿಟ್ಟು ಅವನಿಗೆ ಕನ್ಯಾದಾನಮಾಡಿದ್ದರಿಂದ ಈಗ ನಿನಗಿಂತ ಸುಕೃತಿಯು ಮತ್ತಾರಿರುವನು ? ಅದಿರಲಿ. ಈಗ ಮತ್ತೊಂದು, ದೇವತೆಗಳಿಗೆ ಹಿತಕರವಾದ ದೊಡ್ಡ ಕಾರ್ಯವು ನಿನ್ನಿಂದಾಗ

ಕಿಂ ತು ಮೇ ಸಾಂಪ್ರತಂ ವಾಕ್ಯಂ ಸುರಾಣಾಂ ಹಿತಮಾಚರ ।
ಇಯಂ ಗೌರೀ ತವ ಸುತಾ ಜಾತಾ ಮಾಯಾ ಮಹೇಶ್ವರೀ ॥೪॥

ಯಸ್ಯಾಮುತ್ಪದ್ಯತೇಽಸ್ಮಾಕಂ ಕುಮಾರಃ ಸೈನ್ಯಪಾಲಕಃ ।
ನ ಮಯಾ ಚ ಸ ಶಕ್ರೇಣ ಸುರೈಶ್ಚಾಸುರಸೂದನೈಃ ॥೫॥

ನ ಜೇತುಂ ಶಕ್ಯತೇ ದೈತ್ಯೋ ತಾರಕಶ್ಚೂರಸಂಯುತಃ ।
ಸ ಕೋಟ್ಯೈಕ್ಯೋಹಿಣೀಯುಕ್ತಃ ಷಟ್ಕೋಟಿತುರಗಾವೃತಃ ॥೬॥

ಪಂಚಕೋಟಿಗಜೈರ್ಯುಕ್ತೋ ನವಕೋಟಿರಥಾವೃತಃ ।
ಬ್ರಹ್ಮದತ್ತವರೋದೈತ್ಯಃ ಸನ್ನದ್ಧಕವಚಾಯುಧಃ ॥೭॥

ನಾಸ್ಯೇನ ಸಮರೇ ಜೇತುಂ ಶಕ್ತಿಹಸ್ತಂ ವಿನಾ ಗಿರೇ ।
ಶಿವೋ ವಿಹರತು ಸ್ವೈರಂ ಕೈಲಾಸೇ ವಾ ಸುಮಂದಿರೇ ॥೮॥

---

ಬೇಕಾಗಿದೆ. ನಿನ್ನ ಮಗಳಾದ ಪಾರ್ವತಿಯು ಸಾಮಾನ್ಯಸ್ತ್ರೀಯಲ್ಲ. ಆದಿ ಮಾಯೆಯು. ಮಹೇಶ್ವರನ ನಿಜವಾದ ಶಕ್ತಿಯು. ॥೩-೪॥

ಈ ಪಾರ್ವತಿಯಲ್ಲಿ ನಮ್ಮ ಸೈನ್ಯರಕ್ಷಕನಾಗುವ ಕುಮಾರನೊಬ್ಬನು ಮುಂದೆ ಜನಿಸುವನು. ಈಗ ತಾರಕಾಸುರನೆಂಬ ರಾಕ್ಷಸನೊಬ್ಬನು ಮಹಾಬಲಿಷ್ಠನಾಗಿ ದೇವತೆಗಳನ್ನೆಲ್ಲಾ ಹಿಂಸಿಸುತ್ತಿರುವನು. ಅವನನ್ನು ಗೆಲ್ಲಲು ನನ್ನಿಂದಾಗಲಿ, ಇಂದ್ರ ನಿಂದಾಗಲಿ, ಮತ್ತಾವದೇವತೆಗಳಿಂದಾಗಲಿ ಸಾಧ್ಯವಿಲ್ಲ. ಅವನಲ್ಲಿ ಒಂದುಕೋಟಿ ಅಕ್ಷೋಹಿಣೀ ಸೈನ್ಯವೂ, ಆರುಕೋಟಿ ಕುದುರೆಗಳ ಸೈನ್ಯವೂ ಸದಾ ಸಿದ್ಧವಾಗಿರು ವುದು. ॥೫-೬॥

ಅವನಲ್ಲಿ ಐದುಕೋಟಿ ಆನೆಗಳೂ ಒಂಬತ್ತುಕೋಟಿ ರಥಗಳೂ ನಾನಾ ವಿಧವಾದ ಅಸ್ತ್ರಶಸ್ತ್ರಗಳೂ ಇರುವುವು. ಅದೂ ಅಲ್ಲದೆ ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ ಅವನಿಂದ ಅತಿಶಯಗಳಾದ ವರಗಳನ್ನು ಪಡೆದಿರುವನು. ಯುದ್ಧದಲ್ಲಿ ಅವನನ್ನು ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಶಕ್ತ್ಯಾಯುಧವನ್ನು ಹಿಡಿಯ ಬಲ್ಲವನೊಬ್ಬನು ಮಾತ್ರ ಅವನನ್ನು ಸೋಲಿಸಬಹುದು. ಅಂತಹ ಪುತ್ರನು ಈಗ ಶಿವನಿಂದಲೇ ಜನಿಸಬೇಕು. ಆದ್ದರಿಂದ ಮಹೇಶ್ವರನು ಪಾರ್ವತಿಯೊಡನೆ ಸ್ವೇಚ್ಛೆ ಯಿಂದ ಕೈಲಾಸದಲ್ಲಾಗಲಿ ಅಥವಾ ಮತ್ತೆಲ್ಲಿಯಾದರೂ ವಿಹರಿಸುವಂತೆ ಏರ್ಪಡಿಸು. ಇದರಿಂದ ನಮ್ಮ ಕಾರ್ಯಸಿದ್ಧಿಯಾಗುವುದು. ॥೭-೮॥

ಕ್ಷಿಪ್ರಂ ದೇವ್ಯಾಮಹಾದೇವಸ್ತದೇತನ್ನಃ ಪರಂ ಹಿತಂ ।
ಕರ್ತುಮರ್ಹಸಿ ಸಾಹಾಯ್ಯಂ ತದನುಜ್ಞಾತುಮರ್ಹಸಿ ॥೯॥

ನ ತ್ವಂ ವಿಯೋಗಂ ದೇವ್ಯಾಃ ಸಃ ಸಹಸೇ ಖೇದಜಂ ಗಿರೇ ।
ಚಿರಂ ಕನ್ಯಾಪಿತೃಗೃಹೇ ಧನ್ಯಾ ವಸ್ತುಮಿಹಾರ್ಹತಿ ॥೧೦॥

ಶಿವೇನ ಪ್ರೇಷಯಾಸ್ಮಾಕಂ ಹಿತಾರ್ಥಂ ಭೂಧರೋತ್ತಮ ।
ತದಾ ವಿಷ್ಣುವಚಃ ಶ್ರುತ್ವಾ ಮಹೇಶಾನಂ ಯಯೌ ಗಿರಿಃ ॥೧೧॥

ಲೋಕಪ್ರಾಮಾಣ್ಯಹೇತ್ವರ್ಥಂ ಕನ್ಯಾದಾನಂ ಪ್ರದರ್ಶಿತಂ ।
ಗೃಹಪ್ರವೇಶನೀಯಾಂಗಂ ಚಕ್ರೇ ಕರ್ಮವಿಧಾನವಿತ್ ॥೧೨॥

ಮುಕುಟೈರ್ಭೂಷಣೈಶ್ಚಿತ್ರೈರ್ಗಂಧಪುಷ್ಪೈರ್ಗಿರೀಶ್ವರಃ ।
ಪ್ರಣಮ್ಯ ಪೂಜಯಾಮಾಸ ಗೌರೀಶಂಕರಯೋಃ ಪದಂ ॥೧೩॥

ಸಾಸ್ರಾಕ್ಷ್ಣಮೇನಯಾ ಕನ್ಯಾಂ ದದೌ ಹಸ್ತೇ ಹರಸ್ಯತು ।
ನೃತ್ಯಂತ್ಯಪ್ಸರಸಾಂ ಸಂಘಾ ಜಗುರ್ಗಂಧರ್ವನಾಯಕಾಃ ॥೧೪॥

---

ಆದಷ್ಟು ಜಾಗ್ರತೆ ಪರಶಿವದಂಪತಿಗಳನ್ನು ಒಂದುಕಡೆ ನಿಲ್ಲಿಸಲು ಅವಕಾಶ ಕೊಟ್ಟರೆ ನಮ್ಮ ಹಿತಕಾರ್ಯವು ತ್ವರಿತವಾಗಿ ನೆಲೆಗೊಳ್ಳುವುದು. ನೀನು ದೇವಿಯು ವಿಯೋಗವನ್ನು ಸಹಿಸಲಾರೆ. ಅದು ನಿಜ. ಧನ್ಯಳಾಗಿ ಬೆಳೆದಪುತ್ರಿಯು ತಂದೆಯ ಮನೆಯನ್ನು ಬಿಟ್ಟು ಹೋಗಲು ಇಷ್ಟಪಡಲಾರಳು. ಆದರೂ ನಮ್ಮ ಹಿತಕ್ಕಾಗಿ ನಿನ್ನ ಪುತ್ರಿಯನ್ನು ಶಿವನೊಂದಿಗೆ ಕಳುಹಿಸಿಕೊಡು." ॥೯-೧೦॥

ಹೀಗೆ ಪ್ರಾರ್ಥಿಸಿದ ವಿಷ್ಣುವಿನ ಮಾತನ್ನು ಮನ್ನಿಸಿ ಗಿರಿರಾಜನು ವಿಷ್ಣುವಿನ ಮಾತಿನಂತೆಯೇ ಗೃಹಪ್ರವೇಶವೆಂಬ ಕರ್ಮವನ್ನು ನೆರವೇರಿಸಲುದ್ಯುಕ್ತನಾದನು. ಲೋಕಾಡಂಬರಕ್ಕಾಗಿ ಕನ್ಯಾದಾನಮಾಡಿದಂತೆ ಗೃಹಪ್ರವೇಶವೆಂಬ ಕರ್ಮವನ್ನೂ ಪರಶಿವನಿಗೆ ಲೋಕದ ಆಡಂಬರಕ್ಕಾಗಿಯೇ ನೆರವೇರಿಸಲು ಪ್ರಯತ್ನಿಸಿದನು. ॥೧೧-೧೨॥

ಗಿರಿರಾಜನು ತನ್ನ ಅಳಿಯನಾದ ಪರಶಿವನಿಗೂ ಮಗಳಾದ ಪಾರ್ವತಿಗೂ ರತ್ನಮಯವಾದ ಕಿರೀಟಗಳು, ಗಂಧಪುಷ್ಪಾದಿಗಳು, ನಾನಾವಿಧವಾದ ಆಭರಣಗಳು ಮುಂತಾದುವುಗಳನ್ನು ಕೊಟ್ಟು ಆ ದಂಪತಿಗಳನ್ನು ಮೊದಲು ಪೂಜಿಸಿದನು. ಮೇನಾ

ವವೃಷುಃ ಕುಸುಮಾಸಾರಂ ನೇಘಾಸ್ತೇ ಘೋಷವತ್ತರಂ ।
ಗಿರಿರಾಜೇನ ದೇವೇಶಃ ಸುರೈರ್ದ್ವಿಜಗಣೈರ್ಗಣೈಃ ॥೧೫॥

ಸ್ವಚ್ಛಛತ್ರಾವೃತಮುಖಃ ಪಾರ್ಶ್ವಯೋರ್ವೀಜ್ಯ ಚಾಮರಃ ।
ಗೌರ್ಯಾ ತದಾ ಮೇನಯಾ ಚ ವಿಷ್ಣುಬ್ರಹ್ಮಗಿರಿವ್ರಜೈಃ ॥೧೬॥

ಸ್ತುವತಾಂ ದೇವಸಂಘಾನಾಂ ಸಂಸ್ತವಂ ಪರಮೇಶಿತುಃ ।
ನಂದಿನೋ ಹಸ್ತಮಾಲಂಬ್ಯ ಸರ್ವಾಲಂಬೋಽಪಿ ಶಂಕರಃ ॥೧೭॥

ಹೇರಂಬೇಣ ಮುದಾ ಯುಕ್ತಃ ಸುರಸೇನಾಧಿಪೈರ್ಗಣೈಃ ।
ಧೃತನಾನಾವಿಧಭ್ರಾಜದಾಯುಧೈಃ ಸುರಸತ್ತಮೈಃ ॥೧೮॥

ಗಣೇಂದ್ರೈರ್ವಾರಣೇಂದ್ರಾಭೈಃ ಶರಧ್ಯಗ್ಬಾಣಪಾಣಿಭಿಃ ।
ಚಂದ್ರಾಂಶುಧಾಮಕೋಟೀರಪ್ರಭಾವೀಜಿತದಿಙ್ಮುಖಃ ॥೧೯॥

---

ದೇವಿಯು ಶಂಕರನ ಕೈಯ್ಯಲ್ಲಿ ತನ್ನ ಮಗಳಕೈಯನ್ನು ಇಟ್ಟು ಕಣ್ಣೀರುಸುರಿಸುತ್ತಾ ಹೆಣ್ಣೊಪ್ಪಿಸಿಕೊಟ್ಟಳು. ಆ ಕಾಲದಲ್ಲಿ ಅಪ್ಸರಸ್ತ್ರೀಯರು, ಗಂಧರ್ವನಾಯಕರು ಆನಂದದಿಂದ ನೃತ್ಯಗಾನಾದಿಗಳನ್ನು ನಡೆಸಿದರು. ॥೧೩-೧೪॥

ದೇವತೆಗಳು ಹೂಮಳೆಗರೆದರು. ಮೇಘಗಳು ಧ್ವನಿಗೈದುವು. ದೇವದೇವನಾದ ಶಂಕರನು ದೇವತೆಗಳಿಂದಲೂ, ಸ್ವಗಣಗಳಿಂದಲೂ ದ್ವಿಜಗಣಗಳಿಂದಲೂ ಕೂಡಿ ಶ್ವೇತಚ್ಛತ್ರಿಯ ಕೆಳಭಾಗದಲ್ಲಿ ಗೌರೀದೇವಿಯೊಡನೆ ಕುಳಿತು ಪ್ರಯಾಣ ಸನ್ನದ್ಧರಾದರು. ಜೊತೆಯಲ್ಲಿ ಬ್ರಹ್ಮ, ವಿಷ್ಣು ಮುಂತಾದ ದೇವಶ್ರೇಷ್ಠರೂ ಹೊರಟರು. ॥೧೫-೧೬॥

ದೇವಸಂಘಗಳು ಶಿವಸ್ತೋತ್ರಮಾಡಲಾರಂಭಿಸಿದುವು. ಸರ್ವವಸ್ತುಗಳಿಗೂ ಆಶ್ರಯಸ್ಥಾನನಾಗಿದ್ದರೂ ಪರಶಿವನು ಆಗ ನಂದೀಶ್ವರನ ಕೈಯನ್ನು ಹಿಡಿದು ಮುಂದುವರಿದನು. ದೇವಸೈನ್ಯಗಳೊಡಗೂಡಿ ಗಣನಾಯಕನಾದ ಗಣಪತಿಯು ಮುಂದೆ ನಡೆದನು. ಗಣನಾಯಕರೆಲ್ಲರೂ ನಾನಾವಿಧವಾದ ಆಯುಧಗಳನ್ನೊಳಗೊಂಡು ಪ್ರಯಾಣಸನ್ನದ್ಧರಾದರು. ॥೧೭-೧೮॥

ಐರಾವತದಂತೆ ವಿರಾಜಿಸುವ ಗಣನಾಯಕರು ಬಾಣಬಿಲ್ಲುಗಳನ್ನು ಕೈಯ್ಯಲ್ಲಿ ಧರಿಸಿ ನಿಂತರು. ಚಂದ್ರಕಿರಣದಿಂದ ವಿರಾಜಿಸುವ ಕಿರೀಟದ ಕಾಂತಿಯಿಂದ ಮಹಾದೇವನು ದಿಗಂತವನ್ನೆಲ್ಲಾ ಬೆಳಗಿಸುತ್ತಿದ್ದನು. ಹಣೆಯಲ್ಲಿರುವ ಅಗ್ನಿನೇತ್ರವು ಕೆಂಡ

ಹವ್ಯವಾಹಸ್ಫುಲಿಂಗೋರ್ಧ್ವನಯನೋದ್ಯತ್ಪ್ರಭಾಯುತಃ ।
ಪ್ರಭಾಕರಕರಭ್ರಾಜನಯನಧ್ವಸ್ತದಿಕ್ತಮಃ ॥೨೦॥

ವೃಷಂ ಮಹಾಗಜಂ ಚಕ್ರೇ ಚತುರ್ದಂತಂ ಸುಪಾಂಡರಂ ।
ಕಕುತ್ತಸ್ಯಾಭವತ್ಕುಂಭೌ ಸಾಸ್ನಾ ಕರ್ಣಾವಿರೇಜತುಃ ॥೨೧॥

ಘಂಟಾಂಕುಶಕುಥಾಸ್ತೀರ್ಣಂ ರತ್ನಚಿತ್ರಪರಿಷ್ಕೃತಂ ।
ರತ್ನಭ್ರಾಜಿತಕಕ್ಷಾಗ್ರಮುಕ್ತಾಗುಚ್ಛವಿರಾಜಿತಂ ॥೨೨॥

ರತ್ನವೇಷ್ಟನದಂತಾಗ್ರ ಸಿತಧಾರಾವಿರಾಜಿತಂ ।
ಪಾದರಕ್ಷೈರ್ಗಣೇಂದ್ರೈಶ್ಚ ವೀರಭದ್ರಾದಿತಂಡುಭಿಃ ॥೨೩॥

ಹರಿಬ್ರಹ್ಮಾದಿಹಸ್ತಾಬ್ಜಸಮಾಲಂಬಿವಿಶಾಣಕಾ ।
ವಾಮದಕ್ಷಿಣಭಾಗಸ್ಥೌ ಗಜವರ್ಯಸ್ಯ ತೌ ಹರೀ ॥೨೪॥

---

ಗಳಿಂದ ಪ್ರಜ್ವಲಿಸುತ್ತಿದ್ದಿತು. ಸೂರ್ಯಾಧಿಕವಾದ ತೇಜಸ್ಸಿನಿಂದ ದಿಗಂತವ್ಯಾಪ್ತವಾಗಿದ್ದ ಕತ್ತಲೆಯನ್ನೆಲ್ಲಾ ನಾಶಗೊಳಿಸುತ್ತಿದ್ದನು. ॥೧೯-೨೦॥

ತನ್ನ ವಾಹನವಾದ ವೃಷಭವನ್ನು ಒಡನೆಯೇ ಶಂಕರನು ಆನೆಯನ್ನಾಗಿ ಮಾಡಿದನು. ಅದಕ್ಕೆ ನಾಲ್ಕು ದಂತಗಳುಂಟಾದುವು. ಶುಭ್ರವಾದ ಆನೆಗೆ ಮೊದಲಿನ ಹಿಳಲೇ ಕುಂಭಸ್ಥಳವಾಯಿತು. ಗಂಗೆದೊಗಲು ವಿಶಾಲವಾದ ಕಿವಿಗಳಾದುವು. ಗಂಟೆಯು ಅಂಕುಶವಾಯಿತು. ಎತ್ತಿನಮೇಲಿರುವ ಆಸನವು ಆನೆಯ ಮೇಲು ಹೊದಿಕೆಯಾಯಿತು. ರತ್ನಚಿತ್ರಪರಿಸ್ಕೃತವಾದ ಮುತ್ತಿನ ಸರಗಳು ಆನೆಯ ಎರಡು ಪಕ್ಕಗಳಲ್ಲಿಯೂ ಗೊಂಡೆಯಂತೆ ಪ್ರಕಾಶಿಸುತ್ತಿದ್ದವು. ॥೨೧-೨೨॥

ಆನೆಯ ದಂತಗಳ ತುದಿಯಲ್ಲಿ ರತ್ನಮಯವಾದ ಶುಭ್ರಮಾಲೆಗಳು ಶೋಭಿಸುತ್ತಿದ್ದುವು. ಸದಾ ಶಿವಪಾದವನ್ನು ಕಾಪಾಡುತ್ತಿರುವ ವೀರಭದ್ರಾದಿ ಗಣದೇವತೆಗಳು ಪರಶಿವನ ಹಿಂದೆಮುಂದೆ ಕಾವಲುಗಾರರಾಗಿ ನಿಂತರು. ಆನೆಯ ಎರಡು ಪಕ್ಕಗಳಲ್ಲಿಯೂ ಇಂದ್ರ, ವಿಷ್ಣು, ಬ್ರಹ್ಮಾದಿಗಳು ಆನೆಯದಂತಗಳನ್ನು ಹಿಡಿದು ನಿಂತರು. ಆನೆಯ ಎಡಬಲಭಾಗಗಳಲ್ಲಿ ಇಂದ್ರ ಮತ್ತು ವಿಷ್ಣು ಇವರಿಬ್ಬರೂ ಇದ್ದರು. ॥೨೩-೨೪॥

ನೀರಾಜಿತೋ ವಿಧಿಃ ಪಶ್ಚಾತ್ಸುರಾಸುರಗಣೈಸ್ಸಹ ।
ನೀರಾಜಿತೋ ಗಿರಿಸ್ತ್ರೀಭಿಃ ರತ್ನಮುಕ್ತಾಕ್ಷತಾದಿಭಿಃ ॥೨೫॥

ನದತ್ಸು ಗಜಭೇರೀಷು ಪಣವಾನಕಗೋಮುಖೈಃ ।
ಶಂಖಮೃದಂಗಪಟಹಕಾಹಲಾನಾಂ ಚ ನಿಸ್ವನೈಃ ॥೨೬॥

ನಂದಿನೋತ್ಸಾರಿತಸುರೋ ಮಹಾದೇವೋ ವೃಷಧ್ವಜಃ ।
ಪುರೋಯಾಯಿಭಿರತ್ಯುಗ್ರೈಃ ಖಡ್ಗಹೇತಿಧರೈರ್ಗಣೈಃ ॥೨೭॥

ನೃತ್ಯತ್ಸು ರಂಭಾಮುಖ್ಯಾಸು ಸಮಾರುಹ್ಯ ವೃಷಂ ತದಾ ।
ಗಜಾಕೃತಿಂ ಮಹಾದೇವೋ ರತ್ನಮಂಟಪಸ್ಪೃಷ್ಟಗಂ ॥೨೮॥

ಭ್ರಾಜದ್ವಿತಾನಕುಂಭಾಗ್ರಂ ಪತಾಕಾವಲಿಭೂಷಿತಂ ।
ರತ್ನಪಂಕಜಮಾಲಾಢ್ಯಂ ಗೌರ್ಯಾ ಸಾಕಂ ಮಹೇಶ್ವರಃ ॥೨೯॥

---

ಸುರಾಸುರಗಣಗಳಿಂದ ಕೂಡಿ ಬ್ರಹ್ಮನೂ ಪ್ರಕಾಶಿಸಿದನು. ಗಿರಿಸ್ತ್ರೀಯರು ರತ್ನ, ಮುತ್ತುಗಳ ಆರತಿಗಳನ್ನು ಶಂಕರನಿಗೆ ಎತ್ತಿದರು. ಆನೆಯ ಮೇಲಿನ ನಗಾರಿಗಳು ಮೊಳಗಿಸಲ್ಪಟ್ಟವು. ತಮಟೆ, ಮದ್ದಲೆ, ಶಂಖ, ತುತ್ತೂರಿ ಮುಂತಾದ ನಗಾರೀಭೇದಗಳ ಧ್ವನಿಯು ಸರ್ವತ್ರ ವ್ಯಾಪ್ತವಾಯಿತು. ||೨೫-೨೬||

ನಂದೀಶ್ವರನು ಮುಂದೆ ಹೊರಟು ದಾರಿಯಲ್ಲಿ ನಿಂತಿರುವ ದೇವತೆಗಳನ್ನೆಲ್ಲಾ ದಾರಿಬಿಟ್ಟು ನಿಲ್ಲಿಸಿದನು. ಶಿವನ ಮುಂಭಾಗದಲ್ಲಿ ಭಯಂಕರವಾದ ಆಯುಧಗಳನ್ನು ಹಿಡಿದಿರುವ ಗಣಗಳು ಹೊರಟರು. ಆದರ ಹಿಂಭಾಗದಲ್ಲಿ ರಂಭಾದ್ಯಪ್ಸರಸ್ತ್ರೀಯರು ನರ್ತನಮಾಡುತ್ತಾ ಪ್ರಯಾಣಮಾಡಿದರು. ಮಧ್ಯಭಾಗದಲ್ಲಿ ಗಜಾಕಾರವನ್ನು ಪಡೆದಿದ್ದ ವೃಷಭದ ಮೇಲೆ ರತ್ನಮಂಟಪದಲ್ಲಿ ಕುಳಿತು ಪರಶಿವನು ಗೌರಿಯೊಡನೆ ಹೊರಟನು. ||೨೭-೨೮||

ಆನೆಯ ಮೇಲಿರುವ ಮಂಟಪದಲ್ಲಿ ಪ್ರಕಾಶಮಾನವಾದ ಮೇಲ್ಕಟ್ಟುಗಳು ಕಟ್ಟಲ್ಪಟ್ಟಿದ್ದುವು. ರತ್ನಮಯವಾದ ಕಮಲಗಳ ಮಾಲೆಯನ್ನೇ ಆ ಮಂಟಪಕ್ಕೆ ಅಲಂಕಾರವಾಗಿ ಹಾಕಿದ್ದಿತು. ಇಂತಹ ಅಂಬಾರಿಯ ಮೇಲೆ ಕುಳಿತು ಗೌರೀ

ಕೇದಾರೇಶಾಲಯಂ ತತ್ರ ಪ್ರಾದಕ್ಷಿಣ್ಯಮುಪಾಯಯೌ ।
ಸ್ತುವಂತಿ ದೇವಾ ಮುನಯೋ ವೇದಾಸ್ತತ್ರ ಮಹೇಶ್ವರಂ ॥೩೦॥

॥ ವೇದಾ ಊಚುಃ ॥

ಭಜಾಮ ಯಾಮಿನೀಧವಪ್ರಿಯೋತ್ತಮಾಂಗಸಂಗತಃ
ಸ್ಫುರತ್ಕಪರ್ದಗಾಂಗಜಾಲಸತ್ಸರಾಗರಂಜಿತಃ ।
ಪ್ರಫುಲ್ಲಹಲ್ಲಕಾವಲೀ ಸುಚಂಪಕಾಲಿಮಾಲಿಕಾ
ಮಲೀಕಸತ್ಕಪೋಲಕಾಂ ಭಜಾಮಹೇಽದ್ಯ ಕಾಲಿಕಾಂ ॥೩೧॥

ವಿಹಾರಭೂಮಿಧೃಗ್ವರಂ ಹರಂ ಹರಂತಮೇನಸಾಂ
ಗಿರಿಂ ಪರಂ ಗರಂ ಪರಂ ಭಜಾಮ ಸೋಮಶೇಖರಂ ।
ನಗಪ್ರಿಯೋರುದಾರಿಕಾಂ ಸ್ವಭಕ್ತಪಾಪಹಾರಿಕಾಂ
ಸುಮೇನಜಾಕುಮಾರಿಕಾಂ ಭಜಾಮಹೇ ಕುಮಾರಿಕಾಂ ॥೩೨॥

---

ಮಹೇಶ್ವರರು ದಾರಿಯಲ್ಲಿದ್ದ ಕೇದಾರೇಶ್ವರನ ದೇವಾಲಯವನ್ನು ಪ್ರದಕ್ಷಿಣೆ ಮಾಡಿಕೊಂಡು ಹೊರಟರು. ಆಗ ದೇವತೆಗಳೂ, ಮುನಿಗಳೂ, ವೇದಗಳೂ ಮಹಾದೇವನನ್ನು ಈ ರೀತಿ ಸ್ತುತಿಸುತ್ತಿದ್ದರು. ॥೨೯-೩೦॥

ಆದರಲ್ಲಿ ವೇದಗಳು ಈ ರೀತಿ ಪಾರ್ವತಿಯನ್ನು ಸ್ತುತಿಸಿದವು. ಚಂದ್ರ ಶೇಖರನ ಸಂಬಂಧದಿಂದಲೂ ಪವಿತ್ರವಾದ ಪರಶಿವನ ಜಟಾಜೂಟ, ಗಂಗಾಜಲ, ಪುಷ್ಪಪರಾಗ ಇವುಗಳ ಸಾನ್ನಿಧ್ಯದಿಂದಲೂ ವಿಶೇಷವಾಗಿ ರಂಜಿಸುತ್ತಾ, ಅರಳಿದ ಕಲ್ಹಾರ, ಸಂಪಿಗೆ ಮುಂತಾದ ಪುಷ್ಪಮಾಲೆಗಳಿಂದ ಶೋಭಿಸುತ್ತಾ, ಶ್ರೇಷ್ಠವಾದ ಮುಂಗುರುಳುಗಳಿಂದ ವಿರಾಜಿಸುವ ಕಪೋಲಪ್ರದೇಶವುಳ್ಳ ಕಾಲಿಕಾದೇವಿಯೆನಿಸಿದ ಪಾರ್ವತಿಯನ್ನು ನಾವು ಸದಾ ಧ್ಯಾನಿಸುವೆವು. ॥೩೧॥

ಮುಮುಕ್ಷುಗಳಿಗೆ ಅತ್ಯಂತ ಪ್ರಿಯವಿಹಾರಸ್ಥಾನನಾದ, ಸಮಸ್ತ ಭಕ್ತಪಾಪ ಹಾರಕನಾದ, ಗಿರಿಯನ್ನು ಉದ್ಧರಿಸಿ, ವಿಷವನ್ನು ಪರಿಹರಿಸಿ ಭಕ್ತರನ್ನು ಕಾಪಾಡಿದ ಚಂದ್ರಶೇಖರನನ್ನು ಸದಾ ವಂದಿಸುವೆನು. ಗಿರಿಜಾದೇವಿಯೂ ಭಕ್ತಪಾಪಹಾರಿಣಿಯೂ, ಮೇನಾದೇವಿಯ ಪ್ರಿಯಪುತ್ರಿಯೂ ಆದ ಕುಮಾರೀದೇವಿಯನ್ನು ಸರ್ವದಾ ವಂದಿಸುವೆನು. ॥೩೨॥

ವಿಶ್ರಮ್ಯ ವಿಶ್ರಮ್ಯ ತದಾ ಮುದಾ ಹರಃ
ಸುರೈರ್ಗಣೇಂದ್ರೈಶ್ಚ ಸುಪಂಕ್ತಿಶಃ ಸ್ಥಿತೈಃ।
ರಂಭಾದಿಸಂರಂಭಕೃತೋರುನೃತ್ತಂ
ವಿಲೋಕ್ಯ ವಿಶ್ರಾಣಯದಂಬರೇ ತದಾ ॥೩೩॥

ತಾಂಬೂಲಪುಷ್ಪೈರ್ವರಚಂದನೈಶ್ಚ
ಸರ್ವಾನ್ ಪ್ರಪೂಜ್ಯಾಥ ಮುದಾ ಗಿರೀಂತ್ಸುರಾನ್ ।
ಗಣೇಶ್ವರಾನ್ ವೀಜಿತಚಾಮರೌಘ
ಸ್ತದಾ ಯಯೌ ವಾದ್ಯರವೈರ್ಮಹೇಶಃ ॥೩೪॥

ಪಶ್ಚಾನ್ಮಹೇಶ್ವರಗಜಸ್ಯ ಸುಮೇನಯಾ ಯುತಾ
ಲಕ್ಷ್ಮ್ಯಾದಯಸ್ತಾಃ ಸುರವೀರಪತ್ನ್ಯಃ।
ಗಣೇಶ್ವರಾಣಾಂ ಗಿರಿವರ್ಯಕಾಣಾಂ
ಪ್ರೋತ್ಫುಲ್ಲಪುಷ್ಪಾಂಬರಭೂಷಣಾಢ್ಯಾ ॥೩೫॥

---

ಹೀಗೆ ವೇದಗಳು ಹರಪಾರ್ವತಿಯರನ್ನು ಸ್ತುತಿಸುತ್ತಿರಲು, ವಿಶ್ವೇಶನು ಸುರವರ್ಗದಿಂದಲೂ, ಗಣದೇವತೆಯರಿಂದಲೂ, ರಂಭಾದ್ಯಪ್ಸರಸ್ತ್ರೀಯರಿಂದಲೂ ಕೂಡಿ, ಅಲ್ಲಲ್ಲಿ ನಿಂತು ವಿಶ್ರಾಂತಿಪಡೆಯುತ್ತಾ, ಅಂತರಿಕ್ಷಮಾರ್ಗದಲ್ಲಿ ಪ್ರಯಾಣ ಬೆಳಸಿದನು. ॥೩೩॥

ತನ್ನನ್ನು ವಿಶೇಷವಾಗಿ ಸತ್ಕರಿಸಿದ ಗಿರಿಗಳಿಗೂ, ಸುರರಿಗೂ ಮಹೇಶ್ವರನು ತಾಂಬೂಲಪುಷ್ಪಾದಿಗಳನ್ನಿತ್ತು ಆದರಿಸಿದನು. ಅನಂತರ ಗಣನಾಯಕರು ಚಾಮರಾದಿಗಳನ್ನು ಬೀಸುತ್ತಿರಲು, ವಾದ್ಯರವವು ಭೋರ್ಗರೆಯುತ್ತಿರಲು ಪರಶಿವನು ಮುಂದುವರಿದನು. ॥೩೪॥

ಮಹೇಶ್ವರನು ಕುಳಿತಿದ್ದ ಆನೆಯ ಹಿಂಭಾಗದಲ್ಲಿ ಮೇನಾದೇವಿಯಿಂದ ಕೂಡಿ ಲಕ್ಷ್ಮ್ಯಾದಿಯೇ ಮೊದಲಾದ ಸುರಸ್ತ್ರೀಯರು ಆನೆಯಮೇಲೆ ಪ್ರಯಾಣ ಬೆಳೆಸಿದರು. ಅದರ ಹಿಂದೆ ಗಿರಿರಾಜರು ಮತ್ತು ಗಣನಾಯಕರು ಇವರಿಂದ ಅಲಂಕೃತವಾದ ಅಂಬಾರಿಯು ಪ್ರಯಾಣಹೊರಟಿತ್ತು. ॥೩೫॥

ನೀರಾಜ್ಯ ಹಸ್ತಾ ಕ್ಷತಜಾತಮೌಕ್ತಿಕೈಃ
ಸಮುತ್ಕಿರಂತ್ಯೋ ಶಶಿಧಾಮಮೌಲೌ ।
ಗೌರ್ಯಾಂ ಪ್ರಪಥ್ಯಾಸ್ತೃತವಸ್ತ್ರಮಾರ್ಗೇ
ಯಯುರ್ಮುದಾ ಸಂಚರಮಾಣವಿಧ್ಯುತಃ ॥೩೬॥

ಸ ಪಾರಿಬರ್ಹಂ ಪ್ರದದೌ ಭವಾನ್ಯಾಃ
ಗಿರೀಶ್ವರೋಯಂ ಪ್ರಮುದೇ ಪಿತಾ ಧನಂ ।
ಸುವರ್ಣಮುಕ್ತಾಮಣಿಪದ್ಮರಾಗ
ಸುಪುಷ್ಪಶಂಗಂ ವರಹೀರಕಂ ಚ ॥೩೭॥

ಪ್ರವಾಳವೈಡೂರ್ಯಮಣೀಂದ್ರನೀಲ
ಗೋಮೇದಸನ್ಮಾರಕತಾಚ್ಛಗರ್ಭಂ ।
ತುಲಾಮುಲಾಲಕ್ಷಸುಸಂಖ್ಯಯಾ ಗಿರಿ
ರ್ವಿಭೂಷಣಾನ್ಯಸ್ಯತಿರತ್ನಸೌಭಗಂ ॥೩೮॥

---

ಪ್ರಯಾಣಕ್ಕೆ ಮುಂಚೆ ಪಾರ್ವತೀಪರಮೇಶ್ವರರಿಗೆ ಆರತಿಯನ್ನೆತ್ತಿ ಮುತ್ತಿನ ಮಂತ್ರಾಕ್ಷತೆಯನ್ನೆರಚಿ ಎಲ್ಲರೂ ನಮಸ್ಕರಿಸಿದರು. ಅವರು ಆನೆಯ ಸಮೀಪಕ್ಕೆ ಬರುವಾಗ ದಾರಿಯಲ್ಲಿ ಶುಭ್ರವಾದ ವಸ್ತ್ರವನ್ನು ಹಾಸಿದ್ದರು. ಅಂತಹ ವಸ್ತ್ರಮಾರ್ಗದಲ್ಲಿ ವಿಧಿವತ್ತಾಗಿ ಆ ದಂಪತಿಗಳು ಪ್ರಯಾಣ ಹೊರಟರು. ॥೩೬॥

ಅನಂತರ ಗಿರಿರಾಜನು ತನ್ನ ಮಗಳಿಗೆ ಕೊಡಬೇಕೆಂದಿದ್ದ ವಸ್ತ್ರಭೂಷಣಾದಿ ಸಕಲ ಉಡುಗೊರೆಗಳನ್ನು ಬಳುವಳಿಯಾಗಿ ಕೊಟ್ಟನು. ಸುವರ್ಣರಾಶಿ, ಮುತ್ತಿನ ಮಾಲೆ, ಪದ್ಮರಾಗದ ಹೂಗಳು, ಹೀರಮಣಿಮಾಲೆ ಇವುಗಳನ್ನು ಹೇರಳವಾಗಿ ಪ್ರೀತಿಪೂರ್ವಕವಾಗಿ ಕೊಟ್ಟನು. ॥೩೭॥

ಪ್ರವಾಳ, ವೈಡೂರ್ಯ, ಇಂದ್ರನೀಲ, ಗೋಮೇದಕ, ಮರಕತ ಮುಂತಾದ ದಿವ್ಯರತ್ನಗಳನ್ನೊಳಗೊಂಡ ಒಡವೆಗಳನ್ನು, ಗಿರಿರಾಜನು ತನ್ನ ಪುತ್ರಿಗೆ ಲಕ್ಷಾಂತರ ಸಂಖ್ಯೆಯಲ್ಲಿ ದಾನಮಾಡಿದನು. ॥೩೮॥

ದಿವ್ಯಾಂಬರಾಣಾಂ ಶತಲಕ್ಷಸಂಖ್ಯಂ
ನಿಶಾದಿಸತ್ಕುಂಕುಮರೋಚನಾಢ್ಯಂ ।
ದಾಸೀಗಣಾನಾಂ ಚ ಸಹಸ್ರಸಂಖ್ಯಯಾ
ಸ ಯೌವನೋನ್ಮಾದಭರಂ ವಿಭೂಷಿತಂ ॥೩೯॥

ಗಜಾಶ್ವಗೋವೃಂದಮಹೋಕ್ಷವತ್ಸಂ
ಶತಾಂಗಸಂಘಂ ಸುಪತಾಕಚಿಹ್ನಂ ।
ಸಹಸ್ರಶಸ್ತತ್ರ ದದೌ ಗಿರೀಂದ್ರಃ
ಕನ್ಯಾಧನಂ ಮಾನಧನೋ ಗಿರೀಶೇ ॥೪೦॥

ಮುದಾ ತದೋಚುರ್ಮುನಯೋ ಗಿರೀಶ್ವರಾ
ಗಣೇಶ್ವರಾಸ್ತತ್ರ ಗಿರೀಶ್ವರಂ ತಂ ।
ಧನ್ಯೋಽಸಿ ಮಾನ್ಯೋಽಸಿ ಸದಾ ಮಹಾಂಸ್ತ್ವಂ
ಹಿಮಾಚಲೋ ಭಕ್ತಿಯುತೋಽಸಿ ಗೌರ್ಯಾಂ ॥೪೧॥

ದೇದೀಯತೇ ಕನಕದಂಡವಿರಾಜಿತೈಶ್ಚ
ಸಚ್ಚಾಮರೈಃ ಪ್ರಚಲಕುಂಡಲಸುಂದರೀಭಿಃ ।

---

ದಿವ್ಯವಸ್ತ್ರಗಳು, ನಿಶಾಕುಂಕುಮ, ಗೋರೋಚನಾದಿಗಳು, ಯೌವನದಿಂದ ಶೋಭಿಸುತ್ತಿರುವ ಸಾವಿರಾರುಸಂಖ್ಯೆಯ ಅಲಂಕೃತ ದಾಸೀಗಣಗಳು ಇವರೆಲ್ಲರನ್ನೂ ಮಗಳಿಗಾಗಿ ಗಿರಿರಾಜನು ಸಹಸ್ರಾರು ಸಂಖ್ಯೆಯಲ್ಲಿ ಬಳುವಳಿಕೊಟ್ಟನು. ॥೩೯॥

ಆನೆ, ಕುದುರೆ, ಹಸು, ಕರು, ಎತ್ತು, ಪತಾಕಾದಿಗಳಿಂದ ಶೋಭಿಸುವ ರಥಗಳು ಇವೆಲ್ಲವನ್ನೂ ಸಹಸ್ರಾರುಸಂಖ್ಯೆಯಲ್ಲಿ ಕನ್ಯಾಬಳುವಳಿಯೆಂದು ಹೇಳುತ್ತಾ ಗಿರಿರಾಜನು ಪರಶಿವನಿಗೆ ಸಮರ್ಪಿಸಿದನು. ॥೪೦॥

ಇದನ್ನೆಲ್ಲಾ ನೋಡಿ ಅಲ್ಲಿ ನೆರೆದಿದ್ದ ಗಿರಿಗಳೂ, ಗಣನಾಯಕರೂ ಹಿಮಾಚಲವನ್ನು ನೋಡಿ, ನೀನೇ ಧನ್ಯನು, ನೀನೇ ಮಾನ್ಯನು, ನೀನೇ ಗಿರಿವರನು ಎಂದು ಹೊಗಳುತ್ತಾ, ಗೌರೀದೇವಿಯಲ್ಲಿ ಅವನು ತೋರಿಸಿದ ಭಕ್ತಿಗಾಗಿ ಆಶ್ಚರ್ಯಪಡುತ್ತಿದ್ದರು. ॥೪೧॥

ಶಿವದಂಪತಿಗಳು ಸುವರ್ಣದಂಡ ವಿರಾಜಮಾನವಾದ ಚಾಮರಗಳನ್ನು ಹಿಡಿದು ತಮ್ಮ ಕುಂಡಲಗಳು ಚಲಿಸುವಂತೆ ಚಾಮರಗಳನ್ನು ಬೀಸುತ್ತಿರುವುದನ್ನು

ದಿವ್ಯಾಂಗನಾಸ್ತನವಿರಾಜಿತಭೂಷಿತಾಂಗಾಃ
ಕೃತ್ವಾ ತು ಚಾಮರಯುತಾ ವರವಸ್ತ್ರಪೂಜಾಂ ॥೪೨॥

ವರ್ಷಂತಿ ತತ್ರ ಮುದಿತಾಃ ಪುರುಹೂತದೂತಾ
ಮೇಘಾ ಅಮೋಘಹೃದಯಾ ಸುಮನಾಲಿಭಿಸ್ತೇ ।
ದ್ಯೋತಂತಿ ಋಕ್ಷಾಣಿ ಗೃಹಾಶ್ಚ ಕಾಶಿರೇ
ವವುಶ್ಚ ವಾತಾ ಶಿಖಿನೋಽಪಿ ಜಜ್ವಲುಃ ॥೪೩॥

ಪ್ರದಕ್ಷಿಣಾವರ್ತಶಿಖಾಃ ಸುರಾಲಯೇ
ದೇವಾ ಮಹೇಶಾನಪದಾಬ್ಜಷಣ್ಮುಖಾಃ ।
ಯಯುಸ್ತದಾ ಮಂದರಕಂದರಾಲಯಂ
ಸೌಧಾದಿಸುಂದರತರಪ್ರಕರಂ ಮಹೇಶಃ ॥೪೪॥

---

ನೋಡುತ್ತಿದ್ದರು. ಮತ್ತು ಆ ಸ್ತ್ರೀಯರು ದಿವ್ಯವಾದ ಸ್ತನಗಳಮೇಲೆ ವಿರಾಜಿಸುವ ಅಲಂಕಾರವಸ್ತುಗಳುಳ್ಳವರಾಗಿ ಶಿವದಂಪತಿಗಳಿಗೆ ಚಾಮರಸೇವೆಯನ್ನು ಸಲ್ಲಿಸುತ್ತಿದ್ದರು. ಇಂತಹ ವೈಭವದಿಂದ ಗಿರಿಜಾಶಂಕರರ ಉತ್ಸವವು ಮುಂದುವರಿಯುತ್ತಿದ್ದಿತು. ॥೪೨॥

ಇಂದ್ರನ ದೂತರಾದ ದೇವಲೋಕದ ಮೇಘಗಳು ಪುಷ್ಪವೃಷ್ಟಿಯನ್ನು ಸುರಿಸಿದವು. ನಕ್ಷತ್ರಗಳು ಪ್ರಕಾಶಿಸಿದುವು. ಗ್ರಹಗಳು ವಿರಾಜಿಸಿದುವು. ಗಾಳಿಯು ಹಿತಕರವಾಗಿ ಬೀಸಿತು. ಅಗ್ನಿಯು ಮಂಡಲಾಕಾರವಾಗಿ ಜ್ವಲಿಸಿ ತನ್ನ ಭಕ್ತಿಯನ್ನು ತೋರ್ಪಡಿಸಿತು. ॥೪೩॥

ದೇವಲೋಕದಲ್ಲಿ ಸಮಸ್ತ ದೇವತೆಗಳೂ ಪ್ರದಕ್ಷಿಣಾದಿಗಳಿಂದ ಮಹೇಶ್ವರನ ಪಾದಗಳಿಗೆ ವಂದಿಸುತ್ತಾ ಪರಶಿವನನ್ನು ಹಿಂಬಾಲಿಸುತ್ತಲೇ ಪ್ರಯಾಣಮಾಡಿದರು. ಮಹೇಶ್ವರನಾದರೋ ಹೀಗೆ ಪ್ರಯಾಣಮಾಡಿ ಮಂದರಗಿರಿಯ ತಪ್ಪಲುಪ್ರದೇಶದಲ್ಲಿ ಉಪ್ಪರಿಗೆ ಮನೆಯೇ ಮುಂತಾದ ದಿವ್ಯಹರ್ಮ್ಯಗಳಿಂದ ಅಲಂಕೃತವಾಗಿದ್ದ ಸ್ವಾಶ್ರಮಕ್ಕೆ ಪ್ರಯಾಣಬೆಳೆಸಿದನು. ॥೪೪॥

ಭ್ರಾಜತ್ಪತಾಕಾವಲಿ ಶಾತಕುಂಭ
ಗುಪ್ತೈಃಕ್ಷ ಶೋಃಶುಭ್ಯದಿವಾರ್ಕಬಿಂಬೈಃ ।
ಸುರಮ್ಯರತ್ನಾವಲಿತೋರಣೌಘೈ
ರ್ಗಣೋರುಹಸ್ತಾಬ್ಜಜಲಾಬ್ಜವರ್ಷೈಃ ॥೪೫॥

ಅವಾರುಹ್ಯ ನಾಗಾತ್ಸಗೌರ್ಯಾ ಮಹೇಶೋ
ಮಹಾಸಭಾಂ ಪ್ರಾಪ್ಯ ಸುರತ್ನಚಿತ್ರಿತಾಂ ।
ನಿಷಾದ್ಯ ಸರ್ವಾನಮರೇಂದ್ರವಿಪ್ರಾನ್
ಗಿರೀಂದ್ರಸಂಘಾಂಶ್ಚ ಸದಾರಯುಕ್ತಾನ್ ॥೪೬॥

ಗಜಾನನಂ ಪೂಜ್ಯ ಸಪರ್ಯಯಾ ಶಿವೋ
ಗೌರ್ಯಾ ಗಣೇಂದ್ರೈಃ ಪ್ರತಿಪೂಜ್ಯ ಸರ್ವಾನ್ ।
ಗಂಧಾಕ್ಷತಾನ್ನಿಕ್ಷಸುವಾಸಸಾಂ ಭರೈ
ಪುಷ್ಪಾದಿತಾಂಬೂಲವರೈಃ ಪ್ರಹರ್ಷಿತಾನ್ ॥೪೭॥

---

ಅಲ್ಲಿ ಪರಶಿವನ ಗಜವು ಹೋಗಿ ನಿಂತೊಡನೆಯೇ ಸುವರ್ಣಮಯ ಪತಾಕೆಗಳು ಹಾರಾಡಲಾರಂಭಿಸಿದುವು. ಹಗಲಿನ ಸೂರ್ಯರಂತೆ ಪ್ರಕಾಶಿಸುವ ಆ ಪತಾಕೆಗಳು ವಿಶೇಷರೀತಿಯಲ್ಲಿ ಪ್ರಕಾಶಿಸತೊಡಗಿದುವು. ರತ್ನಮಯವಾದ ತೋರಣಗಳು ಅಲ್ಲಲ್ಲಿ ಬಿಗಿದು ಕಟ್ಟಲ್ಪಟ್ಟಿದ್ದುವು. ದೇವತೆಗಳು ತಮ್ಮ ಕರಕಮಲಗಳಿಂದ ಕಮಲ ಪುಷ್ಪಗಳನ್ನು ಸುರಿಸುತ್ತಾ ಪರಶಿವನಿಗೆ ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿದರು.॥೪೫॥

ಇಂತಹ ವೈಭವದಲ್ಲಿ ಪರಮೇಶ್ವರನು ಪಾರ್ವತಿಯೊಡನೆ ಆನೆಯಿಂದಿಳಿದು, ರತ್ನಮಯವಾದ ಮಹಾಸಭೆಯನ್ನು ಪ್ರವೇಶಿಸಿದನು. ಅಲ್ಲಿ ತಾನು ದಿವ್ಯಸಿಂಹಾಸನದಲ್ಲಿ ಮಂಡಿಸಿ, ತನ್ನನ್ನು ಹಿಂಬಾಲಿಸಿ ಬಂದ ಗಿರೀಂದ್ರರಿಗೂ, ಅಮರೇಂದ್ರರಿಗೂ, ವಿಪ್ರೇಂದ್ರರಿಗೂ, ಅವರ ಪತ್ನೀಪುತ್ರಾದಿಗಳಿಗೂ ಪ್ರತ್ಯೇಕ ಪ್ರತ್ಯೇಕವಾದ ಆಸನಗಳನ್ನು ಕೊಟ್ಟು ಸತ್ಕರಿಸಿದನು ॥೪೬॥

ಶಂಕರನು ಗಣನಾಯಕರೊಡನೆಯೂ ಗೌರೀದೇವಿಯೊಡನೆಯೂ ಗಜಾನನನಿಗೆ ವಂದಿಸಿ, ಸರ್ವರಿಗೂ ಸತ್ಕರಿಸಿ, ಗಂಧಾಕ್ಷತೆಗಳಿಂದಲೂ, ದಿವ್ಯವಸ್ತ್ರಾದಿಗಳಿಂದಲೂ, ದಿವ್ಯತಾಂಬೂಲಾದಿಗಳಿಂದಲೂ ಅವರನ್ನು ಮಹೇಶ್ವರನು ಸಂತೋಷಗೊಳಿಸಿದನು. ॥೪೭॥

ಚಕಾರ ನೃತ್ಯೋದ್ಧುರಲೋಕನೇಸ
ಸರ್ವಾನಶೇಷಾನ್ ಹರ ಏವ ತತ್ರ ।
ಪರೇದ್ಯುರಾಮಂತ್ರ್ಯ ಗಣೈಸ್ಸುರದ್ವಿಜೈ
ಗಿರೀಂದ್ರಸಂಘೈಶ್ಚ ತದಂಗನಾಭಿಃ ॥೪೮॥

ಭಕ್ಷ್ಯೈಶ್ಚ ಭೋಜ್ಯಾನ್ನವರೈಃ ಸ್ವಪಂಕ್ತೌ
ಸಂಭೋಜಯಾಮಾಸ ತದಾ ಗಿರೀಂದ್ರಾನ್ ।
ಏವಂ ಚ ಮಾಸಾಧ್ಯುಷಿತಾಃ ಸುಖೇನ
ಸುರಾ ದ್ವಿಜಾಸ್ತೇ ಗಿರಯೋ ಗಣಾಶ್ಚ ॥೪೯॥

ಪ್ರಣಮ್ಯ ಯಾತಾಃ ಸ್ವಗೃಹೇಷು ತರ್ಪಿತಾಃ
ಹರಾಜ್ಞಯಾ ತೇ ವಿವಿಶುಃ ಸ್ವಧಾಮ ।
ಮೇನಾ ತದಾ ಭೂಧರನಾಯಕೇನ
ಮೈನಾಕಯುಕ್ತಾ ಪ್ರಯಯೌ ಹಿಮಾಚಲಂ ॥೫೦॥

---

ಆ ದಿವಸವೂ ನಾಟ್ಯಾದಿಗಳಿಂದ ಅಲ್ಲಿ ನೆರೆದಿದ್ದ ಸರ್ವರಿಗೂ ತೃಪ್ತಿಯು ನ್ನುಂಟುಮಾಡಿ, ಮರುದಿನವೂ ಅವರೆಲ್ಲರಿಗೂ, ಸುರರಿಗೂ, ಗಿರೀಂದ್ರರಿಗೂ, ಅವರ ಸ್ತ್ರೀಯರಿಗೂ ಉಪಚಾರಾದಿಗಳನ್ನು ನಡೆಸಿ ಮಹಾದೇವನು ಅತ್ಯಂತ ಸಂತೋಷ ದಿಂದಿದ್ದನು. ॥೪೮॥

ಇದೇರೀತಿ, ಗಿರಿಗಳೂ, ಸುರರೂ, ಗಣಗಳೂ ಪರಶಿವನಿಂದ ಕೊಡಲ್ಪಟ್ಟ ಭಕ್ಷ್ಯಭೋಜ್ಯಾದಿಗಳಿಂದ ಆನಂದಹೊಂದುತ್ತಾ, ಶಿವನ ಪಂಕ್ತಿಯಲ್ಲಿಯೇ ಕುಳಿತು ಭೋಜನಮಾಡುತ್ತಾ ಒಂದು ತಿಂಗಳ ಪರ್ಯಂತ ಅಲ್ಲಿಯೇ ವಾಸಮಾಡುತ್ತಾ ಸುಖ ವಾಗಿದ್ದರು. ॥೪೯॥

ಒಂದು ತಿಂಗಳಾದ ಮೇಲೆ ಆ ಅತಿಥಿಗಳೆಲ್ಲರೂ ತಮ್ಮ ತಮ್ಮ ಗೃಹಗಳಿಗೆ ಹರಾಜ್ಞೆಯಂತೆ ತೆರಳಿದರು. ಹಿಮವಂತನೂ ಸಹ ತನ್ನ ಪತ್ನಿಯಾದ ಮೇನಾದೇವಿ ಯೊಡನೆಯೂ, ಪುತ್ರನಾದ ಮೈನಾಕನಿಂದಲೂ ಕೂಡಿ ತನ್ನ ನಿವಾಸಸ್ಥಾನವಾದ ಹಿಮಾಚಲವನ್ನು ಸೇರಿದನು. ॥೫೦॥

ಮಹೇಶ್ವರಶ್ಚಾಪಿ ಗಣೇಂದ್ರಯುಕ್ತೋ
ಗಜಾನನೇನಾಪಿ ಮುದಾಪ್ತಗೌರ್ಯಾ ।
ವಿರಾಜತೇ ಸೌಧವರೇ ಮಹರ್ಧಿಭಿಃ
ತತ್ಕಂದರೇ ಸುಂದರಪುಷ್ಪಶಾಖಿಭಿಃ ॥೫೧॥

ತದಾ ಪ್ರಣಮ್ಯ ಪ್ರಸಭಂ ಮಹೇಶ
ಮುವಾಚ ಭಕ್ತೋ ಘಟಜೋ ಮಹೇಶ್ವರಂ ।
ಕಲ್ಯಾಣಶೈಲಧನುಷಂ ಮಹಿಷೀಸಮೇತಂ
ಕಲ್ಯಾಣಯುಕ್ತವಪುಷಂ ಹೃದಯೇ ದಧಾಮಿ ॥೫೨॥

ಸದಾ ಮುದಾ ಮದ್ಧೃದಯೇ ವಸೇಶ ।
ವಿಯೋಗಭೀತಃ ಪ್ರಕರೋಮಿ ಕಿಂ ತೇ ॥೫೩॥

॥ ಶ್ರೀಸ್ಕಂದ ಉವಾಚ ॥

ಮುದಾ ಮಹೇಶೋ ಘಟಜಂ ವದತ್ತದಾ
ವಸ್ವೈವ ಭೂಮೌ ವಿಹರಸ್ವ ಕಾಮಂ ।

---

ಮಹೇಶ್ವರನಾದರೋ ಇತ್ತ ತನ್ನ ಗಣನಾಯಕರೊಡನೆಯೂ, ಗಜಮುಖನಾದ ಗೌರೀಪುತ್ರನೊಡನೆಯೂ ಕೂಡಿ, ಗೌರೀದೇವಿಯೊಡನೆ ಸರಸಸಲ್ಲಾಪಗಳನ್ನು ನಡೆಸುತ್ತಾ, ಮಂದರಗಿರಿಯ ತಪ್ಪಲಿನಲ್ಲಿದ್ದ ದಿವ್ಯಹರ್ಮ್ಯದಲ್ಲಿ ಮನೋಹರವಾದ ಪುಷ್ಪೋದ್ಯಾನಗಳ ನಡುವೆ ಸಂತೋಷದಿಂದ ವಾಸಿಸುತ್ತಿದ್ದನು. ॥೫೧॥

ಆಗ ಅಗಸ್ತ್ಯಮಹರ್ಷಿಯು ಮಹೇಶ್ವರನನ್ನು ಕುರಿತು "ಮಹಾದೇವನೇ, ನೀನು ಮಂಗಳಕರವಾದ ಧನುಸ್ಸನ್ನು ಹಿಡಿದು ಮಹಿಷೀಸಮೇತನಾಗಿ ದಿವ್ಯಮಂಗಳ ವಿಗ್ರಹದಿಂದ ಕೂಡಿ ಸದಾ ನನ್ನ ಹೃದಯದಲ್ಲಿಯೇ ವಾಸಮಾಡಬೇಕು. ಏಕೆಂದರೆ ನಾನು ನಿನ್ನನ್ನು ಬಿಟ್ಟು ಕ್ಷಣಕಾಲವೂ ಬದುಕಿರಲಾರೆ. ನಿನ್ನನ್ನು ಸದಾ ಹೊಂದಿರುವುದಕ್ಕೆ ಇದೊಂದೇ ದಾರಿ. ನಿನ್ನನ್ನು ದೂರಮಾಡಿಕೊಂಡು ನಾನು ಬದುಕಿ ಪ್ರಯೋಜನವೇನು" ಎಂದು ಬಹು ಭಕ್ತಿಯಿಂದ ಮಹಾದೇವನಲ್ಲಿ ಪ್ರಾರ್ಥನೆ ಮಾಡಿಕೊಂಡನು. ॥೫೨-೫೩॥

ಆಗ ಮಹಾದೇವನು ಅಗಸ್ತ್ಯಮಹರ್ಷಿಯನ್ನು ಕುರಿತು "ದ್ವಿಜಶ್ರೇಷ್ಠನೇ, ನೀನು ಯೋಚಿಸಬೇಡ. ಭೂಲೋಕದಲ್ಲಿ ನೀನು ಸ್ವೇಚ್ಛೆಯಾಗಿ ಸಂಚರಿಸಿ

ಕ್ಷೇತ್ರೇಷು ತೇ ದರ್ಶನಮೇತದೇವ
ಭವೇತ್ಸದಾ ಯಾಹಿ ಮಮಾಜ್ಞಯಾ ದ್ವಿಜ ॥೫೪॥

ನತ್ವಾ ಮಹೇಶಾಬ್ಜಪದಂ ಭವಾನೀಂ
ಯಯೌ ಮುನೀಂದ್ರೋಽಥ ಸದಕ್ಷಿಣಾಶಾಂ ।
ವಿಂಧ್ಯಂ ಪ್ರಶಾಮ್ಯಾಥ ಮುದಾ ಮಹೇಶಂ
ಕಲ್ಯಾಣವೇಷಂ ತಮಪಶ್ಯದಂಜಸಾ ॥೫೫॥

ಕ್ಷೇತ್ರೇಷು ವೇದಾಖ್ಯಕಕಾನನೇ ಹರಂ
ಶ್ರೀಸುಂದರೇ ಶೈಲವರೇ ಮಹೇಶಂ ।
ನತ್ವಾ ವಸತ್ರೇಽಪಿ ಸುರೇಂದ್ರಸಂಘಾಃ
ಕುಮಾರಜನ್ಮ ಪ್ರಸಮೀಕ್ಷ್ಯ ಸಂಸ್ಥಿತಾಃ ॥೫೬॥

ಯೇ ವಾ ಪಠಂತೀದಂಮಹೇಶ ಮಂಗಲಂ
ಸರ್ವಾರ್ಥಸಿದ್ಧಿಂ ಚ ಲಭಂತಿ ಮಂಗಲಂ ।

---

ಕೊಂಡಿರು. ನೀನು ಯಾವ ಸ್ಥಳದಲ್ಲಿ ವಾಸಮಾಡುತ್ತಿದ್ದರೂ, ನನ್ನ ನಿಜಸ್ವರೂಪದ ದರ್ಶನವು ನಿನಗೆ ಸುಲಭವಾಗಿ ಲಭಿಸುವಂತೆ ಈಗ ವರವಿತ್ತಿರುವೆನು. ಹೋಗು. ಇದು ನನ್ನಾಜ್ಞೆಯೆಂದು ತಿಳಿ'' ಎಂದು ಅನುಗ್ರಹಿಸಿದನು. ॥೫೪॥

ಮಹಾದೇವಿಯ ಪಾದಕಮಲಗಳಿಗೆ ವಂದಿಸಿ, ದಕ್ಷಿಣದಿಗಭಿಮುಖವಾಗಿ ಪ್ರಯಾಣಮಾಡಿದನು. ದಾರಿಯಲ್ಲಿ ಸಿಕ್ಕಿದ ವಿಂಧ್ಯಪರ್ವತದ ಗರ್ವವನ್ನು ಹೋಗಲಾಡಿಸಿ, ದಕ್ಷಿಣಭಾರತಕ್ಕೆ ಬಂದು ಅಲ್ಲಿ ಶಿವನಿತ್ತ ವರದಂತೆ ಕಲ್ಯಾಣವೇಷವುಳ್ಳ ಮಹೇಶ್ವರಸ್ವರೂಪವನ್ನು ನೋಡುತ್ತಾ ಸುಖವಾಗಿ ನೆಲಸಿದ್ದನು. ॥೫೫॥

ಅಗಸ್ತ್ಯಮಹರ್ಷಿಯೊಡನೆ ಅನೇಕ ದೇವತೆಗಳೂ ಸಹ ದಕ್ಷಿಣದಿಕ್ಕಿಗೆ ಬಂದು ವೇದಕಾನನವೆಂಬ ಸ್ಥಳದಲ್ಲಿ ನಿಂತು ಅಲ್ಲಿ ಸುಂದರವಾದ ಗಿರಿಯಲ್ಲಿ ವಾಸಿಸುತ್ತಾ, ಅಲ್ಲಿಯೇ ಪರಶಿವನ ಸ್ವರೂಪವನ್ನು ದರ್ಶನಮಾಡುತ್ತಾ, ಕುಮಾರಸ್ವಾಮಿಯ ಜನನವು ಯಾವಾಗ ಉಂಟಾಗುವುದೋ ಎಂದು ಆ ಕಾಲವನ್ನೇ ನಿರೀಕ್ಷಿಸುತ್ತಾ ಸುಖವಾಗಿ ವಾಸಮಾಡಿಕೊಂಡಿದ್ದರು. ॥೫೬॥

ಯಾರು ಈ ಶಿವವಿವಾಹದ ಸಂಬಂಧವಾದ ಕಥಾಭಾಗವನ್ನು ಭಕ್ತಿಶ್ರದ್ಧೆಗಳಿಂದ ಓದುವರೋ ಅವರು ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವರು. ಅಥವಾ

ಶೃಣ್ವಂತಿ ಯೇಪೀಶ್ವರಯೋಃ ಸುಮಂಗಲಂ
ತೇಂತೇಽನ್ವಿತಂ ಯಾಂತಿ ಸ ದೈವ ಮಂಗಲಂ ॥೫೭॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಶಿವಗೌರ್ಯೋಃ ಮಂದರಾಚಲಾಗಮನಂ ನಾಮ
ವಿಂಶೋಽಧ್ಯಾಯಃ

---

ಶಿವಪಾರ್ವತಿಯರ ವಿವಾಹಸಂಬಂಧವಾದ ಮತ್ತು ಮಂಗಳಪ್ರದವಾದ ಈ ಕಥಾಭಾಗವನ್ನು ಯಾರು ಭಯಭಕ್ತಿಯಿಂದ ಶ್ರವಣಮಾಡುವರೋ ಅವರು ಐಹಿಕವಾದ ಸಕಲಸುಖಗಳನ್ನೂ ಪಡೆಯುವರಲ್ಲದೆ ಆಮುಷ್ಮಿಕವಾದ ಶಾಶ್ವತ ಮೋಕ್ಷವನ್ನು ಪಡೆದು ಸದಾನಂದ ಭರಿತರಾಗುವರು ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮಹರ್ಷಿಗಳಿಗೆ ಶಿವಪಾರ್ವತಿಯರ ಕಲ್ಯಾಣಭಾಗದ ಪಠನ ಮತ್ತು ಶ್ರವಣಮಹಿಮೆಯನ್ನು ವಿಸ್ತಾರವಾಗಿ ತಿಳಿಯಹೇಳಿದನು. ॥೫೭॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಈಶನಾಮಕವಾದ ದ್ವಾದಶಾಂಶದಲ್ಲಿ ಶಿವಗೌರೀ
ಸಂವಾದರೂಪವಾಗಿ, ಪಾರ್ವತೀಪರಶಿವರು ಹಿಮಗಿರಿಯಿಂದ
ಮಂದರಗಿರಿಗೆ ಹಿಂದಿರುಗಿದ ಕಥಾಭಾಗವನ್ನು ವಿವರಿಸುವ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಏಕವಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತದಾ ಮಂದರಶೈಲೇ ತು ಶೈಲೇಂದ್ರಸುತಯಾ ಶಿವಃ ।
ನಂದಿಭೃಂಗಿಮಹಾಕಾಲಚಂಡಿಕೇಶಾದಿಭಿರ್ಗಣೈಃ ||೧||

ಗಜಾನನೇನಾಪಿ ಮುದಾ ಸೇವಿತೋ ವೃಷಭೇಣ ಚ ।
ಉವಾಸ ಮಣಿಸೌಧೇಷು ವಿಹಾರಶಯನಾಸನೈಃ ||೨||

ಭಕ್ಷ್ಯೈರ್ಭೋಜ್ಯೈರ್ಮಹಾದೇವಂ ಸೇವಂತೀ ಪರಮೇಶ್ವರೀ ।
ರತ್ನವ್ಯಜನಹಸ್ತಾಗ್ರಾ ಪರ್ಯಂಕೇ ತಮವೀಜಯತ್ ||೩||

---

## ಇಪ್ಪತ್ತೊಂದನೆಯ ಅಧ್ಯಾಯ

ಪರಮೇಶ್ವರನು ಮಂದರಗಿರಿಯಲ್ಲಿ ಪಾರ್ವತಿಯೊಡಗೂಡಿ ನಂದಿ, ಭೃಂಗಿ, ಮಹಾಕಾಲ, ಚಂಡಿಕೇಶ್ವರ, ಗಜಾನನ, ವೃಷಭರಾಜ ಇವರಿಂದ ಸೇವಿಸಲ್ಪಡುತ್ತಾ ದಿವ್ಯವಾದ ಉಪ್ಪರಿಗೆಯ ಮನೆಗಳಲ್ಲಿ ಸುಖಶಯನವಿಹಾರಾದಿಗಳನ್ನು ಅನುಭವಿಸುತ್ತಾ ಸಂತೋಷದಿಂದ ಕಾಲಕಳೆಯುತ್ತಿದ್ದನು. ||೧-೨||

ಪಾರ್ವತಿಯು ತನ್ನ ಪತಿಯಾದ ಪರಶಿವನಿಗೆ ಭಕ್ಷ್ಯಭೋಜ್ಯಾದಿಗಳನ್ನಿತ್ತು, ರತ್ನಮಯವಾದ ಬೀಸಣಿಗೆಯನ್ನು ಹಿಡಿದು ಮಂಚದಮೇಲೆ ಕುಳಿತಿದ್ದ ಪತಿಗೆ ಗಾಳಿಬೀಸುತ್ತಿದ್ದಳು. ರತ್ನಮಯವಾದ ಹಿಡಿಯುಳ್ಳ ಚಾಮರಗಳನ್ನು ಹಿಡಿದು

ಮಣಿದಂಡಾಗ್ರಧವಳಚಾಮರೈಃ ಸಾ ದುಧಾವ ಹ ।
ಫಲಾಲಿವರಪಾತ್ರೈಶ್ಚ ಮಧುಮೈರೇಯಮಾನತಃ ॥೪॥

ದಿವ್ಯಾಂಗರಾಗಗಂಧೈಶ್ಚ ಪುಷ್ಪಾಭರಣಸೇವನೈಃ ।
ಪ್ರಾಸಾದತಲಸಂಚಾರೈಃ ಸುರಮ್ಯವನದರ್ಶನೈಃ ॥೫॥

ಹಂಸಸಾರಸ ಚಕ್ರಾಹ್ವ ಕೋಕಿಲಾಶುಕಶಾರಿಕಾಃ ।
ಶಿಖಂಡಿತಾಂಡವಂ ಪಶ್ಯನ್ನಿಜಹಾರ ಋತೂನ್ ಬಹೂನ್ ॥೬॥

ದೋಲಾಂದೋಲನಕ್ರೀಡಾಭಿಃ ರತ್ನಮಂಚೇಷು ತೌ ಶಿವೌ ।
ಪ್ರಮೋದಮಾಪತುಃ ಸ್ವೈರಂ ಶಿವೌ ಹಲ್ಲೀಸಲಾಸ್ಯಕೈಃ ॥೭॥

ಕಂತುಕಕ್ರೀಡನರತೌ ಅಕ್ಷೈರ್ದೀವ್ಯತುರೀಶ್ವರೌ ।
ಮಂದರಾಪಾರಶಿಖರೇ ವೃಷೇಶಮಧಿರುಹ್ಯ ತೌ ॥೮॥

ಗಜಾನನೇನ ಗಣಪೈಃ ಸೇವಿತೌ ನಂದಿನಾ ಮುದಾ ।
ವಿಲೋಕ್ಯ ಶಿಖರಾಣ್ಯದ್ಧಾ ವಿಜಹ್ರಾತೇ ಮುದಾ ಶಿವೌ ॥೯॥

---

ಆಗಾಗ ಸೇವೆಮಾಡುತ್ತಿದ್ದಳು. ದಿವ್ಯವಾದ ಕಣ್ಣುಗಳನ್ನೂ, ಮದ್ಯಗಳನ್ನು ತಟ್ಟೆಯಲ್ಲಿಟ್ಟು ಪರಮೇಶ್ವರನಿಗೆ ಅರ್ಪಣೆಮಾಡುತ್ತಿದ್ದಳು. ॥೩-೪॥

ಅಂಗರಾಗಗಳು, ದಿವ್ಯಸುಗಂಧ, ಪುಷ್ಪಗಳು, ಆಭರಣಗಳು ಇವುಗಳಿಂದ ಪರಸ್ಪರವಾಗಿ ಆನಂದಪಡೆಯುತ್ತಾ, ದಿವ್ಯಹರ್ಮ್ಯಗಳಮೇಲೆಯೂ ರಮ್ಯವಾದ ಉದ್ಯಾನವನಗಳಲ್ಲಿಯೂ ಸಂಚರಿಸುತ್ತಾ, ಹಂಸ, ಸಾರಸ, ಚಕ್ರವಾಕ, ಕೋಗಿಲೆ, ಶುಕ, ಶಾರಿಕೆ, ನವಿಲು ಇವುಗಳ ಧ್ವನಿಯನ್ನು ಕೇಳುತ್ತಾ, ನಾಟ್ಯವನ್ನು ನೋಡುತ್ತಾ ಅನೇಕತಿಂಗಳು ಕಾಲಕಳೆದರು ॥೫-೬॥

ರತ್ನನಿರ್ಮಿತವಾದ ತೂಗುಮಂಚಗಳಮೇಲೆ ಕುಳಿತು ಶಿವದಂಪತಿಗಳು ಆನಂದಪಡುತ್ತಿದ್ದರು. ಹಲ್ಲೀಸನಾಟ್ಯವಾಡುತ್ತಾ ತಾವೇ ಸಂತಸಗೊಳ್ಳುತ್ತಿದ್ದರು. ಚೆಂಡಾಟ, ಪಗಡೆಯಾಟ ಇವುಗಳನ್ನಾಡಿ ಬೇಸರಿಕೆಯಾದಾಗ ವೃಷಭದಮೇಲೆ ಕುಳಿತು ಮಂದರಶಿಖರದಲ್ಲಿ ಲಘುಸಂಚಾರಮಾಡುತ್ತಿದ್ದರು. ॥೭-೮॥

ಜೊತೆಯಲ್ಲಿ ಗಣಪತಿ, ನಂದೀಶ್ವರ ಇನ್ನೂ ಕೆಲವು ಗಣನಾಯಕರು ಪರಶಿವದಂಪತಿಗಳನ್ನು ಓಲೈಸುತ್ತಿದ್ದರು. ಮಂದರಗಿರಿಶಿಖರಗಳ ಸೌಂದರ್ಯವನ್ನು

ಕ್ವಚಿತ್ಪ್ರಫುಲ್ಲಸಾಲಾಗ್ರಂ ಕ್ವಚಿತ್ತಾಲರವಾಕುಲಂ ।
ಕ್ವಚಿದಾತಾಮ್ರಶಾಖಾಗ್ರಸಹಕಾರವನಾವೃತಂ ॥೧೦॥

ಕ್ವಚಿತ್ಪ್ರಫುಲ್ಲವಲ್ಲೀಭಿರ್ಮಲ್ಲೀಭಿಃ ಪುಷ್ಪಿತಂ ಕ್ವಚಿತ್ ।
ಕ್ವಚಿದ್ದಾಡಿಮದತ್ತಾಭಫುಲ್ಲಪುಷ್ಪವಿರಾಜಿತಂ ॥೧೧॥

ತಮಾಲಕುಲನೀಲಾಚ್ಛಪುಷ್ಪಗುಚ್ಛಯುತಂ ಕ್ವಚಿತ್ ।
ಕ್ವಚಿತ್ಕದಂಬನಿಬಿಡಗುಚ್ಛ ಗುಂಜದಳಿವ್ರಜಂ ॥೧೨॥

ಕ್ವಚಿದಾರಗ್ವಧಾಲೋಲ ಮಾರುತಾಕೀರ್ಣಗುಚ್ಛಕಂ ।
ಕ್ವಚಿನ್ಮಂದಾರ ಪುನ್ನಾಗ ಶಿರೀಷಾರ್ಜುನಶೋಭಿತಂ ॥೧೩॥

ದೇವದಾರುವನಾಕ್ರಾಂತಕೋವಿದಾರವನಾವೃತಂ ।
ಕಪಿತ್ಥಶಿಂಶುಪಾಲೋಧ್ರ ಧನಸರ್ಜವನಾವೃತಂ ॥೧೪॥

---

ನೋಡುತ್ತಾ, ಅಲ್ಲಲ್ಲಿ ಅರಳಿದ ಸಾಲವೃಕ್ಷಗಳ ಗುಂಪನ್ನೂ, ತಾಲವೃಕ್ಷಗಳ ಮರ್ಮರ ಧ್ವನಿಯನ್ನೂ, ಸುತ್ತಲೂ ಚಿಗುರಿ ಕೆಂಪಾಗಿರುವ ಮಾವಿನಮರಗಳ ವಿಶೇಷ ಸೌಂದರ್ಯವನ್ನೂ ನೋಡಿ ಆನಂದಪಡುತ್ತಿದ್ದರು. ॥೯-೧೦॥

ಅರಳಿದ ಮಲ್ಲಿಗೆಯು ಲತೆಗಳು, ವಿಕಸಿತವಾದ ಪುಷ್ಪಗುಚ್ಛಗಳು, ದಾಡಿಂಬ ಹೂಗಳು, ಹಣ್ಣುಗಳು, ಹೊಂಗೆಯ ಮರದ ತೋಪುಗಳು, ನೀಲಪುಷ್ಪರಾಶಿಗಳು, ಕದಂಬಪುಷ್ಪಗಳಮೇಲೆ ಹಾರಾಡುವ ದುಂಬಿಗಳ ಸಾಲುಗಳು, ಇವುಗಳನ್ನೊಳಗೊಂಡ ಸುಂದರಮಯವಾದ ಪ್ರದೇಶಗಳನ್ನು ನೋಡಿ ನೋಡಿ ಪರಶಿವದಂಪತಿಗಳು ಆಹ್ಲಾದಗೊಳ್ಳುತ್ತಿದ್ದರು. ॥೧೧-೧೨॥

ದೊಡ್ಡ ಆಲದ ಮರಗಳ ಗುಂಪಿನಲ್ಲಿ ವಿಶೇಷವಾದ ಗಾಳಿಯಿಂದ ಆ ಮರದ ಹೂಗೊಂಚಲುಗಳು ಅಲುಗಾಡುತ್ತಿದ್ದುವು. ಮಂದಾರಪುಷ್ಪಗಳು, ಪುನ್ನಾಗ ಹೂವುಗಳು ಶಿರೀಷ, ಅರ್ಜುನ ಮುಂತಾದ ಹೂಗಳ ಸಮೂಹದಿಂದಲೂ, ದೇವದಾರು ವನದಿಂದಲೂ, ಕಂಚುವಾಳದ ಮರಗಳ ಗುಂಪಿನಿಂದಲೂ ಬೇಲದಮರ, ಶಿಂಶುಪಾವೃಕ್ಷ, ಹಿಪ್ಪೆಮರ, ಧವವೃಕ್ಷ, ಸರ್ಜವೃಕ್ಷ ಇವುಗಳಿಂದಲೂ ಕೂಡಿ ಆ ಶಿಖರ ಪ್ರದೇಶವು ಸುಂದರವಾಗಿದ್ದಿತು. ॥೧೩-೧೪॥

ಪಲಾಶಕಾಶಗುಚ್ಛಾಗ್ರೈರ್ಧೂರ್ಣನ್ನದ್ಭಿಃ ಕರ್ಣಿಕಾರಕೈಃ ।
ಶೋಭಿತಂ ನಿಬಿಡಚ್ಛಾಯಂ ಕೋಕಿಲಾರಾವಭೂಷಿತಂ ॥೧೫॥

ಭ್ರಮನ್ಮಾತಂಗಸಾರಂಗವಿಹಂಗವಿರುತಂ ಕ್ವಚಿತ್ ।
ಬಿಲ್ವಾಮಲಕ್ಯಜಂಬೂಭಿಃ ಸಂವೃತಂ ವೇಣುಗುಲ್ಮಕೈಃ ॥೧೬॥

ವನಸೂಕರದಂಷ್ಟ್ರಾಗ್ರ ವಿದಾರಿತಶಿಲಾತಲಂ ।
ಮಾತಂಗಮದಧಾರಾಭಿಃ ಸಿಕ್ತಭೂತಲಸಂಯುತಂ ॥೧೭॥

ಉತ್ಪುಚ್ಛಚಾಮರಕುಲೈರ್ವೀಜಿತಂ ಗಂಧಿತಂ ಸದಾ ।
ಕಸ್ತೂರಿಕಾಮೃಗಭ್ರಾಮ್ಯದ್ಗಂಧಕೇತಕಮಾರುತಂ ॥೧೮॥

ಮಯೂರಪಕ್ಷವಿಕ್ಷಿಪ್ತಪತಚ್ಚಂದ್ರಕಭೂತಲಂ ।
ಗಂಧರ್ವಕಿನ್ನರಾನೀಕಗಾಯನಾಸಕ್ತಸನ್ಮೃಗಂ ॥೧೯॥

---

ಮುತ್ತುಗದ ಹೂವು, ಕಾಶಪುಷ್ಪ, ಕರ್ಣಿಕಾರಪುಷ್ಪ ಇವುಗಳನ್ನು ಮಂದ ಮಾರುತವು ಅಲ್ಲಲ್ಲಿ ಉದುರಿಸುತ್ತಿದ್ದಿತು. ಕೋಗಿಲೆಗಳ ಧ್ವನಿಯಿಂದ ಆ ವೃಕ್ಷಚ್ಛಾಯೆಯು ಅತ್ಯಾನಂದಕರವಾಗಿದ್ದಿತು. ಅಲ್ಲಲ್ಲಿ ಆನೆಗಳು, ಸಾರಗಗಳು ಇನ್ನೂ ನಾನಾವಿಧವಾದ ಪಕ್ಷಿಗಳೂ ಅಲ್ಲಲ್ಲಿ ಧ್ವನಿಗೈಯ್ಯುತ್ತಿದ್ದುವು. ಬಿಲ್ವವೃಕ್ಷಗಳು, ನೆಲ್ಲಿಯ ಮರಗಳು, ನೇರಳೆಯ ಮರಗಳು, ಬಿದಿರುಮೆಳೆಗಳು ಬಹಳವಾಗಿ ಆ ಗಿರಿ ಶಿಖರದಲ್ಲಿ ವಿರಾಜಿಸುತ್ತಿದ್ದುವು. ॥೧೫-೧೬॥

ಕಾಡುಹಂದಿಗಳು ತಮ್ಮ ಕೋರೆಹಲ್ಲುಗಳಿಂದ ಬಂಡೆಗಳನ್ನು ಒಂದು ಕಡೆ ಸೀಳಿಬಿಡುತ್ತಿದ್ದುವು. ಒಂದು ಸ್ಥಳದಲ್ಲಿ ಮದ್ದಾನೆಗಳ ಮದೋದಕದಿಂದ ಭೂಮಿಯೆಲ್ಲಾ ಒದ್ದೆಯಾಗಿಹೋಗಿದ್ದಿತು! ಚಮರೀಮೃಗಗಳು ಬಾಲವನ್ನೆತ್ತಿ ಅಲ್ಲಲ್ಲಿ ಸುಗಂಧವನ್ನು ಬೀರುತ್ತಿದ್ದುವು. ಕೇತಕೀಪುಷ್ಪಗಳ ಪರಾಗವು ಗಾಳಿಯಿಂದ ಕೂಡಿ ಆ ಪ್ರಾಂತವನ್ನೆಲ್ಲಾ ಸುಗಂಧಮಯವನ್ನಾಗಿ ಮಾಡಿದ್ದಿತು. ॥೧೭-೧೮॥

ನವಿಲುಗರಿಗಳು ಅಲ್ಲಲ್ಲಿ ಉದುರಿ ಚಂದ್ರಮಂಡಲದ ಭ್ರಾಂತಿಯನ್ನು ತರುತ್ತಿದ್ದುವು. ಗಂಧರ್ವರು, ಕಿನ್ನರರು ಅಲ್ಲಲ್ಲಿ ಸಂಗೀತ ಹಾಡುತ್ತಿದ್ದರೆ ಅದನ್ನು ಕೇಳುವ ಆಸೆಯಿಂದ ಮೃಗಗಳು ಸಾಲುಸಾಲಾಗಿ ನಿಲ್ಲುತ್ತಿದ್ದುವು. ಹುತ್ತಗಳ ಮೇಲೆ ಹಾವುಗಳು ಹೆಡೆಯೆತ್ತಿ ನಿಂತು ಹೊರಗಿನಿಂದ ಬರುವ ಗಾಳಿಯನ್ನು ಆಹಾರವನ್ನಾಗಿ

ವಲ್ಮೀಕೋರ್ಧ್ವಫಣಾಭ್ರಾಜವಕ್ತ್ರಪೂರಿತಮಾರುತಂ ।
ಉತ್ಫುಲ್ಲಹಲ್ಲಕೈಃ ಪದ್ಮೈರುತ್ಪಲೈಃ ಸರಸೀಗಣೈಃ ॥೨೦॥

ಸಂವೃತಂ ಗೈರಿಕಾಕ್ರಾಂತಂ ನಾನಾವರ್ಣಾನ್ವಿತಂ ಗಿರಿಂ ।
ಚಂದ್ರಿಕಾಂ ಶಾರದೀಂ ಪ್ರಾಪ್ಯ ಪುಲಿನೇಷು ಮಹೇಶ್ವರಃ ॥೨೧॥

ಕಾಳಿಂದೀ ಗಿರಿನದ್ಯಾಸ್ತು ತಟೇ ಸಂಶೋಭಿಮಾರುತೇ ।
ಸೇವ್ಯಮಾನೋ ಗಣೈಸ್ತತ್ರ ಕ್ರೀಡತೇ ಗಿರಿಜಾಯುತಃ ॥೨೨॥

ದೇವಮಾನೇನ ತದ್ವರ್ಷಂ ನಿನಾಯ ಪರಮೇಶ್ವರಃ ।
ದೇವಾಸ್ತೇ ತಾರಕಾರಾತಿಸೇನಾಭಿಃ ಪರಿಪೀಡಿತಾಃ ॥೨೩॥

ವಿಷ್ಣುಬ್ರಹ್ಮಾದಿಭಿರ್ದೇವೈಃ ಶಕ್ರೇಣ ಗುರುಣಾ ಯುತಾಃ ।
ಕೇದಾರೇಶಂ ಪೂಜಯಂತಃ ಸಂಸ್ಥಿತಾ ಕಾಲನೀಕ್ಷಕಾಃ ॥೨೪॥

ಮಹೇಶ್ವರಂ ಪ್ರಾರ್ಥಯಂತಿ ಸೇನಾಪತಿಸಮುದ್ಭವೇ ॥೨೫॥

---

ಸೇವಿಸುತ್ತಿದ್ದುವು. ಅರಳಿದ ಕಲ್ಹಾರಪುಷ್ಪಗಳು, ಕಮಲಗಳು, ನೈದಿಲೆಗಳು ಅಲ್ಲಲ್ಲಿ ಕಾಣುತ್ತಾ ನಯನಮನೋಹರವಾಗಿದ್ದುವು. ||೧೯-೨೦||

ಗೈರಿಕಾದಿ ಧಾತುಗಳೆನಿಸಿದ ಬಣ್ಣಬಣ್ಣದ ಕಲ್ಲುಗಳಿಂದ ಆ ಮಂದರಗಿರಿ ಶಿಖರವು ಚಿತ್ರವಿಚಿತ್ರವಾಗಿ ಕಾಣುತ್ತಿದ್ದಿತು. ಶರತ್ಕಾಲದ ಬೆಳದಿಂಗಳಿನಿಂದ ಆ ಗಿರಿಯು ಸುಂದರವಾಗಿ ಕಾಣುತ್ತಿದ್ದಾಗ ಮಹಾದೇವನು ಪಾರ್ವತಿಯೊಡಗೂಡಿ, ಕಾಳಿಂದಿಯೇ ಮೊದಲಾದ ಆ ಗಿರಿನದಿಗಳ ಮರಳಿನಮೇಲೆ ಕುಳಿತು, ಮಂದ ಮಾರುತವನ್ನು ಸೇವಿಸುತ್ತಾ, ಗಣನಾಯಕರಿಂದ ಸೇವೆ ಪಡೆಯುತ್ತಾ ಸಂತೋಷ ದಿಂದಿದ್ದನು. ||೨೧-೨೨||

ಹೀಗೆ ಪರಮೇಶ್ವರನು ದೇವಮಾನದಿಂದ ಒಂದು ವರ್ಷವನ್ನು ಕಳೆದನು. ಅಷ್ಟರಲ್ಲಿ ದೇವತೆಗಳೆಲ್ಲರೂ ತಾರಕಾಸುರನ ಬಾಧೆಯನ್ನು ತಡೆಯಲಾರದೆ ಬಹಳ ವಾಗಿ ಬಳಲಿಹೋಗಿದ್ದರು. ವಿಷ್ಣು, ಬ್ರಹ್ಮ, ಬೃಹಸ್ಪತಿ ಇವರೊಡಗೂಡಿ ಸಕಲ ದೇವತೆಗಳೂ ಕೇದಾರೇಶ್ವರನನ್ನು ಪೂಜಿಸುತ್ತಾ, ನಮ್ಮನ್ನು ಗೆಲ್ಲಿಸುವ ಸೇನಾಪತಿಯು ಯಾವಾಗ ದೊರೆಯುವನೋ ಎಂದು ನಿರೀಕ್ಷಿಸುತ್ತಾ ಸದಾ ಮಹಾದೇವನನ್ನೇ ಈರೀತಿ ಪಾರ್ಥಿಸುತ್ತಿದ್ದರು. ||೨೩-೨೪-೨೫||

॥ ದೇವಾ ಊಚುಃ ॥

ಜಯ ಜಯ ದೇವ ಮಹೇಶ ದಯಾವನಲೋಲ ದೃಶಾ ಪರಿಪಾಹಿ ವಿಭೋ
ತಾರಕಹಾರಕ ಸಂಗಸುತೋದ್ಭವಕಾರಣ ಶಂಕರ ಪಾಹಿ ಸದಾ ।
ಜಯ ಜಯ ಪನ್ನಗಭೂಷಣ ಸನ್ನಗವಾಸ ಸದಾ ಶಿವ ಪಾಹಿ ನಃ
ತಾರಕಜನ್ಮಸುಸಂಭ್ರಮಖೇದಮುಪಾಕುರು ಕುರು ಕರುಣಾಂ ॥೨೬॥

ಜಯ ಜಯ ವಿಭ್ರವಿನೋದಸ ದಕ್ಷಯಮಾಂಧಕಸೂದನ ಪಾಹಿ ವಿಭೋ ।
ತಾರಕಸಂಗರವಾರಕಪಾತಕ ಹರವರ ಸುರತಾಮುದ್ಧರನಃ ॥೨೭॥

ಜಯ ಜಯ ವಿಶ್ವವಿಧಾಯುಕಸಾಯುಕ ಪಾಪನಿವಾರಕ ಪಾಹಿ ಸದಾ ।
ತಾರಕಜನ್ಯವಿಷಾಬ್ಧಿವಿನಾಶಕ ಬಾಡಬನೇತ್ರ ವಿಧಾಯುಕಭೋಃ ॥೨೮॥

ಜಯ ಜಯ ದೇವಮಹೇಶ್ವರ ಶಂಕರ ಕುರು ಕುರು ಕರುಣಾಂ ಶಶಿಮೌಳೇ ।
ತಾರಕಸೈನ್ಯ ವಿದಾರಣಸಾರ ಶರಾಸನಧಾರಕ ಸುಕುಮಾರಂ ॥೨೯॥

---

"ಮಹಾದೇವನೇ, ನಿನ್ನ ಕೃಪಾಕಟಾಕ್ಷದಿಂದ ನಮ್ಮನ್ನುದ್ಧರಿಸು. ತಾರಕಾಸುರನನ್ನು ನಾಶಗೊಳಿಸುವಂತಹ ಸುಪುತ್ರನನ್ನು ಪಡೆಯಲು ನೀನೊಬ್ಬನೇ ಸಮರ್ಥನಲ್ಲವೆ? ನಾಗಾಭರಣನಾಗಿಯೂ, ಗಿರೀಶನಾಗಿಯೂ, ಇರುವ ಸದಾಶಿವನೇ, ನಮಗೆ ತಾರಕನಿಂದ ಒದಗಿರುವ ಸಮಸ್ತ ದುಃಖವನ್ನೂ ನಾಶಗೊಳಿಸು. ನಮ್ಮಲ್ಲಿ ಕರುಣೆಯಿಡು. ಸರ್ವತ್ರ ಜಯಶಾಲಿಯಾಗು. ॥೨೬॥

ಲೀಲಾಮಾತ್ರದಿಂದ ದಕ್ಷಬ್ರಹ್ಮನನ್ನೂ, ಯಮನನ್ನೂ, ಅಂಧಕಾಸುರನನ್ನೂ ನಾಶಗೊಳಿಸಿದ ಮಹಾನುಭಾವನೇ, ತಾರಕಾಸುರನಿಂದ ಪೀಡಿತರಾಗಿ ಯುದ್ಧದಲ್ಲಿ ಪರಾಜಿತರಾಗಿರುವ ದೇವತಾವೃಂದವನ್ನು ಸಂರಕ್ಷಿಸು. ವಿಶ್ವವಿಧಾಯುಕವಾದ ಬಾಣಗಳನ್ನು ಹೊಂದಿರುವ ಮಹೇಶ್ವರನೇ, ತಾರಕಾಸುರರ ಹಿಂಸೆಯೆಂಬ ವಿಷಸಮುದ್ರವನ್ನು ಧ್ವಂಸಮಾಡುವ ಅಗ್ನಿನೇತ್ರನು ನೀನಲ್ಲವೆ? ನಮ್ಮನ್ನು ದಯೆಯಿಂದ ಉದ್ಧರಿಸಿ ಸಂರಕ್ಷಿಸು. ॥೨೭-೨೮॥

ದೇವದೇವನಾದ ಮಹೇಶ್ವರನೇ, ಶಂಕರನೇ, ತಾರಕನ ಸೈನ್ಯವನ್ನು ಸಂಪೂರ್ಣವಾಗಿ ನಾಶಗೊಳಿಸಲು ದಿವ್ಯಧನುರ್ಧಾರಿಯಾಗುವ ಸುಪುತ್ರನೊಬ್ಬನನ್ನು ಪಡೆದು ಅವನನ್ನು ನಮ್ಮ ರಕ್ಷಣೆಗಾಗಿ ಬಿಡು. ಮಹೇಶ್ವರನೇ, ಈಗ ದೇವತೆಗಳಿಗೆ

ಜಯ ಜಯ ಪಾಹಿ ಮುದಾ ಹೃದಯೇನ ಕುಮಾರ ಶರಾವರಸಾರಕ
ಸಂಘಂ ।
ಪಾಪಮುಪಾಕುರು ಕುರು ಕುರು ಕರುಣಾಂ ದೇವಸಮೂಹ ವಿಮೋಹ
ವಿನಾಶಂ ॥೩೦॥

ಇತ್ಥಂ ದೇವಸ್ತುತಿಂ ಶ್ರುತ್ವಾ ಕ್ರೀಡನ್ ದೇವ್ಯಾ ಸ ಶಂಕರಃ ।
ಶತವರ್ಷಂ ಹರಸ್ತತ್ರ ಮಂದರೇ ಚಾರುಕಂದರೇ ॥೩೧॥

ಊರ್ಧ್ವರೇತಾ ವಿರೂಪಾಕ್ಷಸ್ತದಾಗ್ನಿಂ ದ್ವಾರಸಂಸ್ಥಿತಂ ।
ಪ್ರವೇಶ್ಯತಾಮಿತಿ ಪ್ರೋಚುರ್ನಂದಿನಂ ಗಣಸತ್ತಮಂ ॥೩೨॥

ತತಃ ಸ ಪ್ರಾಂಜಲಿರ್ವಹ್ನಿರ್ಬಿಭ್ಯನ್ನಾಗಾನ್ಮಹೇಶ್ವರಂ ।
ವಿನಯಾವನತಸ್ತಸ್ಥೌ ದೇವ್ಯಾ ರೂಕ್ಷೈಕವೀಕ್ಷಣೈಃ ॥೩೩॥
ನಿರ್ದಗ್ಧೋಽಪಿ ಹರಪ್ರೀತ್ಯಾ ತಮುವೋಚನ್ಮಹೇಶ್ವರಃ ॥೩೪॥

---

ಒದಗಿರುವ ವಿಪತ್ಪರಂಪರೆಯನ್ನು ಹೋಗಲಾಡಿಸಿ ದಯಾದೃಷ್ಟಿಯಿಂದ ನಮ್ಮನ್ನು ದ್ಧರಿಸು. ನಮ್ಮ ಅಜ್ಞಾನವನ್ನು ಹೋಗಲಾಡಿಸು. ನಮ್ಮಲ್ಲಿ ಕರುಣೆಯನ್ನಿಡು. ಮಹೇಶ್ವರನೇ, ನೀನು ಸರ್ವೋತ್ಕೃಷ್ಟನೆನಿಸು. ಜಯಶಾಲಿಯಾಗು.'' ॥೨೯-೩೦॥

ಹೀಗೆ ದೇವತೆಗಳು ಸದಾ ಸ್ತುತಿಸುತ್ತಿರುವುದನ್ನು ಗೌರೀದೇವಿಯೊಡನೆ ವಿಹರಿಸುತ್ತಿದ್ದ ಮಹಾದೇವನು ಕೇಳಿ, ಮಂದರಪರ್ವತ ಗುಹೆಗಳಲ್ಲಿ ನೂರು ವರ್ಷ ಗಳು ಕಳೆದಮೇಲೆ, ಒಂದು ಸಾರಿ ತನ್ನ ವಾಸಗೃಹದ ಬಾಗಿಲಿನಲ್ಲಿ ನಿಂತಿದ್ದ ಅಗ್ನಿ ಪುರುಷನನ್ನು ಒಳಗೆ ಕರೆತರುವಂತೆ ಗಣಶ್ರೇಷ್ಠನಾದ ನಂದೀಶನಿಗೆ ಆಪ್ಪಣೆಮಾಡಿ ದನು. ॥೩೧-೩೨॥

ಅಗ್ನಿಪುರುಷನು ಭಯದಿಂದ ನಡುಗುತ್ತಾ ಮಹೇಶ್ವರನ ಮುಂದೆ ವಿನಯ ದಿಂದ ನಿಂತನು. ಆಗ ದೇವಿಯಾದರೋ ಅಗ್ನಿಪುರುಷನು ಹಾಗೆ ತಾವು ಏಕಾಂತ ದಲ್ಲಿದ್ದಾಗ ಬಂದುದಕ್ಕಾಗಿ ಕೋಪಿಸಿಕೊಂಡು ದುರುದುರನೆ ನೋಡಿದಳು. ಆದರೂ ಹರನನ್ನು ತೃಪ್ತಿಪಡಿಸುವುದಕ್ಕಾಗಿ ಅಗ್ನಿಪುರುಷನು ಮಹೇಶ್ವರನನ್ನೇ ನೋಡುತ್ತಾ ನಿಂತಿದ್ದನು. ॥೩೩-೩೪॥

॥ ಶ್ರೀಶಿವ ಉವಾಚ ॥

ದೇವಾನಾಂ ಕಾರ್ಯಸಿದ್ಧ್ಯರ್ಥಂ ಮದ್ರೇತೋರುಕ್ಮಸನ್ನಿಭಂ ।
ವಹ ಪಾತಯ ಗಂಗಾಯಾಂ ವಹ್ನೇ ಮಾ ಭೀತಿಮಾವಹ ॥೩೫॥

ಇತ್ಥಂ ಶಂಭೋರ್ವಚಶ್ರುತ್ವಾ ತದಾಗ್ನಿಃ ಪ್ರಾಂಜಲಿಸ್ಸ್ಥಿತಃ ।
ಅಪಾತಯನ್ಮಹಾದೇವೋ ಹಿರಣ್ಯಾಭಂ ಮಹೇಶ್ವರಃ ॥೩೬॥

ಹಿರಣ್ಯರೇತಾ ಭಗವಾನ್ ದಶವರ್ಷಾಣಿ ತನ್ಮುಖೇ ।
ಅಗ್ನಿರಪ್ಯತಿತಪ್ತೋऽಭೂಚ್ಛ್ರಮೇಣ ಮಹತಾ ಯುತಃ ॥೩೭॥

ಗಂಗಾದ್ವಾರೇ ಶರವಣೇ ತದಪಾತಯದಂಜಸಾ ।
ತದಾ ಗಂಗಾ ಶರವಣಂ ಹೈಮಂ ಕುರ್ವನ್ನವಸ್ಥಿತಂ ॥೩೮॥

ರೇತೋ ಮಹೇಶ್ವರಸ್ಯೇತ್ಥಂ ಪ್ರವಹಂಸ್ತ್ರದಿತಸ್ತತಃ ।
ತತ್ಪ್ರಾಂತಶ್ಶೈಲಾಃ ಸರ್ವೇऽಪಿ ಸಂದೀಪ್ತಾಸ್ತತ್ಪ್ರಭಾವತಃ ॥೩೯॥

---

ಆಗ ಶಂಕರನು ಅಗ್ನಿಪುರುಷನೊಡನೆ ಹೀಗೆಂದನು:—"ಅಯ್ಯಾ ಅಗ್ನಿಯೇ, ದೇವತೆಗಳನ್ನು ಉದ್ಧರಿಸಲೋಸುಗ ಒಬ್ಬ ಕುಮಾರನನ್ನು ಸೃಷ್ಟಿಮಾಡಬೇಕಾಗಿದೆ. ಈಗ ನಾನು ಸುವರ್ಣದಂತಿರುವ ಅಮೂಲ್ಯವಾದ ನನ್ನ ವೀರ್ಯವನ್ನು ನಿನ್ನಲ್ಲಿಡು ವೆನು. ಧೈರ್ಯದಿಂದ ಅದನ್ನು ಹೊತ್ತು ಗಂಗಾನದಿಯಲ್ಲಿ ಹಾಕು. ಹೆದರಬೇಡ" ಹೀಗೆಂದ ಶಿವನ ಮಾತನ್ನು ಅಂಗೀಕರಿಸಿ ಅಗ್ನಿಪುರುಷನು ತಲೆಬಗ್ಗಿಸಿಕೊಂಡು ಅಲ್ಲಿ ನಿಂತಿದ್ದನು. ಆಗ ಮಹೇಶ್ವರನು ಹಿರಣ್ಯಸದೃಶವಾದ ತನ್ನ ವೀರ್ಯವನ್ನು ಅಗ್ನಿ ಯಲ್ಲಿಟ್ಟನು. ॥೩೫-೩೬॥

ಆ ವೀರ್ಯವನ್ನು ಪೂಜ್ಯನಾದ ಅಗ್ನಿಪುರುಷನು ಹತ್ತುವರ್ಷಕಾಲ ಧರಿಸಿದ್ದನು. ಆದರೆ ಶಿವವೀರ್ಯಶಕ್ತಿಯಿಂದ ಅಗ್ನಿಪುರುಷನು ದಗ್ಧನಾಗಿ ಬಳಲಿಹೋದನು. ಕೊನೆಗೆ ಅದನ್ನು ಸಹಿಸಲಾರದೆ ಗಂಗಾಮುಖದಲ್ಲಿದ್ದ ಶರವಣಕ್ಷೇತ್ರದಲ್ಲಿ ಹಾಕಿಬಿಟ್ಟನು. ಅದರ ಫಲವಾಗಿ ಆ ಶರವಣಕ್ಷೇತ್ರವೆಲ್ಲವೂ ಸುವರ್ಣಮಯವಾಯಿತು. ॥೩೭-೩೮॥

ಈರೀತಿ ಮಹೇಶ್ವರನ ವೀರ್ಯವು ಗಂಗಾನದಿಯಲ್ಲಿ ಬೆರೆತು ಆ ಪರ್ವತ ಪ್ರಾಂತದಲ್ಲೆಲ್ಲಾ ವ್ಯಾಪಿಸಿತು. ಅದರ ಮಹಿಮೆಯಿಂದ ಆ ಪರ್ವತಪ್ರಾಂತವೆಲ್ಲಾ ಸುವರ್ಣದಂತೆ ಹೊಳೆಯಲಾರಂಭಿಸಿತು. ಇದನ್ನು ನೋಡಿ ಬ್ರಹ್ಮವಿಷ್ಣ್ವಾದಿ

ಹಿರಣ್ಮಾಕಾರತಾಮಾಪುಸ್ತದಾ ಬ್ರಹ್ಮಾದಯಸ್ಸುರಾಃ ।
ಜಹರ್ಷುರ್ಮುನಿಭಿಸ್ಸಾಕಂ ಯಯುಸ್ತತ್ರೈವ ವಿಷ್ಣುನಾ ॥೪೦॥

ತದೇಕತ್ರ ಕೃತಂ ದೇವೈಃ ರೇತೋ ಮಾಹೇಶ್ವರಂ ತದಾ ।
ಷಡಾಸ್ಯೋ ದ್ವಾದಶಭುಜೋ ದ್ವಿಪಾದ್ದ್ವಾದಶಲೋಚನಃ ॥೪೧॥

ಸಂವೃತ್ತಪೀನಕೌಮಾರವಪುರಾಸೀದ್ಧಿರಣ್ಮಯಃ ।
ಷಟ್ ಕೃತ್ತಿಕಾಃ ಸಮಾಗತ್ಯ ಸ್ವಂ ಸ್ತನ್ಯಂ ಪಾತಯನ್ಮುದಾ ॥೪೨॥

ವವೃಷುಃ ಕುಸುಮಾಸಾರಂ ದೇವಾಸ್ತೂರ್ಯಾಣ್ಯವಾದಯನ್ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋ ಗಣಾಃ ॥೪೩॥

ಜೇಪುರ್ಮಹರ್ಷಯೋ ಮಂತ್ರಾನ್ ರಾಕ್ಷೋಘ್ನಾಂಸ್ತತ್ರ ಸಂಘಶಃ ।
ವಿಶ್ವಕರ್ಮಾ ಸಮಾಗಮ್ಯ ಕುಮಾರೋಜ್ಜ್ವಲಭೂಷಣಂ ॥೪೪॥

---

ಸಕಲ ದೇವತೆಗಳೂ ಮುನಿಗಳೂ ಹರ್ಷಚಿತ್ತರಾಗಿ ಒಂದು ಕಡೆ ಸೇರಿದರು. ॥೩೯-೪೦॥

ಶಿವವೀರ್ಯವೆಲ್ಲಾ ಒಂದು ಕಡೆಗೆ ಬರುವಂತೆ ಏರ್ಪಡಿಸಿದರು. ಹಾಗಾದ ಒಡನೆಯೇ ಆ ವೀರ್ಯವು ಆರುಮುಖಗಳಿಂದಲೂ, ಹನ್ನೆರಡು ಭುಜಗಳಿಂದಲೂ, ಎರಡುಕಾಲುಗಳಿಂದಲೂ, ಹನ್ನೆರಡುಕಣ್ಣುಗಳಿಂದಲೂ, ಕೂಡಿದ ಒಂದು ಬಿಂಬವಾಗಿ ನಿಂತುಬಿಟ್ಟಿತು. ಆ ಆಕಾರವು ಪುಷ್ಟವಾಗಿ ಬೆಳೆದ ಒಬ್ಬ ಹುಡುಗನಂತೆ ಆರಂಭದಲ್ಲಿಯೇ ಕಾಣಲಾರಂಭವಾಯಿತು. ಒಡನೆಯೇ ಆರುಜನ ಕೃತ್ತಿಕಾದೇವಿಯರು ಬಂದು ತಮ್ಮ ಸ್ತನ್ಯವನ್ನು ಆ ಬಿಂಬಕ್ಕೆ ಆರು ಮುಖಗಳಿಂದಲೂ ಪಾನಮಾಡಿಸಿದರು. ॥೪೧-೪೨॥

ಕೂಡಲೇ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿ ದೇವದುಂದುಭಿಯನ್ನು ಮೊಳಗಿಸಿದರು. ಗಂಧರ್ವರು ಗಾನಮಾಡಿದರು. ಅಪ್ಸರಸ್ತ್ರೀಯರು ನರ್ತನಮಾಡಿದರು. ಮಹರ್ಷಿಗಳು ರಾಕ್ಷೋಘ್ನಮಂತ್ರವನ್ನು ಜಪಿಸಿದರು. ಆ ಕಾಲಕ್ಕೆ ಸರಿಯಾಗಿ ವಿಶ್ವಕರ್ಮನು ಅಲ್ಲಿಗೆ ಬಂದು ಕುಮಾರಸ್ವಾಮಿಗೆ ಭೂಷಣಾದಿಗಳನ್ನಿತ್ತು ಅಲಂಕರಿಸಿದನು. ॥೪೩-೪೪॥

ಧನಾಧಿಪತಿದತ್ತೇನ ರತ್ನಜಾಲೇನ ತಂ ತದಾ ।
ಅಭೂಷಯತ್ತದಂಗೇಷು ಮುದಾ ಚಾರುಸುಭಾಸುರಂ ॥೪೫॥

ಷಡ್ವಕ್ತ್ರಮುಕುಟಾನ್ಯೇವ ಕುಂಡಲಾನಿ ತದಾ ಮುದಾ ।
ಕನಕಾಂಗದಕೇಯೂರಗ್ರೈವೇಯಾಣ್ಯಪಿ ತತ್ರ ಹಿ ॥೪೬॥

ಕಾಂಚೀಂ ಸುರತ್ನಖಚಿತಾಂ ಮಣಿಜಾಲಕಿತಾಂತರಾಂ ।
ರಣನ್ಮಂಜೀರಪಾದಾಬ್ಜಂ ಚಕ್ರೇ ತತ್ರ ಸುಭೂಷಣೈಃ ॥೪೭॥

ವಿರಜಾಂಬರಭೂಷಾಂಗಂ ರಕ್ತಗಂಧಾನುಲೇಪಿತಂ ।
ದೇವಪುಷ್ಪೋರುಮಾಲಾಭಿಃ ಪರಿಭೂಷಿತವಿಗ್ರಹಂ ॥೪೮॥

ದದೌ ಪಿತಾಮಹಃ ಶಕ್ತಿಂ ಅಗ್ನಿಶ್ಚಾಪಂ ಶರಾವರಂ ।
ವಿಷ್ಣುಶ್ಚಕ್ರಂ ದೈತ್ಯಹಂತೃ ದದುರ್ದೇವಾ ಮುದಾತದಾ ॥೪೯॥

ಕುಮಾರೋಯಂ ಚ ಸೇನಾನೀರಾಗ್ನೇಯೋ ವರಷಣ್ಮುಖಃ ।
ದದುರ್ದಾನಾನಿ ಭೂರೀಣಿ ಹಿರಣ್ಯಂ ಗೋಧನಾನಿ ಚ ॥೫೦॥

---

ಕುಬೇರನು ರತ್ನಮಯವಾದ ಆಭರಣಗಳನ್ನು ತಂದುಕೊಟ್ಟನು. ಅವೆಲ್ಲವನ್ನೂ ವಿಶ್ವಕರ್ಮನು ಷಣ್ಮುಖನ ಅವಯವಗಳಿಗೆ ಅಳವಡಿಸಿ ಅಲಂಕರಿಸಿದನು. ಆರು ಮುಖಗಳಿಗೆ ಆರು ಕಿರೀಟಗಳೂ ಪ್ರತ್ಯೇಕ ಪ್ರತ್ಯೇಕವಾದ ಕರ್ಣಕುಂಡಲಗಳೂ, ಚಿನ್ನದ ತೋಳುಬಳೆಗಳೂ, ರತ್ನಾಭರಣಗಳೂ, ಕಂಠೀಸರಗಳೂ ಅಲ್ಲಿ ಕುಮಾರಸ್ವಾಮಿಗಾಗಿ ಸಿದ್ಧವಾದುವು. ॥೪೫-೪೬॥

ನವರತ್ನಖಚಿತವಾದ ಒಡ್ಯಾಣವೂ, ಧ್ವನಿಮಾಡುವ ಕಾಲುಪಾಡಗವೂ, ಇನ್ನೂ ನಾನಾವಿಧವಾದ ಆಭರಣಗಳೂ ಕುಮಾರನಿಗಾಗಿ ಸಿದ್ಧವಾದುವು. ಶುದ್ಧವಸ್ತ್ರದಿಂದಲೂ, ಕೆಂಪುಗಂಧದ ಲೇಪನದಿಂದಲೂ, ದೇವಪುಷ್ಪಮಾಲೆಗಳಿಂದಲೂ ಆ ಕುಮಾರನ ದೇಹವು ಅಲಂಕೃತವಾಗಿದ್ದಿತು. ॥೪೭-೪೮॥

ಬ್ರಹ್ಮನು ತನ್ನ ಶಕ್ತ್ಯಾಯುಧವನ್ನೂ, ಅಗ್ನಿಯು ಅಕ್ಷಯಬಾಣಗಳುಳ್ಳ ಬತ್ತಳಿಕೆಯನ್ನೂ, ಬಿಲ್ಲನ್ನೂ, ವಿಷ್ಣುವು ದೈತ್ಯನಾಶಕವಾದ ಚಕ್ರವನ್ನೂ, ಕುಮಾರಸ್ವಾಮಿಗೆ ಅರ್ಪಿಸಿದರು. ಸಕಲ ದೇವತೆಗಳೂ ತಮ್ಮ ತಮ್ಮ ಶಕ್ತಿಸಾಮರ್ಥ್ಯ

ಧನಂ ಧಾನ್ಯಂ ಚ ವಿಪ್ರೇಭ್ಯೋ ಜಾತಹರ್ಷಾಸ್ತದಾ ಸುರಾಃ ।
ತಾರಕಸ್ಯಾಪಶಕುನಾನ್ಯಾಸಂಸ್ತತ್ರ ಸಹಸ್ರಶಃ ॥೫೧॥

ಖಾತ್ಕಬಂಧಂ ಪಪಾತೋರ್ವ್ಯಾಂ ವಿದ್ಯುತ್ತಸ್ಯಾಪತದ್ಗೃಹೇ ।
ಸ ಶರ್ಕರೋ ವವೌ ವಾಯುಃ ಕರ್ಕಶೋಂಗಾರದಾರುಣಃ ॥೫೨॥

ಶಾಮ್ಯಂತಿ ಚಾಗ್ನಯ ಸ್ತತ್ರ ಗೃಹಾ ವಕ್ರಾಶ್ಚ ತೇ ಭವನ್ ।
ತದಾ ಸ ಕಾವ್ಯಸ್ಯ ಗಿರಾ ಶಾಂತಿಂ ಚಕ್ರೇಥ ತಾರಕಃ ॥೫೩॥

ಶ್ರುತ್ವಾ ಕುಮಾರಜನ್ಮೈತದ್ಧೃದಯೇನ ವಿದೂಯತಾ ।
ಸುಸಂಸಹ್ಯ ತದಾ ಸೇನಾಃ ಪ್ರಶಶಾಸತ್ರಿವಿಷ್ಟಪಂ ॥೫೪॥

---

ಗಳನ್ನು ಆವನಿಗೆ ಕೊಟ್ಟರು. ಈ ಶಿವಕುಮಾರನು ಅಗ್ನಿಯಿಂದ ಆವಿರ್ಭವಿಸಿ ಷಣ್ಮುಖನಾಗಿ, ನಮ್ಮೆಲ್ಲರಿಗೂ ಸೇನಾಪತಿಯಾಗುವನೆಂಬ ಹರ್ಷದಿಂದ ಸಮಸ್ತ ದೇವತೆಗಳೂ ನಾನಾವಿಧವಾದ ಹಿರಣ್ಯದಾನ, ಗೋದಾನ ಇವೇ ಮೊದಲಾದುವು ಗಳನ್ನು ದಾನಮಾಡದರು. ॥೪೯-೫೦॥

ಧನ, ಧಾನ್ಯ ಮುಂತಾದುವುಗಳನ್ನು ಸಂತೋಷದಿಂದ ದಾನಮಾಡಿದರು. ಅತ್ತ ತಾರಕಾಸುರನಿಗೆ ಅಪಶಕುನಗಳು ಪರಂಪರೆಯಾಗಿ ಆಗತೊಡಗಿದುವು. ಅಂತ ರಿಕ್ಷದಿಂದ ಮುಂಡಗಳೂ, ಬರಸಿಡಿಲೂ ಬೀಳಲಾರಂಭಿಸಿದುವು. ವಾಯುವು ಕಲ್ಲು ಮಣ್ಣುಗಳಿಂವ ಕೂಡಿ ಬೀಸತೊಡಗಿತು. ಕಾದ ಕೆಂಡವು ಮಳೆಯಾಗಿ ಬೀಳು ತ್ತಿದ್ದಿತು. ॥೫೧-೫೨॥

ಹೋಮಾದಿಕಾಲಗಳಲ್ಲಿ ಅಗ್ನಿಯು ತಾನಾಗಿಯೇ ಆರಿಹೋಗುತ್ತಿದ್ದಿತು. ಮನೆಮಠಗಳೆಲ್ಲಾ ಬಿರಿದು ಹೋಗುತ್ತಿದ್ದುವು. ಇಂತಹ ಅಪಶಕುನವನ್ನು ಕಂಡು ತಾರಕಾಸುರನು ಗುರುವಾದ ಶುಕ್ರಾಚಾರ್ಯರ ಅನುಮತಿಯನ್ನು ಪಡೆದು ಅನೇಕ ಶಾಂತಿಗಳನ್ನು ನಡೆಸಿದನು. ಅಷ್ಟರಲ್ಲಿ ಕುಮಾರಸ್ವಾಮಿಯು ಈಶ್ವರನಿಂದ ಸೃಷ್ಟ ನಾದುದನ್ನು ಕೇಳಿ ತಾರಕಾಸುರನು ಮನಸ್ಸಿನಲ್ಲಿ ವ್ಯಥೆಪಟ್ಟು, ಕೋಪಾವೇಶದಿಂದ ದೊಡ್ಡ ಸೈನ್ಯವನ್ನೇ ಕಟ್ಟಿ ಯುದ್ಧಸಿದ್ಧನಾಗಿ ಸ್ವರ್ಗಾದಿಗಳನ್ನು ಆಳುತ್ತಿದ್ದನು. ॥೫೩-೫೪॥

ವಿಷ್ಣುಬ್ರಹ್ಮಾದಯೋ ದೇವಾಸ್ತುಷ್ಟುವುಸ್ತಂ ಪ್ರಣಮ್ಯ ಚ ।
ಶತಾಷ್ಟನಾಮಭಿಸ್ತತ್ರ ತ್ರಿಪುರಾರಿತನೂಭವಂ ॥೫೫॥

ಓಂ ॥ ಷಣ್ಮುಖಃ ಸುಮುಖಸ್ತ್ರಾತಾ ಲೇಖಸೇನಾಪತಿಃ ಪ್ರಭುಃ ।
ಶಕ್ತಿಹಸ್ತೋ ದುರಾಧರ್ಷೋ ವೀತಿಹೋತ್ರಾಂಗಜಃ ಶಿಖೀ ॥೫೬॥

ಶಿಖಿವಾಹೋ ದ್ವಾದಶಾಕ್ಷೋ ಗೌರೀಪ್ರಿಯತನೂಭವಃ ।
ಸೇನಾಪತಿರ್ವೀತಶೋಕೋ ಮಹಾಬಲಪರಾಕ್ರಮಃ ॥೫೭॥

ಸ್ಕಂದೋ ನಂದಿತವೃಂದಾರೋ ಮಾರಮಾರಾತ್ಮಜೋ ಬಲೀ ।
ಕ್ರೌಂಚಾದ್ರಿಮಥನೋ ಯೋಗೀ ಸುಬ್ರಹ್ಮಣ್ಯೋ ಮಖೇಡಿತಃ ॥೫೮॥

ಗಾಂಗೇಯೋ ವೈದ್ಯುತೋ ಮೇಘೋ ತಾರಕಾಂತಕರೋರವಿಃ ।
ಮಹಾಸೇನೋ ವೇದವೇದ್ಯೋ ಪ್ರಣವಾರ್ಥಪ್ರಕಾಶಕಃ ॥೫೯॥

---

ಇತ್ತ ವಿಷ್ಣುಬ್ರಹ್ಮಾದಿದೇವತೆಗಳು ಆ ಶಕ್ತಿಧರನಾದ ಷಣ್ಮುಖನಿಗೆ ವಂದಿಸಿ, ನೂರೆಂಟು ಹೆಸರುಗಳಿಂದ ಪರಶಿವಪುತ್ರನನ್ನು ಈರೀತಿ ಸ್ತುತಿಸಿದರು. "ಷಣ್ಮುಖ ಸ್ವಾಮಿಯೇ, ನೀನು ಪ್ರಸನ್ನಮುಖನು. ಭಕ್ತರನ್ನು ರಕ್ಷಿಸುವವನು. ದೇವಸೇನಾಪತಿಯು. ಜಗತ್ಪತಿಯು. ಶಕ್ತ್ಯಾಯುಧವನ್ನು ಕೈಯ್ಯಲ್ಲಿ ಧರಿಸಿರುವವನು. ಯಾರಿಗೂ ಅಧೀನನಾಗದವನು. ಅಗ್ನಿದೇಹದಿಂದ ಜನಿಸಿದವನು. ಶಿಖಾವಂತನು. ॥೫೫-೫೬॥

ನವಿಲಿನ ಮೇಲೆ ಪ್ರಯಾಣಮಾಡುವವನು, ಹನ್ನೆರಡು ಕಣ್ಣುಗಳುಳ್ಳವನು, ಗೌರೀದೇವಿಯ ಪ್ರಿಯಪುತ್ರನು, ದೇವಸೇನಾಪತಿಯು, ಶೋಕರಹಿತನು, ಹೆಚ್ಚು ಬಲದಿಂದಲೂ, ಸಾಮರ್ಥ್ಯದಿಂದಲೂ ಪ್ರಕಾಶಿಸುವವನು, ಶತ್ರುಸೈನ್ಯವನ್ನು ಚದುರಿಸುವವನು, ದೇವತೆಗಳನ್ನು ಸಂತೋಷಪಡಿಸುವವನು, ಮನ್ಮಥನಾಶಕನಾದ ಶಂಕರನಿಗೆ ಪ್ರಿಯಪುತ್ರನು, ಬಲಿಷ್ಠನು, ಕ್ರೌಂಚಾಚಲವನ್ನು ಭೇದಿಸಿದವನು, ಯೋಗಜ್ಞನು, ಸುಬ್ರಹ್ಮಣ್ಯನು, ಯಾಗದಿಂದ ಪೂಜಿತನಾದವನು. ॥೫೭-೫೮॥

ಗಂಗಾಪುತ್ರನು, ವಿದ್ಯುದ್ರೂಪನು, ಮೇಘರೂಪಿಯು, ತಾರಕಾಸುರನನ್ನು ಧ್ವಂಸಮಾಡುವವನು, ಸೂರ್ಯರೂಪಿಯು, ದೊಡ್ಡ ಸೈನ್ಯವುಳ್ಳವನು, ವೇದದಿಂದ ವೇದ್ಯನಾದವನು, ಪ್ರಣವಾರ್ಥವನ್ನು ಪ್ರಕಾಶಪಡಿಸುವವನು, ದೊಡ್ಡ ಸೈನ್ಯವುಳ್ಳ

ಮಹಾಸೇನಶ್ಶರವಣೋ ಭವೋದ್ಭವಸುತೋದ್ಯಮಃ ।
ವಿನಾಯಕಾನುಜಃ ಶ್ರೀಮಾನ್ ಶೂರಸಂಹಾರಕಾರಕಃ ॥೬೦॥

ಸೇನಾನೀರ್ದುರ್ಧರೋ ವೀರೋ ಗರ್ಭೋ ವಿಶ್ವಪತಿಃ ಕವಿಃ ।
ಗುಹೋ ಹರಿಹಯಃ ಶಾಸ್ತಾ ಶರಾಸನಕರಃ ಶರೀ ॥೬೧॥

ವ್ಯಾಪಕೋಽನಂತಶಕ್ತಿಶ್ಚ ಕುಮಾರೋ ಉಜ್ವಲಾಂಗಕಃ ।
ವೀರಬಾಹುರ್ಗಣಾಧ್ಯಕ್ಷಸ್ತ್ರ್ಯಕ್ಷಪ್ರೀತೋ ವಿಶಾರದಃ ॥೬೨॥

ಕಾಂತಶ್ಶಾಂತೋ ಜಿತಾರಾತಿರುಮಾಕಾಂತಾತ್ಮಜಃ ಪರಃ ।
ವಲ್ಲೀಪತಿರ್ಜಿತಾರಾತಿಃ ಕುಕ್ಕುಟೋತ್ತಮಕೇತನಃ ॥೬೩॥

ಶಿವಲಿಂಗಾರ್ಚನಪ್ರೀತೋ ಗಂಧಪುಷ್ಪಾದ್ಯಲಂಕೃತಃ ।
ಮಕುಟೀ ಚಾಂಗದೀ ಚಕ್ರೀ ಗದೀ ಶಂಖೀ ಶಿಖೀ ಜಟೀ ॥೬೪॥

---

ವನು, ಶರವಣಭವನು, ಈಶ್ವರಪುತ್ರನು, ಪ್ರಯತ್ನರೂಪನು, ವಿನಾಯಕನ ತಮ್ಮನು. ಸಂಪದ್ಯುಕ್ತನು. ಶೂರಸಂಹಾರಕಾರಕನು. ॥೫೯-೬೦॥

ಸೇನಾನಾಯಕನು. ಯಾರಿಗೂ ಬಗ್ಗದವನು, ಶೂರನು, ಗರ್ಭರೂಪಿಯು, ವಿಶ್ವೇಶ್ವರನು, ಕವಿಯೆನಿಸಿದವನು, ಗುಹಜನ್ಯನು, ಸಿಂಹ ಮತ್ತು ಕುದುರೆ ಇವುಗಳನ್ನೇ ವಾಹನಗಳನ್ನಾಗಿ ಉಳ್ಳವನು, ಶಿಕ್ಷಕನು, ಧನುರ್ಧಾರಿಯು, ಬಾಣಹಸ್ತನು, ವ್ಯಾಪಕನು, ಅನಂತಶಕ್ತಿಯುಳ್ಳವನು, ಕುಮಾರನು, ಪ್ರಜ್ವಲಿಸುವ ದೇಹವುಳ್ಳವನು, ವೀರಬಾಹುಗಳುಳ್ಳವನು, ಗಣಗಳಿಗೆ ಒಡೆಯನು, ಶಿವನಿಗೆ ಬೇಕಾದವನು, ನಿಪುಣನು. ॥೬೧-೬೨॥

ಕಾಂತನು, ಶಾಂತನು, ಶತ್ರುಗಳನ್ನು ಜಯಿಸಿದವನು, ಶಿವನ ಪ್ರಿಯಪುತ್ರನು, ವಲ್ಲೀದೇವಿಯ ಪತಿಯು, ಶತ್ರುಜಯವನ್ನು ಪಡೆದವನು, ಕುಕ್ಕುಟಾಕಾರದ ಧ್ವಜವುಳ್ಳವನು, ಶಿವಲಿಂಗಾರ್ಚನೆಯಿಂದ ತೃಪ್ತನಾಗುವವನು, ಗಂಧಪುಷ್ಪಾದಿಗಳಿಂದ ಅಲಂಕೃತನಾದವನು, ಕಿರೀಟಧಾರಿಯು, ತೋಳುಬಳೆಯುಳ್ಳವನು, ಚಕ್ರಧಾರಿಯು, ಗದೆ, ಶಂಖ, ಶಿಖಾ, ಜಟೆ ಇವುಗಳುಳ್ಳವನು. ॥೬೩-೬೪॥

ಸನಾತನಃ ಪರಸ್ತಾಪಸ್ತ್ತಾರಕಸ್ತಾರಕಾಂತಕೃತ್ ।
ಸಂವರ್ತೋ ಯೌವನೋ ಘೋರೋ ಬಾಲೋ ಲೀಲಾವಿನೋದಕೃತ್ ॥೬೫॥

ಪ್ರಸನ್ನಾಕ್ಷಃ ಪಂಕಜಾಕ್ಷಃ ಶಂಬರಃ ಶಂಬರಪ್ರಿಯಃ ।
ಸುಪಲ್ಲವಶಿಖೀಧನ್ವೀ ಖಡ್ಗಖೇಟಿಧರಃ ಸುತಃ ॥೬೬॥

ವಿಶ್ವಪ್ರಿಯೋನಂತಶಕ್ತಿಃ ಸುರಾಧ್ಯಕ್ಷೋ ದುರಾಸದಃ ।
ಪ್ರಮೋದೋ ಮೇಘದಮನಃ ಶಕ್ರಪೂಜ್ಯಃ ಶತಕ್ರತುಃ ॥೬೭॥

ಕೃತ್ತಿಕಾಸೂನುರಮಲಃ ಕೃತ್ತಿವಾಸಪ್ರಿಯೋ ವಿರಾಟ್ ।
ಸ್ವಾಹಾಪ್ರಿಯಃ ಕಾರ್ತಿಕೇಯೋ ಹರಿಣೋ ವೇದವತ್ಸರಃ ॥೬೮॥

ಸ್ವರ್ಣವರ್ಣಃ ಪಾರಿಭದ್ರಸ್ತಾಂವ್ರಸ್ತಾರಣತಾರಕಃ ।
ಸುಪುಷ್ಕರಮಹಾಮಾಲೋ ಲಲಿತಾಂಗಃ ಸುಭಾವನಃ ॥೬೯॥

---

ಅನಾದಿಪುರುಷನು, ಶತ್ರುಗಳನ್ನು ಸಂತಾಪಗೊಳಿಸುವವನು, ಸಂಸಾರದಿಂದ ಉದ್ಧರಿಸುವವನು; ತಾರಕಾಸುರನನ್ನು ನಾಶಗೊಳಿಸಿದವನು, ಪ್ರಲಯಕಾರಕನು, ಯುವಕನು, ಘೋರರೂಪಿಯು, ಬಾಲಕನು, ಲೀಲಾರ್ಥವಾಗಿ ವಿನೋದವನ್ನುಂಟು ಮಾಡುವವನು, ಪ್ರಸನ್ನವಾದ ಕಣ್ಣುಗಳುಳ್ಳವನು, ಕಮಲಾಕ್ಷನು, ಜಿಂಕೆಯರೂಪ ದಿಂದಿರುವವನು, ಶಂಬರಾಸುರನಿಗೆ ಪ್ರಿಯನಾದವನು, ಚಿಗುರಿನಂತಿರುವ ಶಿಖೆ ಯುಳ್ಳವನು, ಧನುರ್ಧಾರಿಯು, ಖಡ್ಗ, ಖೇಟ ಇವುಗಳನ್ನು ಧರಿಸಿದವನು, ಈಶ್ವರ ಪ್ರಿಯಪುತ್ರನು. ॥೬೫-೬೬॥

ವಿಶ್ವಪ್ರಿಯನು, ಅನಂತ ಶಕ್ತಿಯುತನು, ಸುರರಿಗೆ ಒಡೆಯನಾದವನು, ಯಾರಿಗೂ ಸೋಲದವನು, ವಿಶೇಷವಾದ ಆನಂದವುಳ್ಳವನು, ಮೇಘವನ್ನು ದಮನ ಮಾಡುವವನು, ಇಂದ್ರನಿಗೆ ಪೂಜ್ಯನೆನಿಸಿದವನು, ನೂರು ಯಾಗಗಳನ್ನು ಮಾಡಿ ದವನು, ಕೃತ್ತಿಕಾದೇವಿಯರ ಪ್ರಿಯಪುತ್ರನು, ಮಲರಹಿತನು, ಈಶ್ವರಪ್ರಿಯಪುತ್ರನು, ವಿರಾಟ್ಪುರುಷನು, ಸ್ವಾಹಾದೇವಿಗೆ ಪ್ರಿಯನೆನಿಸಿದವನು. ಕೃತ್ತಿಕಾಪ್ರಿಯಪುತ್ರನು. ಜಿಂಕೆಯಂತೆ ಇರುವವನು, ವೇಗಶಾಲಿಯು. ॥೬೭-೬೮॥

ಸ್ವರ್ಣದಂತೆ ಪ್ರಕಾಶಿಸುವವನು. ಪಾರಿಭದ್ರಗಿರಿಯಂತಿರುವವನು. ತಾಮ್ರ ವರ್ಣದವನು. ಉದ್ಧಾರವಾಗಬೇಕೆಂದು ಪೂಜಿಸುವವರನ್ನು ಉದ್ಧರಿಸುವವನು.

ಯಶಸ್ಕರೋ ಮರಪತಿಃ ಗೀತನೃತ್ತಪ್ರಿಯೋರ್ತಿಹಾ ।
ವೀರಭದ್ರೋ ಮಹಾಶಾಸ್ತಾ ನಂದೀ ಸಖ್ಯೈಕ ತತ್ಪರಃ ॥೨೦॥

ನಿರಂಜನೋ ನಿರಾಧಾರಃ ಶಕ್ರರೋಮಾಪತಿರ್ವಟುಃ ।
ಬ್ರಹ್ಮಚಾರೀ ಗಿರಿಚರಃ ಸರ್ಪರೂಪೋ ದುರಾಸದಃ ॥೨೧॥

ಷಷ್ಠೀಪ್ರೀತಃ ಸತ್ಕುಮಾರಃ ಸ್ಮರಸ್ಮೇರಾಸ್ಯಸುಂದರಃ ।
ವಿಜ್ಞಾನದಃ ಶಿವಜ್ಞಾನೀ ಶಿವಭಕ್ತಶಿರೋಮಣಿಃ ॥೨೨॥

ಇತ್ಯೇತೈರ್ನಾಮಭಿಃ ಸ್ತುತ್ವಾ ನತ್ವಾ ದೇವಾಃ ಸವಾಸವಾಃ ।
ಜಹೃಷುಸ್ತಂ ಕುಮಾರಂ ಚ ಶತಪುಷ್ಪಸುಮಾಲಿಕಂ ॥೨೩॥

ವಿಮಾನೇನಾರ್ಕವರ್ಣೇನ ನಿನ್ಯುರ್ದೇವಾ ಮಹೇಶ್ವರಂ ।
ನದತ್ಸು ದೇವತೂರ್ಯೇಷು ನೃತ್ಯತ್ಸ್ವಪ್ಸರಸ್ಸು ಚ ॥೨೪॥

---

ಕಮಲಪುಷ್ಪಗಳ ಮಾಲೆಯುಳ್ಳವನು. ಲಲಿತವಾದ ಅಂಗವುಳ್ಳವನು. ದೇವರಕ್ಷಕನು. ಯಶಸ್ಸನ್ನುಂಟುಮಾಡುವವನು. ದೇವತೆಗಳ ಪತಿಯು. ಗೀತವಾದ್ಯಗಳಲ್ಲಿ ಪ್ರಿಯ ನೆನಿಸಿದವನು. ಪೀಡಾಪರಿಹಾರಕನು. ವೀರಭದ್ರನೆನಿಸಿದವನು. ಶತ್ರುಗಳನ್ನು ಬಹಳ ವಾಗಿ ಶಿಕ್ಷಿಸಿದವನು. ನಂದೀಶ್ವರನ ಸ್ನೇಹದಲ್ಲಿ ಆಸಕ್ತನಾದವನು. ॥೧೯-೨೦॥

ಪಾಪರಹಿತನು. ಆಧಾರವಿಲ್ಲದವನು. ದೇವೇಂದ್ರನಿಗೂ ಒಡೆಯನೆನಿಸಿದ ವನು. ಸದಾ ಬ್ರಹ್ಮಚಾರಿಯು. ಗಿರಿಯಲ್ಲಿ ಸಂಚರಿಸುವವನು. ಸರ್ಪದ ಆಕಾರ ವನ್ನು ಪಡೆಯುವವನು. ಯಾರಿಗೂ ಅಧೀನನಾಗದವನು. ಷಷ್ಠೀತಿಥಿಯ ಅಭಿ ಮಾನಿದೇವತೆಯು. ಸತ್ಪುತ್ರನೆನಿಸಿದವನು. ಮನ್ಮಥನಂತೆ ಸುಂದರವಾದ ದೇಹ ವುಳ್ಳವನು. ವಿಜ್ಞಾನವನ್ನು ದಯಪಾಲಿಸುವವನು. ಶಿವಜ್ಞಾನವನ್ನರಿತವನು. ಈಶ್ವರಭಕ್ತಾಗ್ರೇಸರನು. ॥೨೧-೨೨॥

ಹೀಗೆ ಅಷ್ಟೋತ್ತರ ಶತನಾಮಗಳಿಂದ ಷಣ್ಮುಖನನ್ನು ಸ್ತುತಿಸಿ ಇಂದ್ರಾದಿ ಸಮಸ್ತ ದೇವತೆಗಳೂ ಕುಮಾರಸ್ವಾಮಿಗೆ ಕಮಲಮಾಲಿಕೆಯನ್ನು ಅರ್ಪಿಸಿದರು. ಅನಂತರ ಕುಮಾರಸ್ವಾಮಿಯನ್ನು ಸೂರ್ಯನಂತೆ ಪ್ರಕಾಶಿಸುವ ದಿವ್ಯವಿಮಾನದಲ್ಲಿ ಕೂರಿಸಿಕೊಂಡು ಮಹೇಶ್ವರನ ಸಮೀಪಕ್ಕೆ ಕರೆತಂದರು. ಆಗ ದೇವಧ್ವನಿ ಭೋರ್ಗರೆಯಿತು. ಅಪ್ಸರಸ್ತ್ರೀಯರು ನರ್ತನಮಾಡಿದರು. ॥೨೩-೨೪॥

ವರ್ಷತ್ಸು ಕುಸುಮಾಸಾರಂ ಗಂಧರ್ವೈಃ ಕೃತಗಾಯನೈಃ ।
ತೇ ತದಾ ಮಂದರಗಿರಿಂ ಸಂಪ್ರಾಪ್ಯ ಪ್ರಮಥಾಧಿಪಂ ॥೨೫॥

ಪ್ರಣಮ್ಯ ದಿತಿಜಾಸ್ತತ್ರ ಮುದಮಾಪುರ್ಮಹೇಶ್ವರಂ ।
ದೃಷ್ಟ್ವಾ ಕುಮಾರಂ ಮಾರಾಭಂ ಗೌರ್ಯಾವೀಕ್ಷ್ಯಾನನಂ ಹರಃ ॥೨೬॥

ಪ್ರಮುಮೋದ ಮಹಾದೇವಃ ಉತ್ಥಾಪ್ಯಾಲಿಂಗ್ಯ ಶಂಕರಃ ।
ಸ್ವಾಂಕಪರ್ಯಂಕಸಂಸ್ಥಂ ಚ ತಂ ಚಕಾರ ಮಹೇಶ್ವರಃ ॥೨೭॥

ತದಾ ಪಂಚಮುಖಸ್ತತ್ರ ಜಿಘ್ರೇ ಗೌರ್ಯಾ ಷಡಾನನಂ ।
ಗೌರ್ಯಾ ಸಹ ಮಹೇಶೋಪಿ ತದಾ ಪಂಚದಶಾಕ್ಷಿಭಿಃ ॥೨೮॥

ಪಶ್ಯನ್ನನಿಮಿಷೈರ್ನೇತ್ರೈಃ ಸೂರ್ಯೇಂದ್ವನಲಶೋಭಿತೈಃ ।
ನ ತೃಪ್ತಿಮಧ್ಯಗೀಷ್ಟೇ ಸಶಿಪಿಶಿಷ್ಟಸ್ತನೂಭವಂ ॥೨೯॥

ಗೌರೀಸ್ನುತಕುಚಾಸ್ಕಂದಂ ಪಾಯಯತ್ತಂ ಸ್ವಕಂ ಸ್ತನಂ ।
ಗೌರೀಕುಚಪಯಃಪೂರಮಪಿಬತ್ಸ ಷಡಾನನೈಃ ॥೩೦॥

---

ಪುಷ್ಪವೃಷ್ಟಿಯಾಯಿತು. ಗಂಧರ್ವರು ಗಾನಮಾಡಿದರು. ಈ ವೈಭವದಿಂದ ಕುಮಾರಸ್ವಾಮಿಯು ಪರಶಿವನ ಸಮೀಪಕ್ಕೆ ಬರುವುದನ್ನು ನೋಡಿ ದೈತ್ಯರೂ ಸಹ ಪರಶಿವನಿಗೆರಗುತ್ತಿದ್ದರು. ಪರಶಿವನಾದರೋ ಮನ್ಮಥನಂತೆ ಸುಂದರನಾದ ಕುಮಾರ ಸ್ವಾಮಿಯನ್ನು ನೋಡಿ ಒಡನೆಯೇ ಪಾರ್ವತಿಯ ಮುಖವನ್ನೂ ದೃಷ್ಟಿಸಿ ನೋಡಿದನು. ॥೨೫-೨೬॥

ಒಡನೆಯೇ ಮಹಾದೇವನು ಎದ್ದು ಕುಮಾರನನ್ನು ಆಲಿಂಗಿಸಿಕೊಂಡು, ತನ್ನ ತೊಡೆಯ ಮೇಲೆ ಕೂರಿಸಿಕೊಂಡನು. ಗೌರಿಯೂ ಸಹ ಪರಶಿವನೊಡನೆ ಕುಮಾರಸ್ವಾಮಿಯ ಶಿರಸ್ಸನ್ನು ಆಘ್ರಾಣಿಸಿದಳು. ಮಹೇಶ್ವರನು ತನ್ನ ಪಂಚ ಮುಖಗಳಲ್ಲಿಯೂ ಸೂರ್ಯ ಚಂದ್ರ ಅಗ್ನಿರೂಪದಿಂದಿರುವ ಹದಿನೈದು ರೆಪ್ಪೆಮುಚ್ಚದ ಕಣ್ಣುಗಳಿಂದ ಅವಿಚ್ಛಿನ್ನವಾಗಿ ಷಣ್ಮುಖನನ್ನು ನೋಡುತ್ತಿದ್ದರೂ ತೃಪ್ತಿಯಾಗಲಿಲ್ಲ. ॥೨೭-೨೮-೨೯॥

ಪುತ್ರವಾತ್ಸಲ್ಯದಿಂದ ಹಾಲು ಸುರಿಯುವ ತನ್ನ ಸ್ತನದಿಂದ ಪಾರ್ವತಿಯು ಷಣ್ಮುಖನಿಗೆ ಹಾಲು ಕುಡಿಸಿದಳು. ಕುಮಾರನಾದರೋ ಬಹು ಪ್ರೀತಿಯಿಂದ

ತದಾ ವಿವೃದ್ಧಿಮಾಪೇದೇ ಚಂದ್ರೋದಯ ಇವಾಂಬುಧಿಃ ।
ಸ ಷೋಡಶೋನವರ್ಷೋ ಭೂದ್ಯಾವನೋಚ್ಛ್ವಸಿತಾಂಗತಃ ॥೮೧॥

ವಕ್ತ್ರೈರ್ಯಸ್ಯ ಮುಖಾನಿ ಪಂಚಭಿರಹೋ ಸಂಲಾಲಯತ್ಯಾದರಾತ್
ಶಂಭಾವೇಕಮುಪಾತ್ತ ಶೋಕಮಗಜಾಸಂಪರ್ಕಜಿಘ್ರದ್ವ್ರತಂ ।
ಸಂಭ್ರಾಂತಾಧಿಕಮೇಧಮಾನವಿಲಸದ್ವಷ್ಮ್ರ್ಶ್ರಿಯಾ ತುಲ್ಯಯಾ
ಪಿತ್ರೋರ್ನಿಸ್ತುಲಮಾವಹಂತ್ಸಪರಮಾನಂದಂ ಮುದೇ ಸ್ಯಾದ್ಗುಹಃ ॥೮೨॥

ವತ್ಸ ತ್ವಂ ಫಲಮಾಹರೇತಿ ಗದಿತೋ ಮಾತ್ರಾಗ್ರಪೂಜ್ಯೋಗ್ರಜಃ
ಪುತ್ರಸ್ತೇಂಬ ಹರಿಷ್ಯತಿ ತ್ವಮಧುನಾ ಕಿಂ ಕುಪ್ಯಸೇನೇನ ಮೇ ।
ಮಾಗಾಃ ಕೋಪವಶಂ ಪಿತುರ್ಮಮ ಸದಾಭ್ಯಂತಸ್ಸ್ಥಿತಂ ತ್ವಾಂ ಗತೌ
ಸೋಮಾಸ್ಕಂದ ಇತೀ ಹ ನೌ ತ್ರಿಭುವನೇ ಸರ್ವೋ ಜನಃ ಪೂಜಯೇತ್
॥೮೩॥

---

ಗೌರೀದೇವಿಯ ಸ್ತನ್ಯವನ್ನು ಕುಡಿದ ಮರುಕ್ಷಣದಲ್ಲಿಯೇ ಹದಿನಾರು ವರ್ಷ ಪ್ರಾಯದ ಹುಡುಗನಂತೆ ನೋಡುವವರಿಗೆ ಕಾಣುತ್ತಿದ್ದನು. ಚಂದ್ರೋದಯದಿಂದ ಸಮುದ್ರವು ವೃದ್ಧಿಹೊಂದುವಂತೆ ಷಣ್ಮುಖಸ್ವಾಮಿಯು ಪಾರ್ವತೀ ಸ್ತನ್ಯಪಾನದಿಂದ ಅತಿಯಾದ ಬೆಳೆವಣಿಗೆಯನ್ನು ಪಡೆದನು. ॥೮೦-೮೧॥

ಪರಶಿವನ ಐದು ಮುಖಗಳಿಂದಲೂ ಲಾಲನೆಯನ್ನು ಪಡೆದು, ಗೌರೀದೇವಿಯು ಪ್ರೇಮಧಾರಾಪೂರ್ವಕವಾದ ಸ್ತನ್ಯಪಾನಾದಿಗಳನ್ನು ನೆರವೇರಿಸಿ, ತಾಯಿಯು ಮಗನ ಶಿರಸ್ಸನ್ನು ಆಘ್ರಾಣಿಸುತ್ತಿರುವಾಗ ಮೇಲ್ಮೇಲೆ ಶರೀರಸೌಂದರ್ಯವನ್ನು ಪಡೆಯುತ್ತಿರುವ ಕುಮಾರಸ್ವಾಮಿಯು ತನ್ನ ಮಾತಾಪಿತೃಗಳಿಗೆ ಅತಿಶಯವಾದ ಆನಂದವನ್ನುಂಟುಮಾಡುತ್ತಾ ಭಕ್ತಪೋಷಕನಾಗಿದ್ದನು.॥೮೨॥

ಎಲೈ ಕುಮಾರಸ್ವಾಮಿಯೇ, ಹಣ್ಣನ್ನು ತೆಗೆದುಕೊಂಡು ಬಾ ಎಂದು ಗೌರಿಯು ಹೇಳಿದೊಡನೆಯೇ, ಕುಮಾರಸ್ವಾಮಿಯು, ಅಮ್ಮ, ಅಗ್ರಪೂಜ್ಯನೂ ಅಗ್ರಜನೂ ಆದ ಗಜಮುಖನು ತಾನು ತಂದ ಹಣ್ಣನ್ನು ಭಕ್ಷಿಸಿದನು. ಇದರಿಂದ ನೀನು ಕೋಪಿಸಿಕೊಳ್ಳಬೇಡ. ನಾವಿಬ್ಬರೂ ಪರಶಿವನ ಮತ್ತು ನಿನ್ನ ಹೃದಯಾಂತರಾಳದಲ್ಲಿ ಸ್ಥಾನವನ್ನು ಗಳಿಸಿರುವೆವು. ಇಂತಹ ನಮ್ಮನ್ನು ಸರ್ವಲೋಕವೂ ಸದಾ ಪೂಜಿಸುವುದು. ॥೮೩॥

ಗೌರ್ಯಾಸ್ಕಂದೇನ ಸಂಯುಕ್ತಂ ಗಜಾನನನಿಷೇವಿತಂ ।
ರತ್ನಸಿಂಹಾಸನಾಸೀನಂ ತುಷ್ಟುವುಃ ಪ್ರಣತಾಃ ಸುರಾಃ ॥೮೪॥

॥ ದೇವಾ ಊಚುಃ ॥

ಗೌರ್ಯಾ ಸ್ಕಂದ ಗಜಾನನೇನ ಸಹಿತಂ ತ್ವಾಂ ವೀಕ್ಷ್ಯ ಮೋದಾಮಹೇ
ದೇವೇಶಂ ನತರಕ್ಷಕಂ ಶಶಿಕಲಾಭಾಸ್ವತ್ಕಿರೀಟೋಜ್ಜ್ವಲಂ ।
ತ್ವಾಮದ್ರಾಕ್ಷ್ಮ ಪಚೇಲಿಮೇನ ತಪಸಾ ದೇವಾ ನಿಮೇಷೇಕ್ಷಣಾ
ಸ್ತ್ವಾರಾತಿಪ್ರಶಮಾಯ ದೇವ ಭಗವಂತ್ಸೇನಾಪತಿಂ ನಃ ಕುರು ॥೮೫॥

ಇತ್ಯುಕ್ತಂ ಸುರಸಾಯುನಂ ಸುರವಚಃ ಶ್ರುತ್ವೈವ ಹೃಷ್ಟಾಂತರೋ
ದೇವ್ಯಾ ಭದ್ರತರೇ ಸ್ವಕಾಸನವರೇ ಸಂಸ್ಥಾಪ್ಯ ತಂ ಷಣ್ಮುಖಂ ।
ರತ್ನಪ್ರೋದ್ಧೃತ ಕುಂಭಸಂಭವಜಲೈಃ ಸಂಸ್ನಾಪ್ಯ ತಂ ಭೂಷಣೈಃ
ಆಭೂಷ್ಯಾಂಬರಗಂಧಪುಷ್ಪನಿಕರೈರಭ್ಯರ್ಚ್ಯ ದೇವೈರ್ಹರಃ ॥೮೬॥

---

ಹೀಗೆ ಸಂತೋಷದಿಂದ ಗೌರೀದೇವಿಯೊಡನೆಯೂ, ಕುಮಾರಗಣಪರೊಡನೆಯೂ ರತ್ನಸಿಂಹಾಸನಾರೂಢನಾಗಿ ಕುಳಿತಿರುವ ಪರಶಿವನನ್ನು ನೋಡುತ್ತಾ ದೇವತೆಗಳು ಈರೀತಿ ಪ್ರಾರ್ಥಿಸಿದರು. "ಮಹೇಶ್ವರನೇ, ಗೌರೀಗುಹಗಣಪತಿಯರೊಡನೆ ಸಂತೋಷದಿಂದ ಕುಳಿತಿರುವ ದೇವದೇವನಾದ ನಿನ್ನನ್ನು ನೋಡಿ ನಾವೆಲ್ಲರೂ ಆನಂದದಿಂದಿರುವೆವು. ಭಕ್ತಜನರಕ್ಷಕನೂ, ಶಶಿಕಲಾಭೂಷಣನೂ, ಪ್ರಕಾಶಮಾನವಾದ ಕಿರೀಟವನ್ನು ಧರಿಸಿರುವವನೂ ಆದ ನಿನ್ನ ದರ್ಶನದಿಂದ ನಮ್ಮ ತಪಃಫಲವು ಈಗ ಸಿದ್ಧಿಸಿತು. ದೇವದೇವನೇ, ಭಗವಂತನೇ, ತಾರಕಾಸುರನನ್ನು ನಾಶಗೊಳಿಸಲು ನಮಗೆ ಶೂರನಾದ ಸೇನಾಪತಿಯೊಬ್ಬನನ್ನು ಈಗಲೇ ಕರುಣಿಸು." ॥೮೪-೮೫॥

ಹೀಗೆ ದೇವತೆಗಳು ತನ್ನನ್ನು ಪ್ರಾರ್ಥಿಸುತ್ತಾ ಸೇನಾಪತಿಯನ್ನು ಕರುಣಿಸಬೇಕೆಂದು ಕೇಳಿಕೊಂಡಮೇಲೆ, ಮಹಾದೇವನು ಸಂತೋಷದಿಂದ ತನ್ನ ಪುತ್ರನಾದ ಕುಮಾರಸ್ವಾಮಿಯನ್ನು ಭದ್ರಾಸನದಲ್ಲಿ ಕುಳ್ಳಿರಿಸಿದನು. ರತ್ನಮಯವಾದ ಕಲಶವನ್ನು ತರಿಸಿ, ಅದರಿಂದ ತನ್ನ ಪುತ್ರನಿಗೆ ಸೇನಾಧಿಪತ್ಯಾಭಿಷೇಕಮಾಡಿ, ಸಮಸ್ತ ಭೂಷಣಾದಿಗಳಿಂದ ಅವನನ್ನು ಶೃಂಗರಿಸಿ, ಗಂಧಪುಷ್ಪಾಕ್ಷತೆಗಳಿಂದ ಸಕಲ ದೇವತೆಗಳೊಡನೆ ಉಪಚರಿಸಿದನು. ॥೮೬॥

ತತ್ಪಾಣಿಗ್ರಹಣಾಯ ಬ್ರಹ್ಮತನುಜಾಂ ವಲ್ಲೀಂ ಚ ಸೇನಾಂ ತಥಾ
ಇಂದ್ರಸ್ಯಾಪಿ ತನೂಭವಾಮಥ ಭವಃ ಸಂಭೂಷ್ಯ ಗೌರ್ಯಾ ತದಾ ।
ಕಲ್ಯಾಣಂ ಸಮಕಾರಯತ್ಸುರವರೈಃ ಸೇನಾಧಿನಾಥಂ ತದಾ
ಮೈನಾಕೇನ ಸಮಭ್ಯಗಾದ್ಗಿರಿವರೋ ರತ್ನೋರುಭೂಷಾಂಬರೈಃ ॥೮೭॥

ದೇವಂ ತಾಂ ಗಿರಿಕನ್ಯಕಾಮಥ ಮುದಾ ಪೌತ್ರಂ ಕುಮಾರಂ ತದಾ
ಸಂವೀಕ್ಷ್ಯ ಪ್ರಮುಮೋದ ಹರ್ಷನಿಕರೈಃ ಸಾಸ್ರಾವಿಲಾಕ್ಷೋ ಮುಹುಃ ।
ಧನ್ಯೋಽಸ್ಮ್ಯದ್ಯ ಮಹೇಶಪಾದಭಜನಾನ್ನಾನ್ಯಂ ಪ್ರಮನ್ಯಾಮಹೇ ॥೮೮॥

ಮೇನಾಪಿ ಸೇನಾಪತಿಮೀಕ್ಷ್ಯ ಹೃಷ್ಟಾ
ಪಂಚಾನನಾಜ್ಜಾತಮಹೋ ಷಡಾನನಂ ।
ಆಭೂಷ್ಯ ಪಟ್ಟಾಂಬರ ರತ್ನಭೂಷಣೈಃ
ಶಿವಂ ಶಿವಾಂ ಚಾಪಿ ಮಹೋರುಹರ್ಷಾತ್ ॥೮೯॥

---

ಅಲ್ಲಿಯೇ ಕುಮಾರಸ್ವಾಮಿಗೆ ವಿವಾಹ ಮಾಡಲು ಯತ್ನಿಸಿ ಶಂಕರನು ಬ್ರಹ್ಮಪುತ್ರಿಯಾದ ವಲ್ಲೀದೇವಿಯನ್ನೂ, ಇಂದ್ರತನುಜೆಯಾದ ಸೇನಾದೇವಿಯನ್ನೂ ಕರೆಸಿ, ಅವರಿಗೆ ವಸ್ತ್ರಭೂಷಣಾದಿಗಳನ್ನಿತ್ತು, ಅವರವರ ಮಾತಾಪಿತೃಗಳ ಅನುಮತಿಯಂತೆ ಅವರಿಬ್ಬರನ್ನೂ ಕುಮಾರಸ್ವಾಮಿಗೆ ಕೊಟ್ಟು ವಿವಾಹ ನಡೆಸಿದನು. ಆ ವಿವಾಹಕ್ಕೆ ಗಿರಿರಾಜನಾದ ಹಿಮವಂತನು ತನ್ನ ಪುತ್ರನಾದ ಮೈನಾಕನೊಡನೆ ಬಂದು ಸೇರಿದನು. ॥೮೭॥

ತನ್ನ ಮೊಮ್ಮಗನಾದ ಕುಮಾರಸ್ವಾಮಿಯನ್ನೂ, ದೇವದೇವನಾದ ಅಳಿಯನನ್ನೂ ಮಗಳನ್ನೂ ನೋಡಿ ಹಿಮವಂತನು ಆನಂದಬಾಷ್ಪಭರಿತನಾಗಿ ಉಬ್ಬಿಹೋದನು. ಮತ್ತು ಮಹೇಶ್ವರನ ಪಾದಧ್ಯಾನವಲ್ಲದೆ ಇನ್ನು ಮುಂದೆ ಮತ್ತೇನನ್ನೂ ನಾನುಗಮನಿಸುವುದಿಲ್ಲವೆಂದೂ, ಆಗ ತಾನು ಧನ್ಯನಾಗಿರುವನೆಂದೂ ದೃಢಮಾಡಿಕೊಂಡನು. ॥೮೮॥

ಗಿರಿರಾಜಪತ್ನಿಯಾದ ಮೇನಾದೇವಿಯೂ ಕೂಡ ಪಂಚಾನನನೆನಿಸಿದ ಮಹಾದೇವನಿಂದ ಷಡಾನನನಾದ ಗುಹಸ್ವಾಮಿಯು ಜನಿಸಿದುದನ್ನು ನೋಡಿ ಆಶ್ಚರ್ಯಪಡುತ್ತಾ ತನ್ನ ಅಳಿಯ, ಮಗಳು, ಮೊಮ್ಮಗಳು ಇವರಿಗೆ ದಿವ್ಯಪೀತಾಂಬರಾದಿಗಳನ್ನು ಅರ್ಪಿಸಿ, ಅಂತರಂಗದಲ್ಲಿಯೇ ಸಂತೋಷಪಡುತ್ತಿದ್ದಳು. ॥೮೯॥

॥ ಶ್ರೀ ಸ್ಕಂದ ಉವಾಚ ॥

ಶ್ರುತ್ವಾ ಮದೀಯಜನನಂ ಖಲು ಮೈ ಸ ಜನ್ಮೇ
ಪರಾಭವಂ ಯಾತಿ ಸ ಮಾನ್ಯತಾಂ ವ್ರಜೇತ್ ।
ಅಜೀಜನತ್ಕೇವಮಹೋ ಸುಪುತ್ರ
ಮಪುತ್ರಕೋಽಪಿ ಸುಮಧ್ಯಹಾರಃ ॥೯೦॥

ಸಮಾಗಮಂ ಯಾತಿ ಜನ್ಯೈರ್ವಿಯೋಗಿತೈ ।
ರ್ಗತಿಂ ಸುಪುಣ್ಯಾಂ ಲಭತೇ ಜನೋಽಸೌ ॥೯೧॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಕುಮಾರಜನ್ಮ ಕುಮಾರಾಷ್ಟೋತ್ತರ ಶತನಾಮ ಷಣ್ಮುಖ
ವಿವಾಹಕಥನಂ ನಾಮ ಏಕವಿಂಶೋಽಧ್ಯಾಯಃ

---

ಹೀಗೆಂದು ಕುಮಾರಸ್ವಾಮಿಯು ತನ್ನ ಜನನವೃತ್ತಾಂತವನ್ನು ಜೈಗೀಷವ್ಯ ಮಹರ್ಷಿಗೆ ಹೇಳುತ್ತಾ, ಅದರ ಶ್ರವಣಫಲವನ್ನು ತಾನೇ ಈರೀತಿ ವಿವರಿಸಿದನು. "ಜೈಗೀಷವ್ಯಮಹಾಮುನಿಯೇ, ಈ ಅಧ್ಯಾಯಗಳಲ್ಲಿ ಬಂದಿರುವ ನನ್ನ ಜನನ ವೃತ್ತಾಂತವನ್ನು ಯಾರು ಶ್ರದ್ಧಾಭಕ್ತಿಯಿಂದ ಕೇಳುವರೋ, ಅವರು ಯಾವ ಯುದ್ಧದಲ್ಲಿಯೂ ಅಪಜಯವನ್ನು ಪಡೆಯಲಾರರು. ಪುತ್ರರಿಲ್ಲದೆ ದುಃಖಿಸುವವರು ಈ ಕಥಾಭಾಗವನ್ನು ಕೇಳುವುದರಿಂದ ಸುಪುತ್ರಶಾಲಿಗಳಾಗುವರು. ಮೋಕ್ಷಾರ್ಥಿಗಳು ಮೋಕ್ಷಸುಖವನ್ನೂ, ವಿಯೋಗಪಡೆದವರು ವಿಯೋಗಿಗಳ ಸಂಯೋಗವನ್ನೂ ಪಡೆದು ಆನಂದದಿಂದ ವಾಸಿಸುವರು. ಒಟ್ಟಿನಲ್ಲಿ ಇದು ಬಹುಪುಣ್ಯಪ್ರದವಾದುದು, ಎಂದು ತಿಳಿಸಿದ ಕುಮಾರಸ್ವಾಮಿಯ ಅಭಿಪ್ರಾಯವನ್ನೇ ಸೂತಮಹರ್ಷಿಗಳು ವಾಜಶ್ರವಸಾದಿ ಸಕಲ ಮುನಿವೃಂದಕ್ಕೂ ತಿಳಿಯಪಡಿಸಿದರು. ॥೯೦-೯೧॥

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ
ಕುಮಾರಸ್ವಾಮಿಯ ಜನನ, ಕುಮಾರಸ್ವಾಮಿಯ ಅಷ್ಟೋತ್ತರಶತನಾಮಗಳು,
ಷಣ್ಮುಖನ ವಿವಾಹ ವಿಷಯ ಇವುಗಳನ್ನು ತಿಳಿಯಪಡಿಸುವ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ದ್ವಾವಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತತಶ್ಚ ಪ್ರಾರ್ಥಿತೈರ್ದೇವೈರ್ಗೌರ್ಯಾ ಯುಕ್ತೋ ಮಹೇಶ್ವರಃ ।
ತಾರಶೂರಾದಿಸಂಹಾರೇ ವಿಜಯಾಯ ಮುಮ್ಯೈವ ಹಿ ॥೧॥

ಮುಹೂರ್ತೇ ಸುಶುಭೇ ಲಗ್ನೇ ಬ್ರಹ್ಮವಿಷ್ಣ್ವಾದಿಭಿಃ ಸುರೈಃ ।
ಸುರಾನೀಕಂ ಸಮಾಸಜ್ಜ್ಯ ಸುಪತಾಕಂ ಸುಯೋಧಕಂ ॥೨॥

ಧೃತನಾನಾಪ್ರಹರಣಂ ಸಗಣಂ ರಣಸನ್ಮುಖಂ ।
ಭೇರೀಲಕ್ಷಮಹಾರಾವಂ ಶಂಖಾನಕಕೃತಸ್ವನಂ ॥೩॥

---

## ಇಪ್ಪತ್ತೆರಡನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳೊಡನೆ ಮತ್ತೆ ಹೀಗೆಂದನು---ಬಳಿಕ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಉಮಾಸಹಿತನಾದ ಪರಮೇಶ್ವರನು ತಾರಕಾಸುರರ ಯುದ್ಧದಲ್ಲಿ ನನ್ನನ್ನೇ ಸೇನಾಪತಿಯನ್ನಾಗಿ ಮಾಡಿಕೊಂಡು ವಿಜಯಸಂಪಾದನೆ ಗೋಸ್ಕರ ತಾರ, ಶೂರ ಮೊದಲಾದ ರಾಕ್ಷಸರ ಸಂಹಾರಕಾರ್ಯದಲ್ಲಿ ಉದ್ಯುಕ್ತ ನಾದನು. ||೧||

ಆಗ ಶಿವನು ಮೊದಲು ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳಿಂದೊಡಗೂಡಿ ಶುಭಮುಹೂರ್ತದಲ್ಲಿ ಅವರ ಸೈನ್ಯವನ್ನು ಸಜ್ಜುಗೊಳಿಸಿ ರಣಾಂಗಣಕ್ಕೆ ಕಳುಹಿಸಿದನು. ಆ ಸುರಸೈನ್ಯವು ಯುದ್ಧಕುಶಲರಾದ ಯೋಧರಿಂದಲೂ ಮತ್ತು ಜಯಪತಾಕೆಗಳಿಂದಲೂ ರಾರಾಜಿಸುತ್ತಿದ್ದಿತು. ಅಲ್ಲದೇ ನಾನಾವಿಧವಾದ ಆಯುಧಗಳಿಂದ

ಪಟಹಾನೇಕಗೋಶೃಂಗೈಃ ಬಧಿರೀಕೃತದಿಙ್ಮುಖಂ ।
ರಥಾನಾಂ ಕೋಟಿಯಸ್ತತ್ರ ಸಮಾಜಗ್ಮುರಲಂಕೃತಾಃ ॥೪॥

ಪತಾಕಾಃ ಸುವರೂಥಾಶ್ಚ ಸುಸಾರಥಿಹಯಾವೃತಾಃ ।
ರಥನೇಮಿಸ್ವನೈಸ್ತತ್ರ ತಚ್ಚಕ್ರಪರಿವರ್ತನೈಃ ॥೫॥

ದಶಕೋಟಿತುರಂಗಾಣಾಂ ರುಕ್ಮಭಾಂಡಖಲೀನಕೈಃ ।
ಮಂಡಿತಾನಾಂ ಸುಯೋಧಾನಾಂ ಕೋದಂಡೋಚ್ಚಂಡನಿಸ್ವನೈಃ॥೬॥

ಗಜಾನಾಂ ಸುಮಹಾಮಾತ್ರಯುಕ್ತಾನಾಂ ಕೋಟಿಪಂಚಕಂ ।
ಗಜಾರೋಹರಥಭ್ರಾಜತ್ಪೃಷ್ಠಭಾಗೈರಲಂಕೃತೈಃ ॥೭॥

ಕುಥಾಂಕುಶಾಗ್ರದಂತೋರುವೇಷ್ಟನಾಸಿವಿರಾಜಿತೈಃ ।
ಕುಂಭಾಗ್ರಾವೃತ್ತರುಕ್ಮೋರು ಕವಚಾಲಂಕೃತೈರ್ಗಜೈಃ ॥೮॥

---

ಕೂಡಿ ಯುದ್ಧಸನ್ನದ್ಧವಾಗಿತ್ತು. ಆ ಸೈನ್ಯದಲ್ಲಿ ಪ್ರಮಥಗಣಗಳೂ ಇದ್ದುವು. ಸೈನ್ಯದ ಮುಂಭಾಗದಲ್ಲಿ ಲಕ್ಷಾಂತರ ಭೇರಿಗಳೂ ಶಂಖ, ದುಂದುಭಿ, ಕಹಳೆ, ಗೋಶೃಂಗ ಮುಂತಾದ ರಣವಾದ್ಯಗಳೂ ತಮ್ಮ ಧ್ವನಿಯಿಂದ ದಿಗಂತಗಳನ್ನು ಕಿವುಡನ್ನಾಗಿ ಮಾಡುತ್ತಿದ್ದುವು. ॥೨-೩॥

ಅಲ್ಲಿಗೆ ಕೋಟಿ ಸಂಖ್ಯೆಯ ರಥಗಳೂ, ಸಾರಥಿ, ಪತಾಕೆ, ಕುದುರೆ ಇವೇ ಮೊದಲಾದುವುಗಳಿಂದ ಕೂಡಿ ಸಿದ್ಧವಾಗಿ ಬಂದುವು. ಆ ರಥ ಚಕ್ರಧ್ವನಿಯು ಬಹು ಭಯಂಕರವಾಗಿತ್ತು. ಚಿನ್ನದ ಲಗಾಮುಗಳುಳ್ಳ ಹತ್ತು ಕೋಟಿ ಕುದುರೆಗಳು ಸಮರ್ಥರಾದ ಯೋಧರಿಂದಲೂ ಬಿಲ್ಲುಬಾಣಗಳಿಂದಲೂ ಕೂಡಿದ್ದಾಗಿ ಸಾಲು ಸಾಲಿನಲ್ಲಿ ಬಂದು ನಿಂತವು. ॥೪-೫-೬॥

ಬಲಿಷ್ಠರಾದ ಮಾವಟಿಗರಿಂದಲೂ, ಪ್ರಕಾಶಮಾನಗಳಾದ ಅಂಬಾರಿಗಳಿಂದಲೂ ಅಲಂಕೃತಗಳಾದ ಐದುಕೋಟಿ ಆನೆಗಳು ಅಲ್ಲಿಗೆ ಬಂದು ನೆರೆದುವು. ಆನೆಯ ಮೇಲೆ ಅಂಬಾರಿಯೂ, ಆನೆಯ ದಂತಾಗ್ರಗಳಿಗೆ ಸುವರ್ಣಮಯವಾದ ಹೊದಿಕೆಯೂ ಮುಂಭಾಗಕ್ಕೆ ಚೂಪಾದ ಕತ್ತಿಯೂ, ಕುಂಭಸ್ಥಳಗಳಮೇಲೆ ಸುವರ್ಣ ನಿರ್ಮಿತವಾದ ಮೇಲುಹೊದಿಕೆಯೂ ಬಹಳವಾಗಿ ಪ್ರಕಾಶಿಸುತ್ತಿದ್ದುವು. ॥೭-೮॥

ಸುಪತಾಕಿಭಿರತ್ಯುಗ್ರವರ್ಷನ್ಮೇಘಾಭನಿಸ್ವನೈಃ ।
ತ್ರಿಂಶತ್ತ್ರಿಕೋಟಿದೇವಾನಾಂ ವಿವಿಧಾಯುಧಪಾಣಯಃ ॥೯॥

ಸಪ್ರಾಸಾಸಿಶರೋಚ್ಚಂಡಕೋದಂಡವರಬಾಹುಭಿಃ ।
ಗದಾಮುಸಲನಿಸ್ತ್ರಿಂಶಕುಂತಹೇತಿಧರೈಃ ಸುರೈಃ ॥೧೦॥

ಖಡ್ಗಖೇಟಮಹಾಪೃಷ್ಠೈಃ ಕಚ್ಚೈಃ ಕವಚಭೂಷಿತೈಃ ।
ಬಾಹ್ಯಗೋಧಾಂಗುಲಿತ್ರಾಣೈರಾಯಸೋಷ್ಣೀಷಿಭಿಸ್ಸುರೈಃ ॥೧೧॥

ಸನ್ನದ್ಧಯೋಧೈಃ ಕೋಟೀನಾಂ ಶತಮಾಯೋಧನೋನ್ಮುಖೈಃ ।
ಹಯಹೇಷೈರ್ಬೃಂಹಿತೈಶ್ಚ ರಥನೇಮಿಸ್ವನೈರಪಿ ॥೧೨॥

ನದತಾಂ ಭೂರಿಭೇರೀಣಾಂ ಶಂಖಾನಾಮಾರವೈಸ್ಸಹ ।
ಇಂದ್ರೋ ರೈವತಮಾರುಹ್ಯ ಸನ್ನದ್ಧಕವಚಾಯುಧಃ ॥೧೩॥

---

ಪ್ರತಿ ಆನೆಯ ಮೇಲೆಯೂ ದೊಡ್ಡ ದೊಡ್ಡ ಪತಾಕೆಗಳು ಹಾರಾಡುತ್ತಿದ್ದವು. ಆನೆಯ ಘೀಂಕಾರವು ಮೇಘಧ್ವನಿಯನ್ನು ತಿರಸ್ಕರಿಸುವಂತಿದ್ದಿತು. ಇನ್ನು ಮೂವತ್ತುಮೂರು ಕೋಟಿ ದೇವತೆಗಳೂ ನಾನಾವಿಧವಾದ ಆಯುಧಗಳನ್ನು ಹಿಡಿದು, ಬಂದು ಸೇರಿದರು. ಅವರ ದೇಹಗಳಲ್ಲಿ ಪ್ರಾಸ, ಕತ್ತಿ, ಶರ, ಬಿಲ್ಲು, ಗದೆ, ಮುಸಲ, ಈಟಿ, ಕುಂತ ಮುಂತಾದ ದಿವ್ಯಾಯುಧಗಳು ವಿರಾಜಿಸುತ್ತಿದ್ದುವು. ॥೯-೧೦॥

ದೇವಸೈನಿಕರು ತಮ್ಮ ಬೆನ್ನಿಗೆ ಖಡ್ಗ ಮತ್ತು ಗುರಾಣಿಗಳನ್ನು ಕಟ್ಟಿಕೊಂಡಿದ್ದರು. ಸುಂದರವಾದ ತಲೆಗೂದಲಿಂದಲೂ, ಕವಚಗಳಿಂದಲೂ ಭೂಷಿತರಾಗಿದ್ದರು. ಕೈಗೆ ಚರ್ಮದ ಚೀಲವನ್ನೂ ತಲೆಗೆ ಕಬ್ಬಿಣದ ಶಿರಸ್ತ್ರಾಣವನ್ನೂ ಧರಿಸಿದ್ದರು. ಯುದ್ಧದಲ್ಲಿ ಹೋರಾಡುವಂತಹ ಶಕ್ತಿಸಾಮರ್ಥ್ಯವುಳ್ಳವರಾಗಿ ಯುದ್ಧಕ್ಕೆ ಸಿದ್ಧರಾದಂತೆ ಅಲ್ಲಿಗೆ ಬಂದುಸೇರಿದರು. ಕುದುರೆಯ ಕೆನೆತ, ಆನೆಗಳ ಘೀಂಕಾರ, ರಥಚಕ್ರಚೀತ್ಕಾರ ಇವು ಎಲ್ಲೆಲ್ಲೂವ್ಯಾಪಿಸಿದ್ದುವು. ॥೧೧-೧೨॥

ಇಂದ್ರನು ಐರಾವತವನ್ನೇರಿ, ವಜ್ರಾಯುಧವನ್ನು ಹಿಡಿದು, ನಗಾರಿ ವಾದ್ಯ ರಭಸದೊಡನೆ ಕೋಟ್ಯಂತರ ದೇವತೆಗಳೊಡಗೂಡಿ ಅಲ್ಲಿಗೆ ಬಂದನು. ವರುಣನು

ವಜ್ರಹಸ್ತೋ ಮರುದ್ಭಿಶ್ಚ ಸಮಾಯಾತೋಮರೈರ್ವೃತಃ ।
ವಕ್ರದಂಷ್ಟ್ರಂ ಸಮಾರುಹ್ಯ ನಕ್ರಂ ಸವರುಣೋ ಗಣೈಃ ॥೧೪॥

ಸಮಾಯಯೌ ಪಾಶಧರೈಃ ಸಹಸ್ರಾಣ್ಯೇಕವಿಂಶತಿಃ ।
ಯಕ್ಷಾಧಿಪೋ ಯಕ್ಷಸಂಘೈರುತ್ತುಂಗನರವಾಹನಃ ॥೧೫॥

ಖಡ್ಗಹಸ್ತೈರ್ದುರಾಧರ್ಷೈರಯುತೈರಾಯಯೌ ಬಲೀ ।
ನಿಋತಿರ್ಹೇತಿಹಸ್ತೈಶ್ಚ ರಕ್ಷಸಾಮಯುತೈರ್ಯಯೌ ॥೧೬॥

ಗದಾಸಿಭಿಂಡಿಪಾಲೋರುಹಸ್ತೈಸ್ಸ್ವರ್ಸ್ತೋರುಘೋಷಣೈಃ ।
ಅಗ್ನಿರ್ಮೇಷಂ ವಕ್ರಶೃಂಗಂ ಘನಘೋಷಂ ಚ ಶ್ಮಶ್ರುಲಂ ॥೧೭॥

ಸಜಲೋದ್ದಾಮಮೇಘಾಭಮಧಿರುಹ್ಯ ಯಯೌ ಗಣೈಃ ।
ಧವಿತ್ರದಾತ್ರಹಸ್ತೈಶ್ಚ ನಿಯುತೈಃ ರಕ್ತವರ್ಣಕೈಃ ॥೧೮॥

ಯಯೌ ಯಮಗಣೈಸ್ತತ್ರ ನೀಲಾಂಜನಸಮಪ್ರಭೈಃ ।
ಕರಾಲದಂಷ್ಟ್ರವಿಕಟೈರೂರ್ಧ್ವಕೇಶೈರ್ಜ್ವಲನ್ಮುಖೈಃ ॥೧೯॥

---

ಮಕರವಾಹನನಾಗಿ, ಪಾಶಾಯುಧಧಾರಿಯಾಗಿದ್ದ ಇಪ್ಪತ್ತೊಂದು ಸಹಸ್ರ ಸಂಖ್ಯೆಯ ಸೈನ್ಯವನ್ನೊಳಗೊಂಡು ಬಂದನು. ॥೧೩-೧೪॥

ಕುಬೇರನು ಪಾಶಖಡ್ಗಧಾರಿಗಳಾಗಿ ಬಲಿಷ್ಠರಾಗಿರುವ ಹತ್ತುಸಾವಿರ ಯಕ್ಷರೊಡಗೂಡಿ ನರವಾಹನನಾಗಿ ಬಂದನು. ನಿಋುತಿಯೂ ಕೂಡ ಗದೆ, ಕತ್ತಿ, ಭಿಂಡಿವಾಲ ಮುಂತಾದ ಆಯುಧಗಳನ್ನು ಹಿಡಿದು ಗರ್ಜಿಸುತ್ತಿರುವ ಹತ್ತುಸಾವಿರ ರಾಕ್ಷಸ ಸೈನ್ಯದೊಡಗೂಡಿ ಸಿದ್ಧನಾದನು. ॥೧೫-೧೬॥

ಅಗ್ನಿಪುರುಷನು, ವಕ್ರವಾದ ಕೋಡುಗಳಿಂದಲೂ, ಉದ್ದವಾದ ಮೀಸೆಗಳಿಂದಲೂ ಕೂಡಿ ಕಪ್ಪುಮೇಘದಂತೆ ಶೋಭಿಸುವ ಆಡನ್ನು ಹತ್ತಿ, ಹೋಮಪಾತ್ರೆ, ಕುಡುಗೋಲು ಇವೇ ಮೊದಲಾದ ಆಯುಧಗಳನ್ನು ಧರಿಸಿರುವ ಕೆಂಪುಬಣ್ಣದ ಲಕ್ಷಸಂಖ್ಯೆಯ ಸೈನಿಕರಿಂದ ಪರಿವೃತನಾಗಿ ಅಲ್ಲಿಗೆ ಬಂದನು. ॥೧೭-೧೮॥

ಯಮನೂ ಕೆಂಪುಕಣ್ಣುಗಳಿಂದಲೂ, ನೀಳವಾದ ಕೊಂಬುಗಳಿಂದಲೂ ಉಗ್ರವಾಗಿ ಕಾಣುವ ದೊಡ್ಡ ಎಮ್ಮೆಯ ಮೇಲೆ ಕುಳಿತು, ತನ್ನ ಭಟರೊಡನೆ ಬಂದನು. ಆ ಭಟರಾದರೋ, ಭಯಂಕರವಾದ ಕೋರೆದಾಡೆ, ಊರ್ಧ್ವಕೇಶ,

ಪಾಶಖಡ್ಗೋರುಹಸ್ತೈಶ್ಚ ಷಷ್ಟಿಸಾಹಸ್ರಸಂಖ್ಯಯಾ ।
ಮಹಾಮಹಿಷಮಾರುಹ್ಯ ರಕ್ತನೇತ್ರಂ ವಿಶಾಣಿನಂ ॥೨೦॥

ಋಭವಃ ಸ್ವಗಣೈರ್ಯುಕ್ತಾ ಯಯುಸ್ಸೋಮೋ ಗಣಾಯುತೈಃ ।
ವಾಯುರಾಗಾದ್ಗಣಾನಾಂ ಚ ನಿಯುತೈಃ ಸಾಯುಧೈರ್ವೃತಃ ॥೨೧॥

ವಿಪಾಟಪಾಟನಾರಾಚಧಾರಿಭಿರ್ಬಾಹುಶಾಲಿಭಿಃ ।
ಕುರಂಗಂ ತಂ ಸಮಾರುಹ್ಯ ಸನ್ನದ್ಧೇ ಸಂಗರೇ ಮರುತ್ ॥೨೨॥

ಈಶಾನೋಽಪಿ ಸಮಾರುಹ್ಯ ಶಾಕ್ವರಂ ಚ ಕಕುದ್ಮಿನಂ ।
ರುದ್ರೈಃ ಪರಿವೃತೋಽಭ್ಯಾಗಾತ್ಕೋಟಿಸಂಖ್ಯದುರಾಸದೈಃ ॥೨೩॥

ಅಹಿಮನ್ಯುಭಿರತ್ಯುಗ್ರೈರ್ನದದ್ಭಿಸ್ಸಾಗರಾರವೈಃ ।
ನಿಷಂಗಿಭಿಃ ಕವಚಿಭಿಃ ಶರಕಾರ್ಮುಕಪಾಣಿಭಿಃ ॥೨೪॥

ವಿಶ್ವೇದೇವಾಸ್ಸಮಾಯಾತಾಸ್ತದೈವಾಯುತಮುತ್ಕಟಾಃ ।
ರಣಶೌಂಡಾಃ ಕವಚಿನಃ ಸಪ್ರಾಸಾಸಿಕರಾಸ್ತದಾ ॥೨೫॥

---

ಉರಿಯುವ ಮುಖ, ಪಾಶ, ಖಡ್ಗ ಇವುಗಳಿಂದ ಕೂಡಿದ ಹಸ್ತ ಈ ವಿಧವಾದ ವೇಷಭೂಷಣಾದಿಗಳಿಂದ ಶೋಭಿಸುತ್ತಾ ಅರುವತ್ತುಸಾವಿರ ಸಂಖ್ಯೆಯುಳ್ಳಿದ್ದರು. ॥೧೯-೨೦॥

ವಾಯುವು ತನ್ನ ಹತ್ತುಸಾವಿರ ಋಭುಗಣಗಳೊಡನೆ ಕೂಡಿ, ತೀಕ್ಷ್ಣವಾದ ಬಾಣಗಳನ್ನೂ ಇತರ ಆಯುಧಗಳನ್ನೂ ಹಿಡಿದಿರುವ ಹತ್ತಾರುಸಾವಿರ ಸೈನಿಕರಿಂದ ಪರಿವೃತನಾಗಿ ಜಿಂಕೆಯ ಮೇಲೆ ಕುಳಿತು ಅಲ್ಲಿಗೆ ಬಂದಿಳಿದನು. ॥೨೧-೨೨॥

ಈಶಾನನು ದೊಡ್ಡಹೆಳಲಿನ ಮಹಾವೃಷಭವನ್ನೇರಿ ಕೋಟಿಸಂಖ್ಯೆಯ ರುದ್ರಗಣಗಳನ್ನು ಕರೆದುಕೊಂಡು ಅಲ್ಲಿಗೆ ಬಂದು ಸೇರಿದನು. ಆ ರುದ್ರಗಣಗಳು ಉಗ್ರವಾಗಿ ಗರ್ಜಿಸುತ್ತಾ ಕವಚ, ಬಾಣ, ಬತ್ತಳಿಕೆ, ಬಿಲ್ಲು ಇವುಗಳನ್ನು ಹಿಡಿದು ಕೋಟ್ಯಂತರ ಸಂಖ್ಯೆಯುಲ್ಲಿ ಬಂದು ಸೇರಿದ್ದರು. ॥೨೩-೨೪॥

ಹತ್ತಾರು ಸಾವಿರ ಸಂಖ್ಯೆಯುಲ್ಲಿ ವಿಶ್ವೇದೇವತೆಗಳು ರಣಧೀರರಾಗಿ ಕವಚ, ಕತ್ತಿ, ಪ್ರಾಸಾಯುಧ ಇವುಗಳನ್ನು ಹಿಡಿದು ಯುದ್ಧಸಿದ್ಧರಾಗಿ ಬಂದು ಸೇರಿದರು.

ವಸವಃ ಸ್ವಗಣೈಸ್ತತ್ರ ಸಮಾಯಾತಾಯುತಾಯುತಂ ।
ನಿಷಂಗಹೇತಿಪರಶುಧಾರಿಭಿರ್ದೈತ್ಯಹಾರಿಭಿಃ ॥೨೬॥

ಆದಿತ್ಯಾ ದ್ವಾದಶಾಸ್ತತ್ರ ಸಮಾಯಾತಾ ಗಣೈಸ್ತದಾ ।
ಗದಾಮುಸಲಬಾಣಾಸಿಧಾರಿಭಿಸ್ತೇಽಯುತಾಯುತಂ ॥೨೭॥

ಅಶ್ವಿನಾವಶ್ವಮಾರುಹ್ಯ ಸಮಾಯಾತೌ ಗಣೈರ್ವೃತೌ ।
ಪ್ರತ್ಯೇಕಮಷ್ಟಸಾಹಸ್ರೈಃ ಶರಕಾರ್ಮುಕಪಾಣಿಭಿಃ ॥೨೮॥

ಪಿತರಸ್ಸಿದ್ಧಸಾಧ್ಯಾಶ್ಚ ಸುಪರ್ಣಾಗರುಡಾಸ್ತದಾ ।
ಗಂಧರ್ವಾ ಯಕ್ಷರಕ್ಷಾಂಸಿ ಯಾತುಧಾನಾಃ ಸಹಸ್ರಶಃ ॥೨೯॥

ಕವಚಾಯುಧಘೋರಾಸಿಸೃಕ್ಕಾಮುಸಲಲಾಂಗಲೈಃ ।
ಖಡ್ಗಹೇತಿಗದಾಹಸ್ತಾ ನಿರ್ಯಯುಸ್ಸಮರೇ ತದಾ ॥೩೦॥

ಸುಧನ್ವಾನೋಽಯುತಂ ತತ್ರ ಸ್ಯಂದನೇಷು ಸುಧನ್ವಿನಃ ।
ಸಮಾಯಾತಾ ಗಣೈಸ್ತತ್ರ ಸ ಪ್ರಾಸಾಸಿಪರಶ್ವಧೈಃ ॥೩೧॥

---

ವಸುಗಣಗಳು, ಬತ್ತಳಿಕೆಗಳು, ಪರಶುವೇ ಮೊದಲಾದ ಆಯುಧಗಳನ್ನು ಹಿಡಿದು ದೈತ್ಯನಾಶಕವಾದ ಇತರ ಆಯುಧಗಳನ್ನು ಧರಿಸಿ ಗುಂಪುಗುಂಪಾಗಿ ಬಂದು ಸೇರಿದರು. ॥೨೫-೨೬॥

ದ್ವಾದಶಾದಿತ್ಯರು ಗದಾ, ಮುಸಲ, ಬಾಣ, ಕತ್ತಿ ಮುಂತಾದ ಆಯುಧಗಳಿಂದ ವಿರಾಜಿಸುತ್ತಾ ಹತ್ತಾರುಸಾವಿರ ಸಂಖ್ಯೆಯಿಂದ ಕೂಡಿಬಂದು ಸೇರಿದರು. ಅದೇ ರೀತಿ ಅಶ್ವಿನೀದೇವತೆಗಳಿಬ್ಬರೂ ಪ್ರತ್ಯೇಕವಾಗಿ ಎಂಟೆಂಟು ಸಾವಿರ ಧನುರ್ಬಾಣಪಾಣಿಗಳಾದ ಸೈನಿಕರೊಡಗೂಡಿ ಅಲ್ಲಿಗೆ ಬಂದು ನೆರೆದರು. ॥೨೭-೨೮॥

ಪಿತೃದೇವತೆಗಳು, ಸಿದ್ಧರು, ಸಾಧ್ಯರು, ಸುಪರ್ಣರು, ಗರುಡರು, ಗಂಧರ್ವರು, ಯಕ್ಷರು, ರಾಕ್ಷಸರು, ಇವರೆಲ್ಲರೂ ಸಹಸ್ರಾರು ಸಂಖ್ಯೆಯಲ್ಲಿ ಕವಚ, ಕತ್ತಿ, ಕಠಾರಿ, ಮುಸಲ, ಲಾಂಗಲ, ಗದೆ, ಖಡ್ಗ ಇವೇ ಮೊದಲಾದ ಆಯುಧಗಳನ್ನು ಹಿಡಿದು ಯುದ್ಧಸಿದ್ಧರಾಗಿ ಅಲ್ಲಿಗೆ ಬಂದು ಸೇರಿದರು. ॥೨೯-೩೦॥

ಗಂಧರ್ವಭೇದಗಳಾದ ಸುಧನ್ವರ ಹತ್ತುಸಾವಿರ ಸೈನ್ಯವು ರಥಗಳಲ್ಲಿ ಕುಳಿತು ಪ್ರಾಸ, ಕತ್ತಿ, ಪರಶು ಮುಂತಾದ ಆಯುಧಗಳನ್ನೂ ಹಿಡಿದು ಬಂದು ಸೇರಿದರು.

ಉಷ್ಣೀಷಿಣೋ ಮುಕುಟಿನಃ ಸಹಸ್ರತ್ರಾಣಭಾಸುರಾಃ ।
ಶಿರಸ್ತ್ರಾಣಾ ಕವಚಿನೋ ಧನ್ವಿನಃ ಸಾಸಿಪಾಣಯಃ ॥೩೨॥

ಅಕ್ಷೌಹಿಣೀನಾಂ ಪಂಚಾಶತ್ಕೋಟಯೋತ್ರ ಸಮಾಗತಾಃ ।
ಪತಾಕಾಲಂಕೃತಾಃ ಸರ್ವೇ ಛತ್ರಿಣೋ ವೀಜ್ಯಚಾಮರಾಃ ॥೩೩॥

ಅಮರಾಣಾಮನೀಕಾನಿ ಮಾಂ ನಿರ್ಯಾಂತಮುಪಸ್ಥಿತಾಃ ।
ಪಂಕ್ತಿಶಃ ಸಾಶ್ವನಾಥೈಶ್ಚ ಭೈರವೋಽದ್ರಾಮಭೇರಿಕಾಃ ॥೩೪॥

ತದಾ ಮಾಂ ಸ ಮಹಾದೇವಃ ಸ್ವಯಮಾಬಧ್ಯ ದಂಶನಂ ।
ನಿಷಂಗಂ ಪೃಷ್ಠತೋ ಬಧ್ವಾ ಶಕ್ತಿಂ ಸಾಸಿಂ ಚ ಮತ್ಕರೇ ॥೩೫॥

ದದೌ ಪರಶ್ವಧಂ ದೇವಃ ಪಿನಾಕೀ ಸ್ವಂ ಪಿನಾಕಕಂ ।
ರಥಂ ಸಹಸ್ರಾಶ್ವಯುತಂ ಚಿತ್ರಧ್ವಜಪರಿಷ್ಕೃತಂ ॥೩೬॥

ಹೇಮಕುಂಭವಿತಾನಾಗ್ರಂ ಸುಸಾರಥಿಶತಾವೃತಂ ।
ಶರಾವರಸಹಸ್ರೈಶ್ಚ ತೂಣೀರೈಃ ಪೂರ್ಣಮೀಶ್ವರಃ ॥೩೭॥

---

ಮತ್ತು ಅವರು ತಲೆಗೆ ಶಿರಸ್ತ್ರಾಣವನ್ನೂ ಕಿರೀಟವನ್ನೂ, ಕವಚವನ್ನೂ ಧರಿಸಿ ಕತ್ತಿಯನ್ನೂ ಹಿಡಿದು ಬಂದಿದ್ದರು. ॥೩೧-೩೨॥

ಐವತ್ತು ಅಕ್ಷೌಹಿಣೀ ಕೋಟಿ ದೇವತೆಗಳು ಛತ್ರಿಚಾಮರಾದಿಗಳನ್ನೂ ಧ್ವಜ ಪತಾಕೆಗಳನ್ನೂ ಧರಿಸಿ ಗುಂಪುಗುಂಪಾಗಿ ಅಲ್ಲಿಗೆ ಬಂದಿದ್ದರು. ಪ್ರತಿಯೊಂದು ತಂಡಕ್ಕೂ ಒಬ್ಬೊಬ್ಬ ಅಶ್ವಾರೋಹಿಯಾದ ಸೇನಾಪತಿಯಿರುತ್ತಿದ್ದನು. ಅವನ ನೇತೃತ್ವದಲ್ಲಿ ಆ ಸೈನ್ಯವು ಸಾಲುಸಾಲಾಗಿ ಮುಂದುವರಿಯುತ್ತಿದ್ದಿತು. ॥೩೩-೩೪॥

ಆಗ ಮಹಾದೇವನು ತಾನೇ ಬಂದು ನನ್ನ ಸೊಂಟಕ್ಕೆ (ಷಣ್ಮುಖನ) ಪಟ್ಟಿಯನ್ನು ಕಟ್ಟಿ ಬೆನ್ನಿಗೆ ಬತ್ತಳಿಕೆಯನ್ನು ಬಿಗಿದು, ಕೈಗೆ ಶಕ್ತ್ಯಾಯುಧವನ್ನೂ, ಕತ್ತಿಯನ್ನೂ ಕೊಟ್ಟನು. ತನ್ನ ಮುಖ್ಯ ಆಯುಧವಾದ ಪಿನಾಕವನ್ನೂ, ಸಹಸ್ರ ಅಶ್ವಗಳಿಂದ ಸಜ್ಜಿತವಾದ ಮತ್ತು ಚಿತ್ರಧ್ವಜಗಳಿಂದ ಅಲಂಕೃತವಾದ ರಥವನ್ನೂ ಅನುಗ್ರಹಿಸಿಕೊಟ್ಟನು. ॥೩೫-೩೬॥

ಆ ರಥವು ಸುವರ್ಣಕಲಶಗಳಿಂದಲೂ, ನೂರುಜನ ಸಾರಥಿಯರಿಂದಲೂ ಅಲಂಕೃತವಾಗಿದ್ದಿತು. ಅದರಲ್ಲಿ ಸಹಸ್ರಾರು ಬಾಣಗಳೂ, ಬತ್ತಳಿಕೆಗಳೂ ತುಂಬಿ

ಸಮಾರೋಪ್ಯಾಥಗೌರ್ಯಾ ಮಾಂ ಸ್ವಸ್ತಿವಾಚ್ಯಮುನೀಶ್ವರೈಃ ।
ಮಂಗಲಂ ಪ್ರದದೌ ಮಹ್ಯಂ ದೇವಾನಾಂ ಪಶ್ಯತಾಂ ತದಾ ॥೩೮॥

॥ ಶ್ರೀಮಹೇಶ್ವರ ಉವಾಚ ॥

ಯನ್ಮಯಾ ತ್ರೈಪುರೇ ಯುದ್ಧೇ ಕ್ಷ್ಮಾತ್ಮಸ್ಯಂದನಯುತೇನ ಹಿ ।
ವೇದಾಶ್ವವಿಧಿಯಂತಾ ಚ ಬಾಣಮುಖ್ಯೇನ ಶೌರಿಣಾ ॥೩೯॥

ಚಂದ್ರಸೂರ್ಯೋರುಚಕ್ರೇಣ ಯದಾಪ್ತಂ ಜಯಮಂಗಲಂ ।
ತದಸ್ತು ಸಮರೇ ತಾತ ತವಾದ್ಯ ವಿಜಯೋದಯಃ ॥೪೦॥

ಅವಹಾರೇ ವಿಹಾರೇ ಚ ಶಸ್ತ್ರಾಸ್ತ್ರಗ್ರಾಮಕರ್ಷಣೇ ।
ಸ್ವಪರೇಕ್ಷಣದೃಷ್ಟ್ಯಾ ಚ ಸಂಯಾನೇ ಚಾಪ್ಯಪೋಹನೇ ॥೪೧॥

ಭವ ಮಾ ತಂದ್ರಿತೋ ನಿತ್ಯಮಿತ್ಯಾಶೀನ್ಮಾಂ ಹರಸ್ತದಾ ।
ತದಾಹಂ ಬ್ರಹ್ಮವಿಷ್ಣುಭ್ಯಾಂ ಶಕ್ರೇಣ ಚ ಸಹಾಮರೈಃ ॥೪೨॥

---

ದ್ದವು. ಮುನಿಗಳು ಸ್ವಸ್ತಿಮಂತ್ರಗಳನ್ನುಚ್ಚರಿಸುತ್ತಿರುವಾಗ ಗೌರೀದೇವಿಯೊಡಗೂಡಿ ಮಹಾದೇವನು ನನ್ನನ್ನು ರಥಕ್ಕೆ ಹತ್ತಿಸಿ ದೇವತೆಗಳೆದುರಿಗೆ ಹೀಗೆ ಆಶೀರ್ವಾದಮಾಡಿದನು. ॥೩೭-೩೮॥

"ಹಿಂದೆ ನಾನು ತ್ರಿಪುರಸಂಹಾರ ಕಾಲದಲ್ಲಿ ಭೂಮಿಯನ್ನೇ ರಥವನ್ನಾಗಿಯೂ, ವೇದಗಳನ್ನೇ ಕುದುರೆಗಳನ್ನಾಗಿಯೂ, ಬ್ರಹ್ಮನನ್ನೇ ಸಾರಥಿಯನ್ನಾಗಿಯೂ, ವಿಷ್ಣುವನ್ನೇ ಬಾಣವನ್ನಾಗಿಯೂ ಮಾಡಿಕೊಂಡು ಯಾವ ಜಯವನ್ನು ಸಂಪಾದಿಸಿದೆನೋ, ಅಂತಹ ಜಯವೇ ನಿನಗೆ ಈ ಯುದ್ಧದಲ್ಲಿ ದೊರೆಯಲಿ. ॥೩೯-೪೦॥

ಭೋಜನಕಾಲದಲ್ಲಿಯೂ, ವಿಹಾರಕಾಲದಲ್ಲಿಯೂ, ಶಸ್ತ್ರಾಸ್ತ್ರಸಮೂಹಗಳನ್ನು ಆಕರ್ಷಿಸುವಾಗಲೂ, ಸ್ವಕೀಯರ ಮತ್ತು ಪರಕೀಯರನ್ನು ದೃಷ್ಟಿಸಿ ನೋಡುವಾಗಲೂ, ಪ್ರಯಾಣಕಾಲದಲ್ಲಿಯೂ, ಯುದ್ಧರಂಗದಲ್ಲಿಯೂ ನೀನು ಎಚ್ಚರಿಕೆಯುಳ್ಳವನಾಗು. ನಿನಗೆ ಸರ್ವದಾ ಜಯ ಲಭಿಸಲಿ" ಎಂದು ಮಹೇಶ್ವರನು ನನಗೆ (ಕುಮಾರಸ್ವಾಮಿಗೆ) ಆಶೀರ್ವಾದಮಾಡಿದನು. ಅನಂತರ ನಾನು

ಪ್ರಣಮ್ಯ ಗೌರೀಮೀಶಂ ಚ ಪರಿಪೂಜ್ಯ ಗಜಾನನಂ ।
ವಿಶ್ರಾಣ್ಯ ಜಯದಾನಾನಿ ಮಹರ್ಷಿಷು ಮುನೀಶ್ವರ ॥೪೩॥

ನದತಾಂ ಭೂರಿಭೇರೀಣಾಂ ಶಂಖಾನಾಮಾನಕೈಸ್ಸಹ ।
ಸ್ತುವತಾಂ ಬಂದಿಮುಖ್ಯಾನಾಂ ಜಪತಾಂಚ ಮಹರ್ಷಿಭಿಃ ॥೪೪॥

ವರ್ಷತಾಂ ಸುಮನಾಸಾರಂ ನೃತ್ಯತಾಮಪ್ಸರಸ್ಸು ಚ ।
ಸಮಾರುಹ್ಯಾದ್ರಿಶಿಖರಪ್ರಭಂ ರಥವರಂ ತದಾ ॥೪೫॥

ಬ್ರಹ್ಮಣಾ ಹಂಸಯಾನೇನ ದಕ್ಷಿಣೇ ಮೇ ವಿರಾಜತಾ ।
ವಾಮೇ ಚ ಗರುಡಾರೂಢಶಾರ್ಙ್ಗಿಣಾ ಚಕ್ರಪಾಣಿನಾ ॥೪೬॥

ಪುರೋ ಗಜೇನ ಮಹತಾ ಧಾವತಾ ಹರಿಣಾ ಸುರೈಃ ।
ಪ್ರಣಾಮ್ಯಾಂಜಲಿಪದ್ಮಾನಿ ಪ್ರಗೃಹ್ಯಾಥ ಸುರವ್ರಜಾಂ ॥೪೭॥

---

ಬ್ರಹ್ಮ, ವಿಷ್ಣು, ಇಂದ್ರ ಇವರೊಡನೆ ಸೇರಿಕೊಂಡು, ಪಾರ್ವತೀಪರಮೇಶ್ವರರನ್ನೂ ಗಜಾನನನನ್ನೂ ಪೂಜಿಸಿದೆನು. ॥೪೧-೪೨॥

ನನಗೆ ಜಯ ದೊರೆಯಲೆಂಬ ಉದ್ದೇಶದಿಂದ ಮಹರ್ಷಿಗಳಿಗೆ ನಾನಾವಿಧವಾದ ದಾನಧರ್ಮಗಳನ್ನಾಚರಿಸಿದೆನು. ದೇವತೆಗಳು ಶಂಖ, ದುಂದುಭಿ ಮುಂತಾದ ವಾದ್ಯಸಮೂಹಗಳಿಂದ ಧ್ವನಿಮಾಡಿದರು. ಹೊಗಳುಭಟರು ವಿಧವಿಧವಾಗಿ ಹೊಗಳಿದರು. ಮಹರ್ಷಿಗಳು ಭಕ್ತಿಪೂರ್ವಕವಾಗಿ ಶಕ್ತಿಮಂತ್ರಜಪಮಾಡಿದರು. ॥೪೩-೪೪॥

ದೇವತೆಗಳು ಹೂಮಳೆಗರೆದರು. ಅಪ್ಸರಸ್ತ್ರೀಯರು ನರ್ತನಮಾಡಿದರು. ಈ ವೈಭವದಲ್ಲಿ ನಾನು ಗಿರಿಶಿಖರದಂತೆ ಮಹೋನ್ನತವಾದ ರಥವನ್ನು ಹತ್ತಿದೆನು. ನನ್ನ ಬಲಭಾಗದಲ್ಲಿ ಹಂಸಾರೂಢನಾಗಿ ಬ್ರಹ್ಮನೂ, ಎಡಭಾಗದಲ್ಲಿ ಗರುಡಾರೂಢನಾಗಿಯೂ ಚಕ್ರಪಾಣಿಯಾಗಿಯೂ ಇರುವ ವಿಷ್ಣುವೂ ಬಂದು ನಿಂತರು. ॥೪೫-೪೬॥

ಮುಂಭಾಗದಲ್ಲಿ ಇಂದ್ರನು ಐರಾವತಗಜಾರೂಢನಾಗಿ ದೇವತೆಗಳೊಡನೆ ನಿದಾನವಾದ ಓಟದಿಂದ ಮುಂದುವರಿಯುತ್ತಿದ್ದನು. ದೇವತೆಗಳ ಗುಂಪು "ದೇವ

ಪ್ರಗೃಹ್ಯ ಬಂದಿಶಬ್ದೈಶ್ಚ ದೇವಸೇನಾಪತೇ ಜಯ ।
ಅವಾದ್ಯ ಜಂ ಮೃದಂಗಾಂಶ್ಚ ವೀರಬಾಹುಮುಖಾನ್ ಗಣಾನ್ ॥೪೮॥

ಧೃತನಾನಾಪ್ರಹರಣಾನ್ ವಾರಣೇಂದ್ರಸಮಪ್ರಭಾನ್ ।
ನವಲಕ್ಷಂ ಶಕ್ತಿಹಸ್ತಾನ್ ಪೃಷ್ಠಗೋಪಾನ್ ಮನ್ಯೈವ ಹಿ ॥೪೯॥

ರಥಚಕ್ರಸ್ವನೈಸ್ತತ್ರ ಗಜಾನಾಂ ಬೃಂಹಿತೈಸ್ತಥಾ ।
ಹೇಷಘೋಷಾಮುಖೈರಶ್ವೈರ್ವಲಿತಾಸ್ಫೋಟನಿಸ್ವನೈಃ ॥೫೦॥

ಸ್ತುವತಾಂ ಧಾವತಾಂ ತತ್ರ ವಾತಧೂತಪತಾಕಿನಾಂ ।
ಅಯಸಾಬದ್ಧಸಂಘೃಷ್ಟಂ ಯದ್ರಜೋ ದಿವಮಸ್ಪೃಶತ್ ॥೫೧॥

ಆಭಾತಿ ಭಾಸ್ಕರಸ್ತತ್ರ ಸಂಧ್ಯಾಸ್ವಿವ ವಿಲೋಹಿತಃ ।
ಏತಸ್ಮಿನ್ನಂತರೇ ತತ್ರ ನಾರದಾಚ್ಛ್ರುತವಾಂಸ್ತದಾ ॥೫೨॥

ಯುದ್ಧಸನ್ನದ್ಧಮಾಯಾಂತಂ ದೇವಸೇನಾಪತಿಂ ಗುಹಂ ।
ತಾರಕಃ ಸ್ವಬಲೈರ್ಯುಕ್ತಃ ಸಮಭ್ಯಾಗಾನ್ಮುಖಂ ಮಮ ॥೫೩॥

---

ಸೇನಾಪತಿಯೇ ಜಯಶೀಲನಾಗು" ಎಂದು ಕೂಗುತ್ತಾ ಮೃದಂಗಾದಿಗಳನ್ನು ಬಾರಿಸುತ್ತಾ ಧ್ವನಿಗೈಯುತ್ತಾ ಮುಂದೋಡುತ್ತಿದ್ದಿತು. ॥೪೭-೪೮॥

ನನ್ನ ಹಿಂಭಾಗದಲ್ಲಿ ನಾನಾವಿಧವಾದ ಆಯುಧಗಳನ್ನು ಹಿಡಿದು ಮದ್ದಾನೆಯಂತಿರುವ ಶಕ್ತ್ಯಾಯುಧಧಾರಿಗಳಾದ ಒಂಬತ್ತು ಲಕ್ಷ ಸೈನಿಕರು ಸಾಲಾಗಿ ಬರುತ್ತಿದ್ದರು. ರಥಚಕ್ರಧ್ವನಿಯೂ, ಗಜಗಳ ಘೀಂಕಾರವೂ ಕುದುರೆಗಳ ಕೆನೆತವೂ ಮುನ್ನುಗ್ಗುವ ರಭಸವೂ ಬಹು ಶಬ್ದಮಯವಾಗಿದ್ದಿತು. ॥೪೯-೫೦॥

ಸ್ತೋತ್ರಮಾಡುತ್ತಾ ಓಡುವಸ್ತುತಿಪಾಠಕರ ಮತ್ತು ಪತಾಕೆಗಳ ಹೊಡೆತದಿಂದ ಏಳುವ ಧ್ವನಿಯು ಕಬ್ಬಿಣದ ಲಾಳಗಳ ತುಳಿತದಿಂದ ಎದ್ದ ಧೂಳಿಯು ಅಂತರಿಕ್ಷವನ್ನು ಮುಟ್ಟುತ್ತಿದ್ದಿತು. ಸೂರ್ಯನು ಆ ಕಾಲದಲ್ಲಿ ಸಂಧ್ಯಾಕಾಲದ ರಾಗವನ್ನು ಪಡೆದು ಕೆಂಪಾಗಿ ಕಂಗೊಳಿಸುತ್ತಿದ್ದನು. ಅಷ್ಟರಲ್ಲಿ ಕುಮಾರನಾದ ನಾನು ಯುದ್ಧಕ್ಕೆ ಬರುತ್ತಿರುವ ಸಮಾಚಾರವನ್ನು ನಾರದಮಹರ್ಷಿಯ ಮೂಲಕ ತಾರಕಾಸುರನು ಕೇಳಿ ತಿಳಿದುಕೊಂಡನು. ॥೫೧-೫೨॥

ಒಡನೆಯೇ ತಾರಕನು ಯುದ್ಧಸನ್ನದ್ಧನಾಗಿ ಸೈನ್ಯಸಮೇತ ಬರುತ್ತಲಿರುವ ಕುಮಾರಸ್ವಾಮಿಯನ್ನು ಎದುರಿಸುತ್ತಾ ತಾನೂ ಸೈನ್ಯ ಸಮೇತ ಸಿದ್ಧನಾಗಿ ಬಂದನು

ಸಪ್ತಕೋಟಿತುರಂಗೈಶ್ಚ ರುಕ್ಮಭಾಂಡಪರಿಚ್ಛದೈಃ ।
ಸೋದ್ಯತಾಯುಧನಿಸ್ತ್ರಿಂಶಪ್ರಾಸಹಸ್ತೋರುಯೋಧಕೈಃ ॥೫೪॥

ದಂತಿನಾಂ ಚ ತ್ರಿಕೋಟ್ಯಾಂ ತು ಸನ್ನದ್ಧಾಂಗಸುದಂತಿನಾಂ ।
ರಥಾನಾಂ ಚ ಸದಶ್ವಾನಾಂ ಕೋಟಿಭಿಃ ರಥಿಭಿರ್ಯುಯೌ ॥೫೫॥

ಸಪ್ರಾಸಸಾಸಿಕೋದಂಡದಂಡಖಡ್ಗಶರಾನ್ವಿತಾಂ ।
ವಿಂಶತ್ಕೋಟಿಸುಪಾದಾತೈಃ ಕವಚೋಷ್ಣೀಷಧಾರಿಭಿಃ ॥೫೬॥

ನಿಷಂಗಕಾರ್ಮುಕೈಶ್ಚೈರ್ಭಲ್ಲಹಸ್ತಭಟಾರವೈಃ ।
ಸಂತಾಡ್ಯ ಭೇರೀಪಟಹಾನ್ ಪಣವಾನಕಗೋಮುಖಾನ್ ॥೫೭॥

ಸಹಸ್ರಾಶ್ವರಥಂ ವೇಗಾತ್ತಾರಕಃ ಸ್ವಯಮಾಸ್ಥಿತಃ ।
ಸುಪತಾಕಂ ಸಾವರೂಥಂ ಸುಸಾರಥಿವರೈರ್ವೃತಂ ॥೫೮॥

---

ಏಳು ಕೋಟಿ ಕುದುರೆಗಳೂ ಸುವರ್ಣಾಭರಣಭರಿತಗಳಾಗಿ ಕತ್ತಿ, ಕಠಾರಿ, ಪ್ರಾಸ ಈ ಆಯುಧಗಳನ್ನು ಧರಿಸಿರುವ ಯೋಧರನ್ನು ಕೂರಿಸಿಕೊಂಡು ಯುದ್ಧಸಿದ್ಧವಾಗಿ ಬಂದಿದ್ದುವು. ॥೫೩-೫೪॥

ಮೂರು ಕೋಟಿ ಆನೆಗಳು ಯುದ್ಧಸನ್ನದ್ಧಗಳಾಗಿ ಅವನ ಪಕ್ಷದಲ್ಲಿದ್ದುವು. ಶ್ರೇಷ್ಠವಾದ ಕುದುರೆಗಳಿಂದ ಕಟ್ಟಲ್ಪಟ್ಟ ಕೋಟ್ಯಂತರ ರಥಿಕರಿಂದ ನಿಬಿಡವಾದ ರಥಗಳು ಅಲ್ಲಿ ಸಿದ್ಧವಾಗಿದ್ದುವು. ಪ್ರಾಸ, ಕತ್ತಿ, ಬಿಲ್ಲು, ಬಾಣ ಮುಂತಾದುವುಗಳನ್ನು ಹಿಡಿದು ಕವಚಕಿರೀಟಗಳನ್ನು ಧರಿಸಿದ ಇಪ್ಪತ್ತು ಕೋಟಿ ಕಾಲಾಳುಗಳು ಯುದ್ಧಸಿದ್ಧರಾಗಿ ಬಂದು ನೆರೆದಿದ್ದರು. ॥೫೫-೫೬॥

ಬತ್ತಳಿಕೆ, ಬಿಲ್ಲು, ಭಲ್ಲೆ, ಮುಂತಾದ ಆಯುಧಗಳನ್ನು ಹಿಡಿದು ಭೇರಿ, ತಮಟೆ ಮುಂತಾದುವುಗಳನ್ನು ಬಾರಿಸುತ್ತಾ, ಅನೇಕ ಕಾಲಾಳುಗಳು ತಾರಕನ ಸುತ್ತಲೂ ಸೇರಿದ್ದರು. ಸಹಸ್ರಅಶ್ವಗಳಿಂದ ಎಳೆಯಲ್ಪಡುವ ದಿವ್ಯರಥದಲ್ಲಿ ತಾರಕಾಸುರನು ಕುಳಿತಿದ್ದನು. ಅವನ ರಥವು ಅನೇಕಸಾರಥಿಗಳಿಂದಲೂ, ಧ್ವಜಪತಾಕೆಗಳಿಂದಲೂ ಶೋಭಿಸುತ್ತಿದ್ದಿತು. ॥೫೭-೫೮॥

ಶೂರೋ ಗಜಂ ಸಮಾರುಹ್ಯ ಅಂಕುಶೋಗ್ರಕರೋ ಯಯೌ ।
ಪಾದಾಂಗುಷ್ಠೇನ ತತ್ಕರ್ಣೌ ತುದನ್ಸ್ವಾಂ ವೇಗವತ್ತರಃ ॥೫೯॥

ಸಿಂಹಾಸ್ಯೇಶ್ವಂ ಸಮಾರುಹ್ಯ ಜವಿನಂ ಹೇಮಮಾಲಿನಂ ।
ಖಲೀನಜಾಲಸೇನೈವ ಪತಂತಂ ಯುದ್ಧಸನ್ಮುಖಂ ॥೬೦॥

ಸುರಾಣಾಂ ದೈತ್ಯನಾಥಾನಾಂ ಯುದ್ಧಮುನ್ಮತ್ತಮುತ್ಥಿತಂ ।
ನದತಾಂ ಧಾವತಾಂ ತತ್ರ ಕೂಜತಾಂ ಧನುಷಾಂ ತಥಾ ॥೬೧॥

ಶರಾಣಾಂ ವರ್ಷತಸ್ತತ್ರ ನಿಘ್ನತಾಮಿತರೇತಸಃ ।
ಅಸಿಭಿರ್ಭಿಂಡಿಪಾಲೈಶ್ಚ ಮುಸಲೈರ್ಲಾಂಗಲೈಸ್ತದಾ ॥೬೨॥

ಮುಂಚತಾ ಶರವರ್ಷಾಣಿ ಖಡ್ಗಖೇಟಪ್ರಹರಣೈಃ ।
ಶಕ್ರೋ ವಿತ್ರಾಸಯಾಮಾಸ ದೈತ್ಯಾಂಸ್ತತ್ರ ಶರೋತ್ಕರೈಃ ॥೬೩॥

ಹೇಮಮಾಲೀ ಮಹಾಮಾಲೀ ವಿದ್ಯುನ್ಮಾಲೀ ಹಲಾಕುಲೀ ।
ವಸುಭಿಃ ಪಿತೃಭಿಸ್ತತ್ರ ಯುಯುಧುಸ್ತೇ ರಥಸ್ಥಿತಾಃ ॥೬೪॥

---

ಶೂರಾಸುರನೆಂಬವನು ಅಂಕುಶವನ್ನು ಕೈಯಲ್ಲಿ ಹಿಡಿದು ಆನೆಯ ಮೇಲೆ ಕುಳಿತು, ತನ್ನ ಪಾದದ ಅಂಗುಷ್ಠದಿಂದ ಅದರ ಕಿವಿಯನ್ನು ತಿವಿಯುತ್ತಾ ಮುಂದು ವರಿಯುತ್ತಿದ್ದನು. ಸಿಂಹಾಸ್ಯನೆಂಬವನು ವೇಗವಾಗಿ ಓಡುವ ಸುವರ್ಣಾಭರಣ ರಂಜಿತವಾದ ಕುದುರೆಯನ್ನೇರಿ ಕಡಿವಾಣವನ್ನು ಹಿಡಿದೆಳೆಯುತ್ತಾ ಯುದ್ಧಾಭಿ ಮುಖವಾಗಿ ಮುಂದಕ್ಕೆ ಹೋಗುತ್ತಿದ್ದನು. ॥೫೯-೬೦॥

ಹೀಗೆ ಷಣ್ಮುಖನ ಮತ್ತು ತಾರಕನ ಕಡೆಯವರಾದ ದೇವರಾಕ್ಷಸರಿಗೆ ಭಯಂಕರವಾದ ಯುದ್ಧವು ಆರಂಭವಾಯಿತು. ಧನುಷ್ಟಂಕಾರವೂ, ಬಾಣಪಾತವೂ, ಅವುಗಳಿಂದ ಹೆದರಿ ಓಡುವವರೂ, ಮುಂದುವರಿಯುವವರೂ ಬಹಳವಾಗಿ ಕಾಣು ತ್ತಿದ್ದರು. ಕತ್ತಿ, ಭಿಂಡಿವಾಲ, ಮುಸಲ, ಲಾಂಗಲ ಮುಂತಾದ ಆಯುಧಗಳಿಂದ ಶತ್ರು ಮಿತ್ರ ಸೈನಿಕರು ಪರಸ್ಪರವಾಗಿ ಹೊಡೆದಾಡಲಾರಂಭಿಸಿದರು. ॥೬೧-೬೨॥

ಸುರಾಸುರರು ಬಾಣಖಡ್ಗಾದಿಗಳಿಂದ ಪರಸ್ಪರವಾಗಿ ಹೋರಾಡುತ್ತಿರುವಾಗ ಇಂದ್ರನು ತನ್ನ ಅಮಿತಬಾಣಪರಂಪರೆಗಳಿಂದ ಶೂರದೈತ್ಯರನ್ನೆಲ್ಲಾ ಹೊಡೆದೋಡಿಸಿದನು. ಹೇಮಮಾಲೀ, ಮಹಾಮಾಲೀ, ವಿದ್ಯುನ್ಮಾಲೀ, ಹಲಾಕುಲಿ ಇವರು ಅಷ್ಟವಸುಗ

ಭುಸುಂಡೀ ಚಕ್ರನಾರಾಚೈರ್ಭಲ್ಲೈಃ ಪ್ರಾಸೈಃ ಪರಶ್ವಧೈಃ ।
ಅನ್ಯೋನ್ಯಮಭಿಜಘ್ನುಸ್ತೇ ತತಸ್ತತುರುಭೌ ಶರೈಃ ॥೬೪॥

ವಿಶ್ವೇದೇವಾಸ್ತಥಾದಿತ್ಯಾ ಹೇಮಾಂಗೇನ ಸುಮನ್ಯುನಾ ।
ಯುಯುಧುಃ ಶರಧಾರಾಭಿರ್ವರ್ಷದ್ಭಿರಿತರೇತರಂ ॥೬೬॥

ಧನುರ್ಜ್ಯಾಸುರಥಾಶ್ವೇಭಸಾರಥೀಷು ಚ ದಂಸನೇ ।
ಸುಧನ್ವಾನೋ ಮನಸ್ಯೇನ ಪನಸ್ಯೇನ ಸುರಾರಿಣಾ ॥೬೭॥

ಯುಯುಧುರ್ಯೋಧಮುಖ್ಯೈಶ್ಚ ದೈತ್ಯನಾಯೋಧಸುಃ ಶರೈಃ ।
ಸಿದ್ಧಾಃ ಸಾಧ್ಯಾಃ ಸರ್ವದೇವಗಣಾಮಿಶ್ರಾಭವಂಸ್ತದಾ ॥೬೮॥

ಪ್ರಾಸಾಸಿಕುಂತಖಡ್ಗೈಶ್ಚ ಗದಾಭಿರ್ಲಗುಡೈರಪಿ ।
ಕೋಲಾಹಲಮಭೂದ್ಯುದ್ಧಂ ಸನ್ನದ್ಧಗಜವಾಜಿನಾಂ ॥೬೯॥

ರಥೀನಾಂ ಚ ಪದಾತೀನಾಂ ವರ್ಷತಾಂ ನಿಘ್ನತಾಂ ಶರೈಃ ।
ನಾಯುಸ್ಸ್ವಯೋಧನಂ ತತ್ರ ಯುಯುಧೇ ಬಾಣವರ್ಷಿಣಂ ॥೭೦॥

---

ಳೊಡನೆಯೂ, ಪಿತೃಗಣಗಳೊಡನೆಯೂ ರಥದ ಮೇಲೆ ಕುಳಿತುಕೊಂಡೇ ಘೋರ ಯುದ್ಧವನ್ನು ನಡೆಸುತ್ತಿದ್ದರು. ॥೬೩-೬೪॥

ಎರಡು ಸಂಗಡದವರೂ, ಭುಸುಂಡೀ, ಚಕ್ರ, ಬಾಣ, ಭಲ್ಲ, ಪ್ರಾಸ, ಪರಶು ಮುಂತಾದ ಆಯುಧಗಳಿಂದ ತುಮುಲಯುದ್ಧವನ್ನು ಮಾಡುತ್ತಿದ್ದರು. ಬಹು ಬಲಿಷ್ಠನಾದ ಹೇಮಾಂಗನೆಂಬ ರಕ್ಕಸನೊಡನೆ ವಿಶ್ವೇದೇವತೆಗಳು ಯುದ್ಧಕ್ಕೆ ಆರಂಭಿಸಿದರು. ॥೬೫-೬೬॥

ಧನುಸ್ಸು, ಮೌರ್ವೀ, ರಥ, ಕುದುರೆ, ಆನೆ, ಸಾರಥಿ ಇವೆಲ್ಲವುಗಳ ಸಹಾಯದಿಂದ ಸುಧನ್ವರೆಂಬ ದೇವಗಣಗಳು ಮನಸ್ಯಪನಸ್ಯರೆಂಬ ರಾಕ್ಷಸರೊಡಗೂಡಿ ಘೋರ ಯುದ್ಧಮಾಡುತ್ತಿದ್ದರು. ಅಷ್ಟರಲ್ಲಿಯೇ ಸಿದ್ಧರು, ಸಾಧ್ಯರು, ಇನ್ನೂ ಶೂರವರ್ಗದ ದೇವಗಣಗಳು, ದೈತ್ಯನಾಯಕರ ಮೇಲೆ ಎರಗಿಬರುತ್ತಾ ತಮ್ಮ ಪರಾಕ್ರಮವನ್ನು ಅವರ ಮೇಲೆ ತೋರ್ಪಡಿಸುತ್ತಾ ಮುಂದುವರಿಯುತ್ತಿದ್ದರು. ॥೬೭-೬೮॥

ಪ್ರಾಸ, ಅಸಿ, ಕುಂತೆ, ಖಡ್ಗ, ಗದೆ, ದೊಣ್ಣೆ ಇವೇಮೊದಲಾದ ಆಯುಧಗಳನ್ನು ಹಿಡಿದು ಪರಸ್ಪರವಾಗಿ ನಡೆಸುವ ಈ ದೇವಾಸುರರ ಯುದ್ಧವು, ಆನೆ,

ಯಮಃ ಕ್ರೂರಮುಖಂ ತತ್ರ ಜಘ್ನೇ ಪರ್ಜನ್ಯನಿಸ್ವನಂ ।
ನಿಋತಿರ್ದಾರುಣೇನೈವ ಯುಯೋಧ ಸಮರೇಮರೈಃ ॥೨೦॥

ಯಕ್ಷಾಧಿಪಶ್ಶೋಣಿತಾಕ್ಷಂ ಯೋಧಯಾಮಾಸ ಖಡ್ಗಧೃಕ್ ।
ಯೂಪಾಕ್ಷಂ ವರುಣಸ್ತತ್ರ ಯುಯುಧೇ ತೌ ಪತತ್ರಿಭಿಃ ॥೨೧॥

ಅಗ್ನಿಸ್ತದಾ ಪತಂಗೇನ ಯುಯುಧೇ ಶರಪಾಣಿನಾ ।
ಈಶಾನೋ ಮಂದರೇಣೈವ ಯುಯುಧೇ ಸ್ವಗಣೈಸ್ಸಹೈಃ ॥೨೨॥

ವಿಷ್ಣುಶ್ಶೂರೇಣ ಯುಯುಧೇ ಚಕ್ರಶಾರ್ಙ್ಗಚ್ಯುತೈಶ್ಶರೈಃ ।
ಸಿಂಹಾಸ್ಯಂ ಚ ಚತುರ್ವಕ್ತ್ರೋ ಯೋಧಯಾಮಾಸ ಸಾಯಕೈಃ ॥೨೪॥

ಅಹಂ ತಾರಕಮಾಯಾಂತಂ ಸ್ವಗಣೈಃ ಪರಿವಾರಿತಂ ।
ಪ್ರಾವೃಟ್‌ತೋಯದವೃಷ್ಟ್ಯೈವ ಕಿರಂತಂ ಮದ್ರಥಂ ಶರೈಃ ॥೨೫॥

---

ಕುದುರೆ, ರಥಿಕರು, ಕಾಲಾಳುಗಳು, ಬಾಣಗಳು ಇವುಗಳ ಕೋಲಾಹಲದಿಂದ ಅತ್ಯಂತ ಗಲಭೆಯುಳ್ಳದ್ದಾಯಿತು. ಈ ಮಧ್ಯೆ ವಾಯುವು ಬಾಣವೃಷ್ಟಿಯನ್ನು ಸುರಿಸುತ್ತಿರುವ ದೇವತೆಗಳ ಸಹಾಯದಿಂದ ರಾಕ್ಷಸರ ಮೇಲೆ ಯುದ್ಧಕ್ಕೆ ನಿಂತನು. ||೬-೨೦||

ಯಮನು ಮೇಘದಂತೆ ಗರ್ಜಿಸುವ ಕ್ರೂರಮುಖನೆಂಬವನನ್ನು ಯುದ್ಧದಲ್ಲಿ ನೋಯಿಸಿದನು. ಹಾಗೆಯೇ ನಿಋತಿಯು ದೇವಗಣದೊಡನೆ ರಾಕ್ಷಸರನ್ನು ಹೊಡೆದಟ್ಟಿದನು. ಕುಬೇರನು ಖಡ್ಗವನ್ನು ಹಿಡಿದು ಶೋಣಿತಾಕ್ಷನನ್ನೂ, ವರುಣನು ಬಾಣಪರಂಪರೆಗಳಿಂದ ಯೂಪಾಕ್ಷನನ್ನೂ ಹೊಡೆದು ಗಾಯಗೊಳಿಸುತ್ತಿದ್ದರು. ||೨೧-೨೨||

ಅಗ್ನಿಯು ಶರಗಳನ್ನು ಹಿಡಿದು ಪತಂಗನೊಡನೆಯೂ, ಈಶಾನನು ತನ್ನ ಗಣಗಳೊಡನೆ ಮಂದರನೊಡನೆಯೂ, ವಿಷ್ಣುವು ಚಕ್ರ, ಧನುಸ್ಸುಗಳನ್ನು ಪ್ರಯೋಗಿಸಿ ಶೂರನೊಡನೆಯೂ, ಬ್ರಹ್ಮನು ಬಾಣಗಳನ್ನು ಬಿಟ್ಟು ಸಿಂಹಾಸ್ಯನೊಡನೆಯೂ ನಿಂತು ಯುದ್ಧಮಾಡಲುಪಕ್ರಮಿಸಿದರು. ||೨೩-೨೪||

ತಾರಕಾಸುರನಾದರೋ ನನ್ನ (ಷಣ್ಮುಖನ) ರಥದ ಮೇಲೆ ಮಳೆಗಾಲದ ವೃಷ್ಟಿಧಾರೆಯಂತೆ ಬಾಣಗಳನ್ನು ಸುರಿಸುತ್ತಾ ಮೇಲೆ ಮೇಲೆ ಬರುತ್ತಿದ್ದನು. ಅಂತಹ ವೀರನನ್ನು ನೋಡಿದೊಡನೆಯೇ ನಾನೂ ಸಹ ಸಂತೋಷದಿಂದ ಉತ್ಸಾಹ

ತಮುಚ್ಛಿನಂತಾನ್ ಶರಕೋಟಿವರ್ಷೈ
ಹರ್ಷೇಣ ಯುದ್ಧೋತ್ಕಟತರ್ಷಿತೋಽಹಂ ।
ರಥಂ ತದಶ್ವಾಂಶ್ಚ ಪೃಷತ್ಕಸಂಘೈ
ರ್ನಿಷಕ್ತಮಂಭೋಧರವೃಂದವರ್ಷವತ್ ॥೭೬॥

ಸದಶ್ವಯುಕ್ತಂ ಸುಪತಾಕಕೂಬರಂ
ಸ ಸಾರಥಿಂ ತಾರಕಮೇವ ಜನ್ಯಂ ।
ಪರ್ಜನ್ಯನಾದಪ್ರತಿಮೈಃ ಸುಪುಂಖೈಃ
ಸುತೈಲಧೌತೈರಹಮುಚ್ಛಿನಂ ತದಾ ॥೭೭॥

ಸ ತಾರಕೋಽಪ್ಯೇವಮುಘೋ ಸಹಸ್ರಧಾ
ರಥಂ ಮದೀಯಂ ನಿಜಕರ್ತೃ ಸಾರಥೀನ್ ।
ಛತ್ರಂ ಧ್ವಜಂ ಮತ್ಕವಚಂ ಶರೋತ್ಕರೈ
ಸ್ತಮಪ್ಯಹಂ ಮತ್ಕರಬಾಣಲಾಘವೈಃ ॥೭೮॥

---

ಪೂರಿತನಾಗಿ ಅವನ ರಥದಮೇಲೆಯೂ, ಗಜತುರಗಗಳಮೇಲೆಯೂ, ಮೇಘವೃಷ್ಟಿ ಯಂತೆ ಬಾಣಪರಂಪರೆಯನ್ನೇ ಪ್ರಯೋಗಿಸಿದೆನು. ನಾನು ಒಟ್ಟಿನಲ್ಲಿ ಅವನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದೆನು. ॥೭೫-೭೬॥

ದಿವ್ಯವಾದ ಕುದುರೆಗಳಿಂದಲೂ, ಮೇಲ್ಭಾಗದಲ್ಲಿ ಹಾರಾಡುವ ಶ್ರೇಷ್ಠ ಪತಾಕೆ ಗಳಿಂದಲೂ, ಸಮರ್ಥನಾದ ಸಾರಥಿಯಿಂದಲೂ ಶೋಭಿಸುತ್ತಿರುವ ಆ ತಾರಕನ ರಥದ ಮೇಲೆ ನಾನು ಬಲಿಷ್ಠವಾದ ಹಿಡಿಗಳುಳ್ಳ, ಎಣ್ಣೆಯಿಂದ ಮಿರುಗುಪಡೆದಿರುವ ಕ್ರೂರ ಬಾಣಗಳನ್ನು, ಮೇಘದಂತೆ ಗರ್ಜಿಸುತ್ತಾ ಎಸೆಯಲಾರಂಭಿಸಿದೆನು. ॥೭೭॥

ತಾರಕಾಸುರನೂ ಸಹ ಅದೇರೀತಿ ಸಹಸ್ರಾರು ಬಾಣಗಳನ್ನು ನನ್ನ ರಥದ ಮೇಲೆ ಬಿಡುತ್ತಾ, ನನ್ನ ರಥಕ್ಕೂ, ಸಾರಥಿಗೂ ಪೀಡೆಯನ್ನುಂಟುಮಾಡುತ್ತಿದ್ದನು. ಮತ್ತು ನನ್ನ ಛತ್ರಿ, ಧ್ವಜ, ಕವಚ ಮುಂತಾದುವುಗಳನ್ನು ಬಾಣಧಾರೆಯಿಂದ ಕತ್ತರಿಸುತ್ತಿದ್ದನು. ಅವನನ್ನೂ ಸಹ ನಾನು ನನ್ನ ಬಾಣಘಾತದಿಂದ ಅದೇರೀತಿ ನೋಯಿಸುತ್ತಿದ್ದೆನು. ॥೭೮॥

ಸ ಶೂರಕರ್ಮಾಪಿ ಹರಿಂ ರಣಾಜಿರೇ
ಶರೋರುಧಾರಾಭಿಚಕರ್ತ ದೇಹೇ ।
ಗಾರುತ್ಮತೇ ಪಕ್ಷಯುಗೇ ಸುಪಕ್ಷಕೈಃ
ಪಲಾಶಪುಷ್ಪಾಭಸಮಾಂಸಮಂಗಂ ॥೭೯॥

ಚಕಾರ ಬಾಣೈಸ್ತಿಲಶಶ್ಚಕರ್ತ
ವಿವೃತ್ತದಂಷ್ಟ್ರೋ ಭ್ರುಕುಟೀಕೃತಾಕ್ಷಃ ।
ಸ ಚಾಪಿ ವಿಷ್ಣುಃ ಸ್ವಕರೋರುಚಕ್ರ
ಧಾರಾಭಿರ್ವಿಸ್ತಾರಿತದೈತ್ಯಮುಂಡೈಃ ॥೮೦॥

ಪದ್ಮೋರುಷಂಡಾಮವನೀಂ ರಣಸ್ಯ
ಸಕುಂಡಲಾಂ ಸನ್ಮಕುಟಾಂ ಪ್ರಚಕ್ರೇ ।
ಸ ಶಕ್ರವಾಯ್ವಾನಲಸೋಮಸೂರ್ಯಾ
ವಿಶ್ವಾಶ್ವಿಸಾಧ್ಯಾ ಋಭವಃ ಸುಧನ್ವಿನಃ ॥೮೧॥

---

ಶೂರನೆಂಬ ರಾಕ್ಷಸನೂ ಕೂಡ ವಿಷ್ಣುವಿನೊಡನೆ ಹೋರಾಡುತ್ತಾ ವಿಷ್ಣುವಿಗೆ ವಾಹನವಾಗಿದ್ದ ಗರುಡನ ಎರಡುರೆಕ್ಕೆಗಳಿಗೂ ಬಾಣಪ್ರಯೋಗಮಾಡಿ ನೋಯಿ ಸಿದನು. ಗರುಡನ ರೆಕ್ಕೆಯಿಂದ ರಕ್ತಮಾಂಸವು ಸುರಿಯುತ್ತಿದ್ದರೆ, ಅರಳಿದ ಹೂವುಗಳುಳ್ಳ ಮುತ್ತುಗದ ಮರದಂತೆ ಅದು ಕಾಣುತ್ತಿದ್ದಿತು. ಅಷ್ಟು ಭಯಂಕರ ವಾಗಿ ಗರುಡನನ್ನು ಆ ರಾಕ್ಷಸನು ಹೊಡೆದಿದ್ದನು. ॥೭೯॥

ಇದರಿಂದ ಕುಪಿತನಾದ ಮಹಾವಿಷ್ಣುವು ಶೂರನ ರಥಾಶ್ವಗಳ ಮೇಲೆ ಬಾಣಬಿಟ್ಟು ಎಳ್ಳಿನಷ್ಟು ಚಿಕ್ಕದಾಗಿ ಚೂರುಚೂರುಗಳನ್ನಾಗಿಮಾಡಿದನು. ಮತ್ತೂ ತಮ್ಮ ಕೈಯಲ್ಲಿದ್ದ ಚಕ್ರಧಾರೆಯಿಂದ ದೈತ್ಯರ ತಲೆ ಬುರುಡೆಗಳು ಕೆಳಗುರುಳುವಂತೆ ಮಾಡಿದನು. ಇದರಿಂದ ರಣರಂಗವು ಬಹುಭಯಂಕರವಾಗಿ ಕಾಣುತ್ತಿದ್ದಿತು. ॥೮೦॥

ಕಮಲಪುಷ್ಪಗಳಿಂದ ಆವೃತವಾದ ಆ ರಣಭೂಮಿಯು ಕ್ಷಣಕಾಲದಲ್ಲಿ ಕುಂಡಲ ಕಿರೀಟಗಳಿಂದ ತುಂಬಿದ್ದಾಯಿತು. ಅಂದರೆ ಶತ್ರುರುಂಡಗಳು ಅಲ್ಲಲ್ಲಿ ಬೀಳುತ್ತಿದ್ದುವು. ದೈತ್ಯರೂ ಸಹ ತಮ್ಮತಮ್ಮ ಅಸ್ತ್ರಶಸ್ತ್ರಗಳಿಂದ ಇಂದ್ರ, ವಾಯು, ಅಗ್ನಿ, ಸೂರ್ಯ, ಚಂದ್ರ, ವಿಶ್ವೇದೇವತೆಗಳು, ಅಶ್ವಿನೀಗಣಗಳು, ಸಾಧ್ಯರು, ಋಭು

ವಿಧನ್ವನೋ ವ್ಯಶ್ವರಥಾನ್ಪ್ರಚಕ್ರೇ
ಸ್ತಾನ್ ದೈತ್ಯಸಂಘಾನ್ ಪೃತನಾಸು ಬಾಣೈಃ ।
ಸಿಂಹೋರುವಕ್ತ್ರಂ ಚ ಶರೋತ್ತಮೈರ್ವಿಧಿ
ಶ್ಚಕರ್ತ ತಂ ಚಾಪಿ ಸ ದೈತ್ಯವರ್ಯಃ ॥೮೨॥

ಹಂಸಸ್ಯ ಪಕ್ಷೋರುಯುಗೇ ಸುಪಕ್ಷ್ಮೈ
ರ್ಲಲಾಟಜಾಲೇ ಮುಕುಟೇಷು ಪದ್ಮಜಂ ।
ಗಜಾ ಮಹಾಮಾತ್ರಯುತಾ ಪತಂತಿ
ನಿನಾದಯಂತೋಽಸೃಕ್ಸ್ರಗುಕ್ಷಿತಾ ತತಾ ॥೮೩॥

ಅಶ್ವಾಃ ಸ್ಖಲಂತ್ಯೇವ ಪದೇ ಪದೇ ಹತಾ
ರಥೋರುಸಂಘಾಶ್ಚ ಸುಸಾರಥೀಯುತಾಃ ।
ತತ್ರ ತ್ರಿಶೂಲನಿಪತಾ ಗಣದೈತ್ಯವರ್ಯಾಃ
ಕೂಜಂತಿ ಧಾವಂತಿ ಗದಾಭಿಪಾತನೈಃ ॥೮೪॥

---

ಗಳು ಇವರೇಮೊದಲಾದವರನ್ನು ಧನುರ್ಬಾಣರಹಿತರನ್ನಾಗಿಮಾಡಿ ಹಿಮ್ಮೆಟ್ಟಿಸಿದರು. ಅವರ ರಥ ಮತ್ತು ಅಶ್ವಗಳೂ ನಾಶವಾದುವು. ॥೮೧॥

ಇದನ್ನು ನೋಡಿದ ಬ್ರಹ್ಮನು ಹಾಗೆ ದೇವತೆಗಳನ್ನು ನೋಯಿಸಿದ ದೈತ್ಯರ ಗುಂಪನ್ನೂ ಅವರಿಗೆ ಯಜಮಾನನಾಗಿದ್ದ ಸಿಂಹಾಸ್ಯನನ್ನೂ ತನ್ನ ಬಾಣ ಪರಂಪರೆಗಳಿಂದ ನೋಯಿಸಿ ಅವರ ಧನುರ್ಬಾಣಾದಿಗಳನ್ನೂ ಕತ್ತರಿಸಿ ಹಾಕಿದನು. ॥೮೨॥

ಅದರಿಂದ ಕುಪಿತನಾದ ಸಿಂಹಾಸ್ಯನು ಬ್ರಹ್ಮನ ವಾಹನವಾದ ಹಂಸದ ಎರಡು ರೆಕ್ಕೆಗಳಿಗೂ, ಬ್ರಹ್ಮನ ಕಿರೀಟಗಳಿಗೂ ಹಣೆಗೂ ಏಟು ಬೀಳುವಂತೆ ಹೊಡೆದನು. ಆ ಏಟಿಗೆ ಅನೇಕ ಆನೆಗಳು ತಮ್ಮ ತಮ್ಮ ಮಾವಟಿಗರ ಸಮೇತ ಘೀಂಕಾರ ಮಾಡುತ್ತಾ, ರಕ್ತವನ್ನು ಕಕ್ಕುತ್ತಾ ಕೆಳಗುರುಳಿ ಸಾಯುತ್ತಿದ್ದವು. ॥೮೩॥

ಪರಸ್ಪರ ಇವರ ಏಟುಗಳಿಗೆ ಕುದುರೆಗಳು ಜಾರಿಬಿದ್ದು, ತಮ್ಮ ತಮ್ಮ ರಥಗಳೊಡನೆಯೂ, ಸಾರಥಿಗಳ ಸಮೇತವಾಗಿಯೂ ಅಲ್ಲಲ್ಲಿ ಉರುಳುತ್ತಿದ್ದುವು. ಅಷ್ಟರಲ್ಲಿ ಕುಮಾರಸ್ವಾಮಿಯ ತ್ರಿಶೂಲದ ಏಟನ್ನು ತಾಳಲಾರದೆ ದೈತ್ಯರು ದಿಕ್ಕುಗೆಟ್ಟು ಎದ್ದು, ಬಿದ್ದು ಓಡಿಹೋಗುತ್ತಿದ್ದರು. ಓಡುವಾಗಲೂ ಕುಮಾರನ ಸೈನಿಕರು ಗದೆಗಳಿಂದ ಅವರನ್ನು ಹೊಡೆದೋಡಿಸುತ್ತಿದ್ದರು. ॥೮೪॥

ನದಂತಿ ಗರ್ಜಂತ್ಯಸುರಾಃ ಸುರಾ ಸ್ತದಾ
ತಿಷ್ಠಂತಿ ವಿಷ್ಟಂಭಿತಹಸ್ತಗಾತ್ರಾಃ ।
ಯಜ್ಞೋಪವೀತಾಕೃತಿ ಚಿಚ್ಛಿದುಸ್ಸುರಾನ್
ದೈತ್ಯಾಶ್ಚ ತತ್ರೈವ ಗಣಾ ತದಾನೀಂ ॥೮೫॥

ಶರೋರುವರ್ಷೈಃ ಪ್ರಸಮೀಕ್ಷ್ಯಹರ್ಷಿತಾನ್
ಪಾನೀಯತರ್ಷಾನ್ ಪ್ರವಿಮುಕ್ತಮೂರ್ಧಜಾನ್ ।
ಸ ಪ್ರಾಸಹಸ್ತಾ ನನೃತುಃ ಕಬಂಧಾ
ವಿಚ್ಛಿನ್ನಸಂಘಾ ಅಸುರಾ ಸುರವ್ರಜಾಃ ॥೮೬॥

ಯೋಕ್ತ್ರೋರುವಕ್ತ್ರೈಶ್ಚ ವಿವೃತ್ತಜಿಹ್ವ
ನೇತ್ರಾಕ್ಷಿಭಿಃ ಸಾಸೃಗುರಕ್ಷಿತಾಶ್ವೈಃ ।
ಶುಂಡೋರುಕಾಂಡಾರದಖಂಡವಿಸ್ತೃತಾ
ಭೂರ್ಭಾತಿದೈತ್ಯಾಸುರಸಂಗರೇಸ್ತೃಶಾ (?) ॥೮೭॥

---

ಮತ್ತೊಂದು ಕಡೆ ರಾಕ್ಷಸರು ಮುಂದುವರಿದು ಕೂಗುತ್ತಾ, ಕಿರಿಚುತ್ತಾ ಬಂದು, ಕೈಗೆ ಸಿಕ್ಕಿದ ದೇವತೆಗಳನ್ನು ಹೊಡೆದು ನಿಲ್ಲಿಸುತ್ತಿದ್ದರು. ಅಂತಹ ದೇವತೆಗಳ ಎದೆಯಲ್ಲಿ ಯಜ್ಞೋಪವೀತದ ಆಕಾರದಲ್ಲಿ ಗಾಯಮಾಡಿ, ಓಡಿಹೋಗುತ್ತಿರುವ ದೇವತೆಗಳನ್ನೆಲ್ಲಾ ಅವರು ಸದೆಬಡಿಯುತ್ತಿದ್ದರು. ಹೀಗೆ ದೇವತೆಗಳೂ ಒಂದೊಂದು ವೇಳೆ ರಾಕ್ಷಸರಿಂದ ಭಂಗಪಡುತ್ತಿದ್ದರು. ॥೮೫॥

ಹಾಗೆ ಶರಪಾತದಿಂದ ಏಟು ತಿಂದು ದಿಕ್ಕೆಟ್ಟು, ತಲೆ ಕೆದರಿಕೊಂಡು ಓಡುತ್ತಿರುವ ದೇವತೆಗಳನ್ನು ನೋಡಿ ದೈತ್ಯರು ಸಂತೋಷಪಡುತ್ತಿದ್ದರು. ಹೀಗೆ ಪರಸ್ಪರ ಹೊಡೆದಾಟದಿಂದ ದೇವತೆಗಳಲ್ಲಿಯೂ, ರಾಕ್ಷಸರಲ್ಲಿಯೂ ಅನೇಕ ತಲೆಯಿಲ್ಲದ ಮುಂಡಗಳು ಕೈಯಲ್ಲಿ ಪ್ರಾಸಾದ್ಯಾಯುಧಗಳನ್ನು ಹಿಡಿದೇ ನೆಗೆದಾಡುತ್ತಿದ್ದುವು. ಅವುಗಳ ತಲೆಗಳು ಅಷ್ಟು ಕ್ರೂರವಾದ ಬಾಣಗಳಿಂದ ಖಂಡಿತವಾಗಿದ್ದುವು. ॥೮೬॥

ಕಡಿವಾಣಗಳಿಂದ ಕೂಡಿದ ಕುದುರೆಗಳು ಬಾಣಾಘಾತಕ್ಕೆ ಸಿಕ್ಕಿ ಬಾಯಿ ತೆರೆದುಕೊಂಡು, ತಮ್ಮ ಕಣ್ಣುಗಳಿಂದ ರಕ್ತವನ್ನು ಸುರಿಸಿ ಕೆಳಗೆ ಬೀಳುತ್ತಿದ್ದುವು. ಅದರಂತೆಯೇ ಆನೆಗಳೂ ಕೂಡ, ತಮ್ಮ ಸೊಂಡಿಲುಗಳು, ದಂತಗಳು ಇವುಗಳನ್ನು

ದೈತ್ಯಾ ವಾರಣಕುಂಭೇಷು ಸುಪ್ತಾಃ ಪುರ್ಯಮ್ರಧ್ದಮೂರ್ಛಿತಾಃ ।
ರಾತ್ರೌ ರತಿಪರಿಶ್ರಾಂತಾಃ ಕಾಮಿನೀನಾಂ ಕುಚೇಷ್ವಿವ ॥೮೮॥

ನದಂತಿ ಭೇರ್ಯಃ ಪಟಹೋರ್ಧ್ವಶಂಖಾ
ಮೃದಂಗಯುಕ್ತಾ ಹತಿಹಿಕ್ಕತಾಲಾಃ ।
ನೃತ್ಯಂತಿ ತತ್ರೈವ ವರಾಪ್ಸರೋಪಮಾ
ಕಬಂಧವರ್ಯಾ ರಣರಂಗಸಂಗತಾಃ ॥೮೯॥

ಪ್ರಸುಸ್ರುವುಸ್ತಾ ಅಸೃಗಾಪಗಾಸ್ತದಾ
ದುಕೂಲಮಾಲಾಸುರಮಾಂಸಪಂಕಿಲಾಃ ।
ಸುಕಚ್ಛಪಚ್ಛತ್ರಸುಚಾಮರೋರು
ಮೀನಾಸುಮಸ್ತಿಷ್ಕವಹೋರುಫೇನಾಃ ॥೯೦॥

---

ಮುರಿದುಕೊಂಡು ನೆಲದ ಮೇಲೆ ಉರುಳುತ್ತಿದ್ದುವು. ಹೀಗೆ ಆ ರಣಭೂಮಿಯೆಲ್ಲಾ ದೈತ್ಯದೇವತೆಗಳ ಪರಿವಾರದಿಂದ ಮುಚ್ಚಿ ಹೋಗುತ್ತಿದ್ದಿತು. ॥೮೭॥

ಆನೆಯ ಮೇಲೆ ಕುಳಿತಿದ್ದ ದೈತ್ಯರು ದೇವತೆಗಳ ಬಾಣಘಾತಕ್ಕೆ ಮೂರ್ಛಿತರಾಗಿ, ರಾತ್ರಿಯವೇಳೆ ಸುರತಶ್ರಮದಿಂದ ಬಳಲಿದವರು ಕಾಮಿನಿಯರ ಸ್ತನಗಳ ಮೇಲೆಯೇ ಮಲಗಿ ನಿದ್ರಿಸುವಂತೆ, ಆನೆಗಳ ಕುಂಭಸ್ಥಳದ ಮೇಲೆಯೇ ಕೈಯಿಟ್ಟು ಬಿದ್ದಿದ್ದರು. ॥೮೮॥

ಭೇರಿಗಳೂ, ತಮಟೆಗಳೂ, ಶಂಖಗಳೂ, ಘೋರ್ಗರೆಯುತ್ತಿದ್ದುವು. ಮೃದಂಗಗಳು ತಾಲಬದ್ಧವಾಗಿ ಧ್ವನಿಗೈಯುತ್ತಿದ್ದುವು. ಆಗ ತಲೆಬುರುಡೆಯಿಲ್ಲದ ಮುಂಡಗಳು ಅಪ್ಸರಸ್ತ್ರೀಯರಂತೆ ಅಲ್ಲಲ್ಲಿ ನರ್ತನಮಾಡುತ್ತಿದ್ದುವು. ರಣರಂಗವು ಆಗ ನಾಟ್ಯರಂಗವಾಗಿ ಪರಿಣಮಿಸಿತ್ತು. ॥೮೯॥

ರಣರಂಗಮಧ್ಯದಲ್ಲಿ ಒಂದು ರಕ್ತಪ್ರವಾಹವೆಂಬ ನದಿಗಳು ಹರಿಯತೊಡಗಿದವು. ಅವಕ್ಕೆ ಆ ಸತ್ತ ಸೈನಿಕರ ಪೀತಾಂಬರಾದಿಗಳೇ ದಡಗಳಂತಾದುವು. ಮಾಂಸವೇ ಕೆಸರಿನಂತಿದ್ದಿತು. ಅಲ್ಲಲ್ಲಿ ಬಿದ್ದ ಛತ್ರಿಗಳೇ ಆಮೆಗಳಂತೆ ಕಾಣುತ್ತಿದ್ದುವು. ಚಾಮರಗಳು ಎಳೆಮೀನಿನಂತಾದುವು. ಮಸ್ತಿಷ್ಕವೇ ನೊರೆಯಾಯಿತು. ॥೯೦॥

ರಥೇಭದಿವ್ಯಾಶ್ವ ಸುದೈತ್ಯದೇಹ
ದ್ವೀಪಾಸುರಾಣಾಂ ಗಣಮುಂಡಪದ್ಮಾ ।
ಅಸೃಗ್ವಹಾ ಸಾ ತಟಿನೀ ಬಭೌ ತದಾ
ಗಂಗಾ ಯಥಾ ಶಂಕರಜೂಟನಿಃಸೃತಾ ॥೯೧॥

ಸ ತಾರಕೋ ಮಚ್ಛರಘಾತಪೀಡಿತಃ
ಪಪಾತ ಭೂಮೌ ವಿರಥೋ ಹತಾಶ್ವಃ ।
ತದಾ ಮಯಾ ಪಾಶುಪತಾಸ್ತ್ರಧರ್ಷಿತೋ
ವರ್ಷಂತಿ ದೇವಾಃ ಕುಸುಮೋತ್ಕರಂ ಮಯಿ ॥೯೨॥

ಸ ಶೂರಮಾಜೌ ಸ ಹರಿರ್ವಿಜಿತ್ಯ
ನಿಹತ್ಯ ದೈತ್ಯಾನ್ ಪರಿದಧ್ಮೌರಬ್ಜಾನ್ ।
ಸುರಾಃ ಪ್ರಹರ್ಷೋತ್ಥಿತವರ್ಷತಸ್ಸೈರ್
ಸ್ತದಾ ಮುದಂ ಸಂಸ್ತವನೈರ್ವಚೋಭಿಃ ॥೯೩॥

---

ರಥಗಳೂ ಆನೆಗಳೂ ಆ ರಕ್ತನದಿಯ ಮಧ್ಯದಲ್ಲಿ ವಿಹಾರಸ್ಥಾನಗಳಾದುವು. ದೈತ್ಯರ ಶರೀರವೇ ನಡುಗಡ್ಡೆಯಂತಾಯಿತು. ಮುಂಡಗಳು ಪದ್ಮಗಳಂತೆ ಕಂಗೊಳಿಸಿದುವು. ಶಂಕರನ ಜಟಾಜೂಟದಿಂದ ಭೋರ್ಗರೆಯುತ್ತಾ ಬರುವ ಗಂಗಾಪ್ರವಾಹದಂತೆ ರಕ್ತಪ್ರವಾಹವು ರಣರಂಗದಲ್ಲಿ ವೇಗವಾಗಿ ಹರಿಯತೊಡಗಿತು. ॥೯೧॥

ಇಷ್ಟೆಲ್ಲಾ ಕೋಲಾಹಲವಾದುದನ್ನು ನೋಡಿ ನಾನು (ಕುಮಾರಸ್ವಾಮಿಯು) ಪಾಶುಪತಾಸ್ತ್ರವನ್ನು ತಾರಕಾಸುರನ ಮೇಲೆ ಪ್ರಯೋಗಿಸಿದೆನು. ಅದು ವೇಗದಿಂದ ಪ್ರಸರಿಸಿ ತಾರಕನ ರಥವನ್ನೂ, ಕುದುರೆಯನ್ನೂ ಕೆಡವಿ ತಾರಕನನ್ನು ಕೊಂದು ಭೂಮಿಗುರುಳಿಸಿತು. ಆಗ ದೇವತೆಗಳು ಸಂತೋಷಪಟ್ಟು ನನ್ನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ॥೯೨॥

ವಿಷ್ಣುವೂ ಸಹ ಶೂರನೆಂಬ ರಾಕ್ಷಸವೀರನನ್ನು ಕೊಂದು, ಅವನ ಪಕ್ಷೀಯರಾದ ರಾಕ್ಷಸರನ್ನೆಲ್ಲಾ ಧ್ವಂಸಗೊಳಿಸಿ ಶಂಖಧ್ವನಿಮಾಡಿದನು. ಆದರಿಂದ ದೇವತೆಗಳೆಲ್ಲರೂ ಸಂತೋಷಪಟ್ಟು ಪುಷ್ಪವೃಷ್ಟಿಯಿಂದಲೂ, ವಿಷ್ಣುಸ್ತುತಿಯಿಂದಲೂ ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದರು. ॥೯೩॥

ವಿಧಿಸ್ತದಾ ಸಿಂಹಮುಖಂ ನಿಹತ್ಯ
ವಿಹೃತ್ಯ ಚಾಜೌ ಶರಜಾಲವರ್ಷಣೈಃ ।
ರಣಾವನೌ ಮಾಂ ಪರಿಷಸ್ವಜೇ ಮುದಾ
ಕುಮಾರ ಸೇನಾಪತಿರದ್ಯ ನಸ್ತ್ವಮ್ ॥೯೪॥

ಅವೋಚದಿತ್ಥಂ ಸಹರಿಸ್ಸಶಕ್ರಃ
ಸುರಾಸ್ತದಾ ಭೂಸುರವರ್ಯಸಂಘಾಃ ।
ಮುದಾ ಜಯಸ್ವೇತಿ ವಚಸ್ತದೋಚುಃ
ಶಾಂತಾಸ್ತಥಾ ಸನ್ಮುದಿತಾಶ್ಚ ಲೋಕಾಃ ॥೯೫॥

॥ ಶ್ರೀ ಸ್ಕಂದ ಉವಾಚ ॥

ನ ಚಿತ್ರಮೇತಚ್ಚ ತ್ರಿನೇತ್ರಮಿತ್ರ
ಪಾದಾಂಬುಜಸ್ಯಾತುಲಭಕ್ತಿವೈಭವಾತ್ ।
ಜನ್ಯೇಷು ಧನ್ಯಂ ಕಿಲ ಜೈತ್ರಭಾವಂ
ಸಾಮಾನ್ಯಮನ್ಯಂ ನ ಹಿ ರೋಚತೇ ಮೇ ॥೯೬॥

---

ಬ್ರಹ್ಮನೂ ಕೂಡ ಸಿಂಹಾಸ್ಯನನ್ನು ತನ್ನ ಬಾಣಜಾಲಗಳಿಂದ ಕೊಂದು ಆವನ ಪಕ್ಷದ ರಾಕ್ಷಸರನ್ನೆಲ್ಲಾ ಸದೆಬಡಿದಟ್ಟಿದನು. ಅಷ್ಟಾದ ಮೇಲೆ ಬ್ರಹ್ಮನು ಸಂತೋಷದಿಂದ ನಾನಿದ್ದಲ್ಲಿಗೆ ಬಂದು 'ಕುಮಾರಸ್ವಾಮಿಯೇ, ಈಗ ನೀನೇ ನಮಗೂ ನಮ್ಮ ಸೈನ್ಯಕ್ಕೂ ಅಧಿಪತಿಯು. ನಮ್ಮನ್ನು ಸಲಹು' ಎಂದು ಹೇಳಿ ನನ್ನನ್ನು ಆಲಿಂಗಿಸಿಕೊಂಡನು. ॥೯೪॥

ಹೀಗೆ ವಿಷ್ಣು, ಇಂದ್ರ, ದೇವತೆಗಳು, ಬ್ರಾಹ್ಮಣರು, ಇನ್ನೂ ಇತರ ದೇಶೀಯರು ಎಲ್ಲರೂ ಆನಂದಗೊಂಡು, ಕುಮಾರಸ್ವಾಮಿಯೇ, ಜಯಶೀಲನಾಗು ಎಂದು ಕೂಗುತ್ತಾ ಶಾಂತಸ್ವಭಾವದವರಾಗಿ ಜಯಧ್ವನಿಗೈಯ್ಯುತ್ತಿದ್ದರು. ॥೯೫॥

ಆಗ ಕುಮಾರಸ್ವಾಮಿಯು ತಾನು ಗೆದ್ದುದು ಅಂತಹ ಆಶ್ಚರ್ಯಕಾರ್ಯವಲ್ಲವೆಂದೂ, ಪರಮೇಶ್ವರನ ಪಾದಕಮಲದಲ್ಲಿ ಸ್ಥಿರಬುದ್ಧಿಯುಳ್ಳವರಿಗೆ ಎಂದೂ ಜಯವು ಸಿದ್ಧವಾದುದೆಂದೂ, ಯುದ್ಧದಲ್ಲಿ ಜಯಶೀಲತ್ವವನ್ನು ಒದಗಿಸುವುದೆಂದರೆ ಶಿವಭಕ್ತಿಯೊಂದೇ ಎಂದೂ ನುಡಿದನು. ಮತ್ತು ತಾನು ಅಂತಹ ಶಿವಭಕ್ತಿಯನ್ನು ಬಿಟ್ಟು

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ತಾರಕಾಸುರ ಸಂಗ್ರಾಮವರ್ಣನೇ ತಾರಕಾಸುರಸಂಹಾರಂ
ನಾಮ ದ್ವಾವಿಂಶೋಽಧ್ಯಾಯಃ

---

ಮತ್ತಾವ ವಸ್ತುವನ್ನೂ ಯಾವಾಗಲೂ ಅಪೇಕ್ಷಿಸುವುದಿಲ್ಲವೆಂದೂ ಪ್ರತಿಜ್ಞೆಮಾಡಿದನು. ಇದೇ ವಿಷಯವನ್ನು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ವಿವರಿಸಿ ಹೇಳಿದನೆಂದು ಸೂತಮಹರ್ಷಿಗಳು ಮುನಿವೃಂದಕ್ಕೆ ಕುಮಾರೋಕ್ತಿಯನ್ನು ಸ್ಪಷ್ಟಪಡಿಸಿ ನುಡಿದರು. ||೯೬||

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ಶಿವಗೌರೀಸಂವಾದರೂಪವಾಗಿ
ತಾರಕಾಸುರಸಂಹಾರದ ಕಥೆಯನ್ನು ವಿವರಿಸುವ ಇಪ್ಪತ್ತೆರಡನೆಯ ಅಧ್ಯಾಯವು
ಸಮಾಪ್ತವಾದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ತ್ರಯೋವಿಂಶೋಽಧ್ಯಾಯಃ

॥ ಸೂತ ಉವಾಚ ॥

ಸುರಾಃ ಶಕ್ರಾದಯಸ್ತತ್ರ ಬ್ರಹ್ಮವಿಷ್ಣ್ವಾದಿಭಿಃ ಸಹ ।
ಋಷಿಭಿಃ ಸಾಧ್ಯಗಂಧರ್ವೈರಪ್ಸರೋಭಿಸ್ತದಾ ಮುದಾ ॥೧॥

ತಾರಕೇ ನಾಶಮಾಯಾತೇ ಸ ಗಣೇ ತತ್ರ ಸಂಗತಾಃ ।
ಪ್ರಹೃಷ್ಟಾಸ್ತುಷ್ಟುವುಸ್ತತ್ರ ತ್ರಿವಿಷ್ಟಪನಿವಾಸಿನಃ ॥೨॥

ಪ್ರಣಮ್ಯ ಸ್ಕಂದಮುವ್ಯಗ್ರಾಃ ಶಕ್ತಿಹಸ್ತಂ ತದಾ ಸುರಾಃ ।
ನಂದನೋತ್ಥಸುಮೈರ್ದೇವಾಶ್ಚಂಪನ್ಯೈರ್ವರಗಂಧಿಭಿಃ ॥೩॥

---

## ಇಪ್ಪತ್ತ ಮೂರನೆಯ ಅಧ್ಯಾಯ

ಎಲೈ ಮುನಿಪುಂಗವರೇ, ಈ ರೀತಿ ತಾರಕಾಸುರನು ತನ್ನ ಪರಿವಾರದೊಂದಿಗೆ ಮೃತನಾಗಲು ಆಗ ಇಂದ್ರನೇ ಮೊದಲಾದ ದೇವತೆಗಳು, ಬ್ರಹ್ಮ, ವಿಷ್ಣು, ಈಶಾನ ಮೊದಲಾದವರೊಂದಿಗೂ ಮತ್ತು ಋಷಿಗಳು, ಸಾಧ್ಯರು, ಗಂಧರ್ವರು, ಅಪ್ಸರ ಸ್ತ್ರೀಯರು ಇವರಿಂದೊಡಗೂಡಿ ಕುಮಾರಸ್ವಾಮಿಯ ಬಳಿಗೆ ಹೋಗಿ ಅವನನ್ನೂ ನಾನಾಬಗೆಯಿಂದ ಸ್ತುತಿಸಿದನು. ॥೧-೨॥

ಆ ಇಂದ್ರಾದಿ ದೇವತೆಗಳು, ಶಕ್ತಿಸಮೇತನಾದ ಕುಮಾರನನ್ನು ವಂದಿಸಿ ನಂದನವನದಲ್ಲಿ ಬೆಳದ ಸುವಾಸನೆಯಿಂದ ಕೂಡಿದ ಪುಷ್ಪಗಳಿಂದಲೂ, ರತ್ನಖಚಿತ

ರತ್ನಾಭರಣಜಾಲೈಶ್ಚ ಕೇಯೂರಮುಕುಟಾಂಗದೈಃ ।
ಸುವರ್ಣಮುಕ್ತಾಜಾಲೈಶ್ಚ ವಿಕಿರಂತಿ ಸುರಾಸುರಾಃ ॥೪॥

ಪಟ್ಟಾಂಬರೈಃ ಸಮಭ್ಯರ್ಚ್ಯ ಮುದಾ ದೇವಾಃ ಸವಾಸವಾಃ ।
ಪ್ರಣಮ್ಯ ನಾಮಭಿಃ ಸ್ಕಂದಂ ಸಂಪೂಜ್ಯ ಸುರಸತ್ತಮಾಃ ॥೫॥

॥ ದೇವಾ ಊಚುಃ ॥

ಸುಬ್ರಹ್ಮಣ್ಯಾಯ ಮಹತೇ ಬ್ರಹ್ಮಣ್ಯಪತಯೇ ನಮಃ ।
ಉಮಾಸುತಾಯ ದಿವ್ಯಾಯ ಅಗ್ನಿವರ್ಧಾಯ ತೇ ನಮಃ ॥೬॥

ಕಾರ್ತಿಕೇಯಾಯ ವನ್ಯಾಯ ತಾರಕಾಂತಕರಾಯ ತೇ ।
ವಲ್ಲೀಸೇನಾಸಮೇತಾಯ ಸರ್ವವೇದಸ್ತುತಾಯ ಚ ॥೭॥

ಕುಮಾರಾಯ ಹರಾಯಾಥ ವೀರಬಾಹುನತಾಯ ಚ ।
ಅಂಬಿಕಾತನಯಾಯೈವ ಪ್ರಸನ್ನಾಸ್ಯಾಯ ತೇ ನಮಃ ॥೮॥

ಷಡಾನನಾಯ ತೇ ಧಾಮ್ನೇ ವೇದಸೀಮ್ನೇ ನಮೋ ನಮಃ ।
ಶಿವಪ್ರಿಯಾಯ ಶಾಂತಾಯ ಗುಹಾಯ ಮಾಥನಾಯ ಚ ॥೯॥

---

ವಾದ ಆಭರಣಗಳಿಂದಲೂ, ಕಿರೀಟಗಳಿಂದಲೂ ಮುಕ್ತಾಹಾರಗಳಿಂದಲೂ ಮತ್ತು ಪಟ್ಟವಸ್ತ್ರಗಳಿಂದಲೂ ಅರ್ಚಿಸಿ ನಾಮಗಳನ್ನು ಉಚ್ಚರಿಸುತ್ತಾ ಹೀಗೆಂದು ಸ್ತುತಿಸಿದರು. ॥೩-೪-೫॥

ಸುಬ್ರಹ್ಮಣ್ಯನೆಂಬ ನಾಮದಿಂದ ಶೋಭಿಸುವವನೂ, ಪೂಜ್ಯನೂ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ, ಗೌರೀಪುತ್ರನೂ, ಲೋಕೋತ್ತರನೂ, ಅಗ್ನಿಯಂತೇ ಶೋಭಿಸುವವನೂ, ಕೃತ್ತಿಕೆಯರ ಸುತನೂ, ಶರವಣದಲ್ಲಿ ಜನ್ಮವನ್ನು ತಾಳಿದವನೂ, ತಾರಕಾಸುರನ ಸಂಹಾರಕನೂ, ವಲ್ಲೀ ಮತ್ತು ದೇವಸೇನೆಯೆಂಬ ಈರ್ವರು ಪತ್ನಿಯರಿಂದ ಸಮ್ಮತನೂ, ಸಕಲ ವೇದಗಳಿಂದ ಸ್ತುತಿಸಲ್ಪಡುವವನೂ, ಪಾರ್ವತೀಪರಮೇಶ್ವರರ ಕುಮಾರನೂ, ಈಶ್ವರಸ್ವರೂಪನೂ, ಇಂದ್ರನಿಂದ ನಮಸ್ಕರಿಸಲ್ಪಡುವವನೂ, ಅಂಬಿಕಾಪುತ್ರನೂ, ಪ್ರಸನ್ನವಾದ ಮುಖಮುದ್ರೆಯುಳ್ಳವನೂ ಆದ ನಿನಗೆ ನಮಸ್ಕಾರವು. ॥೬-೭-೮॥

ಪ್ರಣವಾರ್ಥಾಯ ಸಾರಾಯ ಜಗತಾಂ ಪಾಲಕಾಯ ಚ ।
ಸೇನಾನಯೇ ನಮಸ್ತುಭ್ಯಂ ಶಕ್ತಿಹಸ್ತಾಯ ರಂಹಸೇ ॥೧೦॥

ಗೋಪ್ತ್ರೇ ಧಾತ್ರೇ ವಿಧಾತ್ರೇ ಚ ಸರ್ಗಸ್ಥಿತ್ಯಂತಹೇತವೇ ।
ಹಿರಣ್ಯಕವಚಾಯಾಥ ಶರಕಾರ್ಮುಕಧಾರಿಣೇ ॥೧೧॥

ಮಹಾಪಾಶುಪತಾಸ್ತ್ರಾಗ್ನಿ ದಗ್ಧದೈತ್ಯಾಯ ತೇ ನಮಃ ।
ಗಂಗಾಗರ್ಭಾಯ ಮಹತೇ ಕೃತ್ತಿಕಾಸೂನವೇ ನಮಃ ॥೧೨॥

ಉಮಾಗರ್ಭಾಯ ಕಾಂತಾಯ ತಾರಾಯ ತಾರಣಾಯ ಚ ।
ಕನಕಾಂಗದಕೇಯೂರಮುಕುಟಾಲಂಕೃತಾಯ ಚ ॥೧೩॥

ಷೋಡಶಸ್ವರವಕ್ತ್ರಾಯ ಪಾತ್ರಾಯಾಕ್ಷರರೂಪಿಣೇ ।
ವಿನಾಯಕಾನುಜಾಯಾಥ ಸುರಸೈನ್ಯಾನ್ವಿತೇ ನಮಃ ॥೧೪॥

---

ದೇವ! ಆರು ಮುಖಗಳಿಂದ ಶೋಭಿಸುವವನೂ, ತೇಜೋಮಯನೂ, ವೇದಾಂತ ವೇದ್ಯನೂ, ಈಶ್ವರನಿಗೆ ಪ್ರಿಯನೂ, ಶಾಂತಮೂರ್ತಿಯೂ, ಅಜ್ಞಾನ ನಾಶಕನೂ, ಶತ್ರುಸಂಹಾರಕನೂ, ಓಂಕಾರಕ್ಕೆ ಆಲಂಬನನೂ, ವೇದಾಂತಗಳಿಗೆ ಸಾರಭೂತನೂ, ಜಗದ್ರಕ್ಷಕನೂ, ದೇವತೆಗಳ ಸೇನೆಗೆ ಅಧಿಪತಿಯೂ, ಶಕ್ತಿದೇವತೆ ಯಿಂದ ಸಮೇತನೂ, ವೇಗಶಾಲಿಯೂ, ಶರಣಾಗತರಕ್ಷಕನೂ, ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣನೂ ಆದ ನಿನಗೆ ನಮಸ್ಕಾರ. ಸುವರ್ಣಖಚಿತವಾದ ಕವಚವನ್ನು ಧರಿಸಿರುವವನೂ, ಧನುರ್ಬಾಣಧಾರಿಯೂ ಆದ ನಿನ್ನನ್ನು ವಂದಿಸು ವೆನು. ॥೯-೧೦-೧೧॥

ಓ ಪ್ರಭುವೇ! ನೀನು, ಮಹಾಪಾಶುಪತಾಸ್ತ್ರದಿಂದ ಉಂಟಾದ ಅಗ್ನಿ ಯಿಂದಲೇ ದೈತ್ಯರನ್ನು ದಹಿಸಿದೆಯಲ್ಲವೇ? ಗಂಗಾದೇವಿಯ ಉದರದಲ್ಲಿ ಗರ್ಭಾ ವಸ್ಥೆಯಲ್ಲಿದ್ದವನೇ ಮನೋಹರನೂ, ಕೃತ್ತಿಕಾಪುತ್ರನೂ, ಸಂಸಾರಸಾಗರವನ್ನು ದಾಟಿದವನೂ ಮತ್ತು ದಾಟಿಸುವವನೂ, ಸುವರ್ಣಖಚಿತವಾದ ಅಂಗದ, ಕೇಯೂರ, ಕಿರೀಟ ಮುಂತಾದ ಆಭರಣಗಳಿಂದ ಅಲಂಕೃತನೂ, ಅಕಾರಾದಿ ಷೋಡಶಸ್ವರಗಳಲ್ಲಿ ಮೊದಲನೆಯದಾದ ಅಕಾರದ ಸ್ವರೂಪದಿಂದಿರುವವನೂ, ನಮಸ್ಕಾರಾರ್ಹನೂ, ನಾಶರಹಿತನೂ, ವಿನಾಯಕನ ಅನುಜನೂ, ದೇವಸೇನೆಯಿಂದ ಸಮೇತನೂ ಆದ ನಿನಗೆ ನಮಸ್ಕರಿಸುವೆನು. ॥೧೨-೧೩-೧೪॥

ಕಂದರ್ಪಕೋಟಿಲಾವಣ್ಯದೇಹಾಯ ಪರಮಾತ್ಮನೇ ।
ಪಕ್ಷಿಪಕ್ಷಧರಾಯಾಥ ಹೇಮವರ್ಣಾಯ ತೇ ನಮಃ ॥೧೫॥

ಗಂಧರ್ವಗಣಗೀತಾಯ ಶಂಬರಾಯ ಸ್ತುತಾಯ ಚ ।
ವಿಶಾಲವಕ್ಷಸೇ ಪಾತ್ರೇ ಸರ್ವವೇದಸ್ತುತಾಯ ಚ ॥೧೬॥

ಮಖೇಡಿತಾಯ ನಿತ್ಯಾಯ ಸತ್ಯಾಯ ಪ್ರಥಿತಾಯ ಚ ।
ಷಷ್ಠೀ ಪ್ರಿಯಾಯ ವಾತ್ಯಾಯ ರಭಸಾಯ ಗಣಾಯ ಚ ॥೧೭॥

ನತಪ್ರಿಯಾಯ ಮಾನ್ಯಾಯ ಸರ್ವಯಜ್ಞಸುತಾಯ ಚ ।
ಓಜಸೇ ತೇಜಸೇ ಚೈವ ವರೇಣ್ಯಾಯ ಗದಾಭೃತೇ ॥೧೮॥

ಗಿರಿವಾಸಾಯ ತುಷ್ಟಾಯ ಪುಷ್ಟಾಯ ಬಲಶಾಲಿನೇ ।
ಕೇಕೀವಾಹಾಯ ದಾಂತಾಯ ನಮಃ ಕುಕ್ಕುಟಕೇತವೇ ॥೧೯॥

---

ದೇವ! ಈ ನಿನ್ನ ದೇಹಕಾಂತಿಯು, ಕೋಟಿ ಮನ್ಮಥರ ದೇಹಕಾಂತಿಯಂತೆ ಬೆಳಗುತ್ತಿರುವುದಲ್ಲವೇ! ಪರಮಾತ್ಮ! ನವಿಲುಗರಿಯನ್ನು ಧರಿಸಿರುವವನೂ, ಸುವರ್ಣದ ಕಾಂತಿಯಂತೆ ಪ್ರಕಾಶಿಸುವ ದೇಹಕಾಂತಿಯುಳ್ಳವನೂ, ಗಂಧರ್ವರಿಂದ ಸ್ತುತಿಸಲ್ಪಡುವವನೂ, ಜಲಸ್ವರೂಪನೂ, ವಿಶಾಲವಾದ ವಕ್ಷಃಸ್ಥಲವುಳ್ಳವನೂ, ಶರಣಾಗತರಕ್ಷಕನೂ, ಸಕಲವೇದಗಳಿಂದ ಸ್ತುತಿಸಲ್ಪಟ್ಟವನೂ, ಯಾಗಾದಿಗಳಲ್ಲಿ ಪೂಜಿತನಾದವನೂ, ನಿತ್ಯನೂ, ಸತ್ಯಸ್ವರೂಪನೂ, ಕೀರ್ತಿಶಾಲಿಯೂ, ಷಷ್ಠೀತಿಥಿಯಲ್ಲಿ ವಿಶೇಷವಾಗಿ ಪೂಜ್ಯನೂ, ವಾಯುವೇಗವುಳ್ಳವನೂ, ಪ್ರಮಥಗಣಗಳಲ್ಲೊಬ್ಬನೂ ಆದ ನಿನ್ನನ್ನು ವಂದಿಸುವೆನು. ॥೧೫-೧೬-೧೭॥

ದೇವ, ನೀನು ನಿನ್ನನ್ನು ವಂದಿಸುವ ಜನರಿಗೆ ಅತ್ಯಂತ ಪ್ರಿಯನೂ, ಮನ್ನಣೆಗೆ ಯೋಗ್ಯನೂ, ಸಕಲ ಯಜ್ಞಗಳಲ್ಲಿ ಸ್ತುತಿಸಲ್ಪಡುವವನೂ, ಬಲಸ್ವರೂಪನೂ, ತೇಜೋಮಯನೂ, ಉತ್ತಮನೂ, ಗದಾಧಾರಿಯೂ, ಪರ್ವತದಲ್ಲಿ ವಾಸವಾಗಿರುವವನೂ, ನಿತ್ಯತೃಪ್ತನೂ, ಷಡ್ಗುಣೈಶ್ವರ್ಯಸಂಪನ್ನನೂ ಬಲಿಷ್ಠನೂ, ಮಯೂರವಾಹನನೂ, ಬಹಿರಿಂದ್ರಿಯನಿಗ್ರಹವುಳ್ಳವನೂ, ಕುಕ್ಕುಟಧ್ವಜನೂ ಆಗಿರುವೆ. ಅಂತಹ ನಿನ್ನನ್ನು ವಂದಿಸುವೆನು. ॥೧೮-೧೯॥

ಶರಕಾಂಡಭವಾಯಾಥ ಮಹತೇಽಣೀಯಸೇ ನಮಃ ।
ಸನಾತನಾಯ ವ್ಯೋಮಾಯ ಶಿವಜ್ಞಾನಪ್ರದಾಯಿನೇ ॥೨೦॥

ಶತಪುಷ್ಕರಮಾಲಾಯ ಶಕ್ರಪಾಲಾಯ ತೇ ನಮಃ ।
ತ್ವಯೈವ ಪಾಲಿತಾ ಲೋಕಾಸ್ತ್ವಯಾ ಸೃಷ್ಟಾಶ್ಚರಾಚರಾಃ ॥೨೧॥

ತಾರಕಾರ್ತಿಂ ವಿನಾಶ್ಯೈವ ದೇವಾಶ್ಚೇಮೇ ಸುಪಾಲಿತಾಃ ।
ತ್ವಂ ಯಜ್ಞಸ್ತ್ವಂ ಸ್ವಧಾ ಸ್ವಾಹಾ ತ್ವಯಾ ವರ್ಣಾಶ್ರಮಾಶಿಲಾಃ॥೨೨॥

ಪಾಲಿತಾ ಮುನಯೋ ಯಜ್ಞೈರ್ಯಜಂತ್ಯದ್ಯ ಸುಖೇನ ಹಿ ।
ಗ್ರಹಾ ನಿತ್ಯಂ ಪ್ರಮೋದಂತೇ ಋಕ್ಷೈಃ ಋಷಿಗಣೈಶ್ಚ ಖೇ ॥೨೩॥

ಶಕ್ರಸ್ತ್ರಿವಿಷ್ಟಪಪತಿರದ್ಯಾಭೂತ್ತ್ವತ್ಕೃಪಾವಶಾತ್ ।
ಅಗ್ನಿರ್ವಹತಿ ಹವ್ಯಾನಿ ಕವ್ಯಾನಿ ಪಿತೃಣಾಂ ಮುದೇ ॥೨೪॥

---

ಶರಮಧ್ಯದಲ್ಲಿ ಜನ್ಮವನ್ನು ತಾಳಿದವನೂ, ಪೂಜ್ಯನೂ, ದುರ್ವಿಜ್ಞೇಯನೂ, ಅನಾದಿಪುರುಷನೂ, ವ್ಯಾಪಕನೂ, ನಿರ್ಮಲವಾದ ಜ್ಞಾನವನ್ನು ದಯಪಾಲಿಸುವವನೂ, ಶತಕಮಲಗಳಿಂದ ರಚಿಸಿದ ಮಾಲೆಯನ್ನು ಧರಿಸಿದವನೂ, ಇಂದ್ರನನ್ನು ರಕ್ಷಿಸಿದವನೂ ಆದ ನಿನಗೆ ನಮಸ್ಕಾರವು. ಓ! ಜಗನ್ನಾಥನೇ! ನೀನು, ಚತುರ್ದಶ ಭುವನಗಳನ್ನೂ ರಕ್ಷಿಸಿರುವೆ. ಈ ಚರಾಚರರಾಶಿಗಳನ್ನು ಸೃಷ್ಟಿಸಿರುವವನೂ ನೀನೇ ಆಗಿರುವೆ. ॥೨೦-೨೧॥

ಓ ಪ್ರಭುವೇ, ಲೋಕರಕ್ಷಕನಾದ ನೀನು ತಾರಕಾಸುರನಿಂದುಂಟಾದ ವ್ಯಥೆಯನ್ನು ಹೋಗಲಾಡಿಸಿ ಈ ದೇವತೆಗಳನ್ನೂ ರಕ್ಷಿಸಿದೆ. ದೇವಯಜ್ಞಸ್ವರೂಪನೂ, ಋಷಿಯಜ್ಞಸ್ವರೂಪನೂ, ಪಿತೃಯಜ್ಞಸ್ವರೂಪನೂ ನೀನಾಗಿರುವೆ. ಮುನಿಗಳೆಲ್ಲರೂ ನಿನ್ನಿಂದ ರಕ್ಷಿತರಾಗಿಯೇ ಇದೀಗ ನಿರಾತಂಕವಾಗಿ ತಮ್ಮ ತಮ್ಮ ಯಜ್ಞಯಾಗಾದಿ ಕಾರ್ಯಗಳಲ್ಲಿ ಆಸಕ್ತರಾಗಿರುವರಲ್ಲವೇ! ಮತ್ತು ನಿನ್ನ ಸಹಾಯದಿಂದಲೇ ಸೂರ್ಯಚಂದ್ರಾದಿ ಗ್ರಹಗಳು, ನಕ್ಷತ್ರಗಳಿಂದಲೂ ಮತ್ತು ಸಪ್ತರ್ಷಿಗಳಿಂದಲೂ ಸಮೇತರಾಗಿ ಅಂತರಿಕ್ಷದಲ್ಲಿ ಹರ್ಷದಿಂದ ಇರುವುವಲ್ಲವೇ! ॥೨೨-೨೩॥

ನಿನ್ನ ಅನುಗ್ರಹದಿಂದ ಇದೀಗ ಇಂದ್ರನು ಸ್ವರ್ಗಲೋಕಕ್ಕೆ ಅಧಿಪತಿಯಾಗಿರುವನು. ಅಗ್ನಿಯು ಸಂತೋಷದಿಂದ, ಪಿತೃಗಳಿಗೆ ಹವ್ಯಕವ್ಯಗಳನ್ನು ಸಸಲ್ಲಿ

ಲೋಕಾ ನಿರರ್ಗಲಂ ಸೌಖ್ಯಂ ಭಜಂತಿ ತವ ವಿಕ್ರಮೈಃ ।
ತ್ರಿವಿಕ್ರಮೋಽಯಂ ವೈಕುಂಠಂ ಪಾತಿ ಸರ್ವಂ ಚರಾಚರಂ ॥೨೫॥

ಬ್ರಹ್ಮಾಪಿ ತನಯೈರ್ದೇವಸೃಷ್ಟಿಂ ವಿತನುತೇಽಖಿಲಾಂ ।
ಸಮುದ್ರಾಶ್ಚ ತಥಾ ನದ್ಯೋ ನೋದ್ವೇಲಂ ಸ್ಪಂದತಾಂ ಶುಭಾಃ ॥೨೬॥

ವಾಯುಃ ಸೌಮ್ಯೇನ ವಪುಷಾ ವಾತಿ ನಿತ್ಯಂ ಸುಖೇನ ಹಿ ।
ಸೋಮೋ ಋಕ್ಷೈರ್ಭ್ರಾಜತೇ ಖೇ ತವಾದ್ಯ ವಿಜಯೋದಯೇ॥೨೭॥

ಅರ್ಕೋಽಯಂ ಭಾತಿ ಕಿರಣೈಸ್ತವ ವಿಕ್ರಮತೋಷಿತಃ ।
ಯಥಾಪೂರ್ವಂ ಸ್ಥಿತಾ ಲೋಕಾ ತ್ವಯಾತ್ರ ನಿಹತೇಽಸುರೇ ॥೨೮॥

ಸಗಣೇ ಸುರತಾ ಹೃಷ್ಟಾ ಜಾತಹರ್ಷಾ ಭವಾರ್ಚನೇ ।
ಸೇನಾಪತಿಸ್ತ್ವಂ ದೇವಾನಾಂ ಭುಜಂಗೇನಾಥ ತುಷ್ಟುವುಃ ॥೨೯॥

---

ತ್ತಿರುವನು. ನಿನ್ನ ಪ್ರಭಾವದಿಂದಲೇ ಜನರು ಯಾವ ತೊಂದರೆಯೂ ಇಲ್ಲದೆ ಸುಖದಿಂದಿರುವರು. ವಾಮನಾವತಾರಿಯಾದ ಈ ವಿಷ್ಣುವೂ ಸಹ, ನಿರಾತಂಕವಾಗಿ ಚರಾಚರಗಳಿಂದ ಯುಕ್ತವಾದ ವೈಕುಂಠವನ್ನು ರಕ್ಷಿಸುತ್ತಿರುವನು. ॥೨೪-೨೫॥

ಬ್ರಹ್ಮನೂ ಕೂಡ ಪುತ್ರಸಮೇತನಾಗಿ ದೇವತೆಗಳ ಸೃಷ್ಟಿಯನ್ನು ಸಂಪೂರ್ಣಗೊಳಿಸುತ್ತಿರುವನು. ಸಮುದ್ರಗಳೂ ಮತ್ತು ನದಿಗಳು ತಮ್ಮ ತಮ್ಮ ದಡವನ್ನು ಅತಿಕ್ರಮಿಸುವುದಿಲ್ಲ. ॥೨೬॥

ನೀನು ಜಯಶಾಲಿಯಾಗಲು ಇದೀಗ ವಾಯುವು, ಸೌಮ್ಯವಾದ ಶರೀರವನ್ನು ಧರಿಸಿ ಸುಖವಾಗಿ ಸಂಚರಿಸುತ್ತಿರುವನು. ಚಂದ್ರನು ನಕ್ಷತ್ರಗಳಿಂದೊಡಗೂಡಿ ಆಕಾಶದಲ್ಲಿ ರಾರಾಜಿಸುತ್ತಿರುವನು. ॥೨೭॥

ಈ ಸೂರ್ಯನು ನಿನ್ನ ಪರಾಕ್ರಮದ ಪ್ರಭಾವದಿಂದ ಹರ್ಷಗೊಂಡವನಾಗಿರುವನು. ನೀನು ಆ ತಾರಕಾಸುರನನ್ನು ಸಂಹರಿಸಲು ಜನರೆಲ್ಲರೂ ಎಂದಿನಂತೆಯೇ ಲೋಕವ್ಯವಹಾರದಲ್ಲಿ ತೊಡಗಿರುವರು. ॥೨೮॥

ತಾರಕನು ತನ್ನ ಪರಿವಾರದೊಂದಿಗೆ ನಾಶವನ್ನು ಹೊಂದಲು ಈಗ ದೇವತೆಗಳೆಲ್ಲರೂ ಸಂತುಷ್ಟರಾಗಿ ಈಶ್ವರಾರ್ಚನೆಯಲ್ಲಿ ತೊಡಗಿರುವರು. ಓ ಕುಮಾರಸ್ವಾಮಿಯೇ, ನೀನು ದೇವತೆಗಳ ಸೇನಾಪತಿಯಾಗಿರುವೆಯಲ್ಲವೇ ? ॥೨೯॥

|| ದೇವಾ ಊಚುಃ ||

ಮುಖೇ ವಾರಣೇಂದ್ರಂ ನಖೇ ಚಾರ್ಧಚಂದ್ರಂ
ಮುಖೇ ಪೂರ್ಣಚಂದ್ರಂ ದಯಾಸಾರಸಾಂದ್ರಂ ।
ಕೃತಸ್ತುತ್ಯುಪೇಂದ್ರಂ ಪದಾಬ್ಜಾನತೇಂದ್ರಂ
ಭಜಾಮೋಸ್ತತಂದ್ರಂ ಮಹಾವಕ್ರತುಂಡಂ ||೩೦||

ಕಥಂಕಾರಮಂತ್ರಃ ಕರೋಮ್ಯಂಗಸಂಗಂ
ಸ ಶೃಂಗಾರಮೋಂಕಾರಸಾಥೋಜಭೃಂಗಂ ।
ಶಿವೋತ್ಸಂಗಸಂಗಂ ಶಿವಾಸ್ಯಾಂತರಂಗಂ
ಕಿರಾತಾಂಗಣೋಲ್ಲಾಸಿ ವಲ್ಲೀ ಭುಜಂಗಂ ||೩೧||

ಕರೇ ಶಕ್ತಿಮಂತಂ ಹರೇ ಭಕ್ತಿಮಂತಂ
ಶರೇ ಜನ್ಮವಂತಂ ಹರೇ ತಾನವಂತಂ ।

---

ಈ ರೀತಿಯಲ್ಲಿ ದೇವತೆಗಳು ಅನೇಕ ನಾಮಗಳಿಂದ ಕುಮಾರನನ್ನು ಸ್ತುತಿಸಿ ಪೂಜಿಸಿ ಬಳಿಕ ವಾಸುಕಿಯಿಂದೊಡಗೂಡಿ ಸ್ಕಂದನನ್ನು ಈ ರೀತಿಯಲ್ಲಿ ಸ್ತುತಿಸಿದರು. ಓ ಸ್ವಾಮಿಯೇ, ನಿನ್ನ ಮುಖವು ಶ್ರೇಷ್ಠವಾದ ಗಜದ ಮುಖವನ್ನು ಹೋಲುವುದು. ನಿನ್ನ ನಖವು ಅರ್ಧಚಂದ್ರನಂತೆ ಸುಂದರವಾಗಿರುವುದು. ನೀನು ಪೂರ್ಣಚಂದ್ರನಂತೆ ಆಹ್ಲಾದಕರವಾದ ಮುಖದಿಂದ ಶೋಭಿಸುತ್ತಿರುವೆ. ನಿನ್ನನ್ನು ವಿಷ್ಣುವು ಸ್ತುತಿಸಿರುವನು. ಇಂದ್ರನು ನಿನ್ನ ಅಡಿದಾವರೆಗಳಿಗೆ ನಮಸ್ಕರಿಸಿರುವನು. ಗಣೇಶನ ಆಕಾರವನ್ನು ಧರಿಸಿ ವಕ್ರತುಂಡನೆಂಬ ಹೆಸರಿನಿಂದ ಪ್ರಸಿದ್ಧನಾದ ದೇವನೂ ನೀನೇ ಆಗಿರುವೆ. ಸದಾ ಜಾಗರೂಕನಾದ ಅಂತಹ ನಿನ್ನನ್ನು ನಾವು ಭಜಿಸುವೆವು. ||೩೦||

ಶಿವನ ತೊಡೆಯನ್ನು ಏರಿರುವವನೂ, ಪಾರ್ವತಿಯ ಪುತ್ರನಾಗಿ ಮಾತೃವನ್ನು ಸದಾ ಸಂತೋಷಗೊಳಿಸುವವನೂ, ಕಿರಾತರ ಗೃಹಾಂಗಣಗಳಲ್ಲಿಯೂ ಸಹ ಉಲ್ಲಾಸದಿಂದ ವಾಸವಾಗಿರುವವನೂ, ವಲ್ಲೀಸಮೇತನೂ, ಸರ್ಪಭೂಷಿತನೂ ಆದ ಆ ಕುಮಾರನ ಅಂಗಸ್ಪರ್ಶವನ್ನು ನಾವು ಮನಸ್ಸಿನಲ್ಲಿಯೂ ನೆನೆಸಲು ಶಕ್ತರೇ? ||೩೧||

ಕೈಯ್ಯಲ್ಲಿ ಶಕ್ತ್ಯಾಯುಧವನ್ನು ಧರಿಸಿರುವವನೂ, ಈಶ್ವರಭಕ್ತನೂ, ದರ್ಭವನದಲ್ಲಿ ಜನ್ಮವನ್ನು ತಾಳಿದವನೂ, ಶಿವನಲ್ಲಿ ಪ್ರೀತಿಯುಳ್ಳವನೂ, ಉದಾರವಾದ

ಉದಾರಂ ವದಂತಂ ಸದಾರಂ ವಸಂತಂ
ಸದೋಂಕಾರಮಂತರ್ಭಜಾಮೋ ಗುಹಂ ತಂ ॥೩೨॥

ಶರಚ್ಚಂದ್ರಷಟ್ಕಸ್ಫುರದ್ವಕ್ತ್ರಬಿಂಬಂ
ಪ್ರಭಾಲಪ್ರವಾಲಂ ಪ್ರಭಾಮಂಡಲಸ್ಥಂ ।
ರುಜಾಧೂತ ಮಿತ್ರಂ ಕೃಪಾತೀತನೇತ್ರಂ
ಭಜಾಮಃ ಸದಾ ದೇವಸೇನಾಕಲತ್ರಂ ॥೩೩॥

ಕ್ವ ಶೂರಃ ಕ್ವ ವಾ ತಾರಕಃ ಸಿಂಹವಕ್ತ್ರಃ
ಕ್ವವೇತ್ಯಾಟ್ಟಹಾಸ ಪ್ರಭಿನ್ನಾಂಡಭಿತ್ತಿಂ ।
ಹಟಾನ್ನೀಲಕಂಠೇಂದ್ರ ಕಂಠಾಧಿರೂಢಂ
ಭಜಾಮೋ ಮುದಾ ರಕ್ಷಿತಾರಂ ಕುಮಾರಂ ॥೩೪॥

ಪ್ರಫುಲ್ಲಾಬ್ಜಬಿಂಬೈರವಲ್ಲೀಕುಟುಂಬೈ
ರಬಾಲಾಂಬಿಕಾಂಬೈರವೇದ್ಯೈಶಡಿಂಭೈಃ ।

---

ವಾಕ್ಕುಳ್ಳವನೂ, ಶ್ರೀವಲ್ಲೀಸಮೇತನಾಗಿ ವಾಸಿಸುವವನೂ, ಓಂಕಾರಕ್ಕೆ ಆಲಂಬನೂ, ಅಜ್ಞಾನನಾಶಕನೂ ಆದ ಸ್ಕಂದನನ್ನು ಭಜಿಸುವೆವು. ॥೩೨॥

ಶರತ್ಕಾಲದಲ್ಲಿ ಉದಯಿಸಿದ ಚಂದ್ರನ ಕಾಂತಿಯಂತೆ ಕಾಂತಿಯುಳ್ಳ ಆರು ಮುಖಮಂಡಲದಿಂದ ಶೋಭಿಸುವವನೂ, ತೇಜೋಮಯನೂ ದೇಹಪ್ರಭೆಯಿಂದ ಸೂರ್ಯನನ್ನೇ ಜಯಿಸಿರುವವನೂ, ದಯಾಳುವೂ, ದೇವಸೇನೆಯೆಂಬ ಪತ್ನಿಯಿಂದ ಸಮೇತನೂ ಆದ ಕುಮಾರನನ್ನು ಸದಾ ಭಜಿಸುವೆವು. ॥೩೩॥

ಶೂರಾಸುರನೆಲ್ಲಿ? ತಾರಕಾಸುರನೆಲ್ಲಿ? ಅಥವಾ ಸಿಂಹವಕ್ತ್ರನೆಲ್ಲಿ? ಅಟ್ಟ ಹಾಸದಿಂದ ಬ್ರಹ್ಮಾಂಡಕೋಶವನ್ನೇ ಭೇದಿಸುವ ಕುಮಾರನೆಲ್ಲಿ? ಮಯೂರ ವಾಹನನೂ ದೇವರಕ್ಷಕನೂ ಆದ ಕುಮಾರನನ್ನು ಆದರದಿಂದ ನಾವು ಸೇವಿಸುವೆವು. ॥೩೪॥

ವಲ್ಲೀದೇವಿಯ ಪತಿಯಾದ ಸ್ಕಂದಸ್ವಾಮಿಯನ್ನು ಸೇವಿಸದೆ, ಶಿವರೂಪಿ ಯಾದ ಕುಮಾರನನ್ನು ಭಜಿಸದೆ, ಶಿವನನ್ನು ಧ್ಯಾನಿಸದಿರುವ ದೇವತೆಗಳಿಂದೇನು ಪ್ರಯೋಜನ? ಯಾರು ಪ್ರಸನ್ನಮುಖದಿಂದ ಉಮಾಪುತ್ರನೂ, ಪರಮೇಶಪ್ರಿಯ

ಉಮಾಂಗಾಭವಾಂಗ್ರೈರಶ್ಯೆವಾಂತರಂಗ್ಯೆಃ
ಅಲಂ ದೇವಸಂಘ್ಯೆರಲಂ ದೇವಸಂಘ್ಯೆಃ ॥೩೫॥

ವಿಧೇ ಸ್ವಾಗತಂ ಕಿಂ ಹರೇ ಮಂಗಲಂ ಕಿಂ
ಸಖೇದಾನುಷಂಗಂ ಕುತೋ ದೃಶ್ಯತೇಂಗಂ ।
ಕ್ವ ವೈರೀ ಸಮಾನೀಯತಾಂ ಮೇ ಶತಾಂಗಂ
ಕ್ರುಧ್ಯೆವಂ ವದಂತಂ ಭಜಾಮೋ ಗುಹಂ ತಂ ॥೩೬॥

ಭವದ್ಗರ್ಭದಾಸಾರ್ಭಕಾನ್ ದೀನಬಂಧೋ
ತವ ಪ್ರೇಮಯುಕ್ತಾನ್ ಹಿತಂ ಕ್ಷಿಪ್ರಮಂಹಃ ।
ನ ಚೇತ್ತೇಪಕೀರ್ತಿಸ್ತತಃ ಸ್ವಾಮಿನಂ ತ್ವಾಂ
ಭಜಾಮೋಽದ್ಯ ಭಕ್ತ್ಯಾ ಭಜಾಮೋಽದ್ಯ ಭಕ್ತ್ಯಾಃ ॥೩೭॥

---

ಸುತನೂ ಆಗಿರುವ ಕುಮಾರಸ್ವಾಮಿಯನ್ನು ಹಿಂಬಾಲಿಸುವರೋ ಅವರೇ ಸಮರ್ಥ ರಾದ ದೇವತೆಗಳು. ಅಂತಹ ದೇವತೆಗಳ ಗುಂಪಿನಿಂದಲೇ ನಮಗೆ ಸ್ಥಿರಸುಖವು ಲಭಿಸುವುದು. ॥೩೫॥

ಎಲೈ ಬ್ರಹ್ಮನೇ, ನಿನಗೆ ಸುಖಾಗಮನವು! ಎಲೈ ವಿಷ್ಣುವೇ, ನಿನಗೆ ಮಂಗಲವು? ನಿಮ್ಮ ಈ ಶರೀರವು ಆದೇಕೆ ದುಃಖಾತಿಶಯದಿಂದ ವಿವರ್ಣವಾಗಿ ತೋರುತ್ತಿರುವುದು! ಎಂಬುದಾಗಿ ದೇವತೆಗಳನ್ನು ಕುಶಲಪ್ರಶ್ನೆಗಳಿಂದ ಸಮಾಧಾನ ಪಡಿಸಿ, ಬಳಿಕ ನಿಮ್ಮ ಶತ್ರುವು ಅದೆಲ್ಲಿರುವನು! ಅವನ ಬಳಿಗೆ ನನ್ನ ರಥವನ್ನು ಒಯ್ಯಿರಿ ಎಂದು ಕೋಪದಿಂದ ಸಂಭಾಷಿಸುತ್ತಾ, ಧೈರ್ಯಗೊಡುವ ಆ ಕುಮಾರನನ್ನು ಹರ್ಷದಿಂದ ಸೇವಿಸುವೆನು. ॥೩೬॥

ಓ ಅನಾಥರಕ್ಷಕನೇ! ಗರ್ಭದಿಂದ ಮೊದಲುಗೊಂಡು ಮರಣಪರ್ಯಂತವೂ ನಿನ್ನ ಸೇವಕರಾಗಿರುವ ಈ ನಮ್ಮನ್ನು ಅನುಗ್ರಹಿಸಿ ನಮ್ಮ ದುರಿತವನ್ನು ನಾಶ ಗೊಳಿಸು. ದೇವ! ಇದೀಗ ನಾವು ನಿನ್ನನ್ನು ಭಜಿಸಿದರೆ ನಿನಗೆ ಯಾವ ಅಪಕೀರ್ತಿಯೂ ಸಂಭವಿಸಲಾರದೆಂದಾದರೆ ನಾವೆಲ್ಲರೂ ಸರ್ವದಾ ನಿನ್ನನ್ನು ಭಜಿಸುವೆವು. ॥೩೭॥

ದ್ವಿಷಡ್ಬಾಹುದಂಡಂ ದ್ವಿಷಡ್ಚಾರುಗಂಡಂ
ದ್ವಿಷಟ್ಕರ್ಣಷಂಡಂ ತ್ರಿಷಣ್ನೇತ್ರತುಂಡಂ ।
ಹತಕ್ರೌಂಚಗೋತ್ರಂ ಧೃತಬ್ರಹ್ಮಸೂತ್ರಂ
ಭವಪ್ರೀತಿಪಾತ್ರಂ ಭಜಾಮಃ ಸುಗಾತ್ರಂ ॥೩೮॥

ಪ್ರಸೀದ ಪ್ರಸೀದ ಪ್ರಭೋ ತಾರಕಾರೇ
ಪ್ರಸೀದ ಪ್ರಸನ್ನಾ ಭವಾಮೋ ನಿರೀಹಾಃ ।
ಪ್ರಸನ್ನಾ ವಿಷಣ್ಣಾಃ ಪುರಾ ತಾರಖಿನ್ನಾಃ
ಭವಾಮೋಽದ್ಯ ಭಿನ್ನಾಸ್ತ್ವಯಾ ದುಃಖನುನ್ನಾಃ ॥೩೯॥

ಕಿಮರ್ಥಂ ಸುರಾರ್ಥಂ ಕೃತಾ ನಾನುಕಂಪಾ
ನಿಲಿಂಪಾಃ ಪುರಾ ತಾರದುಃಖಾಭಿಕಂಪಾಃ ।
ಭವತ್ಪಾದಮೋದ ಪ್ರಭಾವಾದಿಶೌಧೇ
ವಸಾಮೋ ವಿಶಾಮಃ ಪ್ರಮೋದೋರುಸಿಂಧುಂ ॥೪೦॥

---

ದೇವ, ಈಶ್ವರಾನುಗ್ರಹಕ್ಕೆ ಪಾತ್ರನಾದ ನೀನು ಹನ್ನೆರಡುತೋಳುಗಳನ್ನೂ, ದ್ವಾದಶಗಂಡಸ್ಥಲಗಳನ್ನೂ, ದ್ವಾದಶಕರ್ಣೇಂದ್ರಿಯಗಳನ್ನೂ, ಆರು ಮುಖಗಳನ್ನೂ, ಹನ್ನೆರಡುನೇತ್ರಗಳನ್ನೂ ಧರಿಸಿ, ಭಕ್ತಾನುಗ್ರಹಕ್ಕೋಸ್ಕರ ಅವತರಿಸಿರುವೆ. ನೀನು ನಿನ್ನ ಧನುರ್ವಿದ್ಯೆಯ ಪ್ರಭಾವದಿಂದ ಕ್ರೌಂಚಪರ್ವತವನ್ನೂ ಸಹ ಭೇದಿಸಿದೆ. ಬ್ರಹ್ಮಚಾರಿಯಾಗಿ ವಿರಾಜಿಸುವೆಯಲ್ಲವೇ ? ಅಂತಹ ನಿನ್ನನ್ನು ಭಜಿಸುವೆವು.॥೩೮॥

ಓ ಪ್ರಭುವೇ, ತಾರಕಾರಿಯೇ, ನಿನ್ನ ಸೇವಕರಾದ ನಮಗೆ ಪ್ರಸನ್ನನಾಗು. ಆದರಿಂದ ನಿಸ್ಪೃಹರಾದ ನಾವೂ ಸಹ ಪ್ರಸನ್ನಚಿತ್ತರಾಗುವೆವು. ಈ ಹಿಂದೆ ಆ ತಾರಕಾಸುರನ ಬಾಧೆಯನ್ನು ಸಹಿಸಲಾದರೆ ದುಃಖಿತರೂ, ವಿಷಣ್ಣಾವಸ್ಥೆಯನ್ನು ಹೊಂದಿದವರೂ ಆದ ನಾವು ಇದೀಗ ನಿನ್ನ ಸಹಾಯದಿಂದ ಸುಖಿಗಳಾಗಿರುವೆವು. ॥೩೯॥

ದೇವ, ಇನ್ನೂ ನೀನು ಅದೇಕೆ ದೇವತೆಗಳಲ್ಲಿ ದಯೆದೋರದಿರುವೆ. ಈ ಹಿಂದೆ ಸಕಲ ದೇವತೆಗಳೂ ತಾರಕಾಸುರನಿಂದ ದುಃಖಿತರಾಗಿ ಅವನ ಪ್ರತಾಪಕ್ಕೆ ಗಡ ಗಡನೆನಡುಗುತ್ತಿದ್ದರು. ಆದರೆ ಈಗ ಆ ದುಃಖಗಳೆಲ್ಲವೂ ತೊಲಗಿ ನಾವು ನಿನ್ನ ಅಡಿ

ಉರೋನ್ಯಸ್ತಹಾರಂ ಶಿರೋನ್ಯಸ್ತಹೀರಂ
ದಯಾಸಿಂಧುಪೂರಂ ಶಿವಜ್ಞಾನಸಾರಂ ।
ಪುರಾ ಭೂತತಾರಂ ಭವಾಂಭೋಧಿಪಾರಂ
ಸುರಾಬ್ಜಾಲಿಸೌರಂ ಭಜಾಮಃ ಕುಮಾರಂ ॥೪೧॥

ಗುರೂಣಾಂ ಗುರುಂ ದೇವಸೇನಾಸಮೇತಂ
ಪರೇಷಾಂ ಪರಂ ಕೇಕಿಯಾನೇನ ಯಾಂತಂ ।
ಕಟಾಕ್ಷಾಬ್ಜಮಾರ್ದ್ರಂ ನ ತೇ ಕ್ಷುದ್ರಭದ್ರಂ
ಸಮೋಂಕಾರಮುದ್ರಂ ಭಜಾಮೋಽಸ್ತನಿದ್ರಂ ॥೪೨॥

ಶತಾಂಗಂ ವಿಹಂಗಂ ಕೃತಾರಾತಿಭಂಗಂ
ಸುಧೀಚಿತ್ತರಂಗಂ ಮಹಾಪಾಪಭಂಗಂ ।
ಕುಜಪ್ರೇಮಭಾಜಂ ಭಜೇ ಸರ್ಪರಾಜಂ
ಸಮಾಜಾಧಿಪಂ ತ್ವಾಂ ಭಜಾಮೋ ನಗಾಜಂ ॥೪೩॥

---

ದಾವರೆಗಳ ದರ್ಶನದಿಂದುಂಟಾದ ಹರ್ಷವೆಂಬ ಸೌಧದಲ್ಲಿ ನಿರ್ಭಯವಾಗಿ ವಾಸವಾಗಿದ್ದು ಹರ್ಷಸಾಗರವನ್ನೇ ಪ್ರವೇಶಿಸುತ್ತಿರುವೆವು. ॥೪೦॥

ವಕ್ಷಸ್ಥಲದಲ್ಲಿ ಮುಕ್ತಾಹಾರವನ್ನು ಧರಿಸಿರುವವನೂ, ಶಿರಸ್ಸಿನಲ್ಲಿ ಅಮೂಲ್ಯ ವಜ್ರವನ್ನು ಧರಿಸಿದವನೂ, ದಯಾಸಾಗರನೂ, ತತ್ತ್ವಜ್ಞಾನಿಯೂ, ತಾರಕಾರಿಯೂ, ಸಂಸಾರಸಾಗರದಿಂದ ನಿರ್ಮುಕ್ತನೂ, ದೇವತೆಗಳೆಂಬ ಪದ್ಮಗಳಿಗೆ ಸೂರ್ಯನಂತಿರುವವನೂ ಆದ ಕುಮಾರಸ್ವಾಮಿಯನ್ನು ಭಜಿಸುವೆವು. ॥೪೧॥

ಓ ಪ್ರಭುವೇ, ನೀನು ವಿದ್ಯೋಪದೇಶಕರಲ್ಲಿ ಅತ್ಯಂತಶ್ರೇಷ್ಠನೂ, ಅಗಾಧವಾದ ದೇವಸೇನೆಯೊಂದಿಗೆ ಇರುವವನೂ, ಶತ್ರುಗಳಿಗೆ ಭಯಂಕರನೂ, ಮಯೂರವಾಹನನೂ ಆಗಿರುವೆ. ನಿನ್ನ ಕಟಾಕ್ಷವೀಕ್ಷಣವು ಪ್ರೇಮಪೂರಿತವೂ ಮತ್ತು ಕ್ಷುದ್ರರಾದ ನಮಗೆ ಮಂಗಳಕರವೂ ಆಗಿರುವುದಲ್ಲವೇ! ಓಂಕಾರ ಮುದ್ರೆಯನ್ನು ಧರಿಸಿರುವವನೂ ಭಕ್ತಜನೋದ್ಧಾರಕಾರ್ಯದಲ್ಲಿ ಸದಾ ಜಾಗರೂಕನೂ ಆದ ನಿನ್ನನ್ನು ಭಜಿಸುವೆವು. ॥೪೨॥

ದೇವ! ಲೀಲಾವಿಗ್ರಹನಾದ ನೀನು ಭಕ್ತಾನುಗ್ರಹಕ್ಕೋಸ್ಕರ ಅನೇಕ ಶರೀರಗಳನ್ನು ಧರಿಸುವೆ! ಆಕಾಶದಲ್ಲಿ ಸಂಚರಿಸುವೆ, ವಿದ್ವಾಂಸರಿಂದ ಹೊಗಳಿಸಿಕೊಳ್ಳುವೆ.

ನಮಸ್ತೇ ನಮಸ್ತೇ ಶಿವಪ್ರೇಮಮೂರ್ತೇ
ನಮಸ್ತೇ ನಮಸ್ತೇ ತ್ರಯೀಗೀತಕೀರ್ತೇ ।
ನಮಸ್ತೇ ನಮಸ್ತೇ ಹೃತತ್ರೈದಶಾರ್ತೇ
ನಮಸ್ತೇ ನಮಸ್ತೇ ಸುರಾಭೀಷ್ಟಪೂರ್ತೇ ॥೪೪॥

ಸುರಾಣಾಂ ಪುರಸ್ತಾತ್ ಯದಿ ತ್ವತ್ಪದಾಬ್ಜಂ
ಸಮಸ್ತಾಪದಸ್ತಾ ನಿರಸ್ತಾ ಭವೇಯುಃ ।
ಕರಸ್ಥಾ ವಿಮುಕ್ತಿರ್ಹೃದಿಸ್ಥಾ ಸುಮುಕ್ತಿಃ
ಶಿರಸ್ಥಾ ಹಿ ಶಕ್ತಿರ್ಭವೇತ್ಸತ್ಯಮೇತತ್ ॥೪೫॥

ಕ್ವಚಿದ್ಭೂತಸಂಗಂ ಕ್ವಚಿತ್ಪ್ರೇತಸಂಗಂ
ಕ್ವಚಿದ್ವ್ಯಾಧಿಸಂಗಂ ಕ್ವಚಿದ್ಯಾತುಸಂಗಂ ।
ಕ್ವಚಿತ್ ಕ್ಷುದ್ರಪುಂಖಾನುಪುಂಖಪ್ರಸಂಗಂ
ಸಮುಚ್ಚಾಟಯಂತಂ ಭಜಾಮೋ ಗುಹಂ ತಂ ॥೪೬॥

---

ಮಹಾಪಾಪನಾಶಕನೆನಿಸಿ ಅಂಗಾರಕಗ್ರಹಕ್ಕೆ ಅಧಿದೇವತೆಯೆನಿಸಿಕೊಂಡಿರುವೆ. ಸರ್ಪ ಸ್ವರೂಪನೂ, ದೇವಸಂಘಕ್ಕೆ ಅಧಿಪನೂ, ಆದ ನಿನ್ನನ್ನು ಸರ್ವದಾ ಸೇವಿಸುವೆವು, ದೇವ! ಸೃಷ್ಟಿಕರ್ತನಾದ ಬ್ರಹ್ಮನೂ ಸಹ ನಿನ್ನನ್ನು ವಂದಿಸುವನಲ್ಲವೇ? ॥೪೩॥

ಪ್ರಭುವೇ, ಶಿವನ ಪ್ರೇಮಮೂರ್ತಿಯೇ ನೀನಾಗಿರುವೆ. ನಿನ್ನ ಕೀರ್ತಿಯನ್ನು ಸಕಲ ವೇದಗಳೂ ಸಹ ಹೊಗಳುತ್ತಿರುವುವು. ದೇವತೆಗಳ ವ್ಯಥೆಯನ್ನು ಹೋಗಲಾಡಿಸಿದವನೂ ನೀನೇ. ದೇವತೆಗಳ ಇಷ್ಟಾರ್ಥಗಳನ್ನು ಈಡೇರಿಸಿದವನೂ ನೀನೇ. ನಿನಗೆ ನಮಸ್ಕಾರವು. ॥೪೪॥

ಓ ಶರಣಾಗತರಕ್ಷಕನೇ, ನಿನ್ನ ಈ ಅಡಿದಾವರೆಯು ದೇವತೆಗಳ ಎದುರಿನಲ್ಲಿದ್ದುದಾದರೆ ಸಕಲ ವಿಪತ್ತುಗಳೂ ದೂರವಾಗುವುವು. ಮತ್ತು ನಿನ್ನ ಅಡಿದಾವರೆಯ ದರ್ಶನದಿಂದ ನಾವು ಸಂಸಾರದುಃಖದಿಂದ ವಿನಿರ್ಮುಕ್ತರಾಗಿ ಹೃದಯದಲ್ಲಿಯೇ ಆ ಮೋಕ್ಷಸುಖವನ್ನು ಅನುಭವಿಸಲು ಸಮರ್ಥರಾಗುವೆವು. ಆತ್ಮಬಲವು ನಮ್ಮನ್ನೆಂದಿಗೂ ಬಿಡಲಾರದು. ಇದು ನಿಜ. ॥೪೫॥

ಭಕ್ತರಿಗೆ ಒದಗುವ ಭೂತ, ಪ್ರೇತ, ರೋಗರುಜಿನಗಳು, ಅಸುರಬಾಧೆ ಮತ್ತು ಇನ್ನಿತರ ಅನೇಕ ಕ್ಷುದ್ರವಾದ ಈತಿಬಾಧೆಗಳನ್ನು ಸಮೂಲವಾಗಿ ನಾಶಗೊಳಿಸುವ ಅಜ್ಞಾನನಾಶಕನಾದ ಕುಮಾರನೇ, ನಿನ್ನನ್ನು ನಾವು ಸೇವಿಸುವೆವು. ॥೪೬॥

ಭವಾನೇವ ಪಾತಾ ಭವಾನೇವ ನೇತಾ
ಭವಾನೇವ ದಾತಾ ಭವಾನ್ ದುಃಖಹರ್ತಾ ।
ಇತಿ ತ್ವತ್ಕಟಾಕ್ಷಪ್ರತೀಕ್ಷಾ ವಸಾಮಃ
ಸಹಸ್ರಾಕ್ಷಪದ್ಮಾಕ್ಷಯುಕ್ತಾಃ ತ್ವದೀಕ್ಷಾಃ ॥೪೭॥

ನ ಮನ್ಯಾಮಹೇ ತ್ವತ್ಪದಾಬ್ಜಾತ್ಸುಧನ್ಯಂ
ನ ಚಾನ್ಯಂ ಭಜಾಮಸ್ತ್ವದನ್ಯಂ ವದಾನ್ಯಂ ।
ತ್ವಯಾ ಪಾಲನೀಯೋ ಭವನ್ಮೋಚನೀಯಾಃ
ಸಮಸ್ತಂ ಸುರಾಣಾಂ ತವಾಸ್ತ್ಯೇವ ಹಸ್ತೇ ॥೪೮॥

ತ್ವಮೇವಾಸ್ಯ ಕರ್ತಾ ತ್ವಮೇವಾಸ್ಯ ಧರ್ತಾ
ತ್ವಮೇವಾಸ್ಯ ಭರ್ತಾ ತ್ವದನ್ಯಂ ನ ಯಾಮಃ ।
ಭವಾಂಭೋಧಿಮಗ್ನಾಃ ದಯಾಂಭೋನಿಧೇ ನಃ
ಸಮುದ್ಧರ್ತುಮರ್ಹಸ್ಯತೋಽಸ್ಮರ್ಹಣೀಯಃ ॥೪೯॥

---

ಓ ದೇವನೇ! ನೀನೇ ನಮ್ಮ ರಕ್ಷಕನೂ, ಅಧಿಪತಿಯೂ ಆಗಿರುವೆ. ಮತ್ತು ನಮಗೆ ಅಭಯವನ್ನು ಕೊಡುವವನೂ, ನಮ್ಮ ದುಃಖಗಳನ್ನು ಹೋಗಲಾಡಿಸುವವನೂ ನೀನೇ ಆಗಿರುವೆಯೆಂದು ಭಾವಿಸಿ ನಿನ್ನ ಕಟಾಕ್ಷವೀಕ್ಷಣಗಳನ್ನೇ ಎದುರು ನೋಡುತ್ತಿರುವೆವು. ಅಲ್ಲದೆ ಇಂದ್ರನೂ ಮತ್ತು ವಿಷ್ಣುವೂ ಸಹ ನಿನ್ನ ಕಟಾಕ್ಷಪಾತವನ್ನೇ ನಿರೀಕ್ಷಿಸುತ್ತಿರುವರು. ॥೪೭॥

ನಿನ್ನ ಅಡಿದಾವರೆಗಿಂತಲೂ ಮಂಗಳಕರವಾದ ಇನ್ನೊಂದು ವಸ್ತುವು ಅದಾವುದಿರುವುದನ್ನೇ ನಾವು ತಿಳಿಯಲಾರೆವು. ನಿನ್ನ ಅಡಿದಾವರೆಯನ್ನೊಂದನ್ನು ಬಿಟ್ಟು ಇನ್ನಾವುದನ್ನೂ ನಾವು ಭಜಿಸಲಾರೆವು. ನಿನ್ನ ಪಾದಪದ್ಮವನ್ನು ಬಿಟ್ಟು ನಮಗೆ ಇಷ್ಟಪ್ರದವಾದ ಇನ್ನಾವ ವಸ್ತುವಾದರೂ ಲೋಕದಲ್ಲಿ ಇರುವುದೇ ? ಅದನ್ನು ನೀನೇ ಹೇಳು! ನಮ್ಮೆಲ್ಲರನ್ನೂ ರಕ್ಷಿಸಿ ದುರಿತಗಳಿಂದ ಮುಕ್ತರನ್ನಾಗಿ ಮಾಡುವ ಭಾರವೇ ನಿನಗೆ ಸೇರಿರುವುದು. ದೇವತೆಗಳ ಸರ್ವಸ್ವವೂ ನಿನ್ನ ಅಧೀನತೆಯಲ್ಲಿಯೇ ಇರುವುದು. ॥೪೮॥

ದೇವ! ಚರಾಚರವಸ್ತುವಿನೊಡಗೂಡಿದ ಈ ಬ್ರಹ್ಮಾಂಡದ ಕರ್ತೃವೇ ನೀನಾಗಿರುವೆ. ನೀನೇ ಇದನ್ನು ಧರಿಸಿರುವವನೂ ರಕ್ಷಿಸುವವನೂ ಆಗಿರುವೆ.

ಬಲಾರೇಃ ಕಿರೀಟೇ ಸ್ಖಲತ್ರಸ್ತಶಂಭು
ರ್ಹರಿಚ್ಛಾತ್ರವೈಧಾತ್ರಕೋಟೀರಮತ್ರ ।
ಇತಿ ಪ್ರೌಢಬಂಧ್ವುಕ್ತಮಾತುರ್ನಿವೇಶಂ
ವಿಶಂತಂ ಗುಹಂ ತ್ವಾಂ ಭಜಾಮೋಽನುಯಾಮಃ ॥೫೦॥

ಭವತ್ಪಾದತೋಽನ್ಯಂ ನ ಹಿ ಪ್ರಾರ್ಥಯಾಮೋ
ಭವದ್ಭಕ್ತಿತೋಽನ್ಯತ್ಕ್ವಚಿನ್ನಾರ್ಥಯಾಮಃ ।
ತ್ವಯಾ ರಕ್ಷಣೀಯಾಥವಾ ಶಿಕ್ಷಣೀಯಾ
ತ್ವಯೋಪೇಕ್ಷಣೀಯಾ ನ ನೈವೋಕ್ಷಣೀಯಾಃ ॥೫೧॥

ಪಿತಾ ತ್ವಂ ಗುರುಸ್ತ್ವಂ ಚ ಮಾತೇತಿ ನಿತ್ಯಂ
ಕ್ಷುಧಾರ್ತಾ ಭವಾರ್ತಿಂ ಪ್ರಪನ್ನಾಃ ಸ್ಮ ದೀನಾಃ ।
ಕಟಾಕ್ಷಾವಲೋಕೇಽಪ್ಯುಪೇಕ್ಷಾ ಯದಿ ಸ್ಯಾ-
ದ್ಗತಿಃ ಕಾ ಸುರಾಣಾಂ ವಿಭೋ ಭೂಸುರಾಣಾಂ ॥೫೨॥

---

ಆದುದರಿಂದ ನಿನ್ನನ್ನಲ್ಲದೆ ಇನ್ನಾರ ಬಳಿಗೂ ನಾವು ಹೋಗಲಾರೆವು. ಓ ದಯಾಲುವೇ ! ಸಂಸಾರಸಾಗರದಲ್ಲಿ ಮುಳುಗಿರುವ ನಮ್ಮನ್ನು ಉದ್ಧರಿಸಲು ನೀನೇ ಸಮರ್ಥನು. ಆದರಿಂದಲೇ ನೀನು ಪೂಜ್ಯನೆನಿಸಿಕೊಳ್ಳುವೆ ॥೪೯॥

ರಾಕ್ಷಸಶತ್ರುವೇ ಮತ್ತು ಕಿರೀಟಿಯು, ಈಶ್ವರಭಕ್ತರು ಅಥವಾ ವಿಷ್ಣುಬ್ರಹ್ಮರು ಇನ್ನೂ ಇತರ ದೇವತೆಗಳು ನಿನಗಾಗಿ ಇಲ್ಲಿ ಕಾದಿರುವರು. ಎಂದು ಹೇಳುತ್ತಿರುವ ಪಾರ್ವತಿಯ ಹಿತಮಿತವಾದ ಮಾತುಗಳನ್ನು ಕೇಳಿ ಅವರನ್ನುದ್ಧರಿಸಲು ಬರುತ್ತಿರುವ ಕುಮಾರಸ್ವಾಮಿಯನ್ನು ನಾವು ನಿತ್ಯವೂ ಸೇವಿಸುತ್ತಿರುವೆವು. ॥೫೦॥

ಪ್ರಭು ! ನಿನ್ನ ಪಾದವನ್ನು ತೊರೆದು ಇನ್ನಾವ ವಸ್ತುವನ್ನೂ ನಾವು ಯೋಚಿಸುವುದಿಲ್ಲ. ನಿನ್ನಲ್ಲಿಯೇ ಭಕ್ತಿಯು ನೆಲಸುವಂತೆ ಪ್ರಾರ್ಥಿಸುವೆವಲ್ಲದೆ ಇನ್ನಾರಲ್ಲಿಯೂ ನಮಗೆ ಭಕ್ತಿಯಿರುವುದಿಲ್ಲ. ನೀನೇ ನಮ್ಮನ್ನು ರಕ್ಷಿಸಬೇಕು ಅಥವಾ ಶಿಕ್ಷಿಸಬೇಕು. ದೀನರಾದ ನಮ್ಮಲ್ಲಿ ಉಪೇಕ್ಷೆಮಾಡದೆ ನಮ್ಮನ್ನು ಉದ್ಧರಿಸಬೇಕು. ॥೫೧॥

ಓ ಪ್ರಭುವೇ, ದಯನೀಯರಾದ ನಮಗೆ ನೀನೇ ತಂದೆಯು, ನೀನೇ ವಿದ್ಯೋಪದೇಶಕನು, ನೀನೇ ತಾಯಿಯು ಎಂಬುದಾಗಿ ಅನವರತವೂ ನಿನ್ನನ್ನೇ

ಭವತ್ಪಾದಪಂಕೇರುಹಧ್ಯಾನಭಕ್ತಿಂ
ಪ್ರಯಚ್ಛ ಪ್ರಯಚ್ಛ ನ ತುಚ್ಛಾ ವಯಂ ತೇ ।
ಪ್ರಸೂತೇವ ಮಾತೇವ ಸೈವಾದ್ಯ ಕಾಮಾನ್
ಸುರಾಣಾಂ ವರಾಣಾಂ ಭವೇ ಭೂಸುರಾಣಾಂ ॥೫೩॥

ಪಠನ್ ಷಣ್ಮುಖಸ್ಯಾಘಯುಕ್ತಾಃ ಸುಯುಕ್ತಾಃ
ಸ ಮುಕ್ತಃ ಸ ವೈ ಭಕ್ತಿಯುಕ್ತಃ ಸ ಪುತ್ರೈಃ ।
ಕಲತ್ರೈಶ್ಚ ಮಿತ್ರೈಶ್ಚ ಯುಕ್ತೋ ಲಭೇತ
ಶ್ರಿಯಂಚಾಯುರಾರೋಗ್ಯಭಾಗ್ಯೈರ್ವರಶ್ಚ ॥೫೪॥

ವಯಂ ದೀನದೀನಾ ಭವಾನ್ದಾನಶೂರೋ
ಮಹಾನೇಷ ಕಾಲಸ್ತ್ವಯಂ ದಿವ್ಯದೇಶಃ ।
ಭವೇ ಭಕ್ತಿಮೇಕಾಂ ಭವಾಂಭೋಧಿನೌಕಾಂ
ದಿಶಸ್ತ್ವಂ ದಿಶಶ್ವಂ ತ್ವದಸ್ಯಂ ನ ಯಾಮಃ ॥೫೫॥

---

ಚಿಂತಿಸುತ್ತಾ ಈ ಸಂಸಾರದಲ್ಲಿ ದುಃಖಿತರಾಗಿರುವೆವು. ಹೀಗಿದ್ದರೂ ನೀನು ಒಮ್ಮೆ ನಮ್ಮನ್ನು ನಿನ್ನ ಕಟಾಕ್ಷಕ್ಕಾದರೂ ಪಾತ್ರರನ್ನಾಗಿ ಮಾಡುವುದರಲ್ಲಿ ಉಪೇಕ್ಷಿಸಿದರೆ ದೇವತೆಗಳಾದ ನಮ್ಮ ಗತಿಯೇನು ? ॥೫೨॥

ದೇವ, ನಿನ್ನ ಅಡಿದಾವರೆಗಳ ಧ್ಯಾನದಲ್ಲಿಯೇ ಶ್ರದ್ಧೆಯುಂಟಾಗುವಂತೆ ಅನುಗ್ರಹಿಸು. ನಾವು ಹೀನಜಾತಿಯವರೆಂದು ಭಾವಿಸಲಾರೆಯಷ್ಟೆ! ನಿನ್ನ ಅಡಿದಾವರೆಗಳಲ್ಲಿ ನಮಗಿರುವ ಆ ಭಕ್ತಿಯೇ ನಮ್ಮ ಜನನಿಯೂ ರಕ್ಷಕಳೂ ಆಗಿರುವಳು. ಅದೇ ಸುರರಿಗೂ ಮತ್ತು ಭೂಸುರರಿಗೂ ಸಕಲ ಇಷ್ಟಾರ್ಥಗಳನ್ನೂ ಕೊಡುವುದಾಗಿರುತ್ತದೆ. ॥೫೩॥

ಯಾವನು ಭಕ್ತಿಯುಕ್ತನಾಗಿ ಈ ಷಣ್ಮುಖೋಪಾಖ್ಯಾನವನ್ನು ಪಠಿಸುವನೋ ಅವನು ಪಾಪಿಯಾಗಿದ್ದರೂ ಕೂಡ ಸಕಲ ಪಾಪಗಳಿಂದಲೂ ವಿನಿರ್ಮುಕ್ತನಾಗುವನಲ್ಲದೆ ಪುತ್ರಮಿತ್ರಕಲತ್ರರಿಂದೊಡಗೂಡಿ ಚಿರಕಾಲದವರೆಗೆ ಆಯುರಾರೋಗ್ಯಾದಿ ಸಕಲಸಂಪತ್ತುಗಳನ್ನು ಹೊಂದುವನು. ॥೫೪॥

ದೇವ! ನಾವು ಅತ್ಯಂತ ದೀನರಾಗಿರುವೆವು. ನೀನಾದರೋ ದಾನಶೂರನಾಗಿರುವೆ. ಇದೊಂದು ಸುಸಮಯವಾಗಿರುವುದು. ಈ ಪ್ರದೇಶವೂ ಕೂಡ

ಭುಜಂಗಸ್ಯ ದೇವಃ ಶತಾವರ್ತನೇನ
ಪ್ರಸನ್ನೋ ಭವಾದ್ಯೈವ ದುಃಖೇನ ಖಿನ್ನಾನ್
ನತಾನ್ಸ್ಫಿನ್ನವಕ್ತ್ರಾನ್ಸ್ಕರುಷ್ವಾರ್ತಿನುನ್ನಾ ।
ನ್ಸುರಾನಪ್ಯಪಭಿನ್ನಾಸ್ಕುರುಷ್ವ ತ್ವಮೇವ ॥೫೬॥

॥ ಸೂತ ಉವಾಚ ॥

ಇತ್ಥಂ ಸುರೇಂದ್ರಸ್ತುತಿಮಾಕಲಯ್ಯ
ಯಯೌ ರಥೇನಾಶು ಗಣೈಃ ಸುರಾದ್ಯೈಃ ।
ಪ್ರಣೇತುಮೀಶಾನಪದಾಂಬುಜಂ ಮುದಾ
ಗುಹಸ್ತದಾ ತಾರಕನಾಶತೋಷಿತಃ ॥೫೭॥

ಗಜಾನನೇನಾಶು ಸಮಾಗತಸ್ತದಾ
ಷಡಾನನೋಽಥ ಪ್ರಯಯೌ ಸುರಾಯನಂ ।
ಉಮಾನನಂ ವೀಕ್ಷ್ಯ ಮುದಾ ರಸಾಯನಂ
ಜಹರ್ಷ ಹರ್ಷೇಣ ಸ ದೈತ್ಯನಾಶನಃ ॥೫೮॥

---

ಅತಿಮನೋಹರವಾಗಿರುವುದು. ಆದುದರಿಂದ ಇದೀಗ ನೀನು ನಮ್ಮಗೆ ಈಶ್ವರನಲ್ಲಿ ಸ್ಥಿರವಾದ ಭಕ್ತಿಯುಂಟಾಗುವಂತೆ ಅನುಗ್ರಹಿಸು. ಆ ಈಶ್ವರಭಕ್ತಿಯೇ, ಸಂಸಾರ ಸಾಗರದಿಂದ ಪಾರುಗಾಣಿಸಲು ತಕ್ಕ ಸಾಧನವಾಗಿರುವುದು. ಆ ಕಾರಣದಿಂದ ನಿನ್ನನ್ನಲ್ಲದೆ ಇನ್ನಾರನ್ನೂ ನಾವು ಮರೆಹೋಗಲಾರೆವು. ॥೫೫॥

ಓ, ನಾಗರಾಜನೇ! ಈಗಲೇ ಪ್ರಸನ್ನನಾಗು, ಸಂಸಾರಸಮುದ್ರದಲ್ಲಿ ನೂರಾರು ಸುಳಿಗಳಿಗೆ ಸಿಕ್ಕಿ ಬೇಸತ್ತು ಖಿನ್ನಮನಸ್ಕರಾಗಿ, ನಿನ್ನನ್ನೇ ಮರೆಹೋಗಿ ತಲೆಬಾಗಿ ವಂದಿಸುವ ಈ ನಮ್ಮನ್ನು ಪಾಪರಹಿತರನ್ನಾಗಿ ಮಾಡು. ॥೫೬॥

ಬಳಿಕ ಸೂತಮುನಿಯು ಹೀಗೆಂದನು—ಎಲೈ, ಋಷಿಗಳೇ! ಈ ರೀತಿಯಲ್ಲಿ ದೇವತೆಗಳು ತಾರಕಾರಿಯಾದ ಷಣ್ಮುಖನನ್ನು ನಾನಾಬಗೆಯಿಂದ ಸ್ತುತಿಸಲು ಕುಮಾರನು ಅದನ್ನು ಲಾಲಿಸಿ, ಬಳಿಕ, ದೇವತೆಗಳೊಂದಿಗೂ ಪ್ರಮಥಗಣಗಳೊಂದಿಗೂ ಕೂಡಿ ಶಿವನ ಅಡಿದಾವರೆಗೆ ನಮಸ್ಕರಿಸುವುದಕ್ಕೋಸ್ಕರ ಶಿವನ ಬಳಿಗೆ ತೆರಳಿದನು. ॥೫೭॥

ಷಣ್ಮುಖನು ಗಜಾನನ ಸಮೇತನಾಗಿ ದೇವತೆಗಳನ್ನನುಸರಿಸಿ ಶಿವಾಲಯಕ್ಕೆ

ವಸಂತಂ ಹೃದಂತಃ ಶಿವಾಂ ಲೋಕಯಂತಂ
ಹಸಂತಂ ಪ್ರಪಶ್ಯಂತಿ ದೇವಾಃ ಪ್ರಶಾಂತಾಃ ।
ಉಮಾಕಾಂತಮೇಕಂ ನಿತಾಂತಂ ಭಜಂತಂ
ಕೃತಾಂತಾಂತಕಂ ವೇದವೇದಾಂತಭಾಂತಂ ॥೫೯॥

ಹರಾಜಾನಿಲಾಗ್ನೀಂದ್ರಹರ್ಯರ್ಕಶಕ್ರಾಃ
ವಿರಾಜಂತಿ ಭಾಸಾ ಸಮುಸ್ತಾ ನಿರಸ್ತಾಃ ।
ನಮಸ್ತೇ ಚ ಮಸ್ತೇನ ಹಸ್ತೈಶ್ಚರಂತಿ
ಪ್ರಭೋರಬ್ಜಪಾದಂ ವಿಶುದ್ಧಾ ನಮಂತಿ ॥೬೦॥

ತದಾ ತೇ ಸುರಾಸ್ತೇ ಪ್ರಣಮ್ಯಾಮರೇಶಂ
ಸಮಾಚಖ್ಯುರೇತಸ್ಯ ತಾರಸ್ಯ ಯುದ್ಧಂ ।
ಭವತ್ಪಾದಭಕ್ತ್ಯಾ ಕುಮಾರೇಣ ಶಕ್ತ್ಯಾ
ಹರಸ್ತಾರಕೋಽಯಂ ಸಮುಸ್ತೋ ನಿರಸ್ತಃ ॥೬೧॥

---

ತಿರಳಲು ಆಗ ತಾರಕಾರಿಯಾದ ಆವನು ತನ್ನ ಮಾತೆಯಾದ ಪಾರ್ವತಿಯ ಪ್ರಸನ್ನವಾದ ಮುಖಮಂಡಲವನ್ನು ನೋಡಿ ಹರ್ಷದಿಂದ ಮೈಮರೆತನು. ॥೫೮॥

ಉಮಾರಮಣನೂ, ಮೃತ್ಯುಂಜಯನೂ, ವೇದಾಂತವೇದ್ಯನೂ ಆದ ಪರಶಿವನನ್ನು ಭಜಿಸುತ್ತಾ ಪಾರ್ವತಿಯ ಮುಖವನ್ನು ನೋಡಿ ನಸುನಗುತ್ತಿದ್ದ ಕುಮಾರನನ್ನು ದೇವತೆಗಳು ಮನಸ್ಸಿನಲ್ಲಿ ಆನಂದಪಡುತ್ತಾ ಪ್ರಸನ್ನವಾದ ಮುಖ ಮುದ್ರೆಯಿಂದ ನೋಡುತ್ತಿದ್ದರು. ॥೫೯॥

ಬ್ರಹ್ಮ, ವಾಯು, ಅಗ್ನಿ, ಚಂದ್ರ, ಸೂರ್ಯ, ಇಂದ್ರ ಮೊದಲಾದ ದೇವತೆಗಳು ತಮ್ಮ ದೇಹಕಾಂತಿಯಿಂದ ದೇದೀಪ್ಯಮಾನರಾಗಿ ಶಿವನ ಮುಂಭಾಗದಲ್ಲಿ ನಿಂತು, ಕೈಗಳನ್ನು ಜೋಡಿಸಿ ಶಿರಸ್ಸನ್ನು ಬಗ್ಗಿಸಿ ಆ ಪರಶಿವನ ಅಡಿದಾವರೆಗೆ ನಮಸ್ಕರಿಸಿದರು. ॥೬೦॥

ದೇವತೆಗಳು ಈರೀತಿಯಲ್ಲಿ ಶಿವನನ್ನು ವಂದಿಸಿ ತಾರಕಾಸುರನೊಂದಿಗೆ ನಡೆದ ಯುದ್ಧದ ವೃತ್ತಾಂತವೆಲ್ಲವನ್ನೂ ಪ್ರಭುವಿಗೆ ನಿವೇದಿಸಿದರು. ಓ ಹರನೇ, ನಿನ್ನ ಪಾದಪದ್ಮಗಳಲ್ಲಿದ್ದ ಭಕ್ತಿಯ ಮಹಿಮೆಯಿಂದ ಇದೀಗ ನಿನ್ನ ಕುಮಾರನಾದ ಈ ಷಣ್ಮುಖನು ತಾರಕಾಸುರನನ್ನು ನಿರ್ಮೂಲಗೊಳಿಸಿದನು ಎಂದರು. ॥೬೧॥

ಐಕ್ಷನ್ತ್ರ್ಯಕ್ಷಪದಂ ಮಹೋರಗವರಂ ವೀಕ್ಷ್ಯ ಸ್ಮಿತಾಕ್ಷಂ ಮುದಾ
ಭಸ್ಮೀಭೂತಗರಂ ಭಗಾಕ್ಷಿಹರಣಂ ದಕ್ಷಾದಿದೀಕ್ಷಾಪಹಂ ।
ವೀಕ್ಷಾಶಿಕ್ಷಿತ ಮನ್ಮಥಾಂಧಕಪುರಂ ಸ್ಕಂದೋ ಮುದಾ ತಂ ಹರಂ
ಪ್ರಾಣಂಸೀದವತಂಸಿತೇಂದುಮನಲಾಲಂಕಾರಫಾಲಾಕ್ಷಕಂ ॥೬೨॥

ದಕ್ಷಧ್ವಾಂತಮುಖ್ಯೈಕಯಕ್ಷಸುರತಾಸಂಧುಕ್ಷಿತಾಧೋಕ್ಷಜೋ
ದೇವಾಂಸ್ತಾನ್ಗಣಪಾನ್ಮುನೀಶ್ವರವರಾನಾರಾತ್ತ್ರದೃಕ್ಷನ್ಮುದಾ ।
ವಿಘ್ನೇಶಂ ನತತಾರಕಾರಿಮುಸಕೃತ್ಪಾದೇ ಪತಂತಂ ಹರಃ
ಬಾಹುಭ್ಯಾಮಥ ಗಾಢವತ್ತರಹೃದಾ ತೌಚಾಲಿಲಿಂಗೇ ಸುತೌ ॥೬೩॥

॥ ಈಶ್ವರ ಉವಾಚ ॥

ಗಿರಿಜೇ ವರತಾರಕಾಸುರಪ್ರತಪ್ತಾಃ
ಸುರಜಾತಾಃ ಕಿಲ ಪಾರಿಜಾತಪುಷ್ಪೈಃ ।
ಪರಿಪೂಜ್ಯ ಚಿರಂ ವಿರಜ್ಯ ಭೋಗ್ಯೈಃ
ವಿರಜಾಸ್ತೇ ಪ್ರಬಭುರ್ಮುದಾ ಶಿವೇ ನಾಂ ॥೬೪॥

---

ಆಗ ಅಲ್ಲಿಯೇ ನಿಂತಿದ್ದ ಕುಮಾರಸ್ವಾಮಿಯು ಪರಮೇಶ್ವರನ ಪಾದಕಮಲವನ್ನೇ ಈಕ್ಷಿಸುತ್ತಾ, ವಿಷಧಾರಿಯೂ, ಭಗಾಕ್ಷಿನಾಶಕನೂ, ದಕ್ಷಯಜ್ಞಧ್ವಂಸಕನೂ, ತನ್ನ ದೃಷ್ಟಿಮಾತ್ರದಿಂದಲೇ ಮನ್ಮಥನನ್ನೂ, ಅಂಧಕಾಸುರನನ್ನೂ ಧ್ವಂಸಮಾಡಿದವನೂ ಆದ ಮಹೇಶ್ವರನನ್ನು ಧ್ಯಾನಿಸುತ್ತಾ, ಅಗ್ನಿನೇತ್ರನೂ ಚಂದ್ರಶೇಖರನೂ ಆದ ಮಹಾದೇವನಿಗೆ ಭಕ್ತಿಯಿಂದ ನಮಸ್ಕರಿಸಿದನು. ॥೬೨॥

ದಕ್ಷಬ್ರಹ್ಮನ ಅಹಂಕಾರವನ್ನಡಗಿಸಿದ ಆ ಪರಶಿವನು, ತನ್ನ ಮುಂಭಾಗದಲ್ಲಿ ನಿಂತಿದ್ದ ದೇವತೆಗಳನ್ನೂ, ಪ್ರಮಥಗಣಗಳನ್ನೂ ಮತ್ತು ಮುನೀಶ್ವರರನ್ನೂ ಹರ್ಷಪೂರಿತವಾದ ದೃಷ್ಟಿಯಿಂದ ನೋಡಿದನು. ಅಲ್ಲದೇ ಶಿರಸ್ಸನ್ನು ಬಾಗಿಸಿ ವಂದಿಸುತ್ತಿರುವ, ಷಣ್ಮುಖನನ್ನೂ ಮತ್ತು ಗಣೇಶನನ್ನೂ ತನ್ನ ಬಾಹುಗಳಿಂದ ಗಾಢವಾಗಿ ಆಲಿಂಗಿಸಿದನು. ॥೬೩॥

ಬಳಿಕ ಶಿವನು ತನ್ನ ಪ್ರೇಯಸಿಯನ್ನು ಕುರಿತು ಹೀಗೆಂದನು—ಎಲೈ ಗಿರಿಜೆಯೇ, ಕೇಳು. ಈ ರೀತಿಯಲ್ಲಿ ತಾರಕಾಸುರನ ಬಾಧೆಯನ್ನು ತಡೆಯಲಾರದೆ

ಕಮಲೈರಮಲೈರ್ಮಹೇಶಲಿಂಗಂ
ಪರಿಪೂಜ್ಯಾಮಲಭಕ್ತಿಭಾವತಸ್ತು ।
ಅನಿಲಾನಲಶಕ್ರಲೋಕವಾಸೋ
ನ ತುಲಾಮಾಸ್ಯಸಮಂ ದದಾತಿ ಪುಣ್ಯಂ ॥೬೫॥

ಹರಿಶಕ್ರಾದಿಸದಾ ಸುರಾಸ್ತದಾನೀಂ
ಮುಮುದುಸ್ತೇ ಹರಭಕ್ತಿಶಕ್ತಿಯುಕ್ತಾಃ ।
ಭವಭಕ್ತಾಮುನಯೋಽಪಿ ಹೃಷ್ಟತುಷ್ಟಾಃ
ದುರದೃಷ್ಟಾನಿ ವಿನಾಶ್ಯ ನೋದಮಾಪುಃ ॥೬೬॥

॥ ಸುರಾ ಊಚುಃ ॥

ತವ ಶಿವ ಸದಯಾವಲೋಕಭಾಗ್ಯೈ
ರ್ಮಥಿತಾಸ್ತೇ ಸುರಶತ್ರವಸ್ತನುತ್ರೈಃ ।
ಹರಶಕ್ತಿಧರೇಣ ಬಾಣವರ್ಷೈಃ
ಪ್ರಮಥೇಂದ್ರೈರುರಗೇಂದ್ರಮುಖ್ಯಭಿಸ್ತೈಃ ॥೬೭॥

---

ದುಃಖಿತರಾಗಿದ್ದ ಆ ದೇವತೆಗಳು ನನ್ನನ್ನು ಪಾರಿಜಾತಪುಷ್ಪಗಳಿಂದ ಪೂಜಿಸಿ ದುಃಖರಹಿತರಾಗಿ ಸಂತೋಷದಿಂದಿದ್ದರು. ॥೬೪॥

ಶ್ರೇಷ್ಠವಾದ ಕಮಲಗಳಿಂದ ಭಕ್ತಿಸಮೇತರಾಗಿ ಶಿವಲಿಂಗವನ್ನು ಪೂಜಿಸುವುದರಿಂದ ಅಮಿತವಾದ ಪುಣ್ಯವು ಲಭಿಸುವುದು. ವಾಯುಲೋಕ, ಅಗ್ನಿಲೋಕ ಮತ್ತು ಇಂದ್ರಲೋಕವೆಂಬ ಲೋಕತ್ರಯಗಳಲ್ಲಿ ವಾಸವಾಗಿರಲು ಸಾಧನವಾದ ಪುಣ್ಯಕ್ಕಿಂತಲೂ ಶಿವಾರ್ಚನೆಯಿಂದ ಲಭಿಸುವ ಆ ಪುಣ್ಯವು ಮಿಗಿಲಾದುದು. ॥೬೫॥

ಆ ಇಂದ್ರೋಪೇಂದ್ರಾದಿ ದೇವತೆಗಳೂ ಈಶ್ವರ ಭಕ್ತಿಯ ಮಹಿಮೆಯಿಂದ ಬಲಶಾಲಿಗಳಾಗಿ ಮುದಿತರಾದರು. ಮುನಿಗಳೂ ಸಹ ಶಿವನಲ್ಲಿ ಭಕ್ತಿಭಾವವನ್ನು ತೋರಿ ತಮ್ಮ ದುರಿತಗಳನ್ನು ನಾಶಗೊಳಿಸಿ ಆನಂದತುಂದಿಲರಾದರು. ॥೬೬॥

ಆಗ ಆ ದೇವತೆಗಳು, ಮಹೇಶ್ವರನೇ, ನಿನ್ನ ದಯಾದೃಷ್ಟಿಯಿಂದ ಪವಿತ್ರರಾದ ನಮ್ಮಂತಹ ಅಂಗರಕ್ಷಕರೊಡಗೂಡಿ, ನಿನ್ನ ಶಕ್ತಿಯನ್ನು ಸ್ವೀಕರಿಸಿ ಈ ಕುಮಾರ ಸ್ವಾಮಿಯು ಪ್ರಮಥಗಣಗಳೊಡನೆಯೂ, ನಾಗಗಣಗಳೊಡನೆಯೂ ಕೂಡಿ ನಮ್ಮ ಶತ್ರುಗಳಾದ ರಾಕ್ಷಸರನ್ನೆಲ್ಲಾ ನಾಶಗೊಳಿಸಿರುವನು ಎಂದು ಪ್ರಾರ್ಥಿಸಿದರು. ॥೬೭॥

॥ ಸೂತ ಉವಾಚ ॥

ಸಸ್ಮಾರ ಸ್ಮರಹಂತೃನಂದನವರಾವೀರಃ ಕುಮಾರೋಽಸುರಾ ।
ರಾವೋಽದ್ಭೂತಸುನಂದನೋತ್ತಮಸುಮ್ಯೈರಭ್ಯರ್ಚ್ಯಯುಚ್ಚಂಕರಂ ।
ನಾಮ್ನಾಮಷ್ಟಸಹಸ್ರತೋಽಷ್ಟತನವಂ ರುದ್ರಾರ್ಥಪದ್ಯೈಃ ಸ್ತುವ ।
ನ್ದೇವೀಂ ವೇದಪದಸ್ತವೀನ ತಜ್ಞಯಪದ್ಯೈರ್ಹೃಷ್ಟೋ ಮುದಾ ತಂ ಶಿವಂ
॥೬೮॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶ್ರೀಗೌರೀಸಂವಾದೇ
ದೇವಸಂಘಾಕೃತಷಣ್ಮುಖಸ್ತವ ಷಡಾನನಮಹೇಶ ಸಂದರ್ಶನ
ವರ್ಣನಂ ನಾಮ ತ್ರಯೋವಿಂಶೋಽಧ್ಯಾಯಃ

---

ಬಳಿಕ ಸೂತನು ಮುನಿಗಳನ್ನು ಕುರಿತು ಇಂತೆಂದನು--ಎಲೈ ದ್ವಿಜೋತ್ತಮರೇ, ಈ ಪ್ರಕಾರವಾಗಿ ಮನ್ಮಥರಿಪುವಾದ ಪರಮೇಶ್ವರನ ಪುತ್ರರಲ್ಲಿ ಅತ್ಯಂತ ವೀರನೂ ಶ್ರೇಷ್ಠನೂ ಎನಿಸಿಕೊಂಡ ಆ ಕುಮಾರಸ್ವಾಮಿಯು ದೇವತೆಗಳ ನಂದನ ವನದಲ್ಲಿ ಉತ್ಪನ್ನವಾದ ಕಲ್ಪವೃಕ್ಷದ ಪುಷ್ಪಗಳಿಂದ ಪರಶಿವನನ್ನು ಪೂಜಿಸಿ ಅಷ್ಟೋತ್ತರಸಹಸ್ರನಾಮಗಳಿಂದ ಅಷ್ಟಮೂರ್ತಿಯಾದ ಆ ಶಿವನನ್ನು ಅರ್ಚಿಸಿ ಬಳಿಕ ವೇದವಾಕ್ಯಗಳಿಂದ ದೇವಿಯನ್ನು ಸ್ತುತಿಸಿ ಆನಂದಪರವಶನಾದನು. ॥೬೮॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಈಶವೆಂಬ ಸಂಜ್ಞೆಯುಳ್ಳ ಮತ್ತು ಶಿವಪಾರ್ವತೀ
ಸಂವಾದದಿಂದೊಳಗೊಂಡ ಹನ್ನೆರಡನೆಯ ಅಧ್ಯಾಯದಲ್ಲಿ ದೇವತೆಗಳಿಂದ
ಮಾಡಲ್ಪಟ್ಟ ಷಣ್ಮುಖಸ್ತೋತ್ರ ಮತ್ತು ಷಣ್ಮುಖನು ಈಶ್ವರನನ್ನು
ಸಂದರ್ಶಿಸಲು ಹೋಗುವಿಕೆ ಮೊದಲಾದುವುಗಳ ವರ್ಣನೆ
ಯುಳ್ಳ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಚತುರ್ವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಓಂಕಾರಕುಂಡನಿಲಯೋ ಓಂಕಾರಾರ್ಥಪ್ರಕಾಶಕೃತ್ ।
ಓಂಕಾರಜಪಸುಪ್ರೀತೋ ಓಂಕಾರಸ್ವರಮಾತ್ರಕಃ ॥೧॥

ಓಂಕಾರಾರ್ಥೋಽಮಿತ್ಯರ್ಥೋ ನಾನಾಮಂತ್ರಸ್ವರೂಪವಾನ್ ।
ನಾದರೂಪೋ ನಾಶಿತಾಘೋ ನಾಮರೂಪಗುಣಾತಿಗಃ ॥೨॥

ನಾಗಾಜಿನೋತ್ತರಾಸಂಗೋ ನಾಮಪ್ರೀತೋ ನತಾಖಿಲಃ ।
ಮಾಯಾತೀತೋ ಮಾಧವೀಯೋ ಮಾರ್ಗಮಾಣೋ ಮಹೇಶ್ವರಃ ॥೩॥

---

## ಇಪ್ಪತ್ತನಾಲ್ಕನೆಯ ಅಧ್ಯಾಯ

ಪರಮೇಶ್ವರನು ಓಂಕಾರವೆಂಬ ಪ್ರಣವಮಧ್ಯನಿವಾಸಿಯು. ಪ್ರಣವಾರ್ಥ ಪ್ರಕಾಶಕನು. ಪ್ರಣವಜಪದಿಂದ ತೃಪ್ತಿಹೊಂದುವವನು. ಪ್ರಣವದಲ್ಲಿ ಧ್ವನಿರೂಪ ದಿಂದಿರುವವನು. ಓಂಕಾರಾರ್ಥರೂಪನು. ಓಂಕಾರಗೋಚರನು. ನಾನಾಮಂತ್ರ ರೂಪದಿಂದಿರುವವನು. ಧನ್ಯಾತ್ಮಕನು. ಪಾಪನಾಶಕನು. ವಿಜ್ಞಾನಾವಸ್ಥೆಯಲ್ಲಿ ನಾಮ, ರೂಪ, ಗುಣ ಇವಾವುವೂ ಇಲ್ಲದವನು. ॥೧-೨॥

ಗಜಚರ್ಮವನ್ನೇ ವಸ್ತ್ರವನ್ನಾಗಿ ಉಳ್ಳವನು. ಲಕ್ಷ್ಮೀಪತಿಗೆ ಪ್ರಿಯ ನಾದವನು. ನಾಮಧ್ಯಾನದಿಂದ ಪ್ರೀತನಾಗುವವನು. ಸಮಸ್ತರಿಂದಲೂ ನಮಸ್ಕೃತ ನಾದವನು. ಮಾಯೆಗೆ ಸಿಲುಕದವನು. ಋಷಿಜನರಿಂದ ಹುಡುಕಲ್ಪಡುವವನು.

ಮಾಂಸಾದನೋ ಮಾತೃಮೇಯೋ ಮಾನಮೇಯಾದಿ ವರ್ಜಿತಃ ।
ಶಿವಶ್ಶಿವತರಶ್ಶೀತಃ ಶೀತಾಂಶುಕೃತಭೂಷಣಃ ॥೪॥

ಶಿವೇತರಹರಶ್ಶ್ರೀಭೋ ಶಿಶಿರರ್ತುಪ್ರವರ್ತಕಃ ।
ವಾಮದೇವೋ ವಾಸಿ ವಾತೋ ವಾದ್ಯಮೋದೋವಸಾನನಃ ॥೫॥

ವಾತಚಕ್ರಪ್ರದೋ ವಾಗ್ಮೀ ವಾಯ್ವಾಹಾರಾಂಗದೋ ವಸುಃ ।
ಯಾಮಿನೀಶಕಲಾಮೌಲಿರ್ಯಾತಾಯಾತಪ್ರಿಯೋ ಯಮೀ ॥೬॥

ಯಮಪ್ರಮಥನೋ ಯಷ್ಟಾ ಯಜಮಾನೋ ಯತೀಶ್ವರಃ ।
ಸಿಂಧೂನಿಷಂಗಃ ಸಿಂಹೇಂದ್ರಃ ಸಿನೀವಾಲೀಸ್ತುತಿಪ್ರಿಯಃ ॥೭॥

ಸಿಂಧುಃ ಸಿಂಹಾಸನಾಸೀನಃ ಸಿಂಧುರಾಂಗತ್ವಗಂಬರಃ ।
ಧನಾಧೀಶೋಂಧಸಾಂ ನಾಥೋ ಧರ್ಮಾಧರ್ಮವಿಚಾರಕಃ ॥೮॥

---

ಮಹೇಶ್ವರನು. ಮಾಂಸಭಕ್ಷಕನು. ಸೂಕ್ಷ್ಮರೂಪದಲ್ಲಿರುವಾಗ ಅಳತೆಗೆ ಸಿಲುಕು ವವನು. ಬೃಹದ್ರೂಪದಲ್ಲಿ ಎಂದೂ ಅಳತೆಗೆ ಸಿಲುಕದವನು. ಮಂಗಳಕರನು. ಪೂರ್ಣಮಂಗಳರೂಪನು. ಶೀತರೂಪದವನು. ಚಂದ್ರನನ್ನೇ ಭೂಷಣವನ್ನಾಗಿ ಮಾಡಿಕೊಂಡವನು. ॥೩-೪॥

ಅಮಂಗಳನಾಶಕನು. ಶ್ರೀಕಾರಸ್ವರೂಪನು. ಶಿಶಿರಋತುವಿನಲ್ಲಿ ಮುಂದು ವರಿಯುವವನು. ವಾಮದೇವನು. ಪ್ರಾಣವಾಯುರೂಪಿಯು. ವಾದ್ಯಧ್ವನಿಯಿಂದ ಸಂತೋಷಗೊಳ್ಳುವವನು. ಜಗನ್ನಾಶಕನು. ವಾತರಾಶಿಯನ್ನು ಜಗತ್ತಿಗೆ ಕೊಡುವವನು. ವಾಚಾಲನು. ವಾಯುವನ್ನೇ ಆಹಾರವನ್ನಾಗಿ ಉಳ್ಳವನು. ಸರ್ಪ ವನ್ನೇ ತೋಳುಬಳೆಯನ್ನಾಗಿಯುಳ್ಳವನು. ದ್ರವ್ಯರೂಪಿಯು. ಚಂದ್ರಶೇಖರನು. ತನ್ನ ಭಕ್ತರಲ್ಲಿ ಪ್ರೀತಿಯುಳ್ಳವನು. ಜಿತೇಂದ್ರಿಯನು. ॥೫-೬॥

ಯಮನನ್ನು ಕೊಂದವನು. ಯಾಗಮಾಡಿದವನು. ಯಾಗ ಮಾಡಿಸು ವವನು. ಯತಿವರನು. ಸಮುದ್ರವನ್ನೇ (ತ್ರಿಪುರದಹನಕಾಲದಲ್ಲಿ) ಬತ್ತಳಿಕೆ ಯನ್ನಾಗಿ ಹೊಂದಿರುವವನು. ಸಿಂಹಶ್ರೇಷ್ಠನು. ಸಿನೀವಾಲೀ ದೇವತೆಯಿಂದ ಸ್ತುತಿಸಲ್ಪಡುವವನು. ಸಮುದ್ರರೂಪನು. ಸಿಂಹಾಸನದಲ್ಲಿ ಮಂಡಿಸುವವನು. ಗಜಚರ್ಮವನ್ನೇ ವಸ್ತ್ರವನ್ನಾಗಿ ಹೊಂದಿರುವವನು. ಕುಬೇರಸ್ವರೂಪನು. ಅಜ್ಞಾನಿ ಗಳಿಗೆ ಒಡೆಯನು. ಧರ್ಮಾಧರ್ಮಸ್ವರೂಪವನ್ನರಿತವನು. ॥೭-೮॥

ಧೌಮ್ಯೋ ಧಾತಾ ಧರಾಧೀಶೋ ಧೂರ್ಜಟಿರ್ಧೂಮಕೇತನಃ ।
ನಮಿತಾಶೇಷ ದೇವಾದಿರ್ನರನಾರಾಯಣಾರ್ಚಿತಃ ॥೯॥

ನತಿಪ್ರೀತೋ ನಮಸ್ಕಾರ್ಯೋ ನಗಧೃಙ್ನಗವಾಸಭೂಃ ।
ಮಯಸ್ಕಾರೋ ಮಂತ್ರರೂಪೋ ಮಸ್ಕರೀ ಮಸ್ತಕಾಂಬುಧೃಕ್ ॥೧೦॥

ಮನ್ಮಥಾಂತಕರೋ ಮಸ್ಯೋ ಮರ್ಮನಸ್ವೀ ಮನನಾತಿಗಃ ।
ಕಪಾಲಪಾಣಿಃ ಕಾಲಾತ್ಮಾ ಕಿಷ್ಕುಃ ಕೀರ್ತಿಪ್ರದಾಯಕಃ ॥೧೧॥

ಕುಸುಮಾರ್ಚನಸುಪ್ರೀತಿಃ ಕೂಜನಃ ಕೇಕಯೇಶ್ವರಃ ।
ಕೈಲಾಸಮೌಲಿನಿಲಯಃ ಕೋಪಾತ್ಮಾ ಕೌಲಮಾರ್ಗವಿತ್ ॥೧೨॥

ಕಂಜಾಕ್ಷಪೂಜ್ಯಃ ಕಸ್ತೂರೀಗಂಧವಾಸ್ಯೈಕಮೋದುಕಃ ।
ಖಂಡಪರಶುಃ ಖಾಂಡವಾಶೋ ಖಿಲ್ಯೋ ಖೀರಪ್ರಿಯಃ ಖಸಃ ॥೧೩॥

---

ಧೌಮ್ಯಋಷಿಸ್ವರೂಪನು, ಪ್ರಪಂಚಸೃಷ್ಟಿಕರ್ತನು, ಧರಾಧಿಪತಿಯು. ವಿಸ್ತಾರವಾದ ಜಟೆಯುಳ್ಳವನು, ಧೂಮ್ರವರ್ಣದ ಧ್ವಜವುಳ್ಳವನು, ದೇವತೆಗಳಿಂದ ನಮಸ್ಕರಿಸಲ್ಪಟ್ಟವನು, ನರನಾರಾಯಣರಿಂದ ಅರ್ಚಿಸಲ್ಪಟ್ಟವನು, ನಮಸ್ಕಾರದಿಂದ ತೃಪ್ತನಾಗುವವನು, ನಮಸ್ಕಾರಕ್ಕೆ ಯೋಗ್ಯನು, ಪರ್ವತವನ್ನೇ ಧರಿಸಿದವನು, ಪರ್ವತಪ್ರಾಂತದಲ್ಲಿ ವಾಸಿಸುವವನು, ತೇಜಶ್ಶಾಲಿಯು, ಮಂತ್ರಸ್ವರೂಪನು, ಸಂನ್ಯಾಸಿಯು, ಶಿರಸ್ಸಿನಲ್ಲಿ ಗಂಗೆಯನ್ನು ಧರಿಸಿರುವವನು. ॥೯-೧೦॥

ಮನ್ಮಥನನ್ನು ನಾಶಗೊಳಿಸಿದವನು, ಯಜ್ಞಸ್ವರೂಪನು, ಶೂರನು, ಧ್ಯಾನಾದಿಗಳಿಗೆ ಅಗೋಚರನು, ಬ್ರಹ್ಮಕಪಾಲವನ್ನು ಕೈಯಲ್ಲಿ ಧರಿಸಿದವನು, ಕಾಲಸ್ವರೂಪನು, ಮಾರ್ಗದ ಅಳತೆಯಂತಿರುವವನು, ಕೀರ್ತಿಪ್ರದನು, ಕುಸುಮಾರ್ಚನೆಯಿಂದ ಪ್ರೀತನಾಗುವವನು, ಧ್ವನ್ಯಾತ್ಮಕನು, ಕೇಕಯದೇಶಾಧಿಪತಿಯು, ಕೈಲಾಸಮೌಲಿಯಲ್ಲಿ ವಾಸಿಸುವವನು, ಕೋಪಸ್ವಭಾವದವನು, ಪರಂಪರೆಯಿಂದ ಬಂದ ಸಂಪ್ರದಾಯವನ್ನರಿತವನು. ॥೧೧-೧೨॥

ಕಮಲಾಕ್ಷನಿಂದ ಪೂಜಿತನಾದವನು, ಕಸ್ತೂರೀಗಂಧಲೇಪನದಲ್ಲಿ ಪ್ರೀತಿಯುಳ್ಳವನು, ಖಂಡವಾದ ಪರಶುವೆಂಬ ಆಯುಧವುಳ್ಳವನು, ಖಿಲವಾಗುವವಸ್ತುಗಳಲ್ಲಿರುವವನು, ಗಗನಭೇದಕ ಧ್ವನಿಯಲ್ಲಿ ಆಸೆಯುಳ್ಳವನು, ಅಂತರಿಕ್ಷಸ್ವರೂಪಿಯು,

ಖೂಂಡಪಃ ಖೇಟಧೃಕ್ ಖೈರಃ ಖೋಂತಕೃತ್ಖ್ವೇಧುಮೀಶ್ವರಃ ।
ಖಂಡಿತಾರಾತಿನಿಲಯಃ ಖರ್ಜೂರವನಮಧ್ಯಗಃ ॥೧೪॥

ಗಯಾಸುರಹರೋ ಗಾರ್ಗ್ಯೋ ಗಿರೀಶೋ ಗೀತಿವರ್ಧನಃ ।
ಗುರುರ್ಗುರುಜಯೋ ಗೇಯೋ ಗೌರೀಭರ್ತಾಥಗೌರಿಕಃ ॥೧೫॥

ಗೋವರ್ಧನೋ ಗಂಧವಹೋ ಗಂತಾ ಗರ್ವಪ್ರಕಾಶಕೃತ್ ।
ಘುಸ್ಮರೋ ಘಾಸದೋ ಘೀಶೋ ಘಿಸಕೋ ರಘುಪೂಜಿತಃ ॥೧೬॥

ಘೂಸಕೋ ಘೋರಕೋ ಘೈರೋ ಘೋಟವಾಹೋಥ ಘೋರಕೃತ್ ।
ಘಂಟಾಧ್ವನಿಪ್ರಿಯೋ ಘಸ್ಥೋ ಘನಗರ್ವೋ ಘನಾಘನಃ ॥೧೭॥

ಚಂದ್ರಚೂಡಶ್ಚಾರುರೂಪಶ್ಚಿತ್ರಕರ್ಮಾ ಚಿತಿಪ್ರಿಯಃ ।
ಚೀನಾಜ್ಜನೋ ಚಂಚುಚೂಡಶ್ಚೈತ್ರಶ್ಚಾತ್ರಾಣಸಂಸ್ಥಿತಃ ॥೧೮॥

---

ಬ್ರಹ್ಮಾಂಡದಲ್ಲಿ ಅಡಗಿರುವವನು, ಅಂತರಿಕ್ಷವನ್ನು ಮುಳುಗಿಸುವವನು, ಜಗತ್ಪತಿಯು, ಶತ್ರುನಿಲಯವನ್ನು ನಾಶಗೈದವನು, ಖರ್ಜೂರವನ ಮಧ್ಯದಲ್ಲಿರುವವನು. ಖೇಟಾಯುಧಧಾರಿಯು. ||೧೩-೧೪||

ಗಯಾಸುರನನ್ನು ಕೊಂದವನು, ಗಾರ್ಗ್ಯಮಹರ್ಷಿಯು, ಗಿರಿಯಲ್ಲಿ ಮಲಗಿರುವವನು, ಸಂಗೀತದಿಂದ ವೃದ್ಧಿಹೊಂದುವವನು, ಗುರುರೂಪಿಯು, ಶ್ರೇಷ್ಠವಾದ ಜಯವನ್ನು ಪಡೆಯುವವನು, ಗಾನರೂಪಿಯು, ಗೌರೀಪತಿಯು, ಶುಭ್ರವರ್ಣದವನು, ವೃಷಭವನ್ನು ಉದ್ಧರಿಸುವವನು, ವಾಯುರೂಪಿಯು, ಗಮನಶೀಲನು, ದುಷ್ಟರಗರ್ವವನ್ನು ನಾಶಗೊಳಿಸುವವನು, ಉಷ್ಣಾಂಶಭೂಯಿಷ್ಠನು, ಪ್ರಾಣಿಗಳಿಗೆ ಆಹಾರವನ್ನು ಕೊಡುವವನು. ಪರ್ವತಗಳಿಗೆ ಒಡೆಯನು. ಘಿಸಕ ? ರಘುವಿನಿಂದ ಪೂಜಿತನಾದವನು. ||೧೫-೧೬||

ಘೂಸಕಃ (?) ಘೋರರೂಪಿಯು, ಪ್ರಪಂಚರೂಪಿಯು, ಅಶ್ವವನ್ನೇ ವಾಹನವನ್ನಾಗಿಯುಳ್ಳವನು. ಘೋರಭಾವವನ್ನುಂಟುಮಾಡುವವನು. ಘಂಟಾಧ್ವನಿಯಲ್ಲಿ ಪ್ರೀತಿಯುಳ್ಳವನು. ಮೇಘವರ್ತಿಯು. ಅತಿಶಯವಾದ ಗರ್ವವುಳ್ಳವನು. ಘನ ಮತ್ತು ದ್ರವರೂಪಿಯು. ಚಂದ್ರಶೇಖರನು. ಸುಂದರರೂಪನು. ಚಿತ್ರವಿಚಿತ್ರವಾದ ಕಾರ್ಯವುಳ್ಳವನು. ಸ್ಮಶಾನದಲ್ಲಿ ಚಿತಾಭಸ್ಮಪ್ರಿಯನಾಗಿರುವವನು. ತೆಳುವಾದ ಚರ್ಮ

ಚೇತಾ ಚೇತೋಥ ಚಂಡಾಂಶುಶ್ಚಮಸೋ ಛೇದನಾಸಕೃತ್ ।
ಛತ್ರಧೃಕ್ಛಂದಸಶ್ಛೀನಶ್ಛನೋ ಉಚ್ಛೀನಕೃಚ್ಛಿಖೀ ॥೧೯॥

ಛೇತ್ತಾ ಛತ್ರಕರೋ ಛೋದಶ್ಛಂದಪ್ರೀತಶ್ಛದಪ್ರಿಯಃ ।
ಜಯದೋ ಜಾಗತೋ ಜಿಗ್ಯುರ್ಜೀವಿತಾಥೋ ಜುಷಸ್ವಕಃ ॥೨೦॥

ಜೂತಿಕೃಜ್ಜೈತ್ರಸಂಜೇತಾ ಜೋಗುವಾನ್ ಜೋರಥೋ ಜಟೀ ।
ಜಂಜಪೂಕೋ ಜಯಪರೋ ಜಂಗಮಾಜಂಗಮಾತ್ಮಕಃ ॥೨೧॥

ಜಂಝಾವಾದ್ಯರತೋ ಜಿಜ್ಞೋ ಝುಂಝಾ ಝುಂಝಾರವಪ್ರಿಯಃ ।
ಝುಂಕಾರಕೃಝಾಂಕರಿಕೋ ಝುಂಝೋ ಝುಂಝೋಥನಾಶನಃ ॥೨೨॥

---

ಧಾರಿಯು. ಮೊಗ್ಗಿನಂತಿರುವ ಜಟೆಯುಳ್ಳವನು. ಚೈತ್ರಮಾಸಸ್ವರೂಪನು. ಚತುರಂಗ ಬಲವನ್ನೂ ರಕ್ಷಿಸುವವನು. ॥೧೭-೧೮॥

ಚಿತ್ರರೂಪನು. ಚೈತನ್ಯವಿಲ್ಲದ ವಸ್ತುವಿನಂತಿರುವವನು. ಕ್ರೂರವಾದ ಕಿರಣಗಳುಳ್ಳವನು. ಚಮಸವೆಂಬ ಯಜ್ಞಪಾತ್ರೆಯಾಗಿರುವವನು. ಪ್ರಪಂಚವನ್ನು ಛೇದಿಸುವವನು. ಛತ್ರಿಯನ್ನು ಧರಿಸಿರುವವನು. ವೇದಜ್ಞನು ಸರ್ವವ್ಯಾಪಿಯು. ಜಗತ್ತನ್ನು ಹಾಹಾಕಾರಗೊಳಿಸುವವನು. ಶಿಖಾಸ್ವರೂಪಿಯು. ದುಷ್ಟರನ್ನು ನಾಶಗೊಳಿಸುವವನು. ಪ್ರಬಲವಾದ ಆಯುಧಗಳನ್ನು ಕೈಯಲ್ಲಿ ಹಿಡಿದಿರುವವನು. ನಿರ್ಮಲರೂಪಿಯು. ವೇದದಿಂದ ತೃಪ್ತಿಹೊಂದುವವನು ಬಿಲ್ವಪತ್ರೆಯಲ್ಲಿ ಆಸಕ್ತನಾದವನು. ಜಯಪ್ರದನು. ಸದಾ ಎಚ್ಚೆತ್ತವನು. ಜಯಶಾಲಿಯು. ಜೀವನವನ್ನು ಕೊಡುವವನು. ಪ್ರಪಂಚವನ್ನೇ ನುಂಗುವವನು. ॥೧೯-೨೦॥

ಸಮಸ್ತ ವಸ್ತುಗಳಿಗೂ ವೇಗವನ್ನು ನೀಡುವವನು. ಗೆದ್ದವರನ್ನು ಗೆಲ್ಲಿಸುವವನು. ಸ್ತೋತ್ರವುಳ್ಳವನು. ಜೋರಥನು (?) ಜಟಾಧಾರಿಯು. ಸ್ತೋತ್ರಪಾಠಗಳನ್ನು ಪುನರಾವೃತ್ತಿಯಿಂದ ಜಪಿಸುವವನು. ಜಯಶಾಲಿಯ ಪಕ್ಷದವನು. ಚರಸ್ಥಾವರ ವಸ್ತುಸ್ವರೂಪನು. ಬಿರುಗಾಳಿಯಂತೆ ಭೋರ್ಗರೆಯುವ ವಾದ್ಯರೂಪಿಯು. ವಿಶೇಷವಾಗಿ ತಿಳಿಯಬಯಸುವವನು. ಝುಂಝಾಧ್ವನಿಯಲ್ಲಿ ಆಸಕ್ತನು. ಝುಂಕಾರಮಾಡುವವನು. ಬಿರುಗಾಳಿಯ ಸ್ವರೂಪನು. ಝುಂಝಾಮಾರುತಾತ್ಮಕನು. ಧನವನ್ನೇ ಸ್ವೀಕರಿಸುವವನು. ॥೨೧-೨೨॥

ಯವನೋ ಯಾಮುಪ್ರಿಯೋ ಯಂತಾ ಯತೋಯಾನೋಯಮೀಯಜುಃ।
ಯಶಸ್ಕರೋ ಯತ್ರಪರೋ ಯತಮಾನೋ ಯಶೋಧನಃ ॥೨೩॥

ಟಂಕಾಪ್ರಿಯೋ ಟಂಕಣಕೋ ಟಕಾರೋ ಟಣಕಂಟಿಟಿಃ ।
ಕಾಂಟ್ಯೋ ಕರಪ್ರಿಯಃ ಕಟ್ಯೋ ಕರಟೆತ್ವಗ್ವಸೋ ಜಟೀ ॥೨೪॥

ನೀಲಕಂಠೋ ಕುಸುರಾಸ್ತ್ರಃ ಕಠೋರಃ ಕುಂಠಿತಾಘಕೃತ್ ।
ವೈಕುಂಠಪೂಜ್ಯಪೀಠಸ್ಥಃ ಪಾಠಃ ಪೈಠೀನಸಪ್ರಿಯಃ ॥೨೫॥

ಡಾಂಭಿಕೋ ಡಮರುಪ್ರೀತೋ ಡಾಮರೀ ತಂತ್ರಪೂರಕಃ ।
ಡಾಡಿಮೀಫಲಸುಪ್ರೀತೋ ಡಂಭೋ ಡಂಭಪ್ರಿಯೋಡಹುಃ ॥೨೬॥

---

ಯಮಸ್ವರೂಪನು, ಪ್ರತಿ ಯಾಮದಲ್ಲಿಯೂ ಪೂಜೆಯನ್ನು ಸ್ವೀಕರಿಸುವವನು, ಜಗನ್ನಿಯಾಮಕನು, ರಕ್ಷಕನು, ವಾಹನರೂಪಿಯು, ಜಿತೇಂದ್ರಿಯನು, ಯಜುರ್ವೇದಸ್ವರೂಪಿಯು, ಯಶಸ್ಸನ್ನುಂಟುಮಾಡುವವನು, ಎಲ್ಲೆಲ್ಲೂ ಇರುವವನು, ಪ್ರಯತ್ನಿಸುವವನು, ಯಶಸ್ಸನ್ನೇ ಧನವನ್ನಾಗಿ ಉಳ್ಳವನು, ಟಂಕಾವಾದ್ಯಪ್ರಿಯನು, ಟಂಕಣಸ್ವರೂಪನು, ಟಕಾರಾತ್ಮಕನು, ಟಣಟಟಾತ್ಮಕವಾದ ವಾದ್ಯರೂಪಿಯು, ಆನೆಯ ಕಪೋಲಪ್ರದೇಶದಲ್ಲಿ ನಿಲ್ಲುವವನು, ಆನೆಯ ಸೊಂಡಲಿನಲ್ಲಿ ಪ್ರೀತಿಯುಳ್ಳವನು, ಆನೆಯ ಕಟಪ್ರದೇಶದಲ್ಲಿ ವಾಸಿಸುವವನು, ಆನೆಯ ಚರ್ಮವನ್ನೇ ಬಟ್ಟೆಯನ್ನಾಗಿ ಮಾಡಿಕೊಂಡಿರುವವನು, ಜಟಾಧಾರಿಯು. ॥೨೩-೨೪॥

ಕಪ್ಪಾದ ಕಂಠವುಳ್ಳವನು, ಕ್ರೂರವಾದ ಅಸ್ತ್ರಗಳುಳ್ಳವನು, ಕ್ರೂರಸ್ವಭಾವದವನು, ಪಾಪನಾಶಕನು, ವಿಷ್ಣುವಿನಿಂದ ಪೂಜಿತವಾದ ಪೀಠಗಳುಳ್ಳವನು, ಪಾಠರೂಪನು, ಪೈಠೀನಸರೆಂಬ ಋಷಿವರ್ಗಕ್ಕೆ ಪ್ರಿಯನಾದವನು, ಡಂಭವುಳ್ಳವನು, ಡಮರುಗವೆಂಬ ಆಯುಧದಲ್ಲಿ ಪ್ರೀತಿಯುಳ್ಳವನು, ತಂತ್ರಶಾಸ್ತ್ರಪ್ರೇರಕನು, ಯೋಗ, ಶಿವ, ದುರ್ಗಾ, ಸಾರಸ್ವತ, ಬ್ರಹ್ಮ, ಗಾಂಧರ್ವಗಳೆಂಬ ಆರು ತಂತ್ರಸ್ವರೂಪನು, ದಾಳಿಂಬ ಹಣ್ಣಿನಿಂದ ತೃಪ್ತನಾಗುವವನು, ಆಡಂಬರವುಳ್ಳವನು, ಆಡಂಬರವುಳ್ಳವರಲ್ಲಿ ಪ್ರೀತಿಯುಳ್ಳವನು, ಡಹುಃ (Artocarpus Lakuca). ॥೨೫-೨೬॥

ಢಕ್ಕಾನಾದೋ ಮೂಢಹೀನೋ ಢಂಢಾತೇಜೋ ವಿವರ್ಜಿತಃ ।
ಢುಂಢೋ ಗೂಢೋ ಮಹಾಬಾಹುಃ ಗೂಢಪಾದ್ವರಭೂಷಣಃ ॥೨೭॥

ಣಕಾರವಾಚ್ಯಸ್ತೃಣಕೃತ್ಪಾಣಿಪಾದೋದರಃ ಫಣೀ ।
ವೀಣಾಪಾಣಿಃ ಶೂಲಪಾಣಿಃ ಕಣಪಾದಃ ಕಣಭಕ್ಷಣಃ ॥೨೮॥

ತಸ್ಕರಸ್ತಾತ್ಪಸ್ತೀರ್ಥರ್ಶಕ್ತಿಃ ತೀರ್ಥ್ಯಾ ತುರ್ಯಾರವಪ್ರಿಯಃ ।
ತೇಜಸ್ವೀ ತೇಜಸೀ ಯಂತಾ ತೋಷಣಃ ತೋಲ್ವಲಾರ್ಚಿತಃ ॥೨೯॥

ತಂತುಸ್ತಮಾಲನೀಲಾಂಗಸ್ತಾರಕಸ್ತಾಮ್ರಪಾಣಯಃ ।
ಥಕಾರೋ ಮನ್ಮಥಾರಾತಿಃ ಪ್ರಮಥೇಶಃ ಕುಥಾವೃತಃ ॥೩೦॥

ಕಂಭಾಗೋಥ ಕಥಾಪ್ರೀತೋ ಕೋಥುವಿಗಾಗೀತಸುಪ್ರಿಯಃ ।
ದಮನೋ ದಾಂತನಿಲಯೋ ದೀನೇಶೋ ದೀನಪಾಲಕಃ ।೩೧॥

---

ಣಕಾರದಿಂದ ವಾಚ್ಯನಾದವನು, ತೃಣವನ್ನು ಮಹತ್ತನ್ನಾಗಿ ಮಾಡುವವನು, ಕೈ, ಕಾಲು, ಹೊಟ್ಟೆ ಇವುಗಳಲ್ಲಿ ಹಾವನ್ನು ಹೊಂದಿರುವವನು, ಢಕ್ಕಾವಾದ್ಯರೂಪಿಯು, ಮೌಢ್ಯವಿಲ್ಲದವನು, ಅನ್ವೇಷಣರೂಪವಾದ ತೇಜಸ್ಸಿನಿಂದ ರಹಿತನಾದವನು, ಅನ್ವೇಷಿಯು, ಗುಪ್ತವಾಗಿರುವವನು, ಬಲಿಷ್ಠಗಳಾದ ತೋಳುಗಳುಳ್ಳವನು, ಸರ್ಪಭೂಷಣನು, ವೀಣೆಯನ್ನೂ, ಶೂಲವನ್ನೂ ಕೈಯಲ್ಲಿ ಧರಿಸಿರುವವನು, ಸಕಲ ಸೂಕ್ಷ್ಮವಸ್ತುಗಳನ್ನೂ ಅಡಗಿಸಿಕೊಂಡಿರುವ ಪಾದವುಳ್ಳವನು, ಅಣುವಸ್ತುಗಳನ್ನು ಭಕ್ಷಿಸುವವನು. ॥೨೭-೨೮॥

ಕಳ್ಳನ ವೇಷವನ್ನು ತಾಳುವವನು, ತಾಪ್ಯಃ(?) ಅಡ್ಡಲಾಗಿರುವವನು, ತೀರ್ಥಗಳಲ್ಲಿ ನೆಲಸಿರುವವನು, ತುತ್ತೂರಿಯ ವಾದ್ಯದಲ್ಲಿ ಪ್ರಿಯನೆನಿಸಿದವನು, ತೇಜಶ್ಶಾಲಿಯು, ತೇಜಸ್ವಿಯು, ಮುಖಂಡನು, ಎಲ್ಲರನ್ನೂ ತೃಪ್ತಿಪಡಿಸುವವನು, ತೋಲ್ವಲನೆಂಬ ಋಷಿಯಿಂದ ಪೂಜಿತನಾದವನು, ತಂತುರೂಪಿಯು, ಹೊಂಗೆಯ ಮರದಂತೆ ಕಪ್ಪಾದ ದೇಹವುಳ್ಳವನು, ಸಂಸಾರದುಃಖದಿಂದ ಉದ್ಧರಿಸುವವನು, ಕೆಂಪಾದ ಕೈಗಳುಳ್ಳವನು, ಥಕಾರಾತ್ಮನು, ಮನ್ಮಥನಾಶಕನು, ಪ್ರಮಥಗಣಗಳಿಗೆ ಒಡೆಯನು. ಆನೆಯ ಮೇಲಿನ ದಿಂಬಿನಲ್ಲಿ ಕುಳಿತಿರುವವನು. ॥೨೯-೩೦॥

ಜಲರಾಶಿಯಲ್ಲಿ ನಿಲ್ಲುವವನು. ಕಥೆಯಲ್ಲಿ ಪ್ರೀತಿಯುಳ್ಳವನು. ಅಂಧಗಾನದಲ್ಲಿ ಪ್ರಿಯನಾಗಿರುವವನು. ಸರ್ವವನ್ನೂ ಅಡಗಿಸಿರುವವನು. ದಮಗುಣಕ್ಕೆ

ದುರ್ದಾಂತೋ ದೂತಹರಣೋ ದೇಶಕಾಲೋಥ ದೈವವಿತ್ ।
ದೋಷಘ್ನೋ ದೌರ್ಗತಿಘ್ನೋಥ ದಂಡಪಾಣಿರ್ದಯಾಪರಃ ॥೩೨॥

ಧನದೋ ಧಾನ್ಯದೋ ದಾರೋ ಧುಂಧುಮೂಕೋ ಧುರಂಧರಃ ।
ಧೇನುಪ್ರಿಯೋ ಧೈರ್ಯಧನೋ ಧರ್ಮಾಧರ್ಮವಿಶಾರದಃ ॥೩೩॥

ನಾಮ್ಯೋನಾದಿರ್ನೀತಿರತೋ ನುಹತೋ ನೇತ್ರಪಾಲಕಃ ।
ನತಾರ್ತಿಶಮನೋ ನೇತಾನಂತೋ ನಾಮವಿವರ್ಜಿತಃ ॥೩೪॥

ಪದ್ಮನೇತ್ರಪ್ರಪೂಜ್ಯಾಂಘ್ರಿಃ ಪಾರ್ವತೀಶಃ ಪ್ರಸಾದಕೃತ್ ।
ಪೀಯೂಷಪಃ ಪೀತವಾಸಾಃ ಪೀನಾಂಗಃ ಪಾನಪೋ ರವಿಃ ॥೩೫॥

ಪ್ರೋಷಣಃ ಪೈತೃಕಃ ಪೋಷಃ ಪನ್ನಗಾಭರಣಃ ಪರಃ ।
ಫಣೀಶ್ವರಧರಃ ಫಾಲನಯನಃ ಫಲ್ಗುಕೇಶ್ವರಃ ॥೩೬॥

---

ಆಶ್ರಯನು. ದೀನರಿಗೆ ಒಡೆಯನಾದವನು. ದೀನರನ್ನು ರಕ್ಷಿಸುವವನು. ಯಾರಿಂದಲೂ ಆಕ್ರಮಿಸಲು ಅಸಾಧ್ಯನಾದವನು. ದೂತರನ್ನು ನಾಶಗೊಳಿಸುವವನು. ದೇಶ, ಕಾಲ, ಅದೃಷ್ಟ ಇವುಗಳನ್ನರಿತವನು. ದೋಷಗಳನ್ನು ನಾಶಗೊಳಿಸುವವನು. ಬಡತನವನ್ನು ನೀಗುವವನು. ದಂಡಪಾಣಿಯು. ದಯಾಶಾಲಿಯು. ॥೩೧-೩೨॥

ಧನವನ್ನೂ, ಧಾನ್ಯವನ್ನೂ ಕೊಡುವವನು. ಉದಾರಸ್ವಭಾವದವನು. ಧುಂಧುಮೂಕನೆಂಬ ಋಷಿಸ್ವರೂಪನು. ಸರ್ವಕಾರ್ಯಕ್ಕೂ ಮುಂದಾಳಾದವನು. ಧೇನುಗಳಿಗೆ ಪ್ರಿಯನೆನಿಸಿದವನು. ಧೈರ್ಯವನ್ನೇ ಧನವನ್ನಾಗಿ ಉಳ್ಳವನು. ಧರ್ಮಾಧರ್ಮದಲ್ಲಿ ನಿಪುಣನಾದವನು. ನಮಸ್ಕಾರಕ್ಕೆ ಯೋಗ್ಯನಾದವನು. ಆದಿರಹಿತನು. ನೀತಿವಂತನು. ಮನುಷ್ಯರನ್ನು ಕೊಲ್ಲುವವನು. ಕಣ್ಣುಗಳನ್ನು ರಕ್ಷಿಸುವವನು. ಭಕ್ತರ ಪೀಡೆಯನ್ನು ಪರಿಹರಿಸುವವನು. ಮುಖಂಡನು. ಅಂತವಿಲ್ಲದವನು. ನಿಜವಾಗಿಯೂ ಯಾವ ಹೆಸರೂ ಇಲ್ಲದವನು. ॥೩೩-೩೪॥

ಕಮಲಾಕ್ಷನಿಂದ ಪೂಜಿತವಾದ ಪಾದವುಳ್ಳವನು. ಪಾರ್ವತೀರಮಣನು. ಪ್ರಸಾದವನ್ನು ಅನುಗ್ರಹಿಸುವವನು. ಅಮೃತಕ್ಕೆ ಅಧಿಪತಿಯು. ಪೀತಾಂಬರಧಾರಿಯು. ದಪ್ಪವಾದ ಅಂಗವುಳ್ಳವನು. ಪಾನಕ್ಕೆ ಅಧಿಪತಿಯು. ಸೂರ್ಯರೂಪಿಯು. ಸರ್ವರಿಂದ ರಕ್ಷಿತನಾದವನು. ಪಿತೃರೂಪಿಯು. ಪುಷ್ಟನಾದವನು. ನಾಗಾಭರಣನು.

ಫೂತ್ಕಾರಕೃದ್ಧೃತಿಶಿರಃ ಫಾಣೀತೋ ಫಣಿತಾಕೃತಿಃ ।
ಬರ್ಬರೋ ಬಾಡಬೋ ಬಿಂದುರ್ಬಿಲ್ಮಿನಿರ್ಬುಧವರ್ಧನಃ ॥೩೭॥

ಬಂಬುಪ್ರೀತೋಂಬರಗತೋ ಬಂಧವಾಸನಸಂಸ್ಥಿತಃ ।
ಬೋಧಕೋ ಬೋದ್ಧೃಹೃದ್ಬಂಧೋ ಬಲಪ್ರಮಥನೋಬಲೀ ॥೩೮॥

ಭಯಹೃದ್ಭಾನುದೃಗ್ಭಿಲ್ಲೋ ಭೀತಿಸೋ ಭೂತಿಭೂಷಣಃ ।
ಭೇರೀವಾದ್ಯಪ್ರಿಯೋ ದೇವೋ ಭೈರವೋ ಭೋಗಭಾಗ್ಭವಃ ॥೩೯॥

ಭೌಜ್ಯಪೂಜ್ಯೋ ಭಂಡಖಂಡೋ ಭೀಮೋ ಭೋಗವಿವರ್ಜಿತಃ ।
ಮನೋನ್ಮನೋ ಮಾಣವಕೋ ಮಿತಿಕೃನ್ಮೀನಲೋಚನಃ ॥೪೦॥

---

ಪರಾಪರಸ್ವರೂಪನು. ಆದಿಶೇಷನನ್ನು ಧರಿಸಿರುವವನು. ಅಗ್ನಿನೇತ್ರನು. ಫಲ್ಗುನೀ ನಕ್ಷತ್ರಾಧಿಪತಿಯು. ॥೩೫-೩೬॥

ಫೂತ್ಕಾರಮಾಡುವ ಆದಿಶೇಷನನ್ನು ಶಿರಸ್ಸಿನಲ್ಲಿ ಧರಿಸಿರುವವನು, ಫಣಿಯಿಂದ ಪೂಜಿತನಾದವನು, ಸರ್ಪಾಕಾರನು, ಬರ್ಬರದೇಶವಾಸಿಯು, ಬಡಬಾಗ್ನಿಸ್ವರೂಪನು, ಬಿಂದುರೂಪಿಯು, ವೃಕ್ಷಕುಂಜರೂಪಿಯು, ವಿದ್ವಾಂಸರನ್ನು ಪೋಷಿಸುವವನು, ನೇರಲೇಹಣ್ಣಿನಿಂದ ತೃಪ್ತನಾಗುವವನು, ಅಂತರಿಕ್ಷಗಾಮಿಯು, ಮೇಘಮಂಡಲದಲ್ಲಿ ನೆಲಸಿರುವವನು, ಜ್ಞಾನಪ್ರದನು, ಜ್ಞಾನಿಗಳ ಬಂಧನವನ್ನು ಪರಿಹರಿಸುವವನು, ಬಲಿಷ್ಠರನ್ನು ನಾಶಗೊಳಿಸುವವನು, ಬಲಿಷ್ಠನು. ॥೩೭-೩೮॥

ಭಕ್ತರ ಭಯವನ್ನು ಹೋಗಲಾಡಿಸುವವನು, ಸೂರ್ಯನನ್ನೇ ನೇತ್ರವನ್ನಾಗಿ ಮಾಡಿಕೊಂಡಿರುವವನು, ಕಿರಾತರೂಪಿಯು, ಭೀತಿಯನ್ನು ಹೋಗಲಾಡಿಸುವವನು, ವಿಭೂತಿಯಿಂದ ಅಲಂಕೃತನಾದವನು, ಭೇರೀವಾದ್ಯದಲ್ಲಿ ಆಸೆಯುಳ್ಳವನು, ದೇವದೇವನು, ಭೈರವನು, ಭೋಗಿಯು, ಉತ್ಪತ್ತಿಯನ್ನು ತೋರ್ಪಡಿಸುವವನು, ರಾಜೋಪಚಾರದಿಂದ ಪೂಜಿಸಲ್ಪಡುವವನು, ಭಂಡಾಸುರನನ್ನು ಖಂಡಿಸಿದವನು, ಭಯಂಕರನು, ಸುಖದೂರನು, ಉನ್ಮಾದಾವಸ್ಥೆಯಿಂದಿರುವವನು, ವಟುರೂಪಿಯು, ಎಲ್ಲರಿಗೂ ಒಂದು ಅವಧಿಯನ್ನು ಕಲ್ಪಿಸಿರುವವನು, ಮೀನುಗಳಂತೆ ಲೋಚನಗಳುಳ್ಳವನು. ॥೩೯-೪೦॥

ಮುನಿಪ್ರಿಯೋ ಮೂಕಪಾಲೋ ಮೇನಕಾಜನಕೋ ಮನಃ ।
ಮೈನಾಕವರದೋ ಮೋಚಾಫಲಪ್ರೀತೋ ಮರುತ್ವತಃ ॥೪೧॥

ಮೌನೀ ಪೂಜ್ಯೋ ಮಂಥರಕೋ ಮಸ್ಕರೀ ಮಯಶಿಲ್ಪದಃ ।
ಯಶೋ ಧನ್ಯೋ ಯಾಯಜೂಕೋ ಯಜ್ಞಕೃದ್ಯಜ್ಞನಾಶನಃ ॥೪೨॥

ಯಾಂತ್ರಿಕೋ ಯಂತ್ರಮಧ್ಯಸ್ಥೋ ಯಶೋದಾತನಯಾರ್ಚಿತಃ ।
ರಮಣೋ ರಾವಣಪ್ರೀತೋ ರೀತಿದೋ ರುಗ್ವಿನಾಶಕೃತ್ ॥೪೩॥

ರೇತಸ್ವೀ ರೈಭ್ಯವರದೋ ರೋದನೋ ರೌತಿನಾಶನಃ ।
ರಂಧನೋ ರಸಪೋ ರಾಮೋ ರಕಿದೋ ಸಗಣಸ್ಥಿತಃ ॥೪೪॥

ಲಲಾಟನಯನೋ ಲೀನೋ ಲಿಂಗಸ್ಥೋ ಲುತಿಪೂಜಿತಃ ।
ಲುಲಾಯವಾಹಹರಣೋ ಲೇಶೋ ಲಭ್ಯೋ ಲೌಲ್ಯವಿವರ್ಜಿತಃ ॥೪೫॥

---

ಮುನಿಗಳಿಗೆ ಪ್ರಿಯನಾದವನು, ಮೂಕರನ್ನು ಕಾಪಾಡುವವನು, ಮೇನಕೆಗೆ ತಂದೆಯಂತಿರುವವನು, ಮಂತ್ರರೂಪಿಯು, ಮೈನಾಕನಿಗೆ ವರವನ್ನಿತ್ತವನು, ಬಾಳೆ ಹಣ್ಣಿನಿಂದ ತೃಪ್ತಿ ಹೊಂದುವವನು, ವಾಯುರೂಪಿಯು, ಮೌನದಿಂದಿರುವವನು, ಪೂಜ್ಯನು, ನಿದಾನವಾಗಿ ನಡೆಯುವವನು, ಸಂನ್ಯಾಸಿಯು, ಮಯನಿಗೆ ಶಿಲ್ಪಶಾಸ್ತ್ರವನ್ನಿತ್ತವನು, ಯಶೋರೂಪಿಯು, ಕೃತಾರ್ಥನು, ಯಜ್ಞವನ್ನು ನಡೆಸುವವನು, ಯಜ್ಞವನ್ನು ನಾಶಗೊಳಿಸುವವನು. ॥೪೧-೪೨॥

ಯಂತ್ರವನ್ನು ನಡೆಸುವವನು, ಯಂತ್ರಮಧ್ಯವರ್ತಿಯು, ಯಶೋದಾಪುತ್ರನಿಂದ ಪೂಜಿತನಾದವನು, ಸರ್ವರನ್ನೂ ಆಹ್ಲಾದಗೊಳಿಸುವವನು, ರಾವಣನಿಂದ ಪ್ರೀತಿಹೊಂದಿದವನು, ರೀತಿಪ್ರದನು, ರೋಗನಾಶಕನು, ರೇತಸ್ಸುಳ್ಳವನು, ರೈಭ್ಯನೆಂಬ ಋಷಿಗೆ ವರವಿತ್ತಿರುವನು, ರೋದಿಸುವನಂತಿರುವವನು, ದುಃಖನಾಶಕನು, ರಂಧನ(?) ರಸಾಧಿಪತಿಯು, ಆಹ್ಲಾದಕರನು, ಪ್ರೀತಿಯನ್ನುಂಟುಮಾಡುವವನು, ರೇಫಾತ್ಮಕವಾದ ಗಣಮಧ್ಯದಲ್ಲಿ ನಿಲ್ಲುವವನು. ॥೪೩-೪೪॥

ಅಗ್ನಿನೇತ್ರವುಳ್ಳವನು. ಎಲ್ಲಿಯೂ ಅಡಗಿರುವವನು. ಶಿವಲಿಂಗಾಂತರ್ವರ್ತಿಯು. ಋಷಿಸಮೂಹದಿಂದ ಪೂಜಿತನು. ಮಹಿಷವಾಹನನಾದ ಯಮನನ್ನು ಸೋಲಿಸಿದವನು. ಅಲ್ಪವಸ್ತುವಿನಂತೆ ತೋರುವವನು. ಭಕ್ತರಿಗೆ ಸುಲಭಸಾಧ್ಯನು.

ವಸುದೋ ವಾಮದೇವಶ್ಚ ವಿಶ್ವನಾಥೋ ವಿಶಾಲದೃಕ್ ।
ವೀತಿಹೋತ್ರ ಮಹಾನೇಶೋ ವೇನೋ ವೈಶ್ವಾನರೋ ವಟುಃ ॥೪೬॥

ವಾಷಟ್ಕೃದ್ವಾಮದೇವ್ಯೋಽಥ ವಾಮನಾಂಗವಿಧಾರಕಃ ।
ಷಡಃ ಷಾಜ್ಯಃ ಷಡಾಧಾರೋ ಪಾಷಂಡಃ ಸ್ವ್ರಾಣಖಂಡಕಃ ॥೪೭॥

ಉಚ್ಚೈರ್ಘೋಷೋ ಘೋರವೇಷೋ ಭೀಷಣೋ ಬಹುಭಾಷಣಃ ।
ಶಾಂಗಃ ಶಾಂತಃ ಶಿವಶ್ಶೀತಃ ಶುನಕಃ ಶೂನಕೃಚ್ಛಟಃ ॥೪೮॥

ಶೇಷೋ ವಿಶೇಷಣಃ ಶಾಸ್ತಾ ಶತಾತ್ಮಾ ಶೌನಕಾರ್ಚಿತಃ ।
ಸನಾತನಶ್ಚ ಸಾವಿತ್ರಃ ಸಿಂಧುಃ ಸೀಧುಃ ಸುನೀಥಕಃ ॥೪೯॥

---

ಚಾಂಚಲ್ಯರಹಿತನು. ದ್ರವ್ಯಪ್ರದನು. ವಾಮದೇವ ಋಷಿಸದೃಶನು. ಜಗದೊಡೆಯನು. ವಿಶಾಲವಾದ ಲೋಚನವುಳ್ಳವನು. ವೀತಿಹೋತ್ರನೆಂಬ ಮಹರ್ಷಿಗೆ ಪೂಜ್ಯನೆನಿಸಿದವನು. ಸರ್ವವ್ಯಾಪಿಯು. ಅಗ್ನಿರೂಪನು. ಬ್ರಹ್ಮಚಾರಿವೇಷದವನು. ||೪೫-೪೬||

ವಷಟ್ಕಾರರೂಪನು. ವಾಮದೇವ ಋಷಿಹೃದಯಸ್ಥನು. ವಾಮನಾವತಾರ ಮಾಡಿದ ಉಪೇಂದ್ರನಿಗೆ ಅಂಗರೂಪದಲ್ಲಿದ್ದವನು. ಷಡ್ಗುಣಭರಿತನು. ಪ್ರಶಸ್ತವಾದ ಆಜ್ಯರೂಪಿಯು. ಷಟ್ಚಕ್ರಗಳಿಗೆ ಆಧಾರಸ್ತಂಭದಂತಿರುವವನು. ಶೂದ್ರನು. ಪ್ರಾಣಿರಾಶಿಯನ್ನು ನಾಶಗೊಳಿಸುವವನು. ಉಚ್ಚಧ್ವನಿಯಿಂದ ಗರ್ಜಿಸುವವನು. ಭಯಂಕರವಾದ ವೇಷವುಳ್ಳವನು. ಭಯಂಕರಾಕಾರನು. ಬಹುವಿಧವಾಗಿ ಭಾಷಣಮಾಡುವವನು. ಸುಖಕರವಾದ ಅಂಗವುಳ್ಳವನು. ಶಾಂತಸ್ವಭಾವದವನು. ಮಂಗಳಕರನು. ಶೀತಸ್ವಭಾವದವನು. ನಾಯಿಮರಿಯಂತೆ ವೇಷತಾಳುವವನು. ಶೂನಕೃತ್ (?) ||೪೭-೪೮||

ಆದಿಶೇಷಸ್ವರೂಪಿಯು. ವಿಶೇಷಗುಣವಂತನು. ಶಿಕ್ಷಕನು. ನಾನಾವಿಧವಾದ ಆತ್ಮಸ್ವರೂಪವುಳ್ಳವನು. ಶೌನಕಋಷಿಯಿಂದ ಅರ್ಚಿತನಾದವನು. ಅನಾದಿಪುರುಷನು. ಸವಿತೃದೇವತಾರೂಪಿಯು. ಸಮುದ್ರಾತ್ಮಕನು. ಸೋಮರಸರೂಪಿಯು ಸಚ್ಚರಿತ್ರನು. ಸಾರಥಿಯಂತಿರುವವನು. ಅಡ್ಡಗಟ್ಟೆಯಂತಿರುವವನು. ಜನ್ಮವನ್ನು ತಾಳುವವನು. ಮರಳಿನ ಕಣಗಳಂತಿರುವವನು. ಸಂಪೂರ್ಣವಾದ ವಿನಯ

ಸೂತಃ ಸೇತುಃ ಸೌತಿಕರಃ ಸೈಕತಃ ಸನ್ನತಿಸ್ಸಮಃ ।
ಕ್ಷಪಾಪತಿಃ ಕಲಾಧಾರೀ ಕ್ಷಾತ್ರಕರ್ಮಾ ಕ್ಷಿತೀರಥಃ ॥೫೦॥

ಕ್ಷುದ್ರಕರ್ಮವಿನಾಶಾತ್ಮಾ ಕ್ಷುತ್ತೃಷ್ಣಾದಿವಿವರ್ಜಿತಃ ।
ಹಾಹಾಹೂಹೂ ಮುಖಸ್ತುತ್ಯೋ ಹಾನಿವೃದ್ಧಿವಿವರ್ಜಿತಃ ॥೫೧॥

ಹಸ್ತಿಕೃತ್ತಿಪ್ರಿಯೋ ಹರ್ತಾ ಹರಿಕೇಶೋ ಹರೋ ಹನುಃ ।
ಹಯ್ಯಂಗವೀನಹೃದಯೋ ಹರಿದಶ್ವಾಂತರಾಸ್ಥಿತಃ ॥೫೨॥

ಹಂಸಕಾಖ್ಯಮಹಾನಾಗ ಹಂಸಕಾರಾಜಿಪದ್ದ್ವಯಃ ।
ಭುಜಂಗಭೋಗಭೂತಾಢ್ಯೋ ಭೂತಿಭೂಷಿತವಿಗ್ರಹಃ ॥೫೩॥

ಸ್ಯಂಕುಹಸ್ತಃ ಶಂಬರಾಂಕ ಜಟೋತ್ತಂಸೋ ಮಹೇಶ್ವರಃ ।
ಅರ್ಣವಾಂತಸ್ಥಿತೋ ಯೋಗೀ ಭೋಗೀ ರಾಗವಿವರ್ಜಿತಃ ॥೫೪॥

---

ಶಾಲಿಯು, ಸುಖದುಃಖಗಳಲ್ಲಿ ಸಮನೆನಿಸಿದವನು. ಚಂದ್ರಕಲೆಯನ್ನು ಧರಿಸಿದವನು. ಕ್ಷತ್ರಿಯಕರ್ಮವುಳ್ಳವನು. ಭೂಮಿಯನ್ನೇ ರಥವನ್ನಾಗಿ ಉಳ್ಳವನು. ॥೪೯-೫೦॥

ತುಚ್ಛವಾದ ಕರ್ಮಗಳಲ್ಲಿ ನಿರತರಾದವರನ್ನು ನಾಶಗೊಳಿಸುವವನು. ಹಸಿವು ಬಾಯಾರಿಕೆಗಳಿಲ್ಲದವನು. ಹಾಹಾ ಹೂಹೂ ಎಂಬ ಗಂಧರ್ವರಿಂದ ಸ್ತುತ್ಯನಾದವನು. ಹಾನಿ, ವೃದ್ಧಿಗಳಿಲ್ಲದವನು. ಗಜಚರ್ಮಾಂಬರಪ್ರಿಯನು. ದುಷ್ಟನಾಶಕನು. ಹೊಂಬಣ್ಣದ ಜಟೆಯುಳ್ಳವನು. ಪಾಪನಾಶಕನು. ಪ್ರಶಸ್ತವಾದ ದವಡೆಯುಳ್ಳವನು. ಹಸುವಿನ ತುಪ್ಪದಲ್ಲಿ ಅಡಗಿರುವವನು. ಸೂರ್ಯಮಂಡಲ ಮಧ್ಯವರ್ತಿಯು. ॥೫೧-೫೨॥

ಹಂಸವೆಂಬ ದೊಡ್ಡ ಆನೆಯಿಂದಲೂ, ಹಂಸಗಳ ಸಮೂಹದಿಂದಲೂ ಪ್ರಕಾಶಿಸುವ ಪಾದದ್ವಯವುಳ್ಳವನು, ಸರ್ಪಗಳ ದೇಹಗಳಿಂದ ಕೂಡಿದವನು, ವಿಭೂತಿಯಿಂದ ಪ್ರಕಾಶಿತವಾದ ದೇಹವುಳ್ಳವನು, ಜಿಂಕೆಯಿಂದ ಕೂಡಿದ ಕೈಯುಳ್ಳವನು, ಮೃಗಾಂಕನಾದ ಚಂದ್ರನನ್ನೇ ಜಟೆಯಲ್ಲಿ ಧರಿಸಿರುವವನು, ಮಹಾದೇವನು, ಸಮುದ್ರಮಧ್ಯವರ್ತಿಯು, ಯೋಗಾಭ್ಯಾಸನಿರತನು, ಭೋಗಶಾಲಿಯು, ರಾಗಾದಿ ಗುಣವರ್ಜಿತನು. ॥೫೩-೫೪॥

ಕಪಾಲಧೃಕ್ಕಾಲಕಾಲಃ ಕಲಾತೀತೋಽಕ್ಷರಃ ಪರಃ ।
ಪರ್ಣಶಯ್ಯೋ ಮಹಾವೈದ್ಯ ಆಢ್ಯೋ ಭೇದ್ಯೋ ವಿಶಾರದಃ ॥೫೫॥

ಹಿರಣ್ಯದಂಸನೋ ಹಾರ್ಯೋ ಮುಂಜಿಕೇಶೋ ಹರದ್ಯುತಿಃ ।
ಹವ್ಯವಾಹೋ ಬಕೋ ನಿತ್ಯಃ ಸ್ತುತ್ಯೋ ವಾತ್ಯಾಪ್ರವರ್ತಕಃ ॥೫೬॥

ಗಯಾಸ್ತುತೋ ಗುಣೀ ಗೋಪ್ತಾ ನಿರ್ಗುಣಸ್ತ್ರಿಗುಣಾತಿಗಃ ।
ವಿಷ್ಣುಶೋಣಿತಪಃ ಶೋಣಃ ಶೋಣಾಕ್ಷಃ ಶೋಣತೀರಗಃ ॥೫೭॥

ಶತಾವರ್ತಃ ಶಾಶ್ವತಾತ್ಮಾ ಶಮನಾಂತಕರಃ ಶಠಃ ।
ಉಗಣೋ ಭಗಣಾಧೀಶಪ್ರಭಃ ಸುಮುಖ ಈಶ್ವರಃ ॥೫೮॥

ಸದ್ಯೋಜಾತೋ ವಾಮದೇವ ಈಶಾನೋ ಘೋರಪೂರುಷಃ ।
ಪಂಚಬ್ರಹ್ಮಮಯಃ ಪಂಚಮುಖಃ ಪಂಚಾರ್ಣಮಧ್ಯಗಃ ॥೫೯॥

---

ಕಪಾಲಗಳನ್ನು ಧರಿಸಿರುವವನು, ಕಾಲನಿಗೂ ಕಾಲನು, ಕ್ಷಲೆಯನ್ನು ಮೀರಿರುವವನು, ನಾಶರಹಿತನು, ಪರಾತ್ಪರನು, ಎಲೆಯಮೇಲೆ ಮಲಗಿರುವವನು, ಮಹಾವೈದ್ಯನು, ಶ್ರೀಮಂತನು, ಭೇದಿಸಲು ಯೋಗ್ಯನಾದವನು, ನಿಪುಣನು, ಹಿರಣ್ಯಪ್ರದನು, ಪಾಪನಾಶಕನು, ಗುಂಗುರುಕೂದಲುಳ್ಳವನು, ಈಶ್ವರತೇಜಸ್ಸಿನಿಂದ ಪ್ರಕಾಶಿಸುವವನು, ಅಗ್ನಿರೂಪನು, ಬಕರೂಪಿಯು, ನಿತ್ಯನು, ಸ್ತುತಿಪ್ರಿಯನು, ಬಿರುಗಾಳಿಯಂತೆ ಚಲಿಸುವವನು. ॥೫೫-೫೬॥

ಗಯಾಕ್ಷೇತ್ರದಲ್ಲಿ ಪೂಜಿತನಾದವನು, ಗುಣಾಢ್ಯನು, ರಕ್ಷಕನು, ಗುಣರಹಿತನು, ತ್ರಿಗುಣಗಳಿಗೆ ಮೀರಿದವನು (ಗುಣರಹಿತನು), ವಿಷ್ಣುವಿನ ರಕ್ತವನ್ನು ಪಾನ ಮಾಡಿದವನು, ಕೆಂಪುವರ್ಣದವನು, ಕೆಂಪಾದ ನೇತ್ರಗಳುಳ್ಳವನು, ಶೋಣಾ ನದಿಯ ತೀರದಲ್ಲಿ ನೆಲಸಿರುವವನು, ನಾನಾವಿಧವಾದ ಸುಳಿಗಳುಳ್ಳವನು, ಶಾಶ್ವತನಾದವನು, ಯಮನಿಗೂ ನಾಶವನ್ನು ಕಲ್ಪಿಸುವವನು, ಮೋಸಗಾರರಲ್ಲಿಯೂ ಸೇರುವವನು, ನಕ್ಷತ್ರರೂಪನು, ನಕ್ಷತ್ರಮಂಡಲಾಧ್ಯಕ್ಷನಾದ ಚಂದ್ರನಂತೆ ಕಾಂತಿಯುಳ್ಳವನು. ಪ್ರಸನ್ನ ಮುಖಿಯಾದ ಜಗತ್ಪತಿಯು. ॥೫೭-೫೮॥

ಸದ್ಯೋಜಾತ, ವಾಮದೇವ, ಈಶಾನ, ಅಘೋರ, ತತ್ಪುರುಷಗಳೆಂಬ ಪಂಚಬ್ರಹ್ಮಸ್ವರೂಪನು. ಐದು ಮುಖಗಳುಳ್ಳವನು. ಐದು ಸಮುದ್ರದ ಮಧ್ಯದಲ್ಲಿ

ಪಂಚಾಕ್ಷರೀ ಮಧ್ಯಗತಃ ಪಂಚಕೋಶವಿವರ್ಜಿತಃ ।
ಪಾದಪಃ ಪವನಃ ಪಾಶಃ ಪಶುಪಾಶವಿವರ್ಜಿತಃ ॥೬೦॥

ಪಥ್ಯಃ ಪಂಕಜಪೂಜ್ಯಾಂಘ್ರಿಃ ಪ್ರಘಸಃ ಪಂಕಜೇಕ್ಷಣಃ ।
ವಿಶ್ವೋ ವಿಶ್ವಾಧಿಕೋ ನೇತಾ ವಿಶ್ವಾಕ್ಷೋ ವಿಶ್ವತೋಮುಖಃ ॥೬೧॥

ವಿಷ್ಣುಪೂಜ್ಯೋ ವಿಶಾಂಶ್ರೇಷ್ಠೋ ವಿನಾಯಕವರಪ್ರದಃ ।
ಗಂಗಾಧರೋಂಬಿಕಾಭರ್ತಾ ಹರ್ತಾ ಕರ್ತಾ ಜನೇಶ್ವರಃ ॥೬೨॥

ಮೇಘವಾಹಃ ಪ್ರಸನ್ನಾತ್ಮಾ ಕಂಕಾಲಕವಚೋ ಮಧುಃ ।
ವೀತಿಹೋತ್ರಮಹಾನೇತ್ರಃ ಸತ್ರಪಾತ್ರೋ ದಿಗಂಬರಃ ॥೬೩॥

ಮಹಾಶ್ಮಶಾನನಿಲಯೋ ಈಶಾನೋಥ ಗರಾಶನಃ ।
ಮಹಾಗ್ರಾಸೋ ಮಹಾಭೀಮೋ ವಿದ್ಯುತಃ ಶುಕ್ಲ ಈಶ್ವರಃ ॥೬೪॥

---

ನೆಲಸಿರುವವನು. ಶಿವಪಂಚಾಕ್ಷರೀ ಮಧ್ಯಗತನಾದವನು. ಅನ್ನಮಯಾದಿ ಪಂಚಕೋಶಗಳಿಂದ ದೂರನಾದವನು. ವೃಕ್ಷರೂಪಿಯು. ವಾಯುರೂಪನು. ಪಾಶಸ್ವರೂಪನು. ಪಶುಪಾಶದಿಂದ ಬಿಡಲ್ಪಟ್ಟವನು. ||೫೯-೬೦||

ಮಾರ್ಗದಲ್ಲಿ ನಿಲ್ಲುವವನು. ಕಮಲದಿಂದ ಪೂಜಿತವಾದ ಪಾದವುಳ್ಳವನು. ಪ್ರಕೃಷ್ಟವಾದ ಕಾಂತಿಯುಳ್ಳವನು. ಕಮಲದಂತೆ ಕಣ್ಣುಳ್ಳವನು. ವಿಶ್ವರೂಪನು. ಪ್ರಪಂಚಕ್ಕಿಂತ ದೊಡ್ಡವನು. ಮುಂದಾಳಾದವನು. ಪ್ರಪಂಚವನ್ನೇ ಕಣ್ಣಾಗಿಯುಳ್ಳವನು. ಸರ್ವತ್ರ ಮುಖವನ್ನು ಹೊಂದಿರುವವನು. ವಿಷ್ಣುವಿನಿಂದ ಪೂಜಿತನಾದವನು. ವೈಶ್ಯರಿಗೆ ಶ್ರೇಷ್ಠನೆನಿಸಿದವನು. ವಿನಾಯಕನಿಗೆ ವರವನ್ನಿತ್ತವನು. ಗಂಗೆಯನ್ನು ಧರಿಸಿದವನು. ಗೌರೀಪತಿಯು. ಸರ್ವನಾಶಕನು. ಸರ್ವಕಾರ್ಯಕರ್ತನು. ಜನರಿಗೆ ಒಡೆಯನೆನಿಸಿದವನು. ||೬೧-೬೨||

ಮೇಘವನ್ನೇ ವಾಹನವನ್ನಾಗಿ ಉಳ್ಳವನು. ಪ್ರಸನ್ನನಾದವನು. ಮೂಳೆಯ ರಾಶಿಯನ್ನೇ ಕವಚವನ್ನಾಗಿ ಉಳ್ಳವನು. ವಸಂತಋತುಸ್ವರೂಪನು. ಅಗ್ನಿಯನ್ನೇ ನೇತ್ರವನ್ನಾಗಿ ಉಳ್ಳವನು. ಯಾಗದೀಕ್ಷಿತನು. ದಿಕ್ಕುಗಳನ್ನೇ ವಸ್ತ್ರಗಳನ್ನಾಗಿ ಹೊಂದಿರುವವನು. ದೊಡ್ಡ ಶ್ಮಶಾನದಲ್ಲಿ ನೆಲಸಿರುವವನು. ಈಶಾನನು. ವಿಷಭಕ್ಷಕನು. ಹೆಚ್ಚಾದ ಗ್ರಾಸವುಳ್ಳವನು. ಭಯಂಕರಾಕಾರನು. ಮಿಂಚಿನಂತೆ ಶೋಭಿಸುವವನು. ಶುಕ್ಲರೂಪಿಯು. ಜಗತ್ಪತಿಯು. ||೬೩-೬೪||

ಕಂದರ್ಪದರ್ಪಹಾ ದರ್ಪಃ ಕಪರ್ದೀ ನೀಲಲೋಹಿತಃ ।
ಪಿನಾಕಪಾಣಿಃ ಕಾಲಾತ್ಮಾ ಗೋಪತಿರ್ವೃಷವಾಹನಃ ॥೬೫॥

ಸುರಮಂದಾರಮಾಲಾಢ್ಯ ಗಂಧರೋಽನಂತವಿಕ್ರಮಃ ।
ಕ್ಷಯದ್ವೀರೋ ಮಾರಹರೋ ಹರಶ್ಚೀತಾಂಶುಶೇಖರಃ ॥೬೬॥

ಶತಾಂಗವರದೋ ಹೋತಾ ಯಜಮಾನೋ ಯಶಸ್ಕರಃ ।
ಮಯಸ್ಕರಃ ಶಂಕರಶ್ಚ ಶಿಪಿವಿಷ್ಟಃ ಪ್ರತಿಷ್ಠಿತಃ ॥೬೭॥

ಪ್ರಜಾಪತಿಃ ಪಶುಪತಿರ್ಯತೀನಾಂ ಪತಿರಗ್ನಿಭೂಃ ।
ಸಾಮಗಾನಪ್ರಿಯಃ ಶುದ್ಧಃ ಶಾಶ್ವತಾತ್ಮಾ ಸ್ಥಿರಃ ಪ್ರಭುಃ ॥೬೮॥

ವಿಭುರ್ವಿಭಾಸಕೋಽನಂತೋ ರುದ್ರ ಉಗ್ರೋ ಮಹೇಶ್ವರಃ ।
ಜಾಗರ್ತಕೋ ಜಾಂಗಲೇಶೋ ಜಂಗಮೋ ಜಂಗಮಾತ್ಮಕಃ ॥೬೯॥

---

ಮನ್ಮಥನಗರ್ವವನ್ನು ನಾಶಗೈದವನು. ಅಹಂಕಾರವಿಶಿಷ್ಟನು. ಜಟಾಕಲಾಪವುಳ್ಳವನು.. ನೀಲ ಮತ್ತು ಕೆಂಪುವರ್ಣದಿಂದ ರಂಜಿಸುವವನು, ಪಿನಾಕವನ್ನು ಕೈಯಲ್ಲಿ ಧರಿಸಿರುವವನು. ಕಾಲಾತ್ಮನೆನಿಸಿದ ಸೂರ್ಯನು. ಅಜ್ಞಾನಿಗಳಾದ ಪಶುಗಳಿಗೆ ಒಡೆಯನು. ವೃಷಭವಾಹನನು. ದೇವಪುಷ್ಪಗಳ ಮಾಲೆಯಿಂದ ಕೂಡಿದವನು. ಗಂಗಾನದಿಯನ್ನು ಶಿರಸ್ಸಿನಲ್ಲಿ ಧರಿಸಿದವನು. ಅತಿಶಯವಾದ ಪರಾಕ್ರಮವುಳ್ಳವನು. ಶತ್ರುನಾಶಕನು. ಮನ್ಮಥನಾಶಕನು. ಪಾಪಹಾರಕನು. ಚಂದ್ರಶೇಖರನು. ॥೬೫-೬೬॥

ಶತಾಂಗನಿಗೆ ವರವನ್ನಿತ್ತವನು. ಯಾಗದಲ್ಲಿ ಋಗ್ವೇದವನ್ನರಿತವನು. ಅಧ್ವರ್ಯುವು. ಯಶಸ್ಸನ್ನುಂಟುಮಾಡುವವನು. ಕೀರ್ತಿಪ್ರದನು. ಶಂಕರನು. ಕಿರಣರೂಪದಿಂದ ಸರ್ವತ್ರವ್ಯಾಪಿಸುವವನು. ಪ್ರಸಿದ್ಧವ್ಯಕ್ತಿಯು ಪ್ರಜಾಸೃಷ್ಟಿ ಕರ್ತನು. ಪಶುಪತಿಯು. ಯತಿಗಳಿಗೆ ಅಧಿಪತಿಯು. ಅಗ್ನಿಗೆ ಆಶ್ರಯವಿತ್ತವನು. ಸಾಮಗಾನಪ್ರಿಯನು. ಪರಿಶುದ್ಧನೆನಿಸಿದವನು. ಶಾಶ್ವತರೂಪನು. ಸ್ಥಿರನಾದವನು. ಯಜಮಾನನು. ॥೬೭-೬೮॥

ಮಾರ್ಗದಲ್ಲಿ ನಿಲ್ಲುವವನು. ಕಮಲದಿಂದ ಪೂಜಿತವಾದ ಪಾದವುಳ್ಳವನು. ಪ್ರಕಾಶಿತವಾದ ಕಾಂತಿಯುಳ್ಳವನು. ಕಮಲದಂತೆ ಕಣ್ಣುಳ್ಳವನು. ವಿಶ್ವರೂಪನು.

ಜಾತುಕರ್ಣಪ್ರಿಯೋ ಜ್ಯೇಷ್ಠಃ ಕನಿಷ್ಠಃ ಶ್ರೇಷ್ಠ ಉತ್ತಮಃ ।
ಪ್ರತಿಷ್ಠಾ ಪರಮಂ ಧಾಮ ಪರಮಾತ್ಮಾ ಋತಂ ಮಹತ್ ॥೭೦॥

ಯಂತ್ರಾತ್ಮಾ ಮಂತ್ರರೂಪಾತ್ಮಾ ತಂತ್ರರೂಪಸ್ಸದಾಶಿವಃ ।
ನಿಗಮಾಗಮಸಂವೇದ್ಯಃ ಸುರಾದ್ಯಃ ಪ್ರಪಿತಾಮಹಃ ॥೭೧॥

ಸುರಾಸುರಗಣಾಧ್ಯಕ್ಷಸ್ತ್ರ್ಯಕ್ಷೋ ದಕ್ಷಮಖಾಂತಕಃ ।
ಮಹೋಕ್ಷವರದೋ ಭೈಕ್ಷ್ಯೋ ಭಗಾಕ್ಷಹರಣೋಕ್ಷಗಃ ॥೭೨॥

ಅನಲ್ಪಕಲ್ಪಃ ಶಿಲ್ಪಾದಿಃ ಸುಶೀಲಃ ಕೌಲಪೂಜಿತಃ ।
ಸ್ತವ್ಯೋ ನವ್ಯೋ ಭವ್ಯರೂಪೋ ಹವ್ಯಕವ್ಯಭುಗವ್ಯಯಃ ॥೭೩॥

ಮಹಾಬಲೋ ಮಹೋತ್ಸಾಹೋ ಮಹಾದೇವೋ ಮಹಾಂಗಧೃಕ್ ।
ಶತಾವರ್ತಶ್ಯಾಂತಮನಾಃ ಸಹಮಾನಸ್ತುತಿಪ್ರಿಯಃ ॥೭೪॥

---

ಸದಾ ಸಂಚರಿಸುವವನು. ಜಾತುಕರ್ಣನೆಂಬ ಋಷಿಗೆ ಪ್ರಿಯನೆನಿಸಿದವನು. ಎಲ್ಲರಿಗೂ ದೊಡ್ಡವನು. ಎಲ್ಲಕ್ಕಿಂತ ಚಿಕ್ಕ ಆಕಾರದಲ್ಲಿರುವವನು. ಶ್ರೇಷ್ಠನು. ಉತ್ತಮನು. ಪ್ರತಿಷ್ಠಾಕಾರ್ಯದಲ್ಲಿ ಶ್ರೇಷ್ಠನೆನಿಸಿದವನು. ಆಶ್ರಯಸ್ಥಾನನು. ಪರಮಾತ್ಮರೂಪನು. ಕಾಯಿಕವಾದ ಮತ್ತು ಮಾನಸಿಕವಾದ ಸತ್ಯಸ್ವರೂಪನು. ॥೬೯-೭೦॥

ಯಂತ್ರರೂಪನು. ಮಂತ್ರರೂಪನು. ತಂತ್ರರೂಪನು. ಸದಾ ಮಂಗಳಕರನು. ವೇದಶಾಸ್ತ್ರಗಳಿಂದ ತಿಳಿಯಲ್ಪಡುವವನು. ದೇವತೆಗಳಿಗೆಲ್ಲಾ ಆದಿದೇವನು. ಬ್ರಹ್ಮನಿಗೂ ತಂದೆಯಂತಿರುವವನು. ದೇವರಾಕ್ಷಸರ ಗಣಗಳಿಗೆ ಒಡೆಯನು. ಮೂರು ಕಣ್ಣುಗಳುಳ್ಳವನು. ದಕ್ಷಯಜ್ಞವನ್ನು ನಾಶಗೊಳಿಸಿದವನು. ವೃಷಭನಿಗೆ ವರಪ್ರದಾನಮಾಡಿದವನು. ಭಿಕ್ಷಾವೃತ್ತಿಯಿಂದ ನಡೆದವನು. ಭಗದೇವತೆಯ ಕಣ್ಣನ್ನು ಕಿತ್ತವನು. ವೃಷಭವಾಹನನು. ॥೭೧-೭೨॥

ಮಹಾಕಲ್ಪದಂತಿರುವವನು. ಶಿಲ್ಪಗಳಿಗೆ ಆದಿಭೂತನಾದವನು. ಸಚ್ಚರಿತೆಯುಳ್ಳವನು. ದೇವಕುಲಪರಂಪರೆಯಿಂದ ಪೂಜಿತನು. ಸ್ತೋತ್ರಕ್ಕೆ ವಿಷಯನು. ಹೊಸಬನು. ಸುಂದರರೂಪನು. ಹವ್ಯ ಮತ್ತು ಕವ್ಯವನ್ನು ಭುಂಜಿಸುವವನು. ನಾಶರಹಿತನು. ಅತ್ಯಂತ ಬಲಿಷ್ಠನು. ಹೆಚ್ಚಾದ ಉತ್ಸಾಹವುಳ್ಳವನು. ಮಹಾ

 

ಸನಾತನೋ ವಾಮದೇವೋ ಮನಸ್ವೀ ಮಾನವರ್ಜಿತಃ ।
ಗತಿದೋ ನತಪೋ ವಾಗ್ಮೀ ಉಚ್ಚೈರ್ಘೋಷೋ ಮಹಾಹನುಃ ॥೭೫॥

ತ್ರಿಪುಂಡ್ರಫಾಲೋ ಭಸ್ಮಾಂಗೋ ಪುಂಡರೀಕತ್ವಗಂಬರಃ ।
ಗಾಯತ್ರೀಮಧ್ಯನಿಲಯೋ ಮಿತ್ರರೂಪೋ ಜಗತ್ಪ್ರಭುಃ ॥೭೬॥

ಪ್ರಸೇನಜಿತ್ಕಕ್ಷವಾಸಃ ನರಸಿಂಹನಿಪಾತನಃ ।
ಕಾಲದಂಷ್ಟ್ರಧರೋ ಭೂತೋ ಭೂತನಾಥೋರತಿಪ್ರುತಃ ॥೭೭॥

ಕೂರ್ಮಾಮ್ರೇಡಿತಪಾದಾಬ್ಜೋ ಪ್ರೃಡ್ವಾ ಸಸ್ಪಿಂಜರೋ ಮೃಡಃ ।
ಗೂಢಪಾದ್ವರಹಾರಾಢ್ಯೋ ಆಢ್ಯೋ ಮೌಢ್ಯವಿನಾಶಕಃ ॥೭೮॥

---

ದೇವನು. ದೊಡ್ಡ ದೇಹವುಳ್ಳವನು. ನೂರಾರು ಸುಳಿಯುಳ್ಳವನು. ಶಾಂತಮನಸ್ಕನು. ಸಕಲವನ್ನೂ ಸಹಿಸುವ ಶಕ್ತನು. ಸ್ತೋತ್ರದಿಂದ ತೃಪ್ತಿಹೊಂದುವವನು. ॥೭೩-೭೪॥

ಅನಾದಿಪುರುಷನು. ವಾಮದೇವನು. ಶೂರನು. ಅಹಂಕಾರವಿವರ್ಜಿತನು. ದಿಕ್ಕನ್ನು ಕೊಡುವವನು. ನಮಸ್ಕರಿಸಿದವರನ್ನು ಪಾಲಿಸುವವನು. ವಾಚಾಲನು. ಉನ್ನತವಾದ ಧ್ವನಿಯುಳ್ಳವನು. ದೊಡ್ಡ ದವಡೆಯುಳ್ಳವನು. ಭಸ್ಮತ್ರಿಪುಂಡ್ರವನ್ನು ಹಣೆಯಲ್ಲಿಟ್ಟವನು. ಭಸ್ಮಲಿಪ್ತಗಾತ್ರನು. ವ್ಯಾಘ್ರಚರ್ಮಾಂಬರಧಾರಿಯು. ಗಾಯತ್ರೀಮಂತ್ರ ಮಧ್ಯವರ್ತಿಯು. ಸೂರ್ಯರೂಪನು. ಜಗತ್ತಿಗೆ ಒಡೆಯನೆನಿಸಿದವನು. ॥೭೫-೭೬॥

ಪ್ರಸೇನನನ್ನು ಕೊಂದ ಸಿಂಹವನ್ನು ಸ್ವಾಧೀನದಲ್ಲಿಟ್ಟುಕೊಂಡಿರುವವನು. ನರಸಿಂಹನನ್ನು ಸೋಲಿಸಿದ ಶರಭನು. ಉಗ್ರವಾದ ಕೋರೆದಾಡೆಯುಳ್ಳವನು. ಪಂಚಭೂತಾತ್ಮಕನು. ಸಮಸ್ತಪ್ರಾಣಿಗಳಿಗೂ ಅಧಿಪತಿಯು. ರತೀದೇವಿಯನ್ನು ಸಂರಕ್ಷಿಸಿದವನು. ಆದಿಕೂರ್ಮನಿಂದ ಸ್ತುತಿಸಲ್ಪಟ್ಟ ಪಾದಕಮಲಗಳುಳ್ಳವನು. ವೃಕ್ಷಲತಾನಿಕುಂಜಗಳಲ್ಲಿ ಅಡಗಿರುವವನು. ಪಶುಪತಿಯು. ಸರ್ಪವನ್ನೇ ಹಾರವನ್ನಾಗಿ ಉಳ್ಳವನು. ಶ್ರೀಮಂತನು. ಮೌಢ್ಯವನ್ನು ಹೋಗಲಾಡಿಸುವವನು. ॥೭೭-೭೮॥

ದಂಡೀ ಕುಂಡೀ ತಂಡುಪೂಜ್ಯೋ ಮುಂಡೀ ಪಾಷಂಡವರ್ಜಿತಃ ।
ಅಲಿಂಗೋ ಲಿಂಗನಿಲಯಃ ಸ್ಫುಲಿಂಗಸದೃಶೇಕ್ಷಣಃ ॥೭೯॥

ಬಿಲ್ವಪೂಜ್ಯೋ ಬಿಲ್ವಿನಶ್ಚ ಬಿಲೇಶಯಫಣಾಧರಃ ।
ಬಾಣಲಿಂಗಾರ್ಚನಪ್ರೀತೋ ಬಡಬಾನಲಸಂಭವಃ ॥೮೦॥

ಬಲಾರಾತಿಭುಜಸ್ತಂಭೋ ಭುವಂತಿರ್ವಿಪ್ರಪೂಜಿತಃ ।
ಅಂಧಕಾಂತಕರೋ ಭರ್ಗೋ ಗೋವೃಷಾಂಕೋ ಉಮಾಧವಃ ॥೮೧॥

ಧನಂಜಯಯಾಕ್ಷಕಂಜಾಕ್ಷಪೂಜ್ಯಪಾದಯುಗಾಂಬುಜಃ ।
ವೀತರಾಗಃ ಸಂದುಸಕೋ ನ್ಯಂಕುಶಂಕುಶಿರಾ ಹಯಃ ॥೮೨॥

ಹಯಗ್ರೀವಾರ್ಚಿತೋ ವಾಸೀ ವಸಾಮಾಂಸಾದನಪ್ರಿಯಃ ।
ತ್ರಿಮಧುಸ್ತ್ರಿಸುಪರ್ಣಾತ್ಮಾ ಪರ್ಣಶದ್ಯೋ ಮಹೇಶ್ವರಃ ॥೮೩॥

---

ದಂಡೀ, ಕುಂಡೀ, ತಂಡು ಮೊದಲಾದ ಗಣನಾಯಕರಿಂದ ಪೂಜಿತನಾದವನು. ಮುಂಡಿಯು. ಅಜ್ಞಾನಿಗಳನ್ನು ದೂರಮಾಡುವವನು. ಯಾವ ಚಿಹ್ನೆಯೂ ಇಲ್ಲದವನು. ಶಿವಲಿಂಗಾಂತರ್ವರ್ತಿಯು. ಅಗ್ನಿಕಣಕ್ಕೆ ಸದೃಶವಾದ ದೃಷ್ಟಿಯುಳ್ಳವನು. ಬಿಲ್ವವೃಕ್ಷದಿಂದ ಪೂಜಿತನಾದವನು. ಬಿಲ್ವವೃಕ್ಷಾಭಿಮಾನಿಯು. ಆದಿಶೇಷನನ್ನು ಧರಿಸಿದವನು. ಬಾಣಲಿಂಗಾರ್ಚನೆಯಿಂದ ತೃಪ್ತಿಹೊಂದುವವನು. ಬಡಬಾಗ್ನಿಯಿಂದ ತೋರಿಬರುವವನು. ॥೭೯-೮೦॥

ಇಂದ್ರನ ಭುಜವನ್ನು ಸ್ತಂಭದಂತೆ ನಿಲ್ಲಿಸಿದವನು. ಭುವನಪಾಲಕನು, ವಿಪ್ರರಿಂದ ಪೂಜಿತನಾದವನು. ಅಂಧಕಾಸುರನನ್ನು ನಾಶಗೊಳಿಸಿದವನು. ಸೂರ್ಯರೂಪನು. ವೃಷಭಧ್ವಜನು. ಪಾರ್ವತೀಪತಿಯು. ಧನಂಜಯನಾದ ಅರ್ಜುನನಿಂದಲೂ ಕಮಲಾಕ್ಷನಾದ ವಿಷ್ಣುವಿನಿಂದಲೂ ಪೂಜಿಸಲ್ಪಟ್ಟ ಪಾದಕಮಲವುಳ್ಳವನು. ಕಳೆದುಕೊಂಡ ಅನುರಾಗವುಳ್ಳವನು. ಸಂದುಸಕ (?) ಪರಿತಾಪಗೊಳಿಸುವನು. ಜಿಂಕೆಯೆಂಬ ಶಂಕುವನ್ನು ಹಿಡಿದಿರುವವನು. ಅಶ್ವರೂಪನು. ॥೮೧-೮೨॥

ಹಯಗ್ರೀವನಿಂದಲೂ ಅರ್ಚಿತನಾದವನು. ಸರ್ವತ್ರ ವಾಸಮಾಡುವವನು. ವಸಾ ಮತ್ತು ಮಾಂಸ ಇವನ್ನು ತಿನ್ನುವವನು. ಮೂರುವಿಧವಾದ ಮಧುಗಳುಳ್ಳವನು. ತ್ರಿಸುಪರ್ಣರೂಪಿಯು, ಎಲೆಗಳ ರಾಶಿಯಲ್ಲಿ ನೆಲಸಿರುವವನು. ಮಹ

ರಥಂತರ ರವಪ್ರೀತೋ ವಾಮದೇವ್ಯಾದಿಸಾಮಗಃ ।
ರಾಜರಾಜಕಲಾಮೌಲಿರ್ವೈರಾಜಧ್ವನಿತೋಷಿತಃ ॥೮೪॥

ಶತರುದ್ರಾಂತರಗತೋ ನಮಃ ಶೇಷೀ ವಿಶೇಷವಿತ್ ।
ಅಂಜನಾಕ್ಷಃ ಖಂಜನಾತ್ಮಾ ರಂಜನೋ ಜಿನಭೃತ್ಖಗಃ ॥೮೫॥

ವಾಯುರಾಯುಃ ಪ್ರದೋ ಮಧ್ಯೋ ಗಹ್ವರೇಷ್ಠೋರ್ವರಾವಸಃ ।
ಶರ್ವಃ ಸರ್ವಗತಃ ಸ್ಥಾಣುಃ ಸ್ಥವಿಷ್ಠೋಣುಪ್ರಸನ್ನವಾಕ್ ॥೮೬॥

ಶಬ್ದಸ್ಪರ್ಶರಸೋ ರೂಪೋ ಗಂಧಸ್ಸಂಧಿರ್ವಿಭಾವಸುಃ ।
ಸರ್ವೇಂದ್ರಿಯಗುಣಾತೀತಃ ಸರ್ವೇಂದ್ರಿಯವಿವರ್ಜಿತಃ ॥೮೭॥

ಸರ್ವೇಷಾಂ ಪ್ರಭುರೀಶಾನಃ ಸರ್ವೇಷಾಂ ಶರಣಂ ಸುಹೃತ್ ।
ಸೀಮಾ ಭೂಮಾ ಮಹಾನಾತ್ಮಾ ಪ್ರವಿಷ್ಟೋ ಪುರುಷಃ ಪರಃ ॥೮೮॥

---

ದೇವನು. ರಥಂತರ, ವಾಮದೇವ, ರಾಜ, ವೈರಾಜ ಮುಂತಾದ ಸಾಮವೇದಭಾಗಗಳಿಂದ ತೃಪ್ತನಾಗುವವನು. ॥೮೩-೮೪॥

ಶತರುದ್ರೀಯಾಂತರ್ಗತವಾದ ನಮಶ್ಶಬ್ದಾಂತ ಮಂತ್ರಗಳಿಂದ ಸ್ತುತಿಸಲ್ಪಡುವವನು. ಆದಿಶೇಷನನ್ನುಳ್ಳವನು. ವಿಶೇಷ ವಿಷಯಗಳನ್ನು ತಿಳಿದವನು. ತಂಪಾದ ಕಣ್ಣುಳ್ಳವನು. ಕುಂಟಾದ ಆಕಾರವುಳ್ಳವನು. ಮನೋಹರನು. ಜ್ಞಾನಿಯು. ಪಕ್ಷಿರೂಪನು. ವಾಯುರೂಪಿಯು. ಆಯುಃಪ್ರದನು. ಮಧ್ಯವರ್ತಿಯು. ಗುಹೆಯಲ್ಲಿ ವಾಸಿಸುವವನು. ಸುಖಪ್ರದನು. ಸರ್ವವ್ಯಾಪಿಯು. ಸ್ಥಿರವಾದ ಗತಿಯುಳ್ಳವನು. ಮೃದುವಾದ ಮಾತುಳ್ಳವನು. ॥೮೫-೮೬॥

ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚಭೂತಗುಣಾತ್ಮಕನು. ಸೂರ್ಯರೂಪನು. ಸರ್ವೇಂದ್ರಿಯಗಳಿಗೂ, ಸರ್ವಗುಣಗಳಿಗೂ ಆಧಾರನಲ್ಲದವನು. ಸರ್ವೇಂದ್ರಿಯಗಳಿಂದ ಬಿಡಲ್ಪಟ್ಟವನು. ಸರ್ವರಿಗೂ ಪ್ರಭುವಾದವನು. ಈಶಾನರೂಪಿಯು. ಸರ್ವರಿಗೂ ಆಶ್ರಯವಿತ್ತವನು. ಸರ್ವಸ್ನೇಹಿತನು. ಎಲ್ಲೆಕಟ್ಟಿನಂತಿರುವವನು. ಅತಿಶಯಸ್ವರೂಪನು. ಮಹಾತ್ಮನು. ಸರ್ವತ್ರ ಪ್ರವೇಶವುಳ್ಳವನು. ಪರಮಪುರುಷನು. ॥೮೭-೮೮॥

ಪುಚ್ಛಬ್ರಹ್ಮ ಋತಂ ಸತ್ಯಂ ಹರೋ ವೈ ಕೃಷ್ಣಪಿಂಗಲಃ ।
ಊರ್ಧ್ವರೇತಾ ವಿರೂಪಾಕ್ಷಃ ಕ್ಷಿತೀಶಃ ಕ್ಷಾಂತಿವರ್ಧನಃ ॥೮೯॥

ಸವಿಶೇಷೋ ನಿರ್ವಿಶೇಷಃ ಶೇಷಾಹಿಕಟಕೋಜ್ಜ್ವಲಃ ।
ರಸ ಆನಂದ ಆತಾರ್ಯಃ ಶಷ್ಪ್ಯಃ ಫೇನ್ಯಃ ಸಿಕತ್ಯಕಃ ॥೯೦॥

ಪ್ರವಾಹ್ಯೋ ಗೇಹ್ಯ ಬಾಹ್ಯಶ್ಚ ಪ್ರಸಾಧಃ ಪ್ರಮಥಾಧಿಪಃ ।
ತಾನದೋ ಧನದೋ ಧೀರೋ ದುಂದುಭ್ಯೋ ಭೀತಿನಾಶಕೃತ್ ॥೯೧॥

ಮಯಸ್ಕರೋ ಮಸ್ಕರೀಭ್ಯಸ್ತಸ್ಕರೋ ಭಾಸ್ಕರೇಕ್ಷಣಃ ।
ಯಶಸ್ಕರಃ ಕುಲುಂಚೇಶೋ ಭಿಷಜಾಮಧಿಪೋ ಯುವಾ ॥೯೨॥

ವರ್ಣೀ ವನ್ಯೋ ಗೃಹಸ್ಥಶ್ಚ ಸನ್ಯಾಸೀ ನ್ಯಾಸಮಧ್ಯಗಃ ।
ಭೀಮಸ್ತೋಮಃ ಪ್ರಶಾಂತಾತ್ಮಾ ಧಾಮಧೂಮ ಸವರ್ಣಭೃತ್ ॥೯೩॥

---

ಬ್ರಹ್ಮಪುಚ್ಛವೆಂದು ಹೇಳಿಕೊಳ್ಳುವ ಉಪನಿಷತ್ಪ್ರತಿಪಾದ್ಯನು. ಕಾಯಿಕ ವಾದ ಮತ್ತು ವಾಚಿಕನಾದ ಸತ್ಯಸ್ವರೂಪನು. ಪಾಪನಾಶಕನು. ಕೃಷ್ಣರೂಪ ದಿಂದಲೂ, ಪಿಂಗಳವರ್ಣದಿಂದಲೂ ಶೋಭಿಸುವವನು. ಊರ್ಧ್ವರೇತಸ್ಕನು. ವಿರೂಪಾಕ್ಷನು. ಭೂಮಿಗೆ ಒಡೆಯನು. ತಾಳ್ಮೆಯನ್ನು ಹೆಚ್ಚಿಸಿಕೊಳ್ಳುವವನು. ವಿಶೇಷಗುಣಶಾಲಿಯು. ನಿರ್ವಿಶೇಷಾತ್ಮಕನು. ಆದಿಶೇಷನನ್ನೇ ಕೈಬಳೆಯನ್ನಾಗಿ ಹೊಂದಿದವನು. ರಸಾತ್ಮಕನು. ಆನಂದರೂಪನು. ಸಂಸಾರಸಾಗರವನ್ನು ನಾವೆ ಯಿಂದ ದಾಟಿಸುವನು. ತೃಣರೂಪಿಯು. ನೊರೆಯಲ್ಲಿ ಅಡಗಿದವನು. ಮರಳಿನ ರಾಶಿಯಲ್ಲಿ ಕಾಣುವವನು. ॥೮೯-೯೦॥

ಪ್ರವಾಹದಲ್ಲಿ, ಮನೆಯಲ್ಲಿ, ಹೊರಭಾಗದಲ್ಲಿ ವ್ಯಾಪಿಸಿರುವವನು. ಸಾಧನ ಸಂಪತ್ತುಳ್ಳವನು. ಪ್ರಮಥಗಣಗಳಿಗೆ ಒಡೆಯನು. ಸ್ಥಾನವನ್ನೂ, ಧನವನ್ನೂ ಅನುಗ್ರಹಿಸಿದವನು. ಧೀರನೆನಿಸಿದವನು. ದುಂದುಭಿಯ ಧ್ವನಿಯಲ್ಲಿ ನಿಂತಿರು ವವನು. ಭಯವನ್ನು ನಾಶಗೊಳಿಸುವವನು. ಸುಖಕರನು. ಸಂನ್ಯಾಸಿಗಳಿಂದ ಆಪಹೃತನು. ಸೂರ್ಯನನ್ನೇ ದೃಷ್ಟಿಯನ್ನಾಗಿಯುಳ್ಳವನು. ಯಶಸ್ಸನ್ನು ಉಂಟು ಮಾಡುವವನು. ತಸ್ಕರವಿಶೇಷದಿಂದಿರುವವರಿಗೆ ಅಧಿಪತಿಯು. ವೈದ್ಯಾಧಿಪತಿಯು ಮತ್ತು ಯುವಕನು. ॥೯೧-೯೨॥

ಬ್ರಹ್ಮಚಾರಿಯು. ವಾನಪ್ರಸ್ಥನು. ಗೃಹಸ್ಥನು. ಸಂನ್ಯಾಸಿಯು. ಪಂಚ

ಕಾಮದಃ ಕಾಮಮಥನಃ ಕ್ರಥನಃ ಕನಕಾಂಬರಃ ।
ಸಮೋ ನಿಸ್ಸೀಮಮಹಿಮಾ ವನೇಶಃ ಕ್ಷೇತ್ರನಾಯಕಃ ೧೪॥

ಕೈಲಾಸಶೈಲನಿಲಯೋ ವಿಲಯೋ ಲಯವರ್ಜಿತಃ ।
ರಕ್ಷಾಕರೋ ರಾಕ್ಷಸಘ್ನೋ ಲಾಸ್ಯಪ್ರೀತೋ ರತಿಪ್ರದಃ ॥೧೫॥

ಪ್ರದೋಷತಾಂಡವಪರಸ್ಸರ್ವದೋಷಹರೋ ಹರಃ ।
ಆಖಂಡಲಮುಖಸ್ತುತ್ಯೋ ಮೇರುಕೋದಂಡಧೃಗ್ವರಃ ॥೧೬॥

ವೇದಘೋಟಃ ಪಾಟಿತಾಶ ಅಹಿಜ್ಯೋ ಬ್ರಹ್ಮಸಾರಥಿಃ ।
ಸೂರ್ಯಚಂದ್ರಮಹಾಚಕ್ರೋ ಹರಿಬಾಣೋಂಬರಾವೃತಃ ॥೧೭॥

ಕ್ಷ್ಮಾರಥಸ್ತ್ರಿಪುರಾರಾತಿಃ ಕಣ್ವಪೂಜ್ಯೋ ವಿಸಾರಕಃ ।
ಶೂಲೀ ಹಲೀ ಲಾಂಗಲೀ ಚ ಮುಸಲೀ ಕುಶಲೀ ಬಲೀ ॥೧೮॥

---

ನ್ಯಾಸಗಳಲ್ಲಿ ಮಧ್ಯವರ್ತಿಯಾಗಿರುವವನು. ಭಯಂಕರನು. ಉಮಾಸಹಿತನು. ಶಾಂತಸ್ವಭಾವದವನು. ಆಶ್ರಯಸ್ಥಾನನು. ಸವರ್ಣರಾದವರನ್ನು ರಕ್ಷಿಸುವವನು. ಇಷ್ಟಾರ್ಥವನ್ನು ಕೊಡುವವನು. ಮನ್ಮಥನನ್ನು ಕೊಂದವನು. ಪ್ರಪಂಚ ನಾಶಕನು. ಕನಕವಸ್ತ್ರಧಾರಿಯು. ಸುಖದುಃಖಗಳಲ್ಲಿ ಸಮಭಾಗಿಯು. ಅತಿಶಯವಾದ ಮಹಿಮೆಯುಳ್ಳವನು. ವನಾಧಿಪತಿಯು. ಕ್ಷೇತ್ರನಾಯಕನು. ॥೧೩-೧೪॥

ಕೈಲಾಸಶೈಲವಾಸಿಯು. ಪ್ರಲಯಕಾರಕನು. ನಾಶರಹಿತನು. ರಕ್ಷೆಯನ್ನುಂಟುಮಾಡುವವನು. ರಾಕ್ಷಸನಾಶಕನು. ಲಾಸ್ಯವೆಂಬ ನಾಟ್ಯದಲ್ಲಿ ಪ್ರೀತಿಯುಳ್ಳವನು. ಆನಂದಪ್ರದನು. ಪ್ರದೋಷನಾಟ್ಯದಲ್ಲಿ ಆಸಕ್ತನು. ಸರ್ವದೋಷ ನಿವಾರಕನು. ಪಾಪನಾಶಕನು. ಇಂದ್ರನಿಂದ ಸ್ತುತಿಸಲ್ಪಡುವವನು. ಮೇರುಪರ್ವತವನ್ನೇ ದಂಡವನ್ನಾಗಿ ಮಾಡಿಕೊಂಡವನು. ಶ್ರೇಷ್ಠನು. ॥೧೫-೧೬॥

ವೇದಗಳನ್ನೇ ಕುದುರೆಗಳನ್ನಾಗಿ ಮಾಡಿಕೊಂಡವನು. ದಿಕ್ಕುಗಳನ್ನು ನಾಶಗೊಳಿಸಿದವನು. ಸರ್ಪವನ್ನೇ ಮೌರ್ವಿಯನ್ನಾಗಿಮಾಡಿಕೊಂಡವನು. ಬ್ರಹ್ಮನನ್ನೇ ಸಾರಥಿಯಾಗಿ ಉಳ್ಳವನು. ಸೂರ್ಯ ಚಂದ್ರರನ್ನೇ ರಥಚಕ್ರಗಳನ್ನಾಗಿ ಪಡೆದವನು. ವಿಷ್ಣುವೇ ಬಾಣವಾಗಿದ್ದವನು. ಅಂತರಿಕ್ಷವನ್ನೇ ವಸ್ತ್ರವನ್ನಾಗಿ ಮಾಡಿಕೊಂಡವನು. ಭೂಮಿಯೇ ರಥವಾಗಿದ್ದವನು. ತ್ರಿಪುರಾಸುರರನ್ನು ನಾಶಗೊಳಿಸಿದವನು. ಕಣ್ವರಿಂದ

ಗದೀ ಶಂಖೀ ವಶೀ ಚಕ್ರೀ ಕವಚೀ ಚಾಂಧಸಾಂ ಪತಿಃ ।
ನಿಷಂಗಸಾಗರಃ ಶಂಭುಃ ಶಾಂತಸ್ಸಂಗವಿವರ್ಜಿತಃ ॥೯೯॥

ಧೀರೋದಾತ್ತ ಉದಾತ್ತಶ್ಚ ಸ್ವರಿತಃ ಪ್ರಚಯಸ್ಸ್ವರಃ ।
ಪ್ರಣವಃ ಪ್ರಾಣದಃ ಶೋಣಃ ಕಣಾದಫಣಿತಃ ಸೃಣೀ ॥೧೦೦॥

ಮೌನೀ ಮಾನೀ ಜಿತಾರಾತಿಃ ರೀತಿರ್ಧಾತುಮಯೋ ಮಹಾನ್ ।
ಅಣೋರಣೀಯಾಂತ್ಸುಭಗೋ ಮಹತೋಽಪಿ ಮಹತ್ತರಃ ॥೧೦೧॥

ಸ್ವರಾಟ್ಸಂವ್ರಾಡ್ವಿರಾಡ್ಧಾರಾ ವಿಧಾತಾ ಸರ್ವತೋಮುಖಃ ।
ಮೇಘಾಧಿಪೋ ಗಾಧಿಪೂಜ್ಯ ಆಧಿವ್ಯಾಧಿವಿನಾಶನಃ ॥೧೦೨॥

---

ಪೂಜಿತನಾದವನು. ಸರ್ವವ್ಯಾಪಿಯು. ಶೂಲಾಯುಧಧಾರಿಯು. ಹಲಾಯುಧ, ಲಾಂಗಲಾಯುಧ, ಮುಸಲಾಯುಧ ಇವುಗಳುಳ್ಳವನು. ಕುಶಲನು. ಬಲವುಳ್ಳವನು. ॥೯೭-೯೮॥

ಗದೆ, ಶಂಖ, ಚಕ್ರ ಮುಂತಾದ ಆಯುಧಗಳುಳ್ಳವನು. ಜಿತೇಂದ್ರಿಯನು. ಅಜ್ಞಾನಿಗಳಿಗೆ ಒಡೆಯನು. ಸಮುದ್ರಗಳನ್ನೇ ಬತ್ತಳಿಕೆಯನ್ನಾಗಿ ಹೊಂದಿರುವವನು. ಶಂಕರನು. ಶಾಂತನು. ಸಂಗರಹಿತನು. ಧೀರನು. ಉದಾರನು. ಗುಣಾಢ್ಯನು. ಸ್ವರಿತ, ಪ್ರಚಯ ಮುಂತಾದ ವೇದಸ್ವರಾತ್ಮಕನು. ಪ್ರಣವಮಂತ್ರರೂಪಿಯು. ಪ್ರಾಣದಾತೃವು. ರಕ್ತವರ್ಣವಿಶಿಷ್ಟನು. ಕಣಾದಮುನಿಯಿಂದ ಸ್ತುತ್ಯನಾದವನು. ಅಂಕುಶಧಾರಿಯು. ॥೯೯-೧೦೦॥

ಮೌನಧಾರಿಯು. ಮಾನವಂತನು. ಶತ್ರುಗಳನ್ನು ಜಯಿಸಿದವನು. ಕ್ರಮವರಿತವನು. ಲೋಹಮಯನು. ಮಹಾತ್ಮನು. ಅಣುವಿಗೂ ಅಣುವಾಗಿರುವವನು. ಸುಂದರನು. ಮಹಾವಸ್ತುವಿಗೂ ಮಹತ್ತಾಗಿ ತೋರುವವನು. ಸ್ವದೇಶಾಧಿಪತಿಯು. ಸಮಸ್ತ ಲೋಕಕ್ಕೂ ಯಜಮಾನನು. ವಿರಾಟ್ಪುರುಷನು. ಧಾತೃವು. ವಿಧಾತನು. ಸರ್ವತ್ರ ಮುಖವುಳ್ಳವನು. ಮೇಘಾಧಿಪನು. ಗಾಧಿರಾಜನಿಂದ ಪೂಜಿತನಾದವನು. ಮನೋವ್ಯಥೆ, ದೇಹರೋಗ ಇವುಗಳನ್ನು ನಾಶಗೊಳಿಸುವವನು. ॥೧೦೧-೧೦೨॥

ಗಾಥಾಧಿಪೋ ವ್ಯಾಧಿನಾಶಃ ಕಲಧೌತಪ್ರಭೋ ವಲಃ ।
ವೇದಗರ್ಭೋ ನೀಲಕಂಠಃ ಕುಂಠಿತಾಘಃ ಕೃಪಾಕರಃ ॥೧೦೩॥

ಜಗದಂಬಾಪತಿಃ ಸಾಂಬಸ್ತ್ರ್ಯಂಬಕೋ ರವಿಬಿಂಬಕಃ ।
ಸುಧಾಸಾಗರಮಧ್ಯಸ್ಥೋ ಮಾರ್ಗದ್ವೀಪನಿಕೇತನಃ ॥೧೦೪॥

ಕದಂಬವನಮಧ್ಯಸ್ಥೋ ನೀಪವಾಪೀ ಪ್ರಪಾಂತರಃ ।
ಪಾಪತಾಪಹರೋ ಗೋಪ್ತಾ ಶಂಬರಾರಿ ನಿಷೂದನಃ ॥೧೦೫॥

ತ್ರಿಯಂಬಕೋಂಬರನಟೋ ಜಟಾಜೂಟ ವಿಭೂಷಿತಃ ।
ಕಾಟ್ಯೋ ನೀಪ್ಯಶ್ಚ ಸೂದ್ಯಶ್ಚ ಸರಸ್ಯೋ ಮೇಘ್ಯವೈದ್ಯುತಃ ॥೧೦೬॥

ಈಧ್ರ್ಯ ಆತಪ್ಯ ಆತಾರ್ಯ ಅಲಾದ್ಯಃ ಶಷ್ಪ್ಯಬಂಧುರಃ ।
ರೇಷ್ಮ್ಯೋ ರಸ್ಯಶ್ಚ ವೈಶಂತೋ ನಾದ್ಯಃ ಕೂಪ್ಯೋಽವಟೋದ್ಭವಃ ॥೧೦೭॥

---

ಇತಿಹಾಸಾಧಿಪನು. ವ್ಯಾಧಿನಾಶಕನು. ಸುವರ್ಣದಂತೆ ಕಾಂತಿಯುಳ್ಳವನು. ಬಲಿಷ್ಠನಾದವನು. ವೇದವನ್ನೇ ಗರ್ಭದಲ್ಲಿ ಧರಿಸಿದವನು. ನೀಲವಾದ ಕತ್ತುಳ್ಳವನು. ಪಾಪನಾಶಕನು. ದಯಾಶಾಲಿಯು. ಲೋಕಮಾತೆಯಾದ ಪಾರ್ವತಿಗೆ ಪ್ರಿಯನಾದವನು. ಪಾರ್ವತೀಸಹಿತನು. ಮೂರು ಕಣ್ಣುಗಳುಳ್ಳವನು. ಸೂರ್ಯಬಿಂಬಮಧ್ಯವರ್ತಿಯು. ಅಮೃತಸಮುದ್ರ ಮಧ್ಯವರ್ತಿಯು. ಮಾರ್ಗವನ್ನೂ ದ್ವೀಪವನ್ನೂ ಮನೆಯನ್ನಾಗಿ ಉಳ್ಳವನು. ॥೧೦೩-೧೦೪॥

ಕದಂಬವನದ ಮಧ್ಯದಲ್ಲಿ ನೆಲಸಿರುವವನು. ಹಳ್ಳ, ಬಾವಿ, ಅರವಟ್ಟಿಗೆ ಮುಂತಾದ ಜಲವಸತಿಯ ಪ್ರದೇಶದಲ್ಲಿ ಅಡಗಿರುವವನು. ಪಾಪವನ್ನೂ ಸಂತಾಪವನ್ನೂ ಪರಿಹರಿಸಿದವನು. ರಕ್ಷಕನು. ಮನ್ಮಥನಾಶಕನು. ಮೂರು ಕಣ್ಣುಗಳುಳ್ಳವನು. ಅಂತರಿಕ್ಷದಲ್ಲಿ ನರ್ತನಮಾಡುವವನು. ಜಟಾಕಲಾಪದಿಂದ ಅಲಂಕೃತನು. ಎತ್ತರದ ದಿಣ್ಣೆಯನ್ನು ಆಶ್ರಯಿಸಿರುವವನು. ಹಳ್ಳದಲ್ಲಿ ಅಡಗಿರುವವನು. ಪೊದರಿನಲ್ಲಿ ನೆಲಸಿರುವವನು. ಸರಸ್ಸಿನಲ್ಲಿ ನಿಂತಿರುವವನು. ಮೇಘದಲ್ಲಿ ಅಡಗಿರುವವನು. ಮಿಂಚಿನಲ್ಲಿ ಅಡಗಿರುವವನು. ॥೧೦೫-೧೦೬॥

ಶರತ್ಕಾಲದ ಮೇಘದಲ್ಲಿ ಅಡಗಿರುವವನು. ಬಿಸಿಲಿನ ಜೊತೆಯಲ್ಲಿ ವೃಷ್ಟಿ ರೂಪದಿಂದಿರುವವನು. ಮುಕ್ತಿಪ್ರದವಾದ ಜ್ಞಾನಮಾರ್ಗವನ್ನು ಬಿಟ್ಟು ಸಂಸಾರದಲ್ಲಿ ಸಿಕ್ಕಿಸುವ ಕರ್ಮಮಾರ್ಗದಲ್ಲಿ ನಿರತನಾಗುವವನಂತೆ ವರ್ತಿಸುವವನು. ಕರ್ಮ

ಆಹನನ್ಯಶ್ಚ ದುಂದುಭ್ಯೋ ಸಿಕತ್ಯಃ ಫೇನ್ಯವನ್ಯಕಃ ।
ಪ್ರವಾಹ್ಯಶ್ಚ ಸಿಕತ್ಯಶ್ಚ ಪ್ರಪಥ್ಯೋ ಗೇಹ್ಯ ಏವಚ ॥೧೦೮॥

ಇರಿಣ್ಯಾಸ್ತಲ್ಪ್ಯ ಆತಾವ್ರೋ ಭವೋ ರುದ್ರಃ ಪಿತಾಮಹಃ ।
ಸಂಸಾರವೈದ್ಯೋ ವಿಶ್ವಾತ್ಮಾ ಜಗಚ್ಚಕ್ರಪ್ರವರ್ತಕಃ ॥೧೦೯॥

ಮರುತ್ಪಿತಾ ಸ್ವಿಷುಃ ಪಾತಾ ಗರಿಷ್ಠೋ ಗಹ್ವರಸ್ತರುಃ ।
ಹಿರಣ್ಯಬಾಹುರಾಶಾಸ್ಯಸ್ಸೇನಾನೀ ಗಿರಿಶೋ ಮೃಡಃ ॥೧೧೦॥

ಸುಧನ್ವಾ ಬಿಲ್ವಪತ್ರಾರ್ಚ್ಯೋ ಗೋನರ್ದೋಽಥ ವೃಷಾಕಪಿಃ ।
ಉರುಗಾಯಃ ಕಲ್ಯವರ್ಜ್ಯೋ ಜ್ಯೋತಿರ್ಹೇತಿರ್ವಿಭಾವಸುಃ ॥೧೧೧॥

---

ಫಲವನ್ನನುಭವಿಸುವ ಜೀವಿಗೆ ಪ್ರೇರಕನಾದವನು. ತೃಣಾಂಕುರರೂಪದಿಂದಿರುವವನು. ಮನೋಹರನು. ಪ್ರಲಯಕಾಲದಲ್ಲಿ ವೃಷ್ಟಿಪಾಷಾಣಾದಿರೂಪದಲ್ಲಿ ವರ್ತಿಸುವವನು. ರಸಾಂತರ್ವರ್ತಿಯು. ಅಲ್ಪ ಸರಸ್ಸಿನಲ್ಲಿ ಜಲರೂಪದಿಂದಿರುವವನು. ಬಾವಿಯ ನೀರಿನಂತಿರುವವನು. ಹಳ್ಳದಲ್ಲಿ ಜಲರೂಪದಿಂದಿರುವವನು. ಭೇರೀತಾಡನ ಸಾಧಕವಾದ ದಂಡರೂಪದಿಂದಿರುವವನು. ಬಾವಿಯಲ್ಲಿ ಅಡಗಿರುವವನು. ನಗಾರಿಯ ಧ್ವನಿಯಲ್ಲಿ ಸೇರಿರುವವನು. ಮರಳಿನ ರಾಶಿಯಲ್ಲಿ ನಿಂತಿರುವವನು. ರಾಜಮಾರ್ಗಮಧ್ಯನಿವಾಸಿಯು. ಮನೆಯಲ್ಲಿ ನಿಂತಿರುವವನು. ॥೧೦೭-೧೦೮॥

ದಿಣ್ಣೆಯ ಭೂಮಿಯಲ್ಲಿಯೂ, ಹಾಸಿಗೆಯಲ್ಲಿಯೂ ತೋರಿಬರುವವನು. ಸಂಪೂರ್ಣ ರಕ್ತವರ್ಣದವನು. ಉತ್ಪತ್ತಿಶೀಲನು. ಭಯಂಕರನು. ಪರಬ್ರಹ್ಮರೂಪನು. ಸಂಸಾರದುಃಖವನ್ನು ನಾಶಗೊಳಿಸುವವನು. ಪ್ರಪಂಚರೂಪನು. ಜಗತ್ತೆಂಬ ಚಕ್ರವನ್ನು ಸುತ್ತಿಸುವವನು. ದೇವತೆಗಳಿಗೆ ತಂದೆಯಂತಿರುವವನು. ಪ್ರಶಸ್ತವಾದ ಬಾಣಗಳುಳ್ಳವನು. ಶ್ರೇಷ್ಠನೆನಿಸಿದವನು. ಗುಹಾರೂಪದಲ್ಲಿರುವವನು. ವೃಕ್ಷರೂಪಿಯು. ಹಿರಣ್ಮಯವಾದ ತೋಳುಗಳುಳ್ಳವನು. ದಿಕ್ಕುಗಳಲ್ಲಿ ನಿಂತಿರುವವನು. ದೇವಸೇನಾನಾಯಕನು. ಗಿರಿವಾಸಿಯು. ಶಿವಸ್ವರೂಪನು. ॥೧೦೯-೧೧೦॥

ಶ್ರೇಷ್ಠಧನುರ್ಧಾರಿಯು. ಬಿಲ್ವಪತ್ರೆಗಳಿಂದ ಪೂಜಿತನಾದವನು. ವೃಷಭವಾಹನನು. ಸುಲಕ್ಷಣಗಳಿಂದ ಪ್ರಕಾಶಿಸುವವನು. ಶ್ರೇಷ್ಠವಾದ ದೇಹವುಳ್ಳವನು. ಶ್ರೇಷ್ಠ ರಸವಿವರ್ಜಿತನು. ತೇಜಸ್ಸೇ ಆಯುಧವಾಗಿ ಉಳ್ಳವನು. ಅಗ್ನಿಸ್ವರೂಪನು. ಶ್ರೇಷ್ಠ

ಸುತಿಥಿಃ ಕೌಶಿಕೋ ಧೂರ್ತೋ ಧತ್ತೂರ ಕುಸುಮಪ್ರಿಯಃ ।
ಕನಕಾಂಗದಕೇಯೂರಹಾರಕಾಕೋದರಪ್ರಿಯಃ ॥೧೧೨॥

ಉಮಾಧವೋ ಮಾಧವಾರ್ಚ್ಯೋ ಭಸ್ಮರುದ್ರಾಕ್ಷಭೂಷಣಃ ।
ಗಂಗಾತುಂಗಜಟಾಮೌಲಿರ್ನರ್ಮದಾಶರ್ಮದಾಯಕಃ ॥೧೧೩॥

ತಮಾಲಮಾಲಾಸುಗಲಃ ಕರವಾಲಲಸತ್ಕರಃ ।
ಅಟ್ಟಾಟ್ಟಹಾಸೋ ವಿಕಟೋ ದಂಷ್ಟ್ರಾಕುಟಿಲವಕ್ತ್ರಕಃ ॥೧೧೪॥

ರಕ್ತವೃತ್ತೇಕ್ಷಣಶ್ಶುಭ್ರಃ ಶ್ವಭ್ರೋ ಹರ್ತಾ ಕವಿರ್ಬಹಿಃ ।
ಫುಲ್ಲನೀಲೋತ್ಪಲಸ್ರಗ್ವೀ ಶಮ್ಯಾಕಾರ್ಚ್ಯೋ ವಿರೋಧಹಾ ॥೧೧೫॥

ಆರ್ಯಃ ಸೂರ್ಯಃ ಪ್ರಭುಃ ಶಾಸ್ತಾ ಸುಹಸ್ತೋ ಹಸ್ತಿಚರ್ಮಧೃಕ್ ।
ಕ್ಷೇತ್ರೇಶೋ ಜನಜೀವಾತ್ಮಾ ಅಮೋಘ ಅಪ್ನಿಯಾಪತಿಃ ॥೧೧೬॥

---

ವಾದ ತಿಥಿಸ್ವರೂಪನು. ಕುಶಿಕವಂಶೋತ್ಪನ್ನನು. ವಂಚಕನು. ದತ್ತೂರೀ ಹೂವಿನಲ್ಲಿ ಪ್ರೀತಿಯುಳ್ಳವನು. ಚಿನ್ನದ ತೋಳುಬಳೆ, ಹಾರ ಇವುಗಳುಳ್ಳವನು. ಸರ್ಪಾಭರಣಪ್ರಿಯನು. ॥೧೧೧-೧೧೨॥

ಪಾರ್ವತೀಪ್ರಿಯನು. ವಿಷ್ಣುವಿನಿಂದ ಅರ್ಚಿತನಾದವನು. ಭಸ್ಮರುದ್ರಾಕ್ಷಗಳಿಂದ ಅಲಂಕೃತನು. ಗಂಗಾನದಿಯಿಂದಲೂ, ನೀಳವಾದ ಜಟಾಕಲಾಪದಿಂದಲೂ ರಂಜಿಸುವವನು. ನರ್ಮದೆಗೂ ಸೌಖ್ಯವನ್ನುಂಟುಮಾಡುವವನು. ಹೊಂಗೆಯ ಎಸಳಿನಂತೆ ಕಪ್ಪಾದ ಕಂಠವುಳ್ಳವನು. ಕತ್ತಿಯಿಂದ ವಿರಾಜಿಸುವ ಕೈಯುಳ್ಳವನು. ಅಟ್ಟಹಾಸವುಳ್ಳವನು. ವಿರೂಪನು. ಕೋರೆಹಲ್ಲಿನಿಂದ ವಿಕಾರವಾದ ಮುಖವುಳ್ಳವನು. ॥೧೧೩-೧೧೪॥

ಕೆಂಪಾದ ಮತ್ತು ದುಂಡಾದ ದೃಷ್ಟಿಯುಳ್ಳವನು. ಶುಭ್ರಸ್ವರೂಪನು. ಹಳ್ಳದ ಆಕಾರದಲ್ಲಿರುವವನು. ಪಾಪನಾಶಕನು. ಕವಿಯು. ಬಾಹ್ಯಸ್ಥಿತಿಯುಳ್ಳವನು. ಅರಳಿದ ನೀಲತಾವರೆಗಳ ಮಾಲೆಯಿಂದ ಅಲಂಕೃತನು. ಶಮೀಪತ್ರೆಯಿಂದ ಅರ್ಚಿತನು. ವಿರೋಧಿಗಳನ್ನು ನಾಶಗೊಳಿಸುವವನು. ಪೂಜ್ಯನು. ಸೂರ್ಯನು. ಒಡೆಯನು. ಶಿಕ್ಷಕನು. ಶ್ರೇಷ್ಠವಾದ ಕೈಯುಳ್ಳವನು. ಗಜಚರ್ಮವನ್ನು ಧರಿಸಿದವನು. ಕ್ಷೇತ್ರಾಧಿಪತಿಯು. ಜನಜೀವನಸ್ವರೂಪನು. ವ್ಯರ್ಥವಿಲ್ಲದ ಕಾರ್ಯರೂಪನು. ಪರಮಪವಿತ್ರೆಯಾದ ಪಾರ್ವತೀಪತಿಯು. ॥೧೧೫-೧೧೬॥

ಶಾಣಚೀರಧರೋ ಘೋರೋ ಬರ್ಬರೋ ಭೈರವಸ್ಸಖಾ ।
ಉಷ್ಣೀಷೀ ವಸನಚ್ಛನ್ನ ಉಪಾನತ್ತ್ಯಾಪ್ಲವಃ ಶಿವಃ ॥೧೧೭॥

ವೃಕ್ಷಪಲ್ಲವಸನ್ಮೌಲಿಃ ಶುನಾಂಪತಿರಪಾಂಪತಿಃ ।
ಜಘನ್ಯೋ ಬುಧ್ನಿಯಶ್ಛಂದೋ ಅರುಣೋ ಭಗಣೇಂದ್ರಧೃಕ್ ॥೧೧೮॥

ಕುಮಾರಜನಕೋ ವೇತ್ತಾ ಪರಿವೀತೋಪವೀತಧೃಕ್ ।
ಬಭ್ರುಃ ಸುಶಿಭ್ರೋ ಮೀಢ್ವಾಂಶ್ಚ ಆಷಾಢೋ ದ್ರಾಪಿ ಉತ್ತಮಃ ॥೧೧೯॥

ಏಕಾಕ್ಷೋ ನೈಕಪಾತ್ಸುಭ್ರುರಧಿಪೋಮಿತ್ರಪಶ್ಶಿವಃ ।
ಕ್ಷತ್ರಪಃ ಸ್ವಪತಿರ್ದೇವೋ ಧನಪಃ ಶತ್ರುನಾಶಕೃತ್ ॥೧೨೦॥

---

ನಾರುಮಡಿಯುಟ್ಟಿರುವವನು. ಘೋರರೂಪಿಯು. ಬರ್ಬರದೇಶದವನು. ಭೈರವನು. ಸ್ನೇಹಿತನು. ತಲೆಗೆ ರುಮಾಲುಳ್ಳವನು. ಅಂಬರಧಾರಿಯು. ನಮಸ್ಕರಿಸಿದವರನ್ನು ಮುಳುಗಿಸದಿರುವವನು. ಶುಭಕರನು. ಮರದ ಚಿಗುರನ್ನು ಶಿರಸ್ಸಿನಲ್ಲಿ ಧರಿಸಿರುವವನು. ನಾಯಿಗಳಿಗೂ, ಜಲರಾಶಿಗಳಿಗೂ ಅಧಿಪತಿಯು. ಜಘನಪ್ರದೇಶದಿಂದ ತೋರಿಬರುವ ಕರುಗಳ ರೂಪದಲ್ಲಿರುವವನು. ವೃಕ್ಷಾದಿಗಳ ಬುಡದಲ್ಲಿ ಕೊಂಬೆಯೇ ಮೊದಲಾದ ರೂಪದಲ್ಲಿ ತೋರಿಬರುವವನು. ವೇದ ರೂಪನು. ಅರುಣವರ್ಣದಿಂದ ರಂಜಿಸುವವನು. ಚಂದ್ರಕಲಾಧಾರಿಯು. ||೧೧೭-೧೧೮||

ಕುಮಾರಸ್ವಾಮಿಯ ತಂದೆಯು. ಸರ್ವವನ್ನೂ ತಿಳಿದವನು. ಉತ್ತರೀಯ ಯಜ್ಞೋಪವೀತ ಇವುಗಳನ್ನು ಧರಿಸಿರುವವನು. ಬೂದುಬಣ್ಣದಿಂದ ರಂಜಿಸುವವನು. ಪ್ರಶಸ್ತವಾದ ವರ್ಣದಿಂದ ವಿರಾಜಿಸುವವನು. ಇಷ್ಟಕಾಮ್ಯಗಳನ್ನು ಅನುಗ್ರಹಿಸುವವನು. ಯಾರಿಂದಲೂ ತಿರಸ್ಕೃತನಲ್ಲದವನು. ಪಾಪಿಗಳಿಗೆ ದುರ್ಗತಿಯನ್ನು ಒದಗಿಸುವವನು. ಸರ್ವಶ್ರೇಷ್ಠನು. ಪಂಚೇಂದ್ರಿಯಗಳಿಲ್ಲದವನು. ಬಹುಪಾದವುಳ್ಳವನು. ಪ್ರಶಸ್ತವಾದ ಹುಬ್ಬುಳ್ಳವನು. ಸರ್ವದೇಶಪಕ್ಷಕನು. ಸೂರ್ಯನನ್ನೂ ಸಲಹುವವನು. ಶಂಕರನು ಕ್ಷತ್ರಿಯಪಾಲಕನು. ದ್ರವ್ಯಗಳಿಗೆ ಒಡೆಯನು. ದೇವತೆಯು. ಕುಬೇರನು. ಶತ್ರುಗಳನ್ನು ನಾಶಗೊಳಿಸುವವನು. ||೧೧೯-೧೨೦||

ಅನ್ನೇಷುಶ್ಚೈವ ವಾತೇಷು ತೀರ್ಥೇಷು ಪ್ರಪಥಃ ಪತಿಃ ।
ಆಯುರ್ದೋ ಧನದೋ ಧೀರೋ ರಸಃ ಶಿವತರೋಭೃಗುಃ ॥೧೨೧॥

ಏವಂ ನಾಮಸಹಸ್ರೇಣ ತುಷ್ಟಾವಾಷ್ಟಾಕೃತಿಂ ಹರಂ ।
ಸ್ಕಂದೋ ನಂದಿತಮಂದಾರೋ ವೃಂದಾರಗಣಸಾನತಃ ॥೧೨೨॥

ಶೃಣ್ವನ್ ಪಠನ್ ಶಿವಂ ಚಾರ್ಚ್ಯ ಬಿಲ್ವೈಃ ಪರ್ವಣಿ ಸರ್ವದಾ ।
ಜ್ಯೋಗ್ಜೀವತಿ ಸ ವಂಶೇನ ಸರ್ವಸಂಪತ್ಸಮಶ್ನುತೇ ॥೧೨೩॥

ಆಮ್ನಾಯಸರ್ವಾರ್ಥ ಸಹಸ್ರ ನಾಮ್ನಾಂ
ಭೂಮ್ನಾಂ ಚ ಸೀಮ್ನಾಂ ತು ಮಹಿಮ್ನ ನಾಮ್ನಾಂ ।
ಲೇಶೇಪ್ಯಶೇಷಂ ಸವಿಶೇಷಶಬ್ದವಿತ್
ಕಿಂ ವಾಸ್ಯ ಶೇಷಃ ಸುಮುಖೇನ ವಕ್ತಿ ॥೧೨೪॥

---

ಆಹಾರವಸ್ತುಗಳಲ್ಲಿ, ಗಾಳಿಯಲ್ಲಿ, ತೀರ್ಥಕ್ಷೇತ್ರಗಳಲ್ಲಿ ತೋರಿಬರುವವನು. ವಿಶಾಲಮಾರ್ಗಾವಲಂಬಿಯು. ಒಡೆಯನು. ಆಯುಸ್ಸನ್ನು ಕೊಡುವವನು. ಧನ ದಾತನು. ಧೀರನು. ರಸಸ್ವರೂಪನು. ಅತಿಶಯವಾದ ಮಂಗಳವನ್ನು ಕೊಡು ವವನು. ಭೃಗುರೂಪಿಯು. ಹೀಗೆ ಪರಶಿವನಿಗೆ ಸಹಸ್ರಾರು ನಾಮಗಳಿವೆ. ಇಂತಹ ನಾಮಸಹಸ್ರಗಳಿಂದ ಕುಮಾರಸ್ವಾಮಿಯು ಪರಮೇಶ್ವರನನ್ನು ಅರ್ಚಿಸಿ ತೃಪ್ತಿಪಡಿ ಸಿದನು. ಅಂತಹ ಕುಮಾರಸ್ವಾಮಿಯನ್ನು ಸಮಸ್ತ ದೇವತೆಗಳೂ ಪೂಜಿಸಿ ನಮಿಸಿದರು. ಈ ಶಿವಸಹಸ್ರನಾಮಸ್ತೋತ್ರವನ್ನು ಕೇಳಿದವರೂ, ಓದಿದವರೂ ಪರ್ವಕಾಲಗಳಲ್ಲಿ ಈ ನಾಮಗಳನ್ನುಚ್ಚರಿಸುತ್ತಾ ಪರಶಿವನಿಗೆ ಬಿಲ್ವಪತ್ರೆಯಿಂದ ಅರ್ಚಿಸಿದವರೂ ವಂಶಪರಂಪರೆಯಾಗಿ ಸರ್ವಸಂಪತ್ತನ್ನೂ ಪಡೆದು ಸ್ಥಿರಜೀವಿ ಗಳಾಗುವರು. ಇದರಲ್ಲಿ ಸಂಶಯವಿಲ್ಲ ॥೧೨೧-೧೨೨-೧೨೩॥

ಈ ಶಿವಸಹಸ್ರನಾಮಸ್ತೋತ್ರವು ವೇದಸಾರವನ್ನೇ ಸ್ಪಷ್ಟವಾಗಿ ತಿಳಿಯ ಪಡಿಸುತ್ತಿರುವುದು. ಶಿವಮಹಿಮೆಗೆ ಒಂದು ಎಲ್ಲೆಕಟ್ಟನಂತಿರುವುದು. ಇನ್ನೂ ಶಿವನಿಗಿರುವ ಅನಂತ ನಾಮಾವಳಿಗಳನ್ನು ಸುಮುಖವಾಗಿ ತಿಳಿಯಪಡಿಸಲು ಆದಿಶೇಷನಿಗೂ ಸಾಧ್ಯವಿಲ್ಲದಿರುವಾಗ ಇನ್ನು ಸಾಮಾನ್ಯ ಮಾನವರಿಂದ ಸಾಧ್ಯ ವೆನಿಸಿತೇ ? ॥೧೨೪॥

ನಾಮ್ನಾಂ ಸಹಸ್ರಂ ಪ್ರಜಪನ್ನಜಪ್ನಂ
ಬ್ರಧ್ನಪ್ರಭೋ ಜಾಯತ ಏವ ಸತ್ಯಂ ।
ಅಹೋ ನ ಕೇನಾಪಿ ಅಹೀನಪುಣ್ಯಾ
ನಹೀನವಂಶ್ಯೋ ಲಭತೇಽಸ್ಯ ಕಿಂ ಗುಣಂ ॥೧೨೫॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀ ಸಂವಾದೇ
ಶ್ರೀಸ್ಕಂದಕೃತ ಶಿವಸಹಸ್ರನಾಮ ಕಥನಂ ನಾಮ
ಚತುರ್ವಿಂಶೋಽಧ್ಯಾಯಃ

---

ಪುನರ್ಜನ್ಮವನ್ನೇ ಒದಗಿಸದೆ ಮುಕ್ತಿಪ್ರದವಾದ ಈ ಶಿವಸಹಸ್ರನಾಮ ಸ್ತೋತ್ರವನ್ನು ಯಾರು ಭಕ್ತಿಯಿಂದ ಪಠಿಸುವರೋ ಅವರು ಸೂರ್ಯಲೋಕಾಧಿಪತಿಯಾಗುವರು. ಪುಣ್ಯಶಾಲಿಗಳಿಗೆ ಮಾತ್ರ ಈ ಶಿವಸಹಸ್ರನಾಮ ಪಾರಾಯಣ ಬುದ್ಧಿಯುದಯಿಸುವುದು. ಕ್ಷೀಣಪುಣ್ಯರಿಗೂ, ಹೀನವಂಶಜರಿಗೂ ಇಂತಹ ಸದ್ಬುದ್ಧಿಯಾಗಲೀ ಶಿವಾನುಗ್ರಹವಾಗಲಿ ಹೇಗೆ ಲಭಿಸೀತು? ಮತ್ತು ಅಂತಹವರು ಈ ಶಿವಸಹಸ್ರನಾಮಜನ್ಯವಾದ ಸುಕೃತವನ್ನಾದರೂ ಹೇಗೆ ಪಡೆದಾರು? ಎಂಬುದಾಗಿ ಶಿವಸಹಸ್ರನಾಮಾವಳಿಯನ್ನೂ, ಅದರ ಪಠನ ಶ್ರವಣಗಳಿಂದ ಲಭಿಸುವ ಸುಕೃತ ರಾಶಿಯನ್ನೂ ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಯಪಡಿಸಿದನೆಂದು ಸೂತಮಹರ್ಷಿಗಳು ವಾಜಶ್ರವಸಾದಿ ಸಕಲ ಮುನಿಗಳಿಗೂ ಬೋಧಿಸಿದರು. ॥೧೨೫॥

ಇಲ್ಲಿಗೆ ಶ್ರೀಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ ಶಿವಗೌರೀ
ಸಂವಾದರೂಪವಾಗಿ ಸ್ಕಂದಕೃತ ಶಿವಸಹಸ್ರನಾಮಸ್ತೋತ್ರವನ್ನು ತಿಳಿಯ
ಪಡಿಸುವ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಪಂಚವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಚಿದಂಬರೇಶ್ವರಂ ಶಿವಾಮುದಂಬುಜರವಿತ್ವಿಷಂ ।
ಯಸ್ಯ ಜೈಮಿನಿರುದ್ಯುಕ್ತಸ್ತಸ್ಯೈ ವಾಚೇ ನಮೋ ನಮಃ ॥೧॥

ಪ್ರತ್ಯೂಹಶಾಂತ್ಯೈ ಹೇರಂಬಃ ಪ್ರತ್ಯೂಹಪತಿರೀಶ್ವರಃ ।
ವಿಸ್ಮಾಪಯಂತ್ಸಪಿತರಾವಸ್ಮಾಕಮಸ್ತು ಕೇವಲಃ ॥೨॥

---

## ಇಪ್ಪತ್ತೈದನೆಯ ಅಧ್ಯಾಯ

ಚಿದಂಬರೇಶ್ವರಲಿಂಗವು ಪಾರ್ವತಿಯ ಸಂತೋಷವೆಂಬ ಕಮಲಕ್ಕೆ ಸೂರ್ಯನಂತಿರುವುದು. ಇಂತಹ ಚಿದಂಬರೇಶ್ವರನನ್ನು ಜೈಮಿನಿಮಹರ್ಷಿಯು ನಾನಾಬಗೆಯಾಗಿ ಸ್ತುತಿಸಿರುವನು. ಅಂತಹ ಜೈಮಿನಿಯ ಸ್ತುತಿವಾಕ್ಕಿಗೆ ನಮಸ್ಕಾರ. ಮಹಾಗಣಪತಿಯು ಲೋಕದಲ್ಲಿ ವಿಘ್ನಶಾಂತಿಯನ್ನುಂಟುಮಾಡುವವನು ಎಂದು ಪ್ರಸಿದ್ಧವಾಗಿದೆ. ಸಮಸ್ತವಿಘ್ನಗಳಿಗೂ ಯಜಮಾನನಾದವನು. ಪರಶಿವನು. ಹಾಗಿದ್ದರೂ ಗಜಾನನನು ತಂದೆತಾಯಿಗಳಿಗೂ ಆಶ್ಚರ್ಯವುಂಟಾಗುವಂತೆ ಭಕ್ತರ ವಿಘ್ನಪರಂಪರೆಯನ್ನು ನಿವಾರಿಸುತ್ತಿರುವನು. ಇಂತಹ ಮಹಾಗಣಪನು ನಮಗೆ ಮುಖ್ಯದೇವತೆಯಾಗಿರಲಿ. ಅವನನ್ನೇ ಧ್ಯಾನಿಸುವ ಯೋಗವು ನಮಗೊದಗಲಿ. ॥೧-೨॥

ವಂದೇ ಶ್ರೀ ಶಿವಪಾದಾಬ್ಜಮದ್ವಂದ್ವಾನಂದಸಾಧನಂ ।
ಚೇತಸಾ ಸಂಪ್ರದಾಯಾನಾಮೇತದಾಲಂಬನಂ ಪರಂ ॥೩॥

ಪುಸ್ತಮುಕ್ತಾಲಸದ್ಧಸ್ತಾ ಚಾಸ್ತು ಮೇ ಭಾರತೀ ಮುಖೇ ।
ನಿಯೋಜಯಂತೀ ಯಾ ದೇವೀ ಧಿಯೋ ವಿಶ್ವಾ ವಿರಾಜತಿ ॥೪॥

ಹೃದ್ಯೈರಷ್ಟೋತ್ತರಶತಪದ್ಯೈರಂಬ ಶಿವೇ ತವ ।
ಪ್ರಹ್ವಾವೇದಸ್ತುತೌ ಭೂಯಾಜ್ಜಿಹ್ವಾ ಮೇ ಮಧುಮತ್ತಮಃ ॥೫॥

ಕಾವ್ಯಾಲಂಕಾರಸರ್ವಸ್ವಮಧುರೀಲಹರೀಮುಚಾ ।
ವಾಚಾ ಪರಮಕಲ್ಯಾಣೀ ಮುಖಂ ಹಿ ಮಮ ಶೋಭಯ ॥೬॥

ಮಾದೃಶಾಂ ವೈಖರೀ ವಾಚಾ ತ್ವಾದೃಶೀಂ ಸ್ತೋತುಮಂಬಿಕೇ ।
ಯತೋ ಬಿಭೇತಿ ಲಲಿತಾ ತತೋ ನೋ ಅಭಯಂ ಕೃಧಿ ॥೭॥

---

ಸಕಲರಿಗೂ ಬ್ರಹ್ಮಾನಂದವನ್ನು ಒದಗಿಸುವ ಪರಶಿವನ ಪಾದಕಮಲವನ್ನು ನಾನು ತಪ್ಪದೆ ಪೂಜಿಸಿ ಎರಗುವೆನು. ಏಕೆಂದರೆ ಯಾರು ಸತ್ಸಂಪ್ರದಾಯನಿರತರಾಗಿ ಜೀವನವನ್ನು ನಡೆಸುತ್ತಿರುವರೋ ಅವರೆಲ್ಲರಿಗೂ ಆಶ್ರಯವಿತ್ತಿರುವುದು ಈ ಪರಶಿವನ ಪಾದಕಮಲವೇ ಅಲ್ಲವೆ. ಮತ್ತು ಕೈಯ್ಯಲ್ಲಿ ಪುಸ್ತಕವನ್ನೂ ಮುಕ್ತಾಹಾರವನ್ನೂ ಧರಿಸಿ ಪ್ರಪಂಚಕ್ಕೆ ಬಂದು ವಿದ್ಯಾಬುದ್ಧಿಯನ್ನು ಒದಗಿಸುವ ಶಕ್ತಿಯುಳ್ಳ ಸರಸ್ವತೀದೇವಿಯು ಪರಶಿವನ ಪಾದಾರವಿಂದ ಧ್ಯಾನಮಾಡುವಾಗ ನನ್ನ ಮುಖಕಮಲದಲ್ಲಿ ಸದಾ ನೆಲಸಿರಲಿ. ॥೩-೪॥

ದೇವಿಯೇ, ನಿನ್ನನ್ನು ಮನೋಹರವಾದ ನೂರೆಂಟು ವೇದಪಾದಸ್ತವಪದ್ಯಗಳಿಂದ ಸ್ತುತಿಸಬೇಕೆಂದಿರುವೆನು. ಅಂತಹ ಸ್ತೋತ್ರಪಾಠದಲ್ಲಿ ನನ್ನ ನಾಲಗೆಯು ಪದೇ ಪದೇ ಪ್ರವರ್ತಿಸುತ್ತಿರುವಂತೆ ಅನುಗ್ರಹಿಸು. ನಿನ್ನನ್ನು ಸ್ತುತಿಸುವ ಕಾಲದಲ್ಲಿ ಲೋಕದಲ್ಲಿ ಕಂಡುಬರುವ ಸಮಸ್ತ ಕಾರ್ಯಗಳೂ, ಅಲಂಕಾರಗಳೂ ಸುಶೈಲಿಯೇ ಮೊದಲಾದ ಕಾವ್ಯಗುಣಗಳೂ, ನನ್ನ ಮಾತಿನಲ್ಲಿ ಅಡಕವಾಗಿರುವಂತೆ ವಾಗ್ದೇವತೆಯು ಸದಾ ನನ್ನ ಮುಖದಲ್ಲಿರುವಂತೆ ಅನುಗ್ರಹಿಸು. ॥೫-೬॥

ನಮ್ಮಂತಹವರ ಮಾತಿನ ಆಡಂಬರವು ನಿನ್ನಂತಹ ಮಹಾಮಹಿಮನ ಗುಣಗಾನದಲ್ಲಿ ಎಡೆಗೊಟ್ಟು ನಿಲ್ಲಲಾರದು. ಆದರೂ ಆ ಕೆಲಸದಲ್ಲಿ ಧೈರ್ಯದಿಂದ ಪ್ರಯತ್ನಿ

ಮದೀಯಕಾರ್ಯೇಷು ಶಿವೇ ತ್ವದೀಯದಯಯಾ ಮುಹುಃ ।
ಅವಧೂತರುಷಸ್ಸಂತು ಅವಧೂತಾ ಅರಾತಯಃ ॥೮॥

ರವೀಂದುದಕ್ಷವಾಮೋದ್ಯತಾಟಂಕರುಚಿರಾನನಾಂ ।
ಮಹಾವಿದ್ಯೇಶ್ವರೀಂ ವಂದೇ ಗ್ರಹನಕ್ಷತ್ರಮಾಲಿನೀಂ ॥೯॥

ಖಂಡಶರ್ಕರಯೈವಾಂಬ ದಯಯಾಲೋಕಯಾಶು ಮಾಂ ।
ಚಂಚಿಕೇ ತೇನ ಜೀವಾಮೋ ಮಂಡೂಕಾ ಉದಕಾದಿವ ॥೧೦॥

ಗಂಗಾದ್ಯಾ ಅಭಿಷೇಕಾರ್ಥಂ ತುಂಗಾಂ ತಾಃ ಸನ್ನಿಧತ್ತ ಭೋಃ ।
ಪಾಪೋಪಶಾಂತ್ಯೈ ನೋ ಮಾತರಾಪೋಹಿಷ್ಠಾ ಮಯೋಭುವಃ ॥೧೧॥

ಹೃದಯಸ್ಥೇಯಸೀ ನಿತ್ಯಂ ಸದಯೇ ಮಮ ಕಾಲಿಕೇ ।
ಭೂಯೋ ವಿತರ ಮೇ ಶ್ರೇಯ ಆಯುಷಾ ಸಹ ವರ್ಚಸಾ ॥೧೨॥

---

ಸಿರುವ ನಮಗೆ ಅಭಯವನ್ನು ಕೊಟ್ಟು ಕಾಪಾಡು. ಮತ್ತು ನಾನು ಹೊರಟಿರುವ ನಿನ್ನ ಸ್ತುತಿರೂಪವಾದ ಕಾರ್ಯದಲ್ಲಿ ಎಷ್ಟೋ ಜನ ಶತ್ರುಗಳು ಅಂದರೆ ಅದನ್ನು ತಡೆಗಟ್ಟುವವರು ಹುಟ್ಟಬಹುದು. ಅಂತಹವರಿಂದ ಯಾವ ತೊಂದರೆಯೂ ತನಗೆ ಉಂಟಾಗದಂತೆ ನೀನು ಅನುಗ್ರಹಿಸು. ॥೭-೮॥

ಸೂರ್ಯಚಂದ್ರರನ್ನೇ ತನ್ನ ಎಡಬಲ ಕಿವಿಗಳಿಗೆ ಓಲೆಯನ್ನಾಗಿಟ್ಟು ಅದರಿಂದ ಸುಂದರವಾದ ಮುಖವುಳ್ಳ ಮತ್ತು ಗ್ರಹನಕ್ಷತ್ರಗಳನ್ನೇ ಮಾಲೆಯನ್ನಾಗಿ ಮಾಡಿಕೊಂಡಿರುವ ಮಹಾವಿದ್ಯೇಶ್ವರಿಯೆನಿಸಿದ ದೇವಿಗೆ ವಂದಿಸುವೆನು. ಅಂಬ, ಕಲ್ಲುಸಕ್ಕರೆಯಂತೆ ಅತ್ಯಂತ ಸ್ವಾದುವಾದ ನಿನ್ನ ದಯಾದೃಷ್ಟಿಯಿಂದ ನನ್ನನ್ನು ನೋಡು. ಹಾಗೆ ನಾವು ನಿನ್ನ ಅನುಗ್ರಹಕ್ಕೆ ಪಾತ್ರರಾದೆವಾದರೆ, ಕಪ್ಪೆಗಳು ನೀರಿನಲ್ಲಿ ಸುಖದಿಂದಿರುವಂತೆ ನಾವು ಆನಂದಸಾಗರದಲ್ಲಿ ಮುಳುಗಿ ಸುಖಿಸುವೆವು. ॥೯-೧೦॥

ಗಂಗಾನದಿಯೇ ಮೊದಲಾಗಿ ತುಂಗಾನದಿಯುವರೆಗೂ ಇರುವ ಸಮಸ್ತ ತೀರ್ಥಗಳಲ್ಲಿಯೂ ನೀನು ಅಭಿಷೇಕವನ್ನು ಪಡೆದು ಎಲ್ಲೆಲ್ಲೂ ನೀನು ನೆಲಸುವವಳಾಗು. ಅಂಬ, ಅದರಿಂದ ಅಂದರೆ ನಾನು ಅವುಗಳಲ್ಲಿ ಸ್ನಾನಮಾಡುವುದರಿಂದ ನನ್ನ ಪಾಪರಾಶಿಯೆಲ್ಲಾ ಪರಿಹೃತವಾಗಲಿ. ದಯಾಶಾಲಿನಿಯೇ, ನೀನು ನಿತ್ಯವೂ ನನ್ನ ಹೃದಯಕಮಲದಲ್ಲಿ ಸ್ಥಿರವಾಗಿದ್ದು, ನನಗೆ ವಿಶೇಷವಾದ ಆಯುಸ್ಸನ್ನೂ, ವರ್ಚಸ್ಸನ್ನೂ ಅನುಗ್ರಹಿಸುವವಳಾಗು. ॥೧೧-೧೨॥

ಕಲೌ ತ್ವದ್ಭಕ್ತಿವಿಮುಖಾಃ ಕಾಲಿ ಸಂತಿ ಯಶೋಧನಾಃ ।
ಅಪ್ರಮತ್ತಾಸ್ಸ್ಮೃತಂ ದೇಶಂ ಮಾಪ್ರಗಾಮ ಪಥೋ ವಯಂ ॥೧೩॥

ಅಸಮಂಜಸಸಂಸಾರಾದಸಮಂಜನಮಂಬ ಮಾಂ ।
ವತ್ಸಲಾ ಭವತೀ ತ್ರಾತುಂ ವತ್ಸಂ ಗೌರಿವ ಧಾವತು ॥೧೪॥

ಅರ್ಥಿಭ್ಯೋಽಭೀತಿವರದೇ ಮುದ್ರೇ ಭದ್ರೇ ದಯಾಶ್ರಿತೇ ।
ಲಕ್ಷ್ಮೀಸ್ತ್ವಂ ಭಜತಾಂ ಪದ್ಭ್ಯಾಂ ಲಕ್ಷ್ಮೀಮನಪಗಾಮಿನೀಂ ॥೧೫॥

ಯೋಽಸ್ಮಾನ್ ದ್ವೇಷ್ಟಿ ವಯಂ ಯಂ ಚ ದ್ವಿಷ್ಮೋ ದುಷ್ಕೃತಿ ಯಶ್ಚ ನಃ।
ದುರ್ಗೇ ಶೂಲೇನ ತಾನೇತಾನ್ಮಮ ಶತ್ರೂನ್ನಿವಾರಯ ॥೧೬॥

ಧೀರೈಕಸುಲಭಾಂ ದೇವೀಂ ಘೋರಸಂಸಾರಮೋಚನೀಂ ।
ಅಹೋರಾತ್ರಂ ಚ ನಃ ಪಾಯಾದಘೋರಾ ಪಾಪಕಾಶಿನೀ ॥೧೭॥

---

ಕಾಳಿಕಾದೇವಿಯೇ, ನಿನ್ನಲ್ಲಿ ಭಕ್ತಿಯಿಡದ ನೀಚಮಾನವರು ಅಹಂಕಾರಿಗಳೆನಿಸಿ ಈ ಕಲಿಯುಗದಲ್ಲಿ ಅಸಂಖ್ಯಾತರಾಗಿ ಜಗತ್ತಿನಲ್ಲಿ ಕಾಣುತ್ತಿರುವರು. ನಾವು ಅವರ ದಾರಿಯಲ್ಲಿ ಹೋಗದಂತೆ ಕರುಣಿಸು. ಪರಸ್ಪರವಾಗಿ ಯಾವ ಸಂಬಂಧವೂ ಇಲ್ಲದೆ ಕಷ್ಟಸುಖಗಳಿಂದ ತೊಳಲುತ್ತಿರುವ ಈ ಸಂಸಾರ ಸಾಗರದಲ್ಲಿ ಬಿದ್ದು, ಎಲ್ಲರಿಗೂ ಕೀಳಾಗಿ ಜೀವಿಸುತ್ತಾ ನಿನ್ನನ್ನು ಸ್ತುತಿಸುತ್ತಿರುವ ನನ್ನನ್ನು ಹಸುವು ಕರುವನ್ನು ನೆನೆದು ಓಡಿಬರುವಂತೆ ದಯೆಯಿಂದ ನಿನ್ನ ಕಡೆಗೆ ತಿರುಗಿಸುವವಳಾಗು. ॥೧೩-೧೪॥

ದೇವಿಯೇ, ಸದಾ ನಿನ್ನನ್ನು ಭಜಿಸುವಂತಹ ಭಕ್ತರಿಗೆ ಅಭಯವನ್ನೂ, ವರವನ್ನೂ ಪ್ರದಾನಮಾಡುತ್ತಿರುವೆ. ನೀನು ದಯಾಪೂರ್ಣಳು. ದುರ್ಮಾರ್ಗಕ್ಕೆ ಹೋಗದಂತೆ ಮಾಡುವ ಸಂಪತ್ಸ್ವರೂಪಳು. ಇಂತಹ ಲಕ್ಷ್ಮೀಸ್ವರೂಪಳಾದ ನಿನ್ನನ್ನು ನಾನು ಸದಾ ಧ್ಯಾನಿಸುವೆನು. ಮತ್ತು ದೇವಿಯೇ, ಯಾರು ನನ್ನನ್ನು ಬಹಳವಾಗಿ ದ್ವೇಷಿಸಿ ಹಿಂಸಿಸುವರೋ, ಮತ್ತು ಯಾರನ್ನು ನಾನು ಬಹಳವಾದ ದ್ವೇಷಭಾವನೆಯಿಂದ ನೋಡುವೆನೋ, ಅಂತಹ ನನ್ನ ಶತ್ರುಗಳನ್ನು ನೀನು ನಿನ್ನ ತ್ರಿಶೂಲದ ಸಹಾಯದಿಂದ ಧ್ವಂಸಮಾಡು. ॥೧೫-೧೬॥

ಬ್ರಹ್ಮಾನಂದಸಮುಲ್ಲಾಸಲೀಲಾಂದೋಲಿತಲೋಚನಾಂ ।
ಮಹಾಸೌಭಾಗ್ಯಜನನೀಂ ಮಹಾಲಕ್ಷ್ಮೀಮುಪಾಸ್ಮಹೇ ॥೧೮॥

ಉಗ್ರಪತ್ನಿ ಸಮುಗ್ರಾನ್ಮೇ ದುಗ್ರ್ರಹಾನಾಗ್ರಹಾದಿಕಾನ್ ।
ಅನುಗ್ರಹಾದ್ರಿಪುಮಾತಿಕ್ಷ ಸರ್ವಗ್ರಹ ನಿವಾರಿಣಿ ॥೧೯॥

ಆರ್ತಿಂ ನಿವಾರ್ಯ ಭದ್ರಾಣಿ ಪೂರ್ತಿಂ ಸ್ಫೂರ್ತಿಂ ಚ ಪಾರ್ವತಿ ।
ಮೂರ್ತಿಂ ಪ್ರದೃಶ್ಯ ರುಚಿರಾಂ ಕೀರ್ತಿವೃದ್ಧಿಂ ದದಾತು ಮೇ ॥೨೦॥

ಅಂಧಕಾರಿ ಸಮಿಂಧಾನ ಸಂಧ್ಯಾನಟನಸಾಕ್ಷಿಣಿ ।
ವರ್ಚಸ್ವಂ ತಂ ಧರಾಧ್ಯಕ್ಷಂ ಆಯುಷ್ಮಂತಂ ಕರೋತು ಮಾಂ ॥೨೧॥

ಭರ್ಗಾತಿದಯಿತೇ ದುರ್ಗೇ ನಿಸರ್ಗಸ್ಥಂ ಜಗತ್ತ್ರಯಿ ।
ಆಯುಸ್ತ್ವತ್ಕೃಪಯಾ ನಿತ್ಯಂ ಮಯಿ ಶ್ರೀಶ್ಶ್ರಿಯತಾಂ ಯಶಃ॥೨೨॥

---

ಧೈರ್ಯದಿಂದ ಮುಂದುವರಿಯುವವರಿಗೆ ಸುಲಭಳೂ, ಘೋರಸಂಸಾರವನ್ನು ನಿವಾರಿಸುವವಳೂ, ಶಾಂತಸ್ವರೂಪಳೂ, ಪಾಪನಿವಾರಕಳೂ, ಆದ ದೇವಿಯು ನನ್ನನ್ನು ಸರ್ವದಾ ಕಾಪಾಡುತ್ತಿರಲು, ಬ್ರಹ್ಮಾನಂದವನ್ನು ಅನುಭವಿಸುತ್ತಾ, ಚಂಚಲಾಪಾಂಗದಿಂದ ರಂಜಿಸುವ ನೇತ್ರವುಳ್ಳ ಮಹಾಸೌಭಾಗ್ಯಜನನಿಯಾದ ಮಹಾಲಕ್ಷ್ಮಿಯನ್ನು ನಾನು ಸದಾ ಸೇವಿಸುತ್ತಿರುವೆನು. ॥೧೭-೧೮॥

ಉಗ್ರನೆನಿಸಿದ ಮಹಾದೇವನ ಪತ್ನಿಯಾದ ದೇವಿಯೆ, ನೀನು ಸರ್ವ ದುಷ್ಟ ಗ್ರಹಗಳನ್ನೂ ನಿವಾರಿಸುವವಳು. ನನ್ನ ವಿಷಯದಲ್ಲಿ ಆಗ್ರಹದಿಂದಿರುವ ಕೋಪ ತಾಪಾದಿಗಳನ್ನು ನಿನ್ನ ಅನುಗ್ರಹದಿಂದ ಹೋಗಲಾಡಿಸಿ ನನ್ನನ್ನು ಸಲಹು. ನನ್ನಲ್ಲಿ ಕಂಡುಬರುವ ದೇಹಪೀಡಾದಿಗಳನ್ನು ಹೋಗಲಾಡಿಸಿ, ಸ್ಥಿರವಾದ ಶಕ್ತಿ, ಉತ್ಸಾಹ, ಕೀರ್ತಿ, ಸೌಂದರ್ಯ ಮುಂತಾದುವುಗಳನ್ನು ಕರುಣಿಸಿ ಕಾಪಾಡು. ॥೧೯-೨೦॥

ಅಂಧಕಾರಾತಿಯಾದ ಮಹಾದೇವನು ಸಂಧ್ಯಾಕಾಲದಲ್ಲಿ ನಾಟ್ಯವಾಡುತ್ತಿರುವಾಗ ನೀನು ಅವನ ಸೊಬಗನ್ನು ನೋಡುತ್ತಾ ಆನಂದದಿಂದ ಕುಳಿತಿರುವೆ. ಅಂತಹ ಆನಂದಮೂರ್ತಿಯಾದ ನೀನು ನನಗೆ ವರ್ಚಸ್ಸು, ಆಯುಸ್ಸು ಮುಂತಾದುವುಗಳನ್ನು ಕೊಟ್ಟು ಕಾಪಾಡು. ಲೋಕಪ್ರಕಾಶಕನಾದ ಪರಶಿವನ ಪತ್ನಿಯೆನಿಸಿದ

ಸಂದೇಶಂ ಮಮ ಮನ್ವಂಸ್ತೇ ಕಂ ದೇಶಂ ಯತ್ರ ಯಾಮಿ ವಾ ।
ವಂದೇ ತವಾಶ್ರಯಂ ದೇವಿ ವಿಂದೇಯಂ ಪುರುಷಾಸಹಂ ॥೨೩॥

ವೇಧಾಂಭಾಸ್ತ್ರಾಣಿ ಯಜ್ಞಾಂಶ್ಚ ವೋದಾತ್ತ್ವತ್ಪದಭಕ್ತಿಕಾನ್ ।
ಪ್ರಿಯಂ ಕೀರ್ತಿಂ ಧೃತಿಂ ದಾರ್ಢ್ಯಂ ಶ್ರಿಯಂ ವಾಸಯ ಮೇ ಕುಲೇ ॥೨೪॥

ಮಾತಾ ಕಥಂ ವಿರುದ್ಧಾ ತ್ವಂ ಸಹಸೇ ಸರ್ವಮಂಗಳೇ ।
ಶರ್ವಾಣ್ಯಲಕ್ಷ್ಮೀಮಾಪತ್ತಿಂ ಸರ್ವಾನ್ನಿರ್ಣುದ ಮೇ ಗ್ರಹಾತ್ ॥೨೫॥

ರಾಜರಾಜೇಶ್ವರೀ ಮಾತರ್ಧತ್ಸೇ ತ್ವಂ ಧನದಾಯ ಯಾಂ ।
ದಾಯಾದ್ಯಸುತಸಾಮಾನ್ಯಂ ತಾಮಿಹೋಪಹ್ವಯೇ ಶ್ರಿಯಂ ॥೨೬॥

---

ದುರ್ಗಾದೇವಿಯೇ, ಈ ಜಗತ್ತು ನಿನ್ನಿಂದಲೇ ಸ್ವಾಭಾವಿಕವಾಗಿ ಸೃಷ್ಟವಾದುದಲ್ಲವೆ! ಅಂತಹ ನಿನ್ನ ಕೃಪೆಯಿಂದ ನನಗೆ ನಿತ್ಯವೂ ಆಯುಸ್ಸು, ಸಂಪತ್ತು ಇವು ಅಭಿವೃದ್ಧಿ ಹೊಂದುತ್ತಿರಲಿ. ॥೨೧-೨೨॥

ದೇವಿಯೇ, ನಾನು ಇನ್ನುಮುಂದೆ ಎಲ್ಲಿ ಹೋಗಲಿ? ಎಲ್ಲಿ ವಾಸಿಸಲಿ? ಯಾರ ಸಹವಾಸವನ್ನು ಅವಲಂಬಿಸಲಿ? ಎಂಬ ಈ ಸಂದೇಹಗಳನ್ನು ನಿವಾರಿಸುವ ಸಂದೇಶವೊಂದನ್ನು ನನಗೆ ಕೊಡು. ಎಲ್ಲಿಯೂ ಸ್ಥಳ ದೊರೆಯದ ನನಗೆ ಒಂದು ಆಶ್ರಯವನ್ನು ನೀಡುವವಳಾಗು. ಅಷ್ಟೇ ಅಲ್ಲದೆ ನನಗೆ ವೇದಶಾಸ್ತ್ರಗಳು, ಯಜ್ಞಾದಿಗಳು, ನಿನ್ನ ಪಾದಭಕ್ತಿಯನ್ನು ತಿಳಿಸುವ ಇತರ ಕರ್ಮಾದಿಗಳು ಇವುಗಳಲ್ಲಿ ನನ್ನನ್ನು ಪ್ರೇರಿಸಿ, ಅವೆಲ್ಲವೂ ನನಗೆ ಕೀರ್ತಿ, ಆರೋಗ್ಯ, ಸಂಪತ್ತು ಇವನ್ನು ಕೊಡುವಂತೆ ಅನುಗ್ರಹಿಸು. ಮತ್ತು ನೀನು ನನ್ನ ಗೃಹದಲ್ಲಿ ಸದಾ ವಾಸಮಾಡುತ್ತಿರು. ॥೨೩-೨೪॥

ಸರ್ವಮಂಗಳೆಯೇ, ಶರ್ವಾಣಿಯೇ, ತಾಯಿಯಾದವಳು ಎಂದಾದರೂ ಮಕ್ಕಳ ವಿಷಯದಲ್ಲಿ ವಿರುದ್ಧವಾಗಿ ವರ್ತಿಸುವಳೇ? ಪ್ರಪಂಚ ಮಾತೆಯೇ ನಮ್ಮ ಮನೆಯಲ್ಲಿರುವ ಅಲಕ್ಷ್ಮೀ, ಆಪತ್ತು ಮುಂತಾದ ಅಮಂಗಳ ಸನ್ನಿವೇಶಗಳನ್ನು ನಮ್ಮ ಮನೆಯಿಂದ ಓಡಿಸುವವಳಾಗು. ಮಕ್ಕಳಾದ ನಮ್ಮನ್ನು ರಕ್ಷಿಸು. ॥೨೫-೨೬॥

ಮದೀಯ ಹೃದಯಾಬ್ಜಸ್ಥಂ ತ್ವದೀಯಮಹಸಾ ಶಿವೇ ।
ತನೋವತ್ಕ್ರೋಧಲೋಭಾದಿಮಲಕ್ಷ್ಮೀರ್ನಾಶಯಾಮ್ಯಹಂ ॥೨೭॥

ಪವಿತ್ರಮಂತ್ರೈಃ ಸುಶ್ಲೋಕೈಃ ವಿಚಿತ್ರರಸನೈಶ್ಶಿವಾಂ ।
ವಾಚಸ್ಪತಿರಿವ ಸ್ತುತ್ವಾ ವಾಚಸ್ಪತ್ಯಮಶೀಮಹಿ ॥೨೮॥

ಪುತ್ರದೇ ಪೌತ್ರದೇ ಮಾತರ್ನಪ್ತೃದೇ ಗಜವಾಜಿದೇ ।
ಜನದಾಯ್ಯೈ ನಮಸ್ತುಭ್ಯಂ ಧನದಾಯಿಾ ಮಹಾಧನೇ ॥೨೯॥

ತೇಜಸೇ ಯಶಸೇ ಮಾತಾ ರಾಜಸೇ ಮಹಸೇ ಧನೇ ।
ಚರ್ಚಿತೈರ್ಗಂಧಪುಷ್ಪಾದ್ಯೈರರ್ಚಂತಸ್ತ್ವಾ ಹವಾಮಹೇ ॥೩೦॥

ಸಂಚಿದಾಗಾಮಿದುಃಖೇಭ್ಯಃ ಸ್ಮರಣಾತ್ತ್ವಮಪಾಲಯಃ ।
ಪ್ರಾರಬ್ಧಾಚ ಮಹಾದೇವಿ ಪುನರ್ನಃ ಪಾಹಿ ವಿಶ್ವತಃ ॥೩೧॥

ಪೌಂಡರೀಕಾಂತಯಜ್ಞೇಭ್ಯಶ್ಚಂಡಿಕೇ ಪ್ರೀತಯೇ ತವ ।
ಶತಾನಿ ದಶ ರಿಕ್ಥಾನಾಮಾಸಹಸ್ರಾಣಿ ದದ್ಮಹೇ ॥೩೨॥

---

ದೇವಿಯೇ, ನನ್ನ ಹೃದಯಾಂತರ್ಗತವಾದ ಅಜ್ಞಾನವೆಂಬ ಕತ್ತಲೆಯನ್ನೂ, ಕ್ರೋಧ, ಲೋಭ ಇವೇ ಮೊದಲಾದ ಅರಿಷಡ್ವರ್ಗಗಳನ್ನೂ ನಿನ್ನ ಅನುಗ್ರಹ ಲಬ್ಧವಾದ ತೇಜಸ್ಸಿನಿಂದ ನಾಶಮಾಡಿಕೊಳ್ಳುವೆನು. ಪವಿತ್ರಗಳಾದ ಮಂತ್ರ ಗಳಿಂದಲೂ ಸ್ತೋತ್ರಗಳಿಂದಲೂ ನಿನ್ನನ್ನು ನಾನಾರೀತಿಯಿಂದ ಬೃಹಸ್ಪತಿಯಂತೆ ಸ್ತುತಿಸಿ ಕೊನೆಗೆ ಬೃಹಸ್ಪತಿಪದವಿಯನ್ನೇ ಹೊಂದುವೆನು. ॥೨೭-೨೮॥

ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಹಾಗೂ ಆನೆ ಕುದುರೆಗಳು ಇಂತಹ ಸಂಪೂರ್ಣವಾದ ಐಹಿಕಸೌಖ್ಯಸಾಧನಗಳನ್ನೂ ಸಂಪೂರ್ಣವಾದ ಐಶ್ವರ್ಯ ವನ್ನೂ ಒದಗಿಸುವ ಲಕ್ಷ್ಮೀದೇವಿಯೇ, ನಿನಗೆ ನಮಸ್ಕಾರಮಾಡುವೆನು. ತೇಜಸ್ಸಿಗೂ ಯಶಸ್ಸಿಗೂ, ಕೀರ್ತಿಗೂ ಐಶ್ವರ್ಯಕ್ಕೂ ಮಾತೃಭೂಮಿಯೆನಿಸಿಧ ನಿನ್ನನ್ನು ಗಂಧ ಪುಷ್ಪಾದಿಗಳಿಂದ ಪೂಜಿಸುತ್ತಾ ಸದಾ ನಿನ್ನನ್ನೇ ಆಶ್ರಯಿಸಿ ಧ್ಯಾನಿಸುವೆವು. ॥೨೯-೩೦॥

ಜನ್ಮಾಂತರಗಳಿಂದ ಹಿಂದೆ ಸಂಪಾದಿಸಿದ, ಮುಂದೆ ಒದಗುವ ದುಃಖ ರಾಶಿಗಳೆಲ್ಲಾ ಕೇವಲ ನಿನ್ನ ನಾಮಸ್ಮರಣೆಯಿಂದಲೇ ನಿವಾರಣೆಯಾಗುವುದಲ್ಲವೆ? ಆದರೆ ದೇವಿಯೇ, ನಿನ್ನ ನಾಮಸ್ಮರಣೆಯಿಂದ ನಾನು ಪಾಪಗಳನ್ನೆಲ್ಲಾ ಕಳೆದು

ಜಪಾತ್ಪವಿತ್ರಕೈರ್ಮಂತ್ರೈಃ ಶಿವಾಯೈ ಪಾಯಸಂ ಘೃತಂ ।
ಬಿಲ್ವಪತ್ರಸರೋಜಾನಿ ಸಹಸ್ರಾಣಿ ಚ ದದ್ಮಹೇ ॥೩೩॥

ಪಂಡಿತಾಸ್ತೈರಲಂ ಧೀರಾಃ ಪೌಂಡರೀಕಾಂತಕರ್ಮಭಿಃ ।
ಉಪಾಸಿತುಂ ಮಹಾವಿದ್ಯಾಂ ಸಖಾಯ ಆನಿಷೀದತ ॥೩೪॥

ವಿಪಕ್ಷಪಕ್ಷೋಽಯಕ್ಷಾರಿ ರಕ್ಷಗ್ರಹ ಮಹರ್ಕ್ಷಜಂ ।
ಭಯಂ ಸ ಶಿಕ್ಷಕಾಮಾಕ್ಷಿ ರಕ್ಷಸ್ವ ಮಾಂ ಪದೇ ಪದೇ ॥೩೫॥

ಪ್ರಚಂಡಚಂಡಮುಂಡಾದ್ರಿ ಖಂಡನೋದ್ದಂಡ ವಜ್ರಕೇ ।
ಯೋ ಮೇ ಧನಾಪಹರ್ತಾರ ಸ್ತಾಂತೇ ದಧಾಮಿ ಜಂಭಯೋಃ ॥೩೬॥

ಪ್ರಾರಬ್ಧಮನಿವಾರ್ಯಂ ಚೇದೀದೃಶೇ ವರದಾಭಯೇ ।
ಕಿಮರ್ಥಂ ತವ ದೇವ್ಯೈತೇ ತತೋ ಮೇ ಶ್ರಿಯಮಾವಹ ॥೩೭॥

---

ಕೊಂಡ ಮೇಲೆ ಮತ್ತೆ ಪಾಪಸಂಚಯವೊದಗದಂತೆ ಮಾಡು. ಪೌಂಡರೀಕ ಪರ್ಯಂತವಾದ ಯಜ್ಞಗಳಿಂದ ದೇವಿಯೇ, ನಿನ್ನನ್ನು ತೃಪ್ತಿಪಡಿಸುವೆನು. ಸಹಸ್ರಾರು ಹೋಮಾದಿಗಳಿಂದ ನಿನ್ನನ್ನು ಸಂತೋಷಪಡಿಸುವೆನು. ॥೩೧-೩೨॥

ದೇವಿಯೇ ಜಪ, ಮಂತ್ರಪಾರಾಯಣ ಇವುಗಳಿಂದ ಪಾಯಸ, ತುಪ್ಪ ಇವುಗಳನ್ನು ಅರ್ಪಿಸಿ, ಬಿಲ್ವಪತ್ರೆ, ಕಮಲಗಳು ಇವುಗಳನ್ನು ಸಹಸ್ರಾರು ಸಂಖ್ಯೆಯಲ್ಲಿ ಸಮರ್ಪಿಸುವೆನು. ವಿದ್ವಾಂಸರೂ, ಧೀರರೂ ಆದವರು ಪೌಂಡರೀಕವೇ ಮೊದಲಾದ ಯಾಗಾದಿಗಳಿಂದ ನಿನ್ನನ್ನು ಸೇವಿಸಿ ನಿನ್ನ ಸೌಹಾರ್ದದೃಷ್ಟಿಯಿಂದ ಉದ್ಧಾರವಾಗಲು ಯತ್ನಿಸುತ್ತಿರುವರು. ॥೩೩-೩೪॥

ಶತ್ರುಪಕ್ಷದಿಂದಲೂ, ಯಕ್ಷರಾಕ್ಷಸಾದಿ ದುಷ್ಟಗ್ರಹಗಳಿಂದಲೂ ಒದಗುವ ಭಯರಾಶಿಯನ್ನು ದೇವಿಯೇ, ಹೋಗಲಾಡಿಸು. ಕಾಮಾಕ್ಷಿಯೇ, ಪ್ರಚಂಡ ಬಲಶಾಲಿಗಳಾದ ಚಂಡಮುಂಡಾದಿ ರಾಕ್ಷಸರೆಂಬ ಪರ್ವತಗಳನ್ನು ಖಂಡಿಸುವುದರಲ್ಲಿ ನೀನು ವಜ್ರಾಯುಧದಂತಿರುವೆ. ನನ್ನ ಧನವನ್ನು ಅಪಹರಿಸುವಂತಹ ನೀಚರನ್ನು ನಿನ್ನ ಶಿಕ್ಷೆಗೆ ವಿಷಯರನ್ನಾಗಿ ಮಾಡಿಕೋ. ಇದೇ ನನ್ನ ಪ್ರಾರ್ಥನೆ. ॥೩೫-೩೬॥

ಜಗನ್ಮಾತೆಯೇ, ವರದಾಭಯ ಪಾಣಿಯಾಗಿದ್ದು ನನ್ನನ್ನು ಅನುಗ್ರಹಿಸು ತ್ತಿರುವ ನಿನ್ನ ಮುಂದೆ ನನ್ನ ಪ್ರಾರಬ್ಧಕರ್ಮಗಳು ಎಂಥಾದರೂ ಸ್ಥಿರವಾಗಿ

ಬ್ರಹ್ಮಚಕ್ರಲಸದ್ರೂಪಾ ಬ್ರಹ್ಮವಿದ್ಯಾಧಿದೇವತಾ ।
ಈಡನೀಯಾ ತ್ರಯೀಚೂಡೈಃ ಷೋಡಶೀ ಶರ್ಮ ಯಚ್ಛತು ॥೩೮॥

ಮಹಾದಾರಿದ್ರ್ಯಶಮನೀಂ ಯಾಭೂತ್ಪಾಪವಿಮೋಚಿನೀಂ ।
ಶಿವಾಂ ನಮಸ್ತಾಂ ಕಾಲಾಗ್ನೌ ಶಿವಾ ರುದ್ರಸ್ಯ ಭೇಷಜೀ ॥೩೯॥

ಸಂಧ್ಯಾದಿ ಸರ್ವಕರ್ಮಾಂಬ ವಂಧ್ಯಂ ಯನ್ಮಮ ಚೇಷ್ಟಿತಂ ।
ಅಯಿ ತೋಷಾಯ ತೇ ಭೂಯಾತ್ತ್ವಯಿ ಸರ್ವಂ ಪ್ರತಿಷ್ಠಿತಂ ॥೪೦॥

ಅನ್ನಪೂರ್ಣೇ ದಯಾಪೂರ್ಣೇ ತ್ವನ್ನಾಮಪರಿಕುರ್ವತಃ ।
ಸನ್ನಿಧತ್ಸ್ವ ಮನೋದಾರೇ ಅನ್ನಪಾನೇ ಚ ಸರ್ವದಾ ॥೪೧॥

ಯದಿ ದೇವಿ ಕಟಾಕ್ಷಸ್ಸ್ಯಾತ್ ಹೃದಿ ಶಕ್ರಾದಯಸ್ಸುರಾಃ ।
ಮುಹುರ್ಹವಿರ್ಭಿಃ ಸೋಮಾದ್ಯೈರಹಂ ವೋ ಜೀವನಪ್ರದಾ ॥೪೨॥

---

ನಿಂತಾವೆ! ಆದ್ದರಿಂದಲೇ ನಾನು ಪಾಪರಹಿತನೆನಿಸುವೆನು. ನನಗೆ ಸಕಲ ಸಂಪತ್ತುಗಳನ್ನೂ ಕರುಣಿಸುವವಳಾಗು. ನೀನು ಕೇವಲ ಬ್ರಹ್ಮಚಕ್ರವೆನಿಸಿದ ಸುಷುಮ್ನಾಸ್ಥಾನದಲ್ಲಿ ವಿರಾಜಿಸುವ ಆಕಾರವುಳ್ಳವಳು. ಬ್ರಹ್ಮವಿದ್ಯಾಭಿಮಾನಿದೇವತೆಯು. ವೇದಾಂತಗಳೆನಿಸಿದ ಉಪನಿಷತ್ತುಗಳಿಂದ ಪೂಜಿತಳಾದವಳು. ಇಂತಹ ನೀನು ಷೋಡಶಕಲಾಪರಿಪೂರ್ಣವಾದ ರೂಪವನ್ನು ನನಗೂ ಅನುಗ್ರಹಿಸು. ॥೩೭-೩೮॥

ಮಹಾದಾರಿದ್ರ್ಯವನ್ನೂ ಯಾವ ದೇವಿಯು ತನ್ನ ಒಂದು ಲೀಲೆಯಿಂದ ಕ್ಷಣಕಾಲದಲ್ಲಿ ಪರಿಹರಿಸುವಳೋ, ಮತ್ತು ಪರಶಿವನ ಸರ್ವಕಾರ್ಯಗಳಿಗೂ ಉತ್ತೇಜಕಪ್ರಾಯಳಾಗಿ ದೊಡ್ಡ ವೈದ್ಯನಂತೆ (ಔಷಧಿಯಂತೆ) ಸದಾ ತೋರಿಬರುವಳೋ ಅಂತಹ ಪಾರ್ವತಿಯನ್ನು ನಾವು ತಪ್ಪದೆ ಧ್ಯಾನಮಾಡೋಣ. ದೇವಿಯೇ, ನಿನ್ನ ಅನುಗ್ರಹವೊಂದಿಲ್ಲದಿದ್ದರೆ ನನ್ನ ಸಂಧ್ಯಾದಿ ಸಕಲ ಕರ್ಮಗಳೂ ವ್ಯರ್ಥವೇ ಅಲ್ಲವೆ? ಆದರಿಂದಲೇ ನಾನು ಆಚರಿಸುವ ಸಕಲ ಕರ್ಮಗಳೂ ನಿನಗೆ ಸಂತೋಷಪ್ರದವಾಗುವಂತೆ ಅನುಗ್ರಹಿಸು. ॥೩೯-೪೦॥

ಭಕ್ತರಿಗೆ ದಯೆಯನ್ನು ತೋರಿಸುತ್ತಾ, ಆಹಾರವನ್ನೀಯುತ್ತಾ ರಕ್ಷಿಸುವ ಮಹಾದೇವಿಯೇ, ನಾನು ಸರ್ವದಾ ನಿನ್ನ ನಾಮಧ್ಯಾನದಲ್ಲಿಯೇ ನಿರತನಾಗಿರುವೆನು. ಅಂತಹ ನನಗೆ ಅನ್ನಪಾನೀಯಗಳನ್ನು ಸೇವಿಸುವಾಗಲೂ ನಿನ್ನ ಸಾನ್ನಿಧ್ಯವು

ಯತ್ಸಾನ್ನಿಧ್ಯಂ ದೇವಿ ಸಿದ್ಧಂ ಸ್ಯಾದಸಾಧ್ಯಂ ಸಾಧಯಾಶು ಮೇ ।
ಈದೃಶೇನ ಮಹಿಮ್ನಾ ತ್ವಾಂ ಪ್ರಶಂಸಂತಿ ಪ್ರಶಸ್ತಿಭಿಃ ॥೪೩॥

ನಾನಂದಯಂತಿ ಕಿಂ ದೇವಿ ಸಕೃದ್ವಾ ತ್ವಾಂ ಗಿರೋ ಮಮ ।
ನಂದಯಂತ್ಯೋ ಮುಹುಃ ಶ್ರೋತೄನ್ ವೃಷ್ಟಯ ಪೃಥಿವೀಮಿವ ॥೪೪॥

ನ ಸ್ಮರೇತ್ತ್ವಾ ಪಾಪಶ್ಚೇತ್ಸ್ಮರೇಚ್ಚೇನ್ನ ಸ ಪಾಪಕೃತ್ ।
ಸಾವಧಾನಂ ಶಿವೇ ಯುಕ್ತ್ಯೋರುಭಯಂ ಶೃಣ್ವತಶ್ಚ ನಃ ॥೪೫॥

ಹುತಾ ಹುತಾ ನ ಚಾಯಾಸಿ ಕುತಃ ಕಿಮುಚಿತಂ ತವ ।
ಕಿಮಾಕ್ರೋಶಮುಪೇಕ್ಷಂತೇ ಸೂನೋರ್ವತ್ಸಸ್ಯ ಮಾತರಃ ॥೪೬॥

---

ಲಭಿಸುತ್ತಿರಲಿ. ದೇವಿಯೇ, ನಿನ್ನ ಕಟಾಕ್ಷವು ನನ್ನ ಮೇಲೆ ಸಂಪೂರ್ಣವಾಗಿ ಇರುವುದಾದರೆ ಆಗ ಇಂದ್ರಾದಿ ಸಕಲ ದೇವತೆಗಳಿಗೂ ನಾನೇ ಜೀವನಪ್ರದನೆನಿಸುವೆನು. ಹೇಗೆಂದರೆ ಅಂತಹ ದೇವತೆಗಳಿಗೆ ಹವಿಸ್ಸು, ಸೋಮರಸ ಮೊದಲಾದುವುಗಳನ್ನು ಕೊಟ್ಟು ತೃಪ್ತಿಪಡಿಸುವೆನು. ॥೪೧-೪೨॥

ದೇವಿಯೇ, ಯಾರಿಗೂ ಸುಲಭವಾಗಿ ದೊರೆಯದ ನಿನ್ನ ಸನ್ನಿಧಾನವು ನನಗೆ ಸುಲಭವಾಗಿ ದೊರೆಯುವಂತೆ ಅನುಗ್ರಹಿಸು. ಇಂತಹ ಮಹಿಮೆ ನಿನ್ನಲ್ಲಿರುವುದರಿಂದಲೇ ಎಲ್ಲರೂ ನಿನ್ನನ್ನು ನಾನಾವಿಧವಾದ ಪ್ರಶಸ್ತಿಗಳಿಂದ ಸದಾ ಸ್ತುತಿಸುತ್ತಿರುವರು. ದೇವಿಯೇ, ನನ್ನ ಸ್ತುತಿವಚನವು ನಿನ್ನನ್ನು ಒಂದುಸಾರಿಯಾದರೂ ತೃಪ್ತಿಪಡಿಸಲಾರದೆ? ಒಂದುವೇಳೆ ನನ್ನ ಸ್ತೋತ್ರವು ನಿನ್ನನ್ನು ಸಂತೋಷಗೊಳಿಸುವುದಾದರೆ, ಅದೇ ಸ್ತೋತ್ರವು ಲೋಕದಲ್ಲಿ ವೃಷ್ಟಿಯು ಭೂಮಿಯನ್ನು ತಂಪು ಮಾಡುವಂತೆ ನನ್ನ ಹೃದಯವನ್ನೂ ಆನಂದಗೊಳಿಸಲಾರದೆ? ॥೪೩-೪೪॥

ಪಾರ್ವತಿಯೇ, ನಿನ್ನನ್ನು ಸ್ಮರಿಸದಿದ್ದವನು ಪಾಪಿಷ್ಠನೇ ಸರಿ. ನಿನ್ನ ಸ್ಮರಣೆಯಿಂದ ಮಾನವನು ಪಾಪಸಂಸರ್ಗದಿಂದ ದೂರನಾಗುವನು. ನಿನ್ನನ್ನು ಸಾವಧಾನದಿಂದ ಧ್ಯಾನಿಸಿ ಅಥವಾ ನಿನ್ನ ಸ್ತುತಿಯನ್ನು ಭಕ್ತಿಯಿಂದ ಕೇಳಿದ ನಮಗೆ ನಮ್ಮ ಸಕಲ ಭಯವನ್ನೂ ನಿವಾರಿಸಿ ರಕ್ಷಿಸುವವಳಾಗು. ಮಾತೆಯೇ, ನಿನ್ನನ್ನು ಯಾಗಾದಿಗಳಿಂದ ತೃಪ್ತಿಪಡಿಸಿದವರಿಗೂ, ನೀನು ಸುಲಭವಾಗಿ ದೊರತಿಲ್ಲ. ಉದಾಸೀನರಾಗಿದ್ದವರಿಗೂ ನೀನು ಸುಲಭಳಾಗಿಲ್ಲ. ಹೀಗಿರುವಾಗ ಜನರು ನಿನ್ನನ್ನು ಒಂದು ವೇಳೆ ಆಕ್ಷೇಪಿಸಬಹುದು. ತಾಯಿಯು ಮಕ್ಕಳ ಆಕ್ಷೇಪಣೆಯನ್ನು

ಉತ್ತರಂ ವದ ಸತ್ಯಂ ಮೇ ಕಾ ತ್ವಂ ಕೋಽಹಂ ಕುತೋನತಿಃ ।
ಕಿಯತ್ಕಾರ್ಯಂ ವಿಪೃಚ್ಛಾಮಿ ವಾಚಮುಷ್ಟಾಪದೀಮಿಮಾಂ ॥೪೭॥

ಭಕ್ತಿರಕ್ತೇ ನ ಚೇದ್ವೇತ್ಸಿ ಭುಕ್ತಿಮುಕ್ತೀ ನ ದಿತ್ಸ್ಯಸಿ ।
ಅಥರ್ಮಣಾ ತ್ವಮೇತತ್ತೇ ತ್ವಂ ಹಿ ವೇತ್ಥ ಯಥಾ ತಥಂ ॥೪೮॥

ಆಕ್ಷೇಪಂ ನ ಸ್ಸಮಾಧೇಹಿ ತಿಷ್ಠಂತೀ ಪುರತೋ ಮಮ ।
ನಿಶ್ಚಿತ್ಯ ವ್ಯತಿರೇಕಂ ತೇ ಭೂರಿ ನಾಮಮನಾಮಹೇ ॥೪೯॥

ತುಭ್ಯಂ ದೇವಿ ಯಶಸ್ಕಾಮಾಃ ಭಕ್ತಸ್ಯೈತನ್ನಿದರ್ಶನಂ ।
ಜಿಷ್ಣೋರಪಿ ಸಖ್ಯಾಯೋದ್ಯ ವಿಷ್ಣೋಃ ಕರ್ಮಾಣಿ ಪಶ್ಯತ ॥೫೦॥

---

ಗಮನಿಸದಿರುವಂತೆ ನೀನೂ ನಿನ್ನ ಭಕ್ತರ ಕ್ರೋಧವಚನಗಳನ್ನು ಮನ್ನಿಸುವೆಯಲ್ಲವೆ? ॥೪೫-೪೬॥

ಭಗವತಿಯೇ, ನಿಜವಾಗಿಯೂ ನೀನು ಯಾರು? ನಾನು ಯಾರು? ನಿನ್ನನ್ನು ಏತಕ್ಕಾಗಿ ನಾನು ವಂದಿಸಬೇಕು? ನಿನ್ನ ನಮಸ್ಕಾರದಿಂದ ನಾನು ಸಾಧಿಸುವ ಕಾರ್ಯವಾವುದು? ಇವೇ ಮೊದಲಾದ ಅಷ್ಟಪದಪ್ರಯುಕ್ತವಾದ ಪ್ರಶ್ನೆ ಮಾಡುವೆನು. ಅದಕ್ಕೆ ನನಗೆ ಸರಿಯಾದ ಉತ್ತರವನ್ನಿತ್ತು ನನ್ನನ್ನು ಕರುಣಿಸು. ನನ್ನಲ್ಲಿರುವ ಭಕ್ತಿಯು ನಿಜವಾಗಿಯೂ ನಿನಗೆ ಪ್ರೀತಿಕರವಾಗದಿದ್ದರೆ, ನನಗೆ ನೀನು ಎಂದಿಗೂ ಐಹಿಕಾಮುಷ್ಮಿಕಸುಖಗಳನ್ನು ಕರುಣಿಸಲಾರೆ. ಧರ್ಮಿಷ್ಠರಲ್ಲದವರಿಗೆ ನೀನು ಎಂದಿಗೂ ಭುಕ್ತಿಮುಕ್ತಿಪ್ರದಳಾಗಲಾರೆ. ಏಕೆಂದರೆ ನೀನು ಮಾನವರ ಸಹಜ ಮನೋಭಾವವನ್ನು ಕಂಡುಹಿಡಿಯುವ ಶಕ್ತಿಯುಳ್ಳವಳಲ್ಲವೆ? ॥೪೭-೪೮॥

ಭಗವತಿಯೇ, ನಿನ್ನ ನಾಮಾವಳಿಗಳನ್ನು ನಾನು ಸರ್ವದಾ ಧ್ಯಾನಿಸುವೆನು. ಆದರೆ ನನಗೆ ಬಂದಿರುವ ಸಂದೇಹಗಳನ್ನು ಮಾತ್ರ ನೀನು ಸಂಪೂರ್ಣವಾಗಿ ಪರಿಹರಿಸು. ನಿನ್ನ ಭಕ್ತರಿಗೆ ನಿನ್ನಿಂದಲೇ ಯಶಸ್ಸು, ಕಾಮ ಮುಂತಾದ ಪ್ರಯೋಜನ ಪುರುಷಾರ್ಥಗಳು ದೊರೆಯಬೇಕು. ದೇವೇಂದ್ರನು ನಿನಗೆ ಸದಾ ಸ್ನೇಹಿತನಂತೆ ಅಧೀನನಾಗಿರುವುದೂ, ವಿಷ್ಣುವು ದಶಾವತಾರಾದಿ ಕಾರ್ಯಗಳಲ್ಲಿ ಸಾಹಸಕಾರ್ಯಗಳನ್ನು ನೆರವೇರಿಸಿರುವುದೂ ಇದಕ್ಕೆ ನಿದರ್ಶನವಾಗಿದೆಯಲ್ಲವೆ! ॥೪೯-೫೦॥

ಕರ್ಣಾಭ್ಯಾಂ ಸ್ವರ್ಣಪೂರ್ಣಾಭ್ಯಾಂ ಕರ್ಣಿಕಾಕೀರ್ಣಸನ್ಮುಖೀಂ ।
ಅಪರ್ಣಾಂ ವರ್ಣಯೇ ತೂರ್ಣಂ ಸುವರ್ಣಾಂ ಹೇಮಮಾಲಿನೀಂ ॥೫೧॥

ತುಂಗಸ್ತನೀಂ ಶರ್ವಸರ್ವಮಂಗಳಾಮೀಶ್ವರಪ್ರಿಯಾಂ ।
ಮಂಗಳಾಯತನಾಂ ನೌಮಿ ಪಿಂಗಳಾಂ ಪದ್ಮಮಾಲಿನೀಂ ॥೫೨॥

ನಂದನೋತ್ಥಸುಪುಷ್ಪಾಣಿ ಚಂದನಾನ್ಯರ್ಚಿತುಂ ಶಿವಾಂ ।
ಸ್ವಯಂ ಸಂಪಾದ್ಯ ಪುರತಃ ಶ್ರಿಯಂ ದೇವೀಮುಪಹ್ವಯೇ ॥೫೩॥

ದಯಾರ್ದ್ರಹೃದಯೇ ಮಾತಃ ಕ್ರಿಯಾಶಾಲಿನಮುಪ್ಕಮೇ ।
ತ್ವಂ ಮಾಂ ಭಜಸ್ವ ಪದ್ಮಾಕ್ಷಿ ಯೇನ ಸೌಖ್ಯಂ ಲಭಾಮ್ಯಹಂ ॥೫೪॥

ರಕ್ಷ ಮಾಮಂಬ ಲಲಿತೇ ಯಕ್ಷರಾಜಸಮರ್ಚಿತೇ ।
ಪೂಜಯಾ ಹಿ ವಿರಾಜಂತೇ ಪ್ರಜಯಾ ಚ ಧನೇನ ಚ ॥೫೫॥

ಪರಿತಃ ಕಾಂತಿಧೀಃ ಶ್ರೀಭಿರ್ಗರಿಮಾಣಂ ಯಯುಶ್ಶಿವೇ ।
ಉಮೇ ತವ ದಯಾದೃಷ್ಟ್ಯಾ ಸೋಮ ಇಂದ್ರಾ ಬೃಹಸ್ಪತೀ ॥೫೬॥

---

ಸುವರ್ಣಾಭರಣಗಳಿಂದ ಅಲಂಕೃತಳಾಗಿ, ಮೊಗ್ಗುಗಳಿಂದ ಪರಿಪೂರ್ಣವಾದ ಮುಖವುಳ್ಳ, ಸುವರ್ಣಮಯವಾದ ಮಾಲೆಗಳಿಂದ ವಿರಾಜಿಸುವ ಅಪರ್ಣಾದೇವಿಯನ್ನು ನಾನು ಸರ್ವದಾ ಧ್ಯಾನಮಾಡುವೆನು. ದಪ್ಪವಾದ ಸ್ತನಗಳಿಂದಲೂ, ಪದ್ಮಮಾಲೆಗಳಿಂದಲೂ ಶೋಭಿಸುತ್ತಾ, ಈಶ್ವರಪ್ರಿಯಳಾಗಿ ಸಕಲ ಮಂಗಳಕಾರ್ಯಗಳಿಗೆ ಆಶ್ರಯಸ್ಥಾನಳಾದ ಮಹಾದೇವಿಯನ್ನು ನಾನು ಸರ್ವದಾ ವಂದಿಸುವೆನು. ॥೫೧-೫೨॥

ನಂದನವನದಲ್ಲಿ ಬೆಳೆದ ದಿವ್ಯಕುಸುಮಗಳಿಂದಲೂ, ಚಂದನಗಂಧದಿಂದಲೂ ನಿನ್ನನ್ನು ಅರ್ಚಿಸಿ ನಿನ್ನಿಂದ ಕಾಂತ್ಯಾದಿ ಸಕಲ ಸದ್ಗುಣಗಳನ್ನು ಪಡೆಯಲು ನಾನು ಪ್ರಯತ್ನಿಸುವೆನು. ದಯಾದೃಷ್ಟಿಯುಳ್ಳ ಜಗನ್ಮಾತೆಯೇ, ಸದಾಚಾರಸಂಪನ್ನನಾಗಿ ನಡೆಯುತ್ತಿರುವ ನನ್ನನ್ನು ನೀನು ಕರುಣಾಪಾಂಗದಿಂದ ಸೇವಿಸುತ್ತಿರು. ಆದರಿಂದ ನಾನು ಸಕಲವಿಧಗಳಾದ ಸೌಖ್ಯಗಳನ್ನೂ ಪಡೆಯುವೆನು. ॥೫೩-೫೪॥

ಕುಬೇರನಿಂದಲೂ ಅರ್ಚಿತಳಾದ ಲಲಿತಾಂಬಿಕೆಯೇ, ನನ್ನನ್ನು ರಕ್ಷಿಸು. ಪುತ್ರಪೌತ್ರಾದಿಸಂಪತ್ತಿನಿಂದಲೂ, ಐಶ್ವರ್ಯದಿಂದಲೂ ನಿನ್ನ ಭಕ್ತರು ವಿರಾಜಿಸಬೇಕಾದರೆ ಅವರು ನಿನ್ನನ್ನು ವಿಶೇಷರೀತಿಯಿಂದ ಅರ್ಚನೆಮಾಡಿರಲೇಬೇಕು. ಪಾರ್ವ

ತ್ವಚ್ಚಾರುಚರಣಂ ಸ್ಮೃತ್ವಾ ಸಚ್ಚಿದಾನಂದರೂಪಿಣೀಂ ।
ಅಚ್ಯುತೋ ವಾಗ್ಧನಪ್ರಾಪ್ತ್ಯಾಮಚ್ಯುತಾಂ ಬಹುಲಾಂಶ್ರಿಯಂ ॥೫೭॥

ಹನೂಮತ್ಪರಶುರಾಮಾದ್ಯೈರ್ಮನುಭೃದ್ಭಿರ್ಮಹಾತ್ಮಭಿಃ ।
ಅರ್ಚಿತಾಸಿ ಮಹಾದೇವಿ ದೀರ್ಘಾಯುಸ್ತ್ವಾಯ ವರ್ಚಸೇ ॥೫೮॥

ಗುಣಾಢ್ಯಪಾಕಸರಸ ಶಯ್ಯಾಲಂಕಾರರೀತಿಭಿಃ ।
ಶೋಭತಾಂ ಸುಮುಖಂ ವಾಣೀ ಶೋಭಯಂತೀ ಮುಖಂ ಮಮ ॥೫೯॥

ದುಷ್ಟಚಿತ್ತಂ ನಷ್ಟವಿತ್ತಂ ಕಷ್ಟವೃತ್ತಮಿಮಂ ಜನಂ ।
ಪಾತುಂ ಜನನಿ ತೇ ಚಿತ್ತಂ ಪಥಾ ವಾರಿವ ಧಾವತು ॥೬೦॥

ಉತ್ತಿಷ್ಠ ದೇವಿ ಕಿಂ ಶೇಷೇ ವರದಾಭಯಶೋಭಿತೇ ।
ಪಾಹಿ ದುರ್ಗೇತಿದುಷ್ಟೇಭ್ಯೋ ಭಯಂ ವಿಂದತಿ ಮಾಮಿಹ ॥೬೧॥

---

ತಿಯೇ, ನಿನ್ನ ದಯಾದೃಷ್ಟಿಯನ್ನು ಪಡೆದು ಇಂದ್ರ, ಚಂದ್ರ, ಬೃಹಸ್ಪತಿ ಮುಂತಾದವರು ಸರ್ವತೋಮುಖವಾದ ಕಾಂತಿ, ಸಂಪತ್ತು, ಸಾಮರ್ಥ್ಯ ಇವುಗಳನ್ನು ಪಡೆದಿರುವರಲ್ಲವೆ ! ॥೫೫-೫೬॥

ಸಚ್ಚಿದಾನಂದರೂಪಿಣಿಯಾದ ಮಹಾದೇವಿಯೇ, ಶ್ರೀಮನ್ನಾರಾಯಣನು ವಾಕ್ಸಂಪತ್ತನ್ನೂ, ನಾಶರಹಿತವಾದ ಮತ್ತು ಅತಿಶಯವಾದ ನಿಧಿಯನ್ನೂ (ಲಕ್ಷ್ಮಿಯನ್ನು) ಪಡೆಯಲು ನಿನ್ನನ್ನೇ ಧ್ಯಾನಮಾಡಿದನಲ್ಲವೆ? ಹನುಮಂತ, ಪರಶುರಾಮ, ಮನುಪ್ರಭೃತಿಗಳು, ಇನ್ನೂ ಮಹಾತ್ಮರು, ಇವರೆಲ್ಲರೂ ನಿನ್ನನ್ನು ಸೇವಿಸಿ, ದೀರ್ಘಾಯುಸ್ಸನ್ನೂ, ಅತಿಶಯವಾದ ತೇಜಸ್ಸನ್ನೂ ಹೊಂದಿದರು. ಅಲ್ಲವೆ? ॥೫೭-೫೮॥

ಮಹಾದೇವಿಯೇ, ನಿನ್ನ ಕೃಪಾಬಲದಿಂದ ರಸ, ಪಾಕ, ರೀತಿ, ಶಯ್ಯೆ, ಅಲಂಕಾರ ಮುಂತಾದ ದೋಷವಿವರ್ಜಿತ ಕಾವ್ಯಗುಣಗಳಿಂದ ಭರಿತವಾದ ಸಾರಸ್ವತ ಸಂಪತ್ತು ಸದಾ ನನ್ನ ಮುಖಸ್ಥವಾಗಿರಲಿ. ದುರ್ಮಾರ್ಗದಲ್ಲಿ ಬುದ್ಧಿಯನ್ನೋಡಿಸಿ, ಹಣವನ್ನು ವ್ಯಯಮಾಡಿಕೊಂಡು, ಕಷ್ಟಮಾರ್ಗವನ್ನು ಸಂಪಾದಿಸುತ್ತಿರುವ ನನ್ನನ್ನು ರಕ್ಷಿಸಲು ನಿನ್ನ ದಯಾದೃಷ್ಟಿಯು ದಾರಿಯು ನೀರಿನಂತೆ ಹರಿದು ಬರಲಿ. ॥೫೯-೬೦॥

ದೇವಿಯೇ, ವರದ, ಅಭಯ ಇವುಗಳಿಂದ ಶೋಭಿತವಾದ ಹಸ್ತವುಳ್ಳವಳೇ, ನನಗಾಗಿ ನೀನು ಎದ್ದು ನಿಂತು ಉದ್ಧರಿಸು. ದುಷ್ಟಪ್ರಾಣಿಗಳಿಂದ ದುರ್ಗಮವಾದ

ದುಗ್ಧೇ ಘೃತಂ ತಿಲೇ ತೈಲಂ ಮುಗ್ಧೇ ಘಂಟಾಧ್ವನಿರ್ಯಥಾ ।
ಮುದಾ ತ್ವಾಂ ಸರ್ವಗಾಂ ದೇವೀಂ ಸದಾ ಪಶ್ಯಂತಿ ಸೂರಯಃ ॥೬೨॥

ಪ್ರಪಂಚಸೃಷ್ಟೇಸ್ತ್ವಂ ಪೂರ್ವಂ ಬ್ರಹ್ಮಾಣೀ ಸಹಿತಾಂಬಿಕೇ ।
ಅಜೀಜಿನಸ್ತ್ವಂ ಧಾತಾರಂ ಶಾಶ್ವತಂ ಶಿವಮಚ್ಯುತಂ ॥೬೩॥

ಸ್ಥಲೀಕಮಲಸಂಕಾಶಪಾದಲಕ್ಷ್ಮ ತವೇಶ್ವರಿ ।
ಮಾಹಿಷೇ ಮಸ್ತಕೇ ಭಾತಿ ವಿದ್ಯುಲ್ಲೇಖೇವ ಭಾಸ್ವರಾ ॥೬೪॥

ಮೂಢೋಯಮಿತಿ ಮಾ ಮಂಸ್ಥಾಸ್ತ್ವತೋ ಹಂತಾ ಸಮಾಗತಾ ।
ತ್ವಯಾ ವಿನಾ ನ ಕಿಂಚಿಚ್ಚ ದೃಶ್ಯತೇ ಶ್ರೂಯತೇಪಿ ವಾ ॥೬೫॥

ವಂದೇ ವಿಂಧ್ಯಾಚಲಕುಚಾಂ ವಿಂಧ್ಯಾಚಲನಿವಾಸಿನೀಂ ।
ಸಂಧ್ಯಾಂ ಸುಪೂಜಯತಿ ಚೇದ್ಧಾತಾ ಗರ್ಭಂ ದಧಾತು ತೇ ॥೬೬॥

---

ಪ್ರದೇಶಗಳಲ್ಲಿ ನನಗೆ ಒದಗುವ ಭಯವನ್ನು ನಿವಾರಿಸಿ ನನ್ನನ್ನು ಕಾಪಾಡು. ಬೆಣ್ಣೆಯಲ್ಲಿ ತುಪ್ಪವೂ, ಎಳ್ಳಿನಲ್ಲಿ ಎಣ್ಣೆಯೂ, ಗಂಟೆಯಲ್ಲಿ ಧ್ವನಿಯೂ ಅಡಗಿರುವಂತೆ ಸರ್ವತ್ರ ಸೂಕ್ಷ್ಮರೂಪದಿಂದ ಅವ್ಯಕ್ತಳಾಗಿರುವ ನಿನ್ನನ್ನು ವಿದ್ವಾಂಸರು ಸದಾ ಸೂಕ್ಷ್ಮದೃಷ್ಟಿಯಿಂದ ಕಾಣುತ್ತಿರುವರು. ॥೬೧-೬೨॥

ಅಂಬಿಕೆಯೇ, ಪ್ರಪಂಚಸೃಷ್ಟಿಗೆ ಮೊದಲು ನಿನ್ನ ಶಕ್ತಿಯಿಂದ ಬ್ರಹ್ಮನನ್ನೂ, ಶಂಕರನನ್ನೂ, ವಿಷ್ಣುವನ್ನೂ ಸೃಷ್ಟಿಮಾಡಿದವಳು ನೀನೇ ಅಲ್ಲವೆ! ನೆಲದಾವರೆಯ ಹೂವಿನಂತೆ ಪ್ರಕಾಶಮಾನವಾದ ನಿನ್ನ ಪಾದಕಮಲದ ಗುರುತು ಮಹಿಷಾಸುರನ ಶಿರಸ್ಸಿನಮೇಲೆ ಪ್ರಕಾಶಮಾನವಾದ ಮಿಂಚಿನ ಬಳ್ಳಿಯಂತೆ ಶೋಭಿಸುತ್ತಿರುವುದು. ಹಾಗೆ ಮಹಿಷಾಸುರನನ್ನು ಮೆಟ್ಟಿ ತುಳಿದು ಕೆಡವಿದವಳು ನೀನೇ ಆಗಿರುವೆ. ॥೬೩-೬೪॥

ದೇವಿಯೇ, ನನ್ನನ್ನು ಅಜ್ಞಾನಿಯೆಂದು ತಿಳಿಯಬೇಡ. ಏಕೆಂದರೆ ಜಗತ್ಪ್ರಲಯಕಾರಣನಾದ ಪ್ರಲಯ ಕಾಲಭೈರವನೂ ನಿನ್ನಿಂದಲೇ ಉತ್ಪನ್ನನಾಗಿ ನಮ್ಮನ್ನು ಕೊಲ್ಲಲು ಬರುತ್ತಿರುವನು. ಆ ಸಮಯದಲ್ಲಿ ನಿನ್ನ ಆಕಾರ ಒಂದು ಹೊರತು ನನಗೆ ಮತ್ತಿನ್ನಾವ ವಸ್ತುವೂ ಕಾಣುವುದಿಲ್ಲ. ಅಥವಾ ಇದೆಯೆಂದು ಕೇಳಿ ಬರುವುದೂ ಇಲ್ಲ. ವಿಂಧ್ಯಾಚಲನಿವಾಸಿನಿಯೂ ವಿಂಧ್ಯಗಿರಿಯಂತೆ ಪೀನಸ್ತನಿಯೂ ಆದ ನಿನಗೆ ವಂದಿಸುವೆನು. ಲೋಕಸೃಷ್ಟಿಕರ್ತೃವಾದ ಬ್ರಹ್ಮನೂ ನಿನ್ನನ್ನು ಸಂಧ್ಯಾ

ಕುರುವಿಂದಮಣೀಂದ್ರಾಭಮರವಿಂದಲಸನ್ಮುಖಂ ।
ಅಹೋ ತಾದೃಕ್ತ್ವಮ ಶಿವೇ ಮಹೋ ನೋ ರಾಯ ಆಭರ ॥೬೭॥

ಅಖಂಡವೇದವಾಕ್ಯಾರ್ಥಾಮಖಂಡೈಕರಸಾಂ ಶಿವೇ ।
ಅಭಯಾಮದ್ವಯಾಂ ಚ ತ್ವಾಂ ಸುಭಗಾಮಹಮಾಶ್ರಯೇ ॥೬೮॥

ಚತುಸ್ಸಾಧನಸಂಪನ್ನಚತುರಾನುಭವಾತ್ಮಿಯಂ ।
ಪರಂಬ್ರಹ್ಮೇಯಮೇವ ಶ್ರೀಃ ನಹ್ಯಸ್ಯಾ ಅಪರಂ ಚ ನ ॥೬೯॥

ಭವತ್ಪಾದಾಂಬುಜದ್ವಂದ್ವಭವನ್ಮಾಧ್ವೀಕಷಟ್ಪದೀ ।
ರುದ್ರಭಾಗ್ಯಾಚ್ಛಚೀಪತ್ನೀರಿಂದ್ರಪತ್ನೀ ಮಹೀಯತೇ ॥೭೦॥

ಪಾಪಾಧಿಕ್ಯಾದ್ಭುಜತ್ವಂಬ ಪಾಪಾಯಾಮಯವಾನಪಿ ।
ಗ್ರೀವಾತಿಗಶ್ವಸನವಾನ್ ಜೀವಾತಿ ಶರದಃ ಶತಂ ॥೭೧॥

---

ಕಾಲಗಳಲ್ಲಿ ಅರ್ಚಿಸಿದುದೇ ಆದರೆ ಅವನೂ ತಾನು ಸೃಷ್ಟಿಮಾಡಿದ ಲೋಕಗಳನ್ನು ರಕ್ಷಿಸುವನು. ಮತ್ತು ಮುಕ್ತನೆನಿಸುವನು. ॥೬೫-೬೬॥

ಕುರುವಿಂದವೆಂಬ ಮಣಿಯಂತೆಯೂ, ಕಮಲದಂತೆಯೂ ವರ್ಣಸೌಂದರ್ಯವನ್ನು ಪಡೆದು ಪ್ರಕಾಶಿಸುವ ನಿನ್ನ ಮುಖವು ನಮಗೆ ಮಂಗಳವನ್ನೂ ವರ್ಚಸ್ಸನ್ನೂ ಕರುಣಿಸಿ ಸಂರಕ್ಷಿಸಲಿ. ವೇದದ ಸಂಪೂರ್ಣ ಸಾರವನ್ನೂ, ಆನಂದವನ್ನೂ ಕರುಣಿಸುವ, ಭಯರಹಿತರಾಗಿ ಏಕಮಾತ್ರಾವಶಿಷ್ಟಳಾದ ಸುಂದರಳಾದ ನಿನ್ನನ್ನೇ ಸರ್ವದಾ ಸೇವಿಸಿ ನಿನ್ನ ಸಾನ್ನಿಧ್ಯವನ್ನು ಪಡೆಯಲಪೇಕ್ಷಿಸುವೆನು. ॥೬೭-೬೮॥

ಧರ್ಮಾದಿಚತುರ್ವಿಧ ಪುರುಷಾರ್ಥಗಳಿಗೆ ಸಾಧನಳೂ, ಚಮತ್ಕಾರವಾದ ಸೃಷ್ಟಿಯ ಅನುಭವಗಳಿಂದ ರಂಜಿಸುವವಳೂ ಆದ ನೀನೇ ಪರಬ್ರಹ್ಮರೂಪಿಣಿಯು. ನಿನಗಿಂತ ಬೇರೆಯಾಗಿರುವ ವಸ್ತುವೇ ಪ್ರಪಂಚದಲ್ಲಿಲ್ಲ. ನಿನ್ನ ಪಾದಕಮಲದ್ವಂದ್ವದಲ್ಲಿ ಮಧುಪಾನಾಸಕ್ತವಾದ ದುಂಬಿಯಂತೆ ಓಡಾಡಿ ಶಚೀದೇವಿಯು, ಶಿವಾನುಗ್ರಹ ಬಲದಿಂದ ಇಂದ್ರಪತ್ನಿಯಾಗಿ ಇಂದು ಪ್ರಸಿದ್ಧಳಾಗಿರುವಳು. ॥೬೯-೭೦॥

ಮಾನವನು ಪಾಪಾತಿಶಯ ಸಂಸರ್ಗದಿಂದ ಅನೇಕ ಅಪಾಯ ಸನ್ನಿವೇಶಗಳನ್ನೂ, ರೋಗಾದ್ಯುಪದ್ರವಗಳನ್ನೂ ಎದುರಿಸುತ್ತಾ ನಿನ್ನನ್ನು ಸೇವಿಸಿದ್ದೇ ಆದರೆ, ಆಗ ಅವನು ಕಂಠಗತಪ್ರಾಣನಾದರೂ ನೂರಾರು ವರ್ಷ ನಿನ್ನನುಗ್ರಹಬಲದಿಂದ

ಸಾಷ್ಟೋತ್ತರಶತಾವೃತ್ತ್ಯಾಭೀಷ್ಟೋದಯ ಮಹಾಮನುಂ।
ವಿಷ್ಣುವಜ್ಜಪತೋ ಗೌರೀ ಭೂಷ್ಣುರಾತ್ಮಾಫಲಗ್ರಹಿಃ ॥೭೨॥

ಜಪಾಕುಸುಮಸಂಕಾಶಾಂ ಕೃಪಾಲಾಪಮಹಾಲತಾಂ।
ಅರ್ಯಾಂ ಸೇವೇ ವಿನೀತಾರ್ಯಾಂ ಸೂರ್ಯಾಭಾಂ ಶ್ರಿಯಮೀಶ್ವರೀಂ ॥೭೩॥

ತಾಂಬೂಲಕಬಲೈರ್ದಿವ್ಯೈಸ್ತಾಂಬೂಲಿತಮುಖಾಂಬುಜಾಂ।
ಶಿವಾದಾಲಿಂಗಿತಾ ಯಾ ಸಾ ಶಿವಾನಃ ಶಂತಮಾ ಭವ ॥೭೪॥

ತಥಾ ಪ್ರಪದ್ಯೇ ತ್ವಾಂ ಮಾತರ್ಯಥಾ ನದ್ಯಃ ಸಮುದ್ರಗಾಃ।
ಯಥಾ ಘೃತೇ ಘೃತಂ ಯಾತಿ ಯಥಾ ಮಾಸಾ ಅಹರ್ಜರಂ ॥೭೫॥

ಯತ್ರಾನಂದಾಶ್ಚ ಮೋದಾಶ್ಚ ಮುದಪ್ರಮುದ ಆಸತೇ।
ಮಾನಸ್ತ್ವಯಿ ದಯಾ ಮೂರ್ತೌ ತತ್ರ ಮಾಮಮೃತಂ ಕೃಧಿ ॥೭೬॥

---

ಸುಖವಾಗಿ ಜೀವಿಸಬಲ್ಲನು. ಅಲ್ಲದೆ ನೂರೆಂಟು ಸಂಖ್ಯೆಯಲ್ಲಿ ನಿನ್ನ ಮೂಲಮಂತ್ರವನ್ನು ಪುರಶ್ಚರಣೆಮಾಡುವವನು ವಿಷ್ಣುವಿನಂತೆ ಶಾಶ್ವತವಾದ ವೈಕುಂಠಲೋಕದ ಸೌಖ್ಯವನ್ನನುಭವಿಸುತ್ತಾ ಪ್ರಸಿದ್ಧನಾಗಿ ಕಾಲಕಳೆಯುವನು. ॥೭೧-೭೨॥

ದಾಸವಾಳದ ಹೂವಿನಂತೆ ಮನೋಹರಳೂ, ದಯಾಮಯವಾದ ಮಹಾಲತೆಯುಳ್ಳವಳೂ, ವಿನೀತಳೂ, ಸೂರ್ಯನಂತೆ ಪ್ರಜ್ವಲಿಸುವವಳೂ, ಸಂಪತ್ಸಮೃದ್ಧಳೂ ಆದ ಮಹಾದೇವಿಯನ್ನು ನಾನು ಸೇವಿಸುವೆನು. ತಾಂಬೂಲಚರ್ವಣದಿಂದ ಕೆಂಪಾದ ಮುಖಕಮಲವುಳ್ಳವಳಾಗಿ ಪರಮೇಶ್ವರನಿಂದ ಆಲಿಂಗಿಸಲ್ಪಟ್ಟು ಆನಂದ ಭರಿತಳಾಗಿರುವ ಪರಮೇಶ್ವರಿಯು ನಮಗೆ ಸುಖಪ್ರದಳೂ ಶಾಂತಿದಾಯಕಳೂ ಆಗಿರಲಿ. ॥೭೩-೭೪॥

ನದಿಗಳು ಸಮುದ್ರವನ್ನು ಸೇರುವಂತೆಯೂ, ತುಪ್ಪವು ತುಪ್ಪದಲ್ಲಿ ಲೀನವಾಗುವಂತೆಯೂ, ಅಹಸ್ಸಮುದಾಯದಲ್ಲಿ ತಿಂಗಳು ಸೇರಿಹೋಗುವಂತೆಯೂ ನಾನು ನಿನ್ನಲ್ಲಿ ಐಕ್ಯನಾಗುವೆನು. ಆನಂದ, ಸಂತೋಷ, ಆಸ್ಥೆ, ಮಾನ, ದಯೆ ಮುಂತಾದ ಸದ್ಗುಣಗಳು ಯಾರಲ್ಲಿ ಮೂರ್ತಿವತ್ತಾಗಿ ನಿಂತು ಕಂಗೊಳಿಸುತ್ತಿರುವುವೋ, ಅಂತಹ ಕೃಪಾಶಾಲಿನಿಯಾದ ನೀನು ನನಗೆ ಅಮೃತವನ್ನು ಅಂದರೆ ಪುನರ್ಜನ್ಮರಾಹಿತ್ಯವನ್ನು ಕರುಣಿಸು. ॥೭೫-೭೬॥

ಜಪಂತಸ್ತವ ವಿದ್ಯಾಂ ಚ ಯಜಂತಸ್ತ್ವಾಂ ಪದಾನು ಚ ।
ಶರ್ವಾಣಿ ದಯಯಾ ಧೀರಾಃ ಸರ್ವೇ ಸಾಕಂ ಸರಾತಯಃ ॥೭೭॥

ಆನಂದರೂಪಮಮೃತಂ ಪರಂ ಬ್ರಹ್ಮೈವ ಸಾ ಶಿವಾ ।
ನೈವ ಸ್ತ್ರೀ ನ ಪುಮಾನೇಷ ನೈವ ಚಾಯಂ ನಪುಂಸಕಃ ॥೭೮॥

ಜೀರ್ಣೋಽಪ್ಯಯಂ ತ್ವದ್ದಯಯಾ ಪೂರ್ಣಯಾತೂರ್ಣಮಿಂದ್ರಿಯೈಃ ।
ಆನಂದಂ ಬ್ರಹ್ಮಣೋ ವಿದ್ವಾನ್ನ ಬಿಭೇತಿ ಕುತಶ್ಚನ ॥೭೯॥

ಸದ್ಗುರೋರ್ಲಬ್ಧಯಾ ಬ್ರಹ್ಮರೂಪಯಾ ಕಶ್ಚಿದಾತ್ಮವಿತ್ ।
ಹೃದ್ಯಯಾ ಕೃಪಯಾ ತೇಂಬ ವಿದ್ಯಯಾಮೃತಮಶ್ನುತೇ ॥೮೦॥

ಸರ್ವಗಾ ತ್ವಮಹಂ ಕ್ವತ್ಯಃ ಕೀದೃಶಸ್ತೇ ಮಮ ಸ್ತವಃ ।
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ॥೮೧॥

---

ನಿನ್ನ ಮೂಲಮಂತ್ರವನ್ನು ಜಪಿಸುತ್ತಾ, ನಿನ್ನ ನಾಮಾವಳಿಯಿಂದ ನಿನ್ನನ್ನು ಪೂಜಿಸುತ್ತಾ ಧೀರರಾದವರೆಲ್ಲರೂ, ನಿನ್ನ ಅನುಗ್ರಹವನ್ನು ಪಡೆದು ಐಶ್ವರ್ಯಶಾಲಿಗಳಾಗಿ ಇಂದಿಗೂ ಶೋಭಿಸುತ್ತಿರುವರು. ಆನಂದರೂಪಳೂ, ಅಮೃತಸ್ವರೂಪಳೂ ಆದ ಪಾರ್ವತಿಯೇ ಪರಬ್ರಹ್ಮವಸ್ತುವು. ವಿಜ್ಞಾನದೃಷ್ಟಿಯಿಂದ ನೋಡಿದರೆ ಮಹಾದೇವಿಯು ಸ್ತ್ರೀಯೂ ಅಲ್ಲ. ಪುರುಷನೂ ಅಲ್ಲ. ನಪುಂಸಕನೂ ಅಲ್ಲ. ನಿಜವಾದ ರೀತಿಯಲ್ಲಿ ಲಿಂಗಭೇದವಾಗಲಿ, ನಾಮರೂಪಗಳಾಗಲಿ ನಿರುಪಾಧಿಕವಾದ ಆದಿಶಕ್ತಿಗೆ ಎಲ್ಲಿಯಾದರೂ ಉಂಟೆ? ॥೭೭-೭೮॥

ಮಾನವನು ಎಷ್ಟೇ ಕೃಶನಾಗಿದ್ದರೂ ನಿನ್ನ ದಯಾಬಲದಿಂದ ಸಂಪೂರ್ಣವಾದ ಇಂದ್ರಿಯಸುಖಗಳನ್ನು ಅನುಭವಿಸುವನು. ವಿದ್ಯಾವಂತನಾದವನು, ನಿನ್ನ ಕೃಪಾಕಟಾಕ್ಷದಿಂದ ಬ್ರಹ್ಮಾನಂದವನ್ನು ಪಡೆಯುವನಲ್ಲದೆ, ಪ್ರಪಂಚದಲ್ಲಿ ಮತ್ತಾವ ವಸ್ತುವಿಗೂ ಎಂದೂ ಹೆದರಲಾರನು. ಆತ್ಮಜ್ಞಾನಿಯಾಗುವವನು ಸದ್ಗುರುವಿನ ಉಪದೇಶಬಲದಿಂದ ಬ್ರಹ್ಮವಿದ್ಯೆಯನ್ನು ಸಂಪೂರ್ಣವಾಗಿ ಸಾಧಿಸುವನು. ಆ ಬ್ರಹ್ಮವಿದ್ಯೆಯು ಲಭಿಸಿ ಅದರಿಂದ ಅವನು ಬ್ರಹ್ಮಾನಂದವನ್ನು ಪಡೆಯಬೇಕಾದರೂ ಮೊದಲು ಆತನು ನಿನ್ನಿಂದ ದಯಾಕಟಾಕ್ಷವನ್ನು ಹೊಂದಿರಲೇ ಬೇಕಲ್ಲವೆ? ॥೭೯-೮೦॥

ಮಹಾದೇವಿಯೇ, ನೀನು ಸರ್ವವ್ಯಾಪಿನಿಯು. ನಾನಾದರೋ ಎಲ್ಲಿಯೋ

ಜ್ಞಾನಾದೇವ ತು ಕೈವಲ್ಯಮಿತ್ಯಾದಿಶ್ರುತಿಕೋಟಿಭಿಃ ।
ಜೀವನ್ಮುಕ್ತಸ್ತತೋ ಮಾತರ್ಮಾಮಾಬ್ರಹ್ಮ ನಿರಾಕರೋತ್ ॥೮೨॥

ಸಾಕ್ಷಾತ್ಕೃತಾಯಾಮಂಬಾಯಾಂ ಸತ್ಯಾನಂದ ಚಿದಾತ್ಮನಿ ।
ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ॥೮೩॥

ವರ್ಣಾಶ್ರಮೋಚಿತಮತಿರ್ವೇದಾರಣ್ಯೇಷ್ವಯಂ ಜನಃ ।
ತ್ವತ್ಪ್ರಸಾದಾದಮೋ ಧೀರಶ್ಚರನ್ ವೈ ಮಧು ವಿಂದತಿ ॥೮೪॥

ಭೂಷ್ಣುಭ್ಯಾಂ ಕೃಷ್ಣಜಿಷ್ಣುಭ್ಯಾಂ ಪೂಜ್ಯೇ ಪುಷ್ಣಾಸಿ ಪಾರ್ವತಿ ।
ತ್ವತ್ಕೃಪಾಬಲತೋ ವಿಷ್ಣುರಿದಂ ವಿಷ್ಣುರ್ವಿಚಕ್ರಮೇ ॥೮೫॥

ಶಾರದಾಬ್ಜಮುಖೀ ಪಾತು ಶಾರದಾ ಪಾರದಾಮಲಾ ।
ತ್ವತ್ಪ್ರಸಾದಾದಭೂನ್ಮಾತಃ ಸುಮೃಳೀಕಾ ಸರಸ್ವತೀ ॥೮೬॥

---

ಏಕದೇಶದಲ್ಲಿರುವವನು. ಹೀಗಿರುವಾಗ ನನ್ನ ಸ್ತೋತ್ರವು ನಿನ್ನನ್ನು ಹೇಗೆ ತಾನೆ ತೃಪ್ತಿಪಡಿಸೀತು? ಅದೂ ಅಲ್ಲದೆ ನಿನ್ನ ಗುಣಗಣಗಳು ಎಂದಿಗೂ ಯಾವ ಮಾತಿಗೂ ಸಿಕ್ಕಲಾರವು. ಶ್ರುತಿಸಮುದಾಯವು ಜ್ಞಾನದಿಂದಲೇ ಮುಕ್ತಿಯೆಂದು ಸಾರುತ್ತಿರುವುದು. ಆ ರೀತಿಯಿಂದಲೇ ಜ್ಞಾನಿಯಾದವನು ಬ್ರಹ್ಮಸ್ವರೂಪನಾಗಿ ಜೀವನ್ಮುಕ್ತನೆನಿಸುವನು. ॥೮೧-೮೨॥

ಸಚ್ಚಿದಾನಂದರೂಪಿಣಿಯಾದ ಜಗನ್ಮಾತೆಯನ್ನು ಸಾಕ್ಷಾತ್ಕರಿಸಿಕೊಂಡವರ ಹೃದಯಗತವಾದ ಕಾಮಕ್ರೋಧಾದಿಗಳೂ ನಾಶವಾಗುವುವು. ಸಂಶಯಜ್ಞಾನವೆಲ್ಲಾ ನಿವಾರಣೆಯಾಗುವುದು. ವರ್ಣಾಶ್ರಮಧರ್ಮನಿರತನಾಗಿ ಅರಣ್ಯದಂತೆ ವಿಶಾಲವಾಗಿರುವ ವೇದರಾಶಿಯ ಅರ್ಥಜ್ಞಾನವನ್ನು ಪಡೆದವನಾಗಿ ನಿನ್ನ ಅನುಗ್ರಹವನ್ನು ಪಡೆದ ಧೀರನು ಜರಾಮರಣನಾಶಕವಾದ ಅಮೃತತ್ವವನ್ನು ಪಡೆಯುವನು. ॥೮೩-೮೪॥

ಅಭಿವೃದ್ಧಿಯನ್ನು ಬಯಸುವಂತಹ ಶ್ರೀಕೃಷ್ಣಪರಮಾತ್ಮನೂ, ದೇವೇಂದ್ರನೂ ನಿನ್ನನ್ನು ನಾನಾರೀತಿ ಪೂಜಿಸಿರುವರು. ಆದರಿಂದ ನೀನು ತೃಪ್ತಳೂ ಆಗಿರುವೆ. ನಿನ್ನ ಅನುಗ್ರಹಬಲದಿಂದಲೇ ವಿಷ್ಣುವೂ ಸಹ ವಿಷ್ಣುತ್ವದಿಂದ ಪ್ರಸಿದ್ಧನಾಗಿರುವನು. ಶರತ್ಕಾಲದ ಕಮಲದಂತೆ ವಿಶಾಲವಾದ ಮುಖವುಳ್ಳವಳಾಗಿ,

ನಾನಾಚರಾಚರಕರೋ ನಾನಾ ಮಾಹಾತ್ಮ್ಯತಸ್ತವ ।
ಪ್ರಸಾದಾದಂಬ ತೇ ವಂದೇ ಬ್ರಹ್ಮ ಬ್ರಹ್ಮಾ ಭವತ್ಸ್ವಯಂ ॥೮೭॥

ಪದ್ಮಾಕ್ಷೀಂಪದ್ಮಗಾಂ ವಂದೇ ಪದ್ಮಾಕ್ಷಾದಿಭಿರೀಡಿತಾಂ ।
ತ್ವತ್ಪ್ರಸಾದಾತ್ಪದ್ಮಹಸ್ತಾಂ ಹಸ್ತಿನಾದಪ್ರಬೋಧಿನೀಂ ॥೮೮॥

ಘ್ರಾಣಾಪುಷ್ಕರಬಾಣಾನಾಂ ಜಿಹ್ವಾಪುಷ್ಕರಧನ್ವಿಕೇ ।
ಜೀವನ್ಮೌರ್ವೀ ಮಹಾದೇವಿ ಪರಾಚೀನಾಮುಖಾಕೃಧಿ ॥೮೯॥

ಗೌರೀಕಲ್ಯಾಣವೈಭೋಗಂ ಊರೀಚಕ್ರುಃ ಸ್ತ್ರಿಯೋಽಪಿ ಹಿ ।
ಕಲ್ಯಾಣಿಕರ್ಮಸು ಶಿವೇ ಸಾ ಕಾಷ್ಠಾ ಸಾ ಪರಾಗತಿಃ ॥೯೦॥

ಶ್ರೀರಾಮ ನರಸಿಂಹಾದಿವೀರಾರ್ಚ್ಯಾಂ ಭಜತಾಂಬಿಕಾಂ ।
ಅಪುತ್ರಾಃ ಪುತ್ರದಾಂ ದೇವೀಂ ವೀರವಂತೋ ಭವಿಷ್ಯಥ ॥೯೧॥

---

ಶರಚ್ಚಂದ್ರನಂತೆ ಪ್ರಕಾಶಮಾನವಾದ ವದನವುಳ್ಳ ನಿನ್ನ ಅನುಗ್ರಹಬಲದಿಂದ ಸರಸ್ವತಿಯು ಶುದ್ಧಳೂ ಶೈವಮಹಿಮಾನ್ವಿತಳೂ ಆಗಿ ಪ್ರಸಿದ್ಧಿಪಡೆಯುವಳಲ್ಲವೆ. ॥೮೫-೮೬॥

ಅಂಬಿಕೆಯೇ, ಚರಾಚರವಸ್ತುಗಳನ್ನೂ ಸೃಷ್ಟಿಮಾಡಬಲ್ಲ ಚತುರ್ಮುಖ ಬ್ರಹ್ಮನೂ ನಿನ್ನ ಅನುಗ್ರಹಬಲದಿಂದ ನಾನಾವಿಧವಾದ ಶಕ್ತಿಯನ್ನು ಸಂಪಾದಿಸಿದವನಾಗಿರುವನು. ಅಂತಹ ಪದ್ಮಲೋಚನೆಯೂ, ಲಕ್ಷ್ಮಿಯೇ ಮೊದಲಾದ ದೇವತಾಸ್ತ್ರೀಯರಿಂದ ಪೂಜಿತಳೂ, ಕಮಲಹಸ್ತಳೂ, ಗಜಧ್ವನಿಯಿಂದ ಎಚ್ಚರಗೊಳ್ಳುವವಳೂ ಆದ ನಿನ್ನನ್ನು ನಾನು ಸರ್ವದಾ ವಂದಿಸುವೆನು. ॥೮೭-೮೮॥

ಮಹಾದೇವಿಯೇ, ನಾಲಿಗೆಯೆಂಬ ಧನುಸ್ಸಿನಲ್ಲಿ ಜೀವನವೆಂಬ ಮೌರ್ವಿಯನ್ನಿಟ್ಟು ನಾಸಿಕವೆಂಬ ಬಾಣವನ್ನು ಪ್ರಸನ್ನಮುಖಭಾವದಿಂದ ನನ್ನಲ್ಲಿ ಪ್ರಯೋಗಿಸುವುದಾದರೆ ಆಗ ನಾನೇ ಧನ್ಯನೆನಿಸುವೆನಲ್ಲವೆ? ಪಾರ್ವತಿಯೇ, ಎಲ್ಲ ಪ್ರತಿವ್ರತಾಸ್ತ್ರೀಯರೂ ನಿನ್ನನ್ನೇ ಆರಾಧಿಸಿ ನಿನ್ನ ವರಬಲದಿಂದಲೇ ಸುಮಂಗಲಿಯರಾಗಿ ಮುಂದುವರಿದಿರುವರು. ಮಂಗಳಪ್ರದಳಾದವಳೇ, ನೀನೇ ಮಂಗಳಕಾರ್ಯಸ್ವರೂಪಳು, ನೀನೇ ಸರ್ವರಿಗೂ ಪರಾಕಾಷ್ಠಸ್ವರೂಪಳು. ॥೮೯-೯೦॥

ಮಹಾದೇವಿಯೆನಿಸಿದ ನೀನು ಶ್ರೀರಾಮ, ನರಸಿಂಹ ಮುಂತಾದ ವೀರರಿಂದ ಪೂಜಿತಳಾದವಳು. ಅಂತಹ ದೇವಿಯನ್ನು ಮಕ್ಕಳಿಲ್ಲದ ನೀವು ಪೂಜೆಮಾಡಿ

ಜ್ಯರಭಿತೋಗ್ರಕಿಣ್ಯೈರಂಗ್ಯೈರ್ನತೀನಾಂ ವಿನಮಾಮಿ ತೇ ।
ಸಹಸ್ರಾದಿ ಮಹಾಸ್ವೇದ್ಯೈಃ ಸಹಸ್ರಾಣಿ ಸಹಸ್ರಶಃ ॥೯೨॥

ತತ್ಕತ್ಕಾಲೇಷ್ವಹಲ್ಯಾಯಾ ಜಾರೋಪಿ ಖಲು ಯಜ್ವಭಿಃ ।
ಇಜ್ಯಂತೇಂಬ ಪ್ರಸಾದಾತ್ತ್ವೈಃ ವಿಶ್ವಸ್ಮಾದಿಂದ್ರ ಉತ್ತರಃ ॥೯೩॥

ಕನ್ಯಾಪ್ಯರ್ಜತಿ ಭಾಗ್ಯಾದಿಲಾಭಾಯ ಶುಭಕರ್ಮಸು ।
ತ್ವತ್ಪ್ರಸಾದಾದ್ವಿಶುದ್ಧಾಂಗೀ ಇಂದ್ರಾಣೀ ಮಾಸು ನಾರಿಷು ॥೯೪॥

ಏಕದ್ವಿತ್ರಿಚತುಷ್ಪಂಚ ಷಟ್ಸಪ್ತಾಷ್ಟಾದಿ ರೂಪಕಂ ।
ತ್ವತ್ಪ್ರಸಾದಾನ್ಮಹಾಂತಂ ತಮಗ್ನಿಮೀಳೇ ಪುರೋಹಿತಂ ॥೯೫॥

ಸ್ತುವೇ ವಿಘ್ನೇಶನಂದೀಶಚಂಡೀಶವೃಷಭೃಂಗಿಕಾನ್ ।
ಪ್ರಮಥೇಂದ್ರಾನ್ ಕುಮಾರೇಣ ಕುಮಾರೋ ಅಧಿಮಾತರಿ ॥೯೬॥

---

ವೀರರಾದಪುತ್ರರನ್ನು ಪಡೆಯುವರಾಗಿರಿ. ಗೌರೀದೇವಿಯೇ, ನಿನ್ನನ್ನು ನಾನು ಸಹಸ್ರಾರು ದೀರ್ಘದಂಡ ನಮಸ್ಕಾರಗಳಿಂದ ಸೇವಿಸುವೆನು. ನನ್ನ ದೇಹವೆಲ್ಲಾ ನಿನಗೆ ನಮಸ್ಕಾರ ಮಾಡುವುದರಿಂದ ಜಡ್ಡುಗಟ್ಟಿಹೋಗಿರುವುದು. ಅದೇ ರೀತಿಯಲ್ಲಿ ಬೆವರಿಡುತ್ತಾ ಸಹಸ್ರಾರು ನಮಸ್ಕಾರಗಳಿಂದ ನಿನ್ನನ್ನು ಸರ್ವದಾ ಸೇವೆಮಾಡುವೆನು. ॥೯೧-೯೨॥

ಅಹಲ್ಯಾಜಾರನಾದ ಇಂದ್ರನೂ ಕೂಡ ಕಾಲಕಾಲಕ್ಕೆ ನಿನ್ನನ್ನು ಯಾಗಾದಿಗಳಿಂದ ತೃಪ್ತಿಪಡಿಸಿ, ನಿನ್ನ ಅನುಗ್ರಹವನ್ನು ಪಡೆದು ಪ್ರಪಂಚಕ್ಕೆ ಶ್ರೇಷ್ಠನಾದ ಇಂದ್ರನೆನಿಸಿಕೊಂಡಿರುವನು. ಕನ್ಯಾವಸ್ಥೆಯಲ್ಲಿರುವ ಮಕ್ಕಳೂ ಸಹ ಇಷ್ಟಪ್ರಾಪ್ತಿ ರೂಪವಾದ ವರವನ್ನು ಪಡೆಯಲು ಶುಭಕರ್ಮಸಮಾರಂಭಗಳಲ್ಲಿ ಪೂಜಿಸುವರು. ಆಗ ನಿನ್ನ ಅನುಗ್ರಹಬಲದಿಂದ ಅವರು ಇಂದ್ರಾಣಿಯೇ ಮೊದಲಾದ ದೇವತಾ ಸ್ತ್ರೀಯರ ಶ್ರೇಣಿಯಲ್ಲಿ ಗಣ್ಯರೆನಿಸುವರು. ॥೯೩-೯೪॥

ವಿಘ್ನೇಶ್ವರ, ನಂದೀಶ್ವರ, ಚಂಡೀಶ್ವರ, ವೃಷಭೇಶ್ವರ, ಭೃಂಗಿ ಮುಂತಾದ ಪ್ರಮಥಗಣನಾಯಕರನ್ನೂ, ಕುಮಾರಸ್ವಾಮಿಯನ್ನೂ ತಾಯಿಯಂತೆ ರಕ್ಷಿಸುವ ನಿನ್ನನ್ನು ನಾನು ಸರ್ವದಾ ಸ್ತೋತ್ರಮಾಡುವೆನು. ಮುಮುಕ್ಷುಗಳಿಗೆ ದೊರೆಯುವ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯರೂಪವಾದ ಎಲ್ಲ ವಿಧವಾದ

ಸಾಲೋಕ್ಯ ಸಾಮೀಪ್ಯ ಸರೂಪತಾದಿ
ಸಾಯುಜ್ಯಮುಕ್ತೇಃ ಸ್ಫುಟಶಕ್ತಿಮೀಡೇ ।
ಸೌರೋದಿತೇಷು ಶ್ರುತಿಲಕ್ಷಣೇಷು
ವೈರೋಚನೀಂ ಕರ್ಮಫಲೇಷು ಜುಷ್ಟಾಂ ॥೯೭॥

ಲೀಲಾಮನಿಷ್ಠಾ ಮಧುಜಿತ್ಕನಿಷ್ಠೋ
ಧ್ಯಾಯಾದ್ವಸಿಷ್ಠಾದಯ ಯಾಗರಿಷ್ಠಾ ।
ವೇದಾಂತ ನಿಷ್ಠಾವತು ಶಂಭುಕಾಷ್ಠಾ
ವಿಶ್ವಸ್ಯ ಭರ್ತ್ರೀ ಜಗತಃ ಪ್ರತಿಷ್ಠಾ ॥೯೮॥

ಗಂಗಾಂ ಭಗೀರಥಾಯಾಸ
ಸಂಗಾಂ ತುಂಗಾಂ ಸಮಾಶ್ರಯಾತ್ ।
ಕ್ರಮೇಣ ಗೌರೀಂ ಪಶ್ಯಾಮಃ
ಶ್ರಮೇಣ ಮಹತಾ ಪಥಿ ॥೯೯॥

---

ಮುಕ್ತಿಗೂ ಮೂಲಕಾರಣಳಾದ ನಿನ್ನನ್ನು ನಾನು ಸದಾ ಧ್ಯಾನಮಾಡುವೆನು. ಮತ್ತು ಶ್ರುತ್ಯುಕ್ತವಾದ ಸಕಲ ಕರ್ಮಗಳಿಗೂ ಕರ್ಮಾನುಗುಣವಾದ ಫಲವನ್ನು ಕೊಡುತ್ತಾ, ಜೀವರೂಪದಿಂದಲೂ ವಿಹರಿಸುವ ಜಗನ್ಮಾತೆಯಾದ ನಿನ್ನನ್ನು ಸದಾ ಪ್ರಾರ್ಥಿಸುತ್ತಿರುವೆನು. ಒಂದು, ಎರಡು, ಮೂರು ಮೊದಲಾಗಿ ಏಳು ನಾಲಿಗೆ ಗಳನ್ನು ಪಡೆದು ಸರ್ವವ್ಯಾಪಿಯಾಗಿ ನಿನ್ನ ಅನುಗ್ರಹಬಲದಿಂದ ಸರ್ವರಿಗೂ ಶುಭವನ್ನು ಕೋರುವ ಅಗ್ನಿದೇವನನ್ನು ಸದಾ ಪೂಜಿಸುವೆನು. ೯೫-೯೬-೯೭॥

ನಿನ್ನ ಲೀಲಾಮಯವಾದ ಈ ಭೂಮಿಯಲ್ಲಿ ನೆಲಸಿ, ವಿಷ್ಣುವಿಗೂ ಸೋದರಿ ಯೆನಿಸಿ, ವಸಿಷ್ಠಾದಿಮಹರ್ಷಿಗಳ ಯಾಗಮಂಟಪದಲ್ಲಿಯೂ ಪೂಜಿತಳಾಗಿ, ವೇದಾಂ ತಗಳಲ್ಲಿ ಪ್ರತಿಪಾದ್ಯಮಾನಳೆನಿಸಿ, ಪರಶಿವನಿಗೆ ಮುಖ್ಯವಸ್ತುವೆನಿಸಿದ ನೀನು ಜಗತ್ತಿಗೆ ಯಜಮಾನಳಾಗಿರುವೆ. ಜಗತ್ಪಾಲಕಳೂ ನೀನೇ ಎನಿಸಿರುವೆ. ॥೯೮॥

ಭಗೀರಥನಿಗೆ ಅತಿಯಾದ ಆಯಾಸವನ್ನಿತ್ತ ಗಂಗಾನದಿಯನ್ನು ನಾವು ಸೇವಿಸುವುದರಿಂದಲೂ, ಇನ್ನೂ ಶ್ರಮಸಾಧ್ಯಗಳಾದ ಕರ್ಮಾದಿಗಳನ್ನು ಆಚರಿಸು ವುದರಿಂದಲೂ ನಾವು ಪಾರ್ವತಿಯ ದರ್ಶನಲಾಭವನ್ನು ಪಡೆಯುವೆವು. ಇದು

ದಿಕ್ಪಾಲಗ್ರಹ ಮಾತ್ರಾಷ್ಟಭೈರವಾ ಭಯಕೃನ್ಮುಖಾಃ ।
ಯತೋ ದೇವಿ ಭವತ್ಪ್ರೀತ್ಯೈ ಅತೋ ದೇವಾ ಭವಂತು ನಃ॥೧೦೦॥

ಸುಗಂಧಚರ್ಚಿತಾಂ ಕುಂದಮಂದಾರಕುಸುಮೋಜ್ಜ್ವಲಾಂ ।
ಸ್ತುವೇ ದುಕೂಲವಸನಾಂ ಸುವರ್ಣರಜತಸ್ರಜಾಂ ॥೧೦೧॥

ಗಾಂಗೇಯಾನಿಜ ರತ್ನಾನಿ ಗಾಂಗೇಯಾನಿ ಸ್ರಜಾನಿ ತೇ ।
ಶತಸಾಹಸ್ರದಶಕಾಂ ಛತನಿಷ್ಕಾನ್ ದಶಸ್ರಜಃ ॥೧೦೨॥

ಅಸ್ಮತ್ಪಿಪಿಪ್ಸಾ ಭವರುಕ್ ಚಿಕಿತ್ಸಾ
ಸುಪೂರ್ಣಲಿಪ್ಸಾತು ಶಿವಾಸುವತ್ಸಾ ।
ಶ್ರೀಕಂಠಲಿಪ್ಸಾ ಸದಭೀಷ್ಟದಿಪ್ಸಾ
ಶಾಲಾಂತರೇ ಗೌರಿವ ನಷ್ಟವತ್ಸಾ ॥೧೦೩॥

---

ನಿಜ. ದಿಕ್ಪಾಲರು, ನವಗ್ರಹಗಳು, ಅಷ್ಟಮಾತೃಕೆಯರು, ಭೈರವಗಣಗಳು ಮತ್ತು ಇತರ ದೇವತೆಗಳು, ಇವರೆಲ್ಲರಿಗೂ ಭಯಪ್ರದಳೆನಿಸಿರುವ ನಿನ್ನನ್ನು, ದೇವಿಯೇ ದೇವತೆಗಳೆಲ್ಲರೂ ಸರ್ವದಾ ಓಲೈಸುತ್ತಿರುವರಲ್ಲವೆ ! ॥೯೯-೧೦೦॥

ಸುಗಂಧಭೂಯಿಷ್ಠವಾಗಿ, ಕೋಲುಮಲ್ಲಿಗೆ, ಮಂದಾರಪುಷ್ಪ ಇವುಗಳಿಂದ ಕೂಡಿ, ಸುವರ್ಣ ಮತ್ತು ಬೆಳ್ಳಿ ಇವುಗಳ ಸರಗಳಿಂದ ವಿರಾಜಿಸುವ ಪೀತಾಂಬರ ಧಾರಿಣಿಯಾದ ದೇವಿಯನ್ನೇ ಯಾವಾಗಲೂ ನಾನು ಸ್ತುತಿಸುವೆನು. ಗಂಗಾನದಿ ಯಲ್ಲಿ ಹುಟ್ಟಿ, ಗಂಗಾ ತೀರದಲ್ಲಿ ಪ್ರಕಾಶಿಸುವ ಹತ್ತುಸಾವಿರ ಕಮಲಗಳನ್ನೂ, ನೂರಾರು ಸುವರ್ಣ ನಾಣ್ಯಗಳನ್ನೂ ಸೇರಿಸಿ ಹತ್ತು ಸರಗಳನ್ನು ಮಾಡಿ ಅದರಿಂದ ನಿನ್ನನ್ನು ಪೂಜಿಸುವೆನು. ॥೧೦೧-೧೦೨॥

ದೇವಿಯೇ, ನಿನ್ನ ಕಟಾಕ್ಷವು ಸಂಸಾರವೆಂಬ ರೋಗಕ್ಕೆ ದೊಡ್ಡ ಔಷಧಿ ಯಂತಿರುವುದು. ಅದನ್ನೇ ನಾವು ಬಯಸುವೆವು. ಕೇಳಿದ ಇಷ್ಟಾರ್ಥಗಳನ್ನೆಲ್ಲಾ ಸಲ್ಲಿಸು. ನಿನ್ನ ನೋಟವು ಪರಶಿವನಿಗೂ ಇಷ್ಟವಾಗಿರುವುದು. ಮತ್ತು ಭಕ್ತರಿಗೆ ಅತ್ಯಂತ ಇಷ್ಟವಸ್ತುವೆನಿಸಿರುವುದೂ ಆದೇ. ಅಂತಹ ನಿನ್ನ ಸಂಸರ್ಗವಿಲ್ಲದೆ ಇದ್ದರೆ ಪರಶಿವನು ಕರುವನ್ನು ಕಳೆದುಕೊಂಡ ಹಸುವಿನಂತೆ ಸದಾ ಹಂಬಲಿಸುತ್ತಿರುವನು. ॥೧೦೩॥

ನಮೋ ಮಖೇಭ್ಯೋ ಮಖವನ್ಮುಖೇಭ್ಯೋ
ಭುಗ್ನಾಗ್ರದೃಗ್ಭ್ಯೋ ದೃಗನದ್ವಯೇಭ್ಯಃ ।
ದಯಾಚ್ಯುತೇಭ್ಯಃ ಶ್ರುತಿಶಾಸ್ತ್ರದೃಗ್ಭ್ಯೋ
ನಮೋ ಯುವಭ್ಯೋ ನಮ ಆಸಿನೇಭ್ಯಃ ॥೧೦೪॥

ಮಹಾಮಾಯೇ ಸೃಜಸಿ ಹಿರಣ್ಯಗರ್ಭ
ಪ್ರಭೃತ್ಯೇತದ್ಭುವನಮಿವೋರ್ಣನಾಭಿಃ ।
ಸ್ವತಸ್ತಂತೂನ್ ಭಗವತಿ ದೇವಿ ಪಶ್ಚಾ
ದಜೀರ್ಣಾ ತ್ವಂ ಜರಯಸಿ ಸರ್ವಮೇತತ್ ॥೧೦೫॥

ಶಿವಂ ಸುರೇಭ್ಯಃ ಕೃಪಯಾಂಬ ತೇದ್ಯ
ಶಿವಂ ಮುನಿಭ್ಯಃ ಶಿವಮರ್ಭಕೇಭ್ಯಃ ।
ಶಿವಂ ದ್ವಿಜೇಭ್ಯಃ ಶಿವಮೇವ ಗೋಭ್ಯಃ
ಶಿವಂ ಪ್ರಜಾಯೈ ಶಿವಮಸ್ತು ಮಹ್ಯಂ ॥೧೦೬॥

---

ಯಾಗಾದಿಗಳಿಗೂ, ಇಂದ್ರಾದಿದೇವತೆಗಳಿಗೂ, ಸಂಸಾರದ ಆಲೋಚನೆ ಇಲ್ಲದ ಸಭ್ಯರಿಗೂ, ವಿಚಾರದೃಷ್ಟಿಯಿಲ್ಲದವರಿಗೂ, ನಿರ್ಘೃಣರಿಗೂ, ಶಾಸ್ತ್ರದೃಷ್ಟಿಯುಳ್ಳವರಿಗೂ, ಯುವಕರಿಗೂ, ಕುಳಿತಿರುವವರಿಗೂ ನಾನಾವಿಧವಾದ ನಮಸ್ಕಾರಗಳು. ॥೧೦೪॥

ಮಹಾಮಾಯೆಯೇ, ಜೇಡರಹುಳುವು ತನ್ನ ಜೊಲ್ಲಿನಿಂದಲೇ ದಾರವನ್ನು ಕಲ್ಪಿಸಿಕೊಂಡು ಗೂಡನ್ನು ಕಟ್ಟಿ ಕೊನೆಗೆ ತಾನೇ ಅದನ್ನು ತಿಂದು ಜೀರ್ಣಮಾಡಿಕೊಳ್ಳುವಂತೆ ನಿನ್ನ ಒಂದು ಸಾಮರ್ಥ್ಯದಿಂದ ಜಗತ್ತನ್ನೇ ಸೃಷ್ಟಿಸಿ ರಕ್ಷಿಸಿ ಕೊನೆಗೆ ಅದನ್ನೆಲ್ಲಾ ಲಯಗೊಳಿಸಿ ಏಕಾಕಿನಿಯಾಗಿ ನಿಲ್ಲುವೆಯಲ್ಲವೆ! ಇದೇ ನಿನ್ನ ಪ್ರಕೃತಿಸಿದ್ಧವಾದ ಸಾಹಸ. ॥೧೦೫॥

ದೇವಿಯೇ, ನಿನ್ನ ದಯೆಯನ್ನು ಪಡೆದು, ದೇವತೆಗಳಿಗೂ, ಮುನಿಗಳಿಗೂ ಮಕ್ಕಳಿಗೂ, ಗೋಬ್ರಾಹ್ಮಣರಿಗೂ ಮುಂದಿನ ಸಕಲ ಪ್ರಜಾವರ್ಗಕ್ಕೂ ನನಗೂ ಮಂಗಳವಾಗಲೆಂದು ಪ್ರಾರ್ಥಿಸಿಕೊಳ್ಳುವೆನು. ॥೧೦೬॥

ವೇದಾಂತವೇದ್ಯೈಃ ಪರಿತೋ ಘೋಷಯಿತ್ವಾ
ಶಕ್ತ್ಯಾಕಾರಾ ಪ್ರತಿಜಾನೇ ಮಹೇಶಿ ।
ಸರ್ವತ್ರೈವಂ ರಮಸೇಸ್ಮಿನ್ ಪ್ರಪಂಚೇ
ಪೂರ್ಣಾಪಶ್ಚಾದುತ ಪೂರ್ಣಾ ಪುರಸ್ತಾತ್ ॥೧೦೭

ನಮಾಮಿ ಶಂಭುಂ ನತಕಲ್ಪಪಾದಪಂ
ರಮಾಪತಿಸ್ತುತ್ಯಪದಾಂಬುಜದ್ವಯಂ ।
ಕುಮಾರವಿಘ್ನೇಶ ಕುತೂಹಲಾಸ್ಪದಂ ।
ಉಮಾಸಹಾಯಂ ಪರಮೇಶ್ವರಂ ಪ್ರಭುಂ ॥೧೦೮॥

ವರ್ಣಾರ್ಥನಿಯಮಾದಸ್ಯ ಹರ್ಷಾತ್ಪ್ರಜಪತೋ ಭವೇತ್ ।
ವೇಧೋಂಗನಾಂ ಪ್ರಯಚ್ಛತಿ ಮೇಧಾಂ ದೇವೀ ಸರಸ್ವತೀ ॥೧೦೯॥

ಘೋರವೃಶ್ಚಿಕದುಃಸ್ವಪ್ನದೋಷಸರ್ಪಾದಿ ಶಾಂತಯೇ ।
ಗೋತ್ರಾತ್ಮಜಾಸ್ತುತಿಂ ಪುಣ್ಯಾಂ ರಾತ್ರೌ ರಾತ್ರೌ ಸದಾ ಪಠೇತ್ ॥೧೧೦॥

---

ಮಹೇಶ್ವರಿಯೇ, ನೀನು ಆದಿಶಕ್ತಿಸ್ವರೂಪಳು ಎಂಬುದನ್ನು ವೇದವೇದಾಂತ ವಚನಗಳಿಂದ ಪ್ರತಿಜ್ಞಾಪೂರ್ವಕನಾಗಿ ತಿಳಿದಿರುವೆನು. ಅದೇರೀತಿ ನೀನು ವಾಸ್ತವವಾಗಿಯೂ ಈ ಪ್ರಪಂಚದಲ್ಲಿ ಎಲ್ಲೆಲ್ಲೂ ಪ್ರತಿಫಲಿಸುತ್ತಿರುವೆ. ಹಿಂದೆಯೂ, ಮುಂದಿನಕಾಲದಲ್ಲಿಯೂ ಯಾವಾಗಲೂ ನೀನು ಪೂರ್ಣಶಕ್ತಿಸ್ವರೂಪಳೇ ಹೊರತು ಎಂದಿಗೂ ನಿನ್ನ ಶಕ್ತಿಯಲ್ಲಿ ವೃದ್ಧಿಹ್ರಾಸಗಳು ಕಂಡುಬರಲಾರವು. ॥೧೦೭॥

ಭಕ್ತರಿಗೆ ಕಲ್ಪವೃಕ್ಷದಂತೆ ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುತ್ತಾ, ವಿಷ್ಣು ಬ್ರಹ್ಮ ಇವರೇ ಮೊದಲಾದವರಿಂದ ಪೂಜಿತನಾಗಿ, ಕುಮಾರಸ್ವಾಮಿ, ವಿಘ್ನೇಶ್ವರ ಇವರಿಗೆ ಆನಂದದಾಯಕನಾಗಿರುವ ಪಾರ್ವತಿಯೂ ಜಗತ್ಪ್ರಭುವೂ ಆದ ಮಹೇಶ್ವರನನ್ನು ನಾನು ಸದಾ ವಂದಿಸುವೆನು. ॥೧೦೮॥

ವರ್ಣಾಶ್ರಮಧರ್ಮಪರಿಪಾಲನೆ ಮಾಡಿದವನಿಗಿಂತಲೂ ಹೆಚ್ಚಿನ ಭೋಗಭಾಗ್ಯಾದಿಗಳು ಈ ಅಂಬಾಸ್ತುತಿಯನ್ನು ಜಪಿಸುವುದರಿಂದ ಒದಗುತ್ತವೆ. ಮತ್ತು ಅವನಿಗೆ ದೇವಲೋಕದ ಅಪ್ಸರಸ್ತ್ರೀಯರೂ ದೊರಕುವರು. ಸಂಪೂರ್ಣ ಮೇಧಾಶಕ್ತಿಯನ್ನೂ ಸರಸ್ವತಿಯು ಕರುಣಿಸುವಳು. ॥೧೦೯-೧೧೦॥

ಸ್ತುತ್ವಾ ಪೂಜಯತಾಂ ಭಕ್ತ್ಯಾ ಮರ್ತ್ಯಾ ಶ್ರೇಯಃ ಪರಂಪರಾಂ ।
ಶರ್ವಾಣೀ ಸಾ ದದಾತ್ಯಂಬಾ ಸರ್ವಮಾಯುರುಪಾಸತಾಂ ॥೧೧೧॥

ಸಹಸ್ರಕೃತ್ವಃ ಪುತ್ರಾರ್ಥೀ ಸ ಘಸ್ರೇ ಪ್ರಜಪೇತ್ಸದಾ ।
ವಶಗಸ್ತಸ್ಯ ತನಯೋ ದಶಮೋ ಮಾಸಿ ಜಾಯತೇ ॥೧೧೨॥

ಶಾಂತ್ಯಾ ಮುಮುಕ್ಷಯಾಥರ್ವಯಜುಃಋಕ್ಸಾಮಶಾಲಿನಾಂ ।
ಸಾಹಿ ಮುಕ್ತಿಂ ಶಿವೇ ದೇಹಿ ಸಾ ಹಿ ಶ್ರೀ ರಮ್ಯತಾಂ ಸತಾಂ ॥೧೧೩॥

ವಿಶ್ರುತಂ ಪ್ರತಿಪದ್ಯೈಃ ಕಮನೀಯಂ
ಭವ್ಯಸ್ತವ್ಯಮಿದಂ ಭಗವತ್ಯಾಃ ।
ದಿವ್ಯಚಿತ್ರಪದಮೇವ ನ ವ್ಯಯ
ಸ್ತಸ್ಯ ನಾಯುಷಿ ಭವೇತ್ಪಠ ಸತ್ಯಂ ॥೧೧೪॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀ ಸಂವಾದೇ
ಷಡಾನನಕೃತ ದೇವೀ ವೇದಪಾದಸ್ತವೋ ನಾಮ
ಪಂಚವಿಂಶೋಽಧ್ಯಾಯಃ

---

ನಿನ್ನನ್ನು ಈ ರೀತಿ ಸ್ತುತಿಸಿ ಯಾವ ಮಾನವರು ಭಕ್ತಿಯಿಂದಾರಾಧಿಸುವರೋ, ಅಂತಹವರಿಗೆ ಪಾರ್ವತಿಯು ಆಯುಸ್ಸು ಮುಂತಾದ ಐಹಿಕಸುಖಗಳನ್ನಿತ್ತು, ಕೊನೆಗೆ ಶಿವಸಾನ್ನಿಧ್ಯವನ್ನು ಕರುಣಿಸುವೆ. ಈ ಸ್ತೋತ್ರವನ್ನು ಸಾವಿರ ಸಾರಿ ಜಪಿಸುವವರಿಗೆ ಪುತ್ರಸಂತಾನವು ಲಭಿಸುವುದು. ಪ್ರತಿದಿನವೂ ಜಪಿಸುವವರಿಗೆ ಅವರ ಮಕ್ಕಳು ಸರ್ವದಾ ವಿಧೇಯರಾಗಿ ಅವರ ಹಿತವನ್ನೇ ಕೋರುತ್ತಿರುವಂತಾಗುವರು. ॥೧೧೧-೧೧೨॥

ತಮ್ಮ ಜೀವನದಲ್ಲಿ ಸ್ಥಿರಶಾಂತಿಯನ್ನೂ ಪಡೆಯಲೋಸುಗ ಋಕ್, ಯಜುಸ್ಸು, ಸಾಮ, ಅಥರ್ವ ಮುಂತಾದ ಚತುರ್ವೇದಗಳನ್ನೂ ವೇದಾಂತಗಳನ್ನೂ ಪಠಿಸಿ, ಹಾಗೂ ಅವನ್ನು ಕಾಣದೆ ಪರಿತಪಿಸುತ್ತಿರುವರು, ದೇವಿಯೇ, ಈ ನಿನ್ನ ದಿವ್ಯಸ್ತೋತ್ರಪಠನದಿಂದ ಚಿರಶಾಂತಿಯನ್ನೂ ಶಾಶ್ವತವಾದ ಮುಕ್ತಿಯನ್ನೂ ಪಡೆಯುವರು. ಹೀಗೆ ಅರ್ಥಗರ್ಭಿತವಾಗಿ ಭಗವತಿಯ ದಿವ್ಯಸ್ತೋತ್ರವನ್ನು ಯಾರು ನಿತ್ಯವೂ ತಪ್ಪದೆ ಪಠಿಸುತ್ತಿರುವರೋ ಅವರಿಗೆ ಎಂದಿಗೂ ಆಯುಸ್ಸಿನಲ್ಲಿ ಕ್ಷೀಣತೆ

ಯೊಡೆಗಲಾರದು. ಅದನ್ನು ನಿಜವೆಂದೇ ಎಲ್ಲರೂ ನಂಬಲಿ. ಇದು ಸತ್ಯವಾದದ್ದು. ಎಂದು ವೇದಪಾದಸ್ತವವೆಂಬ ಮಹಾದೇವಿಯ ಸ್ತೋತ್ರಮಾಲೆಯನ್ನು ಕುಮಾರ ಸ್ವಾಮಿಯು ಜೈಗೀಷವ್ಯಾದಿಗಳಿಗೆ ವಿವರಿಸಿದನು. ||೧೧೩-೧೧೪||

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ಇಪ್ಪತ್ತ್ಮೂರನೆಯ

ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಷಡ್ವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಸ್ತೌಮಿ ದೇವಂ ಸದಾ ಭಕ್ತ್ಯಾ ಸಾಂಬಂ ರುದ್ರಾರ್ಥಪದ್ಯಕೈಃ ।
ಕೃತಾಂಜಲಿರಹಂ ವಂದೇ ಭಕ್ತ್ಯಾ ಯುಕ್ತಸ್ತಥಾ ದ್ವಿಜ ॥೧॥

ತಂ ಮತ್ತಃ ಸಂಸ್ತವಂ ಪುಣ್ಯಂ ಶೃಣು ಸರ್ವಾರ್ಥದಾಯಕಂ ।
ಸಹೈಭಿಃ ಶ್ರೂಯತಾಂ ವಿಪ್ರ ಜೈಗೀಷವ್ಯ ಮಹಾಮತೇ ॥೨॥

ಯೇನ ಸ್ತವೇನ ಸ್ತುವತಾಂ ದೇವೋ ಮುಕ್ತಿಂ ಪ್ರಯಚ್ಛತಿ ।
ರುದ್ರಮಂತ್ರಾರ್ಥಬೋಧಾಢ್ಯಂ ಭಕ್ತಿದಾರ್ಢ್ಯಪ್ರವರ್ಧನಂ ॥೩॥

---

## ಇಪ್ಪತ್ತಾರನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳನ್ನು ಕುರಿತು “ಈಗ ನಾನು ರುದ್ರಾಧ್ಯಾಯದ ಅರ್ಥವು ಸ್ಪಷ್ಟಪಡುವಂತಹ ಶ್ಲೋಕಗಳಿಂದ ಪರಮೇಶ್ವರನನ್ನು ಪ್ರಾರ್ಥಿಸುವೆನು. ಅಂಜಲಿಬದ್ಧರಾಗಿ ಭಕ್ತಿಯಿಂದ ಈಗ ನಾನು ಹೇಳಲಿರುವ ರುದ್ರಾರ್ಥಪ್ರತಿಪಾದಕವಾದ ಶಿವಸ್ತುತಿಯನ್ನು ನೀವೆಲ್ಲರೂ ಭಕ್ತಿಯಿಂದ ಕೇಳಿರಿ. ಅದು ನಿಮ್ಮ ಇಷ್ಟಾರ್ಥಗಳನ್ನು ಸಲ್ಲಿಸಬಲ್ಲುದು. ॥೧-೨॥

ಯಾವ ಸ್ತೋತ್ರದ ಶ್ರವಣದಿಂದ ಮುಕ್ತಿಯನ್ನು ಪರಶಿವನು ದಯಪಾಲಿಸುವನೋ, ಅಂತಹ ರುದ್ರಮಂತ್ರಾರ್ಥಬೋಧಕವೂ, ಶಿವಭಕ್ತಿಪ್ರದವೂ ಆದ ಈ ಶಿವಸ್ತುತಿಯನ್ನು ನೀವು ಭಕ್ತಿಯಿಂದ ಕೇಳಿರಿ” ಎಂದು ನುಡಿಯುತ್ತಾ ಕುಮಾರ

ಪೂರ್ಣಾನಂದ ಚಿದಾತ್ಮಕೋಽಪ್ಯಪಹೃತಃ ಸ್ವಾವಿದ್ಯಯಾ ಹೃದ್ಯಯಾ
ತಲ್ಲೀಲಾದಿವಿಲಾಸಮೋಹಿತಮನಾ ವಿಸ್ಮೃತ್ಯ ರೂಪಂ ನಿಜಂ ।
ಜೀವತ್ವಂ ಸಮುಪೇತ್ಯ ನಿತ್ಯಮನಪಾಯಿನ್ಯಾ ತಯಾ ಪ್ರೇರಿತೋ
ಯಃ ಶಶ್ವನ್ನೃವಪಶ್ವವಜ್ಜ ಗಜವದ್ಗೋವಜ್ಜ ನಾನಾವಿಧಾನ್ ॥೪॥

ವೇಷಾನಾಕಲಯನ್ ವಿಧಾಯ ಬಹುಧಾ ಕರ್ಮಾಣಿ ತತ್ಸಾಧನಾ
ನ್ಯತ್ಯಂತೋಽನ್ನತನೀಚಮಾರ್ಗಗಮನಃ ಶ್ರಾಂತಃ ಪುರೇಷ್ವಾವಸನ್ ।
ಕಾಮಿನ್ಯಾ ಕಮನೀಯಯಾತಿಕಮನಃ ಸ್ವಾವಿದ್ಯಯಾಸಂಸ್ಮರನ್
ಪುಣ್ಯಾಪುಣ್ಯವಶಾಚ್ಚಿರೇಣ ಪರಮಾಂ ವಿದ್ಯಾಂ ಪ್ರಿಯಾಮಾಪ ಚ ॥೫॥

---

ಸ್ವಾಮಿಯು ರುದ್ರಾಧ್ಯಾಯದ ಅರ್ಥವಿವರಣೆಯುಳ್ಳ ಪದ್ಯಗಳನ್ನು ಈರೀತಿ ಪಠಿಸಿದನು. ॥೩॥

ಸಚ್ಚಿದಾನಂದರೂಪವಾದ ಪರಬ್ರಹ್ಮವಸ್ತುವು ಸ್ವಯಂ ನಿರ್ಗುಣವಾದರೂ, ಮಾಯಾವಿಶಿಷ್ಟವಾಗಿ, ಮಾಯಾಗುಣವಾದ ವಿಲಾಸ, ಮೋಹಾದಿಗಳನ್ನು ಪಡೆದು, ಕೊನೆಗೆ ತನ್ನ ನೈಸರ್ಗಿಕವಾದ ಸ್ವರೂಪವನ್ನು ಮರೆತು, ಜೀವನೆಂದೆನಿಸಿಕೊಳ್ಳುವುದು. ಅಲ್ಲಿ ಜೀವನಿಗೆ ಮಮತಾಬುದ್ಧಿಯುಂಟಾಗಿ ಮನುಷ್ಯ, ಆನೆ, ಕುದುರೆ, ಹಸು ಮುಂತಾದ ಪ್ರಾಣಿಗಳ ಆಕಾರವನ್ನು ಪಡೆದು ನಾನಾ ಆಕಾರದಲ್ಲಿ ಬೆಳೆದು ಪ್ರಪಂಚರೂಪದಿಂದ ಹರಡುವುದು. ಇಂತಹ ಜಗದಾತ್ಮನಾ ಪರಿಣತವಾಗುವ ಪರಬ್ರಹ್ಮವಸ್ತುವಿಗೆ ನಮಸ್ಕಾರ. ॥೪॥

ಜೀವಿಯು ತನ್ನ ಜೀವನಕ್ಕಾಗಿ ನಾನಾವಿಧವಾದ ವೇಷಗಳನ್ನು ತಾಳುವನು. ಫಲಾಪೇಕ್ಷೆಯಿಂದ ನಾನಾವಿಧವಾದ ಕರ್ಮಗಳನ್ನೂ ಮಾಡಿ ತತ್ಸಾಧಕವಾದ ವಸ್ತು ಸಂಗ್ರಹಣಕಾರ್ಯದಲ್ಲಿಯೂ ತೊಡಗುವನು. ನೀಚಮಾರ್ಗವೆನ್ನುವುದನ್ನೂ ಲಕ್ಷಿಸದೆ ಧನಾರ್ಜನೆಗಾಗಿ ಅದರಲ್ಲಿ ಪ್ರವೇಶಿಸಿ ಬಹಳವಾಗಿ ಬಳಲುವನು. ಪುಣ್ಯಾಶ್ರಮಾದಿಗಳನ್ನು ಬಿಟ್ಟು ಪಟ್ಟಣಗಳಲ್ಲಿ ನೆಲಸುವನು. ಕಾಮಾತುರನಾಗಿ ಕಾಮಿನಿಯರ ಹಿಂದೆ ಮುಂದೆ ಓಡಾಡುವನು. ಮಾಯಾವಶನಾಗಿ ಕಾಮಕ್ರೋಧಾದಿಗಳಿಂದ ಪಾಪಾರ್ಜನೆಮಾಡಿ, ಅದಕ್ಕೆ ತಕ್ಕಂತೆ ಕುತ್ಸಿತವಾದ ಯೋನಿಗಳಲ್ಲಿ ಜನ್ಮತಾಳಿ. ಹಾಗೆ ಜನನಮರಣಗಳ ಚಕ್ರಕ್ಕೆ ಸಿಕ್ಕಿ ಪುಣ್ಯಾಪುಣ್ಯಗಳನ್ನು ಕೂಡಿಹಾಕಿಕೊಳ್ಳುತ್ತಾ ಸಂಸಾರದಲ್ಲಿ ತೊಳಲುತ್ತಿರುವನು. ವಿಶೇಷಪುಣ್ಯದಿಂದ ಮಾತ್ರ ಕೆಲವರು ಜ್ಞಾನಿಗಳಾಗುವರು. ॥೫॥

ಶ್ರೀರುದ್ರಾಯ ನಮಸ್ಸಮಸ್ತಜಗದುತ್ಪತ್ತಿ ಸ್ಥಿತಿಧ್ವಂಸಿತ
ಕ್ರೀಡೇಚ್ಛಾ ಸಮುಪಾತ್ತ ದಿವ್ಯವಪುಷೇ ಧಾತುರ್ವಿಧಾತುರ್ಹರೇಃ ।
ರಕ್ಷಿತ್ರೇ ನಿತರಾಂ ಹರಸ್ಯ ಚ ಪರಾ ಹಂತಾ ಕೃತೇ ಸ್ವಾತ್ಮನೋ
ಭರ್ತ್ರೇ ಭಕ್ತಜನಸ್ಯ ವಾಂಛಿತಸಮುಸ್ತಾಭೀಷ್ಟದಾತ್ರೇ ಸದಾ ॥೬॥

ಏಕಸ್ಸನ್ನಪಿ ಕಾರ್ಯಕಾರಣಚಿದಾಕಾರೈಸ್ತ್ರಿಭಿರ್ಯೋಽಷ್ಟಧಾ
ತ್ರೇಧಾ ಕೇವಲಮೇಕಧಾ ಚ ನಿಖಿಲಂ ವಿಶ್ವಂ ಚರಂಚಾಚರಂ ।
ಸ್ವಾಂತಃ ಸ್ವೇನ ಬಿಭರ್ತಿ ತಸ್ಯ ಕುರುತೇ ಜನ್ಮಾದಿ ಸದ್ಭಾಸಯ
ತ್ಯಂತರ್ವ್ಯಾಪ್ಯ ಬಹಿಶ್ಚ ದೇವ ಭವತೇ ಸಾಂಬಾಯ ತುಭ್ಯಂ ನಮಃ ॥೭॥

ದುರ್ವಿಜ್ಞೇಯತರಶ್ಚತುರ್ಮುಖಮುಖಾನಾಮಪ್ಯನೇಕಾಕೃತಿಃ
ಸರ್ವೇಶಃ ಸ್ವಯಮೇವಮಾದಿಚರಿತೈರ್ಯಸ್ಸರ್ವತಸ್ಸರ್ವದಾ ।

---

ಇಂತಹ ಚರಾಚರಾತ್ಮಕವಾದ ಜಗತ್ತಿನ ಉತ್ಪತ್ತಿಗೂ, ರಕ್ಷಣೆಗೂ ನಾಶಕ್ಕೂ ಮೂಲಕಾರಣನಾಗಿ ಅದನ್ನು ತನ್ನ ಲೀಲೆಯಂತೆ ಮಾಡಿಕೊಂಡಿರುವ ದೇವದೇವನೆಂದರೆ ಪರಶಿವನು. ಚತುರ್ಮುಖಬ್ರಹ್ಮನಿಗೂ, ವಿಷ್ಣುವಿಗೂ ರಕ್ಷಕನೆನಿಸಿ, ದೇವದೇವನೆನಿಸಿದವನೂ ಪರಶಿವನೇ. ಭಕ್ತಜನರ ಸಮಸ್ತ ಇಷ್ಟಾರ್ಥಗಳನ್ನು ಸಲ್ಲಿಸಿ ಅವರನ್ನು ಕಾಪಾಡುವ ಅಂತಹ ಮಹಾದೇವನಿಗೆ ವಂದನೆಗಳು. ॥೬॥

ಪರಬ್ರಹ್ಮವಸ್ತುವು ಒಂದೇ ಆದರೂ ಕಾರ್ಯಭೇದದಿಂದ ಕಾರಣಭೇದದಿಂದ ನಾನಾರೀತಿಯಾಗಿ ಕಂಡುಬರುವುದು. ಅದೇ ಅಷ್ಟಮೂರ್ತ್ಯಾತ್ಮಕವಾಗಿಯೂ, ತ್ರಿಮೂರ್ತ್ಯಾತ್ಮಕವಾಗಿಯೂ ತೋರಿಬರುವುದು. ವಾಸ್ತವಿಕವಾಗಿ ಬ್ರಹ್ಮವಸ್ತುವು ಒಂದೇ ಆದರೂ ಚರಾಚರಾತ್ಮಕರೂಪದಿಂದ ಅಸಂಖ್ಯಾತವಸ್ತುವಾಗಿ ಪರಿಗಣಿತವಾಗಿರುವುದು. ಸಮಸ್ತವಸ್ತುಗಳನ್ನೂ ತನ್ನ ಹೃದಯಾಂತರಾಳದಲ್ಲಿ ಅಡಗಿಸಿಕೊಂಡು ಆ ವಸ್ತುಗಳ ಅಂತರ್ಬಹಿರ್ಭಾಗಗಳಲ್ಲಿ ತಾನೇತಾನಾಗಿ ವ್ಯಾಪ್ತವಾಗಿರುವುದು. ಹೀಗೆ ಪ್ರಾಪಂಚಿಕವಾಗಿ ತಾನೇ ಆ ಉತ್ಪತ್ತಿವಿನಾಶಾದಿಗಳನ್ನು ಕಲ್ಪಿಸಿಕೊಳ್ಳುತ್ತಾ ಸರ್ವವ್ಯಾಪಿಯಾಗಿರುವ ಅಂಬಾಸಹಿತನಾದ ಪರಶಿವನಿಗೆ ನಮಸ್ಕಾರವು. ॥೭॥

ಯಾರಿಗೂ ಯಾರಿಂದಲೂ ತಿಳಿಯಲಸಾಧ್ಯನಾಗಿರುವ ಮಹೇಶ್ವರನು ಚತುರ್ಮುಖನೇ ಮೊದಲಾದ ಅನೇಕ ದೇವತೆಗಳ ಆಕಾರವನ್ನು ಪಡೆದು ಸರ್ವತ್ರ ನೆಲಸಿ ಸರ್ವವ್ಯಾಪಿಯೆನಿಸಿರುವನು. ಸಮಸ್ತಲೋಕಗಳನ್ನೂ ಅವನೇ ರಕ್ಷಿಸುವನು.

ಸರ್ವಂ ವಿಶ್ವಮವಂ ಭಿವಃ ಸ್ಫುಟತರಯಾ ಸರ್ವಾತ್ಮನಾ ದೃಶ್ಯತೇ
ವ್ಯಕ್ತಾವ್ಯಕ್ತತರಾಯ ತೇ ಭವ ನಮಸ್ತಸ್ಮೈ ಚ ವಿಶ್ವಾತ್ಮನೇ ॥೮॥

ಉಗ್ರಂ ತ್ವಾಂ ನಮಸಾ ಪ್ರಸಾದ್ಯ ಜಗತಾಂ ತೇ ನಿಗ್ರಹಾನುಗ್ರಹ
ವ್ಯಗ್ರಸ್ಯೋಗ್ರತಮಾಸ್ತಥಾ ಶಿವತಮಾ ಘೋರಾ ಅಘೋರಾಸ್ತನೂಃ ।
ದೇವ ಸ್ತೌಮಿ ನಮಸ್ಕರೋಮ್ಯಭಯಮಪ್ಯದ್ಯೈವ ಯಾಚೇ ವಿಭೋ
ತ್ವತ್ತಃ ಕಃ ಶರಣಾರ್ಥಿನಾಂ ಶರಣದಃ ಶ್ರೀರುದ್ರ ಶಂಭೋ ಪ್ರಭೋ ॥೯॥

ವಾಗಾದಿ ಸ್ವಯಮೇವ ಬೋಧಯತಿ ಯಃ ಸರ್ವಂ ಚ ವಾಗ್ರೂಪಯಾ
ರುತ್ಯಾ ಸಾಧುಜನಂ ಚ ವೇದಯತಿ ಯಃ ಶ್ರುತ್ವಾ ಚ ಧರ್ಮಾದಿಕಂ ।
ಭಕ್ತಾನಾಂ ಕಿಲ ಯೋಗಿನಾಂ ನಯತಿ ಯೋ ಮಂತ್ರೇಣ ತಾರಾತ್ಮನಾ
ಯೋಽಸೌ ದ್ರಾವಯತಿ ಸ್ವಯಂ ದ್ರವತಿ ವಾ ನಾದಾಂತ ಏವ ಪ್ರಭುಃ ॥೧೦॥

---

ಪ್ರಪಂಚದಲ್ಲಿ ಕಂಡುಬರುವ ವಸ್ತುಗಳೆಲ್ಲವೂ ಬ್ರಹ್ಮಸ್ವರೂಪವೇ ಆಗಿರುವುದು. ಸ್ವಯಂ ಅವ್ಯಕ್ತನಾಗಿದ್ದು ಹೀಗೆ ವ್ಯಕ್ತರೂಪದಿಂದ ತೋರುವ ವ್ಯಕ್ತಾವ್ಯಕ್ತರೂಪನಾದ ವಿಶ್ವೇಶ್ವರನೇ, ನಿನಗೆ ನಮಸ್ಕಾರ. ॥೮॥

ಮಹಾದೇವನೇ, ನಿನಗೆ ಅತ್ಯಂತ ಉಗ್ರವಾದ, ಹೆಚ್ಚು ಭಯಂಕರವಾದ ಹಾಗೆಯೇ ಅತ್ಯಂತ ಶಾಂತವಾದ, ವಿಶೇಷರೀತಿಯ ತಾಳ್ಮೆಯನ್ನು ತೋರುವ ಅನೇಕ ಶರೀರಗಳಿರುವುವು. ಅಂತಹ ದೇಹಗಳನ್ನು ಧರಿಸಿ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳನ್ನೂ, ನಿಗ್ರಹಾನುಗ್ರಹಗಳನ್ನೂ ನೆರವೇರಿಸುವ, ಇಂತಹ ನಿನ್ನ ದೇಹಗಳಿಗೆ ನಾನು ನಮಸ್ಕಾರಮಾಡುವೆನು. ಅದೂಅಲ್ಲದೆ ಶರಣಾಗತರನ್ನು ಕಾಪಾಡುವುದರಲ್ಲಿ ನಿನಗಿಂತ ಬೇರೆಯ ಮಹಾತ್ಮನಾರಿವನು? ಪರಮೇಶ್ವರನೇ, ರುದ್ರನೇ, ನನ್ನನ್ನು ಕಾಪಾಡು. ॥೯॥

ಸ್ವಯಂ ವಾಗ್ರೂಪನಾಗಿದ್ದರೂ ಮಹಾದೇವನು ತನ್ನ ಭಕ್ತರಿಗೆ ಮಾತಿನಿಂದ ಸಕಲ ವಿಷಯಗಳನ್ನೂ ಶ್ರುತಪಡಿಸುವನು. ಮತ್ತು ಶ್ರುತಿರೂಪನಾಗಿದ್ದು ಧರ್ಮಸ್ವರೂಪವನ್ನು ಧ್ವನಿರೂಪದಿಂದ ಸಾಧುಜನರಿಗೆ ತಿಳಿಯಪಡಿಸುವನು. ಮತ್ತು ತನ್ನನ್ನೇ ಆಶ್ರಯಿಸಿಕೊಂಡಿರುವ ಭಕ್ತರಿಗೂ, ಪರಮಯೋಗಿಗಳಿಗೂ ತಾರಕಮಂತ್ರೋಪದೇಶಮಾಡಿ ಅವರನ್ನು ಮುಕ್ತರನ್ನಾಗಿ ಮಾಡುವನು. ನಾದಬ್ರಹ್ಮ

ಕಲ್ಪಾಂತೇ ಭುವನಾನಿ ರೋದಯತಿ ಯಃ ಸರ್ವಾನ್ ರುಜಂ ತಸ್ಯ ತಾನ್।
ನಿತ್ಯಂ ದ್ರಾವಯತಿ ಸ್ವಯಂ ದ್ರವತಿ ನಾ ರೋರೂಯಮಾಣೋಮರಾನ್ ।
ಶಬ್ದಬ್ರಹ್ಮಮಯೀಂ ಕರೋತಿ ಚ ರುತಿಂ ಯಸ್ಸರ್ವವೇದಾಂತಿಕಾನ್ ।
ಧಾತ್ರೇ ಯಶ್ಚ ರುತಿಂ ದದಾತಿ ಭಗವನ್ ರುದ್ರಪ್ರಭೋ ತಸ್ಯ ತೇ ॥೧೧॥

ಮನ್ಯುಃ ಕ್ರೋಧ ಇತಿ ಪ್ರಪಂಚಹರಣೇ ಶಕ್ತಿಃ ಪ್ರಸಿದ್ಧಾಸ್ತಿ ಯಾ ।
ತಸ್ಯೈ ದೇವ ನಮೋಸ್ತು ತಾಂ ಪ್ರಶಮಯನ್ ತ್ರಾಯಸ್ವ ನಸ್ಸನ್ನತಾನ್ ।
ಸೋಮಶ್ಯಲ್ಯಮನೀಕ ಮಗ್ನಿರಭವದ್ವಿಷ್ಣುಃ ಸ್ವಯಂ ತೇಜನಂ ।
ಪರ್ಣಾನ್ಯಪ್ಯತಿರಾಸಯಸ್ಯನಿಗಮಾಖ್ಯಾತಸ್ಯ ತಸ್ಮೈ ನಮಃ ॥೧೨॥

---

ನಾಗಿದ್ದು ತಾನೂ ಆ ನಾದದಲ್ಲಿ ಲೀನನಾಗಿ ತನ್ನವರನ್ನೂ ಅದರಲ್ಲಿಯೇ ಅಡಗಿಸಿ ಬಿಡುವನು. ಇಂತಹ ಪರಮೇಶ್ವರನಿಗೆ ಅನಂತಾನಂತ ವಂದನೆಗಳು. ॥೧೦॥

ಕಲ್ಪಾಂತಕಾಲದಲ್ಲಿ ಜೀವರಾಶಿಗಳನ್ನೆಲ್ಲಾ ಗೋಳಾಡಿಸುವವನೂ ಪರಮೇಶ್ವರನೆ, ಜೀವಿಗಳ ಉಪದ್ರವಾದಿಗಳನ್ನು ಹೋಗಲಾಡಿಸುವವನೂ ಶಂಕರನೆ. ತಾನೂ ಧ್ವನಿಮಾಡಿ, ದೇವತೆಗಳೂ ಗೋಳಿಡುವಂತೆ ಏರ್ಪಡಿಸುವವನೂ ಮಹಾದೇವನೇ. ವೇದಾಂತಜ್ಞಾನನಿಷ್ಣಾತರಾದವರನ್ನು ಶಬ್ದಬ್ರಹ್ಮರನ್ನಾಗಿಮಾಡಿ ಅವರಿಗೆ ಒಂದು ಸದ್ಗತಿಯನ್ನು ತೋರಿಸುವವನೂ ಮಹೇಶ್ವರನೇ. ಬ್ರಹ್ಮನ ಶಿರಸ್ಸನ್ನು ಛೇದಿಸಿ ಅವನ ಗೋಳಾಟಕ್ಕೆ ಮೂಲಕಾರಣನಾದವನೂ ಪರಶಿವನೇ. ಇಂತಹ ಸರ್ವಕಾರ್ಯ ಕರ್ತನಾದ ಪ್ರಭುವೇ, ನಿನಗೆ ಅನಂತ ವಂದನೆಗಳು. ॥೧೧॥

ಪರಮೇಶ್ವರನೇ, ಪ್ರಪಂಚವನ್ನೇ ನಾಶಗೊಳಿಸುವುದರಲ್ಲಿ ನೀನು ಉಪಯೋಗಿಸುವ ಕೋಪವೆಂಬುದು ಅತ್ಯಂತ ಶಕ್ತಿಯುಳ್ಳದ್ದು. ಅಂತಹ ಶಕ್ತಿಯು ಮತ್ತಾರಲ್ಲಿಯೂ ತೋರಲಾರದು. ನಿನ್ನ ಕೋಪಕ್ಕೆ ಮೊದಲು ನಮಸ್ಕರಿಸುವೆನು. ಆದರೆ ನಿನ್ನ ಭಕ್ತರನ್ನು ಸಲಹುವ ಕಾರ್ಯದಲ್ಲಿ ಮಾತ್ರ ನೀನು ಆ ಕೋಪವನ್ನು ತೋರಿಸಬೇಡ. ಶಾಂತನಾಗಿ ನಮ್ಮನ್ನೆಲ್ಲಾ ರಕ್ಷಿಸು. ವೇದರಾಶಿಯಿಂದಲೂ ತಿಳಿಯಲು ಅಸಾಧ್ಯನಾದ ನಿನಗೆ ಚಂದ್ರ, ಅಗ್ನಿ, ವಿಷ್ಣು ಮುಂತಾದವರು ಸೇವಕರಾಗಿಯೂ ಸಹಾಯಕರಾಗಿಯೂ ನಿಲ್ಲುವರು. ಅಂಥ ಪರಮಪ್ರಭುವಾದ ನಿನಗೆ ನಮಸ್ಕಾರಗಳು. ॥೧೨॥

ತೇ ದೇವಸ್ಯ ವಹೇಷವೇಪಿ ಚ ಫಣೀಂದ್ರಜ್ಯಾಸುಮೇರ್ವಾತ್ಮಕಂ
ಯದ್ಧನ್ವಪ್ರಣವಾತ್ಮಕಂ ತ್ರಿಪದಯಾ ಸಜ್ಯಂ ಯದನ್ಯದ್ಧನುಃ ।
ತಸ್ಮೈ ಚಾಸ್ತು ನಮಸ್ತವಾಪಿ ಚ ಧನುರ್ಬಾಣೋದ್ಯತಾಭ್ಯಾಂ ನಮೋ
ಬಾಹುಭ್ಯಾಮಥವಾಖಿಲೇಭ್ಯ ಇಹ ತೇ ಬಾಹುಭ್ಯ ಏತನ್ನಮಃ ॥೧೩॥

ಇತಿ ಪ್ರಥಮಾ ಋಕ್

ಭಕ್ತಾನಾಂ ಸುಗಮಂ ಮಹಾಘಹರಣಂ ಲೋಕಾಧಿಪತ್ಯಪ್ರದಂ
ರಾಜ್ಞಾಂ ಚಾನಮತಾಂ ಪ್ರಸಾದಸುಮುಖಂ ಶ್ರೀ ಕಶ್ಯಪಾರಾಧಿತಂ ।
ಯೋದ್ಧಾಕಾರಮುಮಾಸಹಾಯಮಚಿರಾದಾಕರ್ಣಕೃಷ್ಟೇಶರಂ
ಚಾಪೇ ಭಾಸ್ವತಿ ಸಂದಧಾನಮನಿಶಂ ರುದ್ರಂ ಯುವಾನಂ ಭಜೇ ॥೧೪॥

---

ಪರಮೇಶ್ವರನೇ, ನಿನ್ನ ಬಲಿಷ್ಠವಾದ ಬಾಣಗಳಿಗೆ ವಂದಿಸುವೆನು. ಆ ನಿನ್ನ ಧನುಸ್ಸಾದರೋ ಮೇರುಪರ್ವತವೇ. ಅದಕ್ಕೆ ಫಣೀಂದ್ರನೇ ಮೌರ್ವಿಯಾಗಿ ಕಟ್ಟಲ್ಪಟ್ಟಿರುವನು. ತ್ರಿಪದಾತ್ಮಕವಾದ ಪ್ರಣವವೂ ನಿನ್ನ ಒಂದು ಧನುಸ್ಸೇ. ಅದು ಯಾವಾಗಲೂ ಹೊಡೆಯಲು ಸಿದ್ಧವಾಗಿ ನಿನ್ನಧೀನದಲ್ಲಿರುವುದು. ಅಂತಹ ಧನುಸ್ಸಿಗೂ ನಮಸ್ಕಾರ. ಈ ವಿಧವಾದ ಧನುರ್ಬಾಣಗಳನ್ನು ಧರಿಸಿರುವ ನಿನ್ನ ಬಲಿಷ್ಠವಾದ ತೋಳುಗಳಿಗೂ ವಂದನೆ. ಸಹಸ್ರಬಾಹುವಾಗಿರುವ ನಿನಗೂ ಇದೇ ರೀತಿಯಾದ ಭಕ್ತಿಪೂರ್ವಕ ನಮಸ್ಕಾರಗಳನ್ನು ಸಮರ್ಪಿಸುವೆನು. ॥೧೩॥

ಇಲ್ಲಿಗೆ ರುದ್ರಾಧ್ಯಾಯದ ಮೊದಲನೆಯ ಋಕ್ಕಿನ ಅರ್ಥವಿವರಣೆ ಮುಗಿದುದು.

ಭಕ್ತರ ಸಕಲ ಪಾಪರಾಶಿಯನ್ನೂ ನಿವಾರಿಸುವವನೂ, ಅವರಿಗೆ ತ್ರಿಲೋಕಾಧಿಪತ್ಯವನ್ನು ಕೊಡುವವನೂ ಆದ ಮಹಾದೇವನು ರಾಜಾಧಿರಾಜರಿಂದಲೂ, ಕಶ್ಯಪಾದಿ ಮಹರ್ಷಿಗಳಿಂದಲೂ ಸದಾ ಪೂಜಿತನಾಗಿರುವನು. ಮತ್ತು ಅವರಿಗೆ ಪ್ರಸನ್ನನಾಗಿ ಸಕಲ ಇಷ್ಟಾರ್ಥಗಳನ್ನೂ ಕರುಣಿಸುತ್ತಿರುವನು. ಮತ್ತು ಮಹಾದೇವನು ಪಾರ್ವತೀಸಹಿತನಾಗಿದ್ದು, ಧನುರ್ಬಾಣಗಳನ್ನು ಧರಿಸಿ, ಬಾಣವನ್ನು ಧನುಸ್ಸಿನಲ್ಲಿ ಹೂಡಿ ಪ್ರಾಯಸಮರ್ಥನಾದ ಯುದ್ಧವೀರನಂತೆ ಮೌರ್ವಿಯನ್ನು ಕಿವಿಯವರೆಗೂ ಎಳೆದು ನಿಲ್ಲುವನು. ಇಂತಹ ಪರಮೇಶ್ವರನನ್ನು ನಾನು ಸದಾ ಧ್ಯಾನಿಸುವೆನು. ॥೧೪॥

**ಯಾತ ಇಷುಶ್ಶಿವತನೋತಿ**

ಭಕ್ತಾನಾಂ ಸುಖದಾಯಿನೀ ಭವತಿ ಯಾ ಖ್ಯಾತಾ ತವೇಷುಸ್ತಯಾ
ಯಚ್ಚಾತೀವ ಶಿವಂ ಕರಂ ತವ ಧನುಸ್ತೇನಾಪಿ ಯಾ ಕ್ಷೇಮದಾ ।
(?) ಚಕ್ರಾದ್ಯಾಯುಧ ಸಂತಿ ಯ ಸ್ತವ ಸದಾ ದಿವ್ಯೇಷುಧಿರ್ವಾತಯಾ
ಚಾಸ್ಮಾನ್ ದೇವ ದಯಾವಶೇನ ಸುಖಯ ಶ್ರೀರುದ್ರಶಂಭೋ ಪ್ರಭೋ ॥೧೫॥

ಆತ್ರೇಯಾರ್ಚಿತಮುನ್ನದಂ ಪ್ರಣಮತಾಂ ದುರ್ಭಿಕ್ಷದೋಷಾಪಹಂ
ಶಂಭುಂ ಸ್ಯಂದನಮಧ್ಯಸಂಸ್ಥಮುಮಯಾ ಸಾರ್ಧಂ ಜ್ವಲಂತಂ ಶ್ರಿಯಾ।
ಶೂರಾಕಾರಮತೀವ ಸಸ್ಮಿತಮುಖಂ ಸಂಸ್ತೂಯಮಾನಂ ಸುರೈ
ರಿಷ್ವಾಸೇಷುಕರಂ ಪ್ರಸನ್ನಹೃದಯಂ ಭಕ್ತೇಷ್ಟದಂ ಭಾವಯೇ ॥೧೬॥

**ಯಾತೇ ರುದ್ರ ಶಿವಾ ತನೂಃ**

ಯೋಸೌ ಶಂತನುತೇ ದಯಾಮಯತನುಃ ಪಾಣಿಭ್ಯ ಏವಂ ಗಿರೌ
ಕೈಲಾಸೇ ಗಿರಿಶಾತ್ಮನಾ ಜಲಧರೇ ಪರ್ಜನ್ಯರೂಪೇಣ ಚ ।

---

ಪರಶಿವನೇ, ನಿನ್ನ ಬಾಣವು ನಿನ್ನ ಭಕ್ತರಿಗೆ ಸುಖಪ್ರದವೆನಿಸುವುದು. ಹಾಗೆಂದೇ ಅದು ಪ್ರಸಿದ್ಧಿಯನ್ನು ಪಡೆದಿರುವುದು. ನಿನ್ನ ಧನುಸ್ಸು ಕೂಡ ಮಂಗಳ ಪ್ರದವಾಗಿ ಸರ್ವರಿಗೂ ಕ್ಷೇಮವನ್ನು ನೀಡುವುದಾಗಿದೆ. ಇನ್ನು ಅನೇಕ ಆಯುಧ ಗಳನ್ನು ಅಡಗಿಸಿಕೊಂಡಿರುವ ಬತ್ತಳಿಕೆಯಾದರೋ ಅಕ್ಷಯ ಬಾಣಪ್ರದವಾಗಿ ದಿವ್ಯವೆನಿಸಿದೆ. ಇಂತಹ ನಿನ್ನ ಬಿಲ್ಲು, ಬಾಣ, ಬತ್ತಳಿಕೆಗಳಿಂದ ನಮ್ಮನ್ನು ಸುಖ ಪಡಿಸು. ಮಹಾದೇವನೇ, ನಮ್ಮನ್ನು ಕಾಪಾಡು. ॥೧೫॥

ಅತ್ರಿಋಷಿಯವಂಶದವರಿಂದ ಪೂಜಿತನಾದವನೂ, ತಲೆಬಗ್ಗಿ ನಮಸ್ಕರಿಸುವ ಭಕ್ತರಿಗೆ ದುರ್ಭಿಕ್ಷದೋಷವನ್ನು ನಿವಾರಿಸುವವನೂ, ಪಾರ್ವತೀಸಮೇತನಾಗಿ ಪ್ರಜ್ವಲಿಸುತ್ತಿರುವವನೂ, ಆದ ಶಂಕರನನ್ನು ಸದಾ ಧ್ಯಾನಿಸುವೆನು. ಶೂರನಂತೆ ಕಾಣುವವನೂ, ಮುಗುಳ್ನಗೆಯಿಂದ ಕೂಡಿರುವವನೂ, ದೇವತೆಗಳಿಂದ ಸ್ತುತ್ಯನೂ, ಧನುರ್ಬಾಣಗಳನ್ನು ಧರಿಸಿರುವವನೂ, ಪ್ರಸನ್ನ ಹೃದಯನೂ ಆದ ಮಹೇಶ್ವರನಿಗೆ ಸರ್ವದಾ ವಂದಿಸುವೆನು. ॥೧೬॥

ಪರಮೇಶ್ವರನು ದಯಾಮಯನಾಗಿ ಪಾಣಿಪಾದವಿಶಿಷ್ಟನಾಗಿ ಕೈಲಾಸದಲ್ಲಿ

ವೈಖರ್ಯಾಮಪಿ ವಾಚಿ ವಾಚ್ಯನಿಧಯಾ ಓಂಕಾರಮಪ್ಯಾಂಗಿರಿ
ಧ್ಯೇಯತ್ವೇನ ಚ ಸಂಸ್ಥಿತಃ ಸ್ವಯಮಖಂಡಾನಂದವಾರಾಂನಿಧಿಃ ॥೧೭॥

ಯಾ ಸಾ ಘೋರತಮಾ ಸಮಸ್ತಜಗತಾಂ ದುಃಖಾರ್ತಿವಿಧ್ವಂಸಿನೀ
ಯಾ ತೇ ರುದ್ರ ಶಿವಾ ತನೂರಿಹತಯಾ ಚಾನಂದಚಿದ್ರೂಪಯಾ ।
ಸ್ಮರ್ತೄಣಾಮಧಿಕಂ ಸದಾ ಸುಖತಯಾ ಯುಕ್ತಸ್ತ್ವಮಸ್ಮಾನ್ಮುಹುಃ
ಪಶ್ಯಾನುಗ್ರಹವೀಕ್ಷಣೈರಭಿಮುಖಂ ಶ್ರೀರುದ್ರಶಂಭೋ ಪ್ರಭೋ ॥೧೮॥

ಏಕಂ ಗೋಧನವರ್ಧನಂ ಪ್ರಣಮತಾಂ ಶ್ರೀ ಕಶ್ಯಪಾರಾಧಿತಂ
ಶಂಭುಂ ಸ್ಮೇರಮುಖಾಂಬುಜಂ ತ್ರಿನಯನಂ ಬಾಲೇಂದುಗಂಗಾಧರಂ ।
ಶ್ರೀಶೈಲೇಂದ್ರಸುತಾಸಹಾಯಮಮಲಂ ಭಸ್ಮೋರಗಾಲಂಕೃತಂ
ಸರ್ವೇಷಾಂ ಜಗತಾಮಧೀಶಮನಿಶಂ ಧ್ಯಾಯೇತ್ಪಶೂನಾಂಪತಿಂ ॥೧೯॥

---

ಪುರುಷರೂಪದಿಂದಿರುವನು. ಗಿರಿಯಲ್ಲಿ ಗಿರಿಶನಂತೆ ತೋರುವನು. ಮೇಘಮಂಡಲದಲ್ಲಿ ಮೋಡಗಳರೂಪದಿಂದ ವಿಹರಿಸುವನು. ಮಾತಿನಲ್ಲಿ ವೈಖರೀರೂಪದಿಂದಲೂ, ಶಬ್ದಸಮುದಾಯದಲ್ಲಿ ಓಂಕಾರರೂಪದಿಂದಲೂ ತೋರುತ್ತಿರುವನು. ಒಟ್ಟಿನಲ್ಲಿ ಎಲ್ಲರೀತಿಯಿಂದಲೂ ಧ್ಯಾನವಿಷಯನಾಗಿ ಧ್ಯೇಯವಸ್ತುವೆನಿಸಿಕೊಂಡು ಅಖಂಡವಾದ ಆನಂದಸಮುದ್ರನೆನಿಸಿ ಶೋಭಿಸುತ್ತಿರುವನು. ॥೧೭॥

ಮಹೇಶ್ವರನೇ, ನಿನ್ನ ಘೋರರೂಪವಾದ ಒಂದು ದೇಹವು ಸಮಸ್ತ ಜಗತ್ತಿಗೂ ಭಯಪ್ರದವಾಗಿರುವುದು. ಹಾಗಿದ್ದರೂ ಅದು ಭಕ್ತರ ಸಕಲದುಃಖರಾಶಿಯನ್ನು ನಿವಾರಿಸಬಲ್ಲುದು. ಮಂಗಳಕರವಾದ ಆ ರುದ್ರದೇಹವು ಆನಂದಮಯವಾದುದು. ಜ್ಞಾನಸ್ವರೂಪವಾದುದು. ಸದಾ ಅದನ್ನೇ ಧ್ಯಾನಮಾಡುವವರಿಗಂತೂ ವಿಶೇಷವಾದ ಸೌಖ್ಯವನ್ನೂ ಮುಕ್ತಿಯನ್ನೂ ಕರುಣಿಸಬಲ್ಲುದು. ಇಂತಹ ಭಕ್ತಾನುಗ್ರಹಪ್ರದವಾದ ಆ ದೇಹದಿಂದ, ಮಹಾದೇವನೇ ನಮ್ಮೆಲ್ಲರನ್ನೂ ರಕ್ಷಿಸು. ॥೧೮॥

ಜ್ಞಾನವರ್ಧಕನಾಗಿಯೂ, ಸಜಾತೀಯ ದ್ವಿತೀಯವಸ್ತುರಹಿತನಾಗಿಯೂ, ಮೂರುಕಣ್ಣುಗಳಿಂದಲೂ, ಬಾಲಚಂದ್ರನಿಂದಲೂ, ಅಲಂಕೃತನಾಗಿಯೂ ಇರುವ ಮಹೇಶ್ವರನು ಕಶ್ಯಪಮುನಿಯಿಂದ ಆರಾಧಿತನಾಗಿರುವನು. ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿದವನಾಗಿರುವನು. ಮುಖಕಮಲದಲ್ಲಿ ಮುಗುಳ್ನಗೆಯನ್ನು ಬೀರುತ್ತಾ, ಭಸ್ಮ,

## ಯಾಮಿಷುಂ ಗಿರಿಶಂತಹಸ್ತೇ

ದೇವಾನಾಂ ಶರಣಾರ್ಥಿನಾಂ ಪ್ರಣಮತಾಂ ಸಂಪ್ರಾರ್ಥನಾನಂತರಂ
ಹಂತವ್ಯಾಂಸ್ತ್ರಿಪುರಾಸುರಾನ್ ಪ್ರತಿ ಪುರೇ ಕ್ಷೇಪ್ಸ್ಯಾಂ ಗೃಹೀತಾಮಿಷುಂ ।
ಹಸ್ತೇ ಯಾಂ ಗಿರಿಶಂತ ಸಮ್ಯಗಪಿ ಯಾ ಹರ್ತುರ್ಜಂಬಿಭರ್ಷಿ ಸ್ವಯಂ
ಹಸ್ತೇನ ತ್ರಿಪುರಾಖ್ಯತೂಲದಹನಕ್ರೀಡಾಂ ವಿಹಾಯ ಕ್ಷಣಾತ್ ॥೨೦॥

ದೇವತ್ರಾಯಕನಿತ್ಯಮುಧ್ವರಗಿರಾಮುಭ್ಯಸ್ಯ ಚೈವಂ ಗಿರೇಃ
ಕೈಲಾಸಸ್ಯ ಚ ನಾಥತಾಂ ಕುರು ಭವದ್ಭಕ್ತಾನ್ ಪ್ರತಿಕ್ಷೇಮದಾಂ ।
ಹಂತವ್ಯಾಭಿಮುಖೇನ ಕಿಂ ಚ ಕೃಪಯಾ ತ್ರಾಯಸ್ವ ಪಾಪೈಶ್ಚ ಮಾಂ
ಮಾ ಹಿಂಸೀಃ ಪುರುಷಾಗ್ರಗಣ್ಯಮನಿಶಂ ತ್ವತ್ಪಾದಸಂಸೇವನಾತ್ ॥೨೧॥

ಸರ್ವಾಂ ಗೋಮಹಿಷಾಶ್ವಸಾ ಸ ಕುಲಮಪ್ಯೇವಂ ವಿಧೇಹ್ಯಾದರಾತ್ ।
ನೀರೋಗಂ ನಿರುಪದ್ರವಂ ಚ ಸತತಂ ಶ್ರೀ ರುದ್ರಸಾಂಬ ಪ್ರಭೋ ॥೨೨॥

---

ನಾಗಾಭರಣ ಇವುಗಳಿಂದ ವಿರಾಜಿಸುತ್ತಿರುವ ಸರ್ವಜಗತ್ಪತಿಯಾದ ಪಶುಪತಿಯನ್ನು ನಾವು ಸರ್ವದಾ ಧ್ಯಾನಿಸಬೇಕು. ॥೧೯॥

ದೇವತೆಗಳು ಭಕ್ತಿಪೂರ್ವಕವಾಗಿ ತ್ರಿಪುರಾಸುರರನ್ನು ನಾಶಮಾಡಬೇಕೆಂದು ಬೇಡಿಕೊಂಡಾಗ ಪರಮೇಶ್ವರನು ಕೂಡಲೇ ಕೈಯಲ್ಲಿ ಬಾಣವನ್ನೂ ಬತ್ತಳಿಕೆಯನ್ನೂ ಧರಿಸಿ, ಕ್ರೂರವಾದ ದೃಷ್ಟಿಯನ್ನು ಬೀರುತ್ತಾ ತ್ರಿಪುರವೆಂಬ ಹತ್ತಿಯರಾಶಿಯನ್ನು ಸುಟ್ಟು ಧ್ವಂಸಮಾಡಿದ ಮಹಾದೇವನು ನಮಗೆ ಸರ್ವದಾ ಸುಖಶಾಂತಿಯನ್ನು ಕರುಣಿಸಲಿ. ॥೨೦॥

ದೇವತೆಗಳನ್ನು ರಕ್ಷಿಸುವವನೇ, ನೀನು ಯಾಜ್ಞಿಕವಾದ ಸಕಲ ಮಂತ್ರಗಳಿಗೂ ಅಂತರಿಕ್ಷಗತವಾದ ಸಕಲ ಮಂಡಲಗಳಿಗೂ, ಉನ್ನತವಾದ ಕೈಲಾಸಗಿರಿಗೂ ನಾಥನೆನಿಸಿ ಶಾಶ್ವತಸ್ಥಿತಿಯಿಂದಿರು. ನಾಶಮಾಡುವ ಬುದ್ಧಿಯಿಂದ ಹಿಂಬಾಲಿಸಿಕೊಂಡಿರುವ ಪಾಪರಾಶಿಯನ್ನು ಧ್ವಂಸಮಾಡಿ, ನಿನ್ನ ಭಕ್ತರನ್ನು ಉದ್ಧರಿಸು. ಪುರುಷಶ್ರೇಷ್ಠನೆನಿಸಿ ನನ್ನನ್ನು ಕಾಪಾಡು. ಸದಾ ನಿನ್ನ ಪಾದಸೇವನೆಯಲ್ಲಿ ಮನಸ್ಸಿಡುವಂತೆ ಮಾಡು. ॥೨೧॥

ಶ್ರೀರುದ್ರನೇ, ಸಾಂಬನೇ, ನನ್ನ ಕುಲವು ಸರ್ವದಾ ರೋಗರಹಿತವಾಗಿಯೂ, ಉಪದ್ರವಾದಿಗಳಿಲ್ಲದೆಯೂ ಹಸು, ಎಮ್ಮೆ, ಕುದುರೆ ಮುಂತಾದ ಪಶುಸಂಪತ್ತಿನಿಂದ ಸುಖದಿಂದಿರುವಂತೆ ಅನುಗ್ರಹಿಸು. ಹೀಗೆ ಕರುಣಿಸಲು ನೀನೊಬ್ಬನೇ ಸಮರ್ಥನಲ್ಲವೆ? ॥೨೨॥

ಶಿವೇನ ವಚಸಾತ್ವಾ

ಶ್ರೀಕೈಲಾಸನಿವಾಸ ಸರ್ವನಿಗಮಾಧೀಶ ಪ್ರಭೋ ಸರ್ವತಃ
ಸರ್ವಂ ನಃ ಸುತದಾರಬಾಂಧವಧನಕ್ಷೇತ್ರಾದಿಕಂ ಸ್ಯಾದ್ಯಥಾ ।
ನೀರೋಗಂ ಸುಮನಸ್ಕಮೇವ ಚ ತಥಾ ತ್ವಾಂ ಸರ್ವದುಃಖಾಪಹಂ
ಸರ್ವೈಶ್ವರ್ಯವಿವರ್ಧನಂ ಪ್ರಣಮತಾಂ ಸರ್ವಾಧಿಕಂ ಸರ್ವದಾ ॥೨೩॥

ಸರ್ವೈಶ್ವರ್ಯಗುಣಾಕರಂ ಶಿವ ಭವತ್ಕಲ್ಯಾಣಲೀಲಾವೃತ
ಸ್ತೋತ್ರಾಕಾರತಯಾ ಶಿವೇನ ವಚಸಾ ನಿತ್ಯಂ ಸ್ತುಮಸ್ಸನ್ನಿಧಾ ।
ಲೋಕಾನಾಮಪಮೃತ್ಯುದೋಷಹರಣಂ ದೈವೋಪಘಾತಾಪಹಂ
ರುದ್ರಂ ಗೌತಮನಾಮಕೇನ ಮುನಿನಾ ಗೋಮಾಯುನಾ ಚಾರ್ಚಿತಂ॥೨೪॥

ಹಾಸಕ್ಲಿಷ್ಟಪುರತ್ರಯಂ ಗಿರಿಧನುಷ್ಪಾಣಿಂ ರಥಾಧಿಷ್ಠಿತಂ
ಸಂಗ್ರಾಮೋಚಿತದಿವ್ಯವೇಷಮನಿಶಂ ಧ್ಯಾಯೇತ್ಪುರಾರಿಂ ಪ್ರಭುಂ ।

---

ಕೈಲಾಸವಾಸಿಯೇ, ವೇದವೇದಾಂತಪಾರಜ್ಞನೇ, ಜಗತ್ಪ್ರಭುವೇ, ನನಗೆ ಪುತ್ರ, ಪತ್ನೀ, ಬಂಧುವರ್ಗ, ಧನ, ಕ್ಷೇತ್ರ ಇತ್ಯಾದಿ. ಸಕಲ ಸಂಪತ್ತೂ ಅನುಕೂಲವಾಗಿ ದೊರಕುವಂತೆ ಅನುಗ್ರಹಿಸು. ಮತ್ತು ಅವರೆಲ್ಲರೂ ರೋಗಾದ್ಯುಪದ್ರವ ರಹಿತರಾಗಿ ಸುಮನಸ್ಕರೆನಿಸಿ ಸರ್ವದಾ ನನ್ನ ದುಃಖವನ್ನು ಹೋಗಲಾಡಿಸುವಂತಿರಬೇಕು. ನಿನ್ನನ್ನು ಸದಾ ನಮಸ್ಕರಿಸುವವರಿಗೆ ಸರ್ವೈಶ್ವರ್ಯವನ್ನೂ ಕರುಣಿಸಿ ಕಾಪಾಡುವುದರಲ್ಲಿ ನೀನೇ ಸಮರ್ಥನಲ್ಲವೆ? ॥೨೩॥

ಮಹೇಶ್ವರನೇ, ನಿನ್ನ ಕಲ್ಯಾಣಗುಣಗಳನ್ನು ತಿಳಿಸುವ ಈ ರುದ್ರಾಧ್ಯಾಯವು ಸರ್ವವಿಧವಾದ ಐಶ್ವರ್ಯವನ್ನೂ ಅನುಗ್ರಹಿಸುವ ಶಕ್ತಿಯುಳ್ಳದ್ದು. ಅದರಲ್ಲಿ ಮಂಗಳಕರವಾದ ಅನೇಕ ಪದಗಳು ಸದಾ ನಿನ್ನ ಸುಗುಣಗಳನ್ನೇ ಘೋಷಿಸುತ್ತಿರುವುವು. ಅದರ ಪುರಶ್ಚರಣೆಯಿಂದ ಸಮಸ್ತ ಜನರ ಅಪಮೃತ್ಯುವೇ ಮುಂತಾದ ಅದರ ಕಷ್ಟಗಳು ದೂರವಾಗುವುವು. ದೈವಿಕವಾಗಿ ಬರುವ ವಿಪತ್ಪರಂಪರೆಯನ್ನೂ ಅದು ಹೋಗಲಾಡಿಸಬಲ್ಲುದು. ಗೌತಮಮಹರ್ಷಿಯೂ ಗೋಮಾಯುಮುನಿಯೂ ಇದನ್ನು ಪಠಿಸಿ ಇದರಿಂದ ಪರಶಿವನನ್ನು ಅರ್ಚಿಸಿ ಕೃತಕೃತ್ಯರಾಗಿರುವರು. ॥೨೪॥

ಪರಮೇಶ್ವರನೇ, ನಿನ್ನ ಕೋಪಕ್ಕೆ ಪಾತ್ರವಾದ ಪುರತ್ರಯವನ್ನೂ ಧ್ವಂಸ ಮಾಡಲುದ್ದೇಶದಿಂದ ಮೇರುಗಿರಿಯನ್ನೇ ಧನುಸ್ಸನ್ನಾಗಿಮಾಡಿಕೊಂಡು, ರಥದ

 

ಕಾರ್ಯೋಪಾಧಿವಶೇನ ಸನ್ನಪಿ ನರಾಕಾರೋಪಿ ಜೀವಾತ್ಮಕೋ
ಯಸ್ಯಾಂಶಃ ಸ್ವಯಮೀದೃಶಂ ವಪುರಭೇದೇನ ಗೃಹಾಣಾಸ್ಯ ಯಃ ॥೨೫॥

ಅಥ ಮೋಚಕಪದಧಿವಕ್ತಾ

ಜನ್ಮವ್ಯಾಧಿಜರಾದಿದುಃಖಮಹಾಸಂಸಾರಕಷ್ಟಜ್ವರಪ್ಲುಷ್ಟಾನಾಂ
ವಿತರಂತ್ಸದುರ್ಲಭಮಪಿ ತ್ವದ್ಭಕ್ತಿಮಾತ್ರೌಷಧಂ ।
ಭೀತಾನಾಮಭಯಾರ್ಥಿನಾಮಭಯದೇಷ್ವಗ್ರೇ ಸರೋಯಂ ಭಿಷಕ್
ಸರ್ವೇಷಾಂ ಭಿಷಜಾಂ ಕಿಲೇತಿ ನಿಗಮಾ ಯಂ ಸಂಸ್ತುವಂತ್ಯಾದರಾತ್ ॥೨೬॥

ದುರ್ಜ್ಞೇಯೋಪಿ ಪರಾತ್ಪರೋಪಿ ಜಗತಾಂ ತ್ರಾಣಾಯ ಮೋಹಾಯ ವಾ
ದೇವೇಷ್ವೇಕತಮೋಹಮೇವ ಇತಿ ಯಃ ಪ್ರಾದುರ್ಭವನ್ ಕ್ರೀಡತಿ ।
ಕ್ರೀಡಾಯಾಂ ಸುಖರೂಪ ಏವ ವಿಜಿಗೀಷಾಯಾಂ ಜಯಾತ್ಮಾ ಸ್ವಯಂ
ಭಕ್ತಾತ್ಮಾ ವ್ಯವಹಾರಕೇ ಭವತಿ ಚೇದ್ಯೋತ್ಯಾತ್ಮಕೋದ್ಯೋತನೇ ॥೨೭॥

---

ಮೇಲೆ ಕುಳಿತು, ಯುದ್ಧವೀರನಂತೆ ವೇಷವನ್ನು ಧರಿಸಿಕೊಂಡೆಯಲ್ಲವೆ ? ನಿತ್ಯಶುದ್ಧ ಜ್ಞಾನರೂಪನಾದ ನಿನಗೆ ನಿಜವಾದ ಯಾವ ಆಕಾರಗಳೂ ಇಲ್ಲದಿದ್ದರೂ, ಭಕ್ತ ರಕ್ಷಣಾರೂಪವಾದ ಕಾರ್ಯಸಾಧನೆಗಾಗಿ ನಾನಾವಿಧವಾದ ಮನುಷ್ಯಾಕಾರವನ್ನೂ, ಜೀವಿಗಳ ಸ್ವರೂಪವನ್ನೂ ಪಡೆದು ನಿನ್ನ ಲೀಲೆಯನ್ನು ತೋರ್ಪಡಿಸಿದೆಯಲ್ಲವೆ? ಇಂತಹ ನಿನ್ನ ಲೀಲಾಮಾತ್ರ ದೇಹಗಳಿಗೆ ನಾನು ಸರ್ವದಾ ವಂದಿಸುವೆನು. ॥೨೫॥

ಸಂಸಾರಸಾಗರದಲ್ಲಿ ಮುಳುಗಿ, ಜನನ ಮರಣವೇ ಮೊದಲಾದ ಕಷ್ಟಪರಂಪರೆಗಳಿಗೆ ಸಿಕ್ಕಿ ನರಳುವ ಮಾನವರಿಗೆ ನಿನ್ನ ಭಕ್ತಿಯೊಂದೇ ಪರಮೌಷಧಿ. ಭಯಾರ್ತರಾಗಿ ನರಳುವ ನಿನ್ನ ಭಕ್ತರಿಗೆ ಅಭಯಪ್ರದನು ನೀನೇ ಅಲ್ಲವೆ. ಭವರೋಗ ವೈದ್ಯನೂ, ಸಮಸ್ತ ವೈದ್ಯರಿಗೂ ವೈದ್ಯನೂ ಎಂದು ಸಕಲ ವೇದರಾಶಿಯೂ ನಿನ್ನನ್ನೇ ಸದಾ ಸ್ತುತಿಸುತ್ತಿರುವುದು. ಅಂತಹ ಮಹಾಮಹಿಮನೇ, ನಿನಗೆ ವಂದನೆ. ॥೨೬॥

ಯಾರಿಗೂ ನೀನು ಅರಿಯಲಸಾಧ್ಯನಾದರೂ ಜಗತ್ತನ್ನು ಪರಿಪಾಲಿಸುವವನು ನೀನೇ. ಜಗತ್ತಿನಲ್ಲಿ ಅದ್ಭುತವಾದ ಮಾಯಾಶಕ್ತಿಯಿಂದ ಮೋಹಾದಿಗಳನ್ನು ಕಲ್ಪಿಸುವವನೂ ನೀನೇ. ಇಂತಹ ಮಹಿಮಾಶಾಲಿಯಾಗಿದ್ದರೂ, ದೇವತೆಗಳಲ್ಲಿ ನಾನೂ ಒಬ್ಬನೆಂಬ ಭಾವವನ್ನು ಕಲ್ಪಿಸಿ ಎಲ್ಲರಂತೆ ನೀನೂ ಲೀಲೆಯನ್ನು ಬೀರುತ್ತಿರುವೆ. ನಿನ್ನ ಈ ಸ್ವರೂಪವು ಆಟದಿಂದುಂಟಾಗುವ ಸುಖರೂಪದಿಂದಲೂ ವಿಜಿ

ನಿತ್ಯಂ ಸ್ತುತ್ಯಮುಯುಸ್ಸ್ತಾವಪಿ ಗತೌ ಗಂತವ್ಯರೂಪೋಥವಾ
ವಾಯ್ವಾತ್ಮಾ ಬಹುಧಾ ವಿಭಾತಿ ಹಿ ಬಹುಷ್ವರ್ಥೇಷು ಚೈಕೋಪಿ ಯಃ ।
ದೇವಾನಾಮಪಿ ಯಃ ಸ್ವಯಂ ಸುಖಮಭೂದ್ಬ್ರಹ್ಮಾದಿಕಾನಾಂ ಪ್ರಭು
ರ್ದಿವ್ಯಜ್ಞಾನವತಾಂ ಪ್ರಧಾನಪುರುಷಃ ಸರ್ವಸ್ಯ ಲೋಕಸ್ಯ ಯಃ ॥೨೮॥

ಸ್ರಷ್ಟಸ್ತ್ವಂ ಸೃಜ ತೇನ ಸೃಷ್ಟಮಖಿಲಂ ವಿಷ್ಣೋ ಜಗತ್ಪಾಲಯ ।
ತ್ವಂ ಸರ್ವಾಣಿ ಜಗಂತಿ ಸಂಹರ ಹರೇತ್ಯೈಶ್ವರ್ಯಯೋಗಾನ್ಮುಹುಃ ।
ಸ್ವಾತಂತ್ರ್ಯಾಧಿಕವಾಗ್ಭಿರೇವಮಮರಾನಾಜ್ಞಾಪ್ಯ ಚೈವಂ ವಿಧಾನ್ ।
ಯಃ ಸ್ವಾಭಾವಿಕಶಕ್ತಿಮಾನತಿತರಾಮರ್ಹಃ ಸಮರ್ಥಃ ಪ್ರಭುಃ ॥೨೯॥

ಅಸ್ಮದ್ಧಿಂಸನತತ್ಪರಾನರಿಗಣಾನ್ ಜಾತಿಂ ತಥಾ ರಕ್ಷಸಾಂ ।
ಸರ್ವಾನಾಶು ವಿನಾಶಯನ್ ಮಮ ಪುರಃ ಪ್ರತ್ಯಕ್ಷಮಾವಿರ್ಭವನ್ ।

---

ಗೀಷ್ಪತಿನಲ್ಲಿರುವ ಜಯದ ರೂಪದಿಂದಲೂ, ವ್ಯವಹಾರಗಳಲ್ಲಿ ಭಕ್ತಿರೂಪದಿಂದಲೂ, ಆತ್ಮಜ್ಞಾನೋಪಾಯದಲ್ಲಿ ಆಧ್ಯಾತ್ಮಸ್ವರೂಪದಿಂದಲೂ ತೋರಿಬರುವುದು. ॥೨೭॥

ನಿತ್ಯವೂ ಸ್ತುತ್ಯನಾಗಿರುವ ನೀನು ವಾಸ್ತವಿಕವಾಗಿ ಒಬ್ಬನೇ ಆಗಿದ್ದರೂ ಉಪಾಧಿ ವಶದಿಂದ ನಾನಾರೂಪವಾಗಿ ತೋರಿಬರುತ್ತಲಿರುವೆ. ವಾಯುರೂಪದಿಂದ ಸರ್ವವ್ಯಾಪಿಯಾಗಿರುವೆ. ದೇವತೆಗಳಿಗೂ ದೇವತೆಯಾಗಿರುವೆ. ಬ್ರಹ್ಮಾದಿತ್ರಿಮೂರ್ತಿಗಳಿಗೂ, ದಿವ್ಯಜ್ಞಾನವನ್ನು ಪಡೆದವರಿಗೂ ಪ್ರಧಾನಪುರುಷನೆನಿಸಿರುವೆ. ಸಮಸ್ತಲೋಕಕ್ಕೂ ನೀನೇ ಒಡೆಯನೆನಿಸಿರುವೆ. ಇಂತಹ ದೇವದೇವನೆನಿಸಿದ ನಿನಗೆ ಪ್ರಣಾಮಗಳು. ॥೨೮॥

ಎಲೈ ಚತುರ್ಮುಖಬ್ರಹ್ಮನೇ, ನೀನು ಜಗತ್ತನ್ನು ಸೃಷ್ಟಿಮಾಡು. ವಿಷ್ಣುವೇ, ನೀನು ಹಾಗೆ ಬ್ರಹ್ಮಸೃಷ್ಟವಾದ ಜಗತ್ತನ್ನು ಕಾಪಾಡು. ರುದ್ರನು ಕಲ್ಪಾಂತಕಾಲದಲ್ಲಿ ಅದನ್ನು ಸಂಹರಿಸಲಿ. ನೀವೆಲ್ಲರೂ ಈಶ್ವರಶಕ್ತಿಯನ್ನು ಪಡೆದು ನಿಮ್ಮ ನಿಮ್ಮ ಕಾರ್ಯಗಳಲ್ಲಿ ಆಸಕ್ತರಾಗಿರಿ ಎಂದು ಮಹಾದೇವನು ಎಲ್ಲ ದೇವತೆಗಳಿಗೂ ಒಂದೊಂದು ಕಾರ್ಯವನ್ನು ಆಜ್ಞಾಪಿಸಿ, ಅವರು ಆ ಕಾರ್ಯವನ್ನು ನಿರ್ವಹಿಸುವ ಶಕ್ತಿಯನ್ನು ಕೂಡ ಕರುಣಿಸಿರುವನು. ಇಂತಹ ಅಸದೃಶ ಶಕ್ತಿವಂತನಾದ ಮತ್ತು ಅತ್ಯಂತ ಸಮರ್ಥನಾದ ಪರಶಿವನಿಗೆ ನಮಸ್ಕರಿಸುವೆನು. ॥೨೯॥

'ಮಹಾದೇವನೇ, ನಮ್ಮ ಶತ್ರುಗಳನ್ನು ನಾಶಗೊಳಿಸು. ರಾಕ್ಷಸಕುಲವನ್ನು ನಿರ್ಮೂಲಗೊಳಿಸು. ಪ್ರತ್ಯಕ್ಷನಾಗಿ ನಿಂತು ನಮ್ಮನ್ನುದ್ಧರಿಸು' ಎಂದು ಪ್ರಾರ್ಥಿ

ದೇವಸ್ತೋಮಮುಧಿಬ್ರವೀತು ಕೃಪಯಾ ಮಾಭೈಷ್ಟ ಯುಷ್ಮಾನಹಂ ।
ಭೀತಿಭ್ಯಸ್ತ್ರಾತಿಪಾಲಯಾಮ್ಯಥ ಭವಾನ್ ಪಾತ್ವೇವಮಸ್ಮಾನ್ ಪ್ರಭುಃ
॥೩೦॥

ಶಂಭುಂ ದುಸ್ಸಹಗರ್ಭರೋಗಹರಣಂ ರಕ್ಷಾಕರಂ ಸರ್ವಥಾ ।
ರಕ್ಷೋಭೂತಭಯಾಪಹಂ ಪ್ರಣಮತಾಂ ದೀರ್ಘಾಯುರರ್ಥಪ್ರದಂ ।
ಕಣ್ವಾರಾಧಿತಮಿಂದುಮೌಲಿಮನಿಶಂ ವ್ಯಾಲೋಪವೀತೋಜ್ವಲಂ ।
ಪ್ರೋದ್ಯತ್ಪಾವಕವರ್ಚಸಂ ತ್ರಿನಯನಂ ಕಾಲಾರಿಮೀಶಂ ಭಜೇ ॥೩೧॥

ಯಃ ಪೂರ್ವಾಚಲಹೇಮರತ್ನಶಿಖರಪ್ರಸ್ಥೋಪಲಾಪತ್ಯಕಾ
ಕಾಂತಿವ್ಯಾಪ್ತಿವಶಾದ್ರಸಾತಲತಮಃ ಸಂಪರ್ಕಕೋ ವಾಸ್ತಹಂ ।
ಉದ್ಯತ್ಕುಂಕುಮಪಂಕತೋಭ್ರ ಉದಿತಃ ಸಿಂದೂರಪೂರಾರುಣ
ಸ್ತಪ್ತಸ್ವರ್ಣಸುಕಾಂತಿರೂರ್ಧ್ವಮಥ ಸಂಸರ್ಪನ್ಸ್ವಮಾದೃಶ್ಯತೇ ॥೩೨॥

---

ಸುವ ದೇವತೆಗಳಿಗೆ ಸ್ವಸ್ವರೂಪವನ್ನು ಪ್ರಕಾಶಗೊಳಿಸುತ್ತಾ, - ಹೆದರಬೇಡಿ, ನಿಮ್ಮ ಪೀಡೆಗಳನ್ನು ಪರಿಹರಿಸುವೆನು. ನಿಮ್ಮ ಭಯರಾಶಿಯನ್ನು ಹೋಗಲಾಡಿಸುವೆನು' ಎಂದು ಹೇಳುತ್ತಾ ಅವರನ್ನು ಸಮಾಧಾನಗೊಳಿಸುತ್ತಿರುವೆ. ಅಂತಹ ಮಹಾಮಹಿಮನಾದ ನೀನು ನಮ್ಮನ್ನು ಕಾಪಾಡು. ॥೩೦॥

ಮಹೇಶ್ವರನೇ, ನೀನು ಸಹಿಸಲಸಾಧ್ಯವಾದ ಗರ್ಭರೋಗಗಳನ್ನೆಲ್ಲಾ ನಿವಾರಿಸುವವನು. ಲೋಕರಕ್ಷಣೆಯನ್ನು ನಡೆಸುವವನು. ರಾಕ್ಷಸರ ಭಯವನ್ನೂ ಹೋಗಲಾಡಿಸುವವನು. ನಿನ್ನನ್ನು ಅನನ್ಯಮನಸ್ಸಿನಿಂದ ಭಜಿಸುವವರಿಗೆ ದೀರ್ಘಾಯುವನ್ನು ದಯಪಾಲಿಸುವೆ. ಮತ್ತು ಸರ್ವರಿಗೂ ಐಶ್ವರ್ಯಪ್ರದನು ನೀನು. ಕಣ್ವ ಮಹರ್ಷಿಯಿಂದ ಪೂಜಿತನಾದವನು. ನಾಗವನ್ನೇ ಯಜ್ಞೋಪವೀತವನ್ನಾಗಿ ಮಾಡಿಕೊಂಡಿರುವವನು. ಉರಿಯುವ ಅಗ್ನಿಯಂತೆ ಜ್ವಲಿಸುವವನು. ತ್ರಿನಯನನು. ಯಮನ ಸೊಕ್ಕನ್ನು ಅಡಗಿಸಿದವನು. ಇಂತಹ ನಿನ್ನನ್ನು ನಾವು ಸರ್ವದಾ ಧ್ಯಾನಿಸುತ್ತಿರುವೆವು. ॥೩೧॥

ಪೂರ್ವದಿಕ್ಕಿನ ಪರ್ವತದ ರತ್ನಮಯವಾದ ಶಿಖರದಲ್ಲಿ ನಿಂತು ತನ್ನ ಕಿರಣಪ್ರಸರಣದಿಂದಲೂ, ಆ ಹೇಮಗಿರಿಯ ತಪ್ಪಲಿನ ಪ್ರಭೆಯಿಂದಲೂ ಪಾತಾಳ ಲೋಕದ ಕತ್ತಲೆಯನ್ನು ಸಹ ಹೋಗಲಾಡಿಸುವ ಸೂರ್ಯಮಂಡಲಾಂತರ್ವರ್ತಿಯಾದ

ಅಸೌ ಯೋವ ಸರ್ಪತಿ

ಕಲ್ಯಾಣೈಕನಿಧಿಃ ಸತಾಂ ಸ್ವಯಮಸಾವಾದಿತ್ಯರೂಪಃ ಶಿವೋ
ಯೋ ತುಲ್ಯಾಕೃತಿಹೇತಿಭೂತಿವಿಭವಾ ರುದ್ರೇಣ ರುದ್ರಾಃ ಪದೇ ।
ದೇವಸ್ಯಾನುಚರಾಃ ಸಮಸ್ತಜಗತಾಂ ಕರ್ಮಾನುರೂಪಂ ಫಲಂ
ದಾತುಂ ದಿಕ್ಷು ಸಹಸ್ರಶಃ ಕ್ಷಿತಿಮಿಮಾಮಧ್ಯಾಸತೇ ಚಾಭಿತಃ ॥೩೩॥

ಕೃತ್ಯಸ್ಯಾಕರಣಾದಕೃತ್ಯಕರಣಾದಾಲಸ್ಯತಃ ಕಾಮತ
ಸ್ತಸ್ಮಾತ್ಪಾಪಮಜಸ್ರಮಾರ್ಜಿತಮಭೂದಸ್ಮಾಭಿರಜ್ಞೈ ಸ್ತತಃ ।
ತೇಷಾಂ ತಸ್ಯ ಮಹೇಶ್ವರಸ್ಯ ಚ ವಿಭೋರ್ಯೋಽಸ್ಯಾನ್ನಿಹಾರಾದರಃ
ಕ್ರೋಧಶ್ಚಾಸ್ತಿ ತಮೀದೃಶಸ್ತುತಿನಮಸ್ಕಾರೈರಪಾಕುರ್ಮಹೇ ॥೩೪॥

---

ಮಹಾದೇವನು ಉದಯಕಾಲದಲ್ಲಿ ಕುಂಕುಮವರ್ಣದಿಂದ ವಿರಾಜಿಸುವನು. ಮಧ್ಯಾಹ್ನಕಾಲದಲ್ಲಿ ಸ್ವಚ್ಛವಾದ ಪುಟವಿಟ್ಟ ಸುವರ್ಣದಂತೆ ಹೊಳೆಯುವನು. ಮತ್ತೆ ಸಂಧ್ಯಾರಾಗರಂಜಿತನಾಗಿ ಅಸ್ತನಾಗುವನು. ಇಂತಹ ಮಹೇಶ್ವರನು ಸರ್ವರಿಗೂ ಮಂಗಳವನ್ನೀಯಲಿ. ॥೩೨॥

ಸಕಲ ಕಲ್ಯಾಣಗುಣಪರಿಪೂರ್ಣನೂ ಆದಿತ್ಯರೂಪನೂ ಆದ ಮಹಾದೇವನು ಲೋಕರಕ್ಷಣಾರ್ಥವಾಗಿ ಸಮಾನಾಕೃತಿಯಿಂದ ಶೋಭಿಸುವ ಏಕಾದಶರುದ್ರರನ್ನು ನಿರ್ಮಾಣಮಾಡಿರುವನು. ಅವರು ಜಗತ್ತಿನ ಮೂಲೆಮೂಲೆಯಲ್ಲಿಯೂ ನೆಲಸಿ ದೇವತೆಗಳ ಮತ್ತು ಮಾನವರ ಕರ್ಮಾನುಗುಣವಾದ ಫಲವನ್ನು ಅವರವರಿಗೆ ಅನುಗ್ರಹಿಸುತ್ತಾ ಶಿವಧ್ಯಾನಾಸಕ್ತರಾಗಿ ತೋರುತ್ತಿರುವರು. ಇಂತಹ ರುದ್ರಾಧಿದೇವನಾದ ಮಹಾದೇವನಿಗೆ ವಂದನೆಗಳು. ॥೩೩॥

ಕರ್ತವ್ಯಕರ್ಮಗಳನ್ನು ಮಾಡದೆ, ಮಾಡಬಾರದ ಕಾರ್ಯಗಳನ್ನು ಮಾಡುತ್ತಾ ಅಜ್ಞರಾದ ನಾವು ನಾನಾರೀತಿಯ ಪಾಪರಾಶಿಯನ್ನು ಸಂಪಾದಿಸಿಕೊಂಡಿರುವೆವು. ಅಂತಹ ಪಾಪಸಮುದಾಯವು ಪರಶಿವನ ಅನುಗ್ರಹ ಲೇಶದಿಂದಲೇ ನಾಶವಾಗಬೇಕು. ಪಾಪಿಷ್ಟರಾದ ನಮ್ಮ ವಿಷಯದಲ್ಲಿ ಮಹೇಶ್ವರನು ಕೋಪಗೊಂಡಿದ್ದರೂ ದಯಾಳುವಾದ ಆ ಭಗವಂತನನ್ನು ಸ್ತೋತ್ರಗಳಿಂದಲೂ ನಮಸ್ಕಾರಾದಿಗಳಿಂದಲೂ ತೃಪ್ತಿಪಡಿಸಿ ಅನುಗ್ರಹವನ್ನಾರ್ಜಿಸಿ ತನ್ಮೂಲಕ ಆ ಪಾಪಸಂಕೋಲೆಯಿಂದ ಪಾರಾಗುವೆವು. ಇದು ನಿಜ ॥೩೪॥

ಕ್ಷ್ವೇಲಃ ಶ್ಯಾಮಲಕಂಧರಃ ಸ್ಫುರದುರುಜ್ವಾಲಾಗ್ನಿವರ್ಣಃ ಶಿವ ।
ಸ್ತೇಜೋಮಂಡಲಮಧ್ಯವರ್ತಿವಿಲಸನ್ಮಾರ್ತಂಡಮಧ್ಯಂ ವಸನ್ ।
ಸಾಯಂ ಕಿಂಚಿದುದಂಚತಾಂಕುರತಮಃ ಸಾಮರ್ಥ್ಯಲೀನೈರ್ವಚಾ ।
ಕ್ರಾಂತೇ ಧ್ವಾಂತಮುಪಾಂಚ ಯಚ್ಛ ಪರಿತಃ ಪಂಕಪ್ರದೇಶಾಂತರೇ ॥೩೫॥

ಭೂಯಿಷ್ಠಂ ಗ್ರಸನಕ್ಷಣಘೃಣಿಗಣಾಕ್ರಾಂತಾಭ್ರನೀಲಾನಿಲಂ
ಬಿಭ್ರಾಣೋಸ್ತಮಯನ್ ವಿಲೋಹಿತನಿಭಃ ಪ್ರಾತಸ್ತಥೈವೋದಯನ್ ।
ಯೋಸೌ ತಿರ್ಯಗಧಶ್ಚ ಸರ್ಪತಿ ಜಗದ್ರಾತ್ರ್ಯತ್ರಂ ಸದಾ ನಿರ್ವಹನ್
ದುರ್ಜ್ಞೇಯೋಪಿ ತಪಃ ಕ್ರಿಯಾಭಿರಖಿಲೈರ್ವೇದೈಃ ಶ್ರುತೋ ಮೇಧಯಾ
॥೩೬॥

ಏನಂ ತಂ ಭಗವಂತಮಸ್ತಮಚಿರಾದ್ಯಾಂತಂ ವನಾಂತೋದ್ಭವಾಂ ।
ಗ್ರಾಮಪ್ರಾಪ್ತಿನಿಮಿತ್ತಮೇಕಮನಸಃ ಪಶ್ಯಂತಿ ಗೋಪಾ ಅಪಿ ।

---

ವಿಷದಿಂದ ಕಪ್ಪಾದ ಕಂಠವುಳ್ಳ ಮಹಾದೇವನು ಉರಿಯುವ ಅಗ್ನಿಜ್ವಾಲೆಯಂತೆ ಶೋಭಿಸುತ್ತಾ ಸದಾ ಸೂರ್ಯಮಂಡಲ ಮಧ್ಯವರ್ತಿಯಾಗಿರುವನು. ಸಾಯಂ ಕಾಲದ ವೇಳೆಯಲ್ಲಿ ಅತಿಶಯವಾದ ಸಂಧ್ಯಾರಾಗದಿಂದ ಪ್ರಕಾಶಿಸುತ್ತಾ, ಪರಮೇಶ್ವರನು ಅಸ್ತಾಚಲದ ಸುತ್ತುಮುತ್ತಲಿನ ಸಮುದ್ರರಾಶಿಯು ಹಾಗೂ ಪಂಕಪ್ರದೇಶದ ಕತ್ತಲೆಯನ್ನು ಹೋಗಲಾಡಿಸುತ್ತಾ ತೇಜೋಮಯನಾಗಿ ತೋರಿಬರುವನು. ॥೩೫॥

ಕ್ಷಣಕಾಲದಲ್ಲಿಯೇ ಪ್ರಪಂಚವನ್ನೇ ಆಕ್ರಮಿಸುವಂತಹ ಕಿರಣರಾಶಿಯನ್ನು ಸರ್ವತ್ರ ಪ್ರಸಾರಮಾಡಿ, ಅಂತರಿಕ್ಷಗತವಾದ ತಮೋರಾಶಿಯನ್ನೆಲ್ಲಾ ನಿವಾರಣೆ ಮಾಡುವ ಶಂಕರನು ಸೂರ್ಯರೂಪದಿಂದ ಉದಯಿಸಿ ಊರ್ಧ್ವಾಧೋಭಾಗದಲ್ಲಿ ವಿಹರಿಸುವನು. ಜನರ ಅಜ್ಞಾನರಾಶಿಯನ್ನು ಕಳೆಯುವಂತೆ ಲೋಕವನ್ನೂ ಬೆಳಗಿಸುವನು. ತಪಸ್ಸಿನಿಂದಲೂ, ವೇದಗಳಿಂದಲೂ ಸುಲಭವಾಗಿ ತಿಳಿಯಲಾಗದ ಶಂಭುವು ಈರೀತಿ ಜಗತ್ತಿನಲ್ಲೆಲ್ಲಾ ವ್ಯಾಪಿಸಿ ಜನರಕ್ಷಣೆಗೈಯುತ್ತಿರುವನು. ॥೩೬॥

ಸೂರ್ಯರೂಪಿಯಾದ ಪರಶಿವನು ಅಸ್ತನಾಗುವುದನ್ನು ಕಂಡು, ಕಾಡಿನಲ್ಲಿ ಗೋವುಗಳನ್ನು ಮೇಯಿಸುತ್ತಿದ್ದ ಗೋಪಾಲಕರು ತಮ್ಮ ಊರಿನ ಕಡೆಗೆ ಪ್ರಯಾಣ ಹೊರಡಲು ಮನಸ್ಸು ಮಾಡುವರು. ಕಿರಣರಾಶಿಯಾದ ಸೂರ್ಯನು ಅಸ್ತನಾಗುತ್ತಲೇ ಶಂಕರನು ಕತ್ತಲೆಯನ್ನು ಹೊರಸೂಸುವ ದೃಷ್ಟಿಯನ್ನು ಬೀರುವನು. ಆ ಕಾಲದಲ್ಲಿ

ಅಸ್ತಂ ಯಾಸ್ಯತಿ ಭಾನುರಂಧತಮಸಂ ದೃಷ್ಟಿಂ ಪಿಧಾಸ್ಯತ್ಯಹೋ ।
ಶ್ವಾಪಶ್ಚೇದಿಹ ಕುತ್ಸಯಂತಿ ಹಿ ಮೃಗಾ ನೋ ಧರ್ಷಯಿಷ್ಯಂತ್ಯಪಿ ॥೩೭॥

ಅಂಭಃ ಕುಂಭನಿಭಂ ಕದಾ ನಿಜಗೃಹೇ ನೇಷ್ಯಾಮ ಇತ್ಯಾಕುಲಾಃ ।
ಸ್ವೇದಾಂಭಃಕಣಸಿಕ್ತಕಂಚುಕಸಮಾಲಕ್ಷ್ಯಸ್ತನಚ್ಚೂಚುಕಾಃ ।
ಭ್ರಶ್ಯದ್ಭೂಷಣಜಾಲಮಾಕುಲಕಚಂ ವ್ಯಾಲೋಲಹಾರಂ ಜವಾತ್ ।
ಧಾವಂತ್ಯಃ ಪರಿಚಾರಿಕಾಶ್ಚ ಜನಿತಾನಂಗೈರಪಾಂಗೈರ್ಮುಹುಃ ॥೩೮॥

ಸಂಧ್ಯಾಖ್ಯೇದ್ಧರಣಾಗ್ನಿಹೋತ್ರಸಮಯೈಕಾಯತ್ತಚಿತ್ತಾ ದ್ವಿಜಾ
ಶ್ಚಾವಾಸಾಭಿಮುಖಾನಿ ಪಕ್ಷಿಪಶವಃ ಕೀಟಾನಿ ಭೂತಾನ್ಯಪಿ ।
ಸೋಽಯಂ ನಃ ಸುಖಯತ್ವಹೋನಿಶಮುಪಸ್ಥಾನಾದಿಕಾಲಾರ್ಥಿಭಿಃ
ದೃಷ್ಟೋಽಸ್ಮಾಭಿರಸೌ ಸದಾ ಪ್ರಶಮಯನ್ನೇನಃ ಕೃಪಾಂಭೋನಿಧಿಃ ॥೩೯॥

---

ಸಾಮಾನ್ಯಪ್ರಾಣಿಯು ನಿದ್ದೆಹೋಗುತ್ತಿದ್ದರೂ ವನ್ಯಪ್ರಾಣಿಗಳು ಮಾತ್ರ ನಮ್ಮನ್ನು ಗರ್ಜನೆಯಿಂದ ಹೆದರಿಸುತ್ತವೆ. ಹೀಗೆ ಹಗಲು ರಾತ್ರಿಗಳಿಗೆ ನಿಯಾಮಕನಾದ ರುದ್ರನಿಗೆ ವಂದನೆಗಳು. ॥೩೭॥

ಸೂರ್ಯನು ಅಸ್ತನಾಗುವುದನ್ನು ನೋಡುವ ಗೋಪಸ್ತ್ರೀಯರು ತಮ್ಮ ಮನೆಗಳಿಗೆ ನೀರನ್ನು ತಂದು ತುಂಬಿಕೊಳ್ಳಬೇಕೆಂಬ ಆತುರದಿಂದ ದೊಡ್ಡ ದೊಡ್ಡ ಗಡಿಗೆಗಳನ್ನು ಹೊತ್ತು ನೀರು ತರುವರು. ಆಗ ಆ ಆಯಾಸದಿಂದ ಅವರು ಬೆವರಿ, ಅವರ ರವಿಕೆಯೆಲ್ಲಾ ನೆನೆದುಹೋಗುವುದು. ಅವರ ಸ್ತನದ ತೊಟ್ಟು ಆ ರವಿಕೆಯನ್ನು ಭೇದಿಸಿಕೊಂಡು ಈಚೆಗೆ ಕಾಣುತ್ತಿರುವುದು. ಅವರು ಕೊರಳಿನಲ್ಲಿ ಹಾಕಿಕೊಂಡಿದ್ದ ಭೂಷಣಗಳೆಲ್ಲಾ ಆ ಸ್ತನಮಂಡಲದ ಮೇಲೆ ಚಲಿಸುತ್ತಿರುವುವು. ಮುಂಗೂದಲು ಸ್ವಲ್ಪ ಕೆದರಿ ಹಾರವು ಅಲುಗಾಡುತ್ತಿರುವುದು. ಇಂತಹ ಸ್ತ್ರೀಯರು ತಮ್ಮನ್ನು ನೋಡುವ ಪುರುಷರಿಗೆ ಕಾಮೋದ್ರೇಕವನ್ನು ಕಲ್ಪಿಸುತ್ತಾ, ತಮ್ಮ ಕಟಾಕ್ಷವನ್ನು ಎಲ್ಲೆಲ್ಲೂ ಹರಡುತ್ತಾ ಮನೆಗೆ ವೇಗವಾಗಿ ಹೋಗುವರು. ॥೩೮॥

ಸಂಧ್ಯಾಕಾಲವಾದುದನ್ನು ತಿಳಿದು ಬ್ರಾಹ್ಮಣರು ಸಂಧ್ಯಾವಂದನೆ, ಅಗ್ನಿಹೋತ್ರ ಮುಂತಾದ ನಿತ್ಯಕರ್ಮಗಳಲ್ಲಿ ತಮ್ಮ ಮನಸ್ಸನ್ನು ನಿಲ್ಲಿಸಲು ಯತ್ನಿಸುವರು. ಪಕ್ಷಿಗಳು, ಪಶುಗಳು, ಕ್ರಿಮಿಕೀಟಗಳೂ ತಮ್ಮ ತಮ್ಮ ವಾಸಸ್ಥಾನಗಳಿಗೆ ಹಿಂದಿರುಗುವುವು. ಹಾಗೆ ಉಪಸ್ಥಾನಾದಿ ಸಂಧ್ಯಾಕರ್ಮಗಳಲ್ಲಿ ಅತ್ಯಾಸಕ್ತರಾಗಿರುವ

ಯಂ ಧ್ಯಾಯನ್ನಿಹ ವೇದಪಾರಗಕುಲೇ ಜಾತಿಸ್ಮರೋ ಜಾಯತೇ
ರುದ್ರಂ ತಂ ವರದಂ ಸುವೃಷ್ಟಿಫಲದಂ ಶ್ರೀಕಶ್ಯಪಾರಾಧಿತಂ ।
ಭಾಸ್ವನ್ಮಂಡಲಗಂ ಹಿರಣ್ಮಯತನುಂ ಚಂಡಪ್ರಭಾಮಂಡಲಂ
ಸಾಂಬಂ ಸ್ಮೇರಮುಖಾಂಬುಜಂ ಮುನಿಗಣೈರಾಸೇವ್ಯಮಾನಂ ಭಜೇ ॥೪೦॥

ನಮೋ ಅಸ್ತು ನೀಲಗ್ರೀವಾಯ

ನೀಲಾತ್ಯುಜ್ಜ್ವಲ ಕಂಧರಾಯ ಚ ಸಹಸ್ರಾಕ್ಷಾತ್ಮನೇ ವೃಷ್ಟಿಭಿಃ
ಪರ್ಜನ್ಯಾತ್ಮತಯಾ ಭುವಂ ಚ ಪರಿತಃ ನೇತ್ರೇ ತಥಾ ಯೋನಿಷು ।
ಗರ್ಭಾಣಾಂ ಪುರುಷಾತ್ಮನಾ ಚ ವಿವಿಧೈರ್ಬೀಜೈರ್ವಿಧಾತ್ರೇ ನಮೋ
ರುದ್ರಾಯಾಸ್ತು ನಮಸ್ಕರೋಮ್ಯಥ ಭಟಾ ಯೇ ಚಾಸ್ಯ ತೇಭ್ಯೋ ನಮಃ
॥೪೧॥

---

ನಮಗೂ ಪರಶಿವನು ಸೌಖ್ಯವನ್ನು ಕಲ್ಪಿಸುತ್ತಾ ನಮ್ಮ ಪಾಪರಾಶಿಯನ್ನು ನಾಶಗೊಳಿಸಿ ಸಂರಕ್ಷಿಸಲಿ. ಇದೇ ನಮ್ಮ ಪ್ರಾರ್ಥನೆ. ॥೩೯॥

ವೇದವೇದಾಂತಗಳಲ್ಲಿ ಪರಿಶ್ರಮಹೊಂದಿದವರು ಪರಮೇಶ್ವರನನ್ನು ಧ್ಯಾನಮಾಡುವುದರಿಂದ ಅವರಿಗೆ ಜನ್ಮಾಂತರದ ವಿಷಯಗಳನ್ನು ಅರಿಯುವ ಜಾತಿಸ್ಮರತ್ವವು ಲಭಿಸುವುದು. ಪಶುಪತಿಯು ಭಕ್ತರಿಗೆ ವರಪ್ರದನು. ಶಂಕರನು ಸುವೃಷ್ಟಿಯನ್ನು ಸುಫಲವನ್ನೂ ಕೊಡುವವನು. ಕಶ್ಯಪಮಹರ್ಷಿಯು ಸದಾ ಶಂಕರನನ್ನು ಧ್ಯಾನಿಸುತ್ತಿರುವನು. ಸೂರ್ಯಮಂಡಲಮಧ್ಯವರ್ತಿಯೂ, ಹಿರಣ್ಮಯಶರೀರಿಯೂ, ಸೂರ್ಯಮಂಡಲಸ್ವರೂಪಿಯೂ, ಅಂಬಾಸಹಿತನೂ, ಮುಗುಳ್ನಗೆಯಿಂದ ಕೂಡಿದ ಮುಖಕಮಲವುಳ್ಳವನೂ, ಮುನಿಗಳಿಂದ ಸೇವಿಸಲ್ಪಡುವವನೂ ಆದ ಪರಮೇಶ್ವರನನ್ನು ನಾವು ಸದಾ ಸೇವಿಸುವೆವು. ॥೪೦॥

ವಿಷಪ್ರಾಶನದಿಂದ ನೀಲಕಂಠನೆನಿಸಿ, ವೃಷ್ಟಿಪ್ರದವಾದ ಮೇಘರೂಪದಿಂದಲೂ, ಮೇಘಾಧಿಪತಿಯಾದ ಇಂದ್ರರೂಪದಿಂದಲೂ, ಪ್ರಪಂಚದ ಸುತ್ತಲೂ ವ್ಯಾಪಿಸಿ, ಜಗಚ್ಚಕ್ಷುವೆನಿಸಿರುವ ಪರಮೇಶ್ವರನು ಸಕಲ ಪ್ರಾಣಿಗಳ ಹೃದಯಕುಹರದಲ್ಲಿ ನೆಲಸಿರುವನು. ಪುರುಷಸ್ವರೂಪನೆನಿಸಿ ಸಕಲ ಜಗತ್ತಿಗೂ ಬೀಜಭೂತನೆನಿಸಿ ಪ್ರಪಂಚರೂಪನಾಗಿರುವ ಮಹಾದೇವನಿಗೆ ವಂದಿಸುವೆನು. ಮತ್ತು ಅವನ ಪ್ರಮಥಗಣಗಳಿಗೂ ನಮಸ್ಕರಿಸುವೆನು. ॥೪೧॥

ಸಂತಾನೈಕಫಲಾರ್ಥಿನಾಂ ಪ್ರಣಮತಾಂ ಸಂತಾನರೂಪಂ ಪ್ರಭುಂ
ಸ್ವಾತ್ಮಾನಂ ಹೃದಿ ಭಾವಯಂತಮನಿಶಂ ಶಂಭುಂ ಕೃಪಾಂಭೋನಿಧಿಂ ।
ಕಾಂತಂ ಶಾರದಚಂದ್ರಕಾಂತಿನಿತರಾಂ ಶಾಂತಂ ಶಿವಂ ಶೀತಲಂ
ಸಾಂಬಂ ದಿವ್ಯವಪುರ್ದಧಾನಮಮಲಂ ಸಿಂಹಾಸನಸ್ಥಂ ಭಜೇ ॥೪೨॥

ಪ್ರಮುಂಚಥನ್ವನಸ್ತ್ವಮುಭಯೋಃ

ಸಂರಂಭಸ್ತ್ರಿಪುರೇಷು ದುಸ್ಸಹತರೋ ಯಃ ಪೂರ್ವಮಾಸೀದ್ಧ್ರುವಂ
ಸ್ಯಾದದ್ಯಾಪಿ ಸ ಏವ ಸೇವಕಜನೇಷ್ವಸ್ಮಾಸು ದೀನೇಷ್ವಪಿ ।
ವಿದ್ಯೈಶ್ವರ್ಯಯಶಃ ಶ್ರಿಯಾಂ ಚ ಭಗವಂಸ್ತೇ ಜ್ಞಾನವೈರಾಗ್ಯಯೋಃ ।
ದಾಕ್ಷಿಣ್ಯೈಕತನೋರ್ದಯಾಮಯತನೋಃ ಪಾಲ್ಯೇಷ್ವಯುಕ್ತೋ
ಹಿ ಸಃ ॥೪೩॥

---

ಸಂತಾನಾಪೇಕ್ಷೆಯಿಂದ ಶಂಕರನನ್ನು ಪ್ರಾರ್ಥಿಸುವ ತನ್ನ ಭಕ್ತರಿಗೆ ಸಂತಾನ ರೂಪವಾದ ಫಲವನ್ನು ಕೊಡುವವನು ಮಹಾದೇವನು. ಸದಾ ಆತ್ಮಸ್ವರೂಪನಾಗಿ, ಆತ್ಮಧ್ಯಾನಮಾಡುವಂತಹ ಸರ್ವರಿಗೂ ಧ್ಯೇಯನೆನಿಸಿ ದಯಾಶಾಲಿಯಾಗಿರುವ ಪರಶಿವನನ್ನು ನಾನು ಸರ್ವದಾ ಸೇವಿಸುವೆನು. ಶರಚ್ಚಂದ್ರನಂತೆ ಸದಾ ಪ್ರಕಾಶ ಮಾನನಾಗಿ, ಶಾಂತನೂ, ಶೀತಲನೂ, ದಿವ್ಯದೇಹಧಾರಿಯೂ ಆದ ಪರಶಿವನು ದಿವ್ಯ ಸಿಂಹಾಸನದಲ್ಲಿ ಮಂಡಿಸಿರುವನು. ಅಂತಹ ಮಹಾದೇವನಿಗೆ ನಿತ್ಯವಂದನೆಗಳು. ॥೪೨॥

ಮಹೇಶ್ವರನೇ, ಹಿಂದೆ ನೀನು ತ್ರಿಪುರದಹನಕಾಲದಲ್ಲಿ ಸಹಿಸಲಸಾಧ್ಯವಾದ ಯಾವ ಕೋಪವನ್ನು ತೋರ್ಪಡಿಸಿ ಕಾರ್ಯಸಾಧನೆಮಾಡಿದೆಯೋ ಅಂತಹ ಕೋಪತಾಪಗಳನ್ನು ದೀನರೂ, ಸೇವಕರೂ ಆದ ನಮ್ಮಲ್ಲಿ ತೋರ್ಪಡಿಸಬೇಡ. ನಾವು ಸದಾ ನಿನ್ನನ್ನೇ ಮೊರೆಹೊಕ್ಕಿರತಕ್ಕವರು. ನಮಗೆ ಅತುಲವಾದ ವಿದ್ಯೆ, ಐಶ್ವರ್ಯ, ಕೀರ್ತಿ, ಸಂಪತ್ತು, ಜ್ಞಾನ, ವೈರಾಗ್ಯ, ಇಂತಹ ಸದ್ಗುಣಗಳನ್ನು ದಯ ಪಾಲಿಸಿ ನಮ್ಮನ್ನುದ್ಧರಿಸು. ಭಕ್ತಪಕ್ಷಪಾತಿಯೂ, ದಯಾಮೂರ್ತಿಯೂ ಆದ ನಿನ್ನ ಪಾಲ್ಯಗೋಷ್ಠಿಯಲ್ಲಿ ಸೇರಿರುವ ನಮ್ಮ ಮೇಲೆ ಕ್ರೂರದೃಷ್ಟಿಪಾತವನ್ನಿಡುವುದು ನ್ಯಾಯವಲ್ಲವಲ್ಲವೆ? ॥೪೩॥

ಯುಸ್ಮಾಜ್ಜ್ಯಾನಿಹ ತಾಂ ಪ್ರಮುಂಚ ಧನುಷಃ ಕೋಟ್ಯೋರ್ದ್ವಯೋ
ರ್ಯಾಚಿರಂ
ಬದ್ಧಾಯಾಶ್ಚ ತವೇಷವಃ ಕರತಲೇ ತಿಷ್ಠಂತಿ ತಾಃ ಪ್ರಾಣಿನಾಂ ।
ಸಂಹರ್ತ್ರೀರುಪಸಂಹರನ್ನಭಿಮುಖೀ ರ್ಮಾಕುರ್ವ ನಾಸ್ಮಾನ್ಯಥಾ
ತೂಣೀರೇಷು ತಿರೋಹಿತಾನ್ಕುರು ತಥಾ ದೇವೇಶ ತುಭ್ಯಂ ನಮಃ ॥೪೪॥

ಅವತತ್ಯಧನುಸ್ತ್ವಗ್ಂ

ದೇವಾನೇಕಶತೇಷುಧಿವ್ರಜ ಸಹಸ್ರಾಕ್ಷ ತ್ವಮೇವಂ ಧನುಃ
ಕೃತ್ವಾ ವಿಜ್ಯಮಿದಂ ಮುಖಾನಿ ವಿಶಿಖಾನಾಂ ಚೈವ ಶೀರ್ಣಾನಿತೇ ।
ನಿಶ್ಶೇಷಂ ನಿತರಾಂ ವಿಧಾಯ ಕೃಪಯಾಸ್ಮಾಕಂ ಪ್ರಸಾದಾರ್ಥಿನಾಂ
ಸದ್ಯಶ್ಶಾಂತಮನಾಃ ಶಿವೋ ಭವ ಸಹಸ್ವಾದ್ಯಾಪರಾಧಾನ್ ಬಹೂನ್ ॥೪೫॥

ವಿಜ್ಯಂಧನುಃ ಕಪರ್ದಿನೋ

ಸುಪ್ರೀತಸ್ಯ ಕಪರ್ದಿನೋಸ್ತ್ವಿಹ ಪಿನಾಕಾಖ್ಯಂ ಧನುಃ ಸಜ್ಯಮ
ಪ್ಯದ್ಯಾಸ್ಮತ್ಕುಶಲಾಯ ವಿಜ್ಯಮಿಷುಧಿಶ್ಚಾಯಂ ಪುರಾರೇಃ ಪುರಾಃ ।

---

ಮಹೇಶ್ವರನೇ, ನಿನ್ನ ಬಲಿಷ್ಠವಾದ ಬಿಲ್ಲಿನಲ್ಲಿ ಹೂಡಿ ಸಿದ್ಧವಾಗಿರುವ ದಿವ್ಯಬಾಣಗಳನ್ನೂ, ಹಾಗೆಯೇ ಕರಗತವಾಗಿ ಎಂತಹ ಶತ್ರುವನ್ನೂ ಧ್ವಂಸ ಮಾಡಲಿರುವ ಇಷ್ವಗಣವನ್ನೂ, ಅಲ್ಪಪ್ರಾಣಿಗಳಾದ ನಮ್ಮ ಮೇಲೆ ಪ್ರಯೋಗಿಸ ಬೇಡ. ನಾವು ಅದನ್ನು ಎಷ್ಟುಮಾತ್ರಕ್ಕೂ ತಡೆಯಲಾರೆವು. ನಮ್ಮ ಮೇಲೆ ಅದನ್ನು ಪ್ರಯೋಗಿಸದೆ, ಎಲ್ಲವನ್ನೂ ನಿನ್ನ ಬತ್ತಳಿಕೆಯಲ್ಲಿಯೇ ಅಡಗಿಸಿಬಿಡು. ಅದರಿಂದ ನಾವು ಧನ್ಯರೆನಿಸುವೆವು. ಮಹಾಬಲಶಾಲಿಯೇ, ನಿನಗೆ ನಮಸ್ಕಾರ.॥೪೪॥

ಮಹೇಶ್ವರನೇ, ನೂರಾರು ಸಂಖ್ಯೆಯ ಬತ್ತಳಿಕೆಗಳಲ್ಲಿ ಅಸಂಖ್ಯಾತವಾದ ಬಾಣಗಳು ಅಡಗಿ ಅವು ನಿನ್ನ ವಶದಲ್ಲಿವೆ. ನೀನು ಸಹಸ್ರಾಕ್ಷನು. ಅಂತಹ ಬಾಣಸಜ್ಜಿತವಾದ ಬಿಲ್ಲನ್ನು ಮೌರ್ವೀರಹಿತವನ್ನಾಗಿ ಮಾಡು. ಬಾಣಗಳೆಲ್ಲಾ ಶಾಂತವಾಗಿರುವಂತೆ ಆಜ್ಞಾಪಿಸು. ಸದಾ ನಿನ್ನ ಪ್ರಸಾದವನ್ನೇ ಅಪೇಕ್ಷಿಸುವ ನಮ್ಮಲ್ಲಿ ನೀನು ಶಾಂತಮನಸ್ಕನಾಗಿದ್ದು, ನಮ್ಮ ಸಹಸ್ರಾರು ಅಪರಾಧಗಳನ್ನು ಕ್ಷಮಿಸು. ನಮ್ಮಲ್ಲಿ ದಯೆಯಿಡು. ಇದೇ ನಮ್ಮ ಪ್ರಾರ್ಥನೆ. ॥೪೫॥

ಭಕ್ತರ ವಿಷಯದಲ್ಲಿ ಸುಪ್ರೀತನಾಗಿರುವ ಮಹಾದೇವನ ಪಿನಾಕವೆಂಬ

ಬಾಣೈಃ ಪೂರ್ಣತರೋಪಿ ವೀತಿನಿಶಿಖೋ ಭೂಯಾತ್ತದೀಯಾಶ್ಚ ಯಾ
ದೇವಸ್ಯೈವ ಪರೇಷವೋಪ್ಯಪಹತಾಸ್ತಾಃ ಸಂತು ಲೀನಾಶ್ರವಾತ್ ॥೪೬॥

ತೀಕ್ಷ್ಣಾಗ್ರೋಪಿ ಮಹಾಸಿರದ್ಯ ಭಜತಾಂ ಭಕ್ತೇಷು ಮಂದಾರತಾಂ
ಕೋಶಃ ಖಡ್ಗಸಹಾಯವಾನಪಿ ವಿನಾ ಭೂತೋಽಸ್ತು ತೇನಾಧುನಾ ।
ಏವಂ ಶಾಂತಮನಾಃ ಪ್ರಶಾಂತವಿವಿಧಾನೇಕಾಯುಧಾಃ ಸಂತತಂ
ಭಕ್ತಾನ್ನಃ ಶರಣಾಗತಾನ್ ಕರುಣಯಾ ಪಾಯಾದಪಾಯಾಚ್ಛಿವಃ ॥೪೭॥

ಯುದ್ಧವೈರಿಭಯಾಪಹಂ ಪ್ರಣಮತಾಂ ಶ್ರೀರುದ್ರಮಾರಾಧಿತಂ
ದೇವಂ ನಾರದನಾಮಕೇನ ಮುನಿನಾ ನಾನಾಯುಧಾಲಂಕೃತಂ ।

---

ದೊಡ್ಡ ಧನುಸ್ಸು ಹಿಂದೆ ತ್ರಿಪುರಾಸುರ ದಹನಕಾಲದಲ್ಲಿ ಸದಾ ಬಾಣದಿಂದ ಕೂಡಿ ಶತ್ರುಸಂಹಾರಕವೆನಿಸಿದ್ದಿತು. ಆದರೆ ಈಗ ಭಕ್ತರನ್ನುದ್ಧರಿಸುವ ಕಾರ್ಯದಲ್ಲಿ ಮಾತ್ರ ಅದೇ ಧನುಸ್ಸು ಶಾಂತವಾಗಿ ಬಾಣರಹಿತವಾಗಿರಲಿ. ಬತ್ತಳಿಕೆಗಳೂ ಕೂಡ ಭಕ್ತಾನುಗ್ರಹ ಮಾಡುವ ಕಾಲದಲ್ಲಿ ಬಾಣಗಳಿಲ್ಲದೆ ಶಾಂತವಾಗಿರಲಿ. ಪರಶಿವನ ಬಾಣಗಳೂ ಕೂಡ ಭಕ್ತರ ಪ್ರಸ್ತಾಪ ಬಂದಾಗ ಇದ್ದಲ್ಲಿಯೇ ಶಾಂತವಾಗಿಹೋಗಲಿ. ಹೀಗೆ ಪರಶಿವನ ಧನುಸ್ಸು, ಬಾಣ, ಬತ್ತಳಿಕೆ ಇವೆಲ್ಲವೂ ಶಾಂತರೀತಿಯಿಂದಿದ್ದು ಭಕ್ತರಿಗೆ ವರಪ್ರದಗಳಾಗಿ ಪರಿಣಮಿಸಲಿ. ॥೪೬॥

ಪರಶಿವನ ಖಡ್ಗವು ಕ್ರೂರವಾದ ಅಲುಗುಳ್ಳದ್ದಾದರೂ ಭಕ್ತರವಿಷಯದಲ್ಲಿ ಮಂದಾರ ವೃಕ್ಷದಂತೆ ಈಪ್ಸಿತಾರ್ಥಪ್ರದವಾಗಿರಲಿ. ಕತ್ತಿಯನ್ನಿಡುವ ಒರೆಯೂ ಕೂಡ ಕತ್ತಿಯಿಲ್ಲದ್ದಾಗಿ ಈಶ್ವರಾನುಚರನಾದ ಒಂದು ಭೂತದಂತೆ ಕಂಡುಬರಲಿ. ಪರಶಿವನ ಸಕಲ ಆಯುಧಗಳೂ ಭಕ್ತರವಿಷಯದಲ್ಲಿ ಶಾಂತರೀತಿಯಿಂದ ವರ್ತಿಸಲಿ. ಹೀಗೆ ಸರ್ವಾಂಶದಿಂದಲೂ ಸಾಧುವಾಗಿ ಕಂಡುಬರುವ ಮಹಾದೇವನು ಶರಣಾಗತರಾದ ಭಕ್ತರನ್ನು ಕಾಪಾಡುತ್ತಾ, ಅವರಿಗೆ ಒದಗುವ ಸಕಲ ಅಪಾಯಗಳಿಂದಲೂ ಪಾರುಮಾಡಲಿ. ॥೪೭॥

ತನ್ನ ಭಕ್ತರಿಗೆ ಯುದ್ಧಭಯವನ್ನೇ ನಾಶಗೊಳಿಸುವ ಪರಮೇಶ್ವರನು ನಾರದ ಮಹಾಮುನಿಯಿಂದ ವಿಶೇಷವಾಗಿ ಆರಾಧಿಸಲ್ಪಟ್ಟಿರುವನು. ಅವನಲ್ಲಿ ನಾನಾವಿಧವಾದ ಆಯುಧಗಳು ವಿರಾಜಿಸುತ್ತಿರುವುವು. ಕೋಟಿಸೂರ್ಯರಂತೆ ಪ್ರಕಾಶಿಸುತ್ತಾ, ಕಾಂತಿಯನ್ನು ಬೀರುವ ಶಿರಸ್ಸಿನಿಂದ ವಿರಾಜಿಸುತ್ತಾ, ಭಯಂಕರವಾದ ಸರ್ಪವನ್ನೇ

ಉದ್ಯದ್ಭಾಸ್ಕರಕೋಟಿದೀಧಿತಿತನುಂ ದೀಪ್ತೋತ್ತಮಾಂಗೋಜ್ಜ್ವಲ
ತ್ಕಾಂತಿಂ ಭೀಷಣಭೋಗಿಭೂಷಣಮಹಂ ಧ್ಯಾಯಾಮಿ ಭಕ್ತೇಷ್ಟದಂ ॥೪೮॥

ಯಾತೇ ಹೇತಿರ್ಮೀಢುಷ್ಟಮ

ಹೇ ಮೀಢುಷ್ಟಮ ರುದ್ರ ಹೇತಿರಧುನಾ ಹಸ್ತೇ ತವಾಸ್ತೇ ಧನು
ರ್ನಾಮ್ನೀಯಾ ಪ್ರಣತಾರ್ತಿದುಃಖಭಯರೋಗೈಕಾಪಹಂತ್ರ್ಯ ತಯಾ ।
ಅಸ್ಮಾನ್ ಪುತ್ರಕಳತ್ರಮಿತ್ರಸಹಿತಾನ್ ಸರ್ವಾನ್ ಪ್ರಸನ್ನಾನ್ ಸದಾ
ಸರ್ವಸ್ಮಾದ್ದುರಿತಾಚ್ಚ ರಕ್ಷ ಭಗವನ್ ದೀನಾನ್ ದಯಾಂಭೋನಿಧೇ ॥೪೯॥

ನಮಸ್ತೇ ಅಸ್ತ್ವಾಯುಧಾಯ

ಸ್ವಾಮಿನ್ ರುದ್ರ ನಮೋಽಸ್ತು ದೇವ ಧನುಷೇ ಚಾನಾತತಜ್ಯಾಯತೇ
ಚೋದ್ಯುಕ್ತಾಯ ಶರಾಯ ಚೋದ್ಯತಗದಾಚಕ್ರಾದಿಸಂಘಾಯ ಚ ।
ದುಷ್ಟಾನ್ ಧರ್ಷಯತೇ ದೃಢಾಯ ವಿವಿಧಾಯೈವಂ ವಿಧಾಯಾಯುಧ
ಸ್ತೋಮಾಯಾದ್ಯ ನಮೋಽಸ್ತು ತೇಽದ್ಯ ಭಗವನ್ ಯಾಭ್ಯಾಂ ರಿಪೂನ್ನಿಘ್ನಸಿ
॥೫೦॥

---

ಆಭರಣವನ್ನಾಗಿಮಾಡಿಕೊಂಡಿರುವ ಭಕ್ತೇಷ್ಟಾರ್ಥಪ್ರದನಾದ ಮಹೇಶ್ವರನನ್ನು ನಾನು ಯಾವಾಗಲೂ ಧ್ಯಾನಿಸುತ್ತಿರುವೆನು. ॥೪೮॥

ಸಕಲ ದೇವತೆಗಳಿಂದಲೂ ಸ್ತುತಿಸಲ್ಪಡುವ ಮಹಾದೇವನೇ, ನೀನು ಸಮಸ್ತರಿಗೂ ಭಯಂಕರನಾಗಿ ಕಾಣುವೆ. ನಿನ್ನ ಕೈಯ್ಯಲ್ಲಿ ಅತ್ಯಂತ ಬಲಿಷ್ಠವಾದ ಧನುಸ್ಸು ಸದಾ ಸಿದ್ಧವಾಗಿರುವುದು. ತನಗೆ ನಮಸ್ಕರಿಸಿದವರ ದುಃಖವನ್ನು ನಿವಾರಿಸುವ ಆ ಧನುಸ್ಸು ಶಾಂತವಾಗಿದ್ದು, ನಮ್ಮನ್ನು ರಕ್ಷಿಸಲಿ. ಮಹಾದೇವನೇ, ಪುತ್ರಕಳತ್ರಮಿತ್ರಸಹಿತರಾದ ನಮ್ಮಂತಹ ಭಕ್ತರ ಸಕಲ ಪಾಪರಾಶಿಯನ್ನೂ ನಿರ್ಮೂಲಗೊಳಿಸಿ, ದಯಾದೃಷ್ಟಿಯಿಂದ ನಮ್ಮನ್ನು ಸಂರಕ್ಷಿಸುವವನಾಗು. ದೀನರಾದ ನಿನ್ನ ಭಕ್ತರನ್ನು ಉದ್ಧರಿಸು. ॥೪೯॥

ಮಹಾದೇವನೇ, ನಿನಗೆ ವಂದನೆ. ಸದಾ ಸಜ್ಜಾಗಿರುವ ನಿನ್ನ ಧನುಸ್ಸಿಗೂ ವಂದನೆಗಳು. ಶತ್ರುಸಂಹಾರಕಾರ್ಯಕ್ಕೆ ಮುಂದುವರಿಯುತ್ತಿರುವ ಬಾಣಗಳಿಗೂ ಶಂಖಚಕ್ರಾದಿ ಸಕಲ ಆಯುಧಜಾಲಗಳಿಗೂ ಪ್ರಣಾಮಗಳು. ದುಷ್ಟರನ್ನು ನಾಶಗೊಳಿಸುವ ಸಮಸ್ತ ಆಯುಧಗಳಿಗೂ ನಮಸ್ಕಾರ. ಮಹಾದೇವನೇ, ಯಾವ

ಬಾಹುಭ್ಯಾಂ ಬಿಭಿಮೋ ವಯಂ ತವ ಧನುರ್ಬಾಣೋದ್ಧೃತಾಭ್ಯಾಂ ತತಃ ।
ಸತ್ಸ್ವನ್ಯೇಷು ಮಹಾಭುಜೇಷ್ವಪಿ ಮುಹುಸ್ತಾಭ್ಯಾಮುಭಾಭ್ಯಾಂ ನಮಃ ।
ಯುಷ್ಮಾದ್ದಕ್ಷಿಣವಾಮಬಾಹುನಿವಹಾಭ್ಯಾಂ ತೇ ನಮಃ ಕೃತ್ಸ್ನಶಃ ।
ತಸ್ಮೈ ಚೋತ್ತಮಸಾಯಕಾಯ ಧನುಷೇ ತಸ್ಮೈ ನಮಃ ಕುರ್ಮಹೇ ॥೫೦॥

ಪರಿತೇ ಧನ್ವಸಃ

ಸ್ವಾಮಿನ್ನದ್ಯ ವಯಂ ಪುನಃ ಪುನರಿದಂ ಚಾಶಾಸ್ಯಮಾಶಾಸ್ಮಹೇ ।
ಯಃ ಪಾರ್ಶ್ವೇಽಸ್ತಿ ತವೇಷುಧಿಸ್ತ ಇಷವೋ ಯಾಸ್ತಾಶ್ಚ ದೂರೇ ಪುನಃ ।
ವ್ಯೂಹೇ ವೈರಿಜನಸ್ಯ ಪಾತಯ ತಥಾ ಹಿಂಸಾಪಿ ತೇ ಧನ್ವನ ।
ಸ್ತ್ರೈವಾಸ್ಮಿಹ ಪುತ್ರಪೌತ್ರಸಹಿತಾನ್ ಪುಷ್ಣಾತು ನಃ ಸರ್ವತಃ ॥೫೨॥

---

ಧನುರ್ಬಾಣಗಳಿಂದ ಶತ್ರುಗಳನ್ನು ನಾಶಗೊಳಿಸುವೆಯೋ, ಅಂತಹ ನಿನ್ನ ಧನುರ್ಬಾಣಗಳಿಗೆ ಸದಾ ನಮಸ್ಕಾರಮಾಡುತ್ತಿರುವೆನು. ॥೫೦॥

ಮಹಾದೇವನೇ, ನಿನಗೆ ಅನೇಕ ಭುಜಗಳಿದ್ದರೂ ನಾವು ಯಾವ ಭುಜಗಳಿಗೂ ಹೆದರುವುದಿಲ್ಲ. ಯಾವ ನಿನ್ನ ತೋಳುಗಳಲ್ಲಿ ಧನುಸ್ಸು ಮತ್ತು ಬಾಣ ಇವು ಕಂಡುಬರುವುವೋ ಅಂತಹ ಎರಡು ತೋಳುಗಳಿಗೆ ಮಾತ್ರ ನಾವು ಹೆದರುವೆವು. ಅಂತಹ ಧನುರ್ಬಾಣವಿಶಿಷ್ಟಗಳಾದ ಎಡ ಮತ್ತು ಬಲಭುಜಗಳಿಗೆ ಮಾತ್ರ ನಮಸ್ಕಾರವು. ಇದೇ ರೀತಿ ಉತ್ತಮವಾದ ಬಾಣದಿಂದ ಕೂಡಿ ಪ್ರಕಾಶಿಸುವ ನಿನ್ನ ಬಲಿಷ್ಠವಾದ ಧನುಸ್ಸಿಗೂ ಭಕ್ತಿಯಿಂದ ನಮಸ್ಕರಿಸುವೆನು. ಅಂತಹ ನಿನ್ನ ಬಾಹುಗಳು, ಧನುರ್ಬಾಣಗಳು ನಮಗೆ ಶಾಂತಿಯನ್ನುಂಟುಮಾಡಲಿ. ॥೫೧॥

ಮಹಾದೇವನೇ, ನಿನ್ನಲ್ಲಿ ಇಷ್ಟನ್ನು ಮಾತ್ರ ನಾವು ಸದಾ ಪ್ರಾರ್ಥಿಸಿಕೊಳ್ಳುವೆವು. ನಿನ್ನ ಸಮೀಪದಲ್ಲಿರುವ ಬಾಣಗಳಿಗೂ, ದೂರದಲ್ಲಿ ನಿನಗಾಗಿ ಕಾದು ನಿಂತಿರುವ ಧನುರ್ಬಾಣಗಳಿಗೂ ನಿಜವಾಗಿ ವಂದಿಸುವೆವು. ಆ ಧನುರ್ಬಾಣಗಳು ನಿನ್ನ ಶತ್ರುಗಳಾದವರ ಸೈನ್ಯಸಮೂಹದಲ್ಲಿ ಬಿದ್ದು ಅವರನ್ನೆಲ್ಲಾ ಧ್ವಂಸಮಾಡಲಿ. ಇದರಿಂದ ಲೋಕಕ್ಕೇ ಉಪಕಾರವಾಗುವುದು. ಆದರೆ ನಿನ್ನ ಭಕ್ತರಾಗಿ ಸದಾ ನಿನ್ನನ್ನೇ ಆಶ್ರಯಿಸಿಕೊಂಡಿರುವ ಪುತ್ರಪೌತ್ರಸಹಿತರಾದ ನಮ್ಮನ್ನಾದರೋ ಆ ನಿನ್ನ ಧನುರ್ಬಾಣಗಳು ವಿಚಕ್ಷಣೆಯಿಂದ ರಕ್ಷಿಸಲಿ. ॥೫೨॥

ತುಭ್ಯಂ ದೇವ ಸದಾ ನಮೋಽಸ್ತು ಭಗವನ್ ವಿಶ್ವೇಶ್ವರಾಯ ಸ್ಮರ ।
ಧ್ವಹ್ನ್ಯರ್ಕೇಂದುದೃಶೇ ಪುರತ್ರಯಭಿದೇ ಕಾಲಾಗ್ನಿರುದ್ರಾಯ ಚ ।
ಕ್ಷ್ವೇಳಶ್ಯಾಮಳಕಂಧರಾಯ ಮಹತಾಂ ದೇವಾಯ ಸರ್ವೇಶ್ವರಾ
ಯೇಶಾನಾಯ ಸದಾ ಶಿವಾಯ ಮಹತೇ ದೇವಾಯ ತಸ್ಮನ್ನಮಃ ॥೫೩॥

ಸ್ವಾತ್ಮಾನಂ ಹೃದಿ ಭಾವಯಂತಮನಿಶಂ ರುದ್ರಂ ಮುಹುರ್ಧ್ಯಾಯತಾಂ
ಯುದ್ಧೇ ಸರ್ವರಿಪುಪ್ರಣಾಶನಮರಿಸ್ಥಾನೈಕವಿಧ್ವಂಸನಂ ।
ನಮ್ರಾಶೇಷಸುರೇಂದ್ರಮೌಲಿವಿಲಸತ್ಪಾದಾಂಬುಜಂ ಕಾರಣಂ
ಸರ್ವೇಷಾಂ ಜಗತಾಂ ಪಿನಾಕಿಸಮುಹಂ ಧ್ಯಾಯಾಮಿ ಸಾಂಬಂ ಪ್ರಭುಂ ॥೫೪॥

ಚಂದ್ರೋತ್ತಂಸಮಚಿಂತ್ಯಮಕ್ಷಯಮಜಂ ಸಂಸಾರದುಃಖಾಪಹಂ
ಮಧ್ಯೇ ಶುದ್ಧಸುಧಾಂಶುವಾರ್ಧಿಶಯನಂ ತಂ ಸಸ್ಮಿತಂ ಚಿಂತಯೇ ।
ಚಾರುಸ್ಮೇರಮುಖಂ ಸುಮೌಕ್ತಿಕನಿಭಂ ಮಧ್ಯೇ ಸುಧಾಮಂಡಲ
ಸ್ಯಾಸೀನಂ ಜಗದೇಕರಕ್ಷಣಪದಂ ಧ್ಯಾಯಾಮಿ ಸಾಂಬಂ ಸದಾ ॥೫೫॥

---

ಷಡ್ಗುಣೈಶ್ವರ್ಯಸಂಪನ್ನನೂ, ಸೋಮಸೂರ್ಯಾಗ್ನಿಲೋಚನನೂ ತ್ರಿಪುರನಾಶಕನೂ ಕಾಲಾಗ್ನಿರುದ್ರನೂ ಆದ ಮಹೇಶ್ವರನೇ, ನಿನ್ನ ಕಂಠಭಾಗವು ವಿಷದಿಂದ ಕಪ್ಪುಬಣ್ಣವನ್ನು ಪಡೆದಿದೆ. ನೀನು ಸಮಸ್ತ ಲೋಕಕ್ಕೂ ಸಂಪೂರ್ಣ ತೇಜಸ್ಸಿಗೂ ಒಡೆಯನೆನಿಸಿರುವೆ. ನೀನು ಸರ್ವದಾ ಮಂಗಳಕರನು ಇಂತಹ ಮಹಾಮಹಿಮನಾದ ನಿನಗೆ ಬಾರಿಬಾರಿಗೂ ವಂದನೆಗಳು. ||೫೩||

ಆತ್ಮಜ್ಞಾನಪರಾಯಣನಾಗಿ ಆತ್ಮಾನಂದದಲ್ಲಿ ಸದಾ ಮುಳುಗಿರುವವನು ಮಹಾದೇವನು. ಅಂತಹ ಮಹೇಶ್ವರನನ್ನು ಸರ್ವದಾಧ್ಯಾನಮಾಡಿರಿ. ಮಹೇಶನಾಮಸ್ಮರಣೆಯು ಯುದ್ಧದಲ್ಲಿ ಸಮಸ್ತ ಶತ್ರುಗಳನ್ನೂ ನಾಶಗೊಳಿಸತಕ್ಕದು. ಶತ್ರುಸಮೂಹ ನಾಶಕನೇ ಪರಶಿವನು. ಇಂದ್ರಾದಿ ಸಮಸ್ತ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟವನು. ಸಮಸ್ತ ಲೋಕದ ಸೃಷ್ಟಿಗೆ ಮೂಲಕಾರಣನು. ಇಂತಹ ಪಿನಾಕಧನುರ್ಧಾರಿಯಾದ ಮಹಾದೇವನನ್ನು ನಾನು ತಪ್ಪದೆ ಧ್ಯಾನಿಸುವೆನು. ಮತ್ತು ಅವನನ್ನೇ ಮೊರೆಹೋಗುವೆನು. ||೫೪||

ಚಂದ್ರಶೇಖರನೂ, ಊಹೆಗೆ ಸಿಲುಕದವನೂ, ನಾಶರಹಿತನೂ, ಉತ್ಪತ್ತಿಶೂನ್ಯನೂ, ಸಂಸಾರದುಃಖವನ್ನು ನಿವಾರಿಸುವವನೂ ಆದ ಮಹಾದೇವನು

ಶ್ರೀರುದ್ರಾದಿಪದಾರ್ಥಬೋಧನ ಶಿವಧ್ಯಾನಾನುಸಂಧಾನ ವಿ
ಜ್ಞಾನಾನಂದ ವಿಧಾನಪಾವನತಮಃ ಸ್ವಾಂತೇನ ಕಾಂತೇನ ಚ ।
ವಿಶ್ವೇಶಸ್ಮರಣಾದರೇಣ ವಶಿನಾ ಜ್ಞೇಯೋರ್ಥ ವಿಷ ಕ್ರಮಾತ್
ಶಾಂತೇನೈವ ವಿಭೂತಿಭೂಷಣಮಹಾಲಿಂಗಾರ್ಚಕೇನ ತ್ವಯಾ ॥೫೬॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀ ಸಂವಾದೇ
ಶ್ರೀ ಸ್ಕಂದಕೃತ ರುದ್ರಾರ್ಥನಿರೂಪಣೇ ಪ್ರಥಮಾನುವಾಕಭಾಷ್ಯೇ
ಷಡ್ವಿಂಶೋಽಧ್ಯಾಯಃ

---

ಅಮೃತಸಮುದ್ರದ ಮಧ್ಯಭಾಗದಲ್ಲಿ ಸುಖಶಯನದಲ್ಲಿ ನೆಲಸಿರುವನು. ಆತನು ಸದಾ ಮುಗುಳ್ನಗೆಯಿಂದ ಕೂಡಿ ರತ್ನಮಯವಾದ ಆಭರಣಗಳಿಂದ ರಂಜಿಸುತ್ತಾ ಪಾರ್ವತೀಸಹಿತನಾಗಿ ಜಗದ್ರಕ್ಷಣಪರವಾದ ಆಲೋಚನೆಯಲ್ಲಿಯೇ ನಿರತನಾಗಿರುವನು. ಇಂತಹ ಮಹಾದೇವನನ್ನು ನಾನು ಸರ್ವದಾ ವಂದಿಸುವೆನು. ॥೫೫॥

ರುದ್ರಾಧ್ಯಾಯದಲ್ಲಿರುವ ಪ್ರತಿಪದದ ಅರ್ಥವನ್ನೂ ಸಂಪೂರ್ಣವಾಗಿ ಅರಿತು ಸದಾ ಶಿವಧ್ಯಾನಾನುಸಂಧಾನಮಾಡಿ, ಅದರಿಂದ ಲಭಿಸಿದ ವಿಜ್ಞಾನಾನಂದದ ಸವಿಯನ್ನು ಅನುಭವಿಸಿ, ಅದರಿಂದ ತಮ್ಮ ಮನಸ್ಸನ್ನು ಯಾರು ಪವಿತ್ರೀಗೊಳಿಸಿಕೊಂಡಿರುವರೋ, ಅಂತಹ ಜಿತೇಂದ್ರಿಯರು ಈ ಅಧ್ಯಾಯದ ಅರ್ಥವನ್ನು ಸಂಪೂರ್ಣವಾಗಿ ತಿಳಿಯುವವರಾಗುತ್ತಾರೆ. ಜೈಗೀಷವ್ಯಮಹರ್ಷಿಯೇ, ಭಸ್ಮಭೂಷಿತನಾಗಿಯೂ, ಶಿವಲಿಂಗಾರ್ಚನೆಯಿಂದ ಪುಣ್ಯಶಾಲಿಯಾಗಿಯೂ ಇರುವ ನಿನಗೆ ಈ ಅಧ್ಯಾಯವನ್ನು ಕೇಳಿ, ತತ್ಪ್ರಯುಕ್ತವಾದ ಶಿವಧ್ಯಾನಾಮೃತಪಾನ ಮಾಡುವ ಅರ್ಹತೆಯಿದೆ. ಆದ್ದರಿಂದಲೇ ನಿನಗೆ ಈ ಎಲ್ಲಾ ವಿಷಯವನ್ನೂ ಸ್ಪಷ್ಟವಾಗಿ ತಿಳಿಯುವಂತೆ ಹೇಳಿರುವೆನು. ಎಂದು ಕುಮಾರಸ್ವಾಮಿಯು ಜೈಗೀಷವ್ಯಮಹಾಮುನಿಗೆ ರುದ್ರಾಧ್ಯಾಯದ ಅರ್ಥವನ್ನು ವಿವರಿಸಿ ಹೇಳಿದನು. ॥೫೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ
ಶಿವಗೌರೀ ಸಂವಾದರೂಪವಾಗಿ ಸ್ಕಂದಕೃತ ರುದ್ರಾರ್ಥನಿರೂಪಣೆ ಎಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಸಪ್ತವಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಸ್ವಾಮೀ ತ್ವಂ ಸ್ವಮಿದಂ ಜಗತ್ತದಧುನಾ ಶಕ್ತೋಽಪಿ ಸನ್ಮನ್ಯುನಾ
ಸಂಹರ್ತುಂ ಕೃಪಯಾ ವಿಭೂತಿವಿಭವೈರ್ವ್ಯಾಪ್ಯೋಗ್ರಶಾಂತಾತ್ಮಭಿಃ ।
ಕುರ್ವನ್ನಿಗ್ರಹಮಪ್ಯನುಗ್ರಹಮವಶ್ಯೇತಚ್ಛಿವತ್ವಂ ಪ್ರಭೋ
ತಸ್ಮೈ ತೇಽಸ್ತು ನಮೋ ಹಿರಣ್ಯಪತಯೇ ತುಭ್ಯಂ ಹಿರಣ್ಯಾತ್ಮನೇ ||೧||

ಅಂಗಂ ಯಸ್ಯ ಹಿರಣ್ಯಭೂಷಣಗಣೈರ್ದೀಪ್ತಂ ಹಿರಣ್ಯಂ ಪ್ರಭಂ
ಬಾಹೂ ಹೃದ್ಯತಮೌ ಹಿ ತೌ ಚ ರಮಣೀಯೌ ಭಕ್ತಿಭಾಜಾಂ ಸತಾಂ ।

---

## ಇಪ್ಪತ್ತೇಳನೆಯ ಅಧ್ಯಾಯ

ಸ್ವಾಮಿಯೇ, ಈ ಜಗತ್ತೆಲ್ಲವೂ ನಿನ್ನ ಐಶ್ವರ್ಯವೇ. ಇಂತಹ ಜಗತ್ತನ್ನು ಶಾಂತಾತ್ಮನಾಗಿ ರಕ್ಷಿಸುವೆ. ಉಗ್ರಾತ್ಮನಾಗಿ ನಾಶಗೊಳಿಸುವೆ. ದಯಾರಸಪೂರ್ಣನಾಗಿ ಅಭಿವೃದ್ಧಿಗೊಳಿಸುವೆ. ದುಷ್ಟರನ್ನು ನಿಗ್ರಹಿಸುತ್ತಲೂ, ಶಿಷ್ಟರನ್ನು ಅನುಗ್ರಹಿಸುತ್ತಲೂ, ಜಗದ್ರಕ್ಷಣೆಮಾಡುತ್ತಿರುವುದರಿಂದಲೇ ನಿನ್ನಲ್ಲಿ ಶಿವತ್ವವು ಲೋಕಪ್ರಸಿದ್ಧವಾಗಿರುವುದು. ಇಂತಹ ಮಹಾಮಹಿಮನಾದ ಹಿರಣ್ಯರೂಪಿಯೂ ಹಿರಣ್ಯಾತ್ಮಕನೂ ಆದ ನಿನಗೆ ನಮಸ್ಕಾರ. ||೧||

ಪುಣ್ಯಾಪುಣ್ಯಗಳ ಫಲವನ್ನು ಅನುಭವಿಸುತ್ತಿರುವ ದೇವತೆಗಳಿಗೂ ಮಾನವರಿಗೂ, ಯಕ್ಷರಾಕ್ಷಸಪಿಶಾಚಕಿನ್ನರ ಫಣೀಂದ್ರಾದಿಗಳಿಗೂ, ಪಿತೃಗಳಿಗೂ ನಿನ್ನ ಶರೀರವೆಲ್ಲಾ ಹಿರಣ್ಮಯವಾಗಿಯೇ ಕಾಣುತ್ತಿರುವುದು. ನಿನ್ನಲ್ಲಿ ಅಸಾಧಾರಣ

ಪುಣ್ಯಾಪುಣ್ಯವಿಮಿಶ್ರಕರ್ಮಫಲಭೋಕ್ತ್ರೂಣಾಂ ಸುರಾಣಾಂ ನೃಣಾಂ
ರಕ್ಷೋ ಯಕ್ಷಪಿಶಾಚಕಿನ್ನರಫಣೀಂದ್ರಾಣಾಂ ಪಿತ್ರೂಣಾಮಪಿ ॥೨॥

ಸಂಘಾತಾನ್ ವಿವಿಧಾನ್ ವಿಧಾಯ ಬಹುಧಾ ಸೇನಾಃ ಸ್ವಕೀಯಾಃ ಸ್ವಯಂ ।
ಸ್ವಾಮಿತ್ವೇನ ಚ ಸಂಸ್ಥಿತೋ ನಯತಿ ತಾನ್ ಬಹ್ವೀರ್ಗತೀರ್ಯಸ್ಸದಾ ।
ಯಶ್ಚೇಂದ್ರಾದಿದಿಗೀಶ್ವರಾತ್ಮಕತಯಾ ಸರ್ವಾದಿಶಃ ಪಾಲಯನ್ ।
ಆದಿತ್ಯಾತ್ಮತಯೋದಯಾಸ್ತಮಯಸಂಚಾರೈರ್ದಿಶಃ ಕಲ್ಪಯನ್ ॥೩॥

ಪ್ರತ್ಯಕ್ಷಃ ಸದುಪಾಸ್ಯಮೂರ್ತಿರಿಹ ಯಸ್ತೇಜೋನಿಧಿರ್ದೃಶ್ಯತೇ ।
ತಸ್ಮೈ ತೇಸ್ತು ನಮೋನಮಃ ಕ್ಷಿತಿತಲೇ ರುದ್ರಾಸ್ತ್ವದಂಶಾಃ ಪರೇ ॥೪॥

"ನಮೋ ವೃಕ್ಷೇಭ್ಯೋ"

ಯೇ ವೃಕ್ಷಾಕೃತಯೋ ವಸಂತಿ ವಿವಿಧಾ ವೃಕ್ಷೇಷು ವಾ ಸಂಸ್ಥಿತಾಃ ।

---

ಭಕ್ತಿಯಿಟ್ಟಿರುವವರಿಗೆ ನಿನ್ನ ಬಾಹುಗಳು ಅತ್ಯಂತ ಮನೋಹರವಾಗಿಯೂ, ಸುಂದರತಮವಾಗಿಯೂ ಕಂಡುಬರುವುವು. ಮಹಾದೇವನೇ, ಇಂತಹ ಮಹಾತ್ಮನಿಗೆ ವಂದನೆಗಳು. ॥೨॥

ತನ್ನ ಪ್ರಮಥಗಣಸೈನ್ಯವನ್ನೆಲ್ಲಾ ತಂಡತಂಡವಾಗಿ ಮಾಡಿ, ಆಭಾಗಕ್ಕೆಲ್ಲಾ ತಾನೊಬ್ಬನೇ ಸೇನಾಪತಿಯಾಗಿ ನಿಂತು ಆ ಸೈನ್ಯವನ್ನೆಲ್ಲಾ ನಾನಾಗತಿಗಳಿಂದ ತಿರುಗಿಸಿ ರಕ್ಷಿಸುತ್ತಿರುವವನು ಪರಶಿವನೇ. ಇಂದ್ರಾದಿಅಷ್ಟದಿಕ್ಪಾಲಕರ ರೂಪವನ್ನು ಪಡೆದು, ಆ ದಿಕ್ಕುಗಳಲ್ಲೆಲ್ಲಾ ನಿಂತು ಅವುಗಳನ್ನು ಕಾಪಾಡುವವನೂ ಮಹೇಶ್ವರನೇ. ಸೂರ್ಯರೂಪದಿಂದಿದ್ದು, ಉದಯಾಸ್ತಮಯಗಳಿಂದ ಸಮಸ್ತ ಪ್ರಪಂಚಕ್ಕೂ ಸಾಕ್ಷಿಯಾಗಿರುವವನೂ ಪರಮೇಶ್ವರನೇ. ಇಂತಹ ಮಹಾದೇವನಿಗೆ ಸರ್ವದಾ ವಂದನೆಗಳು. ॥೩॥

ತೇಜೋರಾಶಿಯಾಗಿ ಪ್ರತ್ಯಕ್ಷದೈವವೆನಿಸಿದ ಸೂರ್ಯರೂಪದಿಂದಿರುವ ಮಹಾದೇವನೇ, ನಿನಗೆ ನಮಸ್ಕಾರ. ಇನ್ನೂ ಏಕಾದಶರುದ್ರರೆನಿಸಿರುವ ದೇವತೆಗಳೆಲ್ಲಾ ನಿನ್ನ ಅಂಶಸಂಭೂತರೇ. ಹೀಗೆ ನಾನಾರೂಪದಿಂದ ಪ್ರಪಂಚವನ್ನೇ ವ್ಯಾಪಿಸಿರುವ ಮಹೇಶನೇ, ನಿನಗೆ ನಮಸ್ಕಾರ. ॥೪॥

ಮರಗಳ ಆಕಾರದಿಂದಲೂ, ಮರಗಳಲ್ಲಿ ಅಡಗಿರುವ ಪ್ರಾಣಿಗಳರೂಪದಿಂದಲೂ, ಚತುರ್ಮುಖಬ್ರಹ್ಮನಿಂದ ಹಿಡಿದು ಇರುವೆಗಳ ಪರ್ಯಂತ ಇರುವ ಸಕಲ

ಯೋ ಬ್ರಹ್ಮಾದಿಪಿಪೀಲಿಕಾಂತನಿಖಿಲಪ್ರಾಣ್ಯಾತ್ಮಕಾಶ್ಚೇತನಾಃ ।
ಭೋಗಾಂತೇ ನಿಜಕರ್ಮಣೋ ನಿಯತಿನಾ ನಾವೃಶ್ಚ್ಯಮಾನಾ ಮುಹುಃ ॥೫॥

ಯೇ ರುದ್ರಾ ಹರಿತಾಭ್ರಕೇಶನಿವಹಾಸ್ತೇಭ್ಯೋಽಪಿ ಯೋಽಸೌ ಪಶುಃ ।
ಬ್ರಹ್ಮಾದೀನಪಿ ಪಾತಿತೈಶ್ಚ ರಮತೇ ತೇಷಾಂ ಪ್ರಧಾನಃ ಪತಿಃ ।
ತಸ್ಮೈ ವಿಶ್ವಭುಜೇ ನಮೋ ನಮ ಇದಂ ಪ್ರತ್ಯಗ್ರಶಷ್ಪಾಂಕುರ ।
ಶ್ರೇಣೀ ಪಿಂಜರಮೂರ್ತಯೇತಿ ವಿಮಲಜ್ಯೋತಿರ್ಮಯಾಂ ಗಾಯತೇ ॥೬॥

ಚಿದ್ರೂಪಾಯ ಚಿದಾತ್ಮನೇ ಸ್ವಯಮಭಿವ್ಯಕ್ತಾಯ ಯೇ ಲೌಕಿಕಾ ।
ಮಾರ್ಗಾ ಯೇಽಪಿ ಚ ವೈದಿಕಾ ಬಹುವಿಧಾ ಧೂಮಾರ್ಚಿರಾದ್ಯಾ ಅಪಿ ।
ತಾದೃಙ್ಮಾರ್ಗವಿದಶ್ಚ ಯೇ ಕ್ರತುಷು ಯೇ ತ್ವಾಂ ದ್ರಷ್ಟೃಭಾವಂ ಗತಾ ।
ಯೇ ತೇಷಾಂ ಪತಯೇ ನಮೋ ನಮ ಇದಂ ಬಭ್ರುತ್ವಿಷೇ ಸರ್ವದಾ ॥೭॥

---

ಪ್ರಾಣಿರೂಪದಿಂದಲೂ ಇರುವವನು ನೀನೆ. ಬ್ರಹ್ಮಾಂಡವೆಂಬ ದೊಡ್ಡಪ್ರಪಂಚವನ್ನು ಕಾಲವೆಂಬ ಕತ್ತಿಯಿಂದ ಕತ್ತರಿಸುತ್ತಾ, ನಿಜಕರ್ಮಭೋಗವನ್ನು ಅನುಭವಿಸಿದ ಅನಂತರ ವಿಧಿಯಿಂದ ಜನತತಿಯನ್ನು ನಾಶಗೊಳಿಸುವ ಶಕ್ತಿಯು ಪರಶಿವನಾದ ನಿನಗಲ್ಲದೆ ಮತ್ತಾರಿಗಿರುವುದು ? ಇಂತಹ ಮಹಾತ್ಮನಿಗೆ ಅನಂತವಂದನೆಗಳು. ॥೫॥

ಹರಿದ್ವರ್ಣದ ವ್ಯೋಮಕೇಶಗಳೆನಿಸಿದ ಏಕಾದಶರುದ್ರರಿಗೂ ಸ್ವಾಮಿಯೆನಿಸಿ, ಅಜ್ಞಾನಿಗಳಾದ ಬ್ರಹ್ಮಾದಿದೇವತೆಗಳಿಗೂ ಪ್ರಧಾನನಾಗಿ ಪ್ರಪಂಚವನ್ನೇ ರಕ್ಷಿಸುತ್ತಿರುವ ವಿಶ್ವೇಶ್ವರನಿಗೆ ನಮಸ್ಕಾರ. ಮತ್ತು ಎಳೆ ಹುಲ್ಲಿನ ರಾಶಿಯಂತೆ ಹಸುರು ಬಣ್ಣದಿಂದ ರಂಜಿಸುತ್ತಾ ಜ್ಯೋತಿರ್ಮಯನೆನಿಸಿ ಪ್ರಕಾಶಮಾನವಾದ ಅಂಗಸಂವಿಧಾನವುಳ್ಳ ಪರಮೇಶ್ವರನೇ, ನಿನಗೆ ವಂದನೆ. ॥೬॥

ಜ್ಞಾನರೂಪನಾಗಿಯೂ, ಜ್ಞಾನಿಯಾಗಿಯೂ, ಸ್ವಯಂಪ್ರಜ್ಞನಾಗಿಯೂ ಇರುವ ಮಹಾದೇವನೇ, ಲೋಕದಲ್ಲಿ ಕಂಡುಬರುವ ಲೌಕಿಕ ವೈದಿಕ ಮಾರ್ಗಗಳೆಲ್ಲವೂ ನಿನ್ನಿಂದ ಅಭಿವ್ಯಕ್ತಗಳಾದವುಗಳೇ. ಧೂಮ, ಅರ್ಚಿಸ್ಸು ಮುಂತಾದ ಯೋಗಮಾರ್ಗಗಳನ್ನು ಪೂರ್ಣವಾಗಿ ತಿಳಿದವನೂ ನೀನೇ. ಯಜ್ಞಾಚರಣೆಗೆ ಮುಖ್ಯಫಲವಾಗಿರುವುದೂ ನಿನ್ನ ದರ್ಶನವೇ. ನೀನೇ ಎಲ್ಲರಿಗೂ ಅಧಿಪತಿಯು. ಬಭ್ರುವರ್ಣದ ಕಾಂತಿಯಿಂದ ಪ್ರಕಾಶಿಸುವವನೂ ನೀನೇ. ನೀನೇ ಸಕಲ ಲೋಕ ರಕ್ಷಕನು. ಅಂತಹ ನಿನಗೆ ಸಾರ್ವಕಾಲಿಕವಾದ ವಂದನೆಗಳು. ॥೭॥

ರಕ್ಷಿತ್ರೇ ವೃಷಭಸ್ಯ ದಿವ್ಯವೃಷಭಾರೂಢಾಯ ಪಾಪಾತ್ಮನಾಂ ।
ಕ್ಷುತ್ತೃಷ್ಣಾಪಚಯಾಮಯೈಶ್ಚ ವಿವಿಧೈರಾವಿಧ್ಯತೇ ಯಾನಿ ಚ ।
ರಕ್ಷಾಂಸ್ಯಧ್ವರಭಕ್ಷಕಾನಿ ಸತತಂ ತೇಷಾಂ ಚ ಹಂತ್ರೇ ಮುಹುಃ ।
ಸೋಮಾಯೌಷಧಿಸಂಭವೈರವಿಫಲೈಃ ಸಂಜೀವಯಿತ್ರೇ ನೃಣಾಂ ॥೮॥

ಅನ್ನಾನಾಂ ಪತಯೇ ನಮೋನಮ ಇದಂ ತೇ ನಿತ್ಯಯೂನೇ ಸದಾ ।
ನೀಲಾತ್ಯುಜ್ಜ್ವಲ ಮೂರ್ಧಜಾಯ ವಿಲಸದ್ಯಜ್ಞೋಪವೀತಾಯ ತೇ ।
ಪುಷ್ಟಾನಾಂ ಚ ಸತಾಂ ಶಮಾದಿಸಗುಣೈರ್ನಾಥಾಯ ವಾಚೋಧಿಯಃ ।
ಕಾಯಸ್ಯೇಂದ್ರಿಯಸಂಚಯಸ್ಯ ಚ ಧನಕ್ಷೇತ್ರಾದಿಕಾನಾಂ ತಥಾ ೯॥

ಗ್ರಾಮಾಣಾಂ ಧನಧಾನ್ಯಯೋರಪಿ ಪಶುವ್ಯೂಹಸ್ಯ ಸತ್ಸಂತತೇ ।
ಧರ್ಮಸ್ಯೇತಿ ಚ ಪುಷ್ಟಯೋ ದಶವಿಧಾ ಯಾಸ್ಸ್ಯುರ್ದಶಾನಾಮಪಿ ॥೧೦॥

---

ವೃಷಭವನ್ನು ರಕ್ಷಿಸುವವನೂ, ವೃಷಭಾರೂಢನೂ ಆದ ಮಹೇಶ್ವರನೇ, ನೀನು ಪಾಪಿಷ್ಠರಿಗೆ ಹಸಿವು, ಬಾಯಾರಿಕೆಗಳನ್ನುಂಟುಮಾಡುವುದರ ಮೂಲಕ ಅವರನ್ನು ಹಿಂಸಿಸಿ ಅವರ ಪಾಪರಾಶಿಯನ್ನು ಕಳೆಯುವೆ. ಯಾಗಾದಿ ಸತ್ಕರ್ಮಗಳಿಗೆ ಅಡ್ಡಿಪಡಿಸುವಪರನ್ನೂ, ರಾಕ್ಷಸರನ್ನೂ ತಪ್ಪದೆ ಕೊಲ್ಲುವೆ. ಸಮಸ್ತ ವನಸ್ಪತಿಗಳಲ್ಲಿಯೂ ಅಡಗಿ ಔಷಧಿರೂಪದಿಂದಿದ್ದು ಮಾನವರನ್ನು ಬದುಕಿಸುವ ದೊಡ್ಡಭಾರವನ್ನು ಹೊತ್ತಿರುವ ಪರಮೇಶ್ವರನೇ, ನಿನಗೆ ನಮಸ್ಕಾರ. ॥೮॥

ಸಕಲ ಪ್ರಾಣಿಗಳ ಆಹಾರಕ್ಕೂ ಅಧಿಪತಿಯಾಗಿ, ನಿತ್ಯಯುವಕನಾಗಿರುವ ಶಂಭುವೇ, ನಿನಗೆ ವಂದನೆ. ನಿನ್ನ ಕೇಶಪಾಶವಾದರೋ ಅತ್ಯಂತ ನೀಲವರ್ಣದ್ದಾಗಿರುವುದು. ಪ್ರಕಾಶಮಾನವಾದ ಯಜ್ಞೋಪವೀತವನ್ನು ನೀನು ಧರಿಸಿರುವೆ. ಪರಿಪುಷ್ಟರಾಗಿದ್ದು ಸನ್ಮಾರ್ಗಗಾಮಿಗಳಾದವರಿಗೂ ಶಮದಮಾದಿ ಸದ್ಗುಣಭರಿತರಾದವರಿಗೂ, ಸ್ಥಿರಬುದ್ಧಿ ಸ್ಥಿರವಾಕ್ಕುಳ್ಳವರಿಗೂ, ಸಮಸ್ತ ದೇಹೇಂದ್ರಿಯಾದಿಗಳಿಗೂ, ಧನ, ಕ್ಷೇತ್ರ ಇವೇ ಮುಂತಾದ ಆಸ್ತಿಪಾಸ್ತಿಗಳಿಗೂ ಅಧಿನಾಥನಾಗಿರುವ ಮಹೇಶ್ವರನೇ, ನಿನಗೆ ವಂದನೆಗಳು. ॥೯॥

ಮತ್ತು ಸಕಲ ಗ್ರಾಮಗಳು, ಧನಧಾನ್ಯಗಳು, ಪಶುಸಮೂಹ, ಸತ್ಸಂತಾನ, ಧರ್ಮ, ದಶವಿಧವಾದ ಪುಷ್ಟಿಕರ್ಮಗಳು ಇವೆಲ್ಲಕ್ಕೂ ಅಧಿಪತಿಯಾಗಿರುವ ಮಹೇಶ್ವರನೇ ನಿನಗೆ ಸದಾ ವಂದನೆಗಳು. ॥೧೦॥

"ನಮೋ ಭವಸ್ಯ ಹೇತ್ಯೈ"

ಏತಾಸಾಂ ಪತಯೇ ನಮೋ ನಮ ಇದಂ ಸಂಸಾರವೃಕ್ಷಚ್ಛಿದೇ ।
ಹೇತ್ಯೈ ಸಂಸೃಜಿಜನ್ಯದುಸ್ಸಹಮಹಾಹಿಂಸಾಸ್ವರೂಪಾಯ ಚ ।
ಲೋಕಾನಾಂ ಪತಯೇತಿ ದುಃಸಹಮಹಾಸಂಸಾರಖಿನ್ನಾನ್ ಜನಾನ್ ।
ಕೃತ್ವಾ ತಾನಥ ರಕ್ಷ ತೇ ಕರುಣಯಾ ಶ್ರೀಪಂಚವಕ್ತ್ರಾತ್ಮನೇ ॥೧೧॥

"ನಮೋ ರುದ್ರಾಯಾತತಾಯಿನೇ"

ದೇವೇಶಾಯ ನಮೋ ನಮೋ ಭಗವತೇ ರುದ್ರಾಯ ಸಜ್ಯಂ ಧನುಃ
ಶಶ್ವದ್ಧಾರಯತೇ ಸಮಸ್ತಮವತೇ ತೇನೈವ ವಿಶ್ವಂ ಸದಾ ।
ಹೃದ್ದೇಶೇ ನಿವಸನ್ನವನ್ಪುರಿದಂ ಕ್ಷೇತ್ರಂ ಸ್ವಯಾ ಮಾಯಯಾ
ಯಂತ್ರೀ ಯಂತ್ರಸಮಾಸ್ಥಿತಾ ನಿವಸದಾಜೀವಾನ್ಮುಹುರ್ಭ್ರಾವಯನ್ ॥೧೨॥
ಕ್ಷೇತ್ರಜ್ಞಃ ಸ್ವಯಮೇವ ಪಶ್ಯತಿ ಶೃಣೋತ್ಯಾಜೀವತಿ ವ್ಯಾಹರತ್ಯಾ
ಲೇಹ್ಯಂ ಸಕಲಂ ಚ ವೇತ್ತಿ ಸುಖದಂ ಯತ್ಸಾಧನಂ ಕೇವಲಂ ।

---

ಸಮಸ್ತ ತರುಲತೆಗಳಿಗೂ ಒಡೆಯನೆನಿಸಿ, ಸಂಸಾರವೆಂಬ ವೃಕ್ಷವನ್ನು ನಿರ್ಮೂಲಗೊಳಿಸುವ, ಮತ್ತು ಸಂಸಾರವೆಂಬ ದೊಡ್ಡ ಯುದ್ಧದಲ್ಲಿ ಒದಗುವ ನಾನಾವಿಧವಾದ ಹಿಂಸಾಕಾರ್ಯಗಳನ್ನೂ ಮುಗ್ಗಿಸುವ ಮಹಾದೇವನೇ, ನೀನು ಸಕಲ ಜಗದೊಡೆಯನು. ಸಂಸಾರಸಾಗರದಲ್ಲಿ ಮುಳುಗಿ ವ್ಯಥೆಪಡುತ್ತಿರುವ ಜನಸಾಮಾನ್ಯವನ್ನೂ ಉದ್ಧರಿಸಿ ರಕ್ಷಿಸು. ಪಂಚವಕ್ತ್ರಾತ್ಮಕನಾಗಿರುವ ಮಹಾದೇವನೇ, ಕರುಣೆಯಿಂದ ನಮ್ಮೆಲ್ಲರನ್ನೂ ಕಾಪಾಡುವವನಾಗು. ॥೧೧॥

ದೇವದೇವನಾದ ಮಹಾದೇವನೇ, ನಿನಗೆ ನಮಸ್ಕಾರ. ನಿನ್ನ ಧನುಸ್ಸು ಯಾವಾಗಲೂ ಬಾಣದಿಂದ ಕೂಡಿ ಸಿದ್ಧವಾಗಿರುವುದು. ಅದೇ ಧನುರ್ಬಾಣವನ್ನು ಹಿಡಿದು ನೀನು ಸಮಸ್ತ ಲೋಕವನ್ನು ರಕ್ಷಿಸುವೆ. ಮತ್ತು ಎಲ್ಲ ಲೋಕಗಳನ್ನೂ ನೀನು ನಿನ್ನ ಹೃದಯದೇಶದಲ್ಲಿ ಅಡಗಿಸಿಕೊಂಡಿರುವೆ. ಮತ್ತು ನಿನ್ನದೇ ಆದ ಒಂದು ಮಾಯಾಶಕ್ತಿಯಿಂದ ಸಮಸ್ತ ಜೀವಿಗಳನ್ನೂ ಸುತ್ತಿಸುತ್ತಾ ಕಾಪಾಡುತ್ತಿರುವೆ. ಇಂತಹ ಮಹಾಮಹಿಮನೇ ನಿನಗೆ ವಂದನೆಗಳು. ॥೧೨॥

ಸಮಸ್ತ ಭೂಭಾಗವನ್ನೂ ವಶಮಾಡಿಕೊಂಡಿರುವ ಮಹೇಶ್ವರನು ಸರ್ವ ಪ್ರಾಣಿಗಳ ಚಕ್ಷುಸ್ಸು, ಶ್ರವಣ, ವಾತ ಮುಂತಾದ ಸ್ಥಾನಗಳಲ್ಲಿ ನಿಂತು ತಾನೇ

ಆವಿರ್ಭೂಯ ಭುವಿ ಸ್ವಯಂ ವಸತಿ ಯಃ ಕ್ಷೇತ್ರೇಷು ಲಿಂಗಾತ್ಮನಾ
ಕ್ಷೇತ್ರಾಣಿ ಸ್ವಯಮೇವ ರಕ್ಷತಿ ಸದಾ ಯಃ ಕ್ಷೇತ್ರಪಾಲಾತ್ಮನಾ ॥೧೩॥

ಕ್ಷೇತ್ರಾಣಾಂ ಪತಯೇ ಮಹೇಶ ಭವತೇ ತಸ್ಮೈ ನಮಸ್ತೇ ನಮಃ
ಸೂತಾಯಾಸ್ಯ ಮಹಾರಥಸ್ಯ ಜಗದಾಧಾರಸ್ಯ ಸೂತಾತ್ಮನಾ ।
ಕಲ್ಪಾದೌ ಚ ಮಹಾಮುನೀನ್ ಪ್ರತಿಪುರಾಣಾನಾಂ ಪ್ರವಕ್ತ್ರೇಧ್ವರೇ
ಸೋಮಾಯಾಭಿಷು ತಸ್ಯ ಕೇವಲಮಹಂಕಾರೇ ನಿರೂಢಾಯ ಚ ॥೧೪॥

ಭೂತಂ ಭಾವಿ ಚ ವರ್ತಮಾನಮಹಮಿತ್ಯಾಕಾರಿಕಾ ಯಾ ಪರಾ
ಹಂತಾ ತತ್ರ ಭವಾಯ ಕೇವಲಮಹಂ ತವ್ಯಾಯ ಸತ್ಯಾತ್ಮನೇ ।
ಸರ್ವೇಷಾಂ ವನದೇವತಾತ್ಮಕತಯಾ ಗೋಪ್ತ್ರೇ ವನಾನಾಂ ನಮಃ
ತುಭ್ಯಂ ದೇವ ನಮೋಽಸ್ತು ಲೋಹಿತನಿಭಾಯಾಶೇಷವಾಗಾತ್ಮನಾ ॥೧೫॥

---

ಕೇಳುತ್ತಾನೆ ನೋಡುತ್ತಾನೆ. ಮತ್ತು ಮಾತನಾಡುತ್ತಾನೆ. ಮತ್ತು ಮಾತನಾಡಿಸುತ್ತಾನೆ. ಸಮಸ್ತ ಪ್ರಪಂಚಕ್ಕೂ ಸೌಖ್ಯವನ್ನು ಒದಗಿಸುತ್ತಾ ಸುಖರೂಪವಾಗಿಯೂ ತಾನೇ ನಿಲ್ಲುತ್ತಾನೆ. ಅನಂತರ ಸರ್ವರಿಗೂ ಪೂಜ್ಯನಾದ ಪರಶಿವನು ಶಿವಲಿಂಗ ರೂಪದಿಂದ ಪೂಜ್ಯವಸ್ತುವೆನಿಸಿ ಸಮಸ್ತ ಕ್ಷೇತ್ರಗಳಲ್ಲಿಯೂ ದೃಗ್ಗೋಚರನಾಗುತ್ತಾನೆ. ಕ್ಷೇತ್ರಪಾಲಕನೆನಿಸಿದ ಎಲ್ಲ ಕ್ಷೇತ್ರಗಳ ರಕ್ಷಕನೂ ಆಗಿ ಎಲ್ಲವನ್ನೂ ರಕ್ಷಿಸುವವನಾಗುವನು. ಇಂತಹ ಸರ್ವವ್ಯಾಪಿಗೆ ನಮಸ್ಕಾರ. ॥೧೩॥

ಸಮಸ್ತ ಕ್ಷೇತ್ರಗಳಿಗೂ ಒಡೆಯನೆನಿಸಿ ಮಹಾದೇವನೆನಿಸಿರುವ ಪರಮೇಶ್ವರನೇ, ನಿನಗೆ ನಮಸ್ಕಾರವು. ಜಗತ್ತಿಗೆ ಆಧಾರವಾಗಿರುವ ಮಹಾರಥಕ್ಕೆ ನೀನು ಸಮರ್ಥನಾದ ಸಾರಥಿಯಂತಿರುವೆ. ಕಲ್ಪಾದಿಯಲ್ಲಿ ಸಮಸ್ತ ಮುನಿಗಳನ್ನೂ ಕರೆದು ಅಷ್ಟಾದಶಮಹಾಪುರಾಣಗಳನ್ನೂ ಬೋಧಿಸಿದವನು ನೀನು. ಉಮಾಸಹಿತನಾಗಿ ಅಹಂಕಾರಾಧಿಷ್ಠಿತನಾಗಿರುವ ಸ್ಥಿರಾತ್ಮರೂಪನೇ ನಿನಗೆ ವಂದನೆ. ॥೧೪॥

ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲಿಯೂ ಒಂದೇ ರೂಪದಿಂದಿದ್ದು, ಜಗತ್ತನ್ನೇ ನಿರ್ಮೂಲಗೊಳಿಸುವ ಅಥವಾ ಜಗದ್ರೂಪವಾಗಿ ತೋರಿಬರುವ ದೇವತಾರೂಪದಿಂದಿದ್ದು ಸಮಸ್ತ ವನಗಳೆಲ್ಲವನ್ನೂ ಕಾಪಾಡುವ, ವಾಗ್ರೂಪದಿಂದಿದ್ದು, ಕೆಂಪು ವರ್ಣದಿಂದ ರಂಜಿಸುವ, ದೇವಗಂಗಾ ನದಿಯನ್ನೇ ಜಟೆಯಲ್ಲಿ ಕಟ್ಟಿಹಾಕಿಕೊಂಡಿರುವ ಮಹಾಮಹಿಮನೇ, ನಿನಗೆ ನಮಸ್ಕಾರ. ॥೧೫॥

ಶಬ್ದಾನಾಂ ಪ್ರಥಮಪ್ರವರ್ತಕತಯಾ ಲೋಕೇ ಹಿತಾಯಾಭಿತಃ
ಸ್ಥಿತ್ವಾ ಪಾಲಯತೇ ನಿಷಾದಪತಯೇ ಖಡ್ಗೈಕದೃಗ್ಬಾಹವೇ ।
ವೃಕ್ಷಾಣಾಂ ಪತಯೇ ನಮೋ ನಮ ಇದಂ ಮಂತ್ರೈರುಪಾಸ್ಯಾಯ ತೇ
ವೇದಾಯೋಪನಿಷದ್ರಹಸ್ಯವಚನೈರ್ಲೀನಾಯ ಚಿದ್ರೂಪಿಣೇ ॥೧೬॥

ಸಾಕ್ಷಿತ್ವೇನ ಚ ಕರ್ಮಣಾಮಪಿ ಪರಿಚ್ಛೇತ್ರೇ ವಣಿಗ್ವನ್ನೃಣಾಂ
ವಾಚ್ಯಾವಾಚ್ಯತಯಾ ಪುನಃ ಪುನರಭಿವ್ಯಕ್ತಾಯ ಚ ಸ್ವಾಮಿನೇ ।
ಕಕ್ಷಾಣಾಂ ಗಿರಿಗುಲ್ಮಗಹ್ವರನದೀಕುಂಡಾತ್ಮಕಾನಾಂ ಸದಾ
ಗೋಪ್ತ್ರೇ ತೇಷು ಚ ಸರ್ವತೋ ನಿವಸತೇ ನಾನಾವಿಧಪ್ರಾಣಿನಾಂ ॥೧೭॥

ಅಧ್ಯಕ್ಷಾಯ ವನಸ್ಯ ಧರ್ಮಗಹನತ್ರಾತ್ರೇ ನಮಸ್ತೇ ನಮಾ
ಯಸ್ಮಿನ್ವಿಶ್ವಮಿದಂ ಸ್ಥಿತಂ ಭವತಿ ಯಸ್ತಸ್ಮಿಂಸ್ಥಿತಃ ಸರ್ವತಃ ।

---

ಪ್ರಪಂಚದಲ್ಲಿ ತೋರಿಬರುವ ಸಮಸ್ತ ಧ್ವನ್ಯಾತ್ಮಕವಾದ ಆಕಾಶಕ್ಕೆ ಮೂಲ ಕಾರಣನು ನೀನು. ಲೋಕಕ್ಕೆ ಸರ್ವೋಪಾಯವನ್ನೂ ಒದಗಿಸಿ ಅದನ್ನು ರಕ್ಷಿಸುವವನು ನೀನು. ಬಾಹುವಿನಲ್ಲಿ ಬಲಿಷ್ಠವಾದ ಖಡ್ಗವನ್ನು ಧರಿಸಿರುವೆ. ಸಮಸ್ತ ಜಾತಿಯ ವೃಕ್ಷಗಳಿಗೂ ನೀನೇ ಅಧಿಪತಿಯು. ಸಕಲ ಮಂತ್ರಗಳಿಗೂ ಅಧಿಷ್ಠಾತ್ರಿಯಾಗಿ ವೇದ, ಉಪನಿಷತ್ತು ಮುಂತಾದ ವಾಕ್ಯಗಳಲ್ಲಿ ಅಡಗಿರುವ ಜ್ಞಾನರೂಪಿಯಾದ ಪರಶಿವನೇ, ನಿನಗೆ ವಂದನೆಗಳು. ॥೧೬॥

ಸಮಸ್ತ ಕರ್ಮಗಳಿಗೂ ಸಾಕ್ಷಿಯಾಗಿರುವವನು ನೀನು. ವೈಶ್ಯನಂತೆ ಪದಾರ್ಥಗಳ ಸತ್ವಸಾಹಸಾದಿಗಳನ್ನು ಒರೆಹಚ್ಚಿ ತಿಳಿಯುವ ಸಾಮರ್ಥ್ಯವು ನಿನಗಲ್ಲದೆ ಮತ್ತಾರಿಗೂ ಇರಲಾರದು. ಕೆಲವರ ವಾಕ್ಯಗಳಿಗೆ ನೀನು ಅಡಗುವೆ. ಕೆಲವರ ಮಾತುಗಳಿಗೆ ದೊರಕಲಾರೆ. ಹೀಗೆ ವಾಚ್ಯಾವಾಚ್ಯಸ್ವರೂಪನೆನಿಸಿ, ಪದೇ ಪದೇ ಭಕ್ತರಿಗೆ ಮೈದೋರುತ್ತಿರುವ ಮಹೇಶ್ವರನೇ, ನಿನಗೆ ವಂದನೆ. ಅರಣ್ಯದಲ್ಲಿರುವ ಗಿರಿ, ತರು, ಗುಹೆ, ದರಿ ಮುಂತಾದ ಸಕಲ ಪದಾರ್ಥಗಳಿಗೂ ನೀನು ರಕ್ಷಕನು. ಸಕಲ ಪ್ರಾಣಿಗಳಲ್ಲಿಯೂ ನೀನು ಆತ್ಮರೂಪದಿಂದ ಅಡಗಿರುವೆ. ಹೀಗೆ ಸರ್ವವ್ಯಾಪಿಯಾದ ಪರಶಿವನನ್ನು ನಾನು ತಪ್ಪದೆ ಪ್ರಾರ್ಥಿಸುವೆನು. ॥೧೭॥

ಸಮಸ್ತ ವನಗಳಿಗೂ ಅಧಿಪತಿಯೆನಿಸಿ ಗಹನವಾದ ಧರ್ಮವನ್ನು ರಕ್ಷಿಸಲು ಸಿದ್ಧನಾಗಿರುವ ಪರಶಿವನೇ, ನಿನಗೆ ನಮಸ್ಕಾರ. ಸರ್ವಪ್ರಪಂಚವು ಅಡಗಿರುವುದೂ

ಯಃ ಶಕ್ತ್ಯಾ ಭುವನಾನ್ಯತನೋತಿ ನಿಜಯಾ ಕರ್ತಾಽ ಧನಸ್ಯಾಪಿ ಯಃ
ತ್ರಾತಾ ಚಾರ್ಜಯತಾಂ ಧನಸ್ಯ ಕೃತಿನಾಂ ದಶ್ಯೋತ್ತಮಾನಾಂ ಧನಂ॥೧೮॥

ಯಶ್ಚಾತ್ರಾತಾ ವರಿವಸ್ಯತಾಂ ಕರುಣಯಾ ಯೇನೈವ ವಿಷ್ಣ್ವಾತ್ಮನಾ
ವಾರೀಶಾತ್ಮತಯಾ ಚ ವಾರಿಣೀ ಸದಾ ವಾಸಃ ಕೃತೋಽಯೇನ ಚ ।
ಭೂಮ್ಯಾತ್ಮಾ ಸ್ವಯಮೌಷಧೀಃ ಪ್ರಜನಯನ್ ಗ್ರಾಮ್ಯಾಸ್ತಥಾರಣ್ಯಕಾ
ಸ್ತಾಃ ಸೋಮಾತ್ಮತಯಾ ಚ ಪಾತಿ ಸತತಂ ತಸ್ಮೈ ನಮಸ್ತೇ ನಮಃ॥೧೯॥

॥ ನಮ ಉಚ್ಚೈರ್ಘೋಷಾಯ ॥

ಉಚ್ಚೈರ್ಘೋಷವತೇ ಮಹಾರ್ಣವಮಹಾಮೇಘಾದಿರೂಪಾಯ ತೇ
ಶಂಭೋ ಪಾಹಿ ಶಿವೇತಿ ಭಕ್ತನಿವಹೈರುದ್ಘುಷ್ಯಮಾಣಾಯ ಚ ।
ಯಶ್ಚಾಕ್ರಂದಯಂತೇ ರಣೋದ್ಯಮಸಮಾಹ್ವಾನೈರ್ಭಟಾನಾಂ ಮುಹು
ರ್ಯಶ್ಶಕ್ತೋಽಪಿ ಜಗಂತಿ ಜೇತುಮಖಿಲಾನ್ಯೇಕಃ ಸ್ವಯಂ ಲೀಲಯಾ॥೨೦॥

---

ನಿನ್ನಲ್ಲಿಯೇ, ಸರ್ವವೂ ರಕ್ಷಿತವಾಗುವುದೂ ನಿನ್ನಿಂದಲೇ. ಮಾನವವೃಂದಕ್ಕೆ ಸಮಸ್ತನಿಧಿಯನ್ನೂ ಕಲ್ಪಿಸಿ ಒದಗಿಸುವವನು ನೀನು. ಸುಕೃತಿಗಳೆನಿಸಿದವರಿಗೆ ಸಮಸ್ತ ಐಶ್ವರ್ಯವನ್ನೂ ಕೊಟ್ಟು ಅವರ ಐಶ್ವರ್ಯವನ್ನು ಕೊನೆಯುವರೆಗೂ ಪಾಲಿಸುವವನೂ ನೀನೇ. ಹೀಗೆ ಸರ್ವತಂತ್ರಸ್ವತಂತ್ರನಾದ ಮಹಾದೇವನೇ, ನಿನಗೆ ನಮಸ್ಕಾರ. ॥೧೮॥

ಮಹಾದೇವನೇ, ನೀನು ತನ್ನನ್ನೇ ಭಕ್ತಿಯಿಂದಾರಾಧಿಸುವ ಭಕ್ತರನ್ನು ವಿಷ್ಣುರೂಪದಿಂದ ರಕ್ಷಿಸುವೆ. ವರುಣರೂಪದಿಂದ ಸಮಸ್ತ ಸಮುದ್ರವನ್ನು ಕಾಪಾಡುವ ಭೂರೂಪದಿಂದ ಸಂಪೂರ್ಣ ಜಗತ್ತನ್ನೇ ಕಾಪಾಡುವೆ. ಸೋಮರೂಪದಿಂದ ಆರಣ್ಯದಲ್ಲಿರುವ ಸಕಲ ವನಸ್ಪತಿಗಳನ್ನೂ ನೀನು ರಕ್ಷಿಸುತ್ತಿರುವೆ. ಹೀಗೆ ನಾನಾ ರೂಪದಿಂದ ಬೇರೆ ಬೇರೆ ಪ್ರಪಂಚವನ್ನು ರಕ್ಷಿಸಬಲ್ಲ ಮಹೇಶ್ವರನೇ, ನಿನಗೆ ಸಾಷ್ಟಾಂಗ ಪ್ರಣಾಮಗಳು. ॥೧೯॥

ಗಟ್ಟಿಯಾಗಿ ಗರ್ಜಿಸುವ ಮೇಘ ಮತ್ತು ಸಮುದ್ರ ಇವುಗಳ ರೂಪದಿಂದಿರುವ ಶಂಕರನೇ, ನೀನು ನಿನ್ನ ಭಕ್ತರಿಂದ ನಾನಾರೀತಿ ಸ್ತುತಿಸಲ್ಪಡುತ್ತಿರುವೆ. ಯಾರು ಯುದ್ಧಾತುರರಾಗಿ ನಾನಾವಿಧವಾದ ಯುದ್ಧಸಾಮಗ್ರಿಗಳನ್ನು ಒದಗಿಸಿಕೊಂಡು ನಿನ್ನ

ಪತ್ತೀನಾಂ ಚ ಪತಿಃ ಪದಾತಿ ಶತಕೋಟೀನಾಂ ಚ ಸೇತಾ ಭವ
ತ್ತಸ್ಮೈ ದೇವ ನಮೋ ನಮೋಽಸ್ತು ಭವತೇ ಕಲ್ಪಾಂತಕಾಲೇ ಜಗತ್ ।

॥ ನಮಃ ಕೃತ್ಸ್ನವೀತಾಯ ॥

ಕೃತ್ಸ್ನಂವೀತಮಭೂಚ್ಚ ಯೇನ ಹರತಾ ಕೃತ್ಸ್ನೇ ಚ ಭೂತೇ ಸದಾ
ಚಾಸೀನೋಽಪಿ ಚ ಸನ್ನಿಧಾವಪಿ ಸದಾ ಕಲ್ಪಾಂತರಾತ್ರೌ ತಥಾ ॥೨೧॥

ಯೋಽಸೌ ಕೇವಲ ಏಕ ಏವ ಹಿ ಶಿವಃ ಕೃತ್ಸ್ನಾತ್ಮಕಃ ಶಿಷ್ಯತೇ
ಭಕ್ತಂ ಶೋಧಯತಿ ಪ್ರಸೀದತಿ ಪುನಸ್ತಸ್ಮೈ ಚ ಶೀಘ್ರಂ ಸದಾ ।
ವತ್ಸಂ ಗೌರಿವ ಚಾನುಧಾವತಿ ಪರಿತ್ರಾತುಂ ಸ್ವಭಕ್ತಂ ಜನಂ
ನೇತ್ರೇ ಬ್ರಹ್ಮವಿದಾಮನೇಕವಿಧಸತ್ವಾನಾಂ ಚ ತಸ್ಮೈ ನಮಃ ॥೨೨॥

---

ಮೇಲೆ ಯುದ್ಧಕ್ಕೆ ನಿಲ್ಲುವರೋ, ಅಂತಹ ದುಷ್ಟರನ್ನು ನೀನೊಬ್ಬನೇ ನಾಶಗೊಳಿಸುವ ಸಾಮರ್ಥ್ಯವನ್ನು ನೀನು ಪಡೆದಿದ್ದರೂ, ಜನಮೆಚ್ಚಿಗೆಗಾಗಿ ಅವರನ್ನು ನಿರ್ಮೂಲ ಗೊಳಿಸಲು ಯೋಧನಾಗಿ ನಿಲ್ಲುವೆ. ಮಹಾದೇವನೇ, ಇದೂ ನಿನ್ನದೊಂದು ಲೀಲೆ ಯಲ್ಲವೆ! ॥೨೦॥

ನೂರಾರುಕೋಟಿ ಕಾಲಾಳುಗಳಿಗೆ ಸೇನಾಪತಿಯಾಗಿರುವ ಮಹೇಶ್ವರನೇ, ನಿನ್ನಲ್ಲಿ ಈ ಅಖಂಡವಾದ ಜಗತ್ತು ಪ್ರಲಯಕಾಲದಲ್ಲಿ ಲೀನವಾಗಿ ಹೋಗುವು ದಿಲ್ಲವೆ! ಸಂಪೂರ್ಣವಾದ ಪ್ರಪಂಚವನ್ನೇ ಆವರಿಸಿಕೊಂಡಿರುವವನೂ ನೀನೇ. ಅದೇ ಜಗತ್ತನ್ನೆಲ್ಲಾ ಪಂಚಭೂತಮಯವನ್ನಾಗಿ ಮಾಡಿ ಕೊನೆಯಲ್ಲಿ ನಾಶಗೊಳಿಸು ವವನೂ ನೀನೇ. ನೀನು ಕುಳಿತಿದ್ದರೂ ಪ್ರಪಂಚದ ಸೃಷ್ಟಿಸ್ಥಿತಿಲಯಗಳು ಅನಾಯಾಸವಾಗಿ ನಡೆದೇಹೋಗುವುದಲ್ಲವೆ! ॥೨೧॥

ಪ್ರಪಂಚವು ನಾಶವಾಗುವ ಪ್ರಳಯಕಾಲದಲ್ಲಿ ಸ್ಥಿರವಾಗಿ ಉಳಿಯುವವನು ಪರಶಿವನೊಬ್ಬನೇ. ಭಕ್ತಪರಾಧೀನನಾದ ಶಂಕರನು ತನ್ನ ಭಕ್ತರನ್ನು ನಾನಾರೀತಿ ಪರೀಕ್ಷಿಸುವನು. ಅವರ ಭಕ್ತಿಗೆ ಮೆಚ್ಚಿ ಅವರಿಗೆ ಪ್ರಸನ್ನನಾಗುವನು. ಮತ್ತೆ ಅವರನ್ನು ತನ್ನ ಸಮೀಪಕ್ಕೆ ಆಹ್ವಾನಿಸಿಕೊಳ್ಳುವನು. ಮಿತಿಮೀರಿದ ಭಕ್ತವಾತ್ಸಲ್ಯ ದಿಂದ ಮಹಾದೇವನು ಹಸುವು ಕರುವನ್ನು ಅರಸಿಕೊಂಡು ಹೋಗುವಂತೆ ಭಕ್ತರನ್ನು ಹುಡುಕಿಕೊಂಡು ಹೋಗಿ ಕಾಪಾಡುವನು. ಬ್ರಹ್ಮಜ್ಞಾನಿಗಳಿಗೂ

ಮೇಧಾರಾಜ್ಯವಶಿತ್ವಮಾವರವಧೂ ಶತ್ರುಕ್ಷಯಾದ್ಯಂ ಫಲಂ
ಭಕ್ತಾನಾಂ ಪ್ರದಿಶಂತಮೀಶಮೃಷಿಣಾ ಮಂಡೂಕಧಾಮ್ನಾಚಿರಂ।
ಧ್ಯಾತಂ ರುದ್ರಮಹಂ ಭಜೇ ಸುರತರೋರ್ಮೂಲೇ ನಿಷಣ್ಣಂ ಸದಾ
ಗೌರ್ಯಾ ಮೌಕ್ತಿಕ ಭೂಷಣಾಂಗಮಮಲಂ ಬಾಲೇಂದುಗಂಗಾಧರಂ ॥೨೩॥

॥ ಶ್ರೀಸ್ಕಂದ ಉವಾಚ ॥

ನಮಸ್ತೇ ರುದ್ರಾದ್ಯೈಃ ಪ್ರತಿಪದನಮೋಂತ್ಯೈರ್ಮುನಿಗಣ್ಯೈಃ
ಋಷಿಂ ದೇವಧ್ಯಾನಪ್ರತಿವಚನವಾಕ್ಯಾರ್ಥಮಧುರೈಃ।
ನಿರುಕ್ತ್ಯೈರುಕ್ತೋರ್ಥಃ ಶ್ರುತಿಶಿರಸಿ ಬೋಧಾಯ ಸುಗಮಃ
ಉಪಾಯಸ್ತೇ ಜ್ಞಾಯಾಸಕಥಯದುಮಾಯೈ ಸ ಭಗವಾನ್ ॥೨೪॥

ಗೌರೀನಾಯಕಭಾಷಿತೋಯಮಗಜಾಪ್ರೀತ್ಯಾನುವಾಕದ್ವಯ
ಸ್ಯಾರ್ಥಸ್ತಂ ವಿವೃಣೋಮಿ ಶಂಕರಮುಖಾಚ್ಛ್ರುತಂ ಯಥಾ ನಿರ್ಗತಂ।

---

ಪ್ರಪಂಚದಲ್ಲಿ ಅಡಗಿರುವ ಸಮಸ್ತ ಪ್ರಾಣಿಗಳಿಗೂ ನೇತ್ರರೂಪದಿಂದಿರುವನು. ಇಂತಹ ಮಹೇಶ್ವರನಿಗೆ ನಮಸ್ಕಾರ. ॥೨೨॥

ಪವಿತ್ರವಾದ ರಾಜಭೋಗ, ಜಿತೇಂದ್ರಿಯತ್ವ, ಪೂರ್ಣಸಂಪತ್ತು, ಶತ್ರುಕ್ಷಯ ಮುಂತಾದ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸಲು ಸಮರ್ಥನಾದ ಮಹೇಶ್ವರನೇ, ನೀನು ಮಾಂಡೂಕ್ಯೋಪನಿಷತ್ತಿನಲ್ಲಿ ವಿಧವಿಧವಾಗಿ ಸ್ತುತಿಸಲ್ಪಟ್ಟಿರುವೆ. ದೇವವೃಕ್ಷವಾದ ಕಲ್ಪತರುವಿನ ಬುಡದಲ್ಲಿ ಕುಳಿತು ಗೌರೀದೇವಿಯ ಮುತ್ತಿನಾಭರಣದಂತಿರುವ ಬಾಲಚಂದ್ರನನ್ನೂ, ಗಂಗಾನದಿಯನ್ನೂ ಶಿರಸ್ಸಿನಲ್ಲಿ ಧರಿಸಿರುವ ಶಂಕರನೇ, ನಿನಗೆ ವಂದನೆಗಳು. ॥೨೩॥

ನಮಸ್ತೇ ರುದ್ರಮನ್ಯವೇ, ಎಂಬುದಾಗಿ ಆರಂಭಿಸಿ, ಪ್ರತಿ ಈಶ್ವರನಾಮದ ಅಂತ್ಯದಲ್ಲಿಯು ನಮಶ್ಶಬ್ದವನ್ನಿಟ್ಟು, ಋಷಿದೇವತಾಛಂದಸ್ಸನ್ನನುಸರಿಸಿ ಉಕ್ತವಾಗಿರುವ ರುದ್ರಾಧ್ಯಾಯವು ನಿರುಕ್ತದಿಂದ ಎಲ್ಲರಿಗೂ ಸುಲಭವಾಗಿ ತಿಳಿದುಬರುವುದು. ಉಪನಿಷತ್ತುಗಳೂ ಸದಾ ರುದ್ರಾಧ್ಯಾಯದ ಅರ್ಥವನ್ನೇ ವಿವರಿಸಿ ಹೇಳುತ್ತಲಿವೆ. ರುದ್ರಾಧ್ಯಾಯದ ಅರ್ಥವು ಮತ್ತೂ ಸುಲಭವಾಗಿ ತಿಳಿಯಲೆಂದು ಶಂಕರನು ಸುಲಭಶೈಲಿಯಿಂದ ಪಾರ್ವತಿಗೆ ಈರೀತಿ ತಿಳಿಯಹೇಳಿದನು. ॥೨೪॥

ಎಲೈ ಜೈಗೀಷವ್ಯಮುನಿಯೇ, ಹೀಗೆ ರುದ್ರಾಧ್ಯಾಯದ ಎರಡು ಅನುವಾಕ

ತತ್ತ್ರೇ ಸ್ವಸ್ತಿ ಭವೌಷಧಂ ಹರಿಹರಬ್ರಹ್ಮಾದಿವ್ಯಗ್ಯಂ ಮುನೇ
ಭಾಷ್ಯಂ ತ್ವೇತದಪಾರಶಿಷ್ಯಸಹಿತಃ ಸಂಶ್ರಾವ್ಯಮುಕ್ತೋ ಭವ ॥೨೫॥

ಇತಿ ಶ್ರೀ ಶಿವರಹಸ್ಯೇ ದ್ವಾದಶಾಂಶೇ ರುದ್ರಭಾಷ್ಯೇ ಅನುವಾಕದ್ವಯಾರ್ಥ ವಿವರಣಂ ನಾಮ ಸಪ್ತವಿಂಶೋಽಧ್ಯಾಯಃ

---

ಗಳ ಸಾರವನ್ನು ನಿನಗೆ ಈಗ ತಿಳಿಸಿರುವೆನು. ಇದು ಶಂಕರನ ಮುಖಕಮಲದಿಂದ ಧಾರಾರೂಪವಾಗಿ ಬಂದು ಪಾರ್ವತಿಯನ್ನು ಸಂತೋಷಪಡಿಸಿದೆ. ಇಂತಹ ರುದ್ರ ಭಾಷ್ಯವು ನಿನಗೆ ಸಂಸಾರದುಃಖವನ್ನು ನಿವಾರಿಸುವ ಸಂಜೀವಿನಿಯಾಗಲಿ. ಇದನ್ನು ಹರಿಹರಬ್ರಹ್ಮಾದಿಗಳೂ ಸಹ ಕೇಳಲು ಬಯಸುವರು. ಇಂತಹ ಪವಿತ್ರ ರುದ್ರಭಾಷ್ಯ ವನ್ನು ನೀನೂ ಮತ್ತು ನಿನ್ನ ಶಿಷ್ಯರೂ ಕೇಳಿ ಮುಕ್ತರಾಗಿರಿ ಎಂದು ಕುಮಾರ ಸ್ವಾಮಿಯು ಜೈಗೀಷವ್ಯಮಹಾಮುನಿಗೆ ಹೇಳಿದನು. ॥೨೫॥

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೆರಡನೆಯ ಅಂಶದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಅಷ್ಟವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

॥ ನಮಸ್ಸಹಮಾನಾಯ ॥

ಹರ್ತುಂ ಭರ್ತುಮಕರ್ತುಮಾಶು ಚ ಜಗತ್ಕರ್ತುಂ ಕೃತಂ ಚಾನ್ಯಥಾ
ಕರ್ತುಂ ದುರ್ಘಟಮೇವ ಸಂಘಟಯಿತುಂ ಶಕ್ತಸ್ತ್ವಮೇಕಃ ಪ್ರಭುಃ ।
ತಸ್ಮಾತ್ತೇ ಸತತಂ ನಮೋಽಸ್ತು ವಿಜಯಾ ಶಕ್ತ್ಯಾಭಿಭೂತಂ ಜಗ
ತ್ಸರ್ವಂ ಸ್ವಾತ್ಮನಿ ಕುರ್ವತೇ ಚ ಸಹಮಾನಾಯಾಪರಾಧಾನ್ ಸತಾಂ ॥೧॥

ಸಾಧೂನ್ಪಾಲಯಿತುಂ ಖಲಾಂಶ್ಚ ನಿತರಾಮಾವಿಧ್ಯತೇ ತೇತ್ವಲಂ
ಯಾಸ್ಸೇನಾ ಅಭಿತಃ ಪರಾನಭಿಮುಖಾನ್ ತಾಸಾಂ ಚ ನೇತ್ರೇ ನಮಃ ।

---

## ಇಪ್ಪತ್ತೆಂಟನೆಯ ಅಧ್ಯಾಯ

ಮಹಾದೇವನೇ, ಸಮಸ್ತ ಪ್ರಪಂಚವನ್ನೂ ಸೃಷ್ಟಿಮಾಡುವುದಕ್ಕೂ, ರಕ್ಷಿಸುವುದಕ್ಕೂ, ನಾಶಗೊಳಿಸುವುದಕ್ಕೂ ನೀನೊಬ್ಬನೇ ಸಮರ್ಥನು. ತನ್ನಿಷ್ಟದಂತೆ ಸಕಲ ವಸ್ತುಗಳನ್ನೂ ಬದಲಾಯಿಸುವ ಸಾಮರ್ಥ್ಯವು ನಿನಗಲ್ಲದೆ ಮತ್ತಾರಿಗೂ ದೊರೆಯಲಾರದು. ಅಂತಹ ಸಂಪೂರ್ಣ ಜಗತ್ತನ್ನೂ ತನ್ನ ಹೃದಯಾಂತರಾಳದಲ್ಲಿ ಅಡಗಿಸಿ, ಪ್ರಾಣಿಗಳು ಅಹೋರಾತ್ರಿಯೂ ನಡೆಸುವ ಸಕಲಾಪರಾಧಗಳನ್ನೂ ಕ್ಷಮಿಸುವೆ. ಸತ್ಪುರುಷರನ್ನು ವಿಶೇಷವಾಗಿ ಮನ್ನಿಸುವೆ. ಮಹಾದೇವನೇ, ನಿನಗೆ ವಂದನೆಗಳು. ॥೧॥

ಪರಶಿವನೇ, ನೀನು ದುಷ್ಟರನ್ನು ಧ್ವಂಸಗೊಳಿಸಿ ಸಾಧುಗಳನ್ನು ಕಾಪಾಡಲು ದೊಡ್ಡ ಸೈನ್ಯವನ್ನು ಹೊಂದಿರುವೆ. ಅಂತಹ ಸೈನ್ಯವನ್ನು ಸನ್ಮಾರ್ಗದಲ್ಲಿ ನಡೆಸಿ

ದೇವೇಶಾಯ ನಮೋ ಮಹಾವೃಷಕಕುದ್ಭಾಗಾಧಿರೂಢಾಯ ತೇ
ಪ್ರೋದ್ಯತ್ಖಡ್ಗಮಹಾಪ್ರಹಾರಪಟವೇ ಚೌರ್ಯಾಯ ಲೀಲಾತ್ಮನಾಂ ॥೨॥

ಚೋರಾಣಾಮಪಿ ಭಕ್ತವತ್ಸಲತಯಾ ಸಂರಕ್ಷಕಾಯಾಥವಾ
ತೇಷಾಂ ಶ್ರೇಷ್ಠತಮಾಯ ಸರ್ವಹರಣಾದಂತೇ ನಮಸ್ತೇ ನಮಃ ।
ಉದ್ಯತ್ಖಡ್ಗವತೇ ಜನೇಷು ನಿತರಾಂ ಭಕ್ತೇಷು ಸಕ್ತಾಯ ವಾ
ತೂಣೀರೋತ್ತಮಧಾರಿಣೇ ಪ್ರಹರತಾಂ ಸಾಕ್ಷಾನ್ಮಹಾರಣ್ಯಕೇ ॥೩॥

॥ ನಮೋ ವಂಚತೇ ॥

ವ್ಯಾಧಾನಾಂ ಪತಯೇ ನಮೋ ನಮ ಇದಂ ತೇ ವಂಚನಾಂ ಕುರ್ವತೇ
ಯಃ ಕುರ್ವನ್ನಪಿ ವಿಪ್ರಲಂಭಮಭಿತೋ ವ್ಯಾಹನ್ಯತೇ ನಾಪರೈಃ
ತಸ್ಮೈ ತೇ ಪರಿತಃ ಸದಾ ವಿಚರತೇ ಹರ್ತುಂ ಪರೇಷಾಂ ಧನಂ
ನಿತ್ಯಂ ಕೃತ್ರಿಮಸಾಧುವೇಷಮಯತಾಂ ನಾನಾವಿಧಛದ್ಮನಾಂ ॥೪॥

---

ಲೋಕರಕ್ಷಣೆಮಾಡುತ್ತಿರುವ ನಿನಗೆ ವಂದನೆಗಳು. ದೇವದೇವನಾಗಿ ಮಹಾವೃಷಭದ ಮೇಲೆ ಮಂಡಿಸಿ, ಕತ್ತಿಯನ್ನು ಹಿರಿದು, ಎದುರಿಗೆ ಬರುವ ಶತ್ರುಗಳನ್ನು ನಿರ್ಮೂಲಗೊಳಿಸುವಂತಹ ಮಹೇಶ್ವರನೇ, ನಿನಗೆ ನಮಸ್ಕಾರ. ॥೨॥

ತನ್ನ ಭಕ್ತರಾದವರು ಕಳ್ಳರಾಗಿದ್ದರೂ, ಭಕ್ತವತ್ಸಲನಾದ ನೀನು ಅವರನ್ನು ರಕ್ಷಿಸುವೆ. ಅವರ ಸಮಸ್ತ ಪಾಪವನ್ನೂ ನಾಶಗೊಳಿಸಿ ಅವರಿಗೆ ಸದ್ಗತಿಯನ್ನೂ ಕರುಣಿಸುವೆ. ಮಹಾರಣ್ಯದಲ್ಲಿ ನಿಂತು ನಿನ್ನನ್ನೆದುರಿಸುವ ದುಷ್ಟರನ್ನೆಲ್ಲಾ ಖಡ್ಗದಿಂದ ಹೊಡೆದು, ಭಕ್ತರಕ್ಷಣಾರ್ಥವಾಗಿ ಸದಾ ಬಾಣಬತ್ತಳಿಕೆಯಿಂದ ಕೂಡಿ ಸಂಚರಿಸುತ್ತಿರುವ ಪರಶಿವನೇ, ನಿನಗೆ ಅನಂತಾನಂತ ವಂದನೆಗಳು. ॥೩॥

ದೇವದೇವನೇ, ನೀನು ವ್ಯಾಧಜಾತಿಯವರಿಗೂ ಒಡೆಯನು. ಆದರೆ ಯಾರಾದರೂ ನಿನ್ನಲ್ಲಿ ಮೋಸವೆಸಗುವುದಾದರೆ, ಅವರನ್ನು ಕ್ಷಣಕಾಲದಲ್ಲಿಯೇ ನಾಶಗೊಳಿಸುವೆ. ಆ ಶಕ್ತಿಯು ಮತ್ತಾರಿಗೂ ಇರಲಾರದು. ಮತ್ತು ನಾನಾವಿಧವಾದ ವೇಷಭೂಷಾದಿಗಳಿಂದಲೂ ಬಗೆಬಗೆಯ ನೆಪಗಳಿಂದಲೂ ಪರರ ದ್ರವ್ಯವನ್ನು ಅಪಹರಿಸುವಂತಹ ಕಳ್ಳರಿಗೂ ನೀನು ರಕ್ಷಕನು ಅವರ ಸುತ್ತಲೂ ನೀನು ಅವರನ್ನು ರಕ್ಷಿಸಲು ಪ್ರಯತ್ನಿಸುತ್ತಿರುವೆ. ಇದು ನಿನ್ನ ಭಕ್ತವಾತ್ಸಲ್ಯವಲ್ಲವೆ? ॥೪॥

॥ ನಮೋ ನಿಚೇರವೇ ॥

ಸ್ತಾಯೂನಾಂ ಪತಯೇ ನಮೋ ನಮ ಇದಂ ಸಂಹಾರಶೀಲಾಯ ತೇ
ಪಾಥ್ಯಾರ್ಥಂ ನಿತರಾಂ ವನೇಷು ಸತತಂ ತ್ರಾತುಂ ಜನಾನಾಶ್ರಿತಾನ್ ।
ಸುವ್ಯಕ್ತಂ ಪರಿತಃ ಸದೈವ ಚರತೇ ಸ್ವಾಮಿನ್ನರಣ್ಯೇ ನಿಶಂ
ದಸ್ಯೂನಾಂ ವಸತಾಂ ನಮೋಽಸ್ತು ಪತಯೇ ತೇಭ್ಯೋಽಪಿ ನಿತ್ಯಂ ನಮಃ ॥೫॥

॥ ನಮಃ ಸೃಕಾವಿಭ್ಯೋ ॥

ಯೇ ರುದ್ರಾಸ್ಸದೃಶಾಸ್ತ್ವಯಾ ಧೃತಮಹಾವಜ್ರಾದ್ಯನೇಕಾಯುಧಾ
ಸ್ತೇಷಾಂ ವಾನುಚರಾವರಾಯುಧಧರಾಃ ಸ್ತೋಮಾವಿತಾರೋಽಥವಾ ।
ಮರ್ತ್ಯಾಯೇಽಸ್ಯತಿಹಿಂಸಕಾಶ್ಚ ಧನಧಾನ್ಯಾದೀನ್ಯಲಂಮುಷ್ಣತಾಂ
ವ್ಯಾಧಾನಾಂ ಪತಯೇ ನಮೋಽಸ್ತು ಭವತೇ ತೇಭ್ಯೋಽಪಿ ನಿತ್ಯಂ ನಮಃ ॥೬॥

॥ ನಮೋಽಸಿಮದ್ಭ್ಯೋ ॥

ಉತ್ಕೋಶಾಸಿಧರೇಭ್ಯ ಆಶು ನಗರೇ ನಕ್ತಂಚರದ್ಭ್ಯಸ್ಸದಾ
ಚೌರ್ಯಾಯೈವ ಹರಂತಿ ಯೇ ನಿಶಿಧನಂ ಹತ್ವೈವ ತೇಷಾಮಪಿ ।

---

ದೃಢವಾದ ವಿಶ್ವಾಸವನ್ನು ಹುಟ್ಟಿಸಿ, ಅನಂತರ ಮೋಸಗೊಳಿಸುವಂತಹ ಕಳ್ಳರ ಗುಂಪಿಗೂ, ಅರಣ್ಯದಲ್ಲಿ ಸಂಚರಿಸುವ ಸ್ತೇನವರ್ಗಕ್ಕೂ ನೀನೇ ರಕ್ಷಕನಾಗಿರುವೆ. ಇನ್ನು ಕ್ರಮವಾಗಿಯೇ ಅರಣ್ಯದಲ್ಲಿ ನೆಲಸಿ ದರೋಡೆಯಿಂದ ಜೀವನ ನೆಸಗುವ ದಸ್ಯುಗಳಿಗೂ ನೀನೇ ಒಡೆಯನಾಗಿರುವೆ. ಹೀಗೆ ಸರ್ವವಿಧದಲ್ಲಿಯೂ ಸರ್ವರಿಗೂ ಪ್ರಭುವಾಗಿರುವೆ. ನಿನಗೆ ನಮಸ್ಕಾರಗಳು. ॥೫॥

ಮಹಾದೇವನೇ, ನಿನ್ನಂತೆಯೇ ವಜ್ರಾದ್ಯಾಯುಧಗಳನ್ನು ಧರಿಸಿರುವ ಏಕಾದಶರುದ್ರರೂ ಮತ್ತು ಅವರ ಅನುಚರರಾದ ಅಸಂಖ್ಯ ರುದ್ರಗಣಗಳೂ ಭೂಲೋಕದಲ್ಲಿ ಹೇರಳರಾಗಿರುವರು. ಭೂಲೋಕದ ಜನರಿಗೆ ಹಿಂಸಕರಾಗಿಯೂ, ಧನಧಾನ್ಯಾದಿಗಳನ್ನು ಅಪಹರಿಸುವವರಾಗಿಯೂ ಇರುವ ವ್ಯಾಧಾದಿಗಳಿಗೂ ನೀನು ಪತಿಯೆನಿಸಿರುವೆ. ಇಂತಹ ನಿನಗೆ ನಿತ್ಯವಂದನೆಗಳು. ॥೬॥

ರಾತ್ರಿವೇಳೆಯಲ್ಲಿ ಕತ್ತಿಕಠಾರಿಗಳನ್ನು ಹಿಡಿದು ನಗರಗಳಲ್ಲಿ ಸಂಚರಿಸುತ್ತಾ, ಚೌರ್ಯವೃತ್ತಿಯಿಂದ ಪರದ್ರವ್ಯಗಳನ್ನು ಅಪಹರಿಸುವ ನಕ್ತಂಚರರಿಗೂ ನೀನು ಒಡೆಯನೆನಿಸಿರುವೆ. ದಪ್ಪವಾದ ರುಮಾಲನ್ನು ಧರಿಸಿ ನಗರರಕ್ಷಕರೆನಿಸಿರುವವರಿಗೂ

ನಾಥಾಯಾಸ್ತು ನಮೋ ನಮೋಽಪ್ಯತಮಹೋಷ್ಣೀಷಾಯ ತುಭ್ಯಂ ನಮೋ
ವ್ಯಾಧೈಸ್ಸಂಚರತೇ ಹರಂತಿ ಪೃಥಿವೀಂ ಯೇ ವಾ ಪ್ರಕೃಂತಾ ಬಲಾತ್ ॥೭॥
ಕ್ಷುದ್ರಾರಣ್ಯಗಿರಿಪ್ರದೇಶಪತಯಃ ಕ್ಷುದ್ರಕ್ರಿಯಾಭಿರ್ಧನಂ
ಹರ್ತಾರಃ ಕುಲಲುಂಚಕಾಶ್ಚ ಪತಯಸ್ತೇಷಾಂ ನಮಸ್ತೇ ನಮಃ ।

॥ ನಮ ಇಷುಮದ್ಭ್ಯಃ ॥

ಹಸ್ತೇನೈಕತಮೇನ ಸಂಪ್ರತಿ ದಧಾನೇಭ್ಯೋ ಮಹೇಷುಂ ಧನುಃ
ಸವ್ಯೇನಾನ್ಯತಮೇನ ವಃ ಇಷುಧಿ ಕರೇಣಾತ್ತಂ ವಹದ್ಭ್ಯೋ ನಮಃ ॥೮॥

ಅಸ್ಯದ್ಭ್ಯಶ್ಚ ನಮೋಽಥ ಕುರ್ವತ ಇಮೇ ಯುದ್ಧಾಯ ಸಜ್ಯಾನ್ಯಲಂ
ಸಜ್ಯೇ ದಿವ್ಯಧನುಷ್ಯಮೋಘಶರಸಂಧಾನಂ ಮುಹುರ್ವೇಗತಃ ।
ಕುರ್ವದ್ಭ್ಯಶ್ಚ ನಮೋನಮಃ ಶರವರಾನ್ ಸಂಧಾಯ ಚಾಪೇ ಸಮಾ
ಕರ್ಷದ್ಭ್ಯೋ ವಿಸೃಜದ್ಭ್ಯ ಏವ ಚ ನಮೋ ಭೂಯೋ ನಮಃ ಸಾಯಕಾನ್ ॥೯॥

---

ನೀನು ಸ್ವಾಮಿಯಾಗಿರುವೆ. ನೀನು ಪ್ರಪಂಚದಲ್ಲೆಲ್ಲಾ ಸುತ್ತಾಡುತ್ತಾ ಭೂಮಿಯನ್ನು ಬಲಾತ್ಕಾರವಾಗಿ ಪೀಡಿಸುತ್ತಿರುವ ವ್ಯಾಧರೊಡನೆ ನೀನೂ ಸೇರಿಬಿಡುವೆ. ಹೀಗೆ ಸರ್ವವ್ಯಾಪಿಯಾದ ನಿನಗೆ ಸದಾ ವಂದನೆಗಳು. ॥೭॥

ಚಿಕ್ಕ ಗುಡ್ಡಗಾಡುಗಳಲ್ಲಿ ಅಡಗಿ, ಕುತಂತ್ರಗಳಿಂದ ಧನವನ್ನು ಅಪಹರಿಸುವಂತಹ ಕುಲುಂಚಕರಿಗೂ ನೀನು ಸ್ವಾಮಿಯೆನಿಸಿರುವೆ. ಕಾಡಿನಲ್ಲಿ ಒಂದು ಕೈಯ್ಯಲ್ಲಿ ಮಹಾಧನುಸ್ಸನ್ನು ಹಿಡಿದು, ಮತ್ತೊಂದು ಕೈಯಿಂದ ಬಾಣಪ್ರಯೋಗ ಮಾಡಲಿರುವ ಧನುರ್ಧಾರಿಗಳಾದ ಹಿಂಸಕವೃಂದಕ್ಕೂ ನೀನೇ ಪಾಲಕನು. ಇಂತಹ ನಿನಗೆ ವಂದನೆಗಳು. ॥೮॥

ಯುದ್ಧಕ್ಕೆ ಸಿದ್ಧರಾಗಿ ಬಿಲ್ಲನ್ನು ಸಜ್ಜುಗೊಳಿಸುವವರಿಗೂ, ಯುದ್ಧದಲ್ಲಿ ಧನುಸ್ಸಿಗೆ ಬಾಣಗಳನ್ನು ಹೂಡಿ ಶತ್ರುಗಳ ಮೇಲೆ ವೇಗವಾಗಿ ಬಾಣಪ್ರಯೋಗ ಮಾಡುವವರಿಗೂ, ಹಾಗೆಯೇ ಶತ್ರುಗಳ ಮೇಲೆ ಪ್ರಯೋಗಿಸಿದ ಬಾಣಪರಂಪರೆಯನ್ನು ಮತ್ತೆ ಉಪಸಂಹರಿಸುವವರಿಗೂ, ಮತ್ತೆ ಬಾಣಬಿಡುವವರಿಗೂ ಯಜಮಾನನೆನಿಸಿದ ಮಹಾದೇವನಿಗೆ ಸರ್ವದಾ ವಂದನೆಗಳು. ॥೯॥

ಜ್ಯಾಮುಕ್ತಾನಭಿತಃ ಪರಾನಭಿಮುಖಾಂತ್ಸಂಪ್ರಾಪಯದ್ಭ್ಯಶ್ಶರಾಂ
ಸ್ತೈಃ ಶತ್ರೂನ್ ಪ್ರಹರದ್ಭ್ಯ ಏವ ಪರಿತಃ ಶಶ್ವನ್ನನೋ ವೋ ನಮಃ।
॥ ನಮ ಆಸೀನೇಭ್ಯಃ ॥
ಆಸೀನೇಭ್ಯ ಇತಸ್ತತೋ ಭುವಿ ಶಯಾನೇಭ್ಯೋ ಗುಹಾಭ್ಯಾಂತರೇ
ಷ್ವಾಯಾಸೇನ ಚ ವೋ ನಮೋ ನಮ ಇದಂ ತೇಷು ಸ್ವಪದ್ಭ್ಯಃ ಸುಖಂ
॥೧೦॥
ಜಾಗ್ರುದ್ಭ್ಯಶ್ಚ ನಮೋನಮಃ ಕ್ವಚಿದಧಿಸ್ತಿಷ್ಠದ್ಭ್ಯ ಏವ ಕ್ವಚಿತ್
ಧಾವದ್ಭ್ಯಶ್ಚ ನಮೋನಮಃ ಸಮುಪವಿಷ್ಟೇಭ್ಯಃ ಕ್ವಚಿತ್ಸಂಘಶಃ।
ಸ್ವಾಮಿಭ್ಯಃ ಸದಸಾಂ ನಮೋನಮ ಇದಂ ಚಾಶ್ವಗೃಹೇಭ್ಯೋಽಥವಾ
ಯೇಷಾಂ ಶ್ವಸ್ತನವಿತ್ತಮಾತ್ರಮಪಿ ನೈವಾಸ್ತಿ ತೇಭ್ಯೋಽಪಿ ಚ ॥೧೧॥

ಅಶ್ವಾಧ್ಯಕ್ಷತಮೇಭ್ಯ ಉಜ್ಜ್ವಲಮಹಾಸ್ತ್ರೇಭ್ಯೋ ನಮಃ ಶ್ರೀಮತೋ
ದೇವಸ್ಯಾನುಚರಾಃ ಕಿರಾತವಪುಷಃ ಶ್ರೀ ರುದ್ರಸಂಘಾ ಪರೇ।
ಲೀಲಾಸಂಭೃತವಿಗ್ರಹಾ ಭಗವತಸ್ತಸ್ಯಾಂಶಭೂತಾಸ್ಸದಾ
ಯೇ ಚಾನ್ಯೇ ಬಹವಶ್ಚರಂತಿ ಪರಿತಸ್ತೇಭ್ಯೋಽಪಿ ನಿತ್ಯಂ ನಮಃ ॥೧೨॥

---

ಹೆದೆಯನ್ನೆಳೆದು ಶತ್ರುಗಳ ಮೇಲೆ ಬಾಣಪ್ರಯೋಗಮಾಡಿ, ಮತ್ತೆ ಅದೇ ಬಾಣವನ್ನು ಉಪಸಂಹರಿಸುತ್ತಾ ಶತ್ರುಕುಲವನ್ನೇ ನಿರ್ಮೂಲಗೊಳಿಸುವ ನಿನ್ನ ಅಂಶಸಂಭೂತರಿಗೆ ನಮಸ್ಕಾರ. ಭೂಲೋಕದಲ್ಲಿ ಅಲ್ಲಲ್ಲಿ ಆಯಾಸದಿಂದ ಕುಳಿತಿರುವವರಿಗೂ, ಗುಹಾಭ್ಯಂತರ ಪ್ರದೇಶದಲ್ಲಿ ಆಯಾಸಪರಿಹಾರಕ್ಕಾಗಿ ಮಲಗಿ ನಿದ್ರಿಸುವಂತಹವರಿಗೂ ನೀನು ಸ್ವಾಮಿಯಾಗಿರುವೆ. ಇಂತಹ ಮಹಾಮಹಿಮನಾದ ನಿನಗೆ ಸದಾ ವಂದನೆಗಳು. ॥೧೦॥

ನಿದ್ದೆಯಿಂದೆಚ್ಚೆತ್ತಿರುವವರಿಗೂ, ಮಲಗಿ ನಿದ್ರಿಸುತ್ತಿರುವವರಿಗೂ, ಓಡುವವರಿಗೂ, ಕುಳಿತಿರುವವರಿಗೂ, ಸಭಾನಾಯಕರಿಗೂ, ಅಶ್ವಗೃಹಗಳಿಗೂ, ಅಹನ್ಯಹನಿ ಕಾಲಕ್ಷೇಪದಿಂದ ಕೇವಲ ದರಿದ್ರರೆನಿಸಿರುವವರಿಗೂ, 'ಒಡೆಯನೆನಿಸಿರುವ ಮಹೇಶ್ವರನೇ, ನಿನಗೆ ವಂದನೆಗಳು. ॥೧೧॥

ಅಶ್ವಾಧ್ಯಕ್ಷರಿಗೂ, ಮಹತ್ಪ್ರಕಾಶವುಳ್ಳ ಅಸ್ತ್ರಗಳಿಗೂ ಒಡೆಯನಾಗಿರುವ ಮಹೇಶ್ವರನೇ, ನಿನಗೆ ಅನುಚರರೆನಿಸಿ, ಕಿರಾತವೇಷದಿಂದಿರುವ ನಿನ್ನ ಗಣಗಳೆಲ್ಲವೂ

ಸ್ವಾತ್ಮಾನಂ ಹೃದಿ ಭಾವಯಂತಮನಿಶಂ ರುದ್ರಂ ರಿಪುಘ್ನಂ ಸತಾಂ
ರಾಜಾಮಾತ್ಯಸಮಸ್ತರಾಷ್ಟ್ರಪುರಹಸ್ತ್ಯಶ್ವಾದಿರೋಗಾಪಹಂ ।
ಬರ್ಹೋತ್ತಂಸಧರಂ ಕಿರಾತವಪುಷಂ ದೇವಂ ಯುವಾನಂ ತ್ವಭಿ
ರ್ಭೂತೈಶ್ಚಾವೃತಮುಗ್ರತೋ ಮುನಿಜನೈರ್ಧ್ಯೇಯಂ ಸದಾ ಚಿಂತಯೇ॥೧೩॥

ಯೋತ್ರಾನುವಾಕತ್ರಯಮೇತದದ್ಭುತಂ
ಯೋರ್ಥಂ ತಥಾ ಧ್ಯಾನಮಿದಂ ಹೃದಾ ಮುದಾ ।
ಸಂಧಾಯ ಮಂತ್ರಾಂಶ್ಚ ಶಿವಸ್ಯ ಭಾವತಃ
ಪಠೇಚ್ಚ ಮುಕ್ತಿಂ ಸಮವಾಪ್ನ ಮುಕ್ತಧೀಃ ॥೧೪॥

॥ ನಮ ಅವ್ಯಾಧಿನೀಭ್ಯಃ ॥

ಸರ್ವಾಭ್ಯಶ್ಚ ನಮೋಸ್ತು ಯಾ ಭಗವತಃ ಸೇನಾಃ ಸಮಂತಾತ್ಪಲಾ
ನಾವಿಧ್ಯಂತಿ ಜಗದ್ಧಿತಾಯ ವಿವಿಧಂ ಯಾಸ್ತಾಡಯಂತ್ಯುದ್ಧತಾನ್ ।

---

ಲೀಲಾಮಾತ್ರದಿಂದ ತಮಗೆ ಬೇಕಾದ ಶರೀರಗಳನ್ನು ಧರಿಸಬಲ್ಲವು. ನಿನ್ನ ಅಂಶ ಸಂಭೂತರಾದುದರಿಂದಲೇ, ಅವರಿಗೆ ಅಷ್ಟು ಮಹಿಮೆಯುಂಟಾಗಿರುವುದಲ್ಲವೆ! ಅಂತಹ ಮಹಾಮಹಿಮನಾದ ನಿನಗೆ ಸದಾ ವಂದನೆಗಳು. ॥೧೨॥

ರುದ್ರನೇ, ನೀನು ಸದಾ ಆತ್ಮಧ್ಯಾನನಿರತನಾಗಿರುವೆ. ನೀನು ರಾಜ, ಮಂತ್ರಿ, ರಾಷ್ಟ್ರದ ಪ್ರಜೆಗಳು, ಪುರ, ಹಸ್ತಿ, ಅಶ್ವ ಮುಂತಾದವರ ಆಧಿವ್ಯಾಧಿಗಳನ್ನು ನಾಶಗೊಳಿಸುವುದರಲ್ಲಿ ಅತ್ಯಂತ ಸಮರ್ಥನು. ಪರಶಿವನು ತನ್ನ ಶಿರಸ್ಸಿನಲ್ಲಿ ನವಿಲುಗರಿಯನ್ನು ಧರಿಸಿರುವವನು. ಕಿರಾತವೇಷಧಾರಿಯು. ಪಂಚಭೂತಗಳೆನಿಸಿದ ನಾಯಿವೇಷದ ಪ್ರಾಣಿಗಳಿಂದಲೂ, ಮುನಿಜನರಿಂದಲೂ ಪರಿವೃತನಾಗಿರುವ ನಿನ್ನನ್ನು ನಾನು ಸರ್ವದಾ ಧ್ಯಾನಿಸುತ್ತಿರುವೆನು. ॥೧೩॥

ಹೀಗೆ ಇಲ್ಲಿನವರೆಗೂ ಹೇಳಿದ ಮೂರು ಅನುವಾಕಗಳ ಅರ್ಥವನ್ನು ತಿಳಿದು ಯಾರು ಶಿವಧ್ಯಾನಪುರಸ್ಸರವಾಗಿಯೂ, ಮಂತ್ರಜಪದ ವಿಧಾನದಿಂದಲೂ ಪರಶಿವನನ್ನು ಯಾರು ಸೇವಿಸುವರೋ, ಅಂತಹವರು, ಪರಶಿವಾನುಗ್ರಹದಿಂದ ಸ್ಥಿರಮುಕ್ತಿಯನ್ನು ಪಡೆಯುವರು. ॥೧೪॥

ಭಗವಂತನ ಸುತ್ತಲೂ ಇರುವ ಅಗಾಧವಾದ ಸೈನ್ಯಸಮೂಹಕ್ಕೆ ವಂದನೆಗಳು. ಆ ಸೈನ್ಯವು ಲೋಕರಕ್ಷಣಾರ್ಥವಾಗಿ ಲೋಕಕಂಟಕರಾಗಿರುವ ಶತ್ರುಸಮೂಹವ

ಯಾ ಉತ್ಕೃಷ್ಟಗಣೈಶ್ಚ ಪತ್ತಿನಿವಹೈಃ ಪೂರ್ಣಾಶ್ಚ ಯಾ ಹಿಂಸನೀ
ರ್ನ್ಯಾಗಪಾರಾನ್ ಪರಿಗೂಹಯಂತಿ ಕುಶಲಪ್ರಜ್ಞಾವಿಶೇಷಾಶ್ಚ ಯೇ ॥೧೫॥

ತೇಷಾಂ ಯೇ ಪತಯಶ್ಚ ಯೇತ್ವನಿಯತಾಂ ವೃತ್ತಿಂ ಮುಹುಸ್ಸಂಶ್ರಿತಾ ।
ನಾನಾಜಾತಿಸಮುದ್ಭವಾ ಬಹುವಿಧಕ್ಷುದ್ರಕ್ರಿಯಾಜೀವಿನಾಂ ।
ಸಂಸೂತಾ ಅಥ ರಾನವಂತ್ಯಪಿ ಚ ಯೇ ಭೂತರಕ್ಷೋಗಣಾ ।
ರುದ್ರಾಃ ಪಾರಿಷದಾಸ್ತಥಾಧಿಪತಯಸ್ತೇಷಾಂ ಚ ಯೇ ಯೇ ಪರೇ ॥೧೬॥

ನಗ್ನಾ ಮುಂಡಿತಮಸ್ತಕಾತಿವಿಕೃತಾಕಾರಾಶ್ಚ ಯೇ ಸ್ವೇಚ್ಛಯಾ ।
ಸಿಂಹವ್ಯಾಘ್ರಗಜಾಶ್ಚ ಸೈರಿಭವೃಷಾದ್ಯಾಕಾರಭಾಜಾಂಶ್ಚ ಯೇ ।
ಜ್ಞಾನಾಕಾರಗುಣಪ್ರಭಾವವಿಭವೈರ್ನಿತ್ಯಂ ಮಹಾಂತಶ್ಚ ಯೇ ।
ಕ್ಷುದ್ರಜ್ಞಾನಗುಣಪ್ರಭಾವವಿಭವಾ ಯೇ ವಾ ರಥಾಧಿಷ್ಠಿತಾಃ ॥೧೭॥

ಯೇ ಯುದ್ಧೇಷು ರಥಾನ್ವಿತೇಷು ಚರಣೈರ್ಧಾವಂತಿ ಶತ್ರೂನ್ ಮುಹು ।
ಯೈರ್ೀ ಚಂದ್ರಾರ್ಕಮಹೀಮುಖಾಃ ಸುರಗಣಾಃ ಪ್ರಾಪ್ತಾ ರಥತ್ವಂ ವಿಭೋಃ

---

ನ್ನೆಲ್ಲಾ ನಾಶಗೊಳಿಸುವುದು. ಉತ್ಕೃಷ್ಟಗಳಾದ ಶತ್ರುಸೈನ್ಯಕ್ಕೆ ಸಂಪೂರ್ಣವಾಗಿ ನಮಸ್ಕಾರ. ॥೧೫॥

ಅನಿಯತವಾದ ವೃತ್ತಿಯಲ್ಲಿ ಹೋಗುವ ದುಷ್ಟರ ಗುಂಪನ್ನು ನಾಶಗೊಳಿಸುವಂತಹ ಸೈನ್ಯಕ್ಕೂ, ಬಹುವಿಧವಾದ ಕ್ಷುದ್ರಕಾರ್ಯಗಳಲ್ಲಿ ಜೀವನ ಮಾಡುವವರ ಸೈನ್ಯಕ್ಕೂ ಯಜಮಾನನೆನಿಸಿದ ಮಹಾದೇವನಿಗೆ ವಂದನೆಗಳು. ರಕ್ಷಸ್ಸುಗಳು, ಭೂತಗಳು, ರುದ್ರರು, ಪಾರಿಷದಗಣಗಳು, ಇವೆಲ್ಲಕ್ಕೂ ಅಧಿಪತಿಗಳಾಗಿರುವ ಶಿವ ಸೇನಾಪತಿಗಳಿಗೂ ವಂದನೆಗಳು. ॥೧೬॥

ನಗ್ನರಾಗಿ, ಮುಂಡಿತಕೇಶರಾಗಿ, ನಾನಾವಿಧವಾದ ವಿಕಾರವುಳ್ಳವರಾಗಿ, ಸಿಂಹ, ಹುಲಿ, ಆನೆ, ಸೈರಿಭ, ಎತ್ತು ಮುಂತಾದ ಪ್ರಾಣಿಗಳ ಆಕಾರವುಳ್ಳ ಗಣಗಳಿಗೂ, ಜ್ಞಾನಿಗಳಾಗಿ, ಗುಣಶಾಲಿಗಳಾಗಿರುವ ಮಹಾತ್ಮರಿಗೂ, ಕ್ಷುದ್ರಜ್ಞಾನಿಗಳಾಗಿ ರಥಾಧಿಷ್ಠಿತರಾಗಿರುವ ರುದ್ರಗಣಗಳಿಗೂ ನಮಸ್ಕಾರಗಳು. ॥೧೭॥

ರಥದಮೇಲೆ ಕುಳಿತು ಯುದ್ಧಮಾಡುವ ಸಮಯದಲ್ಲಿ ಯಾವ ಕಾಲಾಳುಗಳು ಶತ್ರುಗಳನ್ನು ಹೊಡೆದೋಡಿಸುವರೋ, ಅಂತಹ ಶಿವಸೈನ್ಯಕ್ಕೆ ನಮಸ್ಕಾರ.

 

ಯೇ ರಕ್ಷಂತಿ ರಥಾನ್ ಬಹೂನ್ ಸ್ವಯಮುಪಾರುಹ್ಯೈವ ಶಕ್ತ್ಯಾಸ್ವಯಾ ।
ಯೇ ರುದ್ರಾಃ ಪರಿತಃ ಶಿವಸ್ಯ ಪುರತಃ ಸೇನಾತ್ಮನೋತ್ಯಾಸತೇ ॥೧೮॥

ಏತಾಸಾಮಪಿ ನಾಯಕಾಃ ಸುರವರಾ ಯೇ ಸೂತರೂಪಾಃ ಸುರಾ
ಯೇ ಗೃಹ್ಣಂತಿ ರಥೇಷು ರಶ್ಮಿನಿವಹಾನ್ ಸೂತಾಜ್ಞಯಾ ಕಿಂಕರಾಃ ।
ಯೇಸ್ಯುರ್ವರ್ಧಕಿಜಾತಿಜಾ ಅಪಿ ಚ ಯೇ ದಕ್ಷಾ ರಥಾನಾಂ ಕೃತೌ
ಯೇ ಜಾತಾಶ್ಚ ಕುಲಾಲಜಾತಿಷು ತಥಾ ಯೇ ಲೋಹಕಾರಾಶ್ಚ ಯೇ॥೧೯॥

ನಾನಾಪಕ್ಷಿಸಮೂಹಬಂಧನವಿಧೌ ದಕ್ಷಾಶ್ಚ ಯೇ ವೈ ಜನಾ
ಮತ್ಸ್ಯಾದಿಪ್ರತಿಘಾತಕಾ ಅಪಿ ಚ ಯೇ ಕುರ್ವಂತಿ ತೀಕ್ಷ್ಣಾನ್ನಿಷೂನ್ ।
ಯೇ ವಾ ಧನ್ವಕೃತಶ್ಚ ಯೇ ವನಮೃಗವ್ಯಾಧಾಃ ಸದಾ ಯೇ ನರಾ
ನೇತಾರಶ್ಚ ಶುನಾಂ ಚ ವೃತ್ತಿನಿತರಾ ಯೇ ವಾ ಶುನಾಮಾಕೃತಿಂ ॥೨೦॥

---

ಚಂದ್ರ, ಸೂರ್ಯ, ದೇವತೆಗಳು ಮುಂತಾದವರೆಲ್ಲಾ ಪರಶಿವನ ರಥವಾಗಿ ನಿಂತು ಪರಶಿವ ರಕ್ಷಕರಾಗಿ ನಿಂತುಬಿಟ್ಟರೋ, ಅಂತಹ ಸಕಲಸೈನ್ಯಕ್ಕೂ ನಮಸ್ಕಾರ. ರಥದ ಮೇಲೆ ಕೂರದೇ ಸಕಲಸೈನ್ಯವನ್ನೂ ನಾಶಗೊಳಿಸುವಂತಹ ರುದ್ರಗಣಕ್ಕೂ, ಪರಶಿವನ ಸುತ್ತುಮುತ್ತಲೂ ವ್ಯಾಪಿಸಿರುವಂತಹ ರುದ್ರಗಣಗಳಿಗೂ ನಮಸ್ಕಾರಗಳು. ॥೧೮॥

ಪ್ರಮಥಗಣಗಳಿಗೆ ನಾಯಕರಾಗಿಯೂ, ಸೂತವೃತ್ತಿಯಿಂದ ಶಿವಸೇವೆ ಮಾಡುವ ಸುರವರರಿಗೂ, ಸೂತನಾಗಿದ್ದ ಬ್ರಹ್ಮನ ಅಪ್ಪಣೆಯಂತೆ ರಥದಸೂತ್ರಗಳನ್ನು ಎಳೆಯುವವರಾಗಿಯೂ, ರಥನಿರ್ಮಾಣಮಾಡುವುದರಲ್ಲಿ ದೇವವರ್ಧಕಿಗಳಾಗಿ (ಬಡಗಿ) ರಥವನ್ನು ಕ್ರಮಪಡಿಸುವವರಾಗಿಯೂ, ಕುಂಬಾರಜಾತಿಯಲ್ಲಿಯೂ, ಲೋಹಕಾರ ಜಾತಿಯಲ್ಲಿಯೂ ಜನಿಸಿರುವ ಸಕಲ ದೇವಯೋನಿಗಳಿಗೂ ಶಿರಸಾ ವಂದಿಸುವೆನು. ॥೧೯॥

ಪಕ್ಷಿಗಳ ಗುಂಪನ್ನು ಬಲೆಯಲ್ಲಿ ಸಿಕ್ಕಿಸಿ ಹಿಡಿಯುವ ವ್ಯಾಧವೀರರಿಗೂ ಮೀನುಗಳನ್ನು ಹಿಡಿದು ಕೊಲ್ಲುವ ಬೆಸ್ತರಿಗೂ, ಕ್ರೂರಬಾಣಗಳನ್ನು ಉಗ್ರವಾದ ಧನುಸ್ಸಿನಲ್ಲಿಟ್ಟು ವನ್ಯಪ್ರಾಣಿಗಳನ್ನು ಕೊಲ್ಲುವ ನರರಿಗೂ, ನಾಯಿಗಳ ಗುಂಪಿಗೆ ಒಡೆಯರಾದವರಿಗೂ, ನಾಯಿಯ ಆಕಾರದಂತೆ ಆಕಾರವುಳ್ಳ ಪ್ರಮಥಗಣವೀರರಿಗೂ, ಪರಮೇಶ್ವರನ ಪ್ರಮಥಗಣವೆಂಬ ಮರ್ಯಾದೆಯಿಂದ ನಮಸ್ಕರಿಸುವೆನು. ॥೨೦॥

ಬಿಭ್ರಾಣಾ ಅಥ ಯೇ ಶುನಾಂ ಚ ಯತಯಃ ಶಂಭೋರಥಾಂಶಾಂಶಕಾಃ
ಸರ್ವೇ ಮರ್ತ್ಯಜಗದ್ಗತಾಃ ಕುಮನುಜಾ ವಿಶ್ವೇಶ್ವರಾಂಶಾಶ್ಚ ತೇ ।
ಯೇ ಭೂಮೌ ದಿವಿ ಚಂದ್ರಸೂರ್ಯಧರಣೀಬ್ರಹ್ಮಾಗ್ನಿವಿಷ್ಣ್ವಾದಯೋ
ಯೇ ರುದ್ರಾಶ್ಚ ಜಗಂತಿ ಪಾಂತಿ ಪರಿತಃ ಪೂರ್ಣಾಃ ಶಿವಸ್ಯಾಂಶಕಾಃ ॥೨೧॥

ಯೇ ಸಂತಿ ಪ್ರಮದಾದಿರೂಪಚರಿತಾಃ ಸರ್ವೇಭ್ಯ ಏವಾಧುನಾ ।
ತೇಭ್ಯಃ ಸಂಪ್ರತಿ ಪೂರುಷಂ ಸ್ತುತಿನತಿಂ ಕೃತ್ವಾ ನಮಸ್ಕುರ್ಮಹೇ ।
ಶಂಭುಂ ದುಃಸಹದುಷ್ಟಕಷ್ಟವಿವಿಧವ್ಯಾಧಿಜ್ವರಾಪಸ್ಮರ-
ಪ್ರಕ್ಷೇಪ್ತಾರಮಜಂ ಶಿವಂ ಸ್ಮರಹರಂ ದುರ್ವಾಸನಾಮಾರ್ಚಿತಂ ॥೨೨॥

ಭಸ್ಮೋದ್ಧೂಳಿತವಿಗ್ರಹಂ ತ್ರಿನಯನಂ ಭಾಸ್ವಜ್ಜಟಾಮಂಡಲಂ ।
ಸ್ವಾಸೀನಂ ವೃಷಭೈರ್ಗಣೈಃ ಪರಿವೃತಂ ಸಾಂಬಂ ಸದಾ ಭಾವಯೇ ।
ಶ್ರೀರುದ್ರಂ ಯಜುಷಾಂ ಚ ಮಧ್ಯಮಮಹಾಕಾಂಡೇ ಚತುರ್ಥೇಸ್ಥಿತಂ ।
ಸಂಸಾರಾಮಯಭೇಷಜಂ ಪ್ರಜಪತಾಂ ವಿಶ್ವೇಶಭಕ್ತಿಪ್ರದಂ ॥೨೩॥

---

ಪರಶಿವನ ಅಂಶಸಂಭೂತರಾಗಿ ನಾಯಿಗಳನ್ನು ಹಿಡಿದುಕೊಂಡಿರುವವರಿಗೂ, ಸಂನ್ಯಾಸಿಗಳಿಗೂ, ಭೂಲೋಕದಲ್ಲಿ ನೀಚಜಾತಿಯಲ್ಲಿ ಜನಿಸಿ ವಿಶ್ವೇಶ್ವರಾಂಶವನ್ನು ಹೊಂದಿದವರಿಗೂ, ನಮಸ್ಕಾರ. ಭೂಲೋಕದಲ್ಲಿಯೂ, ಅಂತರಿಕ್ಷದಲ್ಲಿಯೂ, ಸೂರ್ಯ, ಚಂದ್ರ, ಭೂಮಿ, ಬ್ರಹ್ಮ, ಅಗ್ನಿ, ವಿಷ್ಣು ಮುಂತಾದ ಹೆಸರಿನಿಂದ ಈಶ್ವರಾಂಶಸಂಭೂತರಾಗಿ ಹುಟ್ಟಿ ಜಗತ್ತನ್ನು ಕಾಪಾಡುತ್ತಿರುವ ಸಕಲ ರುದ್ರಾಂಶ ಸಂಭೂತರಿಗೂ ನಾನಾವಿಧವಾದ ವಂದನೆಗಳು. ॥೨೧॥

ಸ್ತ್ರೀಯರೇ ಮೊದಲಾದವರ ರೂಪದಿಂದ ಸಂಚರಿಸುವ ಸಕಲ ಶಿವಾಂಶ ಸಂಭೂತರಿಗೂ, ಪುರುಷವರ್ಗದಲ್ಲಿ ಶಿವಾಂಶಸಂಭೂತರಾದವರಿಗೂ ತಪ್ಪದೆ ನಮಸ್ಕರಿಸುವೆನು. ನಾನಾವಿಧವಾದ ಕಷ್ಟನಷ್ಟಗಳನ್ನೂ ಜ್ವರಾಪಸ್ಮರಾದಿಗಳನ್ನೂ ನಾಶಗೊಳಿಸುವಂತಹ, ಸ್ಮರನಾಶಕನಾದ, ಪಾಪಿಷ್ಠರಿಂದಲೂ ಪೂಜಿತನಾಗಿರುವ ಪರಶಿವನನ್ನು ಸರ್ವದಾ ಧ್ಯಾನಮಾಡುತ್ತಾ ವಂದಿಸುವೆನು. ॥೨೨॥

ಪರಶಿವನು ಭಸ್ಮೋದ್ಧೂಳಿತವಿಗ್ರಹನು. ಮೂರು ಕಣ್ಣುಗಳುಳ್ಳವನು. ಪ್ರಕಾಶಮಾನವಾದ ಜಟಾಮಂಡಲಗಳುಳ್ಳವನು. ವೃಷಭೇಶನಿಂದಲೂ ಪ್ರಮಥಗಣಗಳಿಂದಲೂ ಪೂಜಿತನಾಗಿ ಮಧ್ಯಪೀಠದಲ್ಲಿ ವಿರಾಜಿಸುವವನು. ಯಜುರ್ವೇದದಲ್ಲಿ

ತಸ್ಮಿನ್ನರ್ಥಯುತೋ ವಿಭಾಸತಿ ಹೃದಾಮತ್ರಾನುವಾಕೋಮುದಾ ।
ಚಾತುರ್ಥಃ ಸಕಲಾತ್ಮತಾಂ ಭಗವತೋ ವಕ್ತುಂಪ್ರವೃತ್ತೋ ಮುನೇ ॥೨೪॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಸ್ಕಂದಪ್ರೋಕ್ತರುದ್ರಭಾಷ್ಯವಿವರಣೇ ಅಷ್ಟಾವಿಂಶೋಽಧ್ಯಾಯಃ

---

ಪ್ರೋಕ್ತವಾಗಿರುವ ಶ್ರೀ ರುದ್ರಚತುರ್ಥಾನುವಾಕದಲ್ಲಿ ನಿಜರೂಪದಿಂದ ತೋರಿ ಬರುವವನು. ಈರೀತಿ ಪವಿತ್ರವಾಗಿರುವ ರುದ್ರಜಪಮಾಡುವ ಭಕ್ತರ ಸಂಸಾರವೆಂಬ ವ್ಯಾಧಿಯನ್ನು ನಾಶಗೊಳಿಸುವಂತಹ ಮಹಾದೇವನನ್ನು ನಾನು ತಪ್ಪದೆ ಪ್ರಾರ್ಥನೆ ಮಾಡುವೆನು. ॥೨೩॥

ಈರೀತಿ ರುದ್ರಾಧ್ಯಾಯದ ಚತುರ್ಥಾನುವಾಕವು ಪರಶಿವನ ನೈಸರ್ಗಿಕ ಗುಣಗಳನ್ನು ವಿವರಿಸತಕ್ಕುದಾಗಿ ಷಡ್ಗುಣೈಶ್ವರ್ಯಪರಿಪೂರ್ಣನಾದ ಶಂಕರನು ಸಕಲ ಜಗದ್ವ್ಯಾಪಕನು ಎಂಬರ್ಥವನ್ನು ವಿವರಿಸುವುದು. ಇಂತಹ ಮಹತ್ಪರಿಪೂರ್ಣವಾದ ರುದ್ರಾಧ್ಯಾಯದಲ್ಲಿ ಚತುರ್ಥಾನುವಾಕದ ಅರ್ಥವನ್ನು, ಎಲೈ ಜೈಗೀಷವ್ಯ ಮಹಾಮುನಿಯೇ, ನಿನಗೆ ವಿಸ್ತಾರವಾಗಿ ಈಗ ತಿಳಿಯಪಡಿಸಿರುವೆನು. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮಹರ್ಷಿವೃಂದಕ್ಕೆ ಶ್ರೀರುದ್ರಾಧ್ಯಾಯದ ಚತುರ್ಥಾನುವಾಕದ ಅರ್ಥವನ್ನು ವಿವರಿಸಿ ಹೇಳಿದನು. ॥೨೪॥

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ
ಶ್ರೀ ಶಿವಗೌರೀಸಂವಾದರೂಪವಾಗಿ ಸ್ಕಂದಕೃತವಾದ ರುದ್ರಭಾಷ್ಯವಿವರಣೆಯನ್ನು
ತಿಳಿಯಪಡಿಸುವ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಏಕೋನತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

॥ ನಮೋ ಭವಾಯ ಚ ॥

ವಿಶ್ವಂ ಯಸ್ಸತತಂ ಬಿಭರ್ತಿ ಸಮಧಿಷ್ಠಾಯೈವ ಮೂರ್ತ್ಯಷ್ಟಕಂ
ಯಸ್ತಾಭಿಸ್ತನುಭಿಃ ಶಿವಾಭಿರನುಗೃಹ್ಣಾತೀವ ತಸ್ಮೈ ನಮಃ ।
ಯಸ್ಸರ್ವತ್ರ ಸುಪೂರ್ಣ ಏವ ಭವತಿ ಸ್ವಸ್ಮಿನ್ವಿಲೀನಂ ಜಗ
ದ್ಭೂಯೋ ಭಾವಯತಿ ಸ್ಥಿತಂ ಭವತಿ ತದ್ಯಸ್ಮಿಂಶ್ಚ ಯೋ ಭಾವ್ಯತೇ ॥೧॥

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಪರಮೇಶ್ವರನು ತನ್ನ ಅಷ್ಟಾಂಶಗಳನ್ನು ಅಷ್ಟಮೂರ್ತಿಗಳನ್ನಾಗಿ ಮಾಡಿಕೊಂಡು ಅವುಗಳಿಂದ ಸಮಸ್ತ ಜಗತ್ತನ್ನೂ ನಿರ್ವಹಿಸುತ್ತಿರುವನು. ಹೀಗೆ ಬೇರೆ ಬೇರೆ ಆಕಾರ ಪಡೆದಿದ್ದರೂ ತಾನು ಮಾತ್ರ ಅಪರಿಪೂರ್ಣನಾಗಿಲ್ಲ. ಸುಪೂರ್ಣನಾಗಿಯೇ ಕಂಡುಬರುತ್ತಿರುವನು. ಚರಾಚರಾತ್ಮಕವಾದ ಪ್ರಪಂಚವನ್ನೆಲ್ಲಾ ತನ್ನಲ್ಲಿಯೇ ಅಡಗಿಸಿಕೊಳ್ಳುವನು. ಮತ್ತೆ ಲೋಕವನ್ನು ನಡೆಸುವ ಲೀಲೆಯಿಂದ ಸೃಷ್ಟಿಮಾಡುವನು. ಪ್ರಪಂಚಾತ್ಮನಾಗಿ ತಾನೇ ಪರಿಣಾಮಗೊಳ್ಳುವನು. ಇಂತಹ ಮಹಾಮಹಿಮನಾದ ದೇವದೇವನಿಗೆ ವಂದನೆಗಳು. ॥೧॥

ಯೋಗೀಂದ್ರೈರ್ಭಗವಾನಪಾಂ ಸ್ವಯಮಧಿಷ್ಠಾತಾ ಚ ಯೋಽಸೌ ರುಜಾಂ
ನಿತ್ಯಂ ದ್ರಾವಯಿತಾ ಸತಾಂ ಸ್ವಯಮಧಿಷ್ಠಾತಾ ಚ ಸೂರ್ಯಸ್ಯ ಯಃ ।
ತಸ್ಮೈ ನಿತ್ಯಮಿದಂ ನಮೋಽಸ್ತು ಯುಗಪತ್ಕಲ್ಪಾಂತಕಾಲೇ ಜಗತ್
ಸೃಷ್ಟ್ಯೈವಾಶು ವಿಹಿಂಸತೇ ಸ್ವಯಮಧಿಷ್ಠಾತ್ರೇ ತಥಾಗ್ನೇರಪಿ ॥೨॥

ಆಜ್ಞಾದಂಡಧರಃ ಪ್ರಸಾದಿತಮಹಾಮಾಯೋರುಪಾಶಃ ಪಶೂನ್
ಬ್ರಹ್ಮಾದೀನವತೀಹ ಭೂತನಿವಹಾಧಿಷ್ಠಾತೃರೂಪಶ್ಚ ಯಃ ।
ತಸ್ಮೈ ಸರ್ವಸುರಾಧಿಕಾಯ ಜಗತಾಮೀಶಾಯ ತುಭ್ಯಂ ನಮೋ
ನೀಲಗ್ರೀವಕಲೇವರಾಯ ಶಿತಿಕಂಠಾಯೇಶ ತುಭ್ಯಂ ನಮಃ ॥೩॥

॥ ನಮಃ ಕಪರ್ದಿನೇಚ ॥

ಯೋಗೀಶಾಯ ಕಪರ್ದಿನೇಽಖಿಲಮಹಾಯೋಗೇಷು ದೀಕ್ಷಾಭೃತೇ
ತುಭ್ಯಂ ವ್ಯುಪ್ತಶಿರೋರುಹಾಯ ಯಜಮಾನಾಕಾರಾಯ ತುಭ್ಯಂ ನಮಃ ।

---

ಸಮಸ್ತ ಯೋಗಿಗಳಿಗೂ, ಜಲರಾಶಿಗೂ, ಅಧಿಷ್ಠಾತೃವಾಗಿ ತನ್ನ ಭಕ್ತರ ಸಕಲ ಕಷ್ಟಗಳನ್ನೂ ನಿವಾರಿಸುವಂತಹ ಮಹಾದೇವನು ಸೂರ್ಯನಿಗೂ ಆಶ್ರಯ ಸ್ಥಾನನೆನಿಸಿರುವನು. ಅಗ್ನಿಗೂ ಉತ್ಪತ್ತಿಸ್ಥಾನನಾಗಿರುವನು. ಹೀಗೆ ಏಕಕಾಲದಲ್ಲಿ ಪ್ರಲಯ ಮತ್ತು ಸೃಷ್ಟಿಕಾರ್ಯಗಳಿಗೆ ಕಾರಣಗಳಾದ ವಸ್ತುಗಳಿಗೆ ಆಧಾರಭೂತನಾಗಿರುವ ಪರಶಿವನಿಗೆ ಸಾಷ್ಟಾಂಗ ನಮಸ್ಕಾರಗಳು. ॥೨॥

ಆಜ್ಞೆಯನ್ನು ನಿರ್ವಹಿಸುವ ದಂಡಾಯುಧಧಾರಿಯಾಗಿಯೂ ಜನರಿಗೆ ಮೋಹಾದಿಗಳನ್ನು ಬೀರುತ್ತಾ ಅವರನ್ನು ಪಾಪಬದ್ಧರನ್ನಾಗಿಯೂ ಮಾಡಿಕೊಂಡು ಬ್ರಹ್ಮನೇ ಮೊದಲಾದ ಸಕಲ ಪ್ರಾಣಿವರ್ಗದವರನ್ನೂ ರಕ್ಷಿಸುತ್ತಿರುವೆ. ಮಹೇಶ್ವರನೇ, ವಿಷದಿಂದ ಕಪ್ಪಾದ ಕಂಠಪ್ರದೇಶವುಳ್ಳವನೇ, ದೇವದೇವನೇ, ನಿನಗೆ ನಮಸ್ಕಾರ. ॥೩॥

ಸಮಸ್ತ ಯೋಗಿಗಳಿಗೂ ಒಡೆಯನಾಗಿ ಜಟಾಜೂಟದಿಂದ ಶೋಭಿಸುತ್ತಿರುವ ಯಜಮಾನಸ್ವರೂಪಿಯಾದ ಪರಶಿವನೇ, ನೀನು ದಿಗಂಬರನು, ದೀಕ್ಷಿತನು ಮತ್ತು ಆಕಾಶವನ್ನೇ ಕೇಶವನ್ನಾಗಿ ಮಾಡಿಕೊಂಡಿರುವವನು. ಸಾವಿರ ಕಣ್ಣುಗಳಿಂದ

॥ ನಮಸ್ಸಹಸ್ರಾಕ್ಷಾಯ ॥

ದೇವೇಶಾಯ ಸಹಸ್ರಲೋಚನಭೃತೇ ಶಕ್ರಾತ್ಮನೇ ತೇ ಶಯಾ
ನ್ಯತ್ಯಂತೋತ್ತಮಧನ್ವಬಾಣವಿವಿಧಾನೇಕಾಯುಧಾನಾಂ ಯುಧಿ ॥೪॥

॥ ನಮೋ ಗಿರಿಶಾಯಚ ॥

ಬಿಭ್ರಣಾಯ ನಮೋ ಗಿರೀಶ್ವರಕೃತಾವಾಸಾಯ ದಿಗ್ವಾಸಸೇ
ರಶ್ಮಿವ್ರಾತವೃತಾರ್ಕಮಂಡಲಸಮಾವಿಷ್ಟಾಯ ಸೂರ್ಯಾತ್ಮನೇ ।
ಸರ್ವಪ್ರಾಣಿಹೃದಂಬುಜೇಷು ವಸತೇ ತುಭ್ಯಂ ನಮೋ ರೇತಸಃ
ಸೇಕ್ತ್ರೇ ದಿವ್ಯಹಿರಣ್ಮಯಸ್ಯ ಚ ಹರೇ ಗರ್ಭೇ ವಿಧಾತ್ರೇ ವಿಧೇಃ ॥೫॥

ಶೂರಾಯಾತ್ತಮಹೇಷವೇ ನಮ ಇದಂ ಸ್ವಲ್ಪಪ್ರಮಾಣಾಯ ಚ
ಸ್ವೇಚ್ಛಾಸಂಕುಚಿತಾಂಗಕಾಯ ಚ ಸಮಸ್ತಸ್ಮೈ ಬೃಹದ್ರೂಪಿಣೇ ।
ಜ್ಞಾನಾಕಾರವಯಸ್ತಪೋಭಿರಭಿವೃದ್ಧಾಯಾಥ ತಸ್ಮೈ ನಮೋ
ವೃದ್ಧಾಯಾಧಿಕದೀರ್ಘಕಾಲಪಯಸಾಂ ಸ್ತ್ರೋತ್ರೈಃ ಪ್ರವೃದ್ಧಾಯ ಚ॥೬॥

---

ಕೂಡಿದ ಇಂದ್ರಸ್ವರೂಪನು. ಯುದ್ಧವೊದಗಿದಾಗ ಸಹಸ್ರಾರು ಸಂಖ್ಯೆಯ ಬಾಣ ಬತ್ತಳಿಕೆಗಳಿಂದೊಡಗೂಡಿ ಶತ್ರುನಿಗ್ರಹಮಾಡುವವನು ನೀನು. ಇಂತಹ ಮಹಾ ಮಹಿಮನಾದ ನಿನಗೆ ಶಿರಸಾ ವಂದನೆಗಳು. ॥೪॥

ಕೈಲಾಸವಾಸಿಯಾಗಿ, ಸಮಸ್ತ ಪ್ರಾಣಿಗಳನ್ನೂ ರಕ್ಷಿಸುತ್ತಾ ದಿಗಂಬರನಾಗಿ ರುವ ಮಹಾದೇವನೇ, ಕಿರಣಮಧ್ಯವರ್ತಿಯಾಗಿರುವ ಸೂರ್ಯಮಂಡಲದಲ್ಲಿ ನೀನು ಸೂರ್ಯರೂಪದಿಂದ ಜಗತ್ತಿನಲ್ಲಿ ಸಂಚರಿಸುವೆಯಲ್ಲವೆ? ಸಕಲ ಪ್ರಾಣಿಗಳ ಹೃದಯಾ ಕಾಶದಲ್ಲಿ ವಾಸಮಾಡುತ್ತಾ, ವೀರ್ಯರೂಪದಿಂದ ದಿವ್ಯಹಿರಣ್ಮಯರೂಪಧಾರಿಯಾಗಿ ಸಕಲರ ಗರ್ಭಕುಹರದಲ್ಲಿಯೂ ವ್ಯಾಪಿಸುವೆ. ಹೀಗೆ ಸರ್ವವ್ಯಾಪಿಯಾಗಿರುವ ಮಹಾದೇವನೇ, ನಿನಗೆ ನಮಸ್ಕಾರ. ॥೫॥

ಶೂರನೂ, ಎತ್ತಿಹೊಡೆಯುವ ಮಹಾಬಾಣವುಳ್ಳವನೂ, ಸೂಕ್ಷ್ಮರೂಪಿಯೂ ಆದ ಮಹಾದೇವನೇ, ನೀನು ನಿನ್ನ ಇಷ್ಟದಂತೆ ನಿನ್ನ ಸಕಲ ಅವಯವಗಳನ್ನೂ ಸಂಕುಚಿತವನ್ನಾಗಿ ಮಾಡಿಕೊಳ್ಳುವೆ. ಜ್ಞಾನದಲ್ಲಿ, ಆಕಾರದಲ್ಲಿ, ವಯಸ್ಸಿನಲ್ಲಿ, ತಪ ಸ್ಸಿನಲ್ಲಿ, ಎಲ್ಲರಿಗಿಂತ ದೊಡ್ಡವನೆನಿಸಿರುವೆ. ವೃದ್ಧನಾಗಿ ಅತಿಶಯವಾದ ವಯಸ್ಸಂಖ್ಯೆ

ಸಮ್ಯಗ್ವರ್ಧಯತೇ ಸ್ವಭಕ್ತನಿವಹಾನ್ ದೇವಾಯ ತಸ್ಮೈ ನಮೋ
ವಿಶ್ವಾಗ್ರ್ಯಾಯ ತಥಾ ಪ್ರಧಾನಪುರುಷಾಯೇದಂ ನಮೋಸ್ತ್ವಾಶುತೇ ।

॥ ನಮಶ್ಶೀಘ್ರಿಯಾಯ ಚ ॥

ಶೀಘ್ರಾನೇಕಗತಿಪ್ರಭೇದಕುಶಲಾಯೇದಂ ನಮಶ್ಶೀಘ್ರಗೇ ।
ಷ್ವಾವಿರ್ಭಾವಯತೇ ಚ ತೇಷು ವಿವಿಧಾಕಾರಪ್ರವಾಹೇಷು ಚ ॥೭॥

॥ ನಮ ಊರ್ಮ್ಯಾಯ ಚ ॥

ನಿತ್ಯಂ ಸನ್ನಿಹಿತಾಯ ತೇ ನಮ ಇದಂ ಸ್ಥಾತ್ರೇ ಮಹೋರ್ಮಿಷ್ವಪಾಂ ।
ನಿಷ್ಕಂಪಾ ವಿಗತಸ್ವನಾಃ ಪುನರವಾಚೀನಸ್ವನಾಶ್ಚಾಪಿ ಯಾಃ ।
ಆಪಸ್ತಾಸು ಚ ಸರ್ವದಾ ನಿವಸತೇ ತಸ್ಮೈ ನಮಃ ಸ್ರೋತಸಾಂ
ಮಧ್ಯೇ ಸಂನಿಹಿತಾಯ ಕಿಂ ಚ ವಸತೇ ದ್ವೀಪೇಷು ಪುಣ್ಯೇಷು ಚ ॥೮॥

---

ಯನ್ನು ಪಡೆದು ಸ್ತೋತ್ರಾದಿಗಳಿಂದ ತೃಪ್ತಿಹೊಂದುವ ಮಹಾಮಹಿಮನೇ, ನಿನಗೆ ನಮಸ್ಕಾರ. ನೀನು ಎಲ್ಲ ವಿಷಯದಲ್ಲಿಯೂ ಶ್ರೇಷ್ಠಸ್ಥಾನವನ್ನೇ ಪಡೆದಿರುವೆಯಲ್ಲವೆ! ||೬||

ತನ್ನ ಭಕ್ತರ ಸಮೂಹವನ್ನು ವೃದ್ಧಿಗೊಳಿಸಿ ರಕ್ಷಿಸುವ ವಿಶ್ವೇಶ್ವರನೇ, ನೀನು ಪ್ರಧಾನಪುರುಷನೆನಿಸಿರುವೆ. ಸಕಲ ದಿಕ್ಕುಗಳೂ ನೀನೇ ಆಗಿರುವೆ. ಶೀಘ್ರವಾದ ನಾನಾರೀತಿಯ ಗತಿಪ್ರಭೇದದಲ್ಲಿ ಕುಶಲನಾಗಿರುವ ಮಹಾಮಹಿಮನೇ, ನೀನು ಶೀಘ್ರವಾಗಿ ಓಡಿಹೋಗುವ ಪ್ರವಾಹವೇ ಮೊದಲಾದ ವಸ್ತುಜಾಲಗಳಲ್ಲಿ ಶೀಘ್ರಗಾಮಿತ್ವರೂಪ ಗುಣದಿಂದ ಕೂಡಿ ವಿರಾಜಿಸುವೆಯಲ್ಲವೆ. ಮಹಾದೇವನೇ, ಇಂತಹ ನಿನಗೆ ನಮಸ್ಕಾರವು. ||೭||

ದೊಡ್ಡ ದೊಡ್ಡ ಅಲೆಗಳಲ್ಲಿಯೂ, ಚಲಿಸದೆ ನಿಂತಿರುವ ನೀರಿನಲ್ಲಿಯೂ, ನಿಶ್ಶಬ್ದವಾಗಿ ಪ್ರವಹಿಸುವ ಗಂಭೀರ ನದಿಗಳಲ್ಲಿಯೂ, ಇನ್ನೂ ನಾನಾರೀತಿಯ ಜಲರಾಶಿಯಲ್ಲಿಯೂ ಅಡಗಿರುವ ಮಹಾದೇವನೇ, ನಿನಗೆ ವಂದನೆಗಳು. ನೀನು ಸಮಸ್ತ ಜಲಮಯವಾದ ಪ್ರದೇಶದಲ್ಲಿಯೂ, ದ್ವೀಪಗಳಲ್ಲಿಯೂ, ಪುಣ್ಯಕ್ಷೇತ್ರಗಳಲ್ಲಿಯೂ ಸಂತೋಷದಿಂದ ಸನ್ನಿಹಿತನಾಗಿರುವೆಯಲ್ಲವೆ! ಇಂತಹ ಮಹಾದೇವನೇ ನಿನಗೆ ಪ್ರಣಾಮವು. ||೮||

॥ ನಮೋ ಜ್ಯೇಷ್ಠಾಯ ಚ ॥

ತುಭ್ಯಂ ದೇವ ನಮಃ ಪಿತಾಮಹ ಹರೀಂದ್ರೇಭ್ಯಃ ಪ್ರಶಸ್ತಾಯ ಚ ।
ಜ್ಯೇಷ್ಠಾಯಾತಿಮನೋಜ್ಞನಿತ್ಯತರುಣಾಕಾರಾಯ ನಿತ್ಯಂ ನಮಃ ।
ವಿಶ್ವಸ್ಮಾದಪಿ ಪೂರ್ವಮೇವ ವಸತೇ ಸ್ಥಾತ್ರೇ ಚ ತಸ್ಮಾತ್ಪರಂ ।
ಜನ್ಮಾಂತಾದಿವಿವರ್ಜಿತಾಯ ಚ ನಮೋ ಮಧ್ಯೇ ಪ್ರಸಿದ್ಧಾಯ ಚ ।೯॥

ಲೀಲಾಶೈಶವಧಾರಿಣೇ ನಮ ಇದಂ ತುಭ್ಯಂ ಜಘನ್ಯಾಯ ಚ ।
ಸ್ಥಿತ್ಯಂತಾದಿಮತಾಮಶೇಷಜಗತಾಂ ಮೂಲಾಯ ತುಭ್ಯಂ ನಮಃ ।
ಗಾಂಧರ್ವೇ ನಗರೇ ತಥೈವ ನಗರೇಷ್ವನ್ಯೇಷು ಸರ್ವೇಷು ಚ ।
ಸ್ಥಾತ್ರೇ ಧೀಶತಯಾ ಪ್ರತೀಪಸರಣೇ ದಕ್ಷಾಯ ತುಭ್ಯಂ ನಮಃ ।೧೦॥

॥ ನಮೋ ಯಾಮ್ಯಾಯ ಚ ॥

ಪ್ರಾಣಿಪ್ರಾಣಸಮೂಹಸಂಯಮನಮಪ್ಯಂತೇ ಸ್ವಯಂ ಕುರ್ವತೇ
ನಿತ್ಯಂ ಸಂವಸತೇ ಯಮಸ್ಯ ಚ ಪುರೇ ಕಾಲಾಂತಕಾದ್ಯಾತ್ಮನಾ ।

---

ಮಹೇಶ್ವರನೇ, ನೀನು ಬ್ರಹ್ಮ, ವಿಷ್ಣು, ಇಂದ್ರ ಇವರೆಲ್ಲರಿಗೂ ಒಡೆಯನೆನಿಸಿರುವೆ. ನೀನು ಸರ್ವಜ್ಯೇಷ್ಠನು. ಅತಿಮನೋಹರನು. ಕರುಣಾಶಾಲಿಯು. ಸಕಲ ಪ್ರಪಂಚಕ್ಕೂ ಮೊದಲಿನವನು. ಪ್ರಪಂಚವನ್ನು ಸಿಲ್ಕಿಸುವವನೂ ರಕ್ಷಿಸುವವನೂ ನೀನೇ. ನಿನಗೆ ಉತ್ಪತ್ತಿವಿನಾಶಗಳಿಲ್ಲ. ಜಗತ್ಪ್ರಸಿದ್ಧನೂ ವಿಶ್ವವಿಖ್ಯಾತನೂ ನೀನೇ ಆಗಿರುವೆ. ಇಂತಹ ನಿನಗೆ ನಮಸ್ಕಾರಗಳು. ||೯||

ಚಿಕ್ಕಮಕ್ಕಳಂತೆಯೂ, ಎಳೆಗರುಗಳಂತೆಯೂ ಆಗಿ ಆಟಪಾಟಗಳಲ್ಲಿ ತೊಡಗುವ ಮಹೇಶ್ವರನೇ, ನೀನು ಸಮಸ್ತ ಲೋಕಗಳ ಸೃಷ್ಟಿ ಸ್ಥಿತಿ ಲಯಗಳಿಗೆ ಮೂಲಕಾರಣನೆನಿಸಿರುವೆ. ಗಂಧರ್ವಲೋಕಗಳಲ್ಲಿಯೂ ಇತರ ನಗರಗಳಲ್ಲಿಯೂ ಸ್ಥಿರವಾಗಿ ನೆಲಸಿ ಎಲ್ಲರ ಬುದ್ಧಿಶಕ್ತಿಗೂ ಒಡೆಯನಾಗಿ ತೋರಿಬರುವೆ. ವಕ್ರಮಾರ್ಗದಲ್ಲಿಯೂ ಜಯಶಾಲಿಯಾಗುವಂತಹ ಸಮರ್ಥನಾದ ಮಹಾದೇವನೇ, ನಿನಗೆ ಪ್ರಣಾಮಗಳು. ||೧೦||

ಪ್ರಾಣಿಗಳ ಪ್ರಾಣರಾಶಿಯನ್ನೇ ಒಟ್ಟುಗೂಡಿಸಿ ಎಳೆದು ಶಿಕ್ಷಿಸುವ ಸಲುವಾಗಿ ಯಮಲೋಕದಲ್ಲಿ ಅಂತಕರೂಪದಿಂದ ನಿತ್ಯವೂ ನೀನು ನೆಲಸಿರುವೆ. ಹಾಗೆಯೇ

ವಿಶ್ವಕ್ಷೇಮವಿಧಾಯಿನೇ ನಮ ಇದಂ ಸೌರಾತ್ಮನಾ ಚೋರ್ವರಾ
ಸ್ತ್ವಾನಿಭೂರ್ಯ ಸಮುಸ್ತಸಸ್ಯನಿವಹಸ್ಯಾವರ್ಧಯಿತ್ರೇ ಸದಾ ॥೧೧॥

ಧಾನ್ಯಾದ್ಯಾತ್ಮತಯಾಖಿಲೇಷು ವಸತೇ ತುಭ್ಯಂ ನಮಃ ಸರ್ವದಾ
ಶ್ಲೋಕೇ ವಾಚ್ಯತಯಾ ಸ್ಥಿತಾಯ ಸತತಂ ದೇವೈಸ್ಸಹ ಕ್ರೀಡತೇ ।
ಕಲ್ಪಾಂತೇಪ್ಯವಿನಾಶಿನೇ ಶ್ರುತಿಶಿರೋವೇದ್ಯಾಯ ತುಭ್ಯಂ ನಮಃ
ಸ್ವಾರಣ್ಯಾಯ ಚ ಕಕ್ಷಜಾಯ ಚ ನಮಃ ಶುಶ್ರೂಷಮಾಣಾಯ ಚ ॥೧೨॥

ವರ್ಣಧ್ವನ್ಯುಭಯಾತ್ಮನಾ ಶ್ರುತಿಪುರಾಣಾದೌ ಪ್ರಸಿದ್ಧಾಯ ಚ
ಪ್ರತ್ಯುಕ್ತಿಪ್ರತಿಶಬ್ದರೂಪಿಣ ಇದಂ ತುಭ್ಯಂ ನಮಃ ಶೀಘ್ರಗಾಂ ।

॥ ನಮ ಆಶುಷೇಣಾಯ ಚ ॥

ಸೇನಾಂ ಪಾಲಯತೀತಿ ಶೀಘ್ರಗರಥಾಯೇದಂ ನಮಃ ಸೂದ್ಯತೇ
ಶೂರ ಶ್ರೇಷ್ಠತಮಾಯ ದುಷ್ಟನಿವಹಾನ್ ಸಂಭಿಂದತೇ ತೇ ನಮಃ ॥೧೩॥

---

ವಿಶ್ವಪ್ರಾಣಿವೃಂದಕ್ಕೆ ಸುಖವನ್ನು ಕಲ್ಪಿಸುವುದಕ್ಕಾಗಿ ಸೂರ್ಯರೂಪದಿಂದ ತೋರಿ ಬಂದು, ಭೂಭಾಗವನ್ನೆಲ್ಲಾ ಫಲವತ್ತಾಗಗೊಳಿಸಿ, ಅಲ್ಲಿ ನಾನಾಜಾತಿಯ ಸಸ್ಯಾದಿಗಳು ಬೆಳೆಯುವಂತೆ ಏರ್ಪಡಿಸುವೆ. ಇಂತಹ ಮಹಾಮಹಿಮನಾದ ಪರಮೇಶ್ವರನೇ, ನಿನಗೆ ವಂದನೆಗಳು. ॥೧೧॥

ಮಹೇಶ್ವರನೇ ನೀನು ಧಾನ್ಯಾದಿಗಳರೂಪದಿಂದ ಸಮಸ್ತ ಪ್ರಾಣಿಗಳ ಹೃದಯದಲ್ಲಿಯೂ ನೆಲಸುವೆ. ಸಮಸ್ತ ಗ್ರಂಥಗಳಲ್ಲಿಯೂ ಸಮಸ್ತ ಪದಗಳಿಗೂವಾಚ್ಯನಾಗಿ ದೇವತೆಗಳೊಡನೆಯೂ ಕ್ರೀಡಿಸುವೆ. ನಿನಗೆ ಪ್ರಲಯಕಾಲದಲ್ಲಿಯೂ ನಾಶವಿಲ್ಲ. ಉಪನಿಷತ್ತುಗಳು ಮಾತ್ರ ನಿನ್ನ ಸ್ವರೂಪವನ್ನು ವಿವರವಾಗಿ ತಿಳಿಯಪಡಿಸುವುವು. ಅರಣ್ಯದಲ್ಲಿಯೂ, ಮರಗಿಡಗಳ ಪೊದರುಗಳಲ್ಲಿಯೂ ಸೇರಿ ಸರ್ವರಿಂದಲೂ ನೀನು ಸೇವೆಯನ್ನು ಸ್ವೀಕರಿಸುವೆ. ಇಂತಹ ಮಹಾಮಹಿಮನಾದ ನಿನಗೆ ವಂದನೆಗಳು. ॥೧೨॥

ಅಕ್ಷರರೂಪದಿಂದಲೂ, ಧ್ವನಿರೂಪದಿಂದಲೂ ನೀನು ವೇದ, ಪುರಾಣ ಮುಂತಾದ ಗ್ರಂಥಗಳಲ್ಲಿ ಪ್ರಸಿದ್ಧನಾಗಿ ಕಂಡುಬರುವೆ. ಪ್ರತ್ಯುಕ್ತಿರೂಪದಿಂದಲೂ, ಪ್ರತಿಧ್ವನಿರೂಪದಿಂದಲೂ, ನೀನು ಸರ್ವವ್ಯಾಪಿಯಾಗಿರುವೆ. ಮತ್ತು ಶೀಘ್ರಗಾಮಿಯಾಗಿ ಕಂಡುಬರುವ ದೊಡ್ಡ ಸೈನ್ಯಕ್ಕೂ, ವೇಗದಿಂದ ಹೋಗುವ ರಥಕ್ಕೂ ನೀನೇ

॥ ನಮೋ ವರ್ಮಿಣೇ ಚ ವರೂಥಿನೇ ಚ ॥

ವರ್ಮಶ್ರೇಷ್ಠಭೃತೇ ವಿಶಿಷ್ಟವಿಲಸದ್ದೇಹಾಯ ತುಭ್ಯಂ ನಮೋ
ದಿವ್ಯೋಪಾಯನಭಸ್ಮಭಾಜನಶಿರಸ್ತ್ರಾಣಾದಿಕಂ ಬಿಭ್ರತೇ ।
ಆಗುಲ್ಫಂ ಸ್ಥಲಲಂಬಿಕಂಚುಕಭೃತೇ ನಿತ್ಯಂ ನಮೋಽಸ್ತು ಶ್ರುತಿ
ಖ್ಯಾತಾಯ ಶ್ರುತಿವಿಶ್ರುತಾಯುಧಭೃತೇ ವಿಖ್ಯಾತಸೇನಾಯ ಚ ॥೧೪॥

॥ ಧ್ಯಾನಂ ॥

ಶಂಭುಂ ಶತ್ರುಭಯಾಪಹಂ ಜಯ ಮಹಾಸಾಮ್ರಾಜ್ಯಸತ್ಪುತ್ರದಂ
ಗೌರೀಪಾಣಿಸರೋರುಹಾರ್ಪಿತಮಹಾಮೇರ್ವಾದ್ರಿಬಾಣಾಸನಂ ।
ಬಾಣಾಲಂಕೃತಪಾಣಿಮೇಣವಿಲಸದ್ಬಾಲೇಂದುಗಂಗಾಧರಂ
ಶಾಂತಂ ಸುಂದರರೂಪಿಣಂ ವೃಷವರಾರೂಢಂ ಭಜೇ ಸರ್ವದಾ ॥೧೫॥

---

ಅಧಿಪತಿಯಾಗಿರುವೆ. ಶೂರನೂ, ಅತ್ಯಂತ ಶ್ರೇಷ್ಠನೂ, ದುಷ್ಟರ ಗುಂಪನ್ನು ನಾಶ ಗೊಳಿಸುವವನೂ ಆದ ಪರಮಾತ್ಮನೇ. ನಿನಗೆ ಸಾಷ್ಟಾಂಗ ಪ್ರಣಾಮವು ॥೧೩॥

ದಿವ್ಯವಾದ ಕವಚವನ್ನು ಧರಿಸಿರುವವನೇ, ಪ್ರಕಾಶಮಾನವಾದ ದೇಹವನ್ನು ಹೊಂದಿರುವವನೇ, ಕೈಗಾಣಿಕೆಯನ್ನೂ, ಭಸ್ಮರಾಶಿಯನ್ನೂ, ಶಿರಸ್ತ್ರಾಣವನ್ನೂ ಧರಿಸಿರುವ ಮಹಾದೇವನೇ, ನೀನು ಕಾಲುಹಿಮ್ಮಡಿಯವರೆಗೂ ದೊಡ್ಡ ಕವಚವನ್ನು ತೊಟ್ಟಿರುವೆ. ವೇದಪ್ರತಿಪಾದ್ಯನಾಗಿ, ವೇದದಲ್ಲಿ ಪ್ರಸಿದ್ಧಿಪಡೆದು, ಲೋಕಪ್ರಸಿದ್ಧವಾದ ಸೇನೆಯನ್ನು ಹೊಂದಿರುವೆ. ಇಂತಹ ಮಹಾನುಭಾವನೇ, ನಿನಗೆ ವಂದನೆ. ॥೧೪॥

ಶಂಭುವೇ, ನೀನು ನಿನ್ನ ಭಕ್ತರಿಗೆ ಶತ್ರುಭಯವನ್ನು ನಿವಾರಿಸುವವನು ಮತ್ತು ಸಾಮ್ರಾಜ್ಯಸುಖವನ್ನೂ ಸತ್ಪುತ್ರಪರಂಪರೆಯನ್ನೂ ಕೊಡುವವನು. ಗೌರೀ ದೇವಿಯ ಕರಕಮಲದಿಂದ ಇಡಲ್ಪಟ್ಟ ಮೇರುಪರ್ವತವೆಂಬ ಧನುಸ್ಸುಳ್ಳವನು. ಬಾಣಗಳಿಂದ ಅಲಂಕೃತವಾದ ಪಾಣಿಪದ್ಮವುಳ್ಳವನು. ಬಾಲಚಂದ್ರನಿಂದಲೂ, ದೇವಗಂಗೆಯಿಂದಲೂ ಭೂಷಿತನಾದವನು. ಶಾಂತನೂ, ಸುಂದರನೂ, ಆಗಿ ವೃಷಭಾರೂಢನಾಗಿರುವ ಪರಮೇಶ್ವರನೇ, ನಿನ್ನನ್ನು ಈ ರೀತಿ ಸದಾ ನಾನು ಧ್ಯಾನಿಸುತ್ತಿರುವೆನು. ॥೧೫॥

ರುದ್ರಾರ್ಥವಿಶ್ರುತಪದಾರ್ಥಸುಬೋಧಸಾರ
ವಾಕ್ಯಾರ್ಥವೈಭವಮಿದಂ ಪ್ರಕಟಾನುವಾದಂ ।
ಪಂಚಾಸ್ಯಶಾಂತಶ್ರುತಿವಿಶ್ರುತಪಂಚವಾಕ
ವೇದಾನುವಾಕಮಿದಮೇವ ಮಹಾರ್ಥಸಾರಂ ॥೧೬॥

॥ ಇತಿ ಷಷ್ಠೋಽನುವಾಕಃ ॥

॥ ನಮೋ ದುಂದುಭ್ಯಾಯ ಚ ॥

ದೇವೀಶಾಯ ನಮೋಸ್ತು ದುಂದುಭಿಮಹಾನಿಧ್ವಾನರೂಪಾಯ ಚ
ಪ್ರೌಢಾತ್ಮನ್ನತವೈಭವಾಯ ವಸತೇ ದೇವೈಶ್ಚ ಸಾರ್ಧಂ ತದಾ ।
ಭೇರೀವಾದನ ದಂಡರೂಪಿಣ ಇದಂ ತುಭ್ಯಂ ನಮಃ ಸರ್ವದಾ
ದುಷ್ಟಾನ್ ಧರ್ಷಯತೇ ವಿಶರ್ಮಕುಶಲಾಯಾಶೇಷವಿದ್ಯಾಸು ಚ ॥೧೭॥

ನಿತ್ಯಂ ಭಕ್ತಜನೇ ಪ್ರಕೃಷ್ಟಕರುಣಾಶೀಲಾಯ ತಸ್ಮೈ ನಮೋ
ದೌತ್ಯಂ ಕರ್ಮ ಚ ಕುರ್ವತೇ ಸುಮನಸಾಂ ತ್ರಾಣಾಯ ವಹ್ನ್ಯಾತ್ಮನೇ ।

---

ಇಲ್ಲಿನವರೆಗೂ ಹೇಳಿದ ಶಿವಮಹಿಮೆಯು ಶ್ರೀ ರುದ್ರಾಧ್ಯಾಯದಲ್ಲಿ ಕಂಡು ಬರುವ ಶಿವವಾಚಕಪದಗಳ ಅರ್ಥವಿವರಣೆಯು. ಆದರಲ್ಲಿ ಸಮಸ್ತ ವೇದಗಳ ಸಾರವೂ ಅಡಗಿದೆ. ಪಂಚಮುಖವಾದ ಪರಶಿವನ ಶ್ರುತಿಪ್ರಸಿದ್ಧವಾದ ಅರ್ಥವನ್ನು ವಿವರಿಸುವ ಶ್ರೀರುದ್ಯಾಧ್ಯಾಯದ ಆರು ಅನುವಾಕಗಳ ವಿವರಣೆಯ ಭಾಗವು ಇಲ್ಲಿಗೆ ಮುಗಿದಿದೆ. ॥೧೬॥

ಪಾರ್ವತೀಪತಿಯೇ, ದುಂದುಭಿಧ್ವನಿಯ ರೂಪದಲ್ಲಿ ಲೋಕದಲ್ಲಿ ವ್ಯಾಪಿಸಿರುವವನೂ, ಅತ್ಯಂತ ಶ್ರೇಷ್ಠವಾದ ಐಶ್ವರ್ಯವನ್ನು ಹೊಂದಿ ದೇವತೆಗಳೊಡನೆ ವಿಹರಿಸುವವನೂ, ಭೇರೀವಾದ್ಯರೂಪದಿಂದಲೂ, ಅದನ್ನು ಬಾರಿಸುವ ದಂಡರೂಪದಿಂದಲೂ ಇರುವವನೂ ಆದ ಮಹಾದೇವನೇ, ನೀನು ದುಷ್ಟರನ್ನು ಶಿಕ್ಷಿಸುವೆ. ಸಕಲವಿದ್ಯೆಗಳಲ್ಲಿಯೂ ಪಾರಂಗತನಾಗಿರುವೆ. ಭಕ್ತರಿಗೆ ಸುಕ್ಷೇಮಗಳನ್ನು ಒದಗಿಸಿ ರಕ್ಷಿಸುವೆ. ಇಂತಹ ಮಹಾರುದ್ರನೇ, ನಿನಗೆ ವಂದನೆ. ॥೧೭॥

ತನ್ನ ಭಕ್ತರಲ್ಲಿ ನಿತ್ಯವೂ ವಾತ್ಸಲ್ಯವಿಟ್ಟು ರಕ್ಷಿಸುವ ಭಕ್ತವತ್ಸಲನೇ, ನಿನಗೆ ನಮಸ್ಕಾರ. ದೇವತೆಗಳನ್ನು ರಕ್ಷಿಸುವುದಕ್ಕಾಗಿ ಅವರಿಗೆ ಹವಿರ್ಭಾಗಗಳನ್ನು ಒದಗಿಸಲು ಅಗ್ನಿರೂಪದಿಂದ ದೂತಕಾರ್ಯವನ್ನು ನಿರ್ವಹಿಸುವವನೂ ನೀನೇ. ಬಢವರಾದ

ಭಕ್ತೇಭ್ಯಃ ಕೃಪಯಾಪ್ರಕೃಷ್ಟಧನದಾಯೇದಂ ನಮೋಬಿಭ್ರತೇ
ಖಡ್ಗಂ ಚೇಷುಧಿಮುತ್ತಮಂ ನಮ ಇದಂ ತೀಕ್ಷ್ಣೇಷು ಹಸ್ತಾಯ ಚ ॥೧೮॥

॥ ನಮಸ್ಸ್ರುತ್ಯಾಯ ಚ ॥

ತೀಕ್ಷ್ಣಾನೇಕವರಾಯುಧಾಯ ಚ ನಮಃ ಸೌಮ್ಯೋತ್ತಮಸ್ತೋಚಿತಾ
ಮೋಘಾನೇಕಮಹಾಯುಧಾಯ ಶುಭಸತ್ಕೋದಂಡಹಸ್ತಾಯ ಚ ।
ತುಭ್ಯಂ ದೇವ ನಮೋಸ್ತ್ವನೇಕವಿವಿಧಕ್ಷುದ್ರಾರ್ಥಸಂಚಾರಿಣೇ
ಪ್ರಖ್ಯಾತಾಯ ಚರಾಯ ಚಾಚರಮಹಾಲಿಂಗೇಷು ಪೂಜ್ಯಾಯ ಚ ॥೧೯॥

॥ ನಮೋ ನೀಪ್ಯಾಯ ಚ ॥

ನಿರ್ಮಗ್ನಾಂಭಸಿ ಭೂತಲೇ ಸದುದಕೇ ದೇಶೇ ಶುಚೌ ಕರ್ದಮೇ ।
ವಿಖ್ಯಾತೇಷು ಸರಸ್ಸು ವಿಶ್ರುತನದೀಶ್ರೇಷ್ಠಾಸುನಾದೇಪಿ ಚ ।

॥ ನಮೋ ವೈಶಂತಾಯ ಚ ॥

ದೇವಾದ್ಯರ್ಥ ನಿವೇಶಿತೇಂಬುನಿವಹೇ ಕೂಪೇಷು ಗರ್ತೇಷು ಚ ।
ಸದ್ವರ್ಷಾಂಭಸಿ ಭೂತಲೇ ಸದುದಕೇ ವಿದ್ಯುತ್ಸುತಪ್ತಾಂಭಸಿ ॥೨೦॥

---

ಭಕ್ತರಿಗೆ ಅತಿಶಯವಾದ ನಿಧಿಯನ್ನು ಕರುಣಿಸಲು ಕುಬೇರರೂಪದಿಂದಿರುವವನೂ ನೀನೇ. ಶತ್ರುನಿಗ್ರಹಕ್ಕಾಗಿ, ಕತ್ತಿ, ತೀಕ್ಷ್ಣವಾದ ಬಾಣ ಮುಂತಾದುವುಗಳನ್ನು ಧರಿಸಿರುವ ಮಹೇಶ್ವರನೇ, ನಿನಗೆ ವಂದನೆಗಳು. ॥೧೮॥

ಅನೇಕ ತೀಕ್ಷ್ಣವಾದ ಆಯುಧಗಳನ್ನು ಹಿಡಿದವನೂ, ಶಾಂತಮಯವೂ, ವ್ಯರ್ಥವಲ್ಲದ್ದೂ ಆದ ಅನೇಕ ಅಸ್ತ್ರಗಳನ್ನು ಧರಿಸಿದವನೂ, ಧನುರ್ಬಾಣಗಳನ್ನು ಧರಿಸಿರುವವನೂ ಆದ ಮಹಾದೇವನೇ, ನೀನು ಪ್ರಪಂಚದಲ್ಲಿರುವ ಸಮಸ್ತ ದೊಡ್ಡ ಮತ್ತು ಚಿಕ್ಕ ವಸ್ತುಗಳಲ್ಲೆಲ್ಲಾ ಲೀಲಾಜಾಲವಾಗಿ ಸಂಚರಿಸುವೆ. ಸರ್ವವ್ಯಾಪಿ ಯೆಂದು ಪ್ರಖ್ಯಾತನಾಗಿರುವೆ. ಸಮಸ್ತ ಚರಸ್ಥಿರಲಿಂಗಗಳಲ್ಲಿಯೂ ನೆಲಸಿ ಸರ್ವ ಪೂಜ್ಯನೆನಿಸಿರುವೆ. ಇಂತಹ ಮಹಾದೇವನೇ, ನಿನಗೆ ವಂದನೆ. ॥೧೯॥

ಆಳವಾದ ನೀರಿನಲ್ಲಿಯೂ, ನಿರ್ಮಲೋದಕದಲ್ಲಿಯೂ, ಕೆಸರಿನಲ್ಲಿಯೂ, ಪ್ರಸಿದ್ಧವಾದ ನದೀ ನದ ಸರೋವರಗಳಲ್ಲಿಯೂ, ಅಡಗಿರುವ ಮಹೇಶ್ವರನೇ, ನಿನಗೆ ವಂದನೆಗಳು. ದೇವತಾಪೂಜೆಗಾಗಿ ಮೀಸಲಾಗಿಟ್ಟಿರುವ ನೀರಿನಲ್ಲಿಯೂ, ಬಾವಿ,

॥ ನಮ ಈಧ್ರಿಯಾಯ ಚ ॥

ದೀಪ್ತಾಭ್ರೇ ಸ್ಫುರದಾತಪೇಷು ಚ ಮಹಾವಾತೇ ಚರಿಷ್ಯನ್ಮಹಾ
ಭೂತವ್ರಾತಯುಗಾಂತದುಸ್ಸಹಶಿಲಾವರ್ಷೋಗ್ರಸಂವರ್ತಕೇ ।
ಗ್ರೀಷ್ಮೇ ವಾತಸಮುತ್ಥಪಾಂಸುನಿವಹೇ ವಾತ್ಯಾಸು ವಾನ್ಯತ್ರ ವಾ
ಯೋಸ್ಸಂತ್ಯಸ್ಯ ತದಾತ್ಮನಾ ಜಗದಿದಂ ವ್ಯಾಪ್ಯ ಸ್ಥಿತಾಯಾನಿಶಂ ॥೨೧॥

॥ ನಮೋ ವಾಸ್ತುಪಾಯ ಚ ॥

ಯಸ್ಸರ್ವಾಣಿ ಸದೈವ ಪಾತಿ ಪರಿತೋ ವಸ್ತೂನಿ ವಾಸ್ತೋಷ್ಪತಿ ।
ಸ್ತಸ್ಮೈ ಚಾಸ್ತು ನಮೋಽಸ್ತು ಸರ್ವಭುವನವ್ಯಾಪ್ತಾಯ ಸರ್ವಾತ್ಮನೇ ॥೨೨॥

॥ ಇತಿ ಸಪ್ತಮೋಽನುವಾಕಃ ॥

॥ ಋಷಿದೈವತಂ ॥

ರುದ್ರಂ ಭೀಮುಕನಾಮಕೇನ ಮುನಿನಾ ಶ್ರೀ ಹೇಮಕೋಶೇನ ಚ
ಧ್ಯಾತಂ ವಶ್ಯ ಸುರೂಪವೃಷ್ಟಿಸುತಸತ್ಸಂಪತ್ತಿಮೇಧಾಯುಷಂ ।

---

ಗುಂಡಿ ಮುಂತಾದ ಸ್ಥಳಗಳಲ್ಲಿಯೂ, ವೃಷ್ಟಿಯಿಂದ ಬರುವ ಜಲರಾಶಿಯಲ್ಲಿಯೂ, ಮಿಂಚು ಗುಡುಗುಗಳಲ್ಲಿಯೂ, ಬಿಸಿನೀರಿನ ರೂಪದಲ್ಲಿಯೂ ಅಡಗಿರುವ ಪರಶಿವನೇ, ನಿನಗೆ ನಮಸ್ಕಾರ. ॥೨೦॥

ಹೊಳೆಯುವ ಮೇಘದಲ್ಲಿಯೂ, ಬಿಸಿಲಿನಲ್ಲಿಯೂ, ಬಿರುಗಾಳಿಯಲ್ಲಿಯೂ, ಪ್ರಳಯಕಾಲದಲ್ಲಿ ಬರುವ ಶಿಲಾವರ್ಷ, ಉಲ್ಕಾಪಾತಾದಿಗಳಲ್ಲಿಯೂ, ಬೇಸಗೆಯಲ್ಲಿ ಬೀಸುವ ಧೂಳಿನಿಂದ ತುಂಬಿದ ಬಿರುಗಾಳಿಯಲ್ಲಿಯೂ, ಇತರ ಎಲ್ಲಾವಿಧವಾದ ವಾಯುವಿಶೇಷದಲ್ಲಿಯೂ ಸೇರಿ ಸರ್ವವ್ಯಾಪಿಯಾಗಿರುವ ಮಹಾಮಹಿಮನೇ, ನಿನ್ನ ಪಾದಕ್ಕೆರಗುವೆನು. ॥೨೧॥

ಲೋಕದಲ್ಲಿರುವ ಸಮಸ್ತವಸ್ತುಗಳನ್ನೂ ವಾಸ್ತೋಷ್ಪತಿರೂಪದಿಂದ ರಕ್ಷಿಸುವ ಮಹೇಶನೇ, ನೀನು ಸರ್ವಭುವನವ್ಯಾಪಕನೂ, ಸರ್ವಾತ್ಮಕನೂ ಆಗಿರುವೆ. ಇಂತಹ ನಿನಗೆ ನಮಸ್ಕಾರ. ॥೨೨॥

ಭೀಮುಕನೆಂಬ ಹೆಸರಿನ ಋಷಿಯಿಂದಲೂ, ಹೇಮಕೋಶನಿಂದಲೂ ವಿಶೇಷವಾಗಿ ಜಪಿಸಲ್ಪಟ್ಟದು ಈ ರುದ್ರಾಧ್ಯಾಯ. ಇದಕ್ಕೆ ಅಧಿದೇವತೆಯೆನಿಸಿರುವವನೇ

ವಿದ್ಯಾರೋಗ್ಯಸುಧೇನುಪದಸತ್ಸಾಮ್ರಾಜ್ಯಮೋಕ್ಷಶ್ರಿಯಂ
ದಾತಾರಂ ದ್ವಿಪಿಚರ್ಮಲಂಬಿತಜಟಾಸರ್ಪಾದಿಚಿಹ್ನಂ ಭಜೇ ॥೨೩॥

ರುದ್ರಾರ್ಥಸಾರವರಮಂತ್ರಪದಾರ್ಥಸಾರ
ಪುಣ್ಯಾನುವಾಕವಿಶದಃ ಖಲು ಷಷ್ಠ ಸಪ್ತ ।
ವಿಶ್ವಾಧಿಕಪ್ರಣತಿಬೋಧಕ ಸರ್ವಭಾವ
ಯುಕ್ತೋ ಹಿ ಭಕ್ತವರಮುಕ್ತಿಗಶಕ್ತಿದಾಯೀ ॥೨೪॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಸ್ಕಂದಪ್ರೋಕ್ತರುದ್ರಭಾಷ್ಯೇ
ಪಂಚಷಷ್ಠಸಪ್ತಮಾನುವಾಕವಿವರಣೇ
ಏಕೋನತ್ರಿಂಶೋಽಧ್ಯಾಯಃ

---

ಮಹಾದೇವನು. ಇದನ್ನು ಪಠಿಸುವವರಿಗೆ ರೂಪ, ವೃಷ್ಟಿ, ಪುತ್ರಸಂಪತ್ತು, ವಿದ್ಯೆ, ಆರೋಗ್ಯ, ಗೋಧನ, ಸಾಮ್ರಾಜ್ಯ, ಮುಕ್ತಿ, ಲಕ್ಷ್ಮಿ ಮುಂತಾದ ಸಕಲ ಇಷ್ಟಾರ್ಥಗಳೂ ಸುಲಭವಾಗಿ ದೊರೆಯುವುವು. ಇವೆಲ್ಲವನ್ನೂ ದಯಪಾಲಿಸುವ, ಗಜಚರ್ಮಾಂಬರಧಾರಿಯೂ, ಜಟಾಸರ್ಪಭೂಷಣನೂ ಆದ ಪರಮೇಶ್ವರನನ್ನೇ ನಾನು ಸದಾ ಧ್ಯಾನಮಾಡುವೆನು. ॥೨೩॥

ಈರೀತಿ ರುದ್ರಾಧ್ಯಾಯದ ಆರು ಮತ್ತು ಏಳನೆಯ ಅನುವಾಕಗಳ ಅರ್ಥವನ್ನು ಸಾರವತ್ತಾಗಿ ವರ್ಣಿಸುವ ರುದ್ರಭಾಷ್ಯವು ಇಲ್ಲಿಗೆ ಮುಗಿಯಿತು. ಇದು ಲೋಕಪೂಜ್ಯನಾದ ಮಹಾದೇವನ ಮಹಿಮೆಯನ್ನು ಪೂರ್ಣವಾಗಿ ಬೋಧಿಸುತ್ತಾ, ಭಕ್ತಶ್ರೇಷ್ಠರಿಗೆ ದಿವ್ಯಮುಕ್ತಿಯನ್ನು ಕರುಣಿಸುವುದೆಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ಇಂತಹ ದಿವ್ಯಸ್ತೋತ್ರಾಭಿಮಾನಿಯಾದ ಮಹಾದೇವನಿಗೆ ಶಿರಸಾ ವಂದಿಸುವೆನು. ॥೨೪॥

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ ಸ್ಕಂದಪ್ರೋಕ್ತವಾದ ರುದ್ರಭಾಷ್ಯದಲ್ಲಿ ಐದು, ಆರು ಮತ್ತು ಏಳನೆಯ ಅನುವಾಕಗಳ ಅರ್ಥವಿವರಣೆಯನ್ನು ತಿಳಿಸುವ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ತ್ರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

|| ನಮಸ್ಸೋಮಾಯ ಚ ||

ಲೋಕಾನುಗ್ರಹಕಾಮ್ಯಯಾಖಿಲಸತಾಂ ಧ್ಯೇಯಾಶ್ಶಿವಾಸ್ಸರ್ವಥಾ ।
ಧತ್ತೇ ಯಃ ಶಿವಶಂಭುಶಂಕರಮುಖಾನೇಕಾಭಿಧಾನಾಸ್ತನೂಃ ।
ತಸ್ಮೈ ದೇವ ನಮೋಽಸ್ತು ಯಃ ಕರುಣಯಾ ಪ್ರಾದುರ್ಭವನ್ನಗ್ರತೋ ।
ಭಕ್ತಾನ್ ಪಾತಿ ಸಹೋಮಯಾ ಪ್ರತಿದಿನಂ ದೇವಾನ್ ಪಿತ್ರೂನ್
ಮಾನವಾನ್ ||೧||

---

## ಮೂವತ್ತನೆಯ ಅಧ್ಯಾಯ

ಕುಮಾರಸ್ವಾಮಿಯು ರುದ್ರಾಧ್ಯಾಯದಲ್ಲಿರುವ "ನಮಸ್ಸೋಮಾಯ ಚ" ಎಂಬ ಅನುವಾಕದ ಭಾಷ್ಯವನ್ನು ವಿವರಿಸುತ್ತಾ ಈ ರೀತಿ ನುಡಿದನು. "ಭಗವಂತನೇ, ನೀನು ಲೋಕಾನುಗ್ರಹಕಾಮನೆಯಿಂದ ಸಮಸ್ತರಿಗೂ ಪೂಜ್ಯನೆನಿಸಿ ಶಿವ, ಶಂಭು, ಶಂಕರ ಮುಂತಾದ ಹೆಸರುಗಳಿಂದ ಬೇರೆ ಬೇರೆ ದೇಹವನ್ನು ಧರಿಸಿ, ಸತ್ಪುರುಷರಿಗೆ ಆರಾಧ್ಯದೇವನೆನಿಸಿರುವೆ. ಭಕ್ತರ ಎದುರಿನಲ್ಲಿ ನಾನಾರೂಪದಿಂದ ಪ್ರತ್ಯಕ್ಷನಾಗಿ ನಿಂತು ಅವರ ಇಷ್ಟಾರ್ಥಗಳನ್ನು ಸಲ್ಲಿಸುವೆ. ಪಾರ್ವತೀಸಹಿತನಾಗಿ ಸದಾನಂದದಿಂದಿದ್ದು, ದೇವತೆಗಳನ್ನೂ, ಮಾನವರನ್ನೂ, ಪಿತೃವರ್ಗವನ್ನೂ ಸದಾ ರಕ್ಷಿಸುತ್ತಿರುವೆ. ||೧||

ಅನ್ನಾನಷ್ಯಮೃತೇನ ತರ್ಪಯತಿ ಯಃ ಸೋಮಾತ್ಮನಾ ಯಜ್ವನಃ ।
ಸರ್ವಾನಭ್ಯುದಯೇನ ಯೋಜಯತಿ ಯೋ ಸೋಮಾದಿಯಾಗಾತ್ಮನಾ ।
ಯಶ್ಚ ದ್ರಾವಯತಿ ಸ್ವಯಂ ಪ್ರಣಮತಾಂ ನಿತ್ಯಂ ರುಜಂ ಯೋಗಿನಾಂ ।
ತಸ್ಮೈ ದೇವ ನಮೋಽಸ್ತು ನಿತ್ಯಮುದಯೇ ಕಾಶ್ಮೀರತಾಮ್ರಾಯ ಚ ॥೨॥

॥ ಅರುಣಾಯ ಚ ॥

ಸಿಂದೂರಾರುಣಕಾಂತಯೇ ತದನು ತೇ ಸೂರ್ಯಾತ್ಮನೇದಂ ಜಗ
ದುತ್ಪಾದ್ಯೋತ್ತ್ರಯತೇ ಚ ಶಾಂತಮಯತೇ ಪ್ರಾಪಯ್ಯ ಭಕ್ತಂ ಜನಂ ।

॥ ಪಶುಪತಯೇ ಚ ॥

ಸರ್ವಾನ್ಪಾಲಯತೇ ಪಶೂನ್ನಿಧಿಮುಖಾನ್ ಚೋರಾರಿತಾಪವ್ಯಥಾ
ರೋಗೇಭ್ಯಃ ಕೃಪಯಾ ಚ ತೇ ನಮ ಇದಂ ತೇ ದುಷ್ಪ್ರಧರ್ಷಾಯ ಚ॥೩॥

ದುಃಖಾದ್ಯೈಃ ಪವಮಾನಮೂರ್ತಯ ಇದಂ ಯೇಭ್ಯಸ್ಸಮಸ್ತಂ ಜಗತ್
ಜನ್ಮವ್ಯಾಧಿಜರಾವಿಪತ್ತಿಮರಣಾದಿಭ್ಯೋ ಬಿಭೇತೀದೃಶಾಃ ।

---

ಸೋಮರಸಾತ್ಮಕನಾಗಿ ಯಾಗಮಾಡುವವರಿಗೆಲ್ಲಾ ಅಮೃತವನ್ನು ಕರುಣಿಸುವೆ. ಸೋಮಯಾಗವೇ ಮೊದಲಾದ ಅನೇಕಯಾಗಗಳರೂಪದಿಂದಿದ್ದು ಮಾನವರಿಗೆ ಅಭ್ಯುದಯವನ್ನುಂಟುಮಾಡುವೆ. ನಿನ್ನನ್ನು ಭಕ್ತಿಯಿಂದ ನಮಸ್ಕರಿಸುವಂತಹ ಯೋಗಿಗಳಿಗೆ ನಿತ್ಯರೋಗಾದಿಪ್ರಾರಬ್ಧಕರ್ಮಗಳನ್ನು ಹೋಗಲಾಡಿಸಿ ಸ್ಥಿರಮುಕ್ತಿಯನ್ನು ಕರುಣಿಸುವೆ. ಸೂರ್ಯರೂಪದಿಂದಿರುವ ನೀನು ಉದಯಕಾಲದಲ್ಲಿಯೂ ಅಸ್ತಮಯಕಾಲದಲ್ಲಿಯೂ ತಾಮ್ರ(ಕೆಂಪು)ವರ್ಣದವನಾಗಿ ಶೋಭಿಸುತ್ತಿರುವೆ. ॥೨॥

ಸೂರ್ಯರೂಪದಿಂದ ಆಕಾಶಮಧ್ಯಕ್ಕೆ ಬರುತ್ತಬರುತ್ತ ಅಚ್ಚಕೆಂಪಾದ ಕಾಂತಿಯನ್ನು ಬಿಟ್ಟು ತೇಜಸ್ಸನ್ನು ಪಡೆದು ಜಗತ್ತನ್ನೆಲ್ಲಾ ಬೆಳಗಿಸುವೆ. ಭಕ್ತಜನಕ್ಕೆ ನೈಜವಾದ ಶಾಂತಿಯನ್ನು ಕರುಣಿಸುವೆ. ಅಜ್ಞಾನಿಗಳಾದ ಬ್ರಹ್ಮನೇಮೊದಲಾದವರಿಗೆ (ಪಶುಗಳಿಗೆ) ಚೋರರಿಂದಲೂ, ಕಳ್ಳರಿಂದಲೂ, ರೋಗಾದಿಗಳಿಂದಲೂ, ಲಭಿಸುವ ಸಮಸ್ತ ಭಯವನ್ನೂ ದಯೆಯಿಂದ ನೀನು ನಿವಾರಿಸುವೆ. ಇಂತಹ ಮಹಾಮಹಿಮನೆನಿಸಿದ ಮಹಾದೇವನೇ, ನಿನಗೆ ವಂದನೆಗಳು. ॥೩॥

ಪವಮಾನಮೂರ್ತಿಗಳೆನಿಸಿದ ಸಮಸ್ತ ಪ್ರಾಣಿವರ್ಗವೂ ಯಾವ ಜನ್ಮವ್ಯಾಧಿಜರಾವಿಪತ್ತುಗಳಿಂದಲೂ, ನಾನಾವಿಧವಾದ ದುಃಖಪರಂಪರೆಗಳಿಂದಲೂ ಹೆದರಿ

ಯಸ್ಮಾದ್ವಿಭೃತಿ ತೇಽಪಿ ತೇ ಭಗವತೇ ತಸ್ಮೈ ನಿಯನ್ತ್ರಾರ್ತಯೇ
ತುಭ್ಯಂ ದೇವ ನಮೋ ಯದಾ ಖಲಜನಾಃ ಸಾಧೂನ್ ಜಿಘಾಂಸಂತಿ ಯೇ
॥೪॥
ಆವಿರ್ಭೂಯ ತದಗ್ರತಃ ಪ್ರಥಮತಸ್ತೇಷಾಂ ನಿಹಂತ್ರೇ ಚ ಯೇ
ದೂರೇ ತ್ವಾಮುಪಹಾಯ ಸರ್ವಜಗದಾರಾಧ್ಯಂ ಕುಮಾರ್ಗೇಽಸ್ಥಿತಾಃ ।

॥ ನಮೋ ಹಂತ್ರೇ ಚ ॥

ತೇಷಾಮೇವ ದುರಾತ್ಮನಾಂ ಶಿವತರೇ ಕಾಲೇ ಪ್ರಹರ್ತ್ರೇ ನಮೋ
ಹಂತ್ರೇ ಹಂತ್ರಿ ಬಲೇನಯೇನ ಮಹತಾ ಹಂತವ್ಯಮಾಶು ಕ್ಷಣಾತ್ ॥೫॥

ತದ್ಯದ್ವಾಯ ಪಶೂನ್ ಕ್ರತಾವಿವ ಮಹಾಸಂಹಾರಕಾಲೇ ಬಲ ।
ಸ್ಯಾತ್ಯಂತಾತಿಶಯೇನ ಹಂತ್ಯಪಿ ಬಹಿಬ್ರ್ರಹ್ಮೇಂದ್ರಮುಖ್ಯಾಮರಾನ್ ।
ಅತ್ತಾ ಯಶ್ಚ ಚರಾಚರಸ್ಯ ಜಗತಸ್ತಸ್ಮೈ ನಮೋಽಸ್ತು ಪ್ರಭೋ ।
ರುದ್ರಾಃ ಪಾಂತಿ ಜಗಂತಿ ಯೇ ಚ ಪರಿತೋ ವೃಕ್ಷಾದಿರೂಪಾಃ ಪರೇ ॥೬॥

---

ನಡುಗುವುದೋ, ಅಂತಹ ಜರಾವ್ಯಾಧಿಗಳು ಆಕಾಶಸ್ವರೂಪನಾದ ಪರಶಿವನ ಸ್ಮರಣೆಯಿಂದಲೇ ನಡುಗಿಹೋಗುವುವು. ಹೀಗೆ ಅತ್ಯುಗ್ರಸ್ವರೂಪನಾಗಿರುವ ಮಹೇಶ್ವರನೇ, ನಿನಗೆ ನಮಸ್ಕಾರ. ॥೪॥

ಮಹಾದೇವನೇ, ಯಾರು ಸದಾ ಸತ್ಪುರುಷರನ್ನು ಹಿಂಸೆಗೊಳಿಸುತ್ತಾ ಲೋಕಕಂಟಕರೆನಿಸಿರುವರೋ, ಅಂತಹವರನ್ನು ಎದುರಿಸಿ ಕ್ಷಣಕಾಲದಲ್ಲಿ ನಾಶಗೊಳಿಸುವೆ. ಲೋಕಪೂಜ್ಯನಾದ ನಿನ್ನನ್ನು ಆರಾಧಿಸದೆ ನಾಸ್ತಿಕಮಾರ್ಗದಲ್ಲಿ ಹೋಗುತ್ತಿರುವ ದುಷ್ಟಾತ್ಮರನ್ನು ಸಂಪೂರ್ಣವಾಗಿ ನಾಶಗೊಳಿಸುವೆ. ಮಹಾದುಷ್ಟರೆನಿಸಿದವರನ್ನು ಆಯುಧಗಳ ಶಕ್ತಿಯಿಂದಲೂ, ದೇಹಶಕ್ತಿಯಿಂದಲೂ ಕ್ಷಣಕಾಲದಲ್ಲಿ ನಾಶಗೊಳಿಸುವೆ. ಮಹಾದೇವನೇ, ಇಂತಹ ನಿನಗೆ ವಂದನೆ ಮಾಡುವೆನು. ॥೫॥

ಯಜ್ಞದಲ್ಲಿ ಪಶುಗಳನ್ನು ಆಹುತಿಕೊಡುವಂತೆ, ಪ್ರಲಯಕಾಲದಲ್ಲಿ ನೀನು ಹರಿ, ಬ್ರಹ್ಮ, ಇಂದ್ರ ಇವರೇ ಮೊದಲಾದವರನ್ನೆಲ್ಲಾ ನಾಶಮಾಡಿಬಿಡುವೆ. ಈ ಚರಾಚರಾತ್ಮಕವಾದ ಜಗತ್ತಿಗೆ ಭಕ್ಷಕನಾಗಿರುವ ಮಹಾಪ್ರಭುವೇ, ನೀನು ಈ ಜಗತ್ತನ್ನು ರಕ್ಷಿಸುವುದಕ್ಕಾಗಿ ಏಕಾದಶರುದ್ರರೂಪಗಳಿಂದಲೂ, ನಾನಾರೀತಿಯಿಂದಿರುವ ವೃಕ್ಷಾದಿಗಳ ರೂಪದಿಂದಲೂ ಸುತ್ತಲೂ ವ್ಯಾಪಿಸಿರುವೆ. ಇಂತಹ ನಿನಗೆ ವಂದನೆಗಳು. ॥೬॥

॥ ಹರಿಕೇಶಾಯ ಚ ॥

ಯೇ ರುದ್ರಾ ಹರಿತಾಭಕೇಶನಿವಹಾಸ್ತೇಭ್ಯೋಪಿ ನಿತ್ಯಂ ನಮಃ ।
ಸಂಸಾರಾರ್ಣವಮಾಶು ತಾರಯತಿ ಯಸ್ತಾರಾತ್ಮಕಸ್ಸರ್ವಥಾ ।
ಬ್ರಹ್ಮಬ್ರಹ್ಮವಿದಾಂ ಚಿರಾದುಪದಿಶನ್ ತಸ್ಮೈ ನಮಸ್ತೇಽಸ್ತು ಯ ।
ದ್ದುಃಖಾಪಾಯಮಯಂ ಸುಖಂ ಯದಿ ಚ ತದ್ಭೋಗ್ಯಂ ಪರತ್ರೇಹ ಚ ॥೭॥

॥ ನಮಶ್ಶಂಭವೇ ಚ ॥

ಸಾಕ್ಷಿತ್ವೇನ ತಯೋಃ ಶಮಿತ್ಯಪಿ ಮಯಶ್ಚೇತೀಹ ವಿಖ್ಯಾತಯೋಃ ।
ದ್ರಷ್ಟ್ರೇ ನಿತ್ಯಸುಖಾತ್ಮನೇ ನಮ ಇದಂ ಶ್ರೀಶಂಕರಾಖ್ಯಾಯ ಚ ।
ಸರ್ವಸ್ಮೈ ಜಗತೇ ಕರೋತಿ ಕೃಪಯಾ ಯಃ ಶಂಮಯಶ್ಚಾನಿಶಂ ।
ತಸ್ಮೈ ತೇಽಸ್ತು ನಮಶ್ಶಿವಾಯ ಚ ಗುಣಾತೀತಾಯ ಶುದ್ಧಾಯ ಚ ॥೮॥

ಇಚ್ಛಾಶಕ್ತ್ಯವಿಯುಕ್ತ ಚಿದ್ಘನಶರೀರಾಯಾವ್ಯಯಾಯಾತ್ಮನೇ ।
ಪೂರ್ಣಾನಂತತರಾಯ ಪೂರ್ಣಸುಖದಾಯಾಜಸ್ರಪೂರ್ವಾಯ ಚ ।

---

ಹರಿದ್ವರ್ಣದ ಕೇಶಪಾಶವುಳ್ಳ ರುದ್ರದೇವತೆಗಳಿಗೆ ನಮಸ್ಕಾರ. ತಾರಕಮಂತ್ರ ರೂಪದಿಂದಿದ್ದು ಸಂಸಾರವೆಂಬ ಸಮುದ್ರವನ್ನು ದಾಟಿಸುವ ಮಹಾದೇವನೇ, ನಿನಗೆ ವಂದನೆ. ಮಹಾದೇವನೇ, ನೀನು ಬ್ರಹ್ಮಜ್ಞಾನಿಗಳಿಗೂ ಬ್ರಹ್ಮಜ್ಞಾನವನ್ನು ಬೋಧಿಸುವೆ. ದುಃಖಮಿಶ್ರಿತವಾದ ಸುಖವನ್ನು ದೂರಮಾಡಿ, ಪರಲೋಕದಲ್ಲಿ ಸುಖಕೊಡುವ ನಿರ್ದುಷ್ಟವಾದ ಭೋಗವನ್ನು ಸಹ ನೀನು ನಿನ್ನ ಭಕ್ತರಿಗೆ ಕಲ್ಪಿಸಿ ಕೊಡುವೆ. ಮಹಾದೇವನೇ, ನಿನಗೆ ವಂದನೆಗಳು. ॥೭॥

ಶಂ ಶಬ್ದವಾಚ್ಯವಾದ ಸುಖಕ್ಕೂ, ಅದರ ವ್ಯಾಪನೆಗೂ ನೀನೇ ಆಶ್ರಯನು, ಮತ್ತು ನೀನೇ ಸಮರ್ಥನು. ನೀನು ನಿತ್ಯಸುಖಾತ್ಮಕನು. ಅದರಿಂದಲೇ ನಿನಗೆ ಶಂಕರನೆಂಬ ಹೆಸರಿರುವುದು. ಸಕಲ ಜಗತ್ತಿಗೂ ನೀನು ಸುಖಪ್ರದನೆನಿಸಿರುವೆ. ನೀನು ಸಕಲ ಗುಣಾತೀತನು. ನಿತ್ಯಶುದ್ಧಬುದ್ಧಸ್ವರೂಪನು. ಇಂತಹ ನಿನಗೆ ವಂದನೆಗಳು. ॥೮॥

ಇಚ್ಛಾಮಾತ್ರದಿಂದ ಶಕ್ತಿಯನ್ನು ಪ್ರಯೋಗಿಸುವ, ಜ್ಞಾನಘನಶರೀರಿಯೂ, ನಾಶರಹಿತನೂ ಆಗಿರುವ ಮಹಾದೇವನೇ, ನೀನು ಪೂರ್ಣಜ್ಞಾನರೂಪಿಯು. ಅನಾದಿಪುರುಷನು. ಶತ್ರುಗಳಿಗೆ ಅಭೂತಪೂರ್ವವಾದ ಶಿಕ್ಷೆಯನ್ನು ವಿಧಿಸುವವ

ಯತ್ತ್ರೇ ಕ್ಷೇಪಕ ಈಶತೇ ದಿಶತಿ ಚ ಶ್ರೇಯಃ ಪ್ರಜಾನಾಮಸೌ ।
ಶಾಂತಿಂ ಯಾತಿ ಸಮಸ್ತಮಂಗಲಗುಣಗ್ರಾಮೈಕಸೀಮಾಯ ತೇ ॥೯॥

ಇಚ್ಛಾಶಕ್ತಿಮುಪೈತಿ ನಿರ್ಮಲತರಶ್ಶಾಸ್ತ್ರೇ ಪ್ರಕೃತ್ಯೇತಿ ಚ
ವ್ಯಾಚಷ್ಟೇ ಶಿವನಾಮ ಯಸ್ಯ ವಿಭವಂ ತಸ್ಮೈ ಪರಸ್ಮೈ ನಮಃ ।

॥ ಶಿವತರಾಯ ಚ ॥

ಲೋಕಾನಾಮವಿಪರ್ಯಯೇಣ ಕುರುತೇತ್ಯಂತಂ ಶಿವಂ ಯಃ ಸದಾ ।
ತಸ್ಮೈ ಚಾಸ್ತು ನಮಃ ಪ್ರಯಾಗಬದರೀಕೇದಾರಕಾಶ್ಯಾದಿಷು । ॥೧೦॥

॥ ನಮಸ್ತೀರ್ಥ್ಯಾಯ ಚ ॥

ತೀರ್ಥ್ಯೋ ಯೋ ಹಿ ಮರುದ್ವೃಧಾದಿಸರಿತಾಂ ಕೂಲಂ ಚ ಗೋದಾವರೀ।
ಕೃಷ್ಣಾ ಸಿಂಧು ಸರಸ್ವತೀಮುಖಸರಿತ್ಪಾರಂ ತದರ್ವಾಕ್ತಟಂ ।
ನಿತ್ಯಂ ಸನ್ನಿಹಿತಾಯ ತೇಷು ಜಗತಾಂ ತ್ರಾಣಾಯ ತುಭ್ಯಂ ನಮಃ ।
ಪ್ರಾಪ್ತ್ಯೈವೋತ್ತಮ ಯೋನಿಜನ್ಮಗುಣಮುತ್ಕರ್ಷಂ ಕ್ರಮಾತ್ಪ್ರಾಣಿನಾಂ ॥೧೧॥

---

ನಾದರೂ, ಪ್ರಜೆಗಳಿಗೆ ಸುಖಶಾಂತಿಗಳನ್ನು ಕರುಣಿಸುವವನಾಗಿರುವೆ. ಸಮಸ್ತ ಸನ್ಮಂಗಲ ಗುಣನಿಧಿಯಾದ ನಿನ್ನಿಂದ ಲಭಿಸುವ ಸಮಸ್ತ ಶ್ರೇಯಸ್ಸೂ ಮಾನವರನ್ನು ಉದ್ಧರಿಸುವುದರಲ್ಲಿಯೇ ಪರ್ಯಾಪ್ತವಾಗುವುದಲ್ಲವೆ? ॥೯॥

ಮಹೇಶ್ವರನೇ, ನೀನು ನಿನ್ನ ಇಚ್ಛಾಶಕ್ತಿಯಿಂದ ನಾನಾವಿಧಗಳಾದ ಆಕಾರಗಳನ್ನು ಪಡೆದಿರುವೆ. ಅನಂತರ ಪ್ರಕೃತ್ಯವಸ್ಥೆಯಲ್ಲಿ ನಿರ್ಮಲಸ್ವಭಾವದಿಂದಲೂ ವರ್ತಿಸುವೆ. ಶಿವನಾಮಬಲದಿಂದ ಸಕಲವಿಭವವನ್ನೂ ಭಕ್ತರಿಗೆ ಕರುಣಿಸುವೆ. ಇಂತಹ ಪರಾತ್ಪರಪುರುಷನಿಗೆ ಪ್ರಣಾಮಗಳು. ಪ್ರಯಾಗ, ಬದರೀ, ಕೇದಾರ, ಮುಂತಾದ ದಿವ್ಯಕ್ಷೇತ್ರಗಳಲ್ಲಿ ನಿನ್ನನ್ನು ಆರಾಧಿಸುವಂತಹ ಭಕ್ತರಿಗೆ ಅತಿಶಯವಾದ ಶುಭವನ್ನು ದಯಪಾಲಿಸಿ, ಅವರನ್ನು ಮುಕ್ತರನ್ನಾಗಿಮಾಡುವೆ. ಇಂತಹ ಶಿವತರಸ್ವರೂಪನಾದ ಮಹೇಶ್ವರನೇ, ನಿನಗೆ ವಂದನೆಗಳು. ॥೧೦॥

ಮರುದ್ವೃಧೆಯೆನಿಸಿದ ಕಾವೇರೀ, ಗೋದಾವರೀ, ಕೃಷ್ಣಾ, ಸಿಂಧು, ಸರಸ್ವತಿ ಮುಂತಾದ ಮಹಾನದಿಗಳ ತೀರ್ಥರೂಪದಲ್ಲಿ ಪವಿತ್ರನಾಗಿ ಅಡಗಿರುವವನೂ, ಜಲ

॥ ನಮಃ ಪ್ರತರಣಾಯ ಚ ॥

ಮಗ್ನಾನಾಂ ಭವಸಾಗರೇ ಕರುಣಯಾ ಚೋನ್ಮಜ್ಜಯಿತ್ರೇ ಭವಾ
ದೂರ್ಧ್ವಂ ಚೋದ್ಧರತೇ ನಮಃ ಕ್ರಮವಶಾತ್ಪಾರಂ ಭವಾಂಭೋನಿಧೇಃ।
ಪ್ರಾಪ್ತಾನ್ ಕರ್ಮವಶೇನ ಜಂತುನಿವಹಾನಾವರ್ತಮಾನಾನ್ಪುನಃ ।
ಕರ್ತುಂ ಪ್ರೇರಯತೇ ಧಿಯಸ್ತದನು ತಾನ್ಮಧ್ಯೇ ಭವಾಬ್ಧೇಶ್ಚಿರಂ ॥೧೨॥

॥ ನಮಃಶಷ್ಪ್ಯಾಯ ಚ ॥

ಸರ್ವಾನ್ ಭ್ರಾಮಯತೇ ನಮೋಸ್ತು ಭವತೇ ಪುಣ್ಯೇಷು ದರ್ಭಾದಿಷು ।
ಕ್ಷುದ್ರಪ್ರಾಣಿಕುಲೇಷು ಬಾಲತೃಣವತ್ಸ್ವಲ್ಪಪ್ರಮಾಣೇಷು ಚ ।
ಫೇನೇ ಕೇನವದಲ್ಪಕಾಲಮಥವಾ ಜೀವತ್ಸು ಜಂತುಷ್ವಹೋ ।
ಷ್ಯೇವಂ ತತ್ಸಿಕತಾಸು ತದ್ವದಧಿಕಕ್ಷುದ್ರೇಷು ನಾರೇಪಿ ಚ ॥೧೩॥

---

ರೂಪದಿಂದಿದ್ದು ಸಮಸ್ತರಿಗೂ ಪ್ರಾಣಸ್ವರೂಪನಾಗಿರುವವನೂ ಆಗಿ ಎಲ್ಲರಿಗೂ ಸಮೀಪಸ್ಥನಾಗಿರುವ ಪರಮೇಶ್ವರನೇ, ನಿನಗೆ ಅನಂತಾನಂತ ವಂದನೆಗಳು. ॥೧೧॥

ಸಂಸಾರಸಾಗರದಲ್ಲಿ ಮುಳುಗಿ ನರಳುತ್ತಿರುವವರನ್ನು ಕರುಣೆಯಿಂದ ಉದ್ಧರಿಸಿ ಅವರಿಗೆ ಸಾಂಸಾರಿಕವಾದ ದುಃಖಗಳನ್ನು ತಪ್ಪಿಸುವವನು ನೀನೇ ಅಲ್ಲವೆ. ಕರ್ಮವಶದಿಂದ ಬೇರೆಬೇರೆ ಜನ್ಮಗಳನ್ನು ಪಡೆದು ನಾನಾಯೋನಿಗಳಲ್ಲಿ ಜನ್ಮ ತಾಳುವ ಸಾಮಾನ್ಯ ಜೀವಿಗಳನ್ನು ಉದ್ಧರಿಸಲೋಸುಗ ಅವರ ಬುದ್ಧಿಯನ್ನು ಸಂಸ್ಕಾರಗೊಳಿಸಿ ಕಾಪಾಡಲು ಯತ್ನಿಸುವೆ. ಒಂದು ವೇಳೆ ಅವರು ನಿನ್ನಲ್ಲಿ ದೃಢಭಕ್ತಿಯಿಡದಿದ್ದರೆ ಅಂತಹವರನ್ನು ಆಳವಾದ ಸಂಸಾರಸಾಗರದಲ್ಲಿಯೇ ಮುಳುಗಿಸಿಬಿಡುವೆಯಲ್ಲವೆ! ॥೧೨॥

ಪುಣ್ಯಪ್ರದವಾದ ದರ್ಭಾದಿಗಳ ರೂಪದಲ್ಲಿದ್ದು ಸರ್ವಕರ್ಮಗಳಿಗೂ ಚಾಲಕನೆನಿಸಿರುವೆ. ದುರ್ಬಲವಾದ ಪ್ರಾಣಿಗಳಿಗೆ ಎಳೆಗರುಕೆಯ ರೂಪದಲ್ಲಿ ನಿಂತು, ಅವರಿಗೆ ಆಹಾರರೂಪನಾಗಿರುವೆ. ನೀರಿನ ನೊರೆಯಲ್ಲಿ ಅಲ್ಪಪ್ರಮಾಣದಿಂದಿದ್ದು ಜೀವಂತವಾಗಿರುವ ಸಕಲ ಪ್ರಾಣಿಗಳಲ್ಲಿಯೂ ಜೀವರೂಪದಿಂದ ನೆಲಸಿರುವೆ. ನದಿಯ ಪಾತ್ರದಲ್ಲಿ ಕೇವಲ ಅಲ್ಪವಾದ ಮರಳಿನರೂಪದಲ್ಲಿಯೂ, ಪ್ರವಾಹರೂಪದಿಂದಲೂ ಶೋಭಿತನಾಗಿರುವೆ. ಹೀಗೆ ಸರ್ವವ್ಯಾಪಿಯಾದ ನಿನಗೆ ಸಾಷ್ಟಾಂಗ ನಮಸ್ಕಾರಗಳು. ॥೧೩॥

॥ ನಮ ಇರಿಣ್ಯಾಯ ಚ ।

ನಾನಾಪುಣ್ಯನದೀಪ್ರವಾಹನಿವಹೇ ತತ್ಸ್ಥಾಲ್ಯಭೂತಿಷ್ವಪಿ ।
ಶ್ರೇಷ್ಠಪ್ರಾಣಿಷು ಚೇರಿಣೇಷು ಚ ತಥಾ ನಿತ್ಯಕ್ರಿಯಾಮಾನಿಷು ।
ಪ್ರಖ್ಯಾತೇ ಪಥಿ ಚ ಪ್ರಕೃಷ್ಟತರಸನ್ಮಾರ್ಗಾನುವರ್ತಿಷ್ವಪಿ ।
ಕ್ಷುದ್ರಾನೇಕಶಿಲಾತಿಕರ್ಕಶತರೇ ದೇಶೇ ಕುಶೀಲೇ ಜನೇ ॥೧೪॥

॥ ಕ್ಷಯಣಾಯ ಚ ॥

ವಸ್ತವ್ಯೇ ವಿಜನೇ ಜನೇಷ್ವಪಿ ತಥಾ ಯೋಗ್ಯೇಷು ಚೈತೇಷು ಯಃ ।
ಸರ್ವೇಷ್ವೇವಮನುಗ್ರಹಾಯ ಜಗತಾಮಾಸ್ತೇ ವಿಭುಸ್ಸರ್ವತಃ ।
ತಸ್ಮೈ ತೇಽಸ್ತು ನಮಃ ಕಪರ್ದಿನ ಇದಂ ಸತ್ಕುಂಡಲಾಯಾನಿಶಂ
ಭಕ್ತಾನಾಂ ಪುರತಃ ಸ್ಥಿತಾಯ ಚ ನಮೋ ಗೋಷ್ಠೇ ಗೃಹಾಭ್ಯಂತರೇ ॥೧೫॥

॥ ನಮಸ್ತಲ್ಪ್ಯಾಯ ಚ ॥

ತಲ್ಪೇ ತಲ್ಪಕರಾತಿರತ್ನವಿವಿಧಪ್ರಾಸಾದಮಧ್ಯೇ ತಥಾ
ಕಾಟೇ ಪರ್ವತಗಹ್ವರೇ ಪ್ರಪವರೇ ನೀಹಾರವಾರಿಣ್ಯಪಿ ।

---

ನಾನಾವಿಧವಾದ ಪುಣ್ಯನದೀ ಪ್ರವಾಹದಲ್ಲಿಯೂ, ಆದರಲ್ಲಿ ನೆಲಸಿರುವ ಪ್ರಾಣಿಗಳಲ್ಲಿಯೂ, ದಿಣ್ಣೆಯ ಗುಡ್ಡಭಾಗದಲ್ಲಿಯೂ, ನಿತ್ಯಕ್ರಿಯಾಮಾನದಲ್ಲಿಯೂ, ನೀನು ನೆಲಸಿರುವೆ. ಪ್ರಸಿದ್ಧವಾದ ರಾಜಮಾರ್ಗದಲ್ಲಿಯೂ ವಿಶಾಲವಾದ ಸನ್ಮಾರ್ಗದಲ್ಲಿಯೂ ಸಣ್ಣ ಸಣ್ಣ ಕಲ್ಲುಗಳ ರೂಪದಲ್ಲಿಯೂ, ಅಂತಹ ಕಲ್ಲುಗಳಿಂದ ವ್ಯಾಪ್ತವಾದ ಭೂಮಿಯಲ್ಲಿಯೂ ನಿವಾಸಯೋಗ್ಯವಾದ ಪ್ರದೇಶದಲ್ಲಿಯೂ ನೀನು ನೆಲಸಿರುವೆ. ಇಂತಹ ನಿನಗೆ ಪ್ರಣಾಮಗಳು. ॥೧೪॥

ವಿಜನವಾಗಿ ವಾಸಯೋಗ್ಯವಾದ ಪ್ರದೇಶದಲ್ಲಿಯೂ, ಯೋಗ್ಯವಾದ ಇತರ ಸಂಪದ್ಭರಿತ ಪ್ರದೇಶಗಳಲ್ಲಿಯೂ ನೆಲಸಿ, ಸರ್ವವ್ಯಾಪಿಯಾಗಿರುವ ನಿನಗೆ ನಮಸ್ಕಾರ. ಜಟಾಜೂಟಧಾರಿಯಾಗಿ ಸತ್ಕುಂಡಲಗಳನ್ನು ಧರಿಸಿರುವ ಮತ್ತು ಭಕ್ತರ ಎದುರಿನಲ್ಲಿ ಪ್ರತ್ಯಕ್ಷನಾಗಿ ನಿಂತು ಅವರ ಇಷ್ಟಾರ್ಥವನ್ನು ಸಲ್ಲಿಸುವ ಮಹಾದೇವನೇ, ನೀನು ಗೋವುಗಳನ್ನು ಕಟ್ಟುವ ಕೊಟ್ಟಿಗೆಗಳಲ್ಲಿಯೂ ಗೃಹಾಭ್ಯಂತರದಲ್ಲಿಯೂ ಸಂತೋಷದಿಂದ ನೆಲಸಿರುವೆಯಲ್ಲವೆ! ॥೧೫॥

ದಿವ್ಯಪ್ರಾಸಾದಮಧ್ಯದಲ್ಲಿ ಸುಂದರವಾಗಿ ಶೋಭಿಸುವ ಮೃದುಶಯನದ

॥ ರಜಸ್ಯಾಯ ಚ ॥

ಸತ್ಪಾಂಸೌ ವಿಷಮೋ ರಜಸ್ಯಪಿ ತಥಾ ಶುಷ್ಕೇಪಿ ಚಾದ್ರೇಪಿ ಚ ।
ದೇಶೇ ಲುಪ್ತತೃಣಾದಿಕೇ ಚ ಪರಿತಃ ಪೂರ್ಣೇ ತೃಣಾದ್ಯೈಃ ಸ್ಥಲೇ ॥೧೬॥

॥ ನಮ ಉರ್ವ್ಯಾಯ ಚ ॥

ಊರ್ವ್ಯಾಂ ಮಧ್ಯಬಿಲಾಕೃತಿಪ್ರತಿಕೃತೌ ಪರ್ಣೇಷು ಪರ್ಣವ್ರಜೇ ।
ಸೂರೇಷ್ವಸ್ತಿ ಶಿವೋಽಯಮೇವಮಭಿತಃ ಸಚ್ಚಿತ್ಸುಖಾಂಶೈಃ ಸ್ವಯಂ ।
ಭೂತಂ ಭಾವಿ ಚ ವರ್ತಮಾನಮನುಗೃಹ್ಣಾತ್ಯೇಷ ಬುದ್ಧ್ಯಾ ಸತಾಂ ।
ಭಕ್ತ್ಯಾ ಭಾವಯತಾಂ ಸ ಏವ ಸುಲಭಸ್ತಸ್ಮೈ ನಮಃ ಕುರ್ಮಹೇ ॥೧೭॥

॥ ಆಭಿಘ್ನತೇ ಚ ॥

ಹಂತವ್ಯಾನಭಿಹಂತುಮಾಯುಧವರೈರುದ್ಯಮ್ಯ ಸಂಧಾವತೇ ।
ದುಷ್ಟಾಂಸ್ತೈರಭಿನಿಘ್ನತೇ ನಮ ಇದಂ ಕಾಂಕ್ಷಿತ್ಸಮಾಪೀಡನೈಃ ।

---

ರೂಪದಲ್ಲಿಯೂ, ಸರ್ವರಕಾಲಿಗೂ ಕಠಿನವಾಗಿ ಕಾಣುವ ಕಂಟಕರೂಪದಲ್ಲಿಯೂ ನೀನು ಕಂಡುಬರುವೆ. ಪರ್ವತಗಳು, ಗುಹೆಗಳು, ಸರೋವರಗಳು, ತಂಪಾದ ಜಲ ರಾಶಿ ಇವುಗಳಲ್ಲಿ ನೀನು ಆಯಾರೂಪದಲ್ಲಿಯೇ ಅಡಗಿರುವೆ. ಮತ್ತು ಪ್ರಶಸ್ತ ವಾದ ರಜೋರೂಪದಿಂದಲೂ, ಧೂಳಿನಲ್ಲಿಯೂ, ಹಾಗೆಯೇ ಒಣಗಿದ ಮತ್ತು ಹಸಿ ಯಾದ, ತೃಣಗಳಿಲ್ಲದ, ತೃಣಭರಿತವಾದ ಸಕಲ ಪ್ರದೇಶಗಳಲ್ಲಿಯೂ ನೀನು ಸೂಕ್ಷ್ಮರೂಪದಿಂದ ಕಂಡುಬಂದಿರುವೆ. ಇಂತಹ ಮಹಾಮಹಿಮನಾದ ನಿನಗೆ ವಂದನೆಗಳು. ॥೧೬॥

ಭೂಮಿಯಲ್ಲಿ ಮಧ್ಯಬಿಲಾಕೃತಿಯಿರುವ ಪ್ರದೇಶದಲ್ಲಿಯೂ, ಎಲೆಗಳ ಗುಂಪಿ ನಲ್ಲಿಯೂ, ಪ್ರತಿ ಎಲೆಯಲ್ಲಿಯೂ, ಶೂರರಲ್ಲಿಯೂ, ಸತ್ಯ ಜ್ಞಾನಗಳ ಸ್ವರೂಪದಿಂದ ನೀನು ನೆಲಸಿರುವೆ ಯಾರು ನಿನ್ನನ್ನು ಭಕ್ತಿಯಿಂದ ಧ್ಯಾನಿಸುವರೋ ಅಂತಹವರಿಗೆ ಸಕಲ ಇಷ್ಟಾರ್ಥಗಳನ್ನು ನೆರವೇರಿಸಿ ಅವರಿಗೆ ಅತ್ಯಂತ ಸುಲಭನಾಗಿ ತೋರಿಬರು ತ್ತಿರುವೆ. ಇಂತಹ ಸರ್ವಸುಲಭನಾದ ನಿನಗೆ ಸದಾ ನಮಸ್ಕಾರ. ॥೧೭॥

ಮಹೇಶ್ವರನೇ, ನೀನು ಕೊಲ್ಲಲೇಬೇಕಾದವರನ್ನು ಹಿಂಬಾಲಿಸಿ ಹೋಗಿ ನಿನ್ನ ಕ್ರೂರವಾದ ಆಯುಧಗಳಿಂದ ಧ್ವಂಸಮಾಡುವೆ. ಮತ್ತೆ ಕೆಲವರು ದುಷ್ಟ

॥ ಪ್ರಕ್ಷಿಪ್ತದತೇ ಚ ॥

ಕಾಂಶ್ಚಿಚ್ಚಾಪಿ ಖಲಾನ್ ಬಲಸ್ಯ ಮಹತಃ ಸ್ವಸ್ಯ ಪ್ರಕರ್ಷೇಣ ಚಾ ।
ತ್ಯಂತಂ ಭೇದಯತೇ ಸಮಸ್ತಜಗತಾಂ ಕ್ಷೇಮಾಯ ಯೋಗಾಯ ಚ ॥೧೮॥

॥ ಋಷಿದೇವತಾಛಂದಾಂಸಿ ॥

ಸ್ವಾತ್ಮಾನಂ ಹೃದಿ ಭಾವಯಂತಮನಿಶಂ ರುದ್ರಂ ಸ್ವಸಾರೂಪ್ಯದಂ ।
ಸಾಮ್ರಾಜ್ಯಾದಿರಿಪುಕ್ಷಯಾದಿನಿಖಿಲಾಭೀಷ್ಟಪ್ರದಂ ಧ್ಯಾಯತಾಂ ।
ಸಪ್ತದ್ವೀಪಮಹಾಧಿಪತ್ಯದಮನಂತೋದ್ಯದ್ದಿನೇಶದ್ಯುತಿಂ ।
ಭೂತೇಶಂ ಭುಜಗೇಂದ್ರಭೂಷಿತತನುಂ ಕಂಠೇ ಕಲಂಕಂ ಭಜೇ ॥೧೯॥

॥ ನಮೋ ವಃ ಕಿರಿಕೇಭ್ಯಃ ॥

ಈಷತ್ಸ್ವಲ್ಪಫಲಪ್ರದಾಃ ಕ್ರತುಭುಜೋ ನಾನಾಧಿಕಾರಾಸ್ತ್ರಯ ।
ಸ್ತ್ರಿಂಶನ್ನಾಮಮಿತೈರ್ಗಣೈಸ್ತ್ರಿಗುಣಿತೈಃ ಸ್ವಾಂಶೈರ್ಗಣೇಶಾನ್ವಿತೈಃ ।

---

ರನ್ನು ನಾನಾರೀತಿ ಹಿಂಸಿಸುವುದರ ಮೂಲಕ ನಾಶಗೊಳಿಸುವೆ. ಹಲವರು ಮೋಸಗಾರರನ್ನು ತನ್ನ ಬಲಪ್ರಯೋಗದಿಂದ ಎಳೆದು ದುಃಖಪಡಿಸುವೆ. ಈ ವಿಧವಾದ ನಿನ್ನ ಸಮಸ್ತ ಕಾರ್ಯಗಳೂ ಲೋಕಕ್ಷೇಮಕ್ಕಾಗಿಯೇ ಅಲ್ಲವೆ? ಹೀಗೆ ಜಗದ್ರಕ್ಷಣೆ ಮಾಡುತ್ತಿರುವ ನಿನಗೆ ವಂದನೆಗಳು. ॥೧೮॥

ಸದಾ ಆತ್ಮಧ್ಯಾನಮಾಡುತ್ತಾ, ತನ್ನನ್ನು ಭಜಿಸುವವರಿಗೆ ಸ್ವಸ್ವರೂಪವನ್ನೇ ಅನುಗ್ರಹಿಸುತ್ತಾ ಅವರಿಗೆ ಸುಖಸಾಮ್ರಾಜ್ಯಗಳನ್ನಿತ್ತು ಅವರ ಶತ್ರುಗಳನ್ನೇ ಧ್ವಂಸಗೊಳಿಸುತ್ತಿರುವ ಮಹಾದೇವನು ಉದಯಕಾಲದ ಸೂರ್ಯನಂತೆ ಸರ್ವತೋಮುಖವಾಗಿ ಪ್ರಕಾಶಿಸುವನು. ಸಪ್ತದ್ವೀಪಗಳ ಒಡೆತನವನ್ನೂ ಅನುಗ್ರಹಿಸಬಲ್ಲವನು. ಹೀಗೆ ಸಮಸ್ತ ಪ್ರಾಣಿಗಳಿಗೂ ಒಡೆಯನೆನಿಸಿ, ನಾಗಾಭರಣಭೂಷಿತನೂ, ವಿಷಕಂಠನೂ ಆಗಿರುವ ಮಹಾದೇವನನ್ನೇ ನಾನು ಸದಾ ಸೇವಿಸುವೆನು. ॥೧೯॥

ನರರು ಅಲ್ಪಸ್ವಲ್ಪ ಈಶ್ವರಾರಾಧನೆಯಿಂದ ದೇವತೆಗಳೆನಿಸಿರುವವರು. ಮತ್ತು ಅವರು ತಮ್ಮ ಭಕ್ತರಿಗೆ ಅಲ್ಪವಾದ ಫಲವನ್ನೇ ಕೊಡಬಲ್ಲರು. ಪರಮೇಶ್ವರನಾದರೋ ಮೇಲೆ ಹೇಳಿದಂತಹ ಮೂವತ್ತುಮೂರುಕೋಟಿ ದೇವತೆಗಳಿಗೂ ಅದರ ಮೂರರಷ್ಟಿರುವ ರುದ್ರಾಂಶಭೂತರಾದ ಗಣಗಳಿಗೂ, ಹಾಗೆಯೇ ಅಗ್ನಿ, ವಾಯು, ಸೂರ್ಯ

ಪ್ರತ್ಯೇಕಂ ಪರಿವಾರಿತಾಃ ಸ್ವಸದೃಶೈರಗ್ನೇಶ್ಚ ವಾಯೋಸ್ತಥಾ ।
ಸೂರ್ಯಸ್ಯೋಗ್ರವಿಭೂತಯಃ ಕ್ರಮಯುತಾ ಏಕಾದಶೈಕಾದಶ ॥೨೦॥

ಸಂಘೀಭೂಯ ವಸಂತಿ ಯೇಧಿಪತಯೋ ಭೂಮ್ಯಂತರಿಕ್ಷದ್ಯುಷು
ತ್ರಿಷ್ವನ್ಯೈಃ ಸಹ ಷಡ್ಭಿರೇವಮಮರೈಃ ಸರ್ವೈಃ ಸಹ ಪ್ರಾಣಿಷು ।
ತ್ರೀಣಿ ತ್ರೀಣಿ ಶತಾನಿ ಚೋಪರಿ ನವತ್ರಿಂಶಚ್ಚ ದೇವಾ ಭವಂ
ತ್ಯಂಶಾ ಜೀವಘನೇಸ್ಯ ಪಂಕಜಭುವೋ ವಹ್ನೇಃ ಸ್ಫುಲಿಂಗಾಇವ ॥೨೧॥

ತೇ ದೇವಾಃ ಕಥಮೀಶ್ವರಾಃ ಕಥಮಪಿ ಧ್ಯಾನೇನ ಯೋಗೇನ ವಾ
ರುದ್ರಾಂಶಃ ಪರಮೇಶ್ವರಾನ್ ಭಗವತೋ ಜಾನಂತ್ಯಚಿಂತ್ಯಾನಪಿ ।
ಜಾನೀಮಃ ಕಥಮಲ್ಪಕಾ ವಯಮಥಾಪಿ ಸ್ವೇಚ್ಛಯೇದಂ ಜಗ
ತ್ಕುರ್ವದ್ಭ್ಯಃ ಕೃತಮೇತದೇವ ನಿತರಾಂ ವಿಸ್ತಾರಯದ್ಭ್ಯಸ್ಸದಾ ॥೨೨॥

---

ಏಕಾದಶರುದ್ರರು ಇವರೆಲ್ಲರಿಗೂ ಅವರವರಿಗೆ ತಕ್ಕಂತಹ ಅಧಿಕಾರಗಳನ್ನು ಕೊಟ್ಟು ಅವರು ಪ್ರತ್ಯೇಕವಾದ ಸುಖಸಾಮ್ರಾಜ್ಯಗಳಲ್ಲಿ ಓಲಾಡುವಂತೆ ಏರ್ಪಡಿಸುವನು ಇಂತಹ ದೇವಾಧಿದೇವನಾದ ಮಹಾದೇವನೇ, ನಿನಗೆ ವಿನಯಪೂರ್ವಕವಾದ ಪ್ರಣಾಮಗಳು. ॥೨೦॥

ಈಗ, ಭೂಮಿ, ಸ್ವರ್ಗ, ಅಂತರಿಕ್ಷ ಮುಂತಾದ ಸ್ಥಳಗಳಲ್ಲಿ ಯಾರು ದೇಶಾಧಿಪತಿಗಳಾಗಿ ವಾಸಿಸುವರೋ, ಅಂತಹವರ ಗುಂಪಿಗೆಲ್ಲಾ ಯಜಮಾನರೆನಿಸಿ, ಬ್ರಹ್ಮ, ವಿಷ್ಣು, ಹರರೆಂಬ ಹೆಸರಿನಿಂದ ಮೂರು ಜನ ಅಧ್ಯಕ್ಷರಾಗಿರುವರು. ಅವರಿಂದ ಆರಾಗಿ, ಆ ಆರರಿಂದ ಪಂಗಡಗಳು ಒಡೆದು ಈಗ ಮೂವತ್ತುಮೂರು ಕೋಟಿ ದೇವತೆಗಳಾಗಿರುವರು. ಬೆಂಕಿಯಿಂದ ಕಿಡಿಗಳು ಹಾರಿ ಹೊರಟು ಅಸಂಖ್ಯಾತಗಳಾಗಿ ಕಾಣುವಂತೆ ಬ್ರಹ್ಮವಸ್ತುವಿನಿಂದ ಲೆಕ್ಕವಿಲ್ಲದಷ್ಟು ಜೀವಿಗಳು ಪ್ರಪಂಚವನ್ನೇ ಆಕ್ರಮಿಸಿಕೊಂಡಿರುವುವು. ಹೀಗೆ ಲೋಕಸೃಷ್ಟಿಕರ್ತನಾದ ಸ್ವಾಮಿಯೇ, ನಿನಗೆ ವಂದನೆಗಳು. ॥೨೧॥

ಅಂತಹ ದೇವತೆಗಳೂ ಸಹ ಯೋಗಬಲದಿಂದಲೂ ಧ್ಯಾನಬಲದಿಂದಲೂ ಪರಮೇಶ್ವರಗತವಾದ ರುದ್ರಾಂಶವನ್ನು ಸ್ವಲ್ಪವೂ ಅರಿಯಲಾರರು. ಹೀಗಿರುವಾಗ ಲೋಕವನ್ನು ಸೃಷ್ಟಿಸುವ ಮತ್ತು ಸ್ವೇಚ್ಛೆಯಿಂದಲೇ ಜಗತ್ತನ್ನು ರಕ್ಷಿಸುತ್ತಾ

ದೇವಾನಾಂ ಹೃದಯೇಷು ಯೋಗಜಧಿಯಾ ತೇಷಾಂ ವಸದ್ಭ್ಯೋ ಯಥಾ
ಪ್ರಜ್ಞಂ ಭಕ್ತಿವಶೇನ ಶಂತಮಹೃದಾ ರುದ್ರಾನ್ನಮಸ್ಕುರ್ಮಹೇ ।

॥ ನಮೋ ನಿಕ್ಷೀಣಕೇಭ್ಯಃ ॥

ಪ್ರಾರಬ್ಧಾಖಿಲಕರ್ಮಬಂಧವಿನಿವೃತ್ತ್ಯರ್ಥಂ ಚ ಪಾಪಾತ್ಮನಾ
ಮಾಧಿವ್ಯಾಧಿಜರಾದಿತಸ್ಕರಮಹಾಸರ್ಪಾದಿನಕ್ರಾದಿಭಿಃ ॥೨೩॥

ಕ್ಷಿಣ್ವದ್ಭ್ಯೋ ವಿವಿಧಂ ನಮಸ್ತನುಭೃತಾಂ ಕರ್ಮಾನುರೂಪಂ ಫಲಂ
ದಾತುಂ ದುಷ್ಕೃತಿನಸ್ತ್ವಮೋ ಸುಕೃತಿನಶ್ಚೇಮೇ ಕಿಲೇತ್ಯನ್ವಹಂ ।
ಲೋಕಾನುಗ್ರಹಕಾಮ್ಯಯಾಪಿ ಚ ವಿಚಿನ್ವದ್ಭ್ಯೋ ನಮೋಮೋಂ ಯದಾ
ಮರ್ಯಾದಂ ಚ ಸುನಿಶ್ಚಿತಂ ಚ ನಿಯಮೇನಾಯುಃ ಕ್ಷಯೇ ಪ್ರಾಣಿನಾಂ॥೨೪॥

---

ಹೆಚ್ಚಿಸುವ ದೇವತಾವಿಶೇಷ ಗುಣವನ್ನು ಹೇಗೆ ತಾನೆ ತಿಳಿಯಲು ಸಾಧ್ಯವಾದೀತು? ಅದು ಎಂದಿಗೂ ಸಾಧ್ಯವಿಲ್ಲದ ಮಾತು. ॥೨೨॥

ದೇವತೆಗಳ ಹೃದಯಾಂತರಾಳದಲ್ಲಿ ಯೋಗಮಾರ್ಗದಿಂದ ವಾಸಮಾಡುತ್ತಿರುವ ರುದ್ರಾಂಶಕ್ಕೂ ನಾನು ಭಕ್ತಿಪರವಶನಾಗಿ ಶಾಂತಮನಸ್ಸಿನಿಂದ ನಮಸ್ಕಾರ ಮಾಡುವೆನು. ಮತ್ತು ಪ್ರಾರಬ್ಧಕರ್ಮಾನುಗುಣವಾಗಿ ಬಂದಿರುವ ಆಧಿ, ವ್ಯಾಧಿ, ಮುಪ್ಪು ಮುಂತಾದುವುಗಳಿಂದಲೂ, ತಸ್ಕರಭಯ, ಸರ್ಪಭಯ ಇವೇ ಮೊದಲಾದ ನಕ್ರಸಮಾನಗಳಾದ ಅಂತರಂಗಿಕ ಭಯಗಳಿಂದಲೂ ಪಾರಾಗುವುದಕ್ಕಾಗಿ ನಾನು ಸದಾ ಪುಣ್ಯರಾಶಿಯಾದ ಪರಶಿವನನ್ನು ತಪ್ಪದೆ ಧ್ಯಾನಮಾಡುವೆನು. ಇದರಿಂದ ನನಗೆ ಸಂಸಾರಗತವಾದ ಸರ್ವದುಃಖಗಳೂ ನಾಶಹೊಂದುವುವು. ॥೨೩॥

ಕರ್ಮಾನುರೂಪವಾಗಿ ಬಂದಿರುವ ಸುಖದುಃಖಗಳನ್ನು ಆಯಾ ಪ್ರಾಣಿಗಳಿಗೆ ಕೊಟ್ಟು ಅವರ ಪಾಪರಾಶಿಯನ್ನು ಕಳೆಯುತ್ತಿರುವ ಮತ್ತು ಅವರವರ ಕರ್ಮಗಳಿಗೆ ಸಾಕ್ಷಿಯಾಗಿ ನಿಂತು 'ಇವರು ಪಾಪಿಗಳು ಇವರು ಸುಕೃತಿಗಳು'ಎಂದು ವಿಭಾಗ ಮಾಡುತ್ತಿರುವ ಮಹಾದೇವನೇ, ನಿನಗೆ ನಮಸ್ಕಾರ. ಲೋಕಾನುಗ್ರಹಾರ್ಥವಾಗಿ, ಆಯುಸ್ಸನ್ನು ಕ್ರಮವಾಗಿ ಕಳೆದುಕೊಳ್ಳುತ್ತಿರುವ ಪ್ರಾಣಿಗಳಿಗೆ ಒಂದು ಎಲ್ಲೆಯನ್ನೂ, ಆಶ್ರಯಸ್ಥಾನವನ್ನೂ, ನಿಶ್ಚಯಜ್ಞಾನವನ್ನೂ ಕರುಣಿಸಿ ಅವರನ್ನು ಉದ್ಧರಿಸುತ್ತಿರುವ ಮಹೇಶ್ವರನೇ, ನಿನಗೆ ವಂದನೆಗಳು. ॥೨೪॥

ಹಂತೃಭ್ಯಶ್ಚ ನಮಃ ಕಥಂಚಿದಪಿ ಸರ್ಪೇಯುಃ ಕ್ವಚಿತ್ಪಾಪಿನಃ ।
ಪ್ರಾಯೇಣೇತಿ ಹಿ ಶಾಸಿತುಂ ತನುಭೃತಃ ಸರ್ವಾನ್ ಸಮಂತಾತ್ಸದಾ ।
ನೀರಂಧ್ರಂ ಸವಿಜೃಂಭಿತಂ ಜಗದಿದಂ ವ್ಯಾಪ್ಯ ಸ್ಥಿತೇಭ್ಯೋ ನಮಃ ।
ಶ್ರೀರುದ್ರಾನುಚರಾಶ್ಚ ಗುಪ್ತಮುಪರೇ ಯೇ ಸಂತಿ ತೇಭ್ಯೋ ನಮಃ ॥೨೫॥

॥ ಸ್ಕಂದ ಉವಾಚ ॥

॥ ದೇವತಾಧ್ಯಾನವಿಧಿಃ ॥

ಕನ್ಯಾಪುತ್ರಸುವರ್ಣರಾಜ್ಯನೃಪವಶ್ಯಾದಿ ಧೃಶ್ಯಾಸ್ತ್ರಿಯಃ
ಶತ್ರೋರ್ನಾಶಧನಾಯುರುತ್ತಮಯಶಃ ಪೌತ್ರಾಶ್ಚ ಗೋಜಾದಿಕಂ ।
ಸಾಮ್ರಾಜ್ಯಂ ಪ್ರತಿಶಂತಮಾತ್ಮನಿ ಭಜಂತಂ ತಂ ಸಹಸ್ರಾಕ್ಷಿಪ ।
ಚ್ಛ್ರೋತ್ರಘ್ರಾಣ ಶಿರೋಭಿರಾವೃತಮಮುಂ ವಿಶ್ವೇಶ್ವರಂ ಚಿಂತಯೇ॥೨೬॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಸ್ಕಂದಪ್ರೋಕ್ತರುದ್ರಭಾಷ್ಯೇ ಅಷ್ಟಮನವಮಾನುವಾಕ
ವಿವರಣೇ ತ್ರಿಂಶೋಧ್ಯಾಯಃ

---

ಪಾಪಿಗಳನ್ನು ಸದೆಬಡಿಯುವಂತಹ ರುದ್ರಾಂಶಸಂಭೂತರಿಗೂ, ಸಮಸ್ತ ಪ್ರಾಣಿಗಳನ್ನೂ ರಕ್ಷಿಸಲಿಕ್ಕಾಗಿ ಏರ್ಪಡಿಸಿರುವ ಅಂಶಸಂಭೂತರಿಗೂ ವಂದನೆಗಳು ಮತ್ತು ಅವಕಾಶವನ್ನೇ ಕೊಡದೆ ಸಮಸ್ತ ಭೂಮಂಡಲದಲ್ಲೆಲ್ಲಾ ವ್ಯಾಪಿಸಿರುವ ರುದ್ರಾನುಚರರಿಗೂ, ಗೂಢವಾಗಿ ಅಡಗಿರುವ ಶ್ರೀರುದ್ರಾನುಯಾಯಿಗಳಿಗೂ ನಿತ್ಯ ನಮಸ್ಕಾರಗಳು. ॥೨೫॥

ಸಹಸ್ರಸಂಖ್ಯೆಯಲ್ಲಿ ಕಣ್ಣು, ಕಾಲು, ಕಿವಿ, ಮೂಗು, ಶಿರಸ್ಸು ಇವೇ ಮೊದಲಾದುವುಗಳನ್ನು ಧರಿಸಿರುವ ಮಹಾನುಭಾವನಾದ ಪರಮೇಶ್ವರನು, ತನ್ನ ಭಕ್ತರು ಅಪೇಕ್ಷಿಸುವ, ಪುತ್ರೀಪುತ್ರಾದಿಗಳು ಸುವರ್ಣ, ರಾಜ್ಯ, ಕೋಶ, ಸುಂದರಸ್ತ್ರೀಯರು, ಶತ್ರುನಾಶ, ನಿಧಿ ನಿಕ್ಷೇಪಗಳು, ಆಯುಃಕೀರ್ತಿಗಳು, ಪುತ್ರಪೌತ್ರಾದಿಗಳು, ಗೋವೇ ಮೊದಲಾದ ಪ್ರಾಣಿಸಂಪತ್ತು ಇವನ್ನೆಲ್ಲಾ ಅನಾಯಾಸವಾಗಿ ಕರುಣಿಸಿ ಅನುಗ್ರಹಿಸುವನು. ಇಂತಹ ದಯಾಸಮುದ್ರನಾದ ವಿಶ್ವೇಶ್ವರನನ್ನು ನಾನು ಸರ್ವದಾ ಧ್ಯಾನ

ಮಾಡುತ್ತಿರುವೆನು. ಎಂದು ಕುಮಾರಸ್ವಾಮಿಯು ರುದ್ರಾಧ್ಯಾಯದ ಮುಖ್ಯಾಭಿಮಾನಿದೇವತೆಯನ್ನು ಈ ರೀತಿ ಕೊನೆಯಲ್ಲಿ ಪ್ರಾರ್ಥನೆಮಾಡಿದನು. ||೨೬||

ಇಲ್ಲಿಗೆ ರುದ್ರಾಧ್ಯಾಯದ ಎಂಟು ಒಂಬತ್ತನೆಯ ಅನುವಾಕಗಳ ಅರ್ಥವಿವರಣೆಯು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಏಕತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ವ್ಯಕ್ತಾವ್ಯಕ್ತತಯಾ ಚರಾಚರಮಯಂ ವಿಶ್ವಂ ಸದಾಂತರ್ಬಹಿ
ರ್ವ್ಯಾಪ್ತಾ ವಿಶ್ವಭವಾಭವಸ್ಥಿತಿಕೃತಾ ವಿಶ್ವಾತ್ಮಕಾ ವಿಶ್ವಪಾಃ ।
ವಿಶ್ವಸ್ಮಾದಧಿಕಾಶ್ಚ ವಿಶ್ವಪತಯಸ್ತನ್ನಿಗ್ರಹಾನುಗ್ರಹವ್ಯಗ್ರಾ-
ತ್ಯುಗ್ರಸುಶಾಂತವಿಗ್ರಹಕೃತಾರುದ್ರಾಸ್ತ್ವದಂಶಾಶ್ಚ ಯೇ ॥೧॥

---

## ಮೂವತ್ತೊಂದನೆಯ ಅಧ್ಯಾಯ

ಕುಮಾರಸ್ವಾಮಿಯು ರುದ್ರಭಾಷ್ಯವನ್ನು ಮುಂದುವರಿಸುತ್ತಾ ಮೊದಲು ಪರಶಿವನನ್ನು ಈ ರೀತಿ ಪ್ರಾರ್ಥಿಸಿದನು.

ಮಹೇಶ್ವರನೇ, ನೀನು ವ್ಯಕ್ತಾವ್ಯಕ್ತಸ್ವರೂಪವಾಗಿ ಚರಾಚರವಸ್ತು ಪೂರ್ಣವಾಗಿರುವ ಈ ಸಕಲ ಜಗತ್ತಿಗೂ ಅಧಿಪತಿಯೆನಿಸಿರುವೆ. ಅಷ್ಟೇ ಅಲ್ಲ. ಆ ಜಗತ್ತಿನ ಅಂತರ್ಬಹಿರ್ಭಾಗಗಳಲ್ಲಿ ಅಡಗಿರುವ ಮತ್ತು ಅಲ್ಲಿ ಹುಟ್ಟುವ, ಬೆಳೆಯುವ, ಅಲ್ಲಿಯೇ ಲೀನವಾಗಿರುವ ಸಮಸ್ತ ಪ್ರಾಣಿವರ್ಗಕ್ಕೂ ನೀನೇ ಅಧಿಪತಿಯು. ಪ್ರಪಂಚಕ್ಕೆ ಅಧಿಕನಾಗಿ ತೋರುವವನು ನೀನು. ಪ್ರಪಂಚಕ್ಕೆ ಯಾರಾರು ಅಧಿಪರೆನಿಸಿ ಮೆರೆಯುತ್ತಿರುವರೋ ಅಂತಹವರಿಗೂ ನೀನು ಒಡೆಯನೆನಿಸಿರುವೆ. ಹೀಗೆ ಉಗ್ರನಾಗಿಯೂ, ಶಾಂತನಾಗಿಯೂ, ನಾನಾಗುಣಪರಿಪೂರ್ಣನಾಗಿಯೂ ಇರುವ ಮಹೇಶ್ವರನೇ, ನಿನಗೆ ವಂದನೆಗಳು. ॥೧॥

ತದ್ರೂಪೇಣ ವಯಂ ನತಿಸ್ತುತಿಶತೈಸ್ತ್ವಾಂ ಪ್ರೀಣಯಂತೋಽಧುನಾ ।
ಸುಪ್ರೀತಂ ವರದಂ ಕೃಪಾಲುಮಭಯಂ ಸಂಪ್ರಾರ್ಥಯಾಮಃ ಶಿವಂ ॥೨॥

॥ ದ್ರಾಪೇ ಅಂಧಸಸ್ಪತೇ ॥

ಬಿಭ್ರಾಣಃ ಕವಚಂ ವಿಭಾತಿ ಭಗವಾನ್ಯಃ ಪಾಪಿನಾಂ ದುರ್ಗತೇಃ ।
ಪ್ರತ್ಯೇಕಂ ಖಲು ದುಃಖದುಸ್ಸಹಮಹಾಸಂಸಾರದಾರಿದ್ರ್ಯಯೋಃ ।
ಯೋಽಸೌ ಪಾಪಹತಾಂತ್ಸಮಸ್ತಭುವನಧ್ವಂಸಾತ್ಮಿಕಾಯಾಗತೇಃ ।
ಶಶ್ವತ್ಕಾರಯಿತಾ ಚ ಯೋಽಖಿಲಜಗನ್ನಾಥೋಽನ್ನದೋಽಪಿ ಸ್ವಯಂ ॥೩॥

॥ ದರಿದ್ರನ್ನೀಲಲೋಹಿತ ॥

ನಿಸ್ವಶ್ಚಾಗತಿರೇಕ ಏವ ನಿಖಿಲಾಲಕ್ಷ್ಯಸ್ವರೂಪಃ ಸದೈ
ವಾಸ್ತೇ ತಸ್ಯ ದರಿದ್ರವಜ್ಜಗದಿದಂ ಯನ್ನಾಮರೂಪಾತ್ಮಕಂ ।
ಸರ್ವಸ್ಥೂಲಶರೀರಮೇವ ಯದಿದಂ ಯಸ್ಯ ಸ್ವಹೃದ್ಯಂಶತೋ
ಯಃ ಸಂಭೂಯ ಚ ನೀಲಲೋಹಿತ ಇತಿ ಖ್ಯಾತಃ ಶಿರಃಪಂಚಮಂ ॥೪॥

---

ಮಹಾದೇವನೇ, ನಿನ್ನನ್ನು ಮೇಲೆ ಹೇಳಿದ ಸ್ವಭಾವದವನೆಂದು ತಿಳಿದು ನಾನಾವಿಧವಾದ ಸ್ತೋತ್ರಗಳಿಂದಲೂ, ನಮಸ್ಕಾರಾದಿಗಳಿಂದಲೂ, ತೃಪ್ತಿಗೊಳಿಸುತ್ತಾ, ಭಕ್ತವತ್ಸಲನೂ, ವರದನೂ, ಕೃಪಾಲುವೂ ಆದ ಪರಶಿವನನ್ನು ನಾನಾರೀತಿಯಿಂದ ಪ್ರಾರ್ಥಿಸುವೆವು. ॥೨॥

ಪ್ರಕಾಶಮಾನವಾದ ದಿವ್ಯಕವಚವನ್ನು ಧರಿಸಿರುವ ಮಹಾದೇವನೇ, ನೀನು ಪಾಪಿಗಳಾಗಿ ಮಹಾಸಂಸಾರವೆಂಬ ಸಾಗರದಲ್ಲಿ ಬಿದ್ದು, ದುಃಖದಾರಿದ್ರ್ಯಗಳಲ್ಲಿ ತೊಳಲುವವರನ್ನು ಉದ್ಧರಿಸಲು ಪ್ರಯತ್ನಿಸುವೆ. ಸಮಸ್ತ ಭುವನಗಳನ್ನೂ ನಾಶಗೊಳಿಸುವ ಪ್ರಳಯಕಾರ್ಯದಲ್ಲಿಯೂ ನೀನು ಸುಲಭವಾಗಿ ತೊಡಗುವೆ. ಲೋಕಪಾಲಕರನ್ನು ನೀನು ನಾಶಗೊಳಿಸುವವನಾದರೂ ಅವರನ್ನು ಮತ್ತೆ ಉತ್ಪತ್ತಿ ಮಾಡಲು ಸಿದ್ಧನಾಗಿರುವೆ. ಇಂತಹ ಮಹಾದೇವನೇ, ನಿನಗೆ ವಂದನೆಗಳು. ॥೩॥

ಪರಮೇಶ್ವರನು ಕೇವಲ ದರಿದ್ರನಂತೆಯೇ ಕಾಣುವವನು. ಯಾರಿಗೂ ಸುಲಭನಾಗಿ ಗೋಚರನಲ್ಲದವನು. ದರಿದ್ರನಂತೆ ಸರ್ವತ್ರ ಸಂಚರಿಸುವವನು. ಪರಶಿವನ ನಾಮರೂಪಾತ್ಮಕವಾಗಿಯೇ ಈ ಪ್ರಪಂಚವು ಎಲ್ಲರಿಗೂ ಗೋಚರಿಸುತ್ತಿರುವುದು. ನಮ್ಮ

ಉದ್ವೃತ್ತಸ್ಯ ಬಿಭೇದ ಧಾತುರಗಜಾವಿಷ್ಣ್ವೋಶ್ಚ ವಾಮಂ ವಪು
ರ್ಯೋ ದತ್ವಾ ಸ ವಿಲಾಸಲೋಹಿತತಸು ರ್ನಿದೋರ್ಷರೂಪಶ್ಚ ಯಃ ।
ಕಂಠೇ ನೀಲಮತೀವ ಲೋಹಿತನಿಭಂ ಚಾನ್ಯತ್ರ ಗಾತ್ರಂ ಶಿವಂ
ಧತ್ತೇ ಯಃ ಸತತಂ ದಯಾಮಯತನೋಃ ಸತ್ವಂ ಪ್ರಸನ್ನೋಧುನಾ ॥೫॥

॥ ಏಷಾಂ ಪುರುಷಾಣಾಂ ॥

ಏತಾನ್ ಪುತ್ರಕಳತ್ರಮಿತ್ರಪರಿವಾರಾದೀನಿಮಾನ್ ಗೋಮಹಿಷ್ಯಶ್ವಾದೀನ್
ನಿಹತಃ ಪಶೂಂಶ್ಚ ನಮತಾನ್ ಭೀತಾನ್ ಕ್ರುಧಾ ಮಾಕೃಥಾಃ ।
ದುಃಖಾದ್ಯೈಶ್ಚ ಕದಾಪಿ ಮಾಗಮಯತಾದಾರ್ತಿಂ ಪ್ರಸಾದಾತ್ತವ
ಸ್ವಾಮಿನ್ಕಿಂಚಿದಪಿ ಜ್ವರಾದಿಕಮಿಮಾನ್ ಮಾ ಬಾಧತಾಂ ಕ್ವಾಪಿ ಚ ॥೬॥

---

ಕಣ್ಣುಗಳಿಗೆ ಕಂಡುಬರುವ ಸಕಲ ಸ್ಥೂಲಶರೀರಗಳೂ ಪರಶಿವನ ಅಂಶಸಂಭೂತ ವಾದವುಗಳೇ. ನೀಲಲೋಹಿತನೆಂಬ ಹೆಸರು ಪಡೆದು ಐದು ತಲೆಗಳಿಂದ ಕೂಡಿ ಸುಂದರವಾಗಿರುವ ಶಿವದೇಹವೂ ಒಂದು ಸ್ಥೂಲದೇಹಸ್ವರೂಪವಾದುದಲ್ಲವೆ! ಹೀಗೆ ನಾನಾರೂಪದಿಂದ ತೋರಿಬರುವ ಶಿವಸ್ವರೂಪಕ್ಕೆ ವಂದನೆಗಳು. ॥೪॥

ಅಹಂಕಾರದಿಂದ ಕೊಬ್ಬಿದ, ಗರ್ವವನ್ನು ಮುರಿದ ಮೇಲೆ ಶರಣಾಗತನಾದ ಬ್ರಹ್ಮನಿಗೂ, ಪಾರ್ವತಿಗೂ, ವಿಷ್ಣುವಿಗೂ ತನ್ನ ಎಡಭಾಗದ ಶರೀರವನ್ನು ಕರುಣಿಸಿ ಕೊಟ್ಟ ಮಹಾದೇವನೇ, ನೀನು ನೀಲಲೋಹಿತನೆಂಬ ದೇಹಾಂತರವನ್ನು ಧರಿಸಿ ಲೋಕಕಂಟಕವಾಗಿದ್ದ ವಿಷವನ್ನು ಕುಡಿದು ಪ್ರಪಂಚವನ್ನು ರಕ್ಷಿಸಿದೆ. ಅಂತಹ ಕರುಣಾಳುವಾದ ಮಹಾದೇವನೇ, ನಿನಗೆ ನಮಸ್ಕಾರ. ನನಗೆ ಪ್ರಸನ್ನನಾಗು. ॥೫॥

ಸ್ವಾಮಿಯೇ, ನಿನ್ನನ್ನೇ ಮೊರೆಹೊಕ್ಕು ಸದಾ ನಿನ್ನ ಸೇವೆಯಲ್ಲಿಯೇ ನಿರತರಾಗಿರುವ ಈ ಪುತ್ರ ಕಳತ್ರ ಮಿತ್ರ ಪರಿವಾರಗಳನ್ನೂ ಹಸು, ಎಮ್ಮೆ, ಕುದುರೆ ಇವೇ ಮುಂತಾದ ಪಶುಗಳನ್ನೂ ಕೋಪದಿಂದ ಎಂದೂ ಹಿಂಸಿಸಬೇಡ. ಅವರಿಗೆ ಎಂದೂ ದುಃಖಾದಿಗಳು ಸಂಭವಿಸದಂತೆ ಕರುಣಿಸು. ಜ್ವರಾದಿರೋಗಗಳು ಅವರಿಗೆ ಎಂದೂ ಪ್ರಾಪ್ತವಾಗದಂತೆ ಅವರನ್ನು ದಯೆಯಿಂದ ರಕ್ಷಿಸುತ್ತಿರು. ಇದೇ ನನ್ನ ಪ್ರಾರ್ಥನೆ. ॥೬॥

॥ ಮಂತ್ರದೇವತಾ ॥

ಪ್ರಧ್ಯಾತಂ ಪುಲಹೇನ ರುದ್ರಮನಿಶಂ ಭೂತಾಭಿಚಾರಾದಿಕಂ
ದ್ರೋಹಾರಿಷ್ಟಭಯಾಪಹಂ ಧನಮಹಾಸಿದ್ಧಿಪ್ರದಂ ಧ್ಯಾಯತಾಂ ।
ಆಗುಲ್ಫಂ ಸಿತಕಂಚುಕಂ ಡಮರುಕೋದ್ಯುಕ್ತಂ ಲಸತ್ಕುಂಡಲಂ
ಧ್ಯಾಯೇತ್ಕುಂಡಲಿಪುತ್ರಪಂ ಸುತಿಲಕಂ ಸನ್ನೂಪುರಂ ಭೈರವಂ ॥೭॥

॥ ಯಾತೇ ರುದ್ರಶಿವತಮಾ ॥

ತ್ವಂಗತ್ತುಂಗತರಂಗಸಂವೃತಮಹಾಮಾತಂಗಮಧ್ಯಸ್ಫುರ
ದ್ಧಾವತ್ಪ್ರೌಢರಥಾಯುತಾವೃತಲಸಜ್ಜಾಂಬೂನದಸ್ಯಂದನಂ ।
ಆಧ್ಯಾಸ್ಯ ಹ್ಯವತಿ ಕ್ಷಿತಿಂ ರಥಿವರೈರ್ಮಾಣಿಕ್ಯಸಿಂಹಾಸನೇ
ಬ್ರಹ್ಮಾಜಾದಿನಿಜಾಶ್ರಿತೈರ್ಜನವರಃ ಸಂಪೂಜ್ಯತಾಂ ಮಾನವಃ ॥೮॥

ಇಂದ್ರಬ್ರಹ್ಮಪದೇ ಚ ಸಂಯಮಫಲಂ ಸಾಕ್ಷಾಚ್ಚ ಮೋಕ್ಷಶ್ರಿಯಂ
ಸಾಲೋಕ್ಯಾದಿಚತುರ್ವಿಧಂ ಚ ಭಜತಾಂ ತದ್ಭಾಗ್ಯಸಾಮ್ಯಂ ಫಲಂ ।

---

ಪುಲಹ ಋಷಿಯಿಂದ ಧ್ಯಾನಿಸಲ್ಪಟ್ಟ ಪ್ರಮಥಗಣಗಳಿಂದ ಸೇವಿಸಲ್ಪಟ್ಟ ಶತ್ರುಭಯಾದಿಗಳನ್ನು ನಿವಾರಿಸುವ ಐಶ್ವರ್ಯಾದಿ ಸಕಲ ಸಿದ್ಧಿಗಳನ್ನೂ ಭಕ್ತರಿಗೆ ಕೊಡುವ ಮಹಾದೇವನು, ಕಾಲುಹಿಮ್ಮಡಿಯ ವರೆಗೂ ಶುಭ್ರವಾದ ಕವಚವನ್ನು ಧರಿಸಿರುವನು. ಡಮರುಗವನ್ನು ಹಿಡಿದು ಕರ್ಣಕುಂಡಲಧಾರಿಯಾಗಿ ಆದಿಶೇಷ ಪುತ್ರನಾದ ವಾಸುಕಿಯನ್ನು ಸಲಹಿ ತಿಲಕದಿಂದಲೂ ನೂಪುರದಿಂದಲೂ ವಿರಾಜಿಸುವ ಕಾಲಭೈರವನನ್ನೇ ಈ ಮಂತ್ರದ ಮುಖ್ಯ ದೇವತೆಯೆಂದು ಭಾವಿಸಿ ಸದಾ ಧ್ಯಾನ ಮಾಡುವೆನು. ॥೭॥

ಎತ್ತರವಾಗಿ ಬರುವ ಅಲೆಗಳಂತೆ ವಿರಾಜಿಸುವ ದೊಡ್ಡ ದೊಡ್ಡ ಆನೆಗಳ ಮಧ್ಯದಲ್ಲಿ ಹೊಳೆಯುವ ಸುವರ್ಣಮಯವಾದ ರಥದಲ್ಲಿ, ಮಾಣಿಕ್ಯಮಯವಾದ ಪೀಠದಲ್ಲಿ ಕುಳಿತು, ಸುತ್ತಲೂ ಬ್ರಹ್ಮನೇ ಮೊದಲಾದ ನಿಜಪರಿವಾರದೊಡನೆ ಓಲೈಸಿ ಕೊಳ್ಳುತ್ತಿರುವ ಪರಶಿವನನ್ನು ಎಲ್ಲರೂ ಪೂಜಿಸಲಿ. ॥೮॥

ಕೇವಲ ತಪಸ್ಸಿನಿಂದಲೇ ಇಂದ್ರ ಮತ್ತು ಬ್ರಹ್ಮ ಇವರ ಸ್ಥಾನವನ್ನು ಸಂಪಾದಿಸಬಹುದು. ಆದರೆ ಸ್ಥಿರವಾದ ಮುಕ್ತಿಯನ್ನು ಮಾತ್ರ ಶಿವಾನುಗ್ರಹ ದಿಂದಲೇ ಹೊಂದಬೇಕು. ಅದರಲ್ಲಿಯೂ ಸಾಲೋಕ್ಯ, ಸಾಯುಜ್ಯ, ಸಾರೂಪ್ಯ

ಯಾ ತೇ ತತ್ಪುರುಷಸ್ಯ ರುದ್ರಶಿವದಾ ಪೂರ್ವಾ ತನೂರ್ಯೋಗಿನಾಂ
ಸರ್ವಂ ಯಚ್ಛತಿ ಯಾ ಚ ದಕ್ಷಿಣತನುಃ ಸಂಸಾರರುಗ್ಭೇಷಜೀ ॥೯॥

ಪ್ರಕ್ಷೀಣಾಖಿಲಕರ್ಮಭಿನ್ನಹೃದಯುಗ್ರಂಥಿಪ್ರನಷ್ಟಾಖಿಲಾ
ಜ್ಞಾನಂ ಛಿನ್ನಸಮಸ್ತಸಂಶಯಮುಪಾಸ್ತದ್ವೈತಮುಸ್ತಾರಿಕಂ ।
ಜ್ಞಾನಂ ಪ್ರತ್ಯಗಭಿನ್ನಚಿನ್ಮಯಪರಬ್ರಹ್ಮೈಕಲಕ್ಷ್ಯಂ ಪರಂ
ಸರ್ವಾನ್ ಬೋಧಯತಃ ಸದಾ ಮುನಿಜನಾನ್ ಚಿನ್ಮುದ್ರಯಾ ಭದ್ರಯಾ ॥೧೦॥

ರುದ್ರಸ್ಯಾದಿಗುರೋಃ ಸತಾಂ ಶಿವಮಯೀ ಯಾ ಸ್ಯಾತ್ತನೂರೂರ್ಧ್ವಗಾ
ತಸ್ಯ ಜ್ಞಾನಘನಾತ್ಮಿಕಾ ತವ ಗುಣಾತೀತಾ ಶಿವಾಖ್ಯಾ ಸದಾ ।

---

ಸಾಮೀಪ್ಯಗಳೆಂಬ ಚತುರ್ವಿಧಮುಕ್ತಿಗಳು ಅವರವರ ಭಾಗ್ಯಸಾಮ್ಯವಾಗಿ ದೊರೆಯುವುವು. ಯೋಗಿಗಳಿಗೆ ಧ್ಯೇಯವೆನಿಸಿರುವ ತತ್ಪುರುಷಮೂರ್ತಿಯಾದ ಶಿವನ ಪೂರ್ವ ಶರೀರವು ಮೇಲೆ ಹೇಳಿದ ಮೋಕ್ಷಫಲವನ್ನು ಅನುಗ್ರಹಿಸಬಲ್ಲುದು. ಆದರೆ ಅದೇ ಶಂಕರನ ದಕ್ಷಿಣದಿಕ್ಕಿನ ದೇಹವಾದರೋ ಐಹಿಕವಾದ ಸಕಲ ದುಃಖಗಳನ್ನೂ ಹೋಗಲಾಡಿಸಿ ಅವರಿಗೆ ಜೀವನಸೌಖ್ಯವನ್ನು ಅನುಗ್ರಹಿಸಿಕೊಡುವುದು. ॥೯॥

ಪರಶಿವನ ದಕ್ಷಿಣಭಾಗದ ದೇಹವು ದಕ್ಷಿಣಾಮೂರ್ತಿಯ ರೂಪದಿಂದ ಜ್ಞಾನಮುದ್ರೆಯನ್ನು ಹೊಂದಿ ನಿಷ್ಕಲಜ್ಞಾನವನ್ನು ಉಪದೇಶಿಸುತ್ತಿರುವುದು. ಆ ಜ್ಞಾನವಾದರೋ ಪಾಪಫಲಾನುಭವದಿಂದ ತಮ್ಮ ಹೃದಯವನ್ನು ನಿರ್ಮಲಗೊಳಿಸಿರುವವರಿಗೆ ಮಾತ್ರ ದೊರೆತು, ಅವರ ಹೃದಯಗ್ರಂಥಿಯಲ್ಲಿ ಅನಾದಿ ಮಾಯಾಮೋಹಿತವಾದ ಅಜ್ಞಾನರಾಶಿಯನ್ನು ನಾಶಗೊಳಿಸಬಲ್ಲುದು. ದಕ್ಷಿಣಾಮೂರ್ತಿಯಿಂದ ಬೋಧಿತವಾಗುವ ದಿವ್ಯಜ್ಞಾನವು ಮಾನವನಿಗೆ ಸ್ವಾಭಾವಿಕವಾಗಿ ಬರುವ ಸಕಲ ಸಂಶಯಗಳನ್ನೂ ನಿವಾರಿಸಬಲ್ಲುದು. ಆದರಿಂದ ದ್ವೈತಭಾವನೆಯು ನಿರ್ಮೂಲವಾಗಿ ಜೀವಬ್ರಹ್ಮಭೇದರೂಪವಾದ ಅದ್ವೈತತತ್ತ್ವವು ಬೋಧಿತವಾಗುವುದು. ಹೀಗೆ ಸಕಲ ಮುನಿಜನರಿಗೂ, ಪರಬ್ರಹ್ಮಸಾಕ್ಷಾತ್ಕಾರವನ್ನು ಕಲ್ಪಿಸುವ ದಕ್ಷಿಣಾಮೂರ್ತಿಯನ್ನು ಬಹಳವಾಗಿ ಧ್ಯಾನಿಸುವೆನು. ॥೧೦॥

ಜಗತ್ತಿಗೆ ಆದಿಗುರುವಾದ ಪರಶಿವನ ಊರ್ಧ್ವರೂಪವಾದ ದೇಹವು ಕೇವಲ ಜ್ಞಾನಘನರೂಪವಾದದ್ದು. ಮತ್ತು ಗುಣಾತೀತವೆನಿಸಿ ಶಿವಮಯವೆನಿಸಿದೆ. ಅದೇ

ನಿತ್ಯಾತ್ಯಂತಿಕಬಂಧಮುಕ್ತಿಫಲದಾ ಚೇಶಾನಮೂರ್ತೇಃ ಸದಾ
ತಾಭಿಸ್ತೇ ತಿಸೃಭಿಸ್ತನೂಭಿರಭಿತಸ್ತ್ರಾತ್ವ ಸಜ್ಜನೈಕಾರ್ಥಿನಃ ॥೧೧॥

ಯಾವನ್ಮಾನುಷಭೋಗಲಾಭಜನಿತಾನಂದೇನ ದೀರ್ಘಾಯುಷಂ
ತ್ವಾಮಾರಾಧಯಿತುಂ ಶಿವಂ ಸುಖಯ ನಃ ಶಂಭೋ ದಯಾಂಭೋನಿಧೇ ।

॥ ಇಮಾರುದ್ರಾಯ ತವಸೇ ॥

ಜ್ಞಾನೈಶ್ವರ್ಯಯಶೋದಯಾದಿ ಸ ಗುಣೈಃ ಸರ್ವೈರನಂತೈರ್ಬಲೈಃ
ಸಂವೃದ್ಧಃ ಕೃಪಯಾ ಸಕೃತ್ಪ್ರಣಮತಾಮುಷ್ಯೈಕಭಕ್ತ್ಯಾ ಸತಾಂ ॥೧೨॥

ಯಸ್ಸಂವರ್ಧಯಿತಾ ಯ ಏವ ನಿಖಿಲಬ್ರಹ್ಮಾಂಡವಿಧ್ವಂಸನಾ
ನಿರ್ಭಾವೋದ್ವಹನೈಕಧೃಷ್ಣುಪರಮಂ ಧತ್ತೇ ಬಲಂ ಕೇವಲಂ ।

॥ ಕಪರ್ದಿನೇ ಚ ॥

ಯೋಽಸೌ ದಿವ್ಯಕಪರ್ದಭೃದ್ಯಮಭಿತಸ್ತೇ ವೀರಭದ್ರಾದಯೋ
ವೀರಾಶ್ಶಾಧಿವಸಂತಿ ಯಸ್ಯ ಮಹತಾ ವೀರ್ಯೇಣ ಧೀರೋದ್ಧತಾಃ ॥೧೩॥

---

ಈಶಾನಮೂರ್ತಿಯೆನಿಸಿರುವುದು. ಅದು ಆತ್ಯಂತಿಕ ದುಃಖವನ್ನು ನಿವಾರಿಸಬಲ್ಲುದು. ಸಜ್ಜನರ ಇಷ್ಟಾರ್ಥವನ್ನು ನೆರವೇರಿಸಬಲ್ಲ ಆ ಈಶಾನದೇಹವು ಮೂರು ದೇಹಗಳಿಂದ ವ್ಯಾಪ್ತವಾಗಿ ಶಿವನ ಊರ್ಧ್ವಭಾಗದಲ್ಲಿ ವಿರಾಜಿಸುವುದು. ॥೧೧॥

ಶಂಭುವೇ, ದಯಾನಿಧಿಯೇ, ಮಾನುಷಭೋಗಗಳನ್ನಾನಂದಿಸುತ್ತಾ ದೀರ್ಘಾಯುಸ್ಸನ್ನು ಪಡೆದು, ಮನುಷ್ಯಜನ್ಮ ಪೂರ್ತಿಯಾಗಿ ನಿನ್ನನ್ನೇ ಆರಾಧಿಸುವಂತಹ ಶಕ್ತಿಸಾಮರ್ಥ್ಯಗಳನ್ನು ನನಗೆ ದಯಪಾಲಿಸು. ಅದೂ ಅಲ್ಲದೆ, ನಿನ್ನನ್ನೇ ನಂಬಿ ಸದಾ ನಿನ್ನ ಧ್ಯಾನದಲ್ಲಿಯೇ ಆಸಕ್ತರಾಗಿರುವ ನಿನ್ನ ಭಕ್ತರಿಗೆ ಜ್ಞಾನ, ಐಶ್ವರ್ಯ, ಯಶಸ್ಸು, ದಯಾ, ಶಕ್ತಿ ಮುಂತಾದ ಸಕಲ ಸದ್ಗುಣಗಳನ್ನೂ ಕರುಣಿಸಿ ಅವರನ್ನುದ್ಧರಿಸು. ಮಹಾದೇವನೆ, ನಿನ್ನನ್ನೇ ನೆರೆನಂಬಿರುವ ಭಕ್ತರನ್ನು ತಪ್ಪದೆ ಕಾಪಾಡು. ॥೧೨॥

ಪ್ರಪಂಚವನ್ನು ಬೆಳೆಸುವವನೂ, ಹಾಗೆಯೇ ಪ್ರಪಂಚವನ್ನು ನಾಶಗೊಳಿಸುವವನೂ ಆದ ಮಹಾದೇವನು ಸಕಲ ಜಗತ್ತನ್ನೂ ಏಕಕಾಲದಲ್ಲಿ ಧರಿಸುವ ಸಾಮರ್ಥ್ಯವನ್ನು ಪಡೆದಿರುವನು. ಶ್ರೇಷ್ಠವಾದ ಜಟಾಜೂಟವನ್ನು ಧರಿಸುತ್ತಲೂ ವೀರಭದ್ರಾದಿ ಗಣದೇವತೆಗಳನ್ನು ಪಡೆದಿರುವ ಮಹಾದೇವನೇ,

ಶ್ರೀಯಂತೇ ನಿಖಿಲಾಃ ಖಲಾ ಭಗವತೇ ರುದ್ರಾಯ ತತ್ತೇ ಪ್ರಿಯಾಂ
ನಿತ್ಯಂ ತಾಂ ಬಿಭೃಮೋ ವಯಂ ಮತಿಮಿಯಂ ಯಾ ಮಾನಸಾರ್ಚಾ
ಮಯಿ ।
ಸರ್ವೋತ್ಕೃಷ್ಟಫಲಾರ್ಥಿಭಿರ್ಮುನಿಜನೈಃ ಸರ್ವೇಶ್ವರಃ ಸರ್ವಥಾ
ಧ್ಯಾತವ್ಯಃ ಶಿವ ಏವ ಕಿಂ ಚ ಬಹುಧಾ ಯಷ್ಟವ್ಯ ಏವಾನಿಶಂ ॥೧೪॥

ಸ್ತೋತವ್ಯಃ ಪರಿಕೀರ್ತನೀಯ ಇತಿ ಯಾ ವಿಚ್ಛೇದನೀಯಾ ಮತಿ
ಸ್ತಾಂ ಲಬ್ಧ್ವಾ ಶಿವಮೇವ ಸರ್ವಮಿತರತ್ಸಂತ್ಯಜ್ಯ ಸರ್ವಾತ್ಮನಾ ।

॥ ವಿಶ್ವಂ ಪುಷ್ಟಂ ಗ್ರಾಮೇ ॥

ಧ್ಯಾತಂ ಯಸ್ಸತತಂ ಭಜಾಮ ಇಹ ನಃ ತಂ ಶಂಕರಸ್ಯ ಪ್ರಭೋ
ಸ್ತಸ್ಯೈತತ್ಕೃಪಯಾ ಯಥಾ ಸ್ವಪರಿವಾರಾಣಾಂ ಚ ಕಿಂ ಚಾಧುನಾ ॥೧೫॥

ಗ್ರಾಮೇಽಸ್ಮಿನ್ನಿವಸತ್ಯಶೇಷಮಪಿ ಯದ್ಯೋ ಪ್ರಾಣಿಜಾತಂ ಚ ತತ್ಪುಷ್ಟಂ
ಪುಷ್ಟಮನಾತುರಂ ಚ ಸುಖಿನಂ ಭೂಯಾತ್ತಥೋಪಾಸ್ಮಹೇ ।

---

ಲೋಕದಲ್ಲಿ ಇಂದು ವೀರರೆನಿಸಿರುವವರೆಲ್ಲರೂ ನಿನ್ನಿಂದ ಶೌರ್ಯವನ್ನು ಪಡೆದೇ ಪ್ರಸಿದ್ಧರಾಗಿರುವರಲ್ಲವೆ! ಇಂತಹ ಮಹಾದೇವನಿಗೆ ವಂದನೆಗಳು. ॥೧೩॥

ಲೋಕದಲ್ಲಿ ಎಂತಹವರೂ ನಾಶವಾಗುವರು. ಆದರೆ ಈಶ್ವರನಲ್ಲಿ ಸ್ಥಿರಭಕ್ತಿಯನ್ನಿಟ್ಟು ಸದಾ ಮಾನಸಾರ್ಚನೆಯಲ್ಲಿಯೇ ಮುಂದುವರಿಯುತ್ತಿರುವ ಶಾಶ್ವತವಾದ ಮನಸ್ಸೊಂದನ್ನು ಮಾತ್ರ ನಾವು ಧರಿಸುವೆವು. ಉತ್ಕೃಷ್ಟಗಳಾದ ಫಲಗಳನ್ನು ಅಪೇಕ್ಷಿಸುವ ಮುನಿಜನರು ತಪ್ಪದೆ ಸರ್ವೇಶ್ವರನನ್ನು ಸದಾ ಧ್ಯಾನಿಸುವರು. ಆದಕ್ಕಾಗಿಯೇ ಯಾರು ಪರಮೇಶ್ವರನಿಂದ ಸನ್ಮಂಗಳಗಳನ್ನು ಪಡೆಯಲು ಅಪೇಕ್ಷಿಸುವರೋ, ಅಂತಹವರು ತಪ್ಪದೆ ಶಿವನನ್ನು ಆರಾಧಿಸುವರಲ್ಲದೆ ಯಜನ ಯಾಗಾದಿಗಳಿಂದಲೂ ಶಂಕರನನ್ನು ತೃಪ್ತಿಪಡಿಸಲು ಯತ್ನಿಸುವರು. ॥೧೪॥

ದೇವದೇವನನ್ನೇ ಸ್ತುತಿಸಬೇಕು. ಅವನನ್ನೇ ಧ್ಯಾನಿಸಬೇಕು ಎಂಬ ಸ್ಥಿರ ಬುದ್ಧಿಯನ್ನು ಹೊಂದಿ, ಶಿವಭಿನ್ನದೇವತೆಗಳ ಧ್ಯಾನವನ್ನು ದೂರಮಾಡಿ, ಸದಾ ಸದಾಶಿವನನ್ನೇ ಆರಾಧಿಸುವವರಿಗೆ ಸದಾ ಸನ್ಮಂಗಳವು ಲಭಿಸುವುದಲ್ಲದೆ, ಶಿವಾನುಗ್ರಹವೊದಗಿ ಅವನ ಪರಿವಾರಗಳಲ್ಲಿ ಒಬ್ಬನಾಗಿ ಸೇರುವ ಯೋಗವೂ ದೊರಕುವುದು. ॥೧೫॥

ಕೇವಲ ಗ್ರಾಮದಲ್ಲಿಯೇ ವಾಸಮಾಡದೆ, ಪ್ರಪಂಚದಲ್ಲಿ ಎಲ್ಲೆಡೆಯಲ್ಲಿಯೂ

॥ ಮೃಡಾನೋ ರುದ್ರೋ ॥

ಸ್ವಾಮಿನ್ ರುದ್ರ ನಮಸ್ಕ್ರಿಯಾಭಿರನಿಶಸ್ತೋತ್ರೈರ್ಹವಿರ್ಭಿಃಕ್ಷಯ
ದ್ವೀರಂ ತ್ವಾಂ ವಯಮಾದರಾತ್ಪರಿಚರೇಮಾಸ್ಮಾಸು ಕುರ್ವನ್ ಕೃಪಾಂ ॥೧೬॥

ದಾರಾಪತ್ಯಧನಾದಿಭಿಸ್ತು ಸುಖಿತಾನಸ್ಮಾನ್ಕುರುಷ್ವಾಪಿ ಚ
ಬ್ರಹ್ಮಾನಂದಮಯಂ ಚ ಯತ್ತದಪಿ ನಃ ಶ್ರೇಯಃ ಕೃಪಾಂಭೋನಿಧೇ ।
ಯದ್ವಾ ಪ್ರಾರ್ಥನಯಾನಯಾ ನಯಭಿದಾ ಶಂಭೋ ಯಮಾರೇಧುನಾ
ಭಕ್ತಿಃ ಸರ್ವಫಲಪ್ರದಾ ಭವತು ನಃ ಸರ್ವಾತ್ಮನಾ ಸಾತ್ವಿಕೀ ॥೧೭॥

ಸಂಸಾರಜ್ವರದುಃಸಹಾರ್ತಿಹರಣಸ್ವಾಮಿನ್ ತವಾನುಗ್ರಹಃ
ಪೂರ್ಣೋ ನಃ ಕಿಮಸಾಧ್ಯಮಸ್ತಿ ಭಜತಾಂ ತಸ್ಮಾತ್ತ್ವಯಾಸ್ಮತ್ಪಿತಾ ।

---

ಕಂಡುಬರುವ ಪ್ರಾಣಿವರ್ಗದಲ್ಲಿ ಅಡಗಿ, ಪುಷ್ಟನೂ ರೋಗಾದ್ಯುಪದ್ರವರಹಿತನೂ, ಸುಖಿಯೂ ಆಗಿರುವ ಪರಶಿವನೊಬ್ಬನನ್ನೇ ನಾನು ಸರ್ವದಾ ಸೇವಿಸುವೆನು. ನಾನಾ ವಿಧವಾದ ನಮಸ್ಕಾರಗಳಿಂದಲೂ ಸ್ತುತಿವಚನಗಳಿಂದಲೂ ಮಹಾದೇವನೇ ನಿನ್ನನ್ನು, ಅನವರತವೂ ಧ್ಯಾನಿಸುತ್ತಾ, ಕ್ಷಯದ್ವೀರನೆನಿಸಿದ ನಿನ್ನನ್ನೇ ಸೇವಿಸುವೆವು. ನೀನು ಮಾತ್ರ ನಮ್ಮ ಮೇಲೆ ದಯೆಯಿಟ್ಟು ರಕ್ಷಿಸುತ್ತಿರು. ಇದೇ ನಾವು ಪ್ರಾರ್ಥಿಸುವ ಮುಖ್ಯವರ. ॥೧೬॥

ಮಹಾದೇವನೇ, ನಮಗೆ ಪತ್ನೀಪುತ್ರಸಂಪತ್ತುಗಳನ್ನು ಒದಗಿಸಿ, ನಮ್ಮನ್ನು ಸುಖಿಗಳನ್ನಾಗಿ ಮಾಡು. ಬ್ರಹ್ಮಾನಂದ ಪ್ರಾಪ್ತಿರೂಪವಾದ ಶ್ರೇಯಸ್ಸನ್ನು ಕರುಣಿಸಿ ನಮ್ಮನ್ನು ಉದ್ಧರಿಸು. ಅಥವಾ ನಮ್ಮ ಈ ಅಜ್ಞಾನದ ಪ್ರಾರ್ಥನೆಯನ್ನು ಮನ್ನಿಸಿ, ಸರ್ವಫಲಪ್ರದವಾದ ಶಿವಭಕ್ತಿಯು ನಮ್ಮ ಹೃದಯದಲ್ಲಿ ಸರ್ವದಾ ಮೂಡುವಂತೆ ಕರುಣಿಸು. ಶಿವಭಕ್ತಿಯೊಂದು ನಮಗೆ ಲಭಿಸುವುದಾದರೆ ಸಕಲ ಸಂಪತ್ತುಗಳೂ ನಮ್ಮ ಹಸ್ತಗತವಾಗುವುವು. ॥೧೭॥

ಸಂಸಾರದ ಸಕಲ ದುಃಖಗಳನ್ನೂ ಇತರ ವಿಧವಾದ ಪೀಡೆಗಳನ್ನೂ ಪರಿಹರಿಸುವ ಪರಮೇಶ್ವರನೇ, ನಿನ್ನ ಅನುಗ್ರಹವೊಂದು ಇರುವುದಾದರೆ, ನಿನ್ನ ಭಕ್ತರಿಗೆ ಅಸಾಧ್ಯವಾದ ಕಾರ್ಯವಾವುದಿರುವುದು ? ನಮಗೆ ಜನಕನಾಗಿರುವ ತಂದೆಯನ್ನು ಜನಕನಾಗುವಂತೆ ಕಲಿಸಿದವನೂ ನೀನೇ ಅಲ್ಲವೆ. ಲೋಕೇಶ್ವರನಾದ ನೀನು

॥ ಯಚ್ಛಂಚ ಯೋಕ್ಷ ॥

ಸೃಷ್ಟತ್ವೇನ ನಿಯೋಜಿತಃ ಸ ಭಗವಾನ್ ಲೋಕೇಶ್ವರಃ ಸ್ವಸ್ಯಯು
ತ್ಪ್ರಾಪ್ತಾನಾಗತದುಃಖಹೇತುಶಮನಂ ವಾಂಛಂ ತ್ವದಾಜ್ಞಾಕ್ರಮಂ ॥೧೮॥

ನಾತಿಕ್ರಾಮತಿ ಯತ್ತಥೈವ ಚ ವಯಂ ಲಪ್ಸ್ಯಾಮಹೇ ಯನ್ಮನುಃ
ಸ್ಮರ್ತಾಸೌ ಯತ್ಕೃಪಯಾ ಸಮಸ್ತಜಗತಾಂ ಕ್ಲೇಶಪ್ರಹಾಣಕ್ರಮಂ ।
ಕಾರ್ತ್ಸ್ನ್ಯೇನೋಪದಿದೇಶ ಸರ್ವಭುವನಂ ಸ್ರಷ್ಟಾವಿಧಿರ್ಮಾನಯನ್
ನಾದತ್ತೇ ಚ ವಯಂ ಚ ದುರ್ಲಭಮಪಿ ಪ್ರಾಪ್ಸ್ಯಾಮಹೇ ತತ್ತಥಾ ॥೧೯॥

॥ ಋಷಿಧ್ಯಾನಂ ॥

ದೇವಂ ಗೋಧನವರ್ಧನಂ ಪ್ರಣಮತಾಂ ಹಸ್ತ್ಯಶ್ವರಕ್ಷಾಕರಂ
ಮಾಂಡವ್ಯೇನ ಮಹರ್ಷಿಣಾರ್ಚಿತಮುಮಾಕಾಂತಂ ಪ್ರಸನ್ನಾನನಂ ।

---

ಆಗತವಾದ ಮತ್ತು ಆಗಾಮಿಯಾದ ಸಕಲ ದುಃಖಗಳನ್ನೂ ನಾಶಗೊಳಿಸಿ, ನಿನ್ನ ಆಜ್ಞೆಯಂತೆಯೇ ಪ್ರಪಂಚವು ನಡೆಯುವುದನ್ನು ನೀನು ಸದಾ ನೋಡುತ್ತಿರುವೆಯಲ್ಲವೆ! ಮಹಾದೇವನೇ, ಇಂತಹ ನಿನಗೆ ನಮಸ್ಕಾರ. ॥೧೮॥

ಲೋಕಸೃಷ್ಟಿಕಾರಕನಾದ ಚತುರ್ಮುಖಬ್ರಹ್ಮನು ಹೇಗೆ ನಿನ್ನ ಆಜ್ಞೆಯನ್ನು ಮೀರದೆ ಲೋಕವನ್ನು ಸೃಷ್ಟಿಸುತ್ತಿರುವನೋ, ಹಾಗೆಯೇ ನಿನ್ನನ್ನೇ ಧ್ಯಾನಿಸುತ್ತಾ, ಜಗತ್ತಿನ ಕ್ಲೇಶಪರಂಪರೆಯನ್ನು ಹೇಗೆ ಹೋಗಲಾಡಿಸುವನೋ, ಮತ್ತು ಸಮಸ್ತ ಪ್ರಪಂಚಕ್ಕೂ ಸಂಪೂರ್ಣವಾದ ನಿನ್ನ ಮಹಿಮೆಯನ್ನು ಉಪದೇಶಿಸಲು ಸಮರ್ಥನಾಗಿರುವನೋ, ಅದೇ ರೀತಿ ನಾವೂ ಸಹ ನಿನ್ನನ್ನು ಮೆಚ್ಚಿಸಿ ಇತರರಿಗೆ ದುರ್ಲಭವಾದ ಅತಿಶಯ ಶಕ್ತಿಯನ್ನು ಸಂಪಾದಿಸಿ ಬ್ರಹ್ಮಸದೃಶರಾಗಲು ಪ್ರಯತ್ನಿಸುತ್ತೇವೆ. ॥೧೯॥

ತನ್ನನ್ನೇ ಭಜಿಸಿ ನಮಸ್ಕರಿಸಿದವರಿಗೆ, ಗೋವು, ಧನ, ಆನೆ, ಕುದುರೆ ಮುಂತಾದ ಸಕಲ ಸಾಮಗ್ರಿಗಳನ್ನೂ ಒದಗಿಸುವ ಪರಮೇಶ್ವರನು ಮಾಂಡವ್ಯ ಮಹರ್ಷಿಯಿಂದ ಪೂಜಿಸಲ್ಪಟ್ಟವನು. ಪ್ರಸನ್ನವಾದ ಮುಖಮುದ್ರೆಯಿಂದ ಕೂಡಿರುವ ಪರಶಿವನು ಚಂದ್ರಶೇಖರನಾಗಿಯೂ, ಮುನಿಜನರಿಂದ ಸ್ತುತ್ಯನಾಗಿಯೂ,

ಚಂದ್ರೋದ್ಭಾಸಿತಶೇಖರಂ ಮುನಿಜನೈಃ ಸಂಸ್ತೂಯಮಾನಂ ಪ್ರಭುಂ
ಧ್ಯಾಯೇದ್ರುದ್ರಮಭೀಷ್ಟದಂ ಪ್ರಣಮತಾಂ ಸಿಂಹಾಸನಾಧಿಷ್ಠಿತಂ ॥೨೦॥

॥ ಮಾನೋಮಹಾಂತಂ ॥

ಸ್ವಾಮಿನ್ ರುದ್ರಮದೀಯವಂಶಮಖಿಲಂ ವೃದ್ಧಂ ಯುವಾನಂ ಶಿಶುಂ
ಗರ್ಭಸ್ಥಂ ಪಿತರಂ ಚ ಮಾತರಮಿಹಾಸ್ಮಾಕಂ ರುಷಾ ಮಾವಧೀಃ ।
ಮಾ ಹಿಂಸೀಶ್ಚ ಪ್ರಿಯಾಸ್ತನೂ ಬಹುವಿಧಾ ವ್ಯಾಧ್ಯಾದಿವಾತಾತಪೈಃ
ಶಸ್ತ್ರಾಸ್ತ್ರಾಗ್ನಿಮಹಾಹಿವೃಶ್ಚಿಕ ಅರಿವ್ಯಾಘ್ರೋಗ್ರಸಿಂಹಾರಿಭಿಃ ॥೨೧॥

॥ ಧ್ಯಾನಂ ॥

ಸರ್ವಾಭೀಷ್ಟಫಲಪ್ರದಂ ಪ್ರಣಮತಾಂ ದೇವಂ ದಯಾಶೇವಧಿಂ
ದೇವೇಶಂ ಹೃದಿ ದೇವರಾತಮುನಿನಾ ಧ್ಯಾತಂ ಗಣೇಶಾವೃತಂ ।
ತಂ ನಂದೀಶ್ವರವಂದಿತಂ ಸುವಿಮಲಂ ಬಾಲೇಂದುಚೂಡಾಮಣಿಂ
ಬಾಲಾದಿತ್ಯಸಮಾನಕಾಂತಿಮನಿಶಂ ಶ್ರೀರುದ್ರಮೇವಂ ಭಜೇ ॥೨೨॥

---

ಭಕ್ತರ ಸಕಲ ಇಷ್ಟಾರ್ಥಗಳನ್ನು ನಡೆಸಿಕೊಡುವವನಾಗಿಯೂ, ವೀರಸಿಂಹಾಸನಾಧೀಶ್ವರನಾಗಿಯೂ ಇರುವನು. ಇಂತಹ ಮಹಾದೇವನನ್ನೂ ತತ್ಪೂಜಕನಾದ ಮಾಂಡವ್ಯಮಹಾಮುನಿಯನ್ನೂ ತಪ್ಪದೆ ಧ್ಯಾನಮಾಡುವೆನು. ॥೨೦॥

ಮಹೇಶ್ವರನೇ, ನನ್ನ ವಂಶದಲ್ಲಿರುವ ವೃದ್ಧರು, ಯುವಕರು, ಮಕ್ಕಳು, ಗರ್ಭಸ್ಥರಾದ ಶಿಶುಗಳು, ಮಾತಾಪಿತೃಗಳು ಇಂತಹ ಬಂಧುಬಳಗದವರನ್ನು ಎಂದಿಗೂ ಕೊಲ್ಲಬೇಡ. ಕೋಪದಿಂದ ಯಾರಿಗೂ ಹಿಂಸೆಕೊಡಬೇಡ. ಮಹಾದೇವನೇ, ನಾನಾರೀತಿಯ ರೋಗ, ವಾಯು, ಬಿಸಿಲು, ಶಸ್ತ್ರಾಸ್ತ್ರಗಳು ಇವುಗಳಿಂದ ಭಯ, ಹಾಗೆಯೇ ಅಗ್ನಿಭಯ. ಸರ್ಪಭಯ, ವೃಶ್ಚಿಕಭಯ, ಹುಲಿಯಭಯ, ಸಿಂಹಭಯ ಇವೇ ಮೊದಲಾದುವುಗಳನ್ನು ತಪ್ಪಿಸಿ ಎಲ್ಲರೂ ಧೈರ್ಯವಾಗಿ ಬಾಳುವಂತೆ ವರವನ್ನು ನೀಡು. ॥೨೧॥

ದೇವರಾತಮುನಿಯಿಂದ ಪೂಜಿಸಲ್ಪಟ್ಟು ಅನೇಕ ಪ್ರಮಥಗಣಗಳಿಂದ ಸೇವಿತನಾಗಿರುವ ಪರಮೇಶ್ವರನು, ತನ್ನ ಭಕ್ತರ ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುವನು. ಮತ್ತು ಕರುಣಾಕರನೆನಿಸಿ, ನಂದೀಶ್ವರನಿಂದ ಸೇವಿತನಾಗಿ

॥ ಮಾನಸ್ತೋಕೇ ತನಯೇ ॥

ಸ್ವಾಮಿನ್ ರುದ್ರ ವಪಾಹವಿಶ್ಚರುಪುರೋಡಾಶಾಜ್ಯಯಾಗೈರ್ಮುಹುಃ
ಪ್ರೀತಿಂ ತೇ ನಮಸಾ ಚ ಸಂಪ್ರತಿ ವಯಂ ಸಂಪಾದಯಂತೋಧಿಕಾಂ ।
ದೇವಂ ತ್ವಾಂ ಕರುಣಾನಿಧಿಂ ಪರಿಚರೇಮಾಸ್ಮಾಸು ಕುರ್ವನ್ ಕೃಪಾಂ
ಭಕ್ತಾನಾಮಪರಾಧಿನಾಮಪಿ ಚ ಯಃ ಪುತ್ರೇಷು ಪೌತ್ರೇಷು ವಾ ॥೨೩॥

॥ ಮಾನೋ ಗೋಷು ॥

ಗೋಷ್ವಶ್ವಾದಿಷು ಚಾಸ್ಮದಾಯುಷಿ ರುಷಾ ಹಿಂಸಾಂ ವಿಭೋ ಮಾ ಕೃಥಾಃ
ಕಿಂ ಚಾಸ್ಮತ್ಕುಲವರ್ಧನಾನಿ ಹರಣೇ ದಾನೇ ಚ ಧರ್ಮೇ ಘನೇ ।
ಬಾಲಾಂಸ್ತನ್ಯಪರಾಂಸ್ತಥೋರಸಗಣಾನ್ ಮಾನೋವಧೀಃ ಕಿಂತು ತಾನ್
ವರ್ಧಿಷ್ಣೂಂಶ್ಚಿರಜೀವಿನಶ್ಚ ಕುರು ತಾನ್ನಃ ಪ್ರಾರ್ಥನೀಯಂ ವಿಭೋ ॥೨೪॥

---

ಪರಿಶುದ್ಧವಾದ ಆಕಾರದಿಂದಲೂ, ಬಾಲಚಂದ್ರನೆಂಬ ಚೂಡಾಮಣಿಯಿಂದಲೂ, ಶೋಭಿಸುತ್ತಾ ಬಾಲಸೂರ್ಯನಂತೆ ಸದಾ ಪ್ರಕಾಶಿಸುತ್ತಾ ಮಹಾಮಹಿಮಶಾಲಿಯಾಗಿರುವ ದೇವದೇವನನ್ನು ತಪ್ಪದೆ ಧ್ಯಾನಿಸುವೆನು. ॥೨೨॥

ಸ್ವಾಮಿ, ರುದ್ರದೇವನೇ, ಯಾಗದಲ್ಲಿ ಪ್ರಾಣಿಯ ವಪೆ, ಹವಿಸ್ಸು, ಚರು, ಪುರೋಡಾಶ, ಆಜ್ಯ ಮುಂತಾದ ವಸ್ತುಗಳನ್ನು ನಿನಗೆ ಸಮರ್ಪಿಸುವುದರ ಮೂಲಕವೂ ನಿನ್ನನ್ನು ನಾನಾರೀತಿ ಸ್ತುತಿಸುವುದರಿಂದಲೂ, ನಿನ್ನ ಪ್ರೀತಿಯನ್ನು ನಾವು ಸಂಪಾದಿಸುವೆವು. ಕರುಣಾನಿಧಿಯಾದ ಶಂಕರನೇ, ಭಕ್ತರೂ, ಅಪರಾಧಿಗಳೂ ಆದ ನಮ್ಮಲ್ಲಿ ದಯೆಯಿಟ್ಟು ನಮಗೆ ಸುಪುತ್ರರನ್ನೂ, ಪೌತ್ರಸಂಪತ್ತನ್ನೂ ಕರುಣಿಸಿ ಅನುಗ್ರಹಿಸು. ಇದೇ ನಾವು ಕೇಳಿಕೊಳ್ಳುವ ವರ. ॥೨೩॥

ವಿಭುವೇ, ನಮಗೆ ಸಂಬಂಧಿಸಿದ ಗೋವುಗಳು, ಕುದುರೆಯೇ ಮೊದಲಾದುವುಗಳು, ನಮ್ಮ ಆಯುಸ್ಸು ಇತ್ಯಾದಿಗಳಲ್ಲಿ ಯಾವ ವಿಧವಾದ ತೊಂದರೆಯನ್ನೂ ಕಲ್ಪಿಸಬೇಡ. ನಮ್ಮ ಕುಲವು ಬೆಳೆಯುವಂತೆಯೂ ದಾನಧರ್ಮಾದಿಗಳು ವೃದ್ಧಿಯಾಗುವಂತೆಯೂ ಕರುಣಿಸು. ಸ್ತನ್ಯಪಾನದಲ್ಲಿ ಆಸಕ್ತರಾದ ಮಕ್ಕಳನ್ನೂ, ಯುವಕರಾಗಿ ಬೆಳೆಯುವ ಮಕ್ಕಳನ್ನೂ, ಹಿಂಸಿಸದೆ ಅವರು ಚೆನ್ನಾಗಿ ಬೆಳೆಯುವಂತೆಯೂ, ಚಿರಜೀವಿಗಳಾಗಿರುವಂತೆಯೂ ಅನುಗ್ರಹಿಸು. ಇದೇ ನನ್ನ ಪ್ರಾರ್ಥನೆ. ॥೨೪॥

ಸ್ವಾತ್ಮಾನಂ ಹೃದಿ ಭಾವಯಂತಮನಿಶಂ ರುದ್ರಂ ಚಿರಾಯುರ್ಮಹಾ
ಮಾರ್ಗಕ್ಷೇಮ ಸುವೃಷ್ಟಿಪುತ್ರಕನಕಶ್ರೀಕನ್ಯಕಾದಿಪ್ರದಂ ।
ತ್ವಾಮೇಕಾದಶಧಾ ವಿಭಕ್ತವಪುಷಂ ತೇಜೋನಿಧಿಂ ಶೂಲಿನಂ
ಚಂದ್ರಾಲಂಕೃತಮೌಲಿಮಿಂದುಧವಳಂ ಶಾಂತಾಕೃತಿಂ ಭಾವಯೇ ॥೨೫॥

॥ ಆರಾತ್ತೇ ಗೋಘ್ನ ॥

ಅಶ್ರಾಂತಂ ಪುರುಷಾಂಶ್ಚ ಗಾಂಶ್ಚ ನಿತರಾಂ ತೇ ವಿಘ್ನತಃ ಸರ್ವದಾ
ಪ್ರೀತಿರ್ಹಿಂಸನಗೋಚರಾತಿಭಯದಂ ರೂಪಂ ಚ ದೂರೇಽಸ್ತು ತತ್ ।
ವಿಶ್ವತ್ರಾಣಪರಾಯಣಸ್ಯ ಜಗತಾಂ ಮಾಸ್ಮಾಸು ಭೂತ್ತಸ್ಯ ಯಾ
ಚಂಡೀಶಾದ್ಯವನೇಽಸ್ತಿ ಸಾಸ್ತು ಮಯಿ ಸಾ ಪ್ರೀತಿಃ ಸದಾಸ್ಮಾಸ್ವಿಹ ॥೨೬॥

॥ ಸುಮ್ನಮಸ್ಮೇ ತೇ ಅಸ್ತು ॥

ಭಕ್ತಾನಾಂ ಶಿವದಂ ಸದಾ ಶಿವಶಿವಂ ರೂಪಂ ಚ ಯತ್ತಚ್ಛಿವಾ
ಯಾಸ್ಮಾಕಂ ಪುರತಃ ಪರಿಸ್ಫುರತು ತೇ ಕಿಂ ಚಾಧುನಾಸ್ಮಾನ್ನಿಭೋ ।

---

ಸದಾ ಆತ್ಮಧ್ಯಾನಮಾಡುತ್ತಾ ಭಕ್ತರಿಗೆ ಚಿರಾಯುಸ್ಸು, ಸುಕ್ಷೇಮ, ಸುವೃಷ್ಟಿ, ಪುತ್ರ, ಸುವರ್ಣ, ಸಂಪತ್ತು, ಸ್ತ್ರೀಯರು ಇವೇ ಮೊದಲಾದ ಭೋಗ್ಯ ವಸ್ತುಗಳನ್ನು ಕರುಣಿಸುವ ಮಹಾದೇವನೇ, ನೀನು ನಿನ್ನ ಶರೀರವನ್ನು ಏಕಾದಶಾತ್ಮಕವಾಗಿ ವಿಭಾಗಿಸಿಕೊಂಡಿರುವೆ. ನೀನು ತೇಜೋನಿಧಿಯೆನಿಸಿರುವೆ. ತ್ರಿಶೂಲ ವನ್ನು ಧರಿಸಿ, ಚಂದ್ರನಿಂದ ಅಲಂಕೃತನಾಗಿ ಶಾಂತಸ್ವಭಾವದಿಂದಿರುವೆ. ಇಂತಹ ತೇಜೋರಾಶಿಯಾದ ನಿನ್ನನ್ನೇ ಸರ್ವದಾ ನಾನು ಧ್ಯಾನಿಸುವೆನು. ॥೨೫॥

ಮಹಾದೇವನೇ, ಪುರುಷರನ್ನೂ, ಗೋವುಗಳನ್ನೂ ಪ್ರೀತಿಯಿಂದ ಕಾಪಾಡುತ್ತಾ ಅವರು ಸದಾ ಸುಖದಿಂದಿರುವಂತೆ ರಕ್ಷಿಸು. ಹಿಂಸೆಯನ್ನು ಕೊಡುವ ನಿನ್ನ ಭಯಂಕರರೂಪವನ್ನು ಮರೆಮಾಡು. ಪ್ರಪಂಚವನ್ನು ಕಾಪಾಡುವಂತಹ ನೀನು, ಚಂಡೀಶ್ವರನೇ ಮೊದಲಾದ ನಿನ್ನ ಪರಮಭಕ್ತರಲ್ಲಿ ಎಂತಹ ಪ್ರೀತಿಯನ್ನಿಟ್ಟಿರುವೆಯೋ ಅಂತಹ ಸುಲಲಿತವಾದ ಪ್ರೀತಿವಿಶ್ವಾಸಗಳನ್ನು ನಮ್ಮಲ್ಲಿಯೂ ತೋರ್ಪಡಿಸು. ಮಹೇಶ್ವರನೇ, ಈ ರೀತಿ ನಾವು ನಿನ್ನಲ್ಲಿ ಪ್ರಾರ್ಥನೆ ಮಾಡುವೆವು. ॥೨೬॥

ಶಿವನೇ, ಶಂಕರನೇ, ಭಕ್ತರಿಗೆ ಸದಾ ಮಂಗಳಪ್ರದವಾದ ನಿನ್ನ ಶಾಂತಸುಂದರ ರೂಪು ನಮ್ಮ ಕಣ್ಣುಗಳಿಗೆ ಸದಾ ಗೋಚರವಾಗುತ್ತಿರಲಿ. ರಾಕ್ಷಸರಲ್ಲಿಯೂ ಕಂಡು

ಭೃತ್ಯಾನ್ ರಾಕ್ಷಸಪಕ್ಷಪಾತಮಧಿಕಂ ದಾಕ್ಷಿಣ್ಯಪೂರ್ವಂ ವಚಃ
ಕ್ಷೇಮಂ ಯೋಗಮಹಂ ವಹಾಮಿ ಭವತಾಮಿತ್ಯಾದರಾದ್ಬ್ರೂಹಿ ನಃ ॥೨೭॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಸ್ಕಂದಪ್ರೋಕ್ತರುದ್ರಭಾಷ್ಯೇ ಏಕತ್ರಿಂಶೋಽಧ್ಯಾಯಃ

---

ಬರುವ ಭಕ್ತಿಗೆ ಮೆಚ್ಚಿ ಅವರಲ್ಲಿ ನೀನು ಎಷ್ಟು ವಿಶ್ವಾಸದಿಂದ ಮಾತನಾಡಿದೆಯೋ, ಅಂತಹ ವರಪ್ರದವಾದ ಮಾತನ್ನು ನಮ್ಮಲ್ಲಿಯೂ ಆಡಿ ತೋರಿಸು. ಭಕ್ತರ ಯೋಗಕ್ಷೇಮವನ್ನು ನಾನು ವಹಿಸುತ್ತೇನೆಂಬ ನಿನ್ನ ಅನುಗ್ರಹಪೂರ್ವಕವಾದ ಮಾತನ್ನು ನಮ್ಮಲ್ಲಿಯೂ ಆಡಿತೋರಿಸು. ಆದರಿಂದ ನಾವು ಧನ್ಯರೆನಿಸುವೆವು.॥೨೭॥

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ
ಮೂವತ್ತೊಂದನೆಯ ಅಧ್ಯಾಯ ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ದ್ವಾತ್ರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

|| ಅಥಾಚನಃ ||

ಶ್ರೀ ರುದ್ರಾರ್ಥ ಚ ಶರ್ವ ಯಚ್ಛ ಭಗವನ್ ಆಮುಷ್ಮಿಕಂ ಚೈಹಿಕಂ
ಕಸ್ತ್ವಾದೃಕ್ಸುಖವರ್ಧನಃ ಪ್ರಣಮತಾಂ ದೇವ ತ್ವದನ್ಯಃ ಪ್ರಭೋ ||೧||

|| ಋಷಿಧ್ಯಾನಂ ||

ಆಯುಃ ಶ್ರೀಮುಖವರ್ಧನಂ ಮುನಿವರೇಣಾರಾಧಿತಂ ಚಾತ್ರಿಣಾ
ದೇವಂ ತಂ ಸಹಿರಣ್ಮಸನ್ನಿಭಲಸನ್ಮೂರ್ತಿಂ ಪ್ರಸನ್ನಾನನಂ ।
ಬಿಭ್ರಾಣಂ ಜ್ವಲನಂ ಜ್ವಲಂತಮುಮಲಂ ಕುರ್ವಾಣಮುಗ್ರೇ ಸ್ವಯಂ
ದೇವ್ಯಾಸ್ತಾಂಡವಮಾದರಾತ್ಸುರಗಣೈರಾಸೇವ್ಯಮಾನಂ ಭಜೇ ||೨||

---

## ಮೂವತ್ತೆರಡನೆಯ ಅಧ್ಯಾಯ

ರುದ್ರಭಾಷ್ಯವೇ, ನೀನೂ ರುದ್ರಸ್ವರೂಪನೇ. ನೀನೇ ಈಶ್ವರ ಭಕ್ತರಿಗೆ ಸುಖವರ್ಧಕನು. ನಿನ್ನನ್ನೇ ಪಠಿಸುವ ಭಕ್ತಜನಕ್ಕೆ ಐಹಿಕ ಮತ್ತು ಆಮುಷ್ಮಿಕ ಸುಖಗಳನ್ನು ಕ್ಷಿಪ್ರದಿಂದ ನೀಡುವವನಾಗು. ಭಕ್ತರಿಗೆ ನಿನಗಿಂತ ಹೆಚ್ಚು ಸುಖ ಕೊಡುವ ಬೇರೆದೇವನಾರಿರುವನು? ||೧||

ಪರಮೇಶ್ವರನು ಅತ್ರಿಮಹಾಮುನಿಯಿಂದ ಪೂಜಿತನಾದವನು. ಭಕ್ತರಿಗೆ ಆಯುಸ್ಸು, ಸಂಪತ್ತು ಇವೇ ಮೊದಲಾದುವುಗಳನ್ನು ವೃದ್ಧಿಗೊಳಿಸುವವನು,

॥ ಸ್ತುಹಿ ಶ್ರುತಂ ಗರ್ತ ಸದಂ ॥

ಅಸ್ಮಾನೇವ ಸದಾವಿತುಂ ಕರುಣಯಾ ಸ್ಥಿತ್ವಾ ರಥೇ ಭೂಮಯೇ
ಯೋ ದೇವಸ್ತ್ರಿಪುರಾನ್ ಪುರಾ ಸಮವಧೀದ್ಯೋಗೀಂದ್ರಹೃತ್ಪಂಕಜೇ ।
ಮಾರ್ತಂಡಸ್ಯ ಚ ಮಂಡಲೇ ತ್ರಿಭುವನವ್ಯಾಪ್ತಪ್ರಭಾಮಂಡಲೇ
ನಿತ್ಯಂ ವ್ಯೋಮ್ನಿ ಪರೇತಭೂಮಿಷು ಚ ಯಃ ಪ್ರಾದುರ್ಭವಂಸ್ತಿಷ್ಠತಿ ॥೩॥

ಯಸ್ಸರ್ವೈಃ ಶ್ರುತಿಷು ಶ್ರುತೇಷು ನಿಖಿಲಶ್ರುತ್ಯಂತಸಾರೇಷು ಚ
ನಿತ್ಯಂ ವಿಶ್ರುತ ದಿವ್ಯಕೀರ್ತಿಗುಣಚಾರಿತ್ರ್ಯೋ ಯುವಾ ಯಃ ಸದಾ ।

॥ ಮೃಗಂ ನ ಭೀಮಃ ॥

ಸಿಂಹವ್ಯಾಘ್ರಮುಖಾತಿಘೋರಮೃಗವದ್ಭೀಮಾಕೃತಿರ್ದುರ್ಹೃದಾಂ
ಯೋ ವಧ್ಯಾನಖಿಲಾನಜಸ್ರಮುಪಸಂಹರ್ತುಂ ಖಲಾನುದ್ಯತಃ ॥೪॥

---

ಸುವರ್ಣದಂತೆ ಹೊಳೆಯುವ ದೇಹವುಳ್ಳವನು. ಪ್ರಸನ್ನವಾದ ಮುಖಪಂಕಜವುಳ್ಳವನು. ಅಗ್ನಿಯನ್ನೇ ಕೈಯ್ಯಲ್ಲಿ ಹಿಡಿದು ದೇವಿಯ ಎದುರಿಗೆ ನಾಟ್ಯವಾಡುವವನು. ದೇವಗಣಗಳಿಂದ ಸದಾ ಸೇವಿಸಲ್ಪಡುವವನು. ಇಂತಹ ಮಹಾಮಹಿಮನಾದ ಪರಮೇಶ್ವರನನ್ನು ನಾನು ತಪ್ಪದೆ ಧ್ಯಾನಿಸುವೆನು. ॥೨॥

ಮಹಾದೇವನು ನಮ್ಮನ್ನು ಕಾಪಾಡುವುದಕ್ಕಾಗಿಯೇ, ಭೂಮಿಯನ್ನೇ ರಥವನ್ನಾಗಿ ಮಾಡಿಕೊಂಡು ತ್ರಿಪುರಾಸುರರನ್ನು ನಾಶಗೊಳಿಸಿದನು. ಯೋಗಿಗಳ ಹೃದಯಕಮಲದಲ್ಲಿಯೂ, ಸೂರ್ಯಮಂಡಲಮಧ್ಯಭಾಗದಲ್ಲಿಯೂ, ಅಂತರಿಕ್ಷಭಾಗದಲ್ಲಿಯೂ, ಪ್ರೇತಭೂಮಿಯಲ್ಲಿಯೂ, ಸ್ವಸ್ವರೂಪದಿಂದ ಸರ್ವರಿಗೂ ತೋರಿಬರುವವನು. ಇಂತಹ ಮಹಾಮಹಿಮನಾದ ಪರಶಿವನು ನಮ್ಮನ್ನು ಸರ್ವದಾ ರಕ್ಷಿಸುತ್ತಿರಲಿ. ॥೩॥

ಪರಮೇಶ್ವರನು ವೇದವೇದಾಂತವೇದಾಂಗಗಳಲ್ಲೆಲ್ಲಾ ವಿಶೇಷವಾದ ಕೀರ್ತಿಯಿಂದ ಹೊಗಳಿಸಲ್ಪಡತಕ್ಕವನು ಇತರರಿಗೆ ಇರುವಂತೆ ಬಾಲ್ಯ ಯೌವ್ವನ ವಾರ್ಧಕಾದಿಗಳು ಪರಶಿವನಿಗಿಲ್ಲ. ಅವನು ಸದಾ ಯುವಕನಂತೆಯೇ ತೋರುವವನು. ತನ್ನನ್ನು ಭಜಿಸದ ದುಷ್ಟಜನರಿಗೆ ಸಿಂಹ, ಹುಲಿ ಇವೇ ಮೊದಲಾದ ಘೋರ ಪ್ರಾಣಿಗಳ ಆಕಾರದಲ್ಲಿ ತೋರಿಬರುವನು. ದುಷ್ಟಜನರನ್ನು ದಯೆಯಿಲ್ಲದೆ ಕೊಲ್ಲಲು ಸಮರ್ಥನೆನಿಸುವವನು. ಇಂತಹ ಮಹಾದೇವನಿಗೆ ವಂದನೆಗಳು. ॥೪॥

ಯಶ್ಶಾನ್ಯಾನಭಿಭೂತಶಕ್ತಿರಸಕೃಚ್ಛ್ರೋಗ್ರಾಕೃತಿರ್ಮೃತ್ಯುವತ್
ಬಿಭ್ರದ್ಧಂತಿ ಖಲಾಂಶ್ಚ ಯಸ್ತಮನಿಶಂ ದೇವಂ ಮಹೇಶಂ ಸ್ತುಹಿ ।
ಇತ್ಯಾತ್ಮಾನಮಹಂ ಪ್ರಸಾದವಿಮುಖಂ ತ್ವಾಂ ಪ್ರೇರಯಾಮಿ ಸ್ವಯಂ
ಭಕ್ತ್ಯಾಸ್ತೌಮಿ ಚ ಭಕ್ತಭೀತಿಹರಣಂ ಹೇ ರುದ್ರ ತುಷ್ಟೋಭವ ॥೫॥

ಸ್ತೋತವ್ಯೋಪಿ ಸುರೇಶ್ವರೈರ್ಹರಿವಿರಿಂಚಾದ್ಯೈಃ ಪ್ರಪನ್ನಃ ಕಿಲಾ
ಪನ್ನೋಯಂ ಜನ ಇತ್ಯನನ್ಯಶರಣಂ ಮಾಮುಪ್ಯತೀವಾಲ್ಪಕಂ ।
ಸ್ತೋತಾರಂ ಸುಖಯ ಪ್ರಸಾದಸುಮುಖಃ ಕಿಂಚಾಸ್ತು ಕಿಂಚಿತ್ಪರಂ
ಭೂತಪ್ರೇತಪಿಶಾಚರಾಕ್ಷಸಮುಖಾಘೋರಾಭವತ್ಸೈನಿಕಾಃ ॥೬॥

ಅಸ್ಮತ್ತೋನ್ಯಮಧಿಕ್ಷಿಪಂತು ಸತತಂ ರಕ್ಷಂತು ನಸ್ಸರ್ವದಾ
ಸರ್ವಸ್ಮಾದ್ದುರಿತಾದ್ಭಯಾಚ್ಚ ಭಗವನ್ನಿತ್ಯಂ ಪ್ರಸಾದಾತ್ತವ ।

॥ ಪರಿಣೋ ರುದ್ರಸ್ಯ ಹೇತಿರ್ವೃಣಕ್ತು ॥

ದುರ್ಜ್ಞೇಯಾ ವಿಧಯೋ ವಿಭಿನ್ನಮತಿಭಿರ್ನೀತಾಶ್ಚ ಭಿನ್ನಾರ್ಥತಾ
ಮುನ್ನಚ್ಛನ್ನವಿಭಿನ್ನವಿಸ್ಮೃತಮಹಾಶಾಖಾಸಹಸ್ರಾಯುತಾಃ ॥೭॥

---

ಪೂಜ್ಯನಾದ ಮಹಾದೇವನು ಸರ್ವರನ್ನೂ ನಿಗ್ರಹಿಸುವ ಸಾಮರ್ಥ್ಯವುಳ್ಳವನಾಗಿ ಶತ್ರುಸಮೂಹವನ್ನೆಲ್ಲಾ ಮೃತ್ಯುವಿನಂತೆ ನಿಗ್ರಹಿಸುವನು. ಶಿಷ್ಟರನ್ನು ರಕ್ಷಿಸುವನು. ದುಷ್ಟರನ್ನು ನಾಶಗೊಳಿಸುವನು. ಇಂತಹ ಮಹಾದೇವನನ್ನು ನಾನು ಸರ್ವದಾ ಧ್ಯಾನಮಾಡುವೆನು. ಹೇ ರುದ್ರನೇ, ಪಶುಪತಿಯೇ, ಭಕ್ತರ ಭೀತಿಯನ್ನು ಹೋಗಲಾಡಿಸುವ ನಿನ್ನನ್ನು ನಾನು ಸದಾ ಅನುಗ್ರಹಾರ್ಥವಾಗಿ ಧ್ಯಾನಮಾಡು ತ್ತಿರುವೆನು. ಮಹೇಶ್ವರನೇ, ಆದರಿಂದ ನೀನು ಪ್ರಸನ್ನನಾಗು. ||೫||

ಮಹೇಶ್ವರನೇ, ನೀನು ಹರಿಹರಬ್ರಹ್ಮಾದಿಗಳಿಂದ ಸ್ತುತನಾಗಿ ಅವರಿಗೆ ಪ್ರಸ ನ್ನನಾಗಿರುವೆ. ಆದರೂ ಆಪತ್ತಿಗೆ ಸಿಕ್ಕಿ ಅತ್ಯಲ್ಪಪ್ರಾಣಿಯೆನಿಸಿದ ನನ್ನನ್ನು ಮಾತ್ರ ಉದಾಸೀನಮಾಡದೆ ರಕ್ಷಿಸು. ಭೂತ, ಪ್ರೇತ, ಪಿಶಾಚ, ರಾಕ್ಷಸರೇ ಮೊದಲಾದ ಘೋರಸೈನಿಕರಿಂದ ಕೂಡಿದ ನೀನು ನನ್ನ ವಿಷಯದಲ್ಲಿ ಮಾತ್ರ ಪ್ರಸನ್ನನಾಗಿ ನಮ್ಮನ್ನು ರಕ್ಷಿಸುವವನಾಗು. ||೬||

ಭಗವಂತನೇ, ನೀನು ನಮ್ಮನ್ನು ರಕ್ಷಿಸುತ್ತಾ ನಮಗೆ ಶತ್ರುಗಳಾಗಿರುವ ಇತರರನ್ನು ನಾಶಗೊಳಿಸು. ನಮ್ಮ ಸಮಸ್ತ ಪಾಪಶೇಷವೂ ನಿನ್ನ ಅನುಗ್ರಹಬಲ

ವೇದಾಸ್ತದ್ವಿಹಿತಾಸ್ತಥಾ ಬಹುವಿಧಾಸ್ತೇ ದ್ರವ್ಯಕಾಲಕ್ರಿಯಾ
ಮಂತ್ರಾಃ ಸ್ವಲ್ಪತರಂ ಚ ಜೀವಿತಮತೀವಾಲ್ಪಾ ಚ ಶಕ್ತಿರ್ಮತಿಃ ।
ದುರ್ವಿಜ್ಞೇಯತರಂ ಸುದುಷ್ಕರಮತಃ ಕರ್ಮಾಖಿಲಂ ತದ್ಭವ
ದ್ಭಕ್ತ್ಯಾ ನಃ ಸಫಲಂ ಭವೇದಿತಿ ಯಥಾ ಪ್ರಜ್ಞಾ ಯಥಾ ಶಂಭವಂ ॥೮॥

ಯಜ್ಞಾತ್ಮಾಖಿಲಯಜ್ಞಭುಕ್ತ್ವಮಿತಿ ಹಿ ತ್ವಾಂ ದೇವ ಯಕ್ಷ್ಯಾಮಹೇ ।
ಯಜ್ಞೈರೇವ ವಪಾಹವಿಶ್ಚರುಪುರೋಡಾಶಾಜ್ಯವಂತೋ ವಯಂ ।
ದಂಭಾಹಂಕೃತಿ ದರ್ಪಪೂರ್ಣಹೃದಯಾ ದೇವಾನ್ಯಜಂತೇ ಪರಾನ್
ಯೇ ತೇಷಾಮಘಮಿಚ್ಛತಸ್ತವ ಮುಹುರ್ಹಂತುಂ ಪ್ರದೀಪ್ತಾಕೃತೇಃ ॥೯॥

---

ದಿಂದ ದೂರವಾಗಲಿ. ಮಂದಪ್ರಜ್ಞರಿಂದಲೂ, ಸ್ವಾರ್ಥಾಪೇಕ್ಷಿಗಳಿಂದಲೂ ನಿನ್ನ ಸ್ವರೂಪವು ತಿಳಿಯಲಾರದು. ನಿನ್ನ ಸ್ವರೂಪವಾದರೋ ನಾನಾ ವಿಧವಾದ ಶಾಖೋಪಶಾಖೆಗಳಿಂದ ಬೆಳೆದು ಪ್ರಪಂಚರೂಪಾತ್ಮಕವಾಗಿ ಬೆಳೆದಿರುವುದು. ಇಂತಹ ಅಖಂಡಸ್ವರೂಪನಾದ ನಿನಗೆ ವಂದನೆಗಳು. ॥೭॥

ವೇದೋಕ್ತವಾದ ಕರ್ಮಗಳಾದರೋ ಅಸಂಖ್ಯಾತವಾಗಿರುವುವು. ಕರ್ಮೋಪಯೋಗಿಯಾದ ದ್ರವ್ಯಗಳೂ, ಕಾಲವೂ, ಕ್ರಿಯೆಯೂ, ಮಂತ್ರಗಳೂ ನಾನಾರೀತಿಯಿಂದಿರುವುವು. ನಾನಾದರೋ ಅತ್ಯಂತ ಅಸಮರ್ಥನಾಗಿ ಆ ವೈದಿಕಕರ್ಮಗಳನ್ನೆಲ್ಲಾ ಪೂರ್ಣಗೊಳಿಸಲು ಅಶಕ್ತನೆನಿಸಿರುವೆನು. ಆದ್ದರಿಂದ ನನ್ನ ಶಕ್ತಿಯನ್ನನುಸರಿಸಿ ನಿನ್ನಲ್ಲಿರಿಸುವ ದೃಢಭಕ್ತಿಯಿಂದ ನಾನು ಸಕಲ ಕರ್ಮಾಚರಣೆಯ ಫಲವನ್ನೂ ಸುಲಭವಾಗಿ ಪಡೆಯುವೆನು. ಮಹೇಶ್ವರನೇ, ನನ್ನನ್ನುದ್ಧರಿಸು .॥೮॥

ಮಹೇಶ್ವರನೇ, ನೀನೇ ಯಜ್ಞಸ್ವರೂಪಿಯು. ಯಾಗದಲ್ಲಿ ಕೊಡುವ ಹವಿರ್ಭಾಗವನ್ನು ಸ್ವೀಕರಿಸುವವನೂ ನೀನೇ. ಹೀಗೆ ತಿಳಿದು ಯಾಗಸಮಾರಂಭದಲ್ಲಿ ವಪೆ, ಹವಿಸ್ಸು, ಚರು, ಪುರೋಡಾಶ, ಆಜ್ಯ ಇವುಗಳನ್ನು ನಿನ್ನ ತೃಪ್ತಿಗಾಗಿ ಅರ್ಪಿಸುತ್ತಲಿರುವೆವು. ಆದರೂ ನಮಗೆ ದಂಭ, ಅಹಂಕಾರ, ದರ್ಪ ಇವೇ ಮೊದಲಾದ ದುರ್ವೃತ್ತಿಗಳುಂಟಾಗಿ ಸಮಸ್ತ ದೇವತೆಗಳನ್ನೂ ಅರ್ಚಿಸತೊಡಗುವೆವು. ನೀನಾದರೋ ನಮ್ಮಿಂದ ಪೂಜಿತರಾಗುವ ಸಮಸ್ತ ದೇವತೆಗಳನ್ನೂ ನಿರ್ಲಕ್ಷ್ಯವಾಗಿ ಶಿಕ್ಷಿಸಿ, ನಿನ್ನ ನೈಜವಾದ ತೇಜಸ್ಸಿನಿಂದ ಅವರೆಲ್ಲರನ್ನೂ ಮುಚ್ಚಿಬಿಡುವೆ. ಮಹಾದೇವನೇ, ನಿನಗೆ ವಂದನೆಗಳು. ॥೯॥

ಉಗ್ರಾ ನಿಗ್ರಹರೂಪಿಣೀ ಸ್ಥಿರತರಾ ಯಾ ದುರ್ಮೂರ್ತಿರ್ನಾಕೃಥಾ
ಸ್ತಾಮಸ್ಮಾಸು ಕದಾಪ್ಯತೋ ಮತಿರಿಯಂ ಹೇತಿಶ್ಚ ರುದ್ರಸ್ಯ ತೇ ।
ಭಕ್ತಾನ್ ದೂರತ ಏವ ದೇವ ಪರಿತಃ ಸಾವರ್ಜಯತ್ವದ್ಯ ನಃ
ಸರ್ವಾನ್ ಕಿಂ ತ್ವಮುಂಚ ಚಾಪಮಧುನಾ ಜ್ಯಾಬದ್ಧಮಸ್ಮತ್ಕೃತೇ ॥೧೦॥

॥ ಮೀಢ್ವಸ್ತೋಕಾಯ ತನಯಾಯ ಮೃಳ ॥

ಸೃಷ್ಟ್ವಾ ವಿಶ್ವಮಿದಂ ಮಹೇಶ್ವರ ತದೇವಾನುಪ್ರವಿಶ್ಯ ಪ್ರಜಾ
ಶ್ಚಾವಿಚ್ಛಿನ್ನತಯಾ ಸಮಸ್ತಜಗತಿ ಸ್ರಷ್ಟುಂ ಸ್ತ್ರಿಯಾಂಯೋನಿಷು ।
ವೀರ್ಯಂ ಸಿಂಚಸಿ ಯತ್ಪ್ರಜಾಪತಿರತೋ ಮೀಢ್ವಾ ಪಿತಾ ತ್ವಂ ಹಿತ
ಸ್ತ್ವಂ ಪುತ್ರಾನಿಹ ಪೌತ್ರಕಾಂಶ್ಚ ಸುಖಯ ಶ್ರೀರುದ್ರ ಶಂಭೋ ಪ್ರಭೋ
॥೧೧॥

॥ ದೇವತಾಧ್ಯಾನಂ ॥

ವಂಶೋದ್ಧಾರಕ ಶಕ್ತಿಭಕ್ತಿಸುಗುಣಾ ಶ್ರೀಕೀರ್ತಿಮತ್ಪುತ್ರದಂ
ಧ್ಯಾಯಂತಂ ಭಗವಂತಮಂತರನಿಶಂ ಸ್ವಾತ್ಮಾನಮೇವ ಸ್ವಯಂ ।

---

ದುಷ್ಟರನ್ನು ನಿಗ್ರಹಿಸುವಂತಹ ನಿನ್ನ ಉಗ್ರಸ್ವರೂಪವು ಎಂದಿಗೂ ನನ್ನಲ್ಲಿ ಪ್ರಯೋಗಿಸಲ್ಪಡದಿರಲಿ. ಸಮಸ್ತ ಭಕ್ತರನ್ನೂ ದೂರದಿಂದಲೇ ಆವರ್ಜನೆಗೊಳಿಸುವ ನಿನ್ನ ಸಾಮರ್ಥ್ಯವು ನಮ್ಮನ್ನೂ ನಿನ್ನ ಸಮೀಪಕ್ಕೆ ಎಳೆಯಲಿ. ಮಹಾದೇವನೇ, ಬಾಣಸಜ್ಜಿತವಾದ ನಿನ್ನ ಧನುಸ್ಸು ಎಂದಿಗೂ ನಮ್ಮ ಮೇಲೆ ಬೀಳದಿರಲಿ. ಇದೇ ನಾವು ಕೇಳಿಕೊಳ್ಳುವ ಪ್ರಾರ್ಥನೆ. ॥೧೦॥

ಮಹೇಶ್ವರನೇ, ನೀನು ಈ ಜಗತ್ತಿನಲ್ಲಿ ಪ್ರಜಾಸಂತತಿಯನ್ನು ಹೆಚ್ಚಿಸಲು ಸ್ತ್ರೀಯರ ಯೋನಿಯ ಮೂಲಕ ವೀರ್ಯರೂಪದಿಂದ ಸೇರಿ ಅಲ್ಲಿ ಪ್ರಜೆಯು ಉತ್ಪತ್ತಿಯಾಗುವಂತೆ ಮಾಡುವೆ. ಮಹಾದೇವನೇ, ಇದರಿಂದ ನೀನು ಸಮಸ್ತ ಪ್ರಾಣಿವರ್ಗಕ್ಕೂ ತಂದೆಯೆನಿಸಿದೆ. ಆದರಿಂದಲೇ ನೀನು ಸರ್ವರಿಗೂ ಬೇಕಾದವ ನಾಗಿರುವೆ. ಇಂತಹ ನೀನು ನಮ್ಮನ್ನೂ ನಮ್ಮ ಮಕ್ಕಳು ಮೊಮ್ಮಕ್ಕಳನ್ನೂ ನಿರುಪದ್ರವದಿಂದ ಕಾಪಾಡು ಎಂದು ಪ್ರಾರ್ಥಿಸುವೆನು. ॥೧೧॥

ಮಹೇಶ್ವರನೇ, ನೀನು ವಂಶೋದ್ಧಾರಕರಾದ ಮಕ್ಕಳನ್ನೂ, ವಂಶಕ್ಕೆ ಕೀರ್ತಿತರುವಂತಹ ಅನೇಕ ಸುಗುಣಗಳನ್ನೂ ಭಕ್ತರಿಗೆ ದಯಪಾಲಿಸುವೆ. ಸದಾ

ನಾನಾಪ್ರಸ್ಫುರದಾಯುಧಂ ನತಮಹಾಪಾಪೌಘದುಃಖಾಪಹಂ
ದೇವೇಶಂ ಗಜಚರ್ಮಸಂವೃತತನುಂ ಶ್ರೀಕೃತ್ತಿವಾಸಂ ಭಜೇ ॥೧೨॥

॥ ಮೀಢುಷ್ಟಮ ಶಿವತಮ ॥

ನಾಥೋ ಯಃ ಪ್ರಕೃತೇಃ ಪರಶ್ಚ ಪುರುಷಃ ಸರ್ವಾಂತರಾತ್ಮಾ ಜಪಾ
ಲ್ಲೌಹಿತ್ಯಂ ಸ್ಫಟಿಕಾದಿಕೇಷ್ವಿವ ಪಯಃ ಪುಂಭಾವಸಂಭಾವಿತಃ ।
ಪುಂಭಾವಃ ಪುರುಷೇಷು ಭಾತಿ ಜಗತಿ ಸ್ವಾಂಶಪ್ರಧಾನೇಷು ಯಃ
ಸ್ತ್ರೀಷ್ವೇವ ಪ್ರಕೃತಿಪ್ರಧಾನತನುಷು ಸ್ವಂ ವೀರ್ಯಮಾಸಿಂಚಸಿ ॥೧೩॥

ಯೋತ್ಯಂತಂ ಶಿವದಃ ಸಮಸ್ತಜಗತಾಂ ಸ್ವತ್ವಂ ಪ್ರಸಾದಾರ್ಥಿನಾ
ಮಸ್ಮಾಕಂ ಚ ಶಿವೋ ಭವಾದ್ಯಸುಮನಾಃ ಹಾನಿರ್ನತೇ ತಾವತಾ ।
ಧನ್ಯಾಃ ಸ್ಯಾಮ ವಯಂ ಚ ಕಿಂ ಚ ಪರಮೋ ವೃಕ್ಷೇ ಕ್ವಚಿದ್ದೂರತೋ
ನಿಕ್ಷಿಪ್ಯಾಯುಧಜಾಲಮೇತದಖಿಲಂ ಪಾಪಾತ್ಮನಾಂ ಭೀಷಣಂ ॥೧೪॥

---

ಆತ್ಮಧ್ಯಾನದಿಂದ ವಿರಾಜಿಸುವೆ. ಭಗವಂತನೇ, ನೀನು ಪ್ರಕಾಶಿಸುವ ಅನೇಕ ಆಯುಧಗಳಿಂದ ವಿರಾಜಿಸುವೆ. ಭಕ್ತರ ಪಾಪರಾಶಿಯನ್ನು ನಿರ್ಮೂಲಗೊಳಿಸುವೆ. ಗಜಚರ್ಮಾಂಬರಧಾರಿಯಾಗಿ ನೀನು ಮಹಾಮಹಿಮನೆನಿಸಿಕೊಂಡಿರುವೆ. ಮಹಾದೇವನೇ, ನಾನು ಸರ್ವದಾ ಇಂತಹ ನಿನ್ನನ್ನೇ ಧ್ಯಾನಮಾಡುತ್ತಿರುವೆನು. ॥೧೨॥

ಪ್ರಕೃತಿ, ಪುರುಷಭೇದದಿಂದ ತೋರಿ ಜಗದಾತ್ಮನಾವಿವೃತನಾಗುವ ಮಹಾದೇವನೇ, ನೀನು ಪ್ರಕೃತಿಯಾಗಿ ಲೋಹಿತವರ್ಣದಿಂದಲೂ, ಪುರುಷನಾಗಿ ಸ್ಫಟಿಕ ಮಣಿಯಂತೆ ಶುಭ್ರನಾಗಿಯೂ ವಿರಾಜಿಸುವೆ. ಪುರುಷರಲ್ಲಿ ಪುಂಭಾವದಿಂದಲೂ, ಸ್ತ್ರೀಯರಲ್ಲಿ ಪ್ರಕೃತ್ಯಂಶದಿಂದಲೂ ಅಡಗಿದ್ದು, ಸ್ತ್ರೀಯರ ಪ್ರಕೃತ್ಯಾತ್ಮಕವಾದ ದೇಹದಲ್ಲಿ ನಿನ್ನ ವೀರ್ಯವನ್ನಿಟ್ಟು ಜಗತ್ತನ್ನು ವೃದ್ಧಿಗೊಳಿಸುವೆ. ಮಹೇಶ್ವರನೇ, ಇಂತಹ ನಿನಗೆ ವಂದನೆಗಳು. ॥೧೩॥

ಸಮಸ್ತ ಜಗತ್ತಿಗೂ ಮಂಗಳಪ್ರದನಾಗಿರುವ ಮಹಾದೇವನೇ, ನೀನೇ ನಮ್ಮ ಸರ್ವಸ್ವ. ಶಿವ, ಭವ ಎಂಬ ಹೆಸರುಗಳಿಂದ ನೀನು ನಮ್ಮ ಆರಾಧ್ಯದೇವನೆನಿಸಿರುವೆ. ಸರ್ವಸ್ವವನ್ನೂ ನಮಗೆ ಕರುಣಿಸುವ ನಿನಗೆ ಯಾವ ವಿಧವಾದ ನಷ್ಟವೂ ಇರಲಾರದು. ಮಹಾದೇವನೇ, ನೀನು ನಿನ್ನ ಕ್ರೂರತಮಗಳಾದ, ಪಾಪಿ

ಸೌವ್ಯಂ ಬಾಹುವಿಭೂಷಣಂ ಕರತಲೇ ಬಿಭ್ರತ್ಪಿನಾಕಂ ಧನುಃ
ಶಾಂತಂ ಕಾಂತಮುಪೇತ್ಯ ತಾಪಸವಪುಃ ಕೃತ್ತಿಂ ವಸಾನಃ ಶುಭಾಂ ।
ವೈಯ್ಯಾಘ್ರಾಂ ವನಮುಧ್ಯತಃ ಕರುಣಯಾಭ್ಯಾಗಚ್ಛ ಸಾಹಿ ಸ್ವಕಾನ್ ।
ರಕ್ಷನ್ನಃ ಪುರತಶ್ಚರಾಚರಹಿತಂ ಶ್ರೀ ರುದ್ರಶಂಭೋ ಪ್ರಭೋ ॥೧೫॥

॥ ವಿಕರಿದ ವಿಲೋಹಿತ ॥

ಅರ್ಥಪ್ರಾಣವಿಪತ್ತಿಸಂಶಯಭಯಕ್ಲೇಶಾರಿಚೋರವ್ಯಥಾ
ಭೀತಿಘ್ನಂ ಹೃದಿ ಭಾವಯಂತಮನಿಶಂ ಶಂಭುಂ ಸ್ವರೂಪಂಸ್ವಯಂ ।
ಅಭ್ಯಾಯಾಂತಮತೀವ ಸುಂದರತನುಂ ಸನ್ಮಂಗಲೈಕಾಲಯಂ
ಸಾನಂದಂ ಚ ಪಿನಾಕಿನಂ ವನಚರಾಕಾರಂ ಯುವಾನಂ ಭಜೇ ॥೧೬॥

---

ಷ್ಮರಿಗೆ ವಿಶೇಷ ಭಯಂಕರಗಳಾದ ಆಯುಧಗಳನ್ನು ಮಾತ್ರ ನಮಗೆ ತೋರಿಸದೆ ದೂರದಲ್ಲಿಟ್ಟು ಮುಕ್ತಿರೂಪವಾದ ಮಹಾವೃಕ್ಷದಲ್ಲಿ ನಮ್ಮನ್ನು ಶಾಶ್ವತವಾಗಿ ನಿಲ್ಲಿಸು. ಇದೇ ನಾನು ಪ್ರಾರ್ಥಿಸುವ ವರ. ॥೧೪॥

ಬಾಹುಗಳಿಗೆ ವಿಭೂಷಣದಂತಿರುವ ಪಿನಾಕವೆಂಬ ಶಾಂತಮಯವಾದ ಧನುಸ್ಸನ್ನು ಕೈಯ್ಯಲ್ಲಿ ಹಿಡಿದು, ಶಾಂತಮೂರ್ತಿಯಂತಿರುವ ತಾಪಸದೇಹವನ್ನು ಧರಿಸಿ, ಅದರಲ್ಲಿ ವ್ಯಾಘ್ರಚರ್ಮವನ್ನು ಹೊದ್ದು, ಕರುಣಾಮೂರ್ತಿಯಾಗಿ ನಮಗೆ ದರ್ಶನಕೊಡು. ಶ್ರೀರುದ್ರನೇ, ಪರಶಂಭುವೇ, ಚರಾಚರಾತ್ಮಕವಾದ ಈ ಪ್ರಪಂಚಕ್ಕೆ ಹಿತಕಾರಿಯಾಗಿರುವವನೇ, ಪ್ರಭುವೇ, ನಿನ್ನ ಭಕ್ತರಾದ ನಮ್ಮನ್ನು ರಕ್ಷಿಸು. ಉದ್ಧರಿಸು. ॥೧೫॥

ಮಹಾದೇವನೇ, ನೀನು ನಿನ್ನ ಭಕ್ತರ ಅರ್ಥಕ್ಕೂ, ಪ್ರಾಣಕ್ಕೂ ಆಗಾಗ ಒದಗುವ ಅಪಾಯಗಳನ್ನು ಪರಿಹರಿಸುವೆ. ಸಮಸ್ತವಿಧವಾದ ಭಯವನ್ನೂ ಕ್ಲೇಶವನ್ನೂ, ಚೋರಬಾಧೆಯನ್ನೂ ಸುಲಭವಾಗಿ ಕಳೆಯುವೆ. ಇಂತಹ ನಿನ್ನ ದಿವ್ಯ ಸ್ವರೂಪವನ್ನೇ ಸದಾ ಹೃದಯದಲ್ಲಿಯೇ ಧ್ಯಾನಿಸುತ್ತಾ, ಸನ್ಮಂಗಳಪ್ರದವಾದ ದೇಹವುಳ್ಳವನೂ, ಅತ್ಯಂತ ಸುಂದರನೂ, ಪಿನಾಕಧಾರಿಯೂ, ವನಚರನಂತಿದ್ದು ಸದಾ ಯುವಕನಾಗಿ ತೋರಿಬರುವ ಪರಶಿವನೂ ಆದ ನಿನ್ನನ್ನೇ ನಾನು ಧ್ಯಾನಿಸುವೆನು. ॥೧೬॥

ಲೌಹಿತ್ಯೇನ ವಿವರ್ಧಿತಂ ಗಿರಿಜಯಾ ಯಸ್ಯಾಂಗಮರ್ಧಂ ಸದಾ ।
ಯಂ ವೇದಾಂತಗಿರೋ ವದಂತಿ ಸತತಾಸಂಗೋಹ್ಯಯಂ ಪೂರುಷಃ ।
ಕಾಲುಷ್ಯೇಣ ವಿವರ್ಜಿತಃ ಶಿವ ಇತಿ ಖ್ಯಾತಶ್ಚ ಯಃ ಪೂಜಿತಃ ।
ಸದ್ಭಿಸ್ಸದ್ವಿವಿಧೋ ಭಯಾರ್ತಿಭಯಹೃತ್ಸಂಸಾರಘೋರಾಪದಾಂ ॥೧೭॥

ಯಸ್ತ್ವಂ ಖಂಡಯಿತಾಸಿಕಾಂಡನಿವಹಾನ್ ಚಂಡಾನ್ ಪ್ರಕೀರ್ಯಾಭಿತೋ ।
ದಂಡ್ಯಾನ್ ದಂಡಯಸಿ ಸ್ವಯಂ ಚ ಹರಸಿ ಸ್ವೈರ್ಭೀಷಣೈರಾಯುಧೈಃ ।
ಜ್ಞಾನೈಶ್ವರ್ಯಯಶಃಸುವೀರ್ಯಕರುಣಾವೈರಾಗ್ಯಭಾಗ್ಯಾಮಿತ ।
ಶ್ರೀಭಿಃ ಪೂರ್ಣಧೃತಾಯುಧಸ್ತು ಭಗವನ್ ತಸ್ಮೈ ನಮಸ್ತೇಽಧುನಾ ॥೧೮॥

॥ ಯಾಸ್ತೇ ಸಹಸ್ರಗ್ಂ ಹೇತಯೋಽನ್ಯಂ ''

ಯಾಸ್ತೇ ಸಂತು ಸಹಸ್ರಮಾಶು ಗತಯಸ್ತಾ ಹೇತಯಃ ಪ್ರಾಣಿನಾಂ ।
ಶಾಸ್ತ್ರಃ ಕಂಚಿದಧಿಕ್ಷಿಪಂತ್ವಘವತಾಂ ಮಧ್ಯೇಽಸ್ಮದನ್ಯಂ ತಥಾ ।

---

ಪರಶಿವನೇ, ನಿನ್ನ ದೇಹಾರ್ಧವು ಕೆಂಪುಬಣ್ಣದಿಂದ ಕೂಡಿ ಪಾರ್ವತಿಯಿಂದ ಆಕ್ರಮಿಸಲ್ಪಟ್ಟಿದೆ. ಆದರೆ ವೇದಾಂತವಚನಗಳು ಮಾತ್ರ ನಿನ್ನನ್ನು ಸಂಗರಹಿತನೆಂದೂ, ಪರಮಪುರುಷನೆಂದೂ ಹೊಗಳುತ್ತಿರುವುವು. ಸರ್ವದುರ್ಗುಣರಹಿತನಾಗಿ ಮಂಗಳಕರನೆಂದು ತಿಳಿದು ಸಮಸ್ತ ಸತ್ಪುರುಷರೂ, ಭಯಾರ್ತಿನಾಶಕನೂ, ಭಯಪ್ರದನೂ ಆದ ನಿನ್ನನ್ನು ನಾನಾವಿಧವಾಗಿ ಪೂಜಿಸಿ ಘೋರಸಂಸಾರದಿಂದ ಲಭಿಸುವ ಮಹಾವಿಪತ್ತನ್ನು ದೂರಮಾಡಿಕೊಳ್ಳುವರು. ಮಹೇಶ್ವರನೇ, ಇಂತಹ ನಿನಗೆ ವಂದನೆಗಳು. ॥೧೭॥

ಷಡ್ಗುಣೈಶ್ವರ್ಯಸಂಪನ್ನನೇ, ನೀನು ನಿನ್ನ ಭೀಷಣಗಳಾದ ಆಯುಧಗಳಿಂದ ಅಸಿಪತ್ರವನವೆಂಬ ಘೋರಾರಣ್ಯವನ್ನೂ (ನರಕದಲ್ಲಿರುವುದು) ತುಂಡುತುಂಡಾಗಿ ಕತ್ತರಿಸಿ ಚದುರಿಸಿಬಿಡುವೆ. ದಂಡನೆಗೆ ಯೋಗ್ಯರಾದವರನ್ನು ದಂಡಿಸುವೆ. ನಿನ್ನ ಆಯುಧಗಳು ಸರ್ವದಾ ಜ್ಞಾನ, ಐಶ್ವರ್ಯ, ಯಶಸ್ಸು, ವೀರ್ಯ, ಕರುಣೆ, ವೈರಾಗ್ಯ, ಸಂಪೂರ್ಣಭಾಗ್ಯ ಇವುಗಳನ್ನು ಕೊಡತಕ್ಕದ್ದಾಗಿದೆ. ಇಂತಹ ಮಹಾತ್ಮನೇ, ನಿನಗೆ ನಮಸ್ಕಾರವು. ॥೧೮॥

ಮಹೇಶ್ವರನೇ, ಶೀಘ್ರವಾಗಿ ಮುಂದೋಡುವ ನಿನ್ನ ಬಲಿಷ್ಠವಾದ ಸಹಸ್ರಾರು ಕ್ರೂರಾಯುಧಗಳು ಪಾಪಿಷ್ಠರನ್ನು ಹಿಂಸಿಸಲಿ ನಮ್ಮನ್ನು ಮಾತ್ರ ಅವು ಸಂರಕ್ಷಿಸಲಿ.

ಭಕ್ತಾ ಏವ ವಯಂ ಭವಾಮ ಭವತಃ ಸರ್ವಾತ್ಮನಾ ಸಾಗಸಃ ।
ಸಾಹ್ಯಸ್ಮಾನಿದಮೇವ ತೇ ಸುಮನಸೋ ನಿತ್ಯಂ ಸಮಾಶಾಸ್ಮಹೇ ॥೧೯॥

॥ ಧ್ಯಾನಂ ॥

ತಿರ್ಯಗ್ಜಂತುಮಹಾಜಲೂಕಜನತಾವಶ್ಯಾದಿಸಿದ್ಧಿಪ್ರದಂ ।
ದೇವಂ ಸರ್ವಜಯಪ್ರದಂ ಚ ಭಜತಾಂ ಶಂಭುಂ ಪುಲಸ್ತ್ಯಾರ್ಚಿತಂ ।
ಸಸ್ಕಂದಂ ಜಗದಂಬಯಾಯುತತನುಂ ದೇವಾದಿರುದ್ರೈಸ್ಸ್ತುತಂ ।
ಸಾಂಬಂ ಕ್ಲುಪ್ತವಿವಾಹಮಂಗಳವಿಧಿಂ ಸ್ಮೇರಾನನಂ ಭಾವಯೇ ॥೨೦॥

॥ ಸಹಸ್ರಾಣಿ ಸಹಸ್ರಧಾ ॥

ಪ್ರತ್ಯೇಕಂ ಚ ಸಹಸ್ರಧಾ ಬಹುಸಹಸ್ರಾಣಾಂ ಸಹಸ್ರಾಣಿ ಯಾಃ ।
ಸಂತಿ ಹ್ಯತ್ರಮಹೇತಯಸ್ತವ ಶಿವಾ ಸಂಖ್ಯೇಯಬಾಹುಷ್ವಿಹ ।
ತಾಃ ಸಂಕ್ಷೇಪೇಣ ತತ್ಸಮುದ್ಭವಮಹಾಹಿಂಸಾವಿಧಾನಾದಿಕೇ-
ಷ್ವೀಶಾನೋ ಭಗವನ್ನನುಸೃಜಸ್ಯವಸಿ ತಚ್ಚಿತ್ರಂ ಕಿಮತ್ರ ಪ್ರಭೋ ॥೨೧॥

---

ಏಕೆಂದರೆ ನಾವು ನಿಜವಾದ ಈಶ್ವರನ (ನಿನ್ನ) ಭಕ್ತರಾಗಿರುವೆವು. ನಾವು ಒಂದು ವೇಳೆ ಮಹಾಪರಾಧಿಗಳಾಗಿದ್ದರೂ, ನಮ್ಮ ತಪ್ಪನ್ನು ಮನ್ನಿಸಿ ಕ್ಷಮಿಸಬೇಕು. ಇದಕ್ಕಾಗಿ ನಿತ್ಯವೂ ನಾವು ನಿನ್ನನ್ನು ಆಶ್ರಯಿಸುವೆವು. ॥೧೯॥

ಮಹಾದೇವನ ಕರುಣೆಯೊಂದು ಲಭಿಸುವುದಾದರೆ, ಆಗ ನಮಗೆ ಸಕಲ ತಿರ್ಯಗ್ಜಂತುಗಳೂ, ಕ್ರಿಮಿಕೀಟಗಳೂ, ಜನತೆಯೂ ಸ್ವಾಧೀನವಾಗುವುವು. ಮಹಾದೇವನು ಸರ್ವರಿಗೂ ಜಯವನ್ನು ಕೊಡುವವನು. ಪುಲಸ್ತ್ಯನಿಂದ ವಿಶೇಷವಾಗಿ ಪೂಜಿತನಾದವನು. ಸ್ಕಂದ, ಪಾರ್ವತಿ ಇವರಿಂದ ಕೂಡಿ, ದೇವತೆಗಳಿಂದಲೂ, ಏಕಾದಶರುದ್ರರಿಂದಲೂ ಪರಿವೃತನಾಗಿರುವನು. ಕ್ಲುಪ್ತವಾದ ವಿವಾಹಮಂಗಳವಿಧಿಯಲ್ಲಿ ಸದಾ ನಿರತನಾದವನು. ಇಂತಹ ಮುಗುಳ್ನಗೆಯಿಂದ ಕೂಡಿ ಶಾಂತಿಪ್ರಿಯನಾಗಿರುವ ಮಹಾದೇವನನ್ನು ತಪ್ಪದೆ ಧ್ಯಾನಮಾಡುವೆನು. ॥೨೦॥

ಪರಶಿವನೇ, ನಿನಗೆ ಸಹಸ್ರ ಬಾಹುಗಳಿವೆ. ಸಹಸ್ರಾರು ಆಯುಧಗಳಿವೆ. ಒಂದೊಂದು ಆಯುಧವನ್ನು ಸಹಸ್ರಾರು ರೀತಿಯಿಂದ ಪ್ರಯೋಗಿಸುವ ಸಾಮರ್ಥ್ಯವು ನಿನಗಿದೆ. ಅದೇ ಕ್ರೂರಬಾಣಗಳಿಂದಲೇ ಹಿಂಸಾಕಾರ್ಯವನ್ನೂ ವಿಶ್ವಸೃಷ್ಟಿಕಾರ್ಯ

ಪುಣ್ಯಾಪುಣ್ಯಕೃತಃ ಪರಸ್ಪರಮಸಂಭಿನ್ನಾನಲಕ್ಷ್ಯಂ ಕ್ಷಣಾ
ಲ್ಲಕ್ಷ್ಮೀಕೃತ್ಯತು ಪೂರ್ಣಪಾಪವಶತಸ್ತನ್ನಿಗ್ರಹಾನುಗ್ರಹೇ ।
ಹರ್ತುಂ ಭರ್ತುಮಶೇಷಲೋಕಮಪಿ ಯಸ್ತ್ವಂ ಭಾವಿಕಾಮೀಶತಾ ।
ಧತ್ಸೇಂತಃ ಕರುಣಾವಶಾಚ್ಛರಗಣಾನ್ ತ್ರಾತುಂ ಸದಾಸ್ಮಾನ್ ಪ್ರತಿ ॥೨೨॥

ಹೇತೀನಾಂ ತು ಮುಖಾನಿ ಚಾನಭಿಮುಖಾನಾಸ್ಮಾಕಮಸ್ಮದ್ದ್ವಿಷಾಂ ।
ನಿತ್ಯಂ ಚಾಭಿಮುಖಾನಿ ದೇವ ಕುರು ನಃ ಸೌಖ್ಯಪ್ರದಾನಿ ಪ್ರಭೋ ।
ದೈವೋಪದ್ರವರಾಜಪೀಡನಮಹಾಕಾಂತಾರಜೋರುವ್ಯಥಾ ।
ಭೀತಿಘ್ನಂ ಹೃದಿ ನಾರದೇನ ಮುನಿನಾ ಧ್ಯಾತಂ ಸದಾ ಸರ್ವದಂ ॥೨೩॥

ರುದ್ರಂ ಸರ್ವಮನೋಜ್ಞಭೂಷಣಧರಂ ಸರ್ವಾಯುಧಾಲಂಕೃತಂ ।
ಸರ್ವಾಘೌಘಹರಂ ಚ ಸರ್ವಜಗತಾಮೀಶಂ ಮಹೇಶಂ ಭಜೇ ॥೨೪॥

---

ವನ್ನೂ ನಡೆಸುವ ಶಕ್ತಿಯು ನಿನ್ನಲ್ಲಿರುವುದು. ಜಗತ್ತನ್ನು ಸೃಷ್ಟಿಮಾಡುವ ಮತ್ತು ರಕ್ಷಿಸುವ ನಿನ್ನ ಸಾಮರ್ಥ್ಯವು ಅತಿ ವಿಚಿತ್ರವಾಗಿರುವುದು. ॥೨೧॥

ಭೂಲೋಕದಲ್ಲಿ ಮಾನವರು ಪುಣ್ಯ, ಪಾಪಗಳನ್ನಾರ್ಜಿಸಿ ಅದಕ್ಕೆ ತಕ್ಕ ಫಲಾಫಲಗಳನ್ನು ಕೊಟ್ಟು, ಪಾಪಿಗಳನ್ನು ನಿಗ್ರಹಿಸುವುದಕ್ಕೂ, ಪುಣ್ಯಶಾಲಿಗಳನ್ನು ರಕ್ಷಿಸುವುದಕ್ಕೂ ನೀನು ಸಮರ್ಥನಾಗಿರುವೆ. ಲೋಕವನ್ನು ನಾಶಪಡಿಸುವುದಕ್ಕೂ ಮತ್ತೆ ಸೃಷ್ಟಿಸುವುದಕ್ಕೂ, ಲೋಕಕ್ಕೆ ಒಡೆಯನಾಗುವುದಕ್ಕೂ ನೀನಲ್ಲದೆ ಮತ್ತಾರು ಶಕ್ತರಿರುವರು ? ಅಂತಃಕರಣವೃತ್ತಿಗನುಸಾರವಾಗಿ ಬಾಣಪರಂಪರೆಗಳನ್ನು ನಮ್ಮ ರಕ್ಷಣೆಗಾಗಿ ಪ್ರಯೋಗಿಸುವುದರಲ್ಲಿ ನೀನು ಸಮರ್ಥನಾಗಿರುವೆ. ಇದೇ ನನ್ನ ಪ್ರಾರ್ಥನೆ. ॥೨೨॥

ಪರಶಿವನೇ, ನಿನ್ನ ಕ್ರೂರವಾದ ಆಯುಧಗಳು ಯಾವಾಗಲೂ ನಿನ್ನ ಶತ್ರುಗಳಿಗೆ ಅಭಿಮುಖಗಳಾಗಿರಲಿ. ನಮ್ಮ ಮುಂದೆ ಮಾತ್ರ ಅವು ಸುಖಪ್ರದಗಳಾಗಿ ನಿಂತು ನಮಗೆ ಕ್ಷೇಮವನ್ನುಂಟುಮಾಡಲಿ. ಮಹಾದೇವನೇ, ನೀನು ದೈವಿಕವಾಗಿ ಮತ್ತು ರಾಜಕೀಯವಾಗಿ, ಆಗಾಗ ಬರುವ ವಿಪತ್ಪರಂಪರೆಯನ್ನು ಮತ್ತು ಅರಣ್ಯ, ಭೂಮಿ ಇವುಗಳಿಂದ ಬರುವ ಭೀತಿಯನ್ನೂ ನಿವಾರಿಸುವೆ. ನಾರದಮಹಾಮುನಿಯಿಂದ ಧ್ಯಾತನಾಗಿರುವೆ. ಇಂತಹ ನಿನಗೆ ವಂದನೆಗಳು. ॥೨೩॥

ಸರ್ವರಿಗೂ ಮನೋಹರವೆನಿಸಿದ ಭೂಷಣಗಳನ್ನು ಧರಿಸಿದವನೂ, ಸರ್ವಾಯುಧಗಳನ್ನು ಹಿಡಿದವನೂ, ಸಮಸ್ತ ಪಾಪರಾಶಿಯನ್ನು ನಾಶಗೊಳಿಸಿದವನೂ,

ಕಲ್ಪಾದೌ ವಿಧಿನಾರ್ಥಿತೇನ ಕೃಪಯಾ ರುದ್ರೇಣ ಯೋ ನಿರ್ಮಿತಾ ।
ಸ್ತತ್ತಲ್ಯಾಕೃತಯಸ್ತದೀಯಕೃತಯಸ್ತದ್ಧೇತಯಸ್ತದ್ಧಿಯಃ ।
ಲೋಕಾನುಗ್ರಹನಿಗ್ರಹೈಕನಿಪುಣಾಃ ಕರ್ಮಾನುರೂಪಂ ಫಲಂ ।
ಯಚ್ಛಂತೋ ನಿವಸಂತಿ ಯೇ ಚ ಪರಿತಃ ಸೂರ್ಯ್ಯಾನಿಲಾಗ್ನ್ಯಂಶಕಾಃ ॥೨೫॥

ವಿಶ್ವೇದೇವಗಣಾಃ ಪ್ರಸಿದ್ಧಸುಗುಣಾಸ್ತೇಜೋ ಮರುತ್ಪಾರ್ಥಿವಾ ।
ಕಾರಾ ಯೇ ಚ ಮಹೇಶ್ವರಸ್ಯ ಬಹುಧಾ ನಿತ್ಯಂ ವಿಭಕ್ತಾಃ ಕೃತೇಃ ।
ಭಕ್ತಾನುಗ್ರಹತತ್ಪರಸ್ಯ ಬಹವಃ ಸಾನುಗ್ರಹಾನಿಗ್ರಹಾ ।
ಯೇ ಭಕ್ತಾಃ ಶಿವಭಾವನಾಮಧಿಗತಾ ರುದ್ರಾಃ ಸರೂಪಾ ಹಿ ತೇ ॥೨೬॥

ವೈಯ್ಯಾಘ್ರಾಜಿನಭೋಗಿಭೂಷಣಭೃತೋ ಬಾಲೇಂದುಗಂಗಾಜಟಾ ।
ಜೂಟಾಲಂಕೃತಮಸ್ತಕಾಸ್ತ್ರಿನಯನಾಃ ಸಾಂಬಾಃ ಸನಂದೀಶ್ವರಾಃ ।

---

ಸಕಲ ಜಗತ್ತಿಗೆ ಒಡೆಯನೆನಿಸಿದವನೂ ಆದ ಮಹೇಶ್ವರನನ್ನು ನಾನು ಸದಾ ಧ್ಯಾನಿಸುವೆನು. ॥೨೪॥

ಕಲ್ಪಾದಿಯಲ್ಲಿ ನೀನು ಮೊದಲು ಬ್ರಹ್ಮನನ್ನೂ, ರುದ್ರನನ್ನೂ ಸೃಷ್ಟಿಮಾಡಿದೆ. ಅವರವರ ಯೋಗ್ಯತಾನುಸಾರವಾದ ಆಕಾರಗಳನ್ನೂ ಕಲ್ಪಿಸಿದೆ. ಅವರವರಿಗೆ ತಕ್ಕಂತೆ ಕಾರ್ಯಜಾಲಗಳನ್ನೂ ಅಪ್ಪಣೆಮಾಡಿದೆ. ಲೋಕಾನುಗ್ರಹಕ್ಕಾಗಿ, ಸೂರ್ಯ, ಚಂದ್ರ, ಅಗ್ನಿ ಇವರನ್ನು ಸೃಷ್ಟಿಮಾಡಿ, ಜನರ ಪುಣ್ಯಪಾಪಕರ್ಮಗಳಿಗನುಸಾರವಾಗಿ ಫಲವನ್ನು ಕೊಡುವ ಅಧಿಕಾರವನ್ನೂ ಅವರಿಗೆ ಕೊಟ್ಟಿರುವೆ. ಮಹಾದೇವನೇ, ಇಂತಹ ದೇವಾಧಿದೇವನಿಗೆ ನಮಸ್ಕಾರ. ॥೨೫॥

ಸುಗುಣಾಢ್ಯರೆನಿಸಿದ ವಿಶ್ವೇದೇವತೆಗಳೂ, ಮರುದ್ಗಣಗಳೂ, ರಾಜರ ಆಕಾರದಿಂದ ಜನಿಸಿದವರೂ, ಇವರೆಲ್ಲರೂ ಪರಶಿವನ ಅಂಶಸಂಭೂತರೇ. ಪರಮೇಶ್ವರನು ಬೇರೆ ಬೇರೆಯಾದ ಆಕಾರಗಳಿಂದ ಭೂಮಿಯಲ್ಲಿ ತೋರಿಬಂದು, ಭಕ್ತರನ್ನು ಅನುಗ್ರಹಿಸುವ ಕಾರ್ಯದಲ್ಲಿ ನಿರತನಾಗಿರುವನು. ಯಾರು ಶಿವಭಕ್ತಿಯುತರಾಗಿ ಶಿವಭಾವನೆಯಿಂದಿರುವರೋ ಅಂತಹವರು ನಿಜವಾಗಿಯೂ ಶಿವಸಾರೂಪ್ಯವನ್ನೇ ಪಡೆಯುವರೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ॥೨೬॥

ನಂದೀಶ್ವರನೇ ಮೊದಲಾದ ಸಕಲ ಶಿವಗಣಗಳೂ ತಮ್ಮ ಭಕ್ತಿಪಾರಮ್ಯದಿಂದ ಶಿವಸಾರೂಪ್ಯವನ್ನು ಪಡೆದು, ವ್ಯಾಘ್ರಾಜಿನವನ್ನು ಧರಿಸಿ, ನಾಗಾಭರಣ

ಯೇ ದೇವಾನುಚರಾಶ್ಚ ದೇವಸದೃಶಾ ದೇವಗಣಾಧೀಶ್ವರಾಃ ।
ಸರ್ವೇಮೀ ಭಜತಾಂ ಶಿವಾತ್ಮಕತಯಾ ಸಂಸಾರರುಗ್ದ್ರಾವಕಾಃ ॥೨೭॥

॥ ಸಹಸ್ರಾಣಿ ಸಹಸ್ರಶೋಯೇ ॥

ಪ್ರತ್ಯೇಕಂ ತು ಸಹಸ್ರಶೋ ಬಹು ಸಹಸ್ರಾಣಾಂ ಸಹಸ್ರಾಣಿ ಯೇ
ರುದ್ರಾಶ್ಚಾಧಿವಸಂತ್ಯಧೀಶ್ವರತಯಾ ಭೂಮ್ಯಂತರಿಕ್ಷೇ ದಿವಿ ।
ಯೇ ಸರ್ವತ್ರ ಭವಾಭವೇನ ಸದೃಶಾ ಅಸ್ಮಿನ್ಮಹತ್ಯರ್ಣವೇ
ವೃಷ್ಟಿಂ ನಃ ಪರಿಪೂರ್ಣಮೇಘನಿವಹೈಃ ಪೂರ್ಣೇಂತರಿಕ್ಷೇಪಿ ಚ ॥೨೮॥

ಹೇ ಹಾಲಾವಹ ನೀಲಕಂಠವಪುಷಾ ಶರ್ವಾಃ ಕ್ಷಮಾಯಾಮಧಃ
ಪಾತಾಲೇ ಪ್ರಚರಂತಿ ಯೇ ಪಿ ಚ ದಿವಂ ರುದ್ರಾಸದೋಪಾಶ್ರಿತಾಃ ।
ತಾನೇವಂ ಸ್ತುತಿಭಿಃ ಸ ದೈವನತಿಭಿಶ್ಚಾರಾಧಯಂತೋ ವಯಂ
ತೇಷಾಮದ್ಯ ಸಹಸ್ರಯೋಜನಮಿತೇ ದೂರೇ ಸ್ಥಿತಾನಾಮಪಿ ॥೨೯॥

---

ಭೂಷಿತರಾಗಿ ಗಂಗಾ, ಜಟಾಜೂಟ, ಬಾಲಚಂದ್ರ ಇವುಗಳಿಂದ ಶೋಭಿಸುತ್ತಾ, ಅಂಬಾಸಹಿತರಾಗಿ ತ್ರಿನಯನಗಳಿಂದ ಶೋಭಿಸುತ್ತಿರುವರು. ದೇವಾನುಚರರೆಲ್ಲರೂ ದೇವಸದೃಶರೇ ಆಗುವರು. ಹೀಗೆ ಶೋಭಿಸುವ ಶಿವಪರಿವಾರವನ್ನು ನೋಡಿ ಸಂಸಾರ ಸಮುದ್ರದಲ್ಲಿ ಬಿದ್ದು ನರಳುತ್ತಿರುವ ಜನತೆಯು ಸದಾ ಶಿವಭಕ್ತಿತತ್ಪರ ರಾಗಿದ್ದು ಜೀವನ ಸಮುದ್ರದಿಂದ ಪಾರಾಗಿ ದೇವತ್ವವನ್ನು ಪಡೆಯಲಿ. ॥೨೭॥

ಮೇಲೆಹೇಳಿದಂತೆ ಯಾರು ಶಿವಸಾರೂಪ್ಯವನ್ನುಪಡೆದು ಶಿವಭಾವದಿಂದ ದೇವಾಧಿ ದೇವರಾಗಿ ಭೂಮ್ಯಂತರಿಕ್ಷಗಳಲ್ಲಿ ಸಂಚರಿಸುತ್ತಿರುವರೋ ಅಂತಹ ರುದ್ರಗಣಗಳು ಈ ಮಹಾಸಮುದ್ರದಂತೆ ಸರ್ವತ್ರ ವ್ಯಾಪ್ತವಾಗಿರುವ ಸಂಸಾರ ಸಾಗರದಲ್ಲಿ ನಮ್ಮಂತಹವರಿಗೆ ಹಿತವನ್ನುಂಟುಮಾಡಲು, ಪರಿಪೂರ್ಣಮೇಘರೂಪದಿಂದ ವಿಹರಿ ಸುತ್ತಿರುವರು. ವೃಷ್ಟ್ಯಾದಿ ಸಕಲ ಸಾಮಗ್ರಿಗಳನ್ನೂ ಭೂಮಿಗೆ ಒದಗಿಸಿ ನಮ್ಮನ್ನು ಸದಾ ಅವರು ಸಲಹುತ್ತಿರಲಿ. ॥೨೮॥

ಹಾಲಾಹಲವಿಷವನ್ನು ಧರಿಸಿದ ಪರಶಿವನ ಕಂಠಪ್ರದೇಶದಂತೆ ನೀಲವರ್ಣ ವುಳ್ಳ ಕಂಠವನ್ನು ಹೊಂದಿರುವ ರುದ್ರಗಣಗಳು ಸದಾ ಭೂಮಿಯಲ್ಲಿಯೂ, ಪಾತಾಳದಲ್ಲಿಯೂ, ಸ್ವೇಚ್ಛೆಯಿಂದ ಸಂಚರಿಸುತ್ತಿರುವರು. ಮಹಿಮಾದಿ ಗುಣಗಳಲ್ಲಿ ಅವರು ನಮಗಿಂತ ಸಾವಿರಾರು ಯೋಜನ ದೂರದಲ್ಲಿರುವರು. ಅಂತಹವರನ್ನು

ಅರ್ವಾಕ್ಪಶ್ಚಾತ್ಪರತಃ ಪುರಸ್ತಾತ್ ಪರಿತಃ ಸಜ್ಯಾನಿ ಧನ್ವಾನ್ಯಲಂ
ವಿಜ್ಯಾನ್ಯಾತನುಮಃ ಸುಖಾಂಸು ಸತತಂ ಕ್ಷೇಮಾಯ ಯೋಗಾಯ ಚ ।
ರಾಜ್ಞಾಂ ಶತ್ರುವಿನಾಶನಂ ಪ್ರಣಮತಾಂ ಘೋರಾಭಿಚಾರಕ್ರಿಯಾಃ
ಸಂಭೂತಾಘನಿವಾರಣಂ ಚ ಮುನಿನಾ ದೂರ್ವಾಸಸಾರಾಧಿತಂ ॥೩೦॥

ಬಿಭ್ರಾಣಂ ತ್ರಿಶಿಖಂ ಪ್ರದೀಪ್ತವಪುಷಂ ರುದ್ರಂ ಜ್ವಲನ್ಮೂರ್ಧಜಂ ।
ಭೋಗೀಂದ್ರಾಭರಣಂ ಭಜೇ ಭಯಹರಂ ದಂಷ್ಟ್ರಾಕರಾಳಾನನಂ ॥೩೧॥

ಅಯಮನುವಾಕಚತುಷ್ಟಯಸ್ಯ ರುದ್ರ
ಪ್ರಿಯಯೋಗಸ್ಯ ಉಪಾಸನಾವಿಶೇಷಃ ।

---

ನಾವು ಸರ್ವದಾ ಧ್ಯಾನಮಾಡುವುದರಿಂದಲೂ, ಸ್ತುತಿಗೈಯ್ಯುವುದರಿಂದಲೂ, ಆರಾಧಿಸುವುದರಿಂದಲೂ ತೃಪ್ತಿಪಡಿಸಿ ಅವರಿಂದ ನಾವು ಸಕಲ ಇಷ್ಟಾರ್ಥಗಳನ್ನೂ ಪಡೆಯುವೆವು. ॥೨೯॥

ಪರಶಿವನ ಗಣಗಳು ನಮ್ಮ ಮುಂದೆಯೂ, ಹಿಂದೆಯೂ, ಮೇಲೂ, ಕೆಳಗೂ ಧನುರ್ಬಾಣಗಳನ್ನು ಸಜ್ಜುಗೊಳಿಸಿ ಸದಾ ನಿಂತಿರುವರು. ಆದರೆ ಅವರು ಅಂತಹ ಧನುರ್ಬಾಣಗಳನ್ನು ಜಗತ್ತಿನ ಕ್ಷೇಮಕ್ಕಾಗಿಯೂ, ಜಗತ್ತನ್ನು ಬೆಳೆಸುವುದ ಕ್ಕಾಗಿಯೂ ಶಾಂತಮುಖವನ್ನಾಗಿ ಮಾಡಲಿ. ಆ ರೀತಿ ನಾವು ಅವರನ್ನು ಪ್ರಾರ್ಥಿಸೋಣ. ರಾಜರ ಶತ್ರುಗಳನ್ನು ಧ್ವಂಸಮಾಡುವ ಮತ್ತು ತಮ್ಮ ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸಿ ಅವರ ಪಾಪರಾಶಿಯನ್ನು ನಿರ್ಮೂಲಗೊಳಿಸುವ, ಹಾಗೂ ದೂರ್ವಾಸ ಮಹಾಮುನಿಯಿಂದ ಆರಾಧಿತನಾಗಿರುವ, ಪರಶಿವಾನುಚರರ ತಂಡವನ್ನು ನಾವು ಸರ್ವದಾ ಧ್ಯಾನಮಾಡುತ್ತೇವೆ. ॥೩೦॥

ಅಗ್ನಿಪುರುಷನನ್ನು ಫಾಲದಲ್ಲಿ ಪ್ರತಿಷ್ಠಾಪಿಸಿ, ಅದರಿಂದ ಜ್ವಲಿಸುವಂತೆ ಕಾಣುತ್ತಿರುವ ದೇಹವನ್ನುದ್ಧರಿಸಿ, ನಾಗಾಭರಣವನ್ನು ತೋರ್ಪಡಿಸುತ್ತಾ ಸ್ವಯಂ ಭಯಂಕರರೂಪಿಯಾದರೂ, ಭಕ್ತರ ಭಯವನ್ನು ನಿವಾರಣೆಮಾಡುತ್ತಿರುವ ಪರಶಿವನ ಸ್ವರೂಪವನ್ನು ನಾವು ಸರ್ವದಾ ಧ್ಯಾನಿಸುತ್ತಿರುವೆವು. ॥೩೧॥

ಈ ರುದ್ರಾಧ್ಯಾಯದಲ್ಲಿ ಕಂಡುಬರುವ ಮೊದಲನೆಯ ನಾಲ್ಕು ಅನುವಾಕಗಳ ಅರ್ಥವು ಕೇವಲ ಉಪಾಸನಾಭೇದವನ್ನು ವಿವರಿಸುವುದು. ಅದೇ ರೀತಿ ಮುಂದಿನ ನಾಲ್ಕು ಅನುವಾಕಗಳು ಅಂದರೆ ಒಟ್ಟು ಎಂಟು ಅನುವಾಕಗಳು ಅಷ್ಟಮೂರ್ತಿ

ಅಥ ಚಾಷ್ಟತನೋಸ್ತಥಾಷ್ಟಹೃಷ್ಟ್ಯೋ
ನವನೋಯಂ ದಶಮಶ್ಯಮಾನ್ವಿತಾನಾಂ ॥೩೨॥

ಅಕರ್ತುಂ ಕರ್ತುಂ ವಾ ಭುವನಮಖಿಲಂ ಯೋ ಕಿಲ ಭವಂ
ತ್ಯಲಂ ತೇ ಪಾದಾಂತೇ ಪುರಹರ ವಲಂತೇ ಸುರವರಾಃ ।
ಕುಟೀರಂ ಕೋಟೀರಂ ತ್ವಮುಹಹ ಕುಲೀರಾಯ ಕೃತವಾನ್
ತಥಾ ವಿಶ್ವಸ್ಯೇಷ್ಟೇ ತವ ಪುನರಧೀಷ್ಟೇ ಹಿ ಕರುಣಾ ॥೩೩॥

ಶ್ರೀಕಾಂತಾದ್ಯಾಸ್ತ್ರಿದಶತಿಲಕಾಃ ಶ್ರೀಮತೀಮರ್ಥಯಂತೇ
ಯಾಂತೇ ದೃಷ್ಟಿಂ ಸ್ಪೃಹಯತಿ ಜನಸ್ಯೈವ ತಸ್ಯೈಕಿಲಾಸ್ಯೈ ।
ಅವ್ಯಾವೃತ್ತಾ ಗತಿರಿಯಮಯೋ ನಾಥ ತೇಷಾಮಮೀಷಾ
ಮುಷ್ಯಂತಸ್ತೇ ಸಮುಚಿತಮುಮಾಕಾಂತಮಂತುಂ ನಮಂತು ॥೩೪॥

---

ಯೆನಿಸಿದ ಪರಶಿವನ ಸ್ವರೂಪವನ್ನು ವಿವರಿಸುವುವು. ಅದೇ ರೀತಿ ಒಂಬತ್ತು ಮತ್ತು ಹತ್ತನೆಯ ಅನುವಾಕಗಳು ಶಮದಮಾದಿಸಂಪನ್ನರಾದ ಮಹಾತ್ಮರಿಗೆ ಬಹಳ ಪ್ರಿಯಕರಗಳಾಗಿರುವುವು. ॥೩೨॥

ಈ ಅಖಂಡಪ್ರಪಂಚವನ್ನು ಯಾರು ಸೃಷ್ಟಿಸುವುದಕ್ಕೂ, ಲಯಗೊಳಿಸುವುದಕ್ಕೂ ಸಮರ್ಥರಾಗಿರುವರೋ, ಯಾರ ಪಾದತಲದಲ್ಲಿ ಸಮಸ್ತ ದೇವತೆಗಳೂ ಬಿದ್ದು ಒದ್ದಾಡುತ್ತಿರುವರೋ, ಅಂತಹ ಪರಶಿವನು ಗುಡಿಸಲನ್ನು ರಾಜಯೋಗ್ಯವಾದದ್ದನ್ನಾಗಿಯೂ, ರಾಜಕಿರೀಟವನ್ನು ಕೇವಲ ನಿರುಪಯುಕ್ತವಸ್ತುವನ್ನಾಗಿಯೂ ಮಾಡಬಲ್ಲನು. ಅಂತಹ ಮಹಾನುಭಾವನ ಕ್ರಿಯೆಯು ಪ್ರಪಂಚದಲ್ಲಿ ಅಡಗಿರುವ ಸಮಸ್ತ ವಸ್ತುಗಳನ್ನು ಅನುಗ್ರಹಿಸುವುದರಲ್ಲಿ ಸಮರ್ಥವಾಗಿರುವುದು. ಅಂತಹ ಮಹಾದೇವನಲ್ಲಿ ಸದಾ ನಾನು ಭಕ್ತಿಯುತನಾಗಿರುವೆನು. ॥೩೩॥

'ಯಾವ ಪರಮೇಶ್ವರನ ಕೃಪಾಪೂರ್ಣವಾದ ದೃಷ್ಟಿಯನ್ನು ಲಕ್ಷ್ಮೀಕಾಂತನೇ ಮೊದಲಾದ ದೇವಶ್ರೇಷ್ಠರೆಲ್ಲರೂ ಸ್ವಾಗತಿಸುತ್ತಿರುವರೋ, ಅಂತಹ ಮಹಾದೇವನು ತನ್ನನ್ನು ಆಶ್ರಯಿಸಿದವರಿಗೆ ಅವ್ಯಾವೃತ್ತವಾದ ಅಂದರೆ ಶಾಶ್ವತವಾದ ಮುಕ್ತಿಪದವಿಯನ್ನು ಕರುಣಿಸುವನು. ಆದ್ದರಿಂದ ಜೈಗೀಷವ್ಯಾದಿ ಸಮಸ್ತ ಮಹರ್ಷಿವರ್ಯರೇ, ಇಂದಿನಿಂದ ನೀವು ತಪ್ಪದೆ ಉಮಾಕಾಂತನೆನಿಸಿದ ಮಹಾದೇವನ ಪಾದಾರವಿಂದ

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಸ್ಕಂದಪ್ರೋಕ್ತಶತರುದ್ರೀಯಭಾಷ್ಯೇ ದ್ವಾತ್ರಿಂಶೋಽಧ್ಯಾಯಃ

---

ಗಳನ್ನು ತಪ್ಪದೆ ಧ್ಯಾನಿಸಿರಿ. ಎಂದು ಜೈಗೀಷವ್ಯಾದಿಗಳಿಗೆ ಕುಮಾರಸ್ವಾಮಿಯು ಶ್ರೀರುದ್ರಭಾಷ್ಯಾರ್ಥವನ್ನು ವಿವರವಾಗಿ ತಿಳಿಯಪಡಿಸಿದನು. ||೩೪||

ಇಲ್ಲಿಗೆ ಶ್ರೀಶಿವರಹಸ್ಯದ ದ್ವಾದಶಾಂಶದಲ್ಲಿ ಮೂವತ್ತೆರಡನೆಯ
ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

# ತ್ರಯಸ್ತ್ರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಯೇ ವೃಕ್ಷೇಷ್ವಿಹ ಕಾಮುಕೈರ್ಮನಶತೋ ವಾವೃಕ್ಷಮಾನೇಷ್ವಿಮಾಂ
ಕ್ಷ್ಮಾಮಾವೃತ್ಯ ಚರಾಚರಾತ್ಮಕತಯಾ ತಿಷ್ಠಂತಿ ಜೀವೇಷು ಯೇ ।
ಅಂತರ್ವ್ಯಾಕ್ಯ ಜಗಂತಿ ಯೇಽಖಿಲಜಗತ್ಪೀಡಾಕರಾಣಾಂ ಸದಾ ।
ಹರ್ತಾರಃ ಸಿತಕಂಧರಾ ಬಹುವಿಧಾ ಯೇ ನಿತ್ಯನಿಷ್ಕಲ್ಮಷಾಃ ||೧||

ಭೂತಾನಾಂ ಪೃಥಿವೀ ಜಲಾಗ್ನಿಮರುದಾಕಾಶಾತ್ಮನಾಂ ಯೇಽಧಿಪಾಃ ।
ಸ್ಥಿತ್ವಾ ತೇಷು ಜಗಂತಿ ಪಾಂತಿ ಪರಿತಸ್ತತ್ಕಾರ್ಯಭೂತೈಃ ಫಲೈಃ ।

---

## ಮೂವತ್ತಮೂರನೆಯ ಅಧ್ಯಾಯ

ನಾನಾವಿಧವಾದ ವೃಕ್ಷಗಳಲ್ಲಿಯೂ ಬಗೆಬಗೆಯ ರೀತಿಯಿಂದ ಸೇರಿ ಬೆಳೆಯು ತ್ತಿರುವ, ಮತ್ತು ಸಮಸ್ತ ಭೂಮಂಡಲದಲ್ಲಿಯೂ ಚರಾಚರವಸ್ತುರೂಪದಿಂದ ಅಡಗಿ ಸಕಲ ಜೀವಿಗಳಲ್ಲಿಯೂ ನೆಲಸಿರುವ ಮತ್ತು ಜಗತ್ತಿಗೆ ನಾನಾರೀತಿ ಹಿಂಸೆಕೊಡುವ ಪಾಪಿಗಳನ್ನು ನಾಶಮಾಡುವ ರುದ್ರಗಣದೇವತೆಗಳು, ನೀಲಕಂಠದಿಂದ ವಿರಾಜಿ ಸುತ್ತಾ ನಿಷ್ಕಲ್ಮಷಚಿತ್ತರಾಗಿ ಸರ್ವತ್ರ ವ್ಯಾಪಿಸಿರುವರು. ಅಂತಹ ಶಿವಾಂಶಸಂಭೂತ ರಿಗೆ ವಂದನೆಗಳು. ||೧||

ಪರಶಿವಾಂಶಸಂಭೂತರಾದ ಆ ಶಿವಗಣಗಳು ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಗಳಿಗೂ ಅಧಿಪತಿಗಳೆನಿಸಿರುವರು. ಆ ಪಂಚಭೂತಾತ್ಮಕವಾದ ಪ್ರಪಂಚದಲ್ಲಿ ತತ್ಕಾರ್ಯರೂಪವಾಗಿ ತೋರುವ ಸಕಲ

ನಾನಾಭೂತಗಣಾಧಿಪಾಶ್ಚ ವಿವಿಧಜ್ವಾಲಾಜ್ವಲನ್ಮೂರ್ತಯೋ
ಯೇ ವಾ ವೀತಶಿಖಾ ವಿಚಿತ್ರನಿಶಿಖಾ ಯೇ ವಾ ಕಪರ್ದೋಜ್ಜ್ವಲಾಃ ॥೨॥

ಯೇ ಅನ್ನೇಷು ಚತುರ್ವಿಧೇಷು ಚ ತದಾ ಪೇಯೇಷು ವಾನ್ನಾದನ ।
ವ್ಯಾಪಾರಾರ್ಹವಿಚಿತ್ರರೂಪಚಷಕಾಃ ಮಂತ್ರಾದಿಕೇ ಸಂಸ್ಥಿತಾಃ ।
ಪಾಪಿಷ್ಠಾನ್ ಫಲತೋರ್ಥತಶ್ಚ ವಿವಿಧಂ ಪಾಪಾನುರೂಪಂ ಜನಾನ್ ।
ನ್ಯೂನಾಧಿಕ್ಯವಿಚಿತ್ರಧಾತುಗತಿಭಿರ್ವಿಧ್ಯಂತಿ ಚ ವ್ಯಾಧಿಭಿಃ ॥೩॥

ತೇಷಾಮದ್ಯ ಸಹಸ್ರಯೋಜನಮಿತೇ ದೂರೇ ಸ್ಥಿತಾನಾಂ ವಯಂ
ವಿಜ್ಞಾನ್ಯಾಸ್ತನುಮೋ ಧನೂಂಷಿ ಸತತಂ ಕ್ಷೇಮಾಯ ಯೋಗಾಯ ಚ ।
ರಾಜ್ಞಾ ಶತ್ರುನೃಪಾರಿಮಾರಣಮಹಾಸಿದ್ಧಿಪ್ರದಂ ತಾದೃಶಾಂ
ಭಕ್ತಾನಾಮಖಿಲಾಘಸಂಘಹರಣಂ ಶ್ರೀ ದೇವಲಾರಾಧಿತಂ ॥೪॥

---

ಕ್ರಿಯೆಗಳಲ್ಲಿಯೂ, ಕ್ರಿಯಾಫಲಗಳಲ್ಲಿಯೂ ತಮ್ಮ ಪ್ರಭಾವವನ್ನೇ ಬೀರುವರು. ನಾನಾರೀತಿಯಿಂದ ಜಗತ್ತನ್ನು ಬೆಳಸಿ ಕಾಪಾಡಲು ಪ್ರಯತ್ನಿಸುವರು. ಜ್ವಾಲಾರೂಪದಿಂದಲೂ, ಜಟಾವಿಶಿಷ್ಟವಾದ ಶಿವಾಕಾರದಿಂದಲೂ ಪ್ರಪಂಚದಲ್ಲಿ ವಿರಾಜಿಸುತ್ತಿರುವರು. ಇಂತಹ ವಿಚಿತ್ರ ಮಹಿಮೆಯುಳ್ಳ ಆ ಶಿವಗಣಗಳಿಗೆ ವಂದನೆಗಳು. ॥೨॥

ಇನ್ನೂ ಅನೇಕ ಶಿವಗಣಗಳು, ಭಕ್ಷ್ಯ ಭೋಜ್ಯ ಲೇಹ್ಯ ಚೋಷ್ಯಗಳೆನಿಸಿದ ನಾನಾವಿಧವಾದ ಆಹಾರದ್ರವ್ಯಗಳಲ್ಲಿಯೂ, ಪಾನೀಯವಸ್ತುಗಳಲ್ಲಿಯೂ ಆಹಾರೋಪಯೋಗಿಯಾದ ಯಾಜ್ಞಿಕಪಾತ್ರೆ ಮುಂತಾದ ಸಾಮಗ್ರಿಗಳಲ್ಲಿಯೂ, ಆಹಾರಪಚನ ಮಾಡುವ ಮಂತ್ರಾದಿಗಳಲ್ಲಿಯೂ ಸೇರಿ ಪ್ರಾಣಿಗಳ ಬೆಳವಣಿಗೆಗೆ ಸಹಾಯಕವಾಗುವವು. ಮತ್ತೆ ಕೆಲವರು ಭೂಮಿಯಲ್ಲಿ ಜನಿಸುವ ಪ್ರಾಣಿವರ್ಗಗಳ ಪುಣ್ಯಪಾಪಾನುಸಾರವಾದ ಫಲಗಳನ್ನು ಅವರಿಗೆ ಕೊಟ್ಟು ತಮ್ಮ ಜೀವನದಲ್ಲಿ ಅವರನ್ನು ನ್ಯೂನಾಧಿಕವಾದ ದರ್ಜೆಗಳಲ್ಲಿಟ್ಟು ಕಾಪಾಡುವರು. ಮಹಾಪಾಪಿಷ್ಠರನ್ನು ವ್ಯಾಧಿಯೇ ಮೊದಲಾದ ಪೀಡಾದಿಗಳಿಂದ ಹಿಂಸಿಸಿ ಬಳಲಿಸುವರು. ಅಂತಹ ರುದ್ರಾಂಶಸಂಭೂತರಿಗೆ ವಂದನೆಗಳು. ॥೩॥

ಅಂತಹ ಶಿವಗಣಗಳಿಗೆ ಸಹಸ್ರಾರು ಯೋಜನ ದೂರದಲ್ಲಿರುವ ನಾವು ಅವರನ್ನು ಪ್ರಾರ್ಥಿಸಿ, ಅವರು ಹೂಡಿದ್ದ ಧನುರ್ಬಾಣಗಳು ಶಾಂತವಾಗಿ ಅವು ಲೋಕಕ್ಕೆ ಕ್ಷೇಮವನ್ನೂ ಏಳಿಗೆಯನ್ನೂ ಉಂಟುಮಾಡುವಂತೆ ಮಾಡುವೆವು.

ರುದ್ರಂ ಭೀಷಣಭೋಗಿಭೂಷಣಧರಂ ದಂಷ್ಟ್ರಾಕರಾಲಾನನಂ
ಬಿಭ್ರಾಣಂ ತ್ರಿಶಿಖಂ ಪ್ರದೀಪ್ತವಪುಷಂ ಧ್ಯಾಯೇಜ್ಜ್ವಲನ್ಮೂರ್ಧಜಂ ।
ಯೇಮೀ ಲೌಕಿಕವೈದಿಕಾದಿವಿಧಯಾ ನಾನಾವಿಧಾನಾಂ ಪಥಾಂ
ಸರ್ವೇಷಾಮಪಿ ರಕ್ಷಕಾಸ್ತನುವಿಧಃ ಕರ್ಮಾನುರೂಪೇಣ ಯೇ ॥೫॥

ಕರ್ತೃತ್ವಾದಿ ಮತಿಪ್ರಸಕ್ತವಿವಿಧವ್ಯಾಪಾರಶೂನ್ಯಾಃ ಸ್ಥಿರ
ಧ್ಯಾನಾಪಾಸ್ತಸಮಸ್ತಕಲ್ಮಷಮನಃಸಾಕ್ಷಾತ್ಕೃತ ಬ್ರಹ್ಮಣಾಂ ।
ಈಶನ್ಯಸ್ತ ಸಮಸ್ತದುರ್ಭರಮಹಾಸಂಸಾರಭಾರಾತ್ಮನಾಂ
ಅನ್ನಂ ದಾತುಮಚಂಚಲಂ ಕರುಣಯಾ ಹಸ್ತೇ ದಧಾನಾಃ ಸದಾ ॥೬॥

---

ಇಂತಹ ಪರಶಿವನ ತೇಜಸ್ಸು ರಾಜರಿಗೆ ಶತ್ರುಭಯವನ್ನು ನಿವಾರಿಸಿ ಸಕಲ ಸಿದ್ಧಿಯನ್ನೂ ಅವರಿಗೆ ಒದಗಿಸಬಲ್ಲುದು. ತನ್ನನ್ನಾಶ್ರಯಿಸಿದ ಭಕ್ತರ ಪಾಪರಾಶಿಯನ್ನೆಲ್ಲಾ ನಿವಾರಿಸಬಲ್ಲುದು. ಶ್ರೀ ದೇವಲಋಷಿಯಿಂದ ಪೂಜಿತವಾದದ್ದು. ಇಂತಹ ಶಿವತೇಜಸ್ಸನ್ನು ತಪ್ಪದೆ ವಂದಿಸುವೆವು. ॥೪॥

ಭಯಂಕರವಾದ ಸರ್ಪವನ್ನೇ ಆಭರಣವನ್ನಾಗಿ ಧರಿಸಿಕೊಂಡು, ಕೋರೆ ದಾಡೆಗಳಿಂದ ಭಯಂಕರನಾಗಿ ಪ್ರಜ್ವಲಿಸುವ ಅಗ್ನಿಯನ್ನು ಹಣೆಯಲ್ಲಿಟ್ಟು, ವಿಶೇಷ ರೀತಿಯ ಕಾಂತಿಯಿಂದ ಕಣ್ಣು ಕೋರೈಸುತ್ತಿರುವ ರುದ್ರಮೂರ್ತಿಯನ್ನು ನಾನು ಸದಾ ಸೇವಿಸುತ್ತಿರುವೆನು. ಹಾಗೆಯೇ ಲೌಕಿಕ ವೈದಿಕ ಮಾರ್ಗಗಳಲ್ಲಿ ಪ್ರವೇಶಿಸಿ ಜನರ ಕರ್ಮಾನುರೂಪವಾದ ಫಲಗಳನ್ನು ಕೊಡುವ ರುದ್ರಾಂಶಸಂಭೂತರಿಗೂ ನಮಿಸುವೆನು. ॥೫॥

ಸಮಸ್ತ ಕಾರ್ಯಗಳಿಗೂ ನಾನೇ ಕರ್ತೃವು, ಸಮಸ್ತ ಫಲಕ್ಕೂ ನಾನೇ ಭೋಕ್ತೃ ಎಂಬ ಭಾವನೆಯನ್ನು ಬಿಟ್ಟು ಎಲ್ಲಕ್ಕೂ ಈಶ್ವರನೇ ಗತಿಯೆಂದು ತಿಳಿದು, ಸ್ಥಿರವಾದ ಶಿವಭಾವನೆಯನ್ನು ತಾಳಿ ಅದರಿಂದ ತಮ್ಮ ಮನಸ್ಸಿಗೆ ಸಕಲ ದೋಷಗಳನ್ನೂ ನಿವಾರಿಸಿಕೊಂಡು ಬ್ರಹ್ಮಸಾಕ್ಷಾತ್ಕಾರ ಪಡೆದಿರುವ ಈಶ್ವರ ಭಕ್ತರಿಗೆ ಅವರ ಸಾಂಸಾರಿಕವಾದ ಸಮಸ್ತ ಭಾರವನ್ನೂ ದೂರಗೊಳಿಸಿ ಅವರಿಗೆ ನಿತ್ಯವೂ ಆಹಾರಾದಿಗಳನ್ನು ತಾನೇ ಕರುಣೆಯಿಂದ ಒದಗಿಸುತ್ತಿರುವ ಮಹಾನುಭಾವರಾದ ಶಂಕರಗಣಗಳಿಗೆ ನಿತ್ಯ ವಂದನೆಗಳು. ॥೬॥

ಯೇ ಯುಧ್ವಾ ಯುವಭಿಃ ಖಲೈರತಿಬಲೈಃ ಸಂಪೀಡ್ಯಮಾನಾನ್ ಸತಃ
ಸಂರಕ್ಷಂತಿ ಹರಂತಿ ಕರ್ಮವಶತಶ್ಚಾಯುಃ ಪರೇಷಾಮಪಿ ।
ಯೇ ತೀರ್ಥಾನಿ ಚರಂತಿ ತೀರ್ಥಫಲದಾಸ್ತೀರ್ಥದ್ವಿಷಃ ಸಂತತಂ
ಹಂತುಂ ಬಾಣಕೃಪಾಣಕಾರ್ಮುಕಶಸ್ತ್ರಕಾವಂತೋ ನಿಷಂಗೋದ್ಯತಾಃ ॥೭॥

ತೇಷಾಂ ಮಧ್ಯಸಹಸ್ರಯೋಜನಮಿತೇ ದೂರೇ ಸ್ಥಿತಾನಾಂ ವಯಂ
ವಿಜ್ಯಾನ್ಯಾತನುಮೋ ಧನೂಂಷಿ ಸತತಂ ಕ್ಷೇಮಾಯ ಯೋಗಾಯ ಚ ।
ವಿದ್ವದ್ವಲ್ಲಭವರ್ಯವಂಶಕರಸತ್ಪುತ್ರಪ್ರದಂ ಧ್ಯಾಯತಾಂ
ಸೌಮ್ಯತ್ವೇನ ಸಮಸ್ತತೀರ್ಥಫಲದಂ ಶ್ರೀದೇವಲಾರಾಧಿತಂ ॥೮॥

ರುದ್ರಂ ಭೀಷಣಭೋಗಿಭೂಷಣಧರಂ ದಂಷ್ಟ್ರಾಕರಾಳಾನನಂ
ಬಿಭ್ರಾಣಂ ತ್ರಿಶಿಖಂ ಪ್ರದೀಪ್ತನಿಶಿಖಂ ಧ್ಯಾಯೇಜ್ಜ್ವಲನ್ಮೂರ್ಧಜಂ ।

---

ಲೋಕಕಂಟಕರಿಂದ ಅತಿಯಾಗಿ ಪೀಡಿಸಲ್ಪಡುವ ಸತ್ಪುರುಷರನ್ನು ರಕ್ಷಿಸಿ, ಅವರವರ ಕರ್ಮಾನುರೂಪವಾದ ಫಲವನ್ನು ಕೊಡುವುದಕ್ಕೂ, ಪಾಪಿಷ್ಠರ ಆಯುಸ್ಸನ್ನು ಕಮ್ಮಿಮಾಡುವುದಕ್ಕೂ ಸಮರ್ಥರಾದ ರುದ್ರಗಣಗಳು ಶಿವತೀರ್ಥಗಳಲ್ಲಿ ನಿಂತು ತೀರ್ಥಫಲವನ್ನು ಹಾಳುಮಾಡುವುದಕ್ಕಾಗಿ ಬದ್ಧಕಂಕಣರಾಗಿ ನಿಂತಿರುವ ತೀರ್ಥದ್ವೇಷಿಗಳನ್ನು ತಮ್ಮ ಕ್ರೂರವಾದ ಬಾಣ, ಬತ್ತಳಿಕೆ, ಕತ್ತಿ ಮುಂತಾದುವುಗಳಿಂದ ನಾಶಗೊಳಿಸುತ್ತಿರುವರು. ಇಂತಹ ಮಹಾಶೂರರಾದ ರುದ್ರಗಣಗಳಿಗೆ ವಂದನೆಗಳು. ॥೭॥

ಇಂತಹ ಶಿವಗಣಗಳಿಗೂ ನಮಗೂ ಮಧ್ಯೆ ಸಹಸ್ರಾರು ಯೋಜನ ದೂರವಿರುವುದು. ಅವರು ಹಿಡಿದಿರುವ ಧನುರ್ಬಾಣಗಳು ಶಾಂತವಾಗಿದ್ದು ಜಗತ್ತಿಗೆ ಕ್ಷೇಮವನ್ನುಂಟುಮಾಡಲೆಂದು ಪ್ರಾರ್ಥಿಸುವೆವು. ಶ್ರೀ ದೇವಲಋಷಿಯಿಂದ ಆರಾಧಿತನಾಗಿ, ವಿದ್ವಾಂಸರಿಗೂ, ಸತ್ಪುರುಷರಿಗೂ ನಾನಾವಿಧವಾದ ಇಷ್ಟಾರ್ಥಗಳನ್ನು ಸಲ್ಲಿಸುವ ಮತ್ತು ಸಮಸ್ತ ತೀರ್ಥಗಳ ಫಲವನ್ನೂ ಸಲ್ಲಿಸುವ ಶ್ರೀ ಮಹಾದೇವನನ್ನು ನಾವು ಸರ್ವದಾ ಧ್ಯಾನಿಸುವೆವು. ॥೮॥

ಮಹಾರುದ್ರನು ಭಯಂಕರವಾದ ನಾಗಾಭರಣವನ್ನೇ ಧರಿಸಿರುವನು ಉಗ್ರವಾದ ಕೋರೆದಾಡೆಯಿಂದ ವಿರಾಜಿಸುವವನು. ಉರಿಯುವ ಜ್ವಾಲೆಯುಳ್ಳ ಅಗ್ನಿಯನ್ನು ಧರಿಸಿರುವವನು. ಪ್ರಕಾಶಿಸುವ ಜಟಾಭಾರವುಳ್ಳವನು. ಇಂತಹ

ಏತಾವದ್ಭಿರಿಹೋದಿತೈರ್ದಶಮಹಾಮಂತ್ರೈಃ ಪ್ರಕಾಶಾಕೃತಾ
ಶೈವೀ ತಾವದ್ಭಿರಿಯಂ ತಯಾ ಪರಿಮಿತಾ ಭೂಮ್ಯಂತರಿಕ್ಷಾದಿಭಿಃ ॥೯॥

ಯೇ ತ್ರೈಲೋಕ್ಯಮತೀತ್ಯ ಸರ್ವಭುವನಂ ವ್ಯಾಪ್ತಾಶ್ಚ ಸರ್ವಾತ್ಮಕಾ
ಭೂಯಾಂಸಶ್ಚ ವಸಂತಿ ಯೇ ದಶದಿಶೋ ರುದ್ರಾಃ ಸಮಾಕ್ರಮ್ಯ ಚ ।
ತೇಷಾಮೇವ ಸಹಸ್ರಯೋಜನಮಿತೇ ದೂರೇ ಸ್ಥಿತಾನಾಂ ವಯಂ
ವಿಜ್ಯಾನ್ಯಾತನುಮೋ ಧನೂಂಷಿ ಸತತಂ ಕ್ಷೇಮಾಯ ಯೋಗಾಯ ಚ॥೧೦॥

ವಿದ್ಯಾಪುತ್ರವರಾಂಗನಾಪ್ತಿಸುಮಹಾಮಾತಂಗತುಂಗಾಶ್ವದಂ
ದಿವ್ಯಂ ಸ್ಯಂದನ ದಿವ್ಯಸಸ್ಯಸುಮಹೀ ಭೋಗಾದಿಹೇಮಾರ್ಥದಂ ।
ರುದ್ರಂ ಭಸ್ಮವಿಭೂಷಣಂ ಫಣಿಫಣಾಭೂಷೋಜ್ಜ್ವಲತ್ಕಂಧರಂ
ಚಂದ್ರೋದ್ಭಾಸಿಶಿಖಂ ಪ್ರದೀಪ್ತವಪುಷಂ ಧ್ಯಾಯೇತ್ರಿಶೂಲೀಕರಂ ॥೧೧॥

---

ಮಹಾದೇವನ ಸ್ವರೂಪವು ಇಲ್ಲಿನವರೆಗೂ ಹೇಳಿದ ಶ್ರೀರುದ್ರದ ಹತ್ತು ಅನುವಾಕಗಳಿಂದ ವಿಸ್ತಾರವಾಗಿ ಪ್ರಕಾಶಿತವಾಗಿರುವುದು. ಭೂಮ್ಯಂತರಿಕ್ಷಗಳಲ್ಲಿ ವ್ಯಾಪ್ತವಾಗಿರುವ ಶಿವಗಣವು ಇಷ್ಟೆಂದು ಸಾಮಾನ್ಯವಾಗಿ ಈಗ ತಿಳಿದುಬಂದಿರುವುದು. ॥೯॥

ಮೂರು ಲೋಕಗಳನ್ನೂ ಆಕ್ರಮಿಸಿ ಸರ್ವತ್ರ ಸರ್ವರೀತಿಯಿಂದಲೂ ಹತ್ತು ದಿಕ್ಕುಗಳಲ್ಲಿಯೂ ನೆಲಸಿರುವ ರುದ್ರಗಣಗಳಿಗೂ, ನಮಗೂ ಸಹಸ್ರಾರು ಯೋಜನಗಳ ಅಂತರವಿರುವುದು. ಅಂತಹವರನ್ನು ನಾವು ನಮ್ಮ ನೈಸರ್ಗಿಕವಾದ ಭಕ್ತಿಭಾವದಿಂದ ಪ್ರಾರ್ಥಿಸಿ, ಅವರ ಧನುರ್ಬಾಣಗಳು ಶಾಂತಮಯವಾಗಿದ್ದು ಜಗತ್ತಿನ ಕ್ಷೇಮಕ್ಕೆ ಮುಖ್ಯಕಾರಣವಾಗಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುವೆವು. ಇದೇ ನಾವು ಅವರನ್ನು ಕೇಳಿಕೊಳ್ಳುವ ವರ. ॥೧೦॥

ಮಹಾದೇವನು ತನ್ನ ಭಕ್ತರಿಗೆ ವಿದ್ಯಾ, ಪುತ್ರ, ಸ್ತ್ರೀ, ಗಜಾಶ್ವಾದಿಗಳು, ರಥ, ಭೂಮಿ, ಸುವರ್ಣ ಇವೇ ಮೊದಲಾದ ಸಕಲ ಭೋಗ್ಯವಸ್ತು ಸಮೃದ್ಧಿಯನ್ನೂ ಕರುಣಿಸಬಲ್ಲವನು. ಭಸ್ಮವಿಭೂಷಿತನಾದ ಶಂಕರನು ನಾಗಾಭರಣದಿಂದ ಅಲಂಕೃತನಾಗಿರುವವನು. ಚಂದ್ರನಿಂದ ಅಲಂಕೃತವಾದ ಶಿರೋಭಾಗವುಳ್ಳವನು. ಭಕ್ತರನ್ನು ತನ್ನಂತೆಯೇ ಮಾಡಿಕೊಳ್ಳುವ ದಯಾರಸಭರಿತನು. ಇಂತಹ ಮಹೇಶ್ವರನನ್ನು ತಪ್ಪದೆ ಯಾವಾಗಲೂ ಧ್ಯಾನಿಸುತ್ತಿರಬೇಕು. ॥೧೧॥

ಶ್ರೀರುದ್ರೇಭ್ಯ ಇದಂ ನಮಃ ಪ್ರಥಮತೋ ವಾಚೈವ ವಾಗ್ಭೂತಯೇ
ಕರ್ಮಣ್ಯಪ್ರಥಮೇ ವಸಂತಿ ಚ ಪೃಥಗ್ಭೂಮ್ಯಂತರಿಕ್ಷಾದಿಷು ।
ದತ್ವಾನ್ನಂ ಬಹುದಕ್ಷಿಣಾದಿಪುರತಸ್ತ್ವಾಂ ಕಾರ್ಯಶೌರ್ಯಾದಿಭಿಃ
ಪಾಪಿಷ್ಠಾನ್ ಗದಬಂಧನಾದಿಜನಿತಕ್ಲೇಶಾಕುಲಾನ್ ಕುರ್ವತಾಂ ॥೧೨॥

ಅಲ್ಪಾಲ್ಪೈರಧಿಕಾಧಿಕೈರ್ಘುರಕಾಲೋತ್ಥಿತೈರ್ಮರುದ್ವರ್ಷಣೈ
ರ್ಯೇಷಾಂ ಪೀಡಯತಾಂ ಜಗಂತ್ಯಧಿಕೃತಾಮನ್ನಂಚ ವಾತಾಸ್ತಥಾ ।
ವರ್ಷಂತೀಷು ಸಮೂಹವತ್ತ್ರಿತಯಮುಷ್ಯೇತಜ್ಜಗಜ್ಜೀವನಂ
ಹಿಂಸಾಸಾಧನಮಾಪ್ಯದುಷ್ಕೃತಕೃತಾಂ ಕ್ಷೇಮಾಯ ನಿತ್ಯಂ ಸತಾಂ ॥೧೩॥

ತೇಭ್ಯೋ ವಃ ಪುರತೋ ವಯಂ ತ್ವಿಹ ದಶಪ್ರಾಚೀಃ ಪ್ರತೀಚೀ
ರ್ದಶಾವಾಚೀ ವೀರ್ಯದಶಾಂ ಜಲ್ಯೈರಥ ದಶೋದೀಚೀ ದಶೋರ್ಧ್ವಾಂಜಲ್ಯೈಃ।
ಆರೋಗ್ಯಾಯ ಶಿವಾಯ ಕಾಯಿಕನಮಸ್ಕಾರಾತ್ಮಿಕಾ ಸರ್ವತಃ
ಕೃತ್ವಾ ಚಿಂತಿತಸಿದ್ಧಯೇಥ ಮನಸಾ ತೇಭ್ಯೋ ನಮಸ್ಕುರ್ಮಹೇ ॥೧೪॥

---

ನಮ್ಮ ಸಮಸ್ತ ಕಾರ್ಯಜಾಲದಲ್ಲಿಯೂ ಸೇರಿ, ಭೂಮ್ಯಂತರಿಕ್ಷಾದಿಗಳಲ್ಲಿ ವ್ಯಾಪಿಸಿ, ಭಕ್ತರಿಗೆ ದಕ್ಷಿಣೆ, ಅನ್ನ ಇವುಗಳನ್ನು ಅತಿಶಯವಾಗಿ ಕೊಟ್ಟು, ತಮ್ಮ ಶೌರ್ಯಾದಿಗಳನ್ನು ಶತ್ರುಗಳಲ್ಲಿ ತೋರ್ಪಡಿಸಿ, ಪರಮಪಾಪಿಗಳೆನಿಸಿದವರಿಗೆ, ವ್ಯಾಧಿ, ಬಂಧನ, ಕ್ಲೇಶ ಇವುಗಳನ್ನು ಒದಗಿಸಿ, ಅವರಿಗೆ ಬುದ್ಧಿಗಲಿಸುವಂತಹ ರುದ್ರಗಣ ಗಳಿಗೆ ಮೊದಲು ವಾಚಾ ನಮಸ್ಕರಿಸುವೆನು. ಇದರಿಂದ ಅವರು ಸುಪ್ರೀತರಾಗಲಿ. ॥೧೨॥

ಲೋಕಕ್ಕೆ ಆಗಾಗ ಅತಿವೃಷ್ಟಿ, ಬಿರುಗಾಳಿ, ಅನಾವೃಷ್ಟಿ, ಮೇಘಗರ್ಜನೆ ಇವೇ ಮೊದಲಾದುವುಗಳನ್ನು ಉಂಟುಮಾಡುವವರೂ, ಕಾಲಕಾಲಕ್ಕೆ ಆಹಾರಾದಿ ಗಳನ್ನೂ, ಜೀವನೋಪಯೋಗಿಯಾದ ವಾತಾದಿಗಳನ್ನು ಒದಗಿಸುವವರೂ, ನೀರು, ಗಾಳಿ, ಆಹಾರ ಈ ಮೂರು ಜಗಜ್ಜೀವನಗಳನ್ನೂ ಕಲ್ಪಿಸುವವರೂ, ಪಾಪಿಷ್ಠರಿಗೆ ಹಿಂಸಾದಿಗಳನ್ನುಂಟುಮಾಡುವವರೂ, ಲೋಕಕ್ಕೆ ನಿತ್ಯಕ್ಷೇಮವನ್ನು ಕಲ್ಪಿಸು ವವರೂ ಆದ ರುದ್ರಗಣಗಳಿಗೆ ನಿತ್ಯ ನಮಸ್ಕಾರ. ॥೧೩॥

ನಮ್ಮ ಮುಂಭಾಗದಲ್ಲಿಯೂ, ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ದಿಕ್ಕು ಗಳಲ್ಲಿಯೂ, ಊರ್ಧ್ವಾಧೋಭಾಗಗಳಲ್ಲಿಯೂ, ಇರುವ ಸಮಸ್ತ ರುದ್ರಗಣಗಳಿಗೂ

ತೇ ರುದ್ರಾಃ ಸುಖಯಂತು ನಃ ಪ್ರಣಮತಸ್ತೇಮೀ ಭಜಂತೋ ವಯಂ
ನಿಷ್ಪಾಪಾಃ ಸ್ತುತಿಪೂರ್ವಕೈರ್ನತಿಶತೈರ್ಯುಷ್ಮತ್ಕೃಪಾಭಾಜನಾಃ ।
ತಸ್ಮಾದಸ್ಮದರಿಂ ತು ಪಾಪಪುರುಷಂ ಹಂತುಂ ಸ ಯತ್ನಾಚ್ಚಿರಾ
ದ್ಯಂ ದ್ವಿಷ್ಮಃ ಪರಿಪೀಡಯನ್ನನುದಿನಂ ದಾರಿದ್ರ್ಯರೋಗಾದಿಭಿಃ ॥೧೫॥

ಯೋಽಸ್ಮಾನ್ ದ್ವೇಷ್ಟಿ ತಮೇವ ದಂತನಿವಹೇ ಕಾಲಾತ್ಮನಾಂ ಪ್ರೋ ದಧಾ
ಮ್ಯತ್ಯಂತಂ ಸುಖಿತಾನ್ ಹಿತಾನ್ ಕುರುತ ನಃ ಪೂರ್ವಾನ್ ಸದಾ ರಕ್ಷತು ।
ಕಾಲಜ್ಞಾನದಮನ್ನದಂ ಪ್ರಣಮತಾಂ ಜಾತಿಸ್ಮರತ್ವಪ್ರದಂ
ಸರ್ವಾಭೀಷ್ಟದಮಾತ್ಮನಾತ್ಮನಿ ನಿಜಾತ್ಮಾನಂ ಭಜಂತಂ ಸದಾ ॥೧೬॥

---

ನಮಸ್ಕಾರಮಾಡುವೆವು. ನಮಗೆ ಆ ರುದ್ರದೇವತೆಗಳಿಂದ ಆರೋಗ್ಯ, ಐಶ್ವರ್ಯ ಮುಂತಾದ ಇಷ್ಟಾರ್ಥಗಳೆಲ್ಲವೂ ಸಿದ್ಧಿಸಬೇಕಾಗಿದೆ. ಆದ್ದರಿಂದ ಅವರಿಗೆ ಕಾಯಿಕ ವಾದ ಮತ್ತು ಮಾನಸಿಕವಾದ ನಮಸ್ಕಾರಗಳನ್ನು ಸಲ್ಲಿಸುವೆವು. ॥೧೪॥

ಸದಾ ನಮ್ಮಿಂದ ಸ್ತುತಿಸಲ್ಪಡುವ ಪಾಪರಹಿತರಾದ ಆ ರುದ್ರದೇವತೆಗಳು ವಿನಯಶೀಲರಾದ ನಮ್ಮನ್ನು ಸರ್ವದಾ ಕಾಪಾಡುತ್ತಿರಲಿ. ನಾನಾವಿಧವಾದ ಸ್ತುತಿ ವಚನಗಳಿಂದಲೂ ನಮಸ್ಕಾರಪರಂಪರೆಗಳಿಂದಲೂ ನಾವು ಅವರನ್ನು ಸರ್ವದಾ ಸಂತೋಷಗೊಳಿಸುತ್ತಿರುವೆವು. ನಮಗೆ ಶತ್ರುವೆನಿಸಿರುವ ಪಾಪಪುರುಷನನ್ನು ಮಾತ್ರ ಆ ರುದ್ರದೇವತೆಗಳು ಬಹಳವಾಗಿ ಪೀಡಿಸಲಿ. ಅವರು ಬಡತನ, ರೋಗ ಮುಂತಾದುವುಗಳಿಂದ ಪೀಡಿತರಾಗಿ ಸದಾ ನರಳುತ್ತಿರುವಂತೆ ಮಾಡು. ಇದೇ ನಾನು ಕೇಳಿಕೊಳ್ಳುವ ವರ. ॥೧೫॥

ಮಹೇಶ್ವರನೇ, ಯಾವನು ನಮ್ಮನ್ನು ಬಹಳವಾಗಿ ದ್ವೇಷಮಾಡುವನೊ ಅಂತಹವನನ್ನು ನೀನು ನಿನ್ನ ಹಲ್ಲುಗಳ ಮಧ್ಯೆ ಸೇರಿಸಿ ಕೊಂದುಬಿಡು. ಆದರೆ ನಮ್ಮ ಪೂರ್ವಿಕರು ಎಷ್ಟೇ ಪಾಪಿಷ್ಠರಾಗಿದ್ದರೂ ಅವರನ್ನು ಸುಖಿಗಳನ್ನಾಗಿ ಮಾಡು. ನಿನ್ನನ್ನೇ ಸರ್ವದಾ ನಂಬಿ ನಡೆಯುವವರಿಗೆ ನೀನು ಜ್ಞಾನವನ್ನೂ, ಆಹಾರಾದಿ ಗಳನ್ನೂ, ಪೂರ್ವಜನ್ಮದ ಸ್ಮರಣೆಯನ್ನೂ ಕೊಟ್ಟು ರಕ್ಷಿಸುವೆ. ನಿನ್ನನ್ನು ನಂಬಿ ದವರ ಸಕಲ ಇಷ್ಟಾರ್ಥಗಳೂ ಆ ಕೂಡಲೇ ನೆರವೇರುವಂತೆ ನೀನು ಮಾಡುವೆ ಯಲ್ಲವೆ! ಮಹಾತ್ಮನೇ, ಅಂತಹ ನಿನ್ನನ್ನು ನಾನು ಸದಾ ಧ್ಯಾನಿಸುತ್ತಿರುವೆನು. ॥೧೬॥

ರುದ್ರಂ ದೇವಮನಂತರುದ್ರವಪುಷಂ ವಿಶ್ವೇಶ್ವರಂ ವಿಶ್ವತಃ ।
ಚಕ್ಷುಃಶ್ರೋತ್ರಕರಾಂಘ್ರಿಮೂರ್ಜಿತಮಹಾಕಾಲಾತ್ಮಕಂ ಚಿಂತಯೇ॥೧೭

॥ ಶ್ರೀ ಸ್ಕಂದ ಉವಾಚ ॥

॥ ಇತ್ಯನುವಾಕಃ ॥

ಕಸ್ತ್ವಾಂ ವ್ಯಸ್ತಸಮಸ್ತರೂಪಮಿಹ ಸುಸ್ತೋತುಂ ಸಮಸ್ತಾತ್ಮಕಂ
ಸಾಮಸ್ತ್ಯೇಽಪಿ ಸಮಸ್ತತಾಂ ನ ಭಜತೇ ಹ್ಯನ್ಯಸ್ಯ ಕಾವಾ ಕಥಾ ।
ಜಲ್ಪಂತಂ ಕಿಮಪಿ ಸ್ತನಂಧಯಮಿವ ಪ್ರೀತ್ಯಾ ಪಿತಾ ತಾವಕಂ
ಭಕ್ತಂ ಮಾಮವ ನೋ ತ್ವಮೇವ ಹಿ ಪಿತಾ ಮಾತಾ ಚ ದಾತಾ ತಥಾ॥೧೮॥

ಅಮೋಮೋದೀದೀಶಃ ಕೃತಸುಕೃತವಾರಾಶಿರಭಸಾ
ಕೃತಸ್ತುತ್ಯಾ ನತ್ಯಾಪ್ಯಕೃತ ತವ ನಮೋಂತ್ಯೈಃ ಪದವರೈಃ ।
ತಯಾ ದೇವ್ಯಾ ದಿವ್ಯಂ ಪದಕಮಲಮಾಲೋಕನಧಿಯಂ
ಸ್ತುತಂ ಸ್ಕಂದಂ ನಂದನ್ನಕಥಯದಹೋ ನಷ್ಟತಮಸಂ ॥೧೯॥

---

ಭಯಂಕರವಾದ ಆಕಾರದಿಂದಲೂ ಕೈಕಾಲುಗಳಲ್ಲಿ ಶೋಭಿಸುವ ಸರ್ಪಗಳಿಂದಲೂ ಶೋಭಿಸುವ ರುದ್ರದೇವನು ಮಹಾಕಾಲಸ್ವರೂಪನು. ಜಗತ್ತನ್ನು ನಡೆಸುವವನೂ ಅವನೇ. ಅಂತಹ ಮಹೇಶ್ವರನನ್ನೇ ಸದಾ ಧ್ಯಾನಿಸುತ್ತಿರುವೆನು. ||೧೭||

ಹೀಗೆ ಶ್ರೀ ರುದ್ರಭಾಷ್ಯವಿವರಣೆಯನ್ನು ಬೋಧಿಸಿ ಕುಮಾರಸ್ವಾಮಿಯು ಕೊನೆಯಲ್ಲಿ ತಾನೇ ಪರಮೇಶ್ವರನನ್ನು ಈರೀತಿ ಸ್ತುತಿಸುವನು. ಮಹೇಶ್ವರನೇ, ವ್ಯಸ್ತರೂಪದಿಂದಲೂ, ಸಮಷ್ಟಿರೂಪದಿಂದಲೂ ಸಮಸ್ತ ಪ್ರಪಂಚವನ್ನೇ ಆಕ್ರಮಿಸಿರುವ ನಿನ್ನನ್ನು ಯಾವನು ತಾನೆ ಸಂಪೂರ್ಣವಾಗಿ ತಿಳಿದು ಸ್ತುತಿಸಬಲ್ಲನು? ನನ್ನಂತಹವನಿಂದಲೇ ಸಾಧ್ಯವಿಲ್ಲದಿರುವಾಗ ಮತ್ತಾರಿಂದತಾನೆ ಅದು ಸಾಧ್ಯವಾದೀತು? ಒಟ್ಟಿನಲ್ಲಿ ನಿನ್ನನ್ನೇ ನಂಬಿ, ಮಾತಾಪಿತೃಗಳೂ, ದಾತೃವೂ ನೀನೇ ಎಂದು ಭಾವಿಸಿಸರ್ವದಾ ನಿನ್ನನ್ನೇ ಧ್ಯಾನಿಸುತ್ತಿರುವ ನನ್ನನ್ನು, ತಂದೆಯು ಮಗುವನ್ನು ಕಾಪಾಡುವಂತೆ ರಕ್ಷಿಸು. ನೀನಲ್ಲದೆ ನನಗೆ ಮತ್ತಾರು ರಕ್ಷಕರಿರುವರು? ||೧೮||

ಹೀಗೆ ಕುಮಾರಸ್ವಾಮಿಯು ಭಕ್ತಿಯಿಂದ ಪುಣ್ಯಸ್ವರೂಪನಾದ ಪರಶಿವನನ್ನು ನಾನಾರೀತಿ ಸ್ತುತಿಸಿ, ನಮಶ್ಯಬ್ದಾಂತವಾದ ರುದ್ರಮಂತ್ರಗಳಿಂದ ಪ್ರಾರ್ಥಿಸಿ

॥ ಈಶ್ವರ ಉವಾಚ ॥

ತ್ವಂ ರುದ್ರಾರ್ಥವಚೋಭಿರುಗ್ರತಪಸಾ ಸ್ತೋತ್ರಾರ್ಥಪಾರೀಣವಾ
ನೋಂಕಾರಪ್ರಣವಪ್ರವೀಣಮನನೋ ಜ್ಞಾತಾ ಸ್ವಯಂ ಪಾವನಃ ।
ನೇದೃಕ್ ಸಂಸ್ತವಮರ್ಥವದ್ಧೃದಿ ಸದಾ ರುದ್ರಾರ್ಥಧೃಕ್ಕೋಪಿ ವಾ
ಧ್ಯಾನೇನಾಧಿಗತಂ ಮಯ್ಯೈವ ಕೃಪಯಾ ತೇ ತು ಪ್ರಸೂಃ ಪಾರ್ವತೀ ॥೨೦॥

ಯಸ್ಯಾಃ ಸ್ತನ್ಯರಸಾಮೃತಂ ಪ್ರಪಿಬತೋ ವಿಜ್ಞಾನವಾರಾಂನಿಧೇಃ ।
ಭಕ್ತ್ಯಾಖ್ಯಾನಿಲಲೋಲಚಂಚಲಶಿವಜ್ಞಾನೋರ್ಮಯೋಜೃಂಭಿತಾಃ ।
ತೇಷಾಂ ಶೀಕರಸಾರಸಾರಸುಮನಃ ಸೌರಭ್ಯಭಾವಂ ಗಣಾ ।
ದೇವಾ ಭೂಸುರಸತ್ತಮಾಶ್ಚ ನಿಯತಂ ಪ್ರಾಪ್ತಾಃ ಶಿವಾಜ್ಞಾನಜಂ ॥೨೧॥

---

ವಂದಿಸಲು ಆದರಿಂದ ತೃಪ್ತನಾದ ಪರಮೇಶ್ವರನು ಪತ್ನಿಯೊಡನೆ ತನ್ನ ಪಾದಕಮಲದ ದರ್ಶನದಲ್ಲಿಯೇ ಆಸಕ್ತನಾಗಿದ್ದ ಕುಮಾರಸ್ವಾಮಿಯನ್ನು ಆನಂದಗೊಳಿಸುತ್ತಾ ಆವನ ಸಮೀಪದಲ್ಲಿ ಆವಿರ್ಭವಿಸಿ ಈರೀತಿ ನುಡಿದನು. ॥೧೯॥

ಕುಮಾರಸ್ವಾಮಿಯೇ, ನೀನು ಶ್ರೀ ರುದ್ರಮಂತ್ರದ ಸಂಪೂರ್ಣಾರ್ಥವನ್ನು ಅರಿತಿರುವವನು. ಸಮಸ್ತ ಸ್ತೋತ್ರಗಳ ಅರ್ಥವನ್ನೂ ಅರಿತು ಸ್ತುತಿಸುವೆ. ಪ್ರಣವ ಮಂತ್ರಾರ್ಥವನ್ನು ಸಂಪೂರ್ಣವಾಗಿ ತಿಳಿದು ಅದರಂತೆ ನಡೆಯುವವನಾಗಿರುವೆ. ಈ ಸ್ತೋತ್ರಗಳನ್ನು ನಿನ್ನಂತೆ ಮನಸಾ ತಿಳಿದು ಹೇಳುವವರು ಲೋಕದಲ್ಲಿ ಮತ್ತಾರೂ ಕಾಣುವುದಿಲ್ಲ. ರುದ್ರಮಂತ್ರದ ಅರ್ಥಪುರಸ್ಸರವಾಗಿ ನೀನು ಇಲ್ಲಿನ ವರೆಗೂ ಮಾಡಿದ ನನ್ನ ಸ್ತುತಿಯನ್ನು ಕೇಳಿ ನಾನೂ ನಿನ್ನ ಜನನಿಯಾದ ಪಾರ್ವತಿಯೂ ತೃಪ್ತರಾಗಿರುವೆವು. ನಿನ್ನ ಸ್ತೋತ್ರಕ್ಕೆ ಮೆಚ್ಚಿಯೇ ನಾವೀಗ ನಿನಗೆ ಮೈದೋರಿರುವೆವು. ॥೨೦॥

ಕುಮಾರನೇ, ನೀನು ಪಾರ್ವತಿಯ ಸ್ತನ್ಯಪಾನದಿಂದ ಬೆಳೆದವನು. ಆದ ರಿಂದಲೇ ವಿಜ್ಞಾನಸಾಗರನು. ಸಾಗರದಲ್ಲಿ ವಾಯುವು ಅಲೆಗಳನ್ನೆಬ್ಬಿಸುವಂತೆ ಈಶ್ವರ ಭಕ್ತಿಯೆಂಬುದು ನಿನ್ನಲ್ಲಿ ಬಹಳವಾಗಿ ಹುಟ್ಟಿ ಶಿವಜ್ಞಾನವು ಸರ್ವತ್ರ ವ್ಯಾಪಿಸುವಂತೆ ಮಾಡಿದೆ. ಅಂತಹ ಶಿವಜ್ಞಾನರೂಪವಾದ ಅಲೆಗಳ ತುಂತುರುಗಳು ದೇವತೆಗಳಿಗೂ ಬ್ರಾಹ್ಮಣಶ್ರೇಷ್ಠರಿಗೂ ದೊರೆತು ಅವರೆಲ್ಲರೂ ಈಗ ಉದ್ಧಾರವಾಗುತ್ತಿರುವರು. ಇದಕ್ಕೆಲ್ಲಾ ಮೂಲಕಾರಣವೆಂದರೆ ನೀನು ಮಾಡಿದ ಪಾರ್ವತಿಯ ಸ್ತನ್ಯಪಾನಥ

 

ಧನ್ಯಸ್ತ್ವಂ ಜಗದೇಕಪಾವನಕರೀಂ ವಿಶ್ರಾಣಯನ್ಮೇ ಕಥಾಂ
ಜೈಗೀಷವ್ಯಮುಖೇಷು ಶಾಂಭವಮುನಿಷ್ವೇವಂ ಪ್ರಸನ್ನಾತ್ಮನಾ ।
ಸಂಸಾರಾಮಯಭೇಷಜಂ ಮಮ ಮಹಾರುದ್ರಸ್ತವಂ ಕೇವಲಂ
ಮತ್ಪ್ರೀತ್ಯೈ ಭವತಾ ಸಮೀರಿತಮಿದಂ ಭೂಯಾತ್ತವ ಶ್ರೇಯಸೇ ॥೨೨॥

ಏವಂ ಧ್ಯಾನಜಪಾನುಬೋಧನಪದವ್ಯಾಖ್ಯಾನವಿತ್ಪಾವನಃ ।
ಪೂಜಾ ಸಂಯಮನಪ್ರವೀಣಮನಸೋ ಯೋ ವಾ ಭವೇದಾತ್ಮನಃ ।
ಕಾಮಾನಾಶು ಲಭೇತ ಭೂತಿವಿಲಸದ್ಗಾತ್ರಸ್ತ್ರಿಪುಂಡ್ರೋಲ್ಲಸ ।
ದ್ರುದ್ರಾಕ್ಷಾಮಲಹಾರಕಂಠವಲಯೋ ಭೂಯಾತ್ತ್ರಿನೇತ್ರಪ್ರಿಯಃ ॥೨೩॥

ನಿಷ್ಕಾಮೋ ಯದಿ ರುದ್ರಜಾಪ್ಯಪರಮೋ ಮುಕ್ತಿಂ ಲಭೇತ್ಸತ್ಕೃತೀ ।
ಧ್ಯಾನಾಕಾರವಿಶೇಷಮಂತ್ರಪದವಿತ್ಕಾಮ್ಯಂ ಸಹಸ್ರೋತ್ತರಂ ।

---

ಫಲವೆಂದೇ ಹೇಳಬೇಕು. ಶಿವೆಯ ಮೂಲಜ್ಞಾನವೇ ಶಿವಜ್ಞಾನಕ್ಕೆ ಪ್ರಚೋದಕ. ಇದು ನಿನ್ನಿಂದ ಲೋಕಕ್ಕೆ ತಿಳಿದಂತಾಗಿದೆ. ॥೨೧॥

ಕುಮಾರನೇ, ಜಗತ್ತನ್ನೇ ಪವಿತ್ರಗೊಳಿಸುವ ಈ ನನ್ನ ರಹಸ್ಯವನ್ನು ಜೈಗೀಷವ್ಯಾದಿ ಮಹಾಮುನಿಗಳಿಗೆ ಉಪದೇಶಿಸಿದ ನೀನೇ ಧನ್ಯನು. ಈ ಶಿವ ಕಥೆಯು ಸಂಸಾರವೆಂಬ ಮಹಾವ್ಯಾಧಿಗೆ ಔಷಧದಂತಿರುವುದು. ಅದರಲ್ಲಿಯೂ ರುದ್ರಸ್ತವವಂತೂ ನನಗೆ ವಿಶೇಷ ಪ್ರೀತಿಯನ್ನುಂಟುಮಾಡುವುದು. ನನ್ನನ್ನು ತೃಪ್ತಿಪಡಿಸುವುದಕ್ಕಾಗಿಯೇ ಈ ರುದ್ರಸ್ತವವನ್ನು ನೀನು ವಿಶೇಷವಾಗಿ ವಿವರಿಸಿರುವೆ. ಆದರಿಂದ ನಿನಗೆ ಸಕಲ ಶ್ರೇಯಸ್ಸುಗಳೂ ಲಭಿಸುವಂತಾಗಲಿ. ॥೨೨॥

ನೀನು ಇಲ್ಲಿನವರೆಗೂ ಹೇಳಿದ ಸ್ತೋತ್ರಗಳನ್ನು ಸದಾ ಪಠಿಸುತ್ತಾ, ಅದರಲ್ಲಿಯೇ ನೆಟ್ಟಮನಸ್ಸುಳ್ಳವನಾಗಿ, ಅದರ ಅರ್ಥವನ್ನು ಯಾವನು ತಪ್ಪದೆ ಅನು ಸಂಧಾನಮಾಡುತ್ತಿರುವನೋ, ಅವನು ತನ್ನ ಇಷ್ಟಾರ್ಥಗಳನ್ನೆಲ್ಲಾ ಪೂರ್ಣವಾಗಿ ಪಡೆಯುವನು. ಮತ್ತು ವಿಭೂತಿ ರುದ್ರಾಕ್ಷಮಾಲೆಗಳನ್ನು ಧರಿಸಿದವನಾಗಿ ಸದಾ ಶಿವಧ್ಯಾನಮಾಡುತ್ತಾ ಶಿವಾನುಗ್ರಹಕ್ಕೆ ಪಾತ್ರನೆನಿಸುವನು. ಇದರಲ್ಲಿ ಸಂಶಯವಿಲ್ಲ. ॥೨೩॥

ಐಹಿಕವಾದ ಯಾವ ಭೋಗಕ್ಕೂ ಆಸೆಪಡದೆ ಈ ರುದ್ರಸ್ತವವನ್ನು ಪಠಿಸಿ ದವನಿಗೆ ಶಾಶ್ವತವಾದ ಮುಕ್ತಿಯು ದೊರಕುವುದು. ಕಾಮ್ಯವಾಗಿ ಆಚರಿಸುವ

ಜಪ್ತ್ವಾ ಹೋಮದಶಾಂಶತರ್ಪಣವಿಧಿಂ ಕೃತ್ವಾ ಚ ಶೈವಾರ್ಚನಂ ।
ಭೂತ್ವಾ ಕೃಚ್ಛ್ರಪರಾಕಪಾವಿತತನುಸ್ತಾಂ ಸ್ತಾಂ ಲಭೇತ್ಕಾಮನಾಂ ॥೨೪॥

ಜಪ್ಯಃ ಪಶ್ಚಿಮಲಿಂಗವಕ್ತ್ರಮಭಿತೋ ಧ್ಯಾಯನ್ನುದಗ್ವಕ್ತ್ರವಾನ್ ।
ಬಾಲೇಂದುದ್ಯುತಿಕೋಟಿಸಂನಿಭಮುಮಾಕಾಂತಂ ಸದಾ ಶಾಂತಧೀಃ ।
ಪಾಪೌಘಂ ಪ್ರಶಮಯ್ಯ ಭಸ್ಮವರಧೃಜ್ಜ್ಮಕ್ತೋ ವಿಮುಕ್ತಿಂ ಗತ ।
ಸ್ತುತ್ರೈವಾಮರಣಂ ವಸನ್ನಪಿ ನರೋ ಮುಕ್ತಿಂ ಲಭೇತಾಂ(?) ಪರಾಂ॥೨೫॥

ಯಸ್ತ್ವೇಕವಾರಂ ಶತರುದ್ರಜಾಪೀ ಪಾಪೈರ್ಮಹದ್ಭಿಃ ಪ್ರವಿಮುಕ್ತ ಏವ ।
ದ್ವಿವಾರಮುಷ್ಯೇತದ್ದಿವಾತ್ರ ಸಂಪಠನ್ ಗಣೋತ್ತಮಃ ಸಂಭವಿತಾ ಚಿರಾಯ ॥೨೬॥

---

ದಾದರೆ, ಈ ರುದ್ರಮಂತ್ರಾರ್ಥಬೋಧಕವಾದ ಸ್ತೋತ್ರವನ್ನು ಸಹಸ್ರಾರುಸಾರಿ ಪಾರಾಯಣಮಾಡಿ, ತದ್ದಶಾಂಶ ಹೋಮವನ್ನೂ, ಅದರ ಹತ್ತನೆಯ ಒಂದುಭಾಗ ತರ್ಪಣವನ್ನೂ ವಿಧಿವತ್ತಾಗಿ ಶಿವಾರಾಧನೆಯನ್ನು ನಡೆಸಿದರೆ, ಅನೇಕ ಕೃಚ್ಛ್ರಾಚರಣೆಗಳಿಂದ ಹೊಂದಬಹುದಾದ ಪಾವಿತ್ರ್ಯವನ್ನು ಪಡೆದು, ತಮ್ಮ ಸಕಲ ಇಷ್ಟಾರ್ಥಗಳನ್ನೂ ಅನಾಯಾಸವಾಗಿ ಹೊಂದುವರೆಂಬುದರಲ್ಲಿ ಅನುಮಾನವಿಲ್ಲ. ॥೨೪॥

ಪಶ್ಚಿಮಾಭಿಮುಖವಾಗಿರುವ ಶಿವಲಿಂಗದ ಎದುರಿನಲ್ಲಿ ಕುಳಿತು ಈ ಶಿವಸ್ತೋತ್ರವನ್ನು ಜಪಮಾಡಬೇಕು. ಉತ್ತರಾಭಿಮುಖವಾಗಿ ಕುಳಿತು ಬಾಲಚಂದ್ರಧರನೂ, ಪಾರ್ವತೀರಮಣನೂ ಆದ ಶಂಕರನನ್ನು ಶಾಂತನಾಗಿ ಧ್ಯಾನಮಾಡಬೇಕು. ಹಾಗೆಯೇ ನಿತ್ಯವೂ ಭಸ್ಮರುದ್ರಾಕ್ಷಧಾರಣೆಯಿಂದ ಸಾಯುವವರೆಗೂ ಈರೀತಿ ಯಾರು ಮಾಡುವರೋ, ಅವರು ತಪ್ಪದೆ ಮೋಕ್ಷಸಂಪತ್ತನ್ನು ಪಡೆಯುವರು. ಇದರಲ್ಲಿ ಸಂಶಯವಿಲ್ಲ. ॥೨೫॥

ಈ ಶತರುದ್ರೀಯ ಸ್ತೋತ್ರಗಳನ್ನು ಯಾರು ಭಕ್ತಿಪೂರ್ವಕವಾಗಿ ಒಂದುಸಾರಿ ಜಪಿಸುವರೋ, ಅವರು ಮಹಾಪಾಪರಾಶಿಗಳಿಂದ ನಿರ್ಮುಕ್ತರಾಗುವರು. ಎರಡುಸಾರಿ ನಿತ್ಯವೂ ತಪ್ಪದೆ ಪಾರಾಯಣಮಾಡುವವರು ಗಣಶ್ರೇಷ್ಠರೆನಿಸಿ ಶಿವಸನ್ನಿಧಿಯನ್ನು ಹೊಂದುವರು. ॥೨೬॥

ತ್ರಿವಾರರುದ್ರಂ ಪ್ರಜಪನ್ನಘುಷ್ಣಂ
ಮಯ್ಯೇವ ಲೀನಃ ಸ ಭವೇದ್ಧಿ ಪೂರುಷಃ ।
ಭಕ್ತೋ ವಿಮುಕ್ತಿಂ ಸಮವಾಪ್ಯ ಮೋದತೇ
ಯೋಂತೇ ಭವೇದ್ರಾಜಸ ಗೋತ್ರವಾಸೀ ॥೨೭॥

ನಕ್ತಂ ದಿವಂ ವಾ ಪಜಪನ್ನ ಭಕ್ತೋ
ಮುಕ್ತಸ್ಸಶಕ್ತಃ ಸ ವಿಮುಕ್ತಪಾಪಃ ।
ಸಕ್ತೋಽಪಿ ಸಂಸಾರವರೋರುಪಾಶೈ
ರ್ವ್ಯಕ್ತಂ ಸ ಮುಕ್ತೋ ಮಮ ಸಂಪ್ರಸಾದಾತ್ ॥೨೮॥

ಶ್ರೀರುದ್ರಮಂತ್ರಾನ್ ಪ್ರವಿಹಾಯ ಮೂಢಃ
ಪಂಚಾಕ್ಷರೀಮಧ್ಯಗತಾನ್ವಿಮುಕ್ತ್ಯೈ ।
ಯತೇತ ಯಃ ಸಂಸೃತಿಪಾಶಬದ್ಧ
ಸ್ತಕ್ತ್ವೈವ ಗಾಂ ಸೋ ಹಿ ಖರೀಂ ದುಹೇದ್ಯಥಾ ॥೨೯॥

---

ದಿನವೂ ಮೂರುಸಾರಿ ತಪ್ಪದೆ ಪಾರಾಯಣಮಾಡುವವರು ಸಕಲಪಾಪ ನಿರ್ಮುಕ್ತರಾಗಿ ನನ್ನಲ್ಲಿಯೇ (ಶಿವನಲ್ಲಿಯೇ) ಐಕ್ಯರಾಗುವರು. ಮತ್ತೆ ಅವರಿಗೆ ಜನ್ಮವೇ ಇರುವುದಿಲ್ಲ. ನನ್ನ ಭಕ್ತರಾದವರು ಯಾವುದೇರೀತಿಯಲ್ಲಿದ್ದರೂ ಅವರು ಇರುವವರೆಗೆ ಸಂತೋಷವನ್ನನುಭವಿಸುತ್ತಾ, ಕೊನೆಗೆ ರಾಜ್ಯಾಧಿಪತಿಯಾಗಿ ಜನಿಸಿ ಐಹಿಕಾಮುಷ್ಮಿಕಸುಖಗಳನ್ನು ಪಡೆಯುವರೆಂಬುದರಲ್ಲಿ ಸಂದೇಹವಿಲ್ಲ. ॥೨೭॥

ಯಾರು ಈ ರುದ್ರಭಾಷ್ಯಾರ್ಥವನ್ನು ಹಗಲು ರಾತ್ರಿಯೂ ತಪ್ಪದೆ ಪಾರಾಯಣಮಾಡುವರೋ, ಅವರು ಸಮಸ್ತಪಾಪವಿನಿರ್ಮುಕ್ತರಾಗಿ ಸಂಸಾರದ ಪಾಶಗಳಿಂದ ಬಂಧಿಸಲ್ಪಟ್ಟಾಗ್ಯೂ ಸುಲಭವಾಗಿ ಮುಕ್ತರಾಗುವರು. ನನ್ನ ಅನುಗ್ರಹವು ಅವರಿಗೆ ದೊರೆತು ಸಕಲವಿಧವಾದ ಶ್ರೇಯಸ್ಸೂ ಅವರಿಗೆ ಲಭಿಸುವುದು. ॥೨೮॥

ಶಿವರುದ್ರಮಂತ್ರಗಳನ್ನೂ, ಶಿವಪಂಚಾಕ್ಷರೀಮಂತ್ರವನ್ನೂ ದೂರಮಾಡಿ ತಾನು ಸಂಸಾರದಿಂದ ಮುಕ್ತನಾಗುತ್ತೇನೆಂಬ ಮಾತು ಕೇವಲ ಮೌಢ್ಯಯುಕ್ತವಾದ ಮಾತೇ ಸರಿ. ಇವನ್ನು ಬಿಟ್ಟು ಮತ್ತಾವ ಮಂತ್ರವೂ, ಯಾವ ದೇವತೆಯೂ ಮಾನವನಿಗೆ ಮುಕ್ತಿಯನ್ನು ಒದಗಿಸಲಾರದು. ಕರೆಯುವ ಹಸುವನ್ನು ದೂರ

ಧೃತ್ವೋರ್ಧ್ವಪುಂಡ್ರಂ ಪ್ರಜಪೇನ್ನಿದಂ ಯೋ
ರುದ್ರಂ ತಥಾ ಪಾವನಮಸ್ಯ ಮುಕ್ತಿಃ ।
ನ ಲಭ್ಯತೇ ತೇನ ಸ ಮನ್ಯುದಗ್ಧೋ
ಮನ್ಯೈವ ಕಿಂ ಸ್ಯಾತ್ಸಿಕತಾಸು ತೈಲಂ ॥೩೦॥

ಯೋ ಭಾಸುರಂ ಭೂಸುರಜನ್ಮವಾನ್ ಸ್ಯಾ ।
ತ್ತೇನೈವ ಭಸ್ಮಾಕ್ಷಧರೇಣ ಜಾಪ್ಯಃ ।
ನ ಚಾರ್ಥಲೋಭೇನ ನ ಚಾನ್ಯಮಾನಸಾ
ಜಪ್ಯಃ ಕಿಲಾಯಂ ಶ್ರುತಿರತ್ನಕೋಶಃ ॥೩೧॥

॥ ಶ್ರೀ ಸ್ಕಂದ ಉವಾಚ ॥

ಇತ್ಯುಕ್ತಂ ಶಿವವಚನಂ ನಿಶಮ್ಯ ವಿಸ್ರಾ
ಸ್ತುಷ್ಟೋಽಹಂ ಶಿಪಿವಿಷ್ಟಮಷ್ಟಮೂರ್ತಿಂ ।
ಜುಷ್ಟಸ್ತತ್ಪದಕಮಲೇ ಹೃದೀಷ್ಟಭೃಂಗಂ
ಸಂವೀಕ್ಷ್ಯ ಪ್ರಣತಿಮನಾಃ ಪ್ರತುಷ್ಟವಂ ಹಿ ॥೩೨॥

---

ಮಾಡಿ, ಹೆಣ್ಣುಕತ್ತೆಯಿಂದ ಹಾಲನ್ನು ಕರೆಯಲು 'ಯತ್ನಿಸುವ ಮೂಢನಂತೆಯೇ ಅವನು ಆಗುವನು. ||೨೯||

ಊರ್ಧ್ವಪುಂಡ್ರವನ್ನು ಧರಿಸಿದವನು ಈ ಪಾವನವಾದ ರುದ್ರಮಂತ್ರವನ್ನು ಜಪಿಸುವುದರಿಂದ ಎಂದಿಗೂ ಮೋಕ್ಷವು ಲಭಿಸಲಾರದು. ಅದೂ ಅಲ್ಲದೆ ಅವನು ನನ್ನ ಕೋಪಕ್ಕೆ ಪಾತ್ರನಾಗಿ ಶಿಕ್ಷೆಗೆ ಯೋಗ್ಯನೆನಿಸುವನು. ಇತರ ದೇವತಾಧ್ಯಾನದಿಂದ ಮುಕ್ತಿಯನ್ನು ಬಯಸುವವನು ಮರಳಿನಿಂದ ಎಣ್ಣೆಯನ್ನು ತೆಗೆಯಲು ಪ್ರಯತ್ನಿಸುವನಂತಾಗುವನು. ||೩೦||

ಬ್ರಾಹ್ಮಣಜನ್ಮದಲ್ಲಿ ಜನ್ಮತಾಳಿದವರು ನಿತ್ಯವೂ ಭಸ್ಮಾಕ್ಷಮಾಲಾಧಾರಿಗಳಾಗಿ ಈ ರುದ್ರಮಂತ್ರವನ್ನು ಅರ್ಥವತ್ತಾಗಿ ತಿಳಿದು ಜಪಮಾಡಬೇಕು. ಅರ್ಥವನ್ನರಿಯದೆ, ಅನ್ಯಮನಸ್ಕನಾಗಿ ಎಂದೂ ರುದ್ರಮಂತ್ರವನ್ನು ಜಪಿಸಬಾರದು. ಏಕೆಂದರೆ ಇದು ವೇದರಾಶಿಯಲ್ಲಿ ಒಂದು ರತ್ನವಿದ್ದಂತೆ ಇರುವುದು. ||೩೧||

ಹೀಗೆ ಹೇಳಿದ ಶಿವೋಕ್ತಿಯನ್ನು ಕೇಳಿ ನಾನು ಅಷ್ಟಮೂರ್ತಿಯೆನಿಸಿದ ಪರಮೇಶ್ವರರನ್ನೇ ಹೃದಯದಲ್ಲಿ ಧ್ಯಾನಿಸುತ್ತಾ ಆನಂದಪಟ್ಟೆನು. ಎಲೈ ಜ್ಞಾನಿ

ದೇವಂ ತಂ ಜಯಪದಪೂರ್ವನಮ್ರಭವ್ಯ
ಸ್ತವ್ಯೇನ ಪ್ರಮಥಪತಿಂ ಚ ದಿವ್ಯವಾಗ್ಭಿಃ ।
ಗವ್ಯೇನ ಪ್ಲುತನವಸರ್ಪಿಷಾ ಯಥೇಚ್ಛೋ
ಹವ್ಯೇನ ಪ್ರಕಟಶಿಖೋಥ ಹವ್ಯವಾಹಃ ॥೩೩॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಸ್ಕಂದಕೃತ ರುದ್ರಭಾಷ್ಯೇ ತ್ರಯಸ್ತ್ರಿಂಶೋಽಧ್ಯಾಯಃ

---

ಗಳಾದ ಜೈಗೀಷವ್ಯಾದಿಗಳೇ, ಆಗ ಶಂಕರನ ದಿವ್ಯವಾಣಿಯನ್ನು ಕೇಳಿದೊಡನೆಯೇ ಆನಂದಪಟ್ಟು ನಾನು ನನ್ನ ಹೃದಯವೆಂಬ ದುಂಬಿಯನ್ನು ಅವನ ಪಾದಕಮಲದಲ್ಲಿಟ್ಟು ಮಕರಂದಪಾನಮಾಡಲಾರಂಭಿಸಿದೆನು. ಆದಕ್ಕಿಂತ ಸವಿಯಾದ ಅಮೃತವು ಮತ್ತೆಲ್ಲಿರುವುದು ? ॥೩೨॥

ಜಯಪದಪೂರ್ವಕವಾಗಿ ಯಾರು ಪ್ರಮಥಾಧಿಪತಿಯಾದ ಪರಮೇಶ್ವರನನ್ನು ದಿವ್ಯವಾಣಿಯಿಂದಲೂ, ಅರ್ಥಗರ್ಭಿತವಾಗಿ ಮಧುರಶೈಲಿಯಿಂದ ತೋರಿಬರುವ ದಿವ್ಯಸ್ತೋತ್ರಗಳಿಂದಲೂ ಸ್ತುತಿಸುತ್ತಾ, ಗೋವಿನಿಂದ ಲಬ್ಧವಾದ ಘೃತಾದಿಗಳಿಂದಲೂ, ಹವಿಸ್ಸಿನಿಂದಲೂ ಪರಶಿವನನ್ನು ತೃಪ್ತಿಪಡಿಸುವರೋ, ಅವರು ಸಾಕ್ಷಾತ್ ಅಗ್ನಿಪುರುಷನಂತೆ ತೇಜಸ್ವಿಗಳಾಗಿ ಮೆರೆಯುವರು. ಇದರಲ್ಲಿ ಸಂಶಯವಿಲ್ಲ. ಒಟ್ಟಿನಲ್ಲಿ ಈ ರುದ್ರಮಂತ್ರವು ಪ್ರತಿದಿನದ ಪಾರಾಯಣಕ್ಕೂ, ಸ್ತುತಿಗೈಯ್ಯುವುದಕ್ಕೂ, ಹೋಮಾದಿಗಳನ್ನೆಸಗುವುದಕ್ಕೂ ಪವಿತ್ರತಮವೆನಿಸುವುದು, ಎಂದು ಮಹಾದೇವನು ಹೇಳಿದುದನ್ನೇ ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಯಪಡಿಸಿದನೆಂಬಲ್ಲಿಗೆ, ॥೩೩॥

ಶ್ರೀಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ ಶಿವಗೌರೀಸಂವಾದ
ರೂಪವಾಗಿ, ಕುಮಾರಸ್ವಾಮಿಯು ರುದ್ರಭಾಷ್ಯವನ್ನು ಜೈಗೀಷವ್ಯಾದಿಗಳಿಗೆ
ವಿವರಿಸಿ ಹೇಳಿದನೆಂಬಲ್ಲಿಗೆ ಮೂವತ್ತುಮೂರನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಚತುಸ್ತ್ರಿಂಶೋಽಧ್ಯಾಯಃ

॥ ಶ್ರೀ ಜೈಗೀಷವ್ಯ ಉವಾಚ ॥

ಸುಬ್ರಹ್ಮಣ್ಯ ವದಾಸ್ಮಾಕಂ ಜಯಸ್ತೋತ್ರಂ ತ್ವಯಾ ಕೃತಂ ।
ವಿಶ್ವಾಧಿಕಸ್ಯ ದೇವಸ್ಯ ಮಹಾದೇವಸ್ಯ ವೇಧಸಃ ॥೧॥

ಶ್ರವಣೇನ ಧೃತಾಃ ಸರ್ವೇ ಗಣಾ ಮುನಿಗಣಾಃ ಸುರಾಃ ।
ಯೇನ ಸ್ತವೇನ ಸ್ತುವತಾಂ ಸುಪ್ರೀತಸ್ಸ್ಯಾನ್ಮಹೇಶ್ವರಃ ॥೨॥

॥ ಸೂತ ಉವಾಚ ॥

ಜೈಗೀಷವ್ಯವಚಶ್ಶ್ರುತ್ವಾ ನತ್ವಾ ಸ್ಕಂದೋ ಮಹೇಶ್ವರಂ ।
ಕೃತಾಂಜಲಿಪುಟೋ ಭೂತ್ವಾ ಜಯಸ್ತೋತ್ರಮುದೀರಯೇತ್ ॥೩॥

---

## ಮೂವತ್ತುನಾಲ್ಕನೆಯ ಅಧ್ಯಾಯ

ಜೈಗೀಷವ್ಯಮಹರ್ಷಿಯು ಮತ್ತೆ ಕುಮಾರಸ್ವಾಮಿಯನ್ನು ಕುರಿತು "ಮಹೇಶ್ವರಪುತ್ರನೇ, ನೀನು ರಚಿಸಿರುವ ಜಯಸ್ತೋತ್ರವನ್ನು ನನಗೆ ವಿವರಿಸಿ ಹೇಳುವವನಾಗು. ದೇವ ದೇವನಾದ ಮಹಾದೇವನ ಆ ಸ್ತೋತ್ರರತ್ನವನ್ನು ಕೇಳಿ ಋಷಿಗಣಗಳೂ, ದೇವತೆಗಳೂ ಧನ್ಯರಾಗಿರುವರು. ಆ ಸ್ತೋತ್ರದಿಂದ ಪರಶಿವನನ್ನು ಧ್ಯಾನಿಸಿದರೆ, ಬಹುಬೇಗ ಶಂಕರನು ತೃಪ್ತನಾಗುವನೆಂದೂ ಕೇಳಿರುವೆನು. ಆದ್ದರಿಂದ ನನಗೆ ಅದನ್ನು ತಿಳಿಸುವವನಾಗು." ॥೧-೨॥

ಎಂದು ಜೈಗೀಷವ್ಯನು ಪ್ರಾರ್ಥಿಸಲು ಅದನ್ನು ಕೇಳಿದ ಕುಮಾರಸ್ವಾಮಿಯು ಮನಸ್ಸಿನಲ್ಲಿ ಆನಂದಪಡುತ್ತಾ, ಪರಶಿವನಲ್ಲಿ ಭಕ್ತಿಯಿಟ್ಟು ಈರೀತಿ ಜಯಶಬ್ದ

॥ ಶ್ರೀ ಸುಬ್ರಹ್ಮಣ್ಯ ಉವಾಚ ॥

ಓಂ ಜಯ ಕೈಲಾಸನಿಲಯ ಜಯ ಶೈಲಾತ್ಮಜಾಪತೇ ।
ಜಯ ಮಂದಾಕಿನೀಭೂಷ ಜಯ ವೃಂದಾರಕಾರ್ಚಿತ ॥೪॥

ಜಯ ಕಾಮಾಂಗದಹನ ಜಯ ವಾಮಾಂಗಶೈಲಜ ।
ಜಯ ಸೋಮಕಲಾಮೌಲೇ ಜಯ ಭ್ರೂಮಧ್ಯಲೋಚನ ॥೫॥

ಜಯ ರುದ್ರಮಹಾದೇವ ಜಯ ಭದ್ರವರಾಸನ ।
ಜಯ ನಾಗೇಂದ್ರಕೇಯೂರ ಜಯ ಯೋಗೀಂದ್ರಸೇವಿತ ॥೬॥

ಜಯ ಗಂಗಾಧರೇಶಾನ ಜಯ ಭೋಗಾಪವರ್ಗದ ।
ಜಯ ರಾಗಾದಿದೋಷಘ್ನ ಜಯ ರಾಮಾನನಪ್ರಿಯ ॥೭॥

ಜಯ ವಿಶ್ವಪ್ರಕಾಶಾತ್ಮನ್ ಜಯ ವಿಶ್ವವಿಧಾಯಕ ।
ಜಯ ವಿಶ್ವಾಧಿಪ ಸ್ವಾಮಿನ್ ಜಯ ವಿಶ್ವಾಧಿಕಪ್ರಭೋ ॥೮॥

---

ಪೂರ್ವಕವಾದ ಶಿವಸ್ತುತಿಯನ್ನು ತಿಳಿಸಲಾರಂಭಿಸಿದನು. “ಕೈಲಾಸವನ್ನೇ ವಾಸಸ್ಥಾನವನ್ನಾಗಿ ಮಾಡಿಕೊಂಡಿರುವ ಪಾರ್ವತೀಪತಿಯೇ, ನಿನಗೆ ಜಯವಾಗಲಿ. ಗಂಗಾನದಿಯಿಂದ ಅಲಂಕೃತನಾಗಿ ದೇವತೆಗಳಿಂದ ಅರ್ಚಿತನಾಗಿರುವ ಮಹಾದೇವನೇ, ನೀನು ಜಯಶೀಲನಾಗು. ॥೩-೪॥

ಮನ್ಮಥನನ್ನು ಸುಟ್ಟು ಬೂದಿಮಾಡಿದವನೂ, ಅರ್ಧನಾರೀಶ್ವರನೂ, ಚಂದ್ರಶೇಖರನೂ, ಫಾಲಾಕ್ಷನೂ ಆದ ಮಹಾದೇವನೇ, ನೀನು ಸರ್ವೋತ್ಕೃಷ್ಟನಾಗಿರು. ರುದ್ರನೇ, ಮಹಾದೇವನೇ, ಭದ್ರಪೀಠಾಲಂಕೃತನೇ, ನಾಗಾಭರಣಭೂಷಿತನೇ, ಯೋಗೀಂದ್ರವಂದಿತನೇ, ನೀನು ಜಯಶಾಲಿಯಾಗು. ಗಂಗಾನದಿಯನ್ನು ಶಿರದಲ್ಲಿ ಧರಿಸಿ, ಸರ್ವರಿಗೂ ಅಧಿಪತಿಯಾಗಿ ಸ್ವರ್ಗಾಪವರ್ಗಗಳನ್ನು ಕೊಡುವ ಮಹಾದೇವನೇ, ಭಕ್ತರ ರಾಗಾದಿ ರೋಗಗಳನ್ನು ನೀನು ನಾಶಮಾಡುವೆ. ನೀನು ಲೋಕಸುಂದರಿಯಾದ ಪಾರ್ವತಿಗೆ ಅತ್ಯಂತ ಪ್ರಿಯನೆನಿಸಿರುವೆ. ನಿನಗೆ ಜಯವಾಗಲಿ. ॥೫-೬-೭॥

ಪ್ರಪಂಚವನ್ನೇ ಬೆಳಗಿಸುವವನೇ, ಪ್ರಪಂಚವನ್ನು ನಿಯಮಿಸುವವನೇ, ಲೋಕಕ್ಕೆ ಅಧಿಪತಿಯೆನಿಸಿರುವ ಸ್ವಾಮಿಯೇ, ನೀನು ಲೋಕಾಧಿಕನಲ್ಲವೆ! ನಿನ್ನ

ಜಯ ದಿವ್ಯಪಟೀರಾಂಗ ಜಯ ಹವ್ಯಪ್ರಿಯಾವ್ಯಯ ।
ಜಯ ಶಂಭೋ ವೃಷಾರೂಢ ಜಯ ಕುಂಭೋದ್ಭವಸ್ತುತ ॥೯॥

ಜಯ ಶಕ್ತಿತ್ರಯಾರಾಧ್ಯ ಜಯ ಮುಕ್ತಿಸುಖಪ್ರದ ।
ಜಯ ಭಕ್ತಪರಾಧೀನ ಜಯ ಮುಕ್ತಜನೇಡಿತ ॥೧೦॥

ಜಯ ಪ್ರಣತಮಂದಾರ ಜಯ ಪ್ರಣವವಿಗ್ರಹ ।
ಜಯ ಬದ್ಧಜಟಾಜೂಟ ಜಯ ಶುದ್ಧವರಾಕೃತೇ ॥೧೧॥

ಜಯ ಪುಷ್ಕರಪತ್ರಾಕ್ಷ ಜಯ ಪುಷ್ಕರಮೂರ್ಧಜ ।
ಜಯ ದುಷ್ಕರ್ಮನಿರ್ಮೂಲ ಜಯ ನಿಷ್ಕಲ್ಮಷವ್ರತ ॥೧೨॥

ಜಯ ವಿತ್ತೇಶವರದ ಜಯ ಮತ್ತೇಂದ್ರಸೂದನ ।
ಜಯ ಕೋಟ್ಯರ್ಕಸಂಕಾಶ ಜಯ ನಾಟ್ಯವಿಶಾರದ ॥೧೩॥

---

ದೇಹವೆಲ್ಲವೂ ದಿವ್ಯಗಂಧದಿಂದ ಲಿಪ್ತವಾಗಿರುವುದಲ್ಲವೆ! ಯಾಗದಲ್ಲಿ ಹವಿಸ್ಸಿನಿಂದ ತೃಪ್ತಿಹೊಂದುವ ಮಹಾಮಹಿಮನೆ, ನೀನು ನಾಶರಹಿತನಾಗಿರುವೆ. ವೃಷಭಾರೂಢನೂ, ಅಗಸ್ತ್ಯಮುನಿಯಿಂದ ಸ್ತುತನೂ ಆಗಿರುವ ಶಂಕರನೇ, ನಿನಗೆ ಜಯವಾಗಲಿ. ||೮-೯||

ಶಕ್ತಿತ್ರಯಗಳಿಂದ ಆರಾಧಿತನಾಗಿ, ಮುಕ್ತಿಸುಖವನ್ನು ಕರುಣಿಸುವ ಸ್ವಾಮಿಯೇ, ನೀನು ಭಕ್ತಪರಾಧೀನನು. ಮುಕ್ತರಾಗುವ ಜನರಿಂದ ಪೂಜಿತನಾದವನು. ನಮಸ್ಕರಿಸಿದವರಿಗೆ ಮಂದಾರವೃಕ್ಷದಂತಿರುವವನೂ, ಪ್ರಣವಸ್ವರೂಪಿಯೂ, ಜಟಾಜೂಟದಿಂದ ಅಲಂಕೃತನಾದವನೂ, ಶುದ್ಧಸ್ವರೂಪಿಯೂ ಆದ ಮಹಾದೇವನೇ, ನೀನು ಕಮಲಪತ್ರದಂತೆ ವಿಶಾಲವಾದ ನೇತ್ರವುಳ್ಳವನು. ವ್ಯೋಮಕೇಶನು. ದುಷ್ಕರ್ಮಗಳನ್ನು ನಿರ್ಮೂಲಗೊಳಿಸಿ, ಶುದ್ಧವಾದ ವ್ರತಗಳುಳ್ಳವನಾಗಿ ವಿರಾಜಿಸುವೆ. ಇಂತಹ ಮಹಾದೇವನೇ, ನೀನು ಸರ್ವೋತ್ಕೃಷ್ಟನೆನಿಸಿ ವಿಜಯಿಯಾಗು. ||೧೦-೧೧-೧೨||

ಕುಬೇರನಿಗೆ ವರವನ್ನು ಕೊಟ್ಟವನೂ, ಅಹಂಕಾರಿಯಾದ ಇಂದ್ರನನ್ನು ಮುರಿದವನೂ, ಕೋಟಿಸೂರ್ಯರಂತೆ ಶೋಭಿಸುವವನೂ, ನಾಟ್ಯವಿಶಾರದನೂ ಆದ ಮಹೇಶ್ವರನೇ, ನೀನು ಬ್ರಹ್ಮಾಂಡವನ್ನೇ ಕಲ್ಪಿಸಿರುವೆ. ಕಲ್ಪಾಂತ್ಯದಲ್ಲಿ ಭೈರವ

ಜಯ ಕಲ್ಪಿತನಿಧ್ಯಂಡ ಜಯ ಕಲ್ಪಾಂತಭೈರವ ।
ಜಯ ತೇಜೋಮಯಾಕಾರ ಜಯ ವಾಜೀಕೃತಾಗಮ ॥೧೪॥

ಜಯ ಕ್ಷೋಣೀರಥಾರೂಢ ಜಯ ವಾಣೀಪಸಾರಥೇ ।
ಜಯ ಪರ್ವತಕೋದಂಡ ಜಯ ಮೌರ್ವೀಕೃತೋರಗ ॥೧೫॥

ಜಯ ಪಾವಕಕೃಷ್ಣಾಸ್ತ್ರ ಜಯ ಕೇಶವವರ್ಧನ ।
ಜಯ ತ್ರಿಪುಂಡ್ರನಿಟಿಲ ಜಯ ತ್ರಿಪುರಶಾಸನ ॥೧೬॥

ಜಯ ಪಂಚಾಕ್ಷರೀರೂಪ ಜಯ ಪಂಚಾನನೋಜ್ಜ್ವಲ ।
ಜಯ ಪಂಚತ್ವರಹಿತ ಜಯ ಪಂಚದಶಾಂಬಕ ॥೧೭॥

ಜಯ ಪಾರ್ಶ್ವಸ್ಥಿತಸ್ಕಂದ ಜಯ ಶಾಶ್ವತಭೈರವ ।
ಜಯ ವೇದಶಿರೋವೇದ್ಯ ಜಯ ನಾದಪರಾಯಣ ॥೧೮॥

---

ನಂತಾಗಿ ಪ್ರಪಂಚವನ್ನೇ ಮುಳುಗಿಸುವೆ. ತೇಜೋಮಯವಾದ ಆಕಾರವುಳ್ಳವನು ನೀನು. ವೇದಗಳನ್ನೇ ಕುದುರೆಗಳನ್ನಾಗಿ ಮಾಡಿಕೊಂಡವನು ನೀನು. ತ್ರಿಪುರಾಸುರ ದಹನಕಾಲದಲ್ಲಿ ಭೂಮಿಯೇ ನಿನ್ನ ರಥವಾಯಿತು. ಬ್ರಹ್ಮನು ಸಾರಥಿಯಾದನು. ಮೇರುಪರ್ವತವೇ ಬಿಲ್ಲಾಯಿತು, ಆದಿಶೇಷನೇ ಮೌರ್ವಿಯಾದನು. ಹೀಗಿದ್ದು ಎಲ್ಲರೂ ನಿನ್ನನ್ನು ಸೇವಿಸಿದರಲ್ಲವೆ! ಇಂತಹ ಮಹೇಶ್ವರನೇ, ನಿನಗೆ ಜಯವಾಗಲಿ. ॥೧೩-೧೪-೧೫॥

ಅಗ್ನಿಯನ್ನೇ ಅಸ್ತ್ರವನ್ನಾಗಿ ಮಾಡಿಕೊಂಡಿರುವವನೇ, ಕೇಶವನ್ನು ವ್ಯೋಮರೂಪದಲ್ಲಿ ಬೆಳೆಸಿದವನೇ, ಭಸ್ಮತ್ರಿಪುಂಡ್ರವನ್ನು ಹಣೆಯಲ್ಲಿ ಧರಿಸಿದವನೇ, ತ್ರಿಪುರಗಳನ್ನು ನಾಶಗೊಳಿಸಿದವನೇ, ನೀನು ಪಂಚಾಕ್ಷರಸ್ವರೂಪನೆನಿಸಿರುವೆ. ಐದುಮುಖಗಳಿಂದಲೂ ಶೋಭಿಸುವವನು ನೀನು. ನಿನಗೆ ನಾಶವೆಂಬುದೇ ತೋರುವುದಿಲ್ಲ. ನಿನಗೆ ಹದಿನೈದುಕಣ್ಣುಗಳಿರುವುವು ಅಲ್ಲವೆ! ಇಂತಹ ಮಹಾದೇವನೇ, ನಿನಗೆ ವಂದನೆಗಳು. ನೀನು ಜಯಶೀಲನಾಗಿರು. ॥೧೬-೧೭॥

ಸ್ಕಂದಸ್ವಾಮಿಯನ್ನು ಪಾರ್ಶ್ವದಲ್ಲಿ ಹೊಂದಿರುವವನೂ, ಪ್ರಳಯಭೈರವನೆನಿಸಿದವನೂ, ಉಪನಿಷತ್ಪ್ರತಿಪಾದ್ಯನೂ, ನಾದಬಿಂದುರೂಪನೂ, ಆದ ಮಹಾದೇವನೇ, ದಕ್ಷಿಣಾಮೂರ್ತಿಸ್ವರೂಪನು ನೀನು. ಲಕ್ಷ್ಮೀಪ್ರದನು ನೀನು. ಅಪಸ್ಮಾ

ಜಯ ಶ್ರೀ ದಕ್ಷಿಣಾಮೂರ್ತೇ ಜಯ ಶ್ರೀದ ಮಹೇಶ್ವರ ।
ಜಯಾಪಸ್ಮಾರನ್ಯಸ್ತಾಂಘ್ರೇ ಜಯ ವಿಸ್ಮಯವಿಕ್ರಮ ॥೧೯॥

ಜಯ ವೀರಾಸನಾಸೀನ ಜಯ ಘೋರನಿವಾರಣ ।
ಜಯ ಪುಸ್ತಕಹಸ್ತಾಬ್ಜ ಜಯ ಧ್ವಸ್ತಜಲಂಧರ ॥೨೦॥

ಜಯ ನಿಸ್ತುಲಲಾವಣ್ಯ ಜಯ ವಾಸ್ತುಷು ಪೂಜಿತ ।
ಜಯ ರುದ್ರಾಕ್ಷಮಾಲಾಢ್ಯ ಜಯ ಮುದ್ರೋಜ್ಜ್ವಲತ್ಕರ ॥೨೧॥

ಜಯ ಕ್ಷುದ್ರಜನಧ್ವಂಸಿನ್ ಜಯ ರುದ್ರಗಣಾರ್ಚಿತ ।
ಜಯ ಶೌರೀಕೃತಸ್ತೋತ್ರ ಜಯ ದೂರೀಕೃತಾಮಯ ॥೨೨॥

ಜಯ ಕೇಶವ ವಂದ್ಯಾಂಘ್ರೇ ಜಯ ದೇಶಿಕಪುಂಗವ ।
ಜಯ ಮಾಯಾದಿರಹಿತ ಜಯ ಧ್ಯೇಯಾವನೀಸುರ ॥೨೩॥

ಜಯ ವರ್ಜಿತಸರ್ವಾಶ ಜಯ ಭರ್ಜಿತಮತ್ಸರ ।
ಜಯ ನಿರ್ಜಿತದೇಹೇಶ ಜಯ ಸರ್ಜಿತದಿಙ್ಮುಖ ॥೨೪॥

---

ರಾದಿಗಳನ್ನು ನಾಶಗೊಳಿಸಿ, ವಿಸ್ಮಯವುಂಟುಮಾಡುವ ಪರಾಕ್ರಮವುಳ್ಳವನು ನೀನು. ಇಂತಹ ನಿನಗೆ ಜಯವು ಲಭಿಸಲಿ. ॥೧೮-೧೯॥

ವೀರಾಸನದಲ್ಲಿ ಮಂಡಿತನಾಗಿರುವವನೇ, ಶಾಂತಸ್ವರೂಪನೇ, ಪುಸ್ತಕವನ್ನು ಕರಕಮಲದಲ್ಲಿ ಧರಿಸಿರುವವನೇ, ಜಲಂಧರನೆಂಬ ರಾಕ್ಷಸನನ್ನು ನಾಶಗೊಳಿಸಿದವನೇ, ನೀನು ಅಪರಿಮಿತ ಸೌಂದರ್ಯಶಾಲಿಯು. ವಾಸ್ತುಮಂಡಲದಲ್ಲಿ ಮುಖ್ಯನಾಗಿ ಪೂಜಿತನಾದವನು. ರುದ್ರಾಕ್ಷಮಾಲೆಯಿಂದ ಅಲಂಕೃತನಾಗಿ, ಜ್ಞಾನಮುದ್ರೆಯಿಂದ ಕೂಡಿದವನು. ಇಂತಹ ನಿನಗೆ ವಂದನೆಗಳು. ॥೨೦-೨೧॥

ಕ್ಷುದ್ರಜನರನ್ನು ನಾಶಗೊಳಿಸಿದವನೇ, ರುದ್ರಗಣಗಳಿಂದ ಅರ್ಚಿತನಾದವನೇ, ವಿಷ್ಣುವಿನಿಂದ ಸ್ತುತ್ಯನಾದವನೇ, ಸಮಸ್ತ ವ್ಯಾಧಿಗಳನ್ನೂ ದೂರಮಾಡಿದವನೇ, ಕೇಶವನಿಂದ ಪೂಜಿಸಲ್ಪಟ್ಟ ಪಾದಪದ್ಮವುಳ್ಳವನೇ, ನೀನು ಪೂಜ್ಯರಿಗೆ ಪೂಜ್ಯನೆನಿಸಿದವನು. ಮಾಯಾವಿದೂರನು. ಬ್ರಾಹ್ಮಣರಿಗೆ ಧ್ಯೇಯನಾಗಿರುವವನು. ಇಂತಹ ನೀನು ಜಯಶಾಲಿಯಾಗು. ॥೨೨-೨೩॥

ಸಮಸ್ತ ದಿಕ್ಕುಗಳಿಗೂ ದೂರನಾಗಿರುವವನೇ, ಮಾತ್ಸರ್ಯವನ್ನು ದೂರ

ಜಯ ನಿಂದಿತಕಾಂತಾಶ ಜಯ ನಂದಿತಸಜ್ಜನ ।
ಜಯ ವಂದಿತದೇವೌಘ ಜಯ ನಂದಿಮುಖಸ್ತುತ ॥೨೫॥

ಜಯ ಬೋಧಿತವಿಜ್ಞಾನ ಜಯ ಮೋದಿತತಾಪಸ ।
ಜಯ ಭೇದಿತ ಸಂಸಾರ ಜಯ ಸ್ವಾದಿಗುಣಾತ್ಮಕ ॥೨೬॥

ಜಯಾಂತಕವಧೇ ಭೀಮ ಜಯಾಂಧಕವಿನಾಶನ ।
ಜಯ ವಾಚಾಮನೋಗಮ್ಯ ಜಯ ವಾಚಸ್ಪತೇಡಿತ ॥೨೭॥

ಜಯ ಸದ್ಭಸ್ಮಲಿಪ್ತಾಂಗ ಜಯ ಸ್ವದ್ಭಕ್ತವತ್ಸಲ ।
ಜಯ ದಾರಿದ್ರ್ಯಮೂಲಘ್ನ ಜಯ ದಾರಿತದುರ್ಜನ ॥೨೮॥

ಜಯ ಧರ್ಮಾದಿಫಲದ ಜಯ ನಿರ್ಮಾಯಸೌಖ್ಯದ ।
ಜಯ ಚಂಡೀಶವರದ ಜಯ ಚಂಡಪರಾಕ್ರಮ ॥೨೯॥

---

ಮಾಡಿರುವವನೇ, ದೇಹೇಂದ್ರಿಯಗಳನ್ನು ಗೆದ್ದಿರುವವನೇ, ದಿಗಂತಗಳವರೆಗೂ ವ್ಯಾಪಿಸಿರುವವನೇ, ನೀನು ಸ್ತ್ರೀವ್ಯಾಮೋಹದಿಂದ ದೂರನಾಗಿರುವೆ. ಸತ್ಪುರುಷರನ್ನು ಸಂತೋಷಗೊಳಿಸುವೆ. ದೇವತೆಗಳ ಗುಂಪಿನಿಂದ ವಂದಿತನಾಗಿರುವೆ. ನಂದೀಶ್ವರನೇ ಮೊದಲಾದವರಿಂದ ಸ್ತುತ್ಯನಾಗಿರುವೆ. ಮಹೇಶ್ವರನೇ, ನಿನಗೆ ಜಯವಾಗಲಿ. ॥೨೪-೨೫॥

ಸಮಸ್ತರಿಗೂ ಜ್ಞಾನಪ್ರದನಾಗಿ, ಋಷಿವರ್ಗವನ್ನೆಲ್ಲಾ ಆನಂದಗೊಳಿಸಿರುವವನೇ, ನೀನು ಸಂಸಾರದುಃಖದಿಂದ ದೂರನಾಗಿರುವೆ. ಸಮಸ್ತ ಸದ್ಗುಣಮೂರ್ತಿಯಾಗಿರುವೆ. ಯಮನಿಗೂ ಯಮನಂತಿರುವೆ. ಅಂಧಕಾಸುರನನ್ನು ನಾಶಗೊಳಿಸಿರುವೆ. ಮಾತಿಗೂ, ಮನಸ್ಸಿಗೂ ನೀನು ದೊರೆಯದವನು. ಬೃಹಸ್ಪತಿಯಿಂದ ಪೂಜಿತವಾದವನು. ಇಂತಹ ನಿನಗೆ ಜಯವಿರಲಿ. ॥೨೬-೨೭॥

ಭಸ್ಮಲಿಪ್ತಗಾತ್ರನೂ, ಭಕ್ತವತ್ಸಲನೂ, ದಾರಿದ್ರ್ಯವನ್ನು ಪೂರ್ಣವಾಗಿ ನಾಶಗೊಳಿಸುವವನೂ, ದುರ್ಜನರನ್ನು ನಾಶಗೈದವನೂ ಆದ ಮಹೇಶ್ವರನೇ, ನೀನು ಧರ್ಮಾರ್ಥಕಾಮಮೋಕ್ಷರೂಪವಾದ ಚತುರ್ವಿಧಫಲಗಳನ್ನೂ ಕೊಡುವೆ. ಮಾಯಾ ವಿರಹಿತವಾದ ಸೌಖ್ಯವನ್ನು ಕೊಡುವುದರಲ್ಲಿ ನೀನೇ ಸಮರ್ಥನು. ಚಂಡೀಶ್ವರನಿಗೆ ವರವಿತ್ತ ಚಂಡಪರಾಕ್ರಮಿಯು ನೀನು. ಭೃಂಗಿಯ ದಿವ್ಯಹೃದಯದಲ್ಲಿ ನೆಲಸಿರು

ಜಯ ಭೃಂಗೀಮನೋವಾಸ ಜಯ ಸಂಗೀತಪಂಡಿತ ।
ಜಯ ವರ್ಣಿತಚಾರಿತ್ರ ಜಯ ಕರ್ಣಾರಿಪೂಜಿತ ॥೩೦॥

ಜಯ ಸಾಂಬ ಕೃಪಾಸಿಂಧೋ ಜಯ ಜಾಂಬೂನದಾಂಬರ ।
ಜಯ ಕಂಸಘ್ನದುರ್ದರ್ಶ ಜಯ ಹಂಸಸ್ಥದುರ್ಲಭ ॥೩೧॥

ಜಯ ಭೀಮಾಂಗಶರಭ ಜಯ ಸಾಮಾಂಗಪಾರಗ ।
ಜಯ ಕೈರಾತಶಾರೀರ ಜಯ ವೈರಾಗ್ಯಸಿದ್ಧಿದ ॥೩೨॥

ಜಯ ದಾವಾನಲಾಕಾರ ಜಯ ದೇವಾರಿಮರ್ದನ ।
ಜಯ ಕಾಲೀಕೃತೋಲ್ಲಾಸ ಜಯ ಕೇಲೀವಿಲಾಸಗ ॥೩೩॥

ಜಯ ದಕ್ಷಮುಖಚ್ಛೇದ ಜಯ ನಕ್ಷತ್ರಹಾರಕ ।
ಜಯ ಪುಷ್ಪರಥಧ್ವಂಸಿನ್ ಜಯ ಭೇಷಜಸತ್ತಮ ॥೩೪॥

---

ವವನು ನೀನು. ಸಂಗೀತದಲ್ಲಿ ಪಂಡಿತನೆನಿಸಿದವನು ನೀನು. ಸಮಸ್ತ ನಡೆನುಡಿಗಳಲ್ಲಿಯೂ ಪ್ರಶಂಸಿತನಾಗಿರುವವನು ನೀನು. ಕರ್ಣನಿಗೆ ಶತ್ರುವಾದ ಅರ್ಜುನನಿಂದ ವಿಶೇಷವಾಗಿ ಪೂಜಿತನಾದವನು ನೀನು. ಇಂತಹ ನಿನಗೆ ಸರ್ವತ್ರ ವಿಜಯವಿರಲಿ. ॥೨೮-೨೯-೩೦॥

ಪಾರ್ವತೀಪತಿಯಾದ ಕೃಪಾಸಿಂಧುವೇ, ಸುವರ್ಣಮಯವಾದ ವಸ್ತ್ರವನ್ನು ಧರಿಸಿರುವವನೇ, ಕಂಸಾಸುರನನ್ನು ಕೊಂದ ಕೃಷ್ಣನಿಗೂ ಭಯಂಕರನಾಗಿ ಕಾಣುವವನೇ, ಹಂಸಾರೂಢನಾಗಿರುವ ಬ್ರಹ್ಮನಿಗೂ ದುರ್ಲಭನಾದವನೇ, ನೀನು ಭಯಂಕರವಾದ ಶರಭಾವತಾರಮಾಡಿದವನು. ಸಾಮವೇದಗಳಲ್ಲಿ ಪಾರಂಗತನಾದವನು. ಭಕ್ತರನ್ನು ಉದ್ಧರಿಸಲು ಕಿರಾತಶರೀರವನ್ನು ಧರಿಸಿದವನು. ವೈರಾಗ್ಯಸಿದ್ಧಿಯನ್ನು ಪಡೆದವನೇ ನೀನು. ಇಂತಹ ನಿನಗೆ ಎಲ್ಲೆಲ್ಲೂ ಜಯವು ಸಿದ್ಧಿಸಲಿ. ॥೩೧-೩೨॥

ಕಾಡುಕಿಚ್ಚಿನ ಆಕಾರದವನೇ, ರಾಕ್ಷಸನಾಶಕನೇ, ಕಾಲೀದೇವಿಯ ಉಲ್ಲಾಸಕ್ಕೆ ಮೂಲಕಾರಣನಾದವನೇ, ಕ್ರೀಡಾವಿಲಾಸಪ್ರಿಯನೇ, ನೀನು ದಕ್ಷಯಜ್ಞವನ್ನು ನಾಶಮಾಡಿದವನು, ನಕ್ಷತ್ರಮಂಡಲವನ್ನೇ ಹಾರವನ್ನಾಗಿ ಮಾಡಿಕೊಂಡಿರುವವನು, ಪುಷ್ಪರಥನಾದ ಮನ್ಮಥನನ್ನು ನಾಶಗೊಳಿಸಿದವನು. ವೈದ್ಯರಲ್ಲಿ ಶ್ರೇಷ್ಠನೆನಿಸಿದವನು. ॥೩೩-೩೪॥

ಜಯ ಕಾಶಸುಮಾಕಾರ ಜಯ ನಾಶಭಗಾಂಬಕ ।
ಜಯ ಶುದ್ಧಾಂತರಂಗಸ್ಥ ಜಯ ಮಧ್ಯಾಂತವರ್ಜಿತ ॥೩೫॥

ಜಯ ಪ್ರಮಥಯೂಥೇಶ ಜಯ ಶ್ರಮವಿನಾಶನ ।
ಜಯ ಪ್ರಧಾನಪುರುಷ ಜಯ ವೇಧಾಸ್ಯನಾಶಕ ॥೩೬॥

ಜಯ ಮೌನವ್ರತಪರ ಜಯ ದೀನಜನಾವನ ।
ಜಯ ದೇವರ್ಷಿಸಂಸ್ತುತ್ಯ ಜಯ ದೇವಶಿಖಾಮಣೇ ॥೩೭॥

ಜಯ ನಾರದಗಾನೇಡ್ಯ ಜಯ ನೀರದಶೇಖರ ।
ಜಯ ದಾರುವನಾಂತಸ್ಥ ಜಯ ಚಾರುಕಲೇವರ ॥೩೮॥

ಜಯ ಭಿಕ್ಷಾಟನರತ ಜಯ ಯಕ್ಷಾಧಿಪಾರ್ಚಿತ
ಜಯ ವೀತರಿಪುಸ್ತೋಮ ಜಯ ಭೂತಪತೇ ಮೃಡ ॥೩೯॥

ಜಯ ಸರ್ವೋತ್ತಮಸ್ಥಾನ ಜಯ ಸರ್ವೋಪಕಾರಕ ।
ಜಯ ಶ್ರೀಕಂಠಭಗವನ್ ಜಯ ವೈಕುಂಠಚಕ್ರದ ॥೪೦॥

---

ಕಾಶಕುಸುಮದಂತಿರುವ ಆಕಾರವುಳ್ಳವನೆ, ಭಗದೇವತೆಯ ನೇತ್ರಗಳನ್ನು ನಾಶಗೈದವನೇ, ಶುದ್ಧಾಂತರಂಗವುಳ್ಳವನೂ, ಆದಿಮಧ್ಯಾಂತ್ಯವರ್ಜಿತನೂ ಆದ ಮಹೇಶ್ವರನೇ, ನೀನು ಪ್ರಮಥಗಣಗಳಿಗೆ ಅಧಿಪತಿಯು. ಭಕ್ತರ ಶ್ರಮವನ್ನೆಲ್ಲಾ ಪರಿಹರಿಸುವವನು. ಪ್ರಕೃತಿಪುರುಷಾತ್ಮಕನು. ಬ್ರಹ್ಮನ ಕತ್ತನ್ನು ಮುರಿದವನು. ಇಂತಹ ನಿನಗೆ ಸದಾ ದಿಗ್ವಿಜಯವಾಗಲಿ. ॥೩೫-೩೬॥

ಮೌನವ್ರತಧಾರಿಯೇ, ದೀನಜನರಕ್ಷಕನೆ, ದೇವರ್ಷಿಗಳಿಂದ ಸ್ತುತ್ಯನಾದವನೇ ದೇವಶ್ರೇಷ್ಠನೇ, ನೀನು ನಾರದನಿಂದ ಹೊಗಳಲ್ಪಟ್ಟವನು. ಗಂಗಾಪ್ರವಾಹವನ್ನೇ ಶಿರದಲ್ಲಿಟ್ಟಿರುವವನು. ದಾರುವನದ ಮಧ್ಯದಲ್ಲಿ ಸುಂದರವಾದ ದೇಹವನ್ನು ಧರಿಸಿದವನು. ಇಂತಹ ನಿನಗೆ ಸರ್ವತ್ರ ಜಯವಿರಲಿ. ॥೩೭-೩೮॥

ಭಿಕ್ಷಾಟನೆಯಲ್ಲಿ ಆಸಕ್ತನಾದವನೇ, ಕುಬೇರನಿಂದ ಪೂಜಿತನಾದವನೇ, ಶತ್ರುಸಮೂಹವನ್ನು ನಾಶಗೊಳಿಸಿದವನೇ, ಭೂತಪತಿಯೆನಿಸಿ ಸರ್ವರಿಗೂ ಸುಖಪ್ರದನಾದವನೇ, ನೀನು ಸರ್ವೋತ್ತಮನು. ಸರ್ವರಿಗೂ ಉಪಕಾರಮಾಡುವ

ಜಯ ಹೃತ್ಪದ್ಮಮಧ್ಯಸ್ಥ ಜಯ ಸತ್ಪಥಸಂಸ್ಥಿತ ।
ಜಯ ಮಂದರಶೈಲಸ್ಥ ಜಯ ಸುಂದರ ಸಾಂಬಿಕ ॥೪೧॥

ಜಯ ಮೇರುಶಿರೋವಾಸ ಜಯ ಹಾರೀಕೃತೋರಗ ।
ಜಯ ರಾಮಕೃತಾಘಘ್ನ ಜಯ ಹೇಮಸಭಾಪತೇ ॥೪೨॥

ಜಯ ಸ್ಥಾಣೋ ಪಶುಪತೇ ಜಯ ವೀಣಾಲಸತ್ಕರ ।
ಜಯ ವ್ಯಾಘ್ರಾಜಿನಧರ ಜಯ ವ್ಯಾಘ್ರಾಂಘ್ರಿಸೇವಿತ ॥೪೩॥

ಜಯ ಸಪ್ತರ್ಷಿವಿನುತ ಜಯ ದೀಪ್ತಶಿರೋರುಹ ।
ಜಯ ವಿಪ್ರವರಾಕಾರ ಜಯ ಕ್ಷಿಪ್ರವರಪ್ರದ ॥೪೪॥

ಜಯ ಕರ್ಮಾದಿದೂರಸ್ಥ ಜಯ ಧರ್ಮಭೃತಾಂ ವರ ।
ಜಯ ಸದ್ಗುಣಸಂದೋಹ ಜಯ ನಿರ್ಗುಣವಲ್ಲಭ ॥೪೫॥

---

ಸ್ವಭಾವದವನು. ಶ್ರೀಕಂಠನೇ, ಭಗವಂತನೇ, ವಿಷ್ಣುವಿಗೆ ವೈಕುಂಠವನ್ನೂ ಚಕ್ರವನ್ನೂ ದಯಪಾಲಿಸಿದವನೇ, ನಿನಗೆ ಜಯವಿರಲಿ. ॥೩೯-೪೦॥

ಸರ್ವದ ಹೃದಯಕಮಲದಲ್ಲಿಯೂ ವಾಸಿಸುವವನೇ, ಮೋಕ್ಷಪದದಲ್ಲಿ ಸದಾ ನೆಲಸಿರುವವನೇ, ಮಂದರಪರ್ವತವಾಸಿಯೇ, ಸುಂದರಳಾದ ಅಂಬಿಕೆಯುಳ್ಳವನೇ, ನೀನು ಸದಾ ಮೇರುಶಿಖರದಲ್ಲಿ ವಾಸಮಾಡುತ್ತಿರುವೆ. ಸರ್ಪವನ್ನೇ ಹಾರವನ್ನಾಗಿ ಮಾಡಿಕೊಂಡಿರುವೆ. ಪರಶುರಾಮನಿಗೆ ಬಂದ ಸಮಸ್ತ ಪಾಪರಾಶಿಯನ್ನೂ ನಿರ್ಮೂಲಗೊಳಿಸಿದೆ. ಸುವರ್ಣಸಭೆಗೆ ಅಧಿಪತಿಯಾಗಿರುವವನು. ಇಂತಹ ನಿನಗೆ ಸದಾ ವಂದನೆಗಳು. ನೀನು ಜಯಶಾಲಿಯಾಗು. ॥೪೧-೪೨॥

ಸ್ಥಾಣುರೂಪಿಯಾದ ಪಶುಪತಿಯೇ, ನೀನು ವೀಣಾಪಾಣಿಯು. ವ್ಯಾಘ್ರಚರ್ಮಾಂಬರಧಾರಿಯು. ವ್ಯಾಘ್ರಪಾದ ಮಹರ್ಷಿಯಿಂದ ಸೇವಿತನಾದವನು. ಸಪ್ತರ್ಷಿಗಳಿಂದ ಪೂಜಿತನಾದವನು. ನಿನ್ನ ಶಿರೋರುಹವೆಲ್ಲವೂ ಅತ್ಯಂತ ಪ್ರಕಾಶಮಾನವಾಗಿರುವುದು. ಬ್ರಾಹ್ಮಣಾಕಾರದಲ್ಲಿದ್ದು ಸಮಸ್ತ ಭಕ್ತರಿಗೂ ಶೀಘ್ರವಾಗಿ ವರವನ್ನು ದಯಪಾಲಿಸುವೆ. ಇಂತಹ ನೀನು ಸರ್ವತ್ರ ವಿಜಯಿಯಾಗು.॥೪೩-೪೪॥

ಕರ್ಮಾದಿಗಳಿಗೆ ದೂರನಾದವನೇ, ಧರ್ಮಿಷ್ಠರಲ್ಲಿ ಅಗ್ರಗಣ್ಯನೇ, ಸದ್ಗುಣಸಮೂಹದಿಂದ ಕೂಡಿದವನೇ, ಸ್ವಭಾವವಾಗಿ ನಿರ್ಗುಣನಾಗಿರುವವನೇ, ನಿನಗೆ

ಜಯ ನಾಮಾಂಗರಹಿತ ಜಯ ಧಾಮಾಂಗದಾಯಕ ।
ಜಯ ಕ್ಷಯಕರೇಡಜಾಂಡ ಜಯ ಧ್ಯೇಯಮಹಾಮತೇ ॥೪೬॥

ಜಯ ಜನ್ಮಜರಾಹೀನ ಜಯ ಸನ್ಮನಸಂಸ್ಥಿತ ।
ಜಯ ತ್ರಿಲಿಂಗಹೀನಾಂಗ ಜಯ ಶ್ರೀಲಿಂಗಪೂಜಿತ ॥೪೭॥

ಜಯ ಟಂಕಗದಾಹಸ್ತ ಜಯ ಶಂಕರಧೂರ್ಜಟೇ ।
ಜಯ ಲಿಂಗಶರೀರಘ್ನ ಜಯ ಸಂಗರಕೋವಿದ ॥೪೮॥

ಜಯ ತಾಪತ್ರಯಚ್ಛೇದ ಜಯರೂಪತ್ರಯಾತ್ಮಕ ।
ಜಯ ದಾತೃತ್ವನಿಪುಣ ಜಯ ಮಾತೃವದಾಕೃತೇ ॥೪೯॥

ಜಯ ಮಂದಾರ ಸಂಭೂಷ ಜಯ ವಂದಾರುವಂದಿತ ।
ಜಯ ವಾಣೀಕೃತಸ್ತೋತ್ರ ಜಯ ಮಾಣಿಕ್ಯಕುಂಡಲ ॥೫೦॥

---

ಹೆಸರು, ಕುಲಗೋತ್ರಗಳಾವುವೂ ಇಲ್ಲ. ಜೀವನಸೌಖ್ಯವನ್ನು ಕರುಣಿಸುವೆ. ಕ್ಷೀಣಿಸಿ ಹೋಗಿದ್ದ ಚಂದ್ರನನ್ನು ಉದ್ಧರಿಸಿದವನು ನೀನು. ಧ್ಯಾನವಿಷಯನಾದ ಪ್ರಾಜ್ಞನು ನೀನು. ನಿನಗೆ ಸದಾ ಜಯವಿರಲಿ. ||೪೫-೪೬||

ಜನ್ಮ, ಮುಪ್ಪು ಇವುಗಳಿಲ್ಲದವನೇ, ಸನ್ಮಾರ್ಗಗಾಮಿಗಳಾದವರಲ್ಲಿ ನೆಲಸಿರುವವನೇ, ಪುಂಸ್ತ್ರೀ, ನಪುಂಸಕಗಳೆಂಬ ಲಿಂಗತ್ರಯಗಳೂ ಇಲ್ಲದವನೇ, ಸಂಪದ್ಯುಕ್ತವಾದ ಶಿವಲಿಂಗದಲ್ಲಿ ಪೂಜಿತನಾದವನೇ, ಟಂಕ, ಗದೆ ಇವುಗಳನ್ನು ಕೈಯ್ಯಲ್ಲಿ ಧರಿಸಿರುವವನೇ, ನೀನು ಭಕ್ತರಿಗೆ ಸುಖಪ್ರದನು. ಪಾಂಚಭೌತಿಕವಾದ ದೇಹವನ್ನು ನಾಶಗೊಳಿಸುವವನು. ಯುದ್ಧದಲ್ಲಿ ನಿಪುಣನೆನಿಸಿದವನು. ಇಂತಹ ನಿನಗೆ ಸರ್ವತ್ರ ವಿಜಯವುಂಟಾಗಲಿ. ||೪೭-೪೮||

ತಾಪತ್ರಯಗಳನ್ನು ನಾಶಗೊಳಿಸುವವನೇ, ರೂಪತ್ರಯಾತ್ಮಕನೇ, ದಾನ ಮಾಡುವ ಸ್ವಭಾವವುಳ್ಳವರಲ್ಲಿ ನಿಪುಣನೆನಿಸಿದವನೇ, ಸಪ್ತಮಾತೃಕಾರೂಪದಲ್ಲಿರುವವನೇ, ನೀನು ಕಲ್ಪವೃಕ್ಷದಿಂದ ಪೂಜಿತನಾಗಿರುವೆ. ದೇವತೆಗಳಿಂದ ಪೂಜಿತನಾದವನೇ, ನೀನು ಸರಸ್ವತಿಯಿಂದಲೂ ಪ್ರಾರ್ಥಿತನಾಗಿರುವೆ. ಮಾಣಿಕ್ಯಮಯವಾದ ಕುಂಡಲಗಳುಳ್ಳವನು. ಇಂತಹ ನೀನು ವಿಜಯಿಯಾಗು. ||೪೯-೫೦||

ಜಯ ಪದ್ಮಾರ್ಚಿತಪದ ಜಯ ಪದ್ಮಾರುಣಪ್ರಭ ।
ಜಯ ಹಂಸಾದ್ಯಸುಖದ ಜಯ ಸಂಸಾರತಾರಕ ॥೫೧॥

ಜಯ ಕಲ್ಯಾಣಪುರುಷ ಜಯ ಕಲ್ಯಾಣಸಂತತ ।
ಜಯ ಕಂದಲಿತಾನಂದ ಜಯ ಕುಂದರದದ್ಯುತೇ ॥೫೨॥

ಜಯ ಮಂದಸ್ಮಿತಮುಖ ಜಯ ಚಂದನಶೀತಲ ।
ಜಯ ವಿಜ್ಞಾನವಾರಾಶೇ ಜಯ ಪ್ರಜ್ಞಾನಕಲ್ಪಕ ॥೫೩॥

ಜಯ ತ್ರಿಕಾಲಕಾಲಾತ್ಮನ್ ಜಯ ತ್ರೈಕಾಲಬುದ್ಧಿದ ।
ಜಯ ಶರ್ವಭವೇಶಾನ ಜಯ ಸರ್ವಜ್ಞಕಾಮದ ॥೫೪॥

ಜಯ ಭರ್ಗ ಮಹಾಬಾಹೋ ಜಯ ದುರ್ಗತಿನಾಶನ ।
ಜಯ ಬ್ರಹ್ಮಜ್ಞಗಿರಿಶ ಜಯ ಸಂಹಾರಕಾರಣ ॥೫೫॥

ಜಯ ಗೋಕ್ಷೀರವರ್ಣಾಂಗ ಜಯ ಸಾಕ್ಷೀಜಗತ್ತ್ರಯ ।
ಜಯ ನಿತ್ಯಾದಿಕಲಿತ ಜಯಭೃತ್ಯಾಮರದ್ರುಮ ॥೫೬॥

---

ಮಹೇಶ್ವರನೇ, ನೀನು ಕಮಲಗಳಿಂದ ಪೂಜಿತವಾದ ಪಾದವುಳ್ಳವನು. ತಾವರೆಯಂತೆ ಕೆಂಪಾದ ಕಾಂತಿಯುಳ್ಳವನು. ಪರಮಹಂಸರೇ ಮೊದಲಾದವರಿಗೆ ಸುಖಪ್ರದನಾದವನು. ಸಂಸಾರವೆಂಬ ಸಮುದ್ರದಿಂದ ಉದ್ಧರಿಸುವವನು. ಕಲ್ಯಾಣ ಪುರುಷನು. ಕಲ್ಯಾಣಪ್ರದನು. ಆನಂದಪ್ರಕಾಶಕನು. ಕುಂದಪುಷ್ಪದಂತೆ ವಿರಾಜಿಸುವ ದಂತಪಂಕ್ತಿಯುಳ್ಳವನು. ನಿನಗೆ ಸದಾ ವಿಜಯವು ಸಂಭವಿಸಲಿ. ॥೫೧-೫೨॥

ಮುಗುಳ್ನಗೆಯಿಂದ ವಿರಾಜಿಸುವ ಮುಖಕಮಲವುಳ್ಳವನೇ, ಚಂದನದಂತೆ ಶೀತಲನಾಗಿರುವವನೇ, ವಿಜ್ಞಾನನಿಧಿಯೇ, ನೀನು ಪ್ರಜ್ಞಾನಸ್ವರೂಪನು. ವರ್ತಮಾನ ಭೂತ ಭವಿಷ್ಯದ್ರೂಪವಾದ ಕಾಲತ್ರಯಾತ್ಮಕನು. ತ್ರಿಕಾಲದಲ್ಲಿಯೂ ಜನರಿಗೆ ಬುದ್ಧಿಯನ್ನು ಕೊಡುವವನು. ಶರ್ವ, ಭವ, ಈಶಾನ ಮುಂತಾದ ನಾಮಾಂತರಗಳನ್ನು ಪಡೆದು ಭಕ್ತರಿಗೆ ಕಾಮ್ಯಾರ್ಥಗಳನ್ನು ಸಲ್ಲಿಸುವವನು ನೀನು. ಇಂತಹ ನಿನಗೆ ವಂದನೆಗಳು. ॥೫೩-೫೪॥

ಮಹಾಬಲಶಾಲಿಯಾದ ಭರ್ಗನೇ, ದಾರಿದ್ರ್ಯನಾಶಕನೇ, ಬ್ರಹ್ಮಜ್ಞಾನಿಯಾದ ಗಿರಿಶನೇ, ಜಗತ್ಸಂಹಾರ ಕಾರಣನೇ, ನೀನು ಹಸುವಿನ ಹಾಲಿನಂತೆ ಶುಭ್ರವಾದ

ಜಯ ರೋಗಾದ್ರಿ ದಂಭೋಳೀ ಜಯಭಾಗೀಕೃತಾಚ್ಯುತ ।
ಜಯಾಗ್ರೇಸರ ವಿಧ್ವಂಸಿನ್ ಜಯಾಗ್ರಹವಿನಾಶಕ ॥೫೭॥

ಜಯ ಶಾಂತಾಸುರಧ್ವಂಸಿನ್ ಜಯ ಕಾಂತಾರಮಧ್ಯಗ ।
ಜಯ ದಂಡಾಸುರಹರ ಜಯ ಮುಂಡಾಸುರಾಂತಕ ॥೫೮॥

ಜಯೇಷ್ಟಿಕಾಸುರಹರ ಜಯ ಇಷ್ಟಿಫಲಪ್ರದ ।
ಜಯ ಕ್ಷೇಮಂಕರ ಶಿವ ಜಯ ಹೇಮಾಂಗದೋಜ್ಜ್ವಲ ॥೫೯॥

ಜಯ ದೇವವಿರಾಡ್ರೂಪ ಜಯ ಕೈವಲ್ಯವಲ್ಲಭ ।
ಜಯ ದೇಹಾತ್ಮಮೋಹಘ್ನ ಜಯ ಮೋಹನವಿಗ್ರಹ ॥೬೦॥

ಜಯ ಕ್ಷರಾಕ್ಷರಾತೀತ ಜಯಘೋರಾರ್ತಿಖಂಡನ ।
ಜಯ ರತ್ನಗೃಹಾವಾಸ ಜಯ ರತ್ನಮಯಾಸನ ॥೬೧॥

---

ದೇಹವುಳ್ಳವನು. ನಿತ್ಯಸಿದ್ಧಬುದ್ಧಸ್ವರೂಪನು. ನೀನು ಸಮಸ್ತ ದೇವತೆಗಳ ಗುಂಪನ್ನೇ ಸೇವಕರನ್ನಾಗಿ ಮಾಡಿಕೊಂಡಿರುವವನು. ಇಂತಹ ನೀನು ಸರ್ವತ್ರ ಜಯಶಾಲಿಯಾಗಿರು. ॥೫೫-೫೬॥

ರೋಗವೆಂಬ ಪರ್ವತಕ್ಕೆ ವಜ್ರಾಯುಧದಂತಿರುವವನೇ, ಅಚ್ಯುತನಿಗೆ ತನ್ನ ತೇಜೋಭಾಗವನ್ನಿತ್ತವನೇ, ವೀರಾಧಿವೀರರಿಗೂ ನಾಶಕನಾಗಿರುವವನೇ, ಕೋಪವಿನಾಶಕನೇ, ನೀನು ಶಾಂತರಾದ ರಾಕ್ಷಸರನ್ನೂ ನಾಶಗೊಳಿಸಿದವನು, ಅರಣ್ಯಮಧ್ಯವರ್ತಿಯು, ದಂಡಾಸುರ, ಮುಂಡಾಸುರ ಮುಂತಾದವರನ್ನೂ ಕೊಂದವನು. ಇಂತಹ ನೀನು ವಿಜಯಿಯಾಗು. ॥೫೭-೫೮॥

ಇಷ್ಟಿಕಾಸುರನನ್ನು ನಾಶಗೈದವನೇ, ಯಜ್ಞಫಲವನ್ನು ಕೊಡುವವನೇ, ಜಗತ್ತಿಗೆ ಕ್ಷೇಮವನ್ನು ಕಲ್ಪಿಸುವವನೇ, ಸುವರ್ಣಮಯವಾದ ತೋಳುಬಳೆಯಿಂದ ಶೋಭಿಸುವವನೇ, ವಿರಾಡ್ರೂಪಧಾರಿಯೇ, ನೀನು ಮುಕ್ತಿಪ್ರದನು. ದೇಹವೇ ಆತ್ಮವೆಂದು ಹೇಳುವ ಚಾರ್ವಾಕಮತಧ್ವಂಸಿಯು. ಸುಂದರವಾದ ದೇಹವುಳ್ಳವನು. ಇಂತಹ ನೀನು ಜಯಶಾಲಿಯಾಗು. ॥೫೯-೬೦॥

ನಾಶ ಮತ್ತು ಉತ್ಪತ್ತಿ ಇವುಗಳನ್ನು ಮೀರಿದವನೇ, ಘೋರವಾದ ಪೀಡಾದಿಗಳನ್ನು ಖಂಡಿಸಿರುವವನೇ, ರತ್ನಗೃಹದಲ್ಲಿ ವಾಸಿಸುವವನೇ, ರತ್ನಮಯವಾದ

ಜಯ ದೌರ್ಭಾಗ್ಯತುಲಾಗ್ನೇ ಜಯ ಗರ್ಭಸ್ಥಿತಾಖಿಲ ।
ಜಯ ಸಂಚಿತದೋಷಘ್ನ ಜಯ ಕಾಂಚನದೇಹಗ ॥೬೨॥

ಜಯ ವಿದ್ರುಮತುಲ್ಯಾಂಘ್ರೇ ಜಯ ಕದ್ರುಸುತಾರ್ಚಿತ ।
ಜಯ ಚಂಡಪ್ರಚಂಡೇಶ ಜಯ ದಂಡಧನುರ್ಧರ ॥೬೩॥

ಜಯ ಕ್ರೂರಾಭಿಚಾರಘ್ನ ಜಯ ದಾರಾಸುತಾನ್ವಿತ ।
ಜಯ ಜೀಮೂತಸುಖದ ಜಯ ಭೂಮೂಲಮಂದಿರ ॥೬೪॥

ಜಯ ಖಂಡಿತಪಾಷಂಡ ಜಯ ಚಂಡಗಣಾನ್ವಿತ ।
ಜಯ ಪ್ರಶಾಂತಮಹಿಮನ್ ಜಯಕೋಶಾಂತರಸ್ಥಿತ ॥೬೫॥

ಜಯ ಸರ್ವಮನುಧ್ಯೇಯ ಜಯ ಸರ್ವವಶೀಕೃತ ।
ಜಯ ಪೂರ್ಣದಯಾದೃಷ್ಟೇ ಜಯ ಮಾರ್ಕಂಡರಕ್ಷಕ ॥೬೬॥

---

ಪೀಠಾಲಂಕೃತನೇ, ನಿನಗೆ ಜಯವಾಗಲಿ. ನೀನು ದೌರ್ಭಾಗ್ಯವೆಂಬ ಹತ್ತಿಯ ರಾಶಿಗೆ ಅಗ್ನಿಯಂತಿರುವವನು. ಸಕಲ ಗರ್ಭದಲ್ಲಿಯೂ ಆತ್ಮರೂಪದಿಂದ ನೆಲಸಿರುವವನು. ಭಕ್ತನು ಸಂಪಾದಿಸಿದ ಸಕಲ ದೋಷಗಳನ್ನೂ ನಿವಾರಿಸುವವನು. ಸುವರ್ಣಮಯವಾದ ದೇಹವುಳ್ಳವನು. ಇಂತಹ ನಿನಗೆ ಜಯವಾಗಿರಲಿ. ॥೬೧-೬೨॥

ಹವಳದಂತೆ ಕೆಂಪಾದ ಪಾದಪದ್ಮವುಳ್ಳವನೇ, ಕದ್ರೂದೇವಿಯ ಪುತ್ರರಾದ ನಾಗದೇವತೆಗಳಿಂದ ಪೂಜಿತನಾದವನೇ, ಚಂಡಪ್ರಚಂಡರೆನಿಸಿದ ರಾಕ್ಷಸವೀರರಿಗೂ ವೀರನಾದವನೇ, ದಂಡವನ್ನೂ ಧನುಸ್ಸನ್ನೂ ಧರಿಸಿರುವವನೇ, ಕ್ರೂರವಾದ ದುರ್ವ್ರರ್ತನೆಗಳನ್ನು ನಾಶಗೊಳಿಸುವವನೇ, ಪತ್ನೀಪುತ್ರಾದಿಗಳಿಂದ ಕೂಡಿರುವವನೇ ನಿನಗೆ ಜಯವಾಗಲಿ. ನೀನು ಮೇಘದಂತೆ ಜನರಿಗೆ ಆನಂದಪ್ರದನು. ಭೂಮಿಯ ಕೆಳಭಾಗದಲ್ಲಿ ಕೂರ್ಮಾದಿಗಳರೂಪದಿಂದಲೂ ವಿರಾಜಿಸುವವನು ನೀನು. ॥೬೩-೬೪॥

ನಾಸ್ತಿಕರನ್ನು ನಾಶಗೊಳಿಸಿದ, ಚಂಡಗಣಗಳಿಂದ ಕೂಡಿದ ಮಹಾಮಹಿಮನೇ, ನೀನು ಅನ್ನಮಯ ಪ್ರಾಣಮಯಾದಿ ಪಂಚಕೋಶಗಳ ಮಧ್ಯವರ್ತಿಯು. ಸಮಸ್ತ ಮಂತ್ರಗಳಿಂದಲೂ ಸ್ತುತ್ಯನಾದವನು ಎಲ್ಲರನ್ನೂ ವಶಮಾಡಿಕೊಂಡಿರುವವನು. ಸಂಪೂರ್ಣವಾದ ದಯಾದೃಷ್ಟಿಯುಳ್ಳವನು. ಮೃಕಂಡುಪುತ್ರನಾದ ಮಾರ್ಕಂಡೇಯನನ್ನು ರಕ್ಷಿಸಿದವನು. ಇಂತಹ ನೀನು ಜಯಶಾಲಿಯಾಗು. ॥೬೫-೬೬॥

ಜಯೋಪಮನ್ಯುಸುಪ್ರೀತ ಜಯ ಸತ್ಪದ್ಮಭಾಸ್ಕರ ।
ಜಯ ಪಾಲನನಿರ್ಮಾಣ ಜಯ ಸರ್ವವಿಧಾನಪಿತ್ ॥೬೭॥

ಜಯ ಸ್ವತೇಜಸಾಭಾಸ ಜಯ ಲೋಕೈಕಪಾಲಕ ।
ಜಯಾಗ್ನೀಂದುಜಲಾದಿತ್ಯ ಜಯ ಖಾನಿಲಭೂಮಯ ॥೬೮॥

ಜಯ ನಿಸ್ಸಾಮಪರಮ ಜಯ ದೇವ ಪರಾತ್ಪರ ।
ಜಯ ಪ್ರಕೃತಿಮುಖ್ಯಾದೇ ಜಯ ತ್ರಿಗುಣಕಲ್ಪಕ ॥೬೯॥

ಜಯ ನಿರ್ವ್ಯಾಜಲೋಕಘ್ನ ಜಯಾವಿದ್ಯಾನಿದಾರಣ ।
ಜಯ ವ್ಯಾಸಸನಂದೇಡ್ಯ ಜಯಾಚಿಂತ್ಯಗುಣೋದಯ ॥೭೦॥

ಜಯ ಶೌರ್ಯಮಹಾಧೈರ್ಯ ಜಯ ಧರ್ಮೈಕಕಾರಣ ।
ಜಯ ರಾಜಸಸತ್ವಾಢ್ಯ ಜಯ ರುದ್ರತಮೋಗುಣ ॥೭೧॥

ಜಯ ಬ್ರಹ್ಮಾದಿಕೀಟಾಂತ ಜಯ ವ್ಯಾಪ್ತಹೃದಂತರ ।
ಜಯ ಭೂಜಲವಾತೂಲ ಜಯ ತೇಜಃಖವಾರಿಕ ॥೭೨॥

---

ಉಪಮನ್ಯುಸ್ತುತಿಯಿಂದ ಸುಪ್ರೀತನಾದವನೇ, ಸತ್ಪುರುಷರ ಹೃದಯ ಕಮಲಕ್ಕೆ ಸೂರ್ಯನಂತಿರುವವನೇ, ಸಮಸ್ತರನ್ನೂ ಸೃಷ್ಟಿಸಿ ಪಾಲಿಸುವವನೇ, ಸರ್ವ ಕಾರ್ಯಗಳನ್ನೂ ವಿಹಿತವಾಗಿ ನಡೆಸುವವನೇ, ತನ್ನ ಕಾಂತಿಯಿಂದ ಜಗತ್ತನ್ನೇ ಬೆಳಗಿಸುವವನೇ, ಸಮಸ್ತಲೋಕವನ್ನೂ ಪಾಲಿಸುವವನೇ, ಅಗ್ನಿ, ಚಂದ್ರ, ಜಲ, ಸೂರ್ಯ, ಆಕಾಶ, ಭೂಮಿ ಇವುಗಳ ಆಕಾರದಲ್ಲಿರುವವನೇ, ನೀನು ಜಯಶಾಲಿಯಾಗು. ನೀನೇ ಸರ್ವೋತ್ಕೃಷ್ಟನು. ನಿನಗೆ ಮಂಗಳವಾಗಲಿ. ॥೬೭-೬೮॥

ದಂಡೋಪಾಯದಲ್ಲಿ ಶ್ರೇಷ್ಠನಾದವನೇ, ದೇವದೇವನೇ, ಪ್ರಕೃತಿಮುಖ್ಯನೇ, ತ್ರಿಗುಣಾತ್ಮಕನೇ, ನೀನು ಸ್ವೇಚ್ಛೆಯಾಗಿ ಸಂಚರಿಸುವ ಲೋಕವನ್ನು ನಾಶಗೊಳಿಸಿದವನು. ಅವಿದ್ಯಾನಾಶಕನು. ವ್ಯಾಸ ಮತ್ತು ಸನಂದಮಹರ್ಷಿಯಿಂದ ಪೂಜಿತನು. ಅಚಿಂತ್ಯವಾದ ಗುಣಗಣವುಳ್ಳವನು. ಇಂತಹ ನಿನಗೆ ಸರ್ವತ್ರ ವಿಜಯವು ಲಭಿಸಲಿ. ॥೬೯-೭೦॥

ಶೌರ್ಯ ಧೈರ್ಯಗಳಿಗೆ ಆವಾಸಸ್ಥಾನನಾಗಿರುವ ಮಹಾದೇವನೇ, ನೀನು ಧರ್ಮ ಕಾರ್ಯಗಳಿಗೆ ಮೂಲಕಾರಣನು. ರಜೋಗುಣ, ತಮೋಗುಣ, ಸತ್ವಗುಣಗಳಿಗೆ

ಜಯ ಭಾಷಾಪತಿಶ್ರೀಶ ಜಯ ವರ್ಣಿತವೈಭವ ।
ಜಯ ಪ್ರಲಯಸಂಜಾತ ಜಯ ಕಾಲಾಗ್ನಿರುದ್ರಕ ॥೭೩॥

ಜಯ ಸಂಕಲ್ಪನಾಮಾತ್ರ ಜಯ ನಿರ್ಮಿತಲೋಕಪ ।
ಜಯ ಶ್ರೀದವಿಧೀಂದ್ರಾದ್ಯ ಜಯ ಸರ್ವನಿಯೋಜಕ ॥೭೪॥

ಜಯ ಹೀನಸಮಾಧಿಕ್ಯ ಜಯ ವಾರ್ಧಕ್ಯವರ್ಜಿತ ।
ಜಯ ನೀಲೋತ್ಪಲಶ್ಯಾಮ ಜಯ ವರ್ಣವಿರಾಜಿತ ॥೭೫॥

ಜಯ ಕರ್ಪೂರಧವಲ ಜಯ ಚಾರುಶುಭಾಕೃತೇ ।
ಜಯ ಧ್ವಜಾಂಕುಶಾಭೋಗ ಜಯ ಚಕ್ರಲಸತ್ಪದ ॥೭೬॥

---

ಆಶ್ರಯವಿತ್ತವನೇ, ನೀನು ಬ್ರಹ್ಮಾದಿ ಕೀಟಪರ್ಯಂತ ಸಮಸ್ತಪ್ರಾಣಿಗಳಲ್ಲಿಯೂ ಅಡಗಿರುವವನು. ಸಮಸ್ತ ಪ್ರಾಣಿಗಳಲ್ಲಿಯೂ ನೆಲಸಿರುವವನು. ಭೂಮಿ, ಜಲ, ವಾಯು, ತೇಜಸ್ಸು, ಆಕಾಶ ಇವುಗಳಲ್ಲಿ ನಿಂತಿರುವವನೇ, ನಿನಗೆ ಜಯವಾಗಲಿ. ॥೭೧-೭೨॥

ವಾಣೀಪತಿಗೂ ಶ್ರೀಪತಿಗೂ ಒಡೆಯನಾದವನೇ, ನಿನ್ನ ವೈಭವವು ನಾನಾ ರೀತಿ ವರ್ಣಿತವಾಗಿರುವುದು. ಪ್ರಲಯಕಾಲದಲ್ಲಿಯೂ ಸ್ಥಿರವಾಗಿರುವವನು. ಕಾಲಾಗ್ನಿರುದ್ರನಂತಿರುವವನು. ಸಂಕಲ್ಪಮಾತ್ರದಿಂದಲೇ ಲೋಕವನ್ನು ಸೃಷ್ಟಿ ಮಾಡುವವನು. ಲೋಕಾಧಿಪತಿಗಳನ್ನೆಲ್ಲಾ ಸೃಷ್ಟಿಸಿರುವವನು. ವಿಷ್ಣು, ಬ್ರಹ್ಮ, ಇಂದ್ರ ಮುಂತಾದವರಿಗೆ ಒಡೆಯನಾದವನೇ, ನೀನು ಸರ್ವರನ್ನೂ ನಿಯೋಜಿಸುವವನು. ನಿನಗೆ ಸರ್ವೋತ್ಕೃಷ್ಟತೆಯಿರಲಿ. ॥೭೩-೭೪॥

ಅಲ್ಪ, ಮಧ್ಯ, ಅಧಿಕಗುಣಗಳಿಂದ ಕೂಡಿದವನೇ, ಮುಪ್ಪಿನಿಂದ ದೂರನಾದವನೇ, ನೀಲೋತ್ಪಲಶ್ಯಾಮನೇ, ನೀನು ನಾನಾವರ್ಣಗಳಿಂದ ವಿರಾಜಿಸುವವನು. ಕರ್ಪೂರದಂತೆ ಶುಭ್ರವರ್ಣದವನು, ನೀನು ಮನೋಹರವಾದ ಶುಭಾಕೃತಿಯುಳ್ಳವನು. ಧ್ವಜ, ಅಂಕುಶ ಮುಂತಾದ ಆಯುಧಗಳಿಂದ ಕೂಡಿದ ಶರೀರ ಉಳ್ಳವನು. ನೀನು ನಿನ್ನ ಕಾಲುಗೆರೆಯಿಂದಲೇ ವಿಷ್ಣುಚಕ್ರವನ್ನು ನಿರ್ಮಿಸಿದವನು. ನಿನಗೆ ವಿಜಯವಾಗಲಿ. ॥೭೫-೭೬॥

ಜಯ ಸೌವರ್ಣವಸನ ಜಯ ರಾಜತ್ಕಟೀತಟೇ ।
ಜಯ ಪೀನೋರುಜಘನ ಜಯ ರಂಜಿತವಿಶ್ವಪ ॥೭೭॥

ಜಯ ಮುಕ್ತಾಫಲಾಹಾರ ಜಯ ವಜ್ರಾಂಗದೋಜ್ಜ್ವಲ ।
ಜಯ ದೀರ್ಘಚತುರ್ಬಾಹೋ ಜಯ ಕಂಕಣಮಂಡಿತ ॥೭೮॥

ಜಯಾಭೀತಿವರೋಪೇತ ಜಯ ಬಾಹುದ್ವಯಾನ್ವಿತ ।
ಜಯ ಕ್ಷ್ವೇಲಮಹಾನೀಲ ಜಯ ಭೂಷಿತಮಂಗಲ ॥೭೯॥

ಜಯ ಸುಂದರಸಸ್ಮೇರ ಜಯ ವಕ್ತ್ರವಿರಾಜಿತ ।
ಜಯ ಕುಂಡಲವಿಭ್ರಾಜಿನ್ ಜಯ ಕುಂಡಲಿಕುಂಡಲ ॥೮೦॥

ಜಯ ಚಾಂಪೇಯನಾಸಾಗ್ರ ಜಯ ಬಿಂಬಾಧರೋಜ್ಜ್ವಲ ।
ಜಯ ಪಾವಕಚಂದ್ರಾರ್ಕ ಜಯ ಲೋಚನಭೂಷಿತ ॥೮೧॥

ಜಯ ಕೋಕನದೋದ್ಭಾಸ ಜಯ ಕೋಟೀರಶೋಭಿತ ।
ಜಯಾಪರಮಿತಾನಂದ ಜಯ ಸುಂದರವಿಗ್ರಹ ॥೮೨॥

---

ಸುವರ್ಣಮಯವಾದ ವಸ್ತ್ರವುಳ್ಳವನೇ, ಪ್ರಕಾಶಮಾನವಾದ ಸೊಂಟದ ಭಾಗವುಳ್ಳವನೇ, ದಪ್ಪವಾದ ತೊಡೆ ಮತ್ತು ಜಘನಪ್ರದೇಶವುಳ್ಳವನೇ, ನೀನು ಲೋಕಾಧಿಪತಿಗಳನ್ನೆಲ್ಲಾ ಮೆರೆಸುವೆ. ಮುತ್ತಿನ ಹಾರಗಳಿಂದಲೂ, ರತ್ನಮಯವಾದ ತೋಳುಬಳೆಗಳಿಂದಲೂ, ವಿರಾಜಿಸುವೆ. ದೀರ್ಘವಾದ ನಾಲ್ಕು ತೋಳುಗಳಿಂದ ನೀನು ಶೋಭಿಸುತ್ತಿರುವೆ. ದಿವ್ಯಕಟಕದಿಂದ ಮಂಡಿತನಾಗಿರುವೆ ॥೭೭-೭೮॥

ಅಭಯ ಮತ್ತು ವರದ ಮುದ್ರೆಗಳಿಂದ ಶೋಭಿಸುವ ಎರಡು ಕೈಗಳುಳ್ಳವನೇ, ನೀನು ಹಾಲಾಹಾಲವಿಷಪಾನದಿಂದ ನೀಲಕಂಠನೆನಿಸಿರುವೆ. ಸರ್ಪವಣ-ಭೂಷಿತನೆನಿಸಿರುವೆ. ಸುಂದರವಾದ ಮುಗುಳ್ನಗೆಯಿಂದ ವಿರಾಜಿಸುವ ಮುಖಕಮಲದಿಂದ ವಿರಾಜಿತನಾಗಿರುವೆ. ಸರ್ಪವನ್ನೇ ಕರ್ಣಕುಂಡಲವನ್ನಾಗಿಸಿ ನಾಗಕುಂಡಲನೆಂಬ ಹೆಸರಿನಿಂದ ಶೋಭಿಸುವೆ. ಇಂತಹ ನೀನು ಸರ್ವೋತ್ಕೃಷ್ಟನೆಂದೆನಿಸು. ॥೭೯-೮೦॥

ಸಂಪಿಗೆ ಹೂವಿನಂತೆ ಸುಂದರವಾದ ನಾಸಾಗ್ರವುಳ್ಳವನೇ, ತೊಂಡೆಹಣ್ಣಿನಂತಿರುವ ತುಟಿಯುಳ್ಳವನೇ, ಸೋಮಸೂರ್ಯಾಗ್ನಿಸ್ವರೂಪಗಳಾದ ನೇತ್ರತ್ರಯ

ಜಯಸ್ಕಂದಗಣಾಧೀಶ ಜಯಭದ್ರಾದಿಸೇವಿತ ।
ಜಯಾನೇಕಮಹಾಚಿತ್ರ ಜಯ ಶಕ್ತಿಗಣಾವೃತ ॥೮೩॥

ಜಯ ನಿಸ್ತುಲವಿಜ್ಞಾನ ಜಯಾನಂದ ಮಹೋದಧೇ ।
ಜಯಾವಿದ್ಯಾಂಧಕಾರಾರ್ಕ ಜಯಶ್ರೀಮನ್ಮಹೇಶ್ವರ ॥೮೪॥

ಜಯ ಕೂಟಸ್ಥ ಪರಮ ಜಯಶೂಲಾಯುಧಾವೃತ ।
ಜಯಾಪ್ರತರ್ಕ್ಯವಿಭವ ಜಯ ಸಂತತಮಂಗಲ ॥೮೫॥

ಜಯ ನಿತ್ಯಮಹಾಭಾಗ ಜಯ ಲಿಂಗಾರ್ಚನಪ್ರಿಯ ।
ಜಯ ಜ್ವರಾದಿರೋಗಘ್ನ ಜಯ ಶ್ರೀರುದ್ರಮಧ್ಯಗ ॥೮೬॥

ಜಯ ಮಾರ್ತಂಡಮಧ್ಯಸ್ಥ ಜಯ ಪಾವಕಮಧ್ಯಗ ।
ಜಯ ಚಂದ್ರಾಂತನಿಲಯ ಜಯ ಬಿಂದುಕಲಾತ್ಮಕ ॥೮೭॥

---

ಗಳಿಂದ ವಿರಾಜಿಸುವವನೇ, ನೀನು ರಕ್ತತಾವರೆಯಂತೆ ಶೋಭಿಸುವೆ. ದಿವ್ಯವಾದ ಕಿರೀಟದಿಂದ ಅಲಂಕೃತನಾಗಿರುವೆ. ಅಪರಿಮಿತಾನಂದದಾಯಕನೇ, ನೀನು ಸುಂದರ ವಾದ ದೇಹವುಳ್ಳವನು. ನಿನಗೆ ಸರ್ವತ್ರ ವಿಜಯವಾಗಲಿ. ||೮೧-೮೨||

ಸ್ಕಂದಸ್ವಾಮಿ, ಗಣನಾಥ, ವೀರಭದ್ರ ಮುಂತಾದವರಿಂದ ಸೇವಿತನಾದವನೇ, ಅನೇಕ ಚಿತ್ರವಿಚಿತ್ರಶಕ್ತಿಗಣಗಳಿಂದ ಕೂಡಿದವನೇ, ನೀನು ಕೇವಲ ಜ್ಞಾನ ಸ್ವರೂಪಿಯು. ಆನಂದಮಹಾಸಮುದ್ರದಂತೆ ತೋರುವವನೇ, ಅವಿದ್ಯಾ (ಅಜ್ಞಾನ) ರೂಪವಾದ ಕತ್ತಲೆಗೆ ಸೂರ್ಯನಂತಿರುವ ಮಹೇಶ್ವರನೇ, ನೀನು ಜಯಶಾಲಿಯಾಗು. ||೮೩-೮೪||

ಕೈಲಾಸಶಿಖರದಲ್ಲಿ ಅತ್ಯಂತ ಶ್ರೇಷ್ಠನಾಗಿ ವಿರಾಜಿಸುವವನೇ, ಶೂಲಾಯುಧ ಧಾರಿಯೇ, ನಿನ್ನ ವೈಭವವನ್ನು ಇಷ್ಟೆಂದು ವರ್ಣಿಸಲು ಸಾಧ್ಯವಿರುವುದೆ? ಸತತವೂ ಮಂಗಳಕಾರ್ಯನಿರತನಾದವನೇ, ನೀನು ನಿತ್ಯಮಹಿಮನು. ಶಿವಲಿಂಗಾ ರ್ಚನಪ್ರಿಯನು. ಜ್ವರಾದಿ ಸಮಸ್ತ ರೋಗಗಳನ್ನೂ ಸುಲಭವಾಗಿ ನಾಶಗೊಳಿಸುವೆ. ಶ್ರೀ ರುದ್ರಮಂತ್ರಮಧ್ಯದಲ್ಲಿಯೇ ನೀನು ಶೋಭಿಸುವವನು. ಇಂತಹ ನೀನು ಜಯಶಾಲಿಯಾಗು. ||೮೫-೮೬||

ಸೂರ್ಯಮಂಡಲಮಧ್ಯವರ್ತಿಯೇ, ಅಗ್ನಿಮಂಡಲದ ಮಧ್ಯನಿವಾಸಿಯೇ, ನೀನು ಚಂದ್ರಶೇಖರನು. ನಾದಬಿಂದುಕಲಾತೀತನು. ಶ್ರೀಚಕ್ರಮಧ್ಯದಲ್ಲಿ ವಾಸ

ಜಯ ಶ್ರೀಚಕ್ರಸಂಸ್ಥಾನ ಜಯ ಭೂಚಕ್ರಪೀಠಭೂಃ ।
ಜಯ ನಾದಕಲಾತೀತ ಜಯ ವಾದವಿಭೇದನ ॥೮೮॥

ಜಯ ತತ್ಪೂರ್ಷಮಂತ್ರಾರ್ಥ ಜಯಾಘೋರಾಸ್ತ್ರನಾಯಕ ।
ಜಯೇಶಾನ ವಿರೂಪಾಕ್ಷ ಜಯ ವಾಮಾದಿಸಂಘುಕ ॥೮೯॥

ಜಯ ಶುಕ್ರಕೃತಸ್ತೋತ್ರ ಜಯ ನಿರ್ಮತ್ಸರಾರ್ಚಿತ ।
ಜಯ ಕಲ್ಪದ್ರುಮಸ್ಥಾನ ಜಯ ಖಟ್ವಾಂಗರಾಜಿತ ॥೯೦॥

ಜಯಾವಸಾನನಿರ್ಮುಕ್ತ ಜಯ ಬಿಲ್ವಾರ್ಚನಪ್ರಿಯ ।
ಜಯಾಷ್ಟಮೂರ್ತೇ ಸರ್ವಾತ್ಮನ್ ಜಯಾಚಾರವಿವರ್ಧನ ॥೯೧॥

ಜಯಾಪಚಾರಶಮನ ಜಯಾಪದ್ಬಾಂಧವ ಪ್ರಭೋ ।
ಜಯೋಪಚಾರಸಂದೋಹ ಜಯ ಪಾಶವಿಮೋಚನ ॥೯೨॥

---

ಮಾಡುವವನು. ಭೂಚಕ್ರವೇ ನಿನ್ನ ಪೀಠವಾಗಿರುವುದು. ನಾದಕಲೆಯಿಂದ ದೂರನಾದವನು. ವಾದಿಸುವವರನ್ನು ಧ್ವಂಸಮಾಡುವವನು. ಇಂತಹ ನಿನಗೆ ಎಂದೆಂದೂ ಜಯವು ಲಭಿಸಲಿ. ॥೮೭-೮೮॥

ತತ್ಪುರುಷಮಂತ್ರಾರ್ಥವುಳ್ಳವನೇ, ಅಘೋರವಾದ ಅಂದರೆ ಶಾಂತವಾದ ಅಸ್ತ್ರಗಳುಳ್ಳವನೇ, ಈಶಾನ, ವಿರೂಪಾಕ್ಷ ಮುಂತಾದ ಹೆಸರುಗಳುಳ್ಳವನೇ, ನೀನು ವಾಮದೇವನೇ ಮೊದಲಾದ ಅನೇಕ ಹೆಸರುಳ್ಳವನು. ನಿನ್ನನ್ನು ಶುಕ್ರನು ನಾನಾ ರೀತಿ ಸ್ತುತಿಸಿರುವವನು. ನಿರ್ಮತ್ಸರರಾದ ಮಾನವರಿಂದ ಅರ್ಚಿತನಾದವನೇ, ಕಲ್ಪದ್ರುಮಸ್ಥಾನವುಳ್ಳವನೇ, ನೀನು ಖಟ್ವಾಂಗವೆಂಬ ಆಯುಧದಿಂದ ವಿರಾಜಿತ ನಾದವನು. ನೀನು ಸರ್ವಕಾರ್ಯದಲ್ಲಿಯೂ ಜಯವನ್ನು ಹೊಂದು. ॥೮೯-೯೦॥

ಅವಸಾನಕಾಲದಲ್ಲಿ ಭಕ್ತರಿಗೆ ಮೋಕ್ಷವನ್ನು ಕರುಣಿಸುವವನು. ಬಿಲ್ವಾರ್ಚನೆ ಯಲ್ಲಿ ಪ್ರೀತಿಯುಳ್ಳವನೇ, ಅಷ್ಟಮೂರ್ತಿಸ್ವರೂಪನೇ, ನೀನು ಸರ್ವವ್ಯಾಪಿಯು. ಪೂರ್ವಾಚಾರಗಳನ್ನು ನಾಶಗೊಳಿಸುವವನು. ಆಪದ್ಬಾಂಧವನು ನೀನು. ಉಪಚಾರ ಸಮೂಹದಿಂದ ತೃಪ್ತಿಹೊಂದುವವನು. ಸಂಸಾರ ಪಾಶದಿಂದ ಬಿಡುಗಡೆ ಮಾಡು ವವನು. ॥೯೧-೯೨॥

ಜಯ ತಸ್ಕರಮೂರ್ಧನ್ಯ ಜಯ ಮಸ್ಕರಿರೂಪಗ ।
ಜಯೇಕೇ ಕಾಲರೂಪಾತ್ಮನ್ ಜಯ ಶಂಕಾತಿದೂರಗ ॥೯೩॥

ಜಯಶಾಪಾಸ್ತ್ರದಮನ ಜಯ ಮಾರ್ತಂಡಭೈರವ ।
ಜಯ ಪಂಚಾಸನಾಸೀನ ಜಯ ವಂಚಕದುರ್ಲಭ ॥೯೪॥

ಜಯ ದುರ್ಭಗಸಂಹಾರ ಜಯ ಸದ್ಭಾವಭಾವನ ।
ಜಯ ಸರ್ವಗಸರ್ವೇಶ ಜಯ ಸರ್ವಶುಭಾಸ್ಪದ ॥೯೫॥

ಜಯ ವಿಷ್ಣ್ವಾದಿಜನಕ ಜಯ ಪ್ರಮಥನಾಯಕ ।
ಜಯ ಸೋಮಾಗ್ನಿವಿಶಿಖ ಜಯ ಸರ್ವಮರುತ್ಸಖ ॥೯೬॥

ಜಯ ಕರ್ಪೂರದಿವ್ಯಾಂಗ ಜಯ ಸರ್ವಾಂತರಂಗಗ ।
ಜಯ ಪಾಲಿತಭೂತೌಘ ಜಯ ದೂರೀಕೃತಾಘಕ ॥೯೭॥

---

ತಸ್ಕರಶಾಸ್ತ್ರದಲ್ಲಿ ಮೂರ್ಧನ್ಯನಾದವನೇ, ಸಂನ್ಯಾಸಿರೂಪದಲ್ಲಿ ನಿರತನಾಗಿರುವವನೇ, ಕಾಲರೂಪಿಯೆ, ನೀನು ನಾನಾವಿಧವಾದ ಶಂಕಾದಿಗಳಿಂದ ದೂರನಾದವನು. ಮಹೇಶ್ವರನೇ, ನೀನು ಶಾಪರೂಪವಾದ ಅಸ್ತ್ರವನ್ನು ದಮನಮಾಡುವವನು. ಮಾರ್ತಾಂಡಭೈರವನು ನೀನು. ವಿಸ್ತಾರವಾದ ಪೀಠದಲ್ಲಿ ಮಂಡಿಸಿರುವವನು ನೀನು ಮೋಸಗಾರರಿಗೆ ಎಂದೂ ಸಿಕ್ಕದವನು. ಇಂತಹ ನಿನಗೆ ಎಂದೂ ಜಯವಿರಲಿ. ॥೯೩-೯೪॥

ದುರ್ಗುಣಭರಿತರನ್ನು ಸಂಹರಿಸುವವನೇ, ಸದ್ಭಾವನೆಯುಳ್ಳವರನ್ನು ಗೌರವಿಸುವವನೇ, ನೀನು ಸರ್ವವ್ಯಾಪಿಯು. ಸರ್ವರಿಗೂ ಅಧಿಪನು. ಸಮಸ್ತ ಶುಭಕರ್ಮಗಳಿಗೂ ಮೂಲಕಾರಣನು. ವಿಷ್ಣ್ವಾದಿ ಸಕಲ ದೇವಶ್ರೇಷ್ಠರಿಗೂ ನೀನು ಉತ್ಪತ್ತಿಸ್ಥಾನನು. ಪ್ರಮಥಗಣಗಳಿಗೆ ಅಧಿನಾಯಕನು. ಚಂದ್ರ ಮತ್ತು ಅಗ್ನಿ ಇವರನ್ನೇ ಬಾಣರೂಪವಾಗಿ ಹೊಂದಿರುವವನು. ಸಮಸ್ತ ದೇವತೆಗಳಿಗೂ ಸ್ನೇಹಿತನಂತಿರುವವನು. ಇಂತಹ ನಿನಗೆ ಜಯವಾಗಲಿ. ॥೯೫-೯೬॥

ಕರ್ಪೂರದಂತೆ ಶುಭ್ರವಾದ ದೇಹವುಳ್ಳವನೇ, ಸರ್ವರ ಅಂತರಂಗದಲ್ಲಿಯೂ ವಿಹರಿಸುವವನೇ, ನೀನು ಸಮಸ್ತಪ್ರಾಣಿಗಳ ಸಮೂಹವನ್ನೂ ರಕ್ಷಿಸುವವನು. ಸಮಸ್ತ ಪಾಪಶಾಶಿಯನ್ನೂ ದೂರಮಾಡಿರುವವನು. ವೈರಿಗಳನ್ನು ನಾಶಗೊಳಿಸು

ಜಯ ಸರ್ಜಿತವೈರಿಂಚ ಜಯ ವಂಚಿತವಂಚಕ ।
ಜಯ ಮಾನಸನೀರಿಚ್ಛ ಜಯ ಸ್ವಚ್ಛಜನಾಚ್ಛಕ ॥೯೮॥

ಜಯ ವಿಶ್ರುತಕಾಲಾಂತ ಜಯ ಸಂಸ್ತುತಪದ್ಮಜ ।
ಜಯ ಝುಂಝಾನಿಲಾಕಾರ ಜಯ ಝುರ್ಝುರಕಂಕಣ ॥೯೯॥

ಜಯ ವೈದ್ಯೈಕನಿಲಯ ಜಯ ದಾನೈಕಸದ್ದಯ ।
ಜಯ ಗಂಗಾ ಜಟಾಜೂಟ ಜಯ ಸಂಧ್ಯಾಮಹಾನಟ ॥೧೦೦॥

ಜಯ ವರ್ಣಿತವೈಕುಂಠ ಜಯ ಮಾನಿತಕರ್ಮಠ ।
ಜಯ ಚಂದ್ರಮಹಾಚೂಡ ಜಯ ಭರ್ಗವಿಭೋ ಮೃಡ ॥೧೦೧॥

ಜಯ ಹೃತ್ಪಂಕಜಾರೂಢ ಜಯ ವಿಶ್ವಾರ್ತಿಹನ್ ದೃಢ ।
ಜಯ ದುಃಖಾದಿಹರಣ ಜಯ ಭೋಗಿವಿಭೂಷಣ ॥೧೦೨॥

---

ವವನು. ಮೋಸಗಾರರನ್ನು ಮೋಸಗೊಳಿಸುವವನು ಮಾನಸಸರೋವರದ ನೀರಿನಲ್ಲಿ ಅಪೇಕ್ಷೆಯುಳ್ಳವನು. ನಿರ್ಮಲಾಂತಃಕರಣದಲ್ಲಿ ಹೆಚ್ಚು ಪ್ರೀತಿಯುಳ್ಳವನು. ಇಂತಹ ನೀನು ಸರ್ವತ್ರ ವಿಜಯಿಯಾಗಿರು. ॥೯೭-೯೮॥

ಪ್ರಸಿದ್ಧಯಮನಿಗೂ ಯಮನಂತಿದ್ದು ಬ್ರಹ್ಮನಿಂದಲೂ ಸ್ತುತ್ಯನಾದ ಮಹಾದೇವನೇ, ನೀನು ಬಿರುಗಾಳಿಯ ಆಕಾರವನ್ನೂ ತಾಳುವೆ. ಧ್ವನಿಗೈಸುವ ಕೈಬಳೆಗಳನ್ನೂ ಹೊಂದಿರುವೆ. ಭವರೋಗೈಕ ವೈದ್ಯನೆನಿಸಿರುವೆ. ದಾನಿಗಳಲ್ಲಿ ಹೆಚ್ಚು ದಯೆಯಿಡುವೆ ಗಂಗಾನದಿಯಿಂದ ಆವೃತನಾಗಿರುವ ಜಟಾಜೂಟವುಳ್ಳವನಾಗಿರುವೆ. ಸಂಧ್ಯಾಕಾಲದಲ್ಲಿ ನಾಟ್ಯವಾಡುವ ಸ್ವಭಾವದವನಾಗಿರುವೆ. ಇಂತಹ ಮಹಾಮಹಿಮನಾದ ನಿನಗೆ ಎಲ್ಲೆಲ್ಲಿಯೂ ಜಯವೇ ಸಂಭವಿಸಲಿ. ಎಲ್ಲರಿಗಿಂತಲೂ ನೀನು ಶ್ರೇಷ್ಠನೆನಿಸಿಕೊಂಡಿರು. ॥೯೯-೧೦೦॥

ವೈಕುಂಠವನ್ನು ವರ್ಣಿಸುವಂತೆ ಮಾಡಿದವನೇ, ಕರ್ಮಠರನ್ನು ಮನ್ನಿಸುವವನೇ, ಚಂದ್ರಶೇಖರನೇ, ನೀನು ಸೂರ್ಯರೂಪಿಯು. ಸರ್ವವ್ಯಾಪಕನು. ಭಕ್ತರ ಹೃದಯಕಮಲದಲ್ಲಿ ನಿಂತವನು. ವಿಶ್ವವನ್ನೇ ನಾಶಗೊಳಿಸುವ ಶಕ್ತಿಯುಳ್ಳವನು. ದುಃಖವನ್ನು ದೂರೀಕರಿಸುವವನು. ನಾಗಾಭರಣರಂಜಿತನು. ಇಂತಹ ನೀನು ಸದಾ ವಿಜಯಶಾಲಿಯಾಗು. ॥೧೦೧-೧೦೨॥

ಜಯ ಬಿಲ್ವಾರ್ಚನಪ್ರೀತ ಜಯ ಭಕ್ತಸುಖಾಮಿತ ।
ಜಯ ಮನ್ಮಾಥಸಂನಾಥ ಜಯ ದಾರಿತಮನ್ಮಥ ॥೧೦೩॥

ಜಯ ಮೋಧ್ಯಸುಪಾಥೋದ ಜಯ ಭಕ್ತೇಷು ಕಾಮದ ।
ಜಯ ತರ್ಪಿತಸನ್ಮೇಘ ಜಯ ದುರ್ಜಯ ಮನ್ಮಥ ॥೧೦೪॥

ಜಯ ದೇಹಾರ್ಧಕಾಮೀನ ಜಯ ಭಕ್ತಾನುರಂಜನ ।
ಜಯ ದೇವಾದಿಜನಪ ಜಯ ಪ್ರೀತಧನಾಧಿಪ ॥೧೦೫॥

ಜಯ ರಂಜಿತವೈರಿಂಚ ಜಯ ಕೇಶದ್ವಿರೇಪಭ ।
ಜಯಾರ್ಜಿತಸುಖಾರಂಭ ಜಯ ಬಿಂಬಿತದಿಗ್ಬಲ ॥೧೦೬॥

ಜಯ ಪದ್ಮಾಭಪಾದಾಬ್ಜ ಜಯ ಕೋಟ್ಯರ್ಕಸಂನಿಭ ।
ಜಯ ನಾಶಿತದುಷ್ಕಾಮ ಜಯ ಪೂಜಿತಸಂಸ್ತುತ ॥೧೦೭॥

---

ಬಿಲ್ವಾರ್ಚನೆಯಿಂದ ಪ್ರೀತನಾಗುವವನೇ, ಭಕ್ತರಿಗೆ ಅತ್ಯಂತ ಸುಖರಾಶಿಯನ್ನೇ ಕರುಣಿಸುವವನೇ, ಮನ್ಮಥನನ್ನು ರಕ್ಷಿಸಿದವನೇ, ಮೊದಲು ಮನ್ಮಥನನ್ನು ಧ್ವಂಸಮಾಡಿದವನೇ, ನೀನು ಪವಿತ್ರವಾದ ಗಂಗಾನದಿಯನ್ನು ಅಧೀನದಲ್ಲಿಟ್ಟುಕೊಂಡಿರುವವನು. ಭಕ್ತರಿಗೆ ಸಕಲ ಸನ್ಮಂಗಳಗಳನ್ನೂ ಕರುಣಿಸುವವನು. ಮೇಘರಾಶಿಯನ್ನು ತೃಪ್ತಿಪಡಿಸುವವನು. ಮಹಾಬಲಿಷ್ಠನಾದ ಮನ್ಮಥನನ್ನು ಎದುರಿಸಿದವನು. ಇಂತಹ ನಿನಗೆ ವಿಜಯವು ಸಿದ್ಧಿಸಲಿ. ॥೧೦೩-೧೦೪॥

ತನ್ನ ದೇಹಾರ್ಧವನ್ನೇ ಪತ್ನಿಗೆ ಕೊಟ್ಟ ಮಹಾದೇವನೇ, ನೀನು ಭಕ್ತರನ್ನು ವಿಶೇಷವಾಗಿ ಸಂತೋಷಪಡಿಸುವೆ. ದೇವತೆಗಳನ್ನೂ ಜನರನ್ನೂ ಪಾಲಿಸುವೆ. ಕುಬೇರನಲ್ಲಿ ಪ್ರೀತಿಯಿಂದಿರುವೆ. ಬ್ರಹ್ಮನನ್ನು ಆಹ್ಲಾದಗೊಳಿಸಿದೆ. ನಿನ್ನ ಕೇಶಪಾಶದಲ್ಲಿ ನಕ್ಷತ್ರಗಳು ಸಣ್ಣ ಭ್ರಮರಗಳಂತೆ ಅಲ್ಲಿಂದಿಲ್ಲಿಗೆ ಸಂಚರಿಸುತ್ತಿರುವುವು. ಇಂತಹ ಮಹಾಮಹಿಮನಾದ ನಿನಗೆ ವಂದನೆಗಳು. ॥೧೦೫-೧೦೬॥

ಕಮಲದಂತೆ ಮೃದುವಾದ ಪಾದಕಮಲವುಳ್ಳವನೇ, ಕೋಟಿಸೂರ್ಯರಂತೆ ವಿರಾಜಿಸುವವನೇ, ನೀನು ಪ್ರಪಂಚವನ್ನೇ ಮೋಹಗೊಳಿಸುತ್ತಿದ್ದ ಮನ್ಮಥನನ್ನು ನಾಶಗೊಳಿಸಿರುವೆ. ಭಕ್ತರಿಂದ ಪೂಜಿತನೂ, ಸಂಸ್ತುತನೂ ಆಗಿರುವೆ. ಅರಣ್ಯವನ್ನೇ

ಜಯ ಕಾಂತಾರನಿಲಯ ಜಯ ಸರ್ವಜಗನ್ಮಯ ।
ಜಯ ನಾಗೇಂದ್ರಸದ್ಧಾರ ಜಯ ದೀಪ್ತಕಲೇಬರ ॥೧೦೮॥

ಜಯ ನೀಲಾಲಕಾಲೋಲ ಜಯ ದೀನೈಕವತ್ಸಲ ।
ಜಯ ವಿಖ್ಯಾತವಿಭವ ಜಯ ಸುಪ್ರೀತಸಂಸ್ತುತ ॥೧೦೯॥

ಜಯ ಸರ್ವಜ್ಞಸರ್ವೇಶ ಜಯ ಗೌರ್ಯಂಕಪಾಲಿತ ।
ಜಯ ರತ್ನಮಹಾಭೂಷ ಜಯ ಧಾರಿತದುರ್ವಿಷ ॥೧೧೦॥

ಜಯಾಂಬರಿತದಿಗ್ವಾಸ ಜಯ ಪ್ರಖ್ಯಾತಸಾಹಸ ।
ಜಯ ವಾರಿದಸದ್ವಾಹ ಜಯ ಸ್ವೀಕೃತವಿಗ್ರಹ ॥೧೧೧॥

ಜಯ ಕಂಠಮಹಾಕ್ಷ್ವೇಲ ಜಯಶ್ರೀಕೃಷ್ಣಪಿಂಗಲ ।
ಜಯ ಸರ್ವಸುರಾಧ್ಯಕ್ಷ ಜಯ ವಿಶ್ವಾಕ್ಷಕಕ್ಷಗ ॥೧೧೨॥

---

ಮನೆಯನ್ನಾಗಿ ಮಾಡಿಕೊಂಡಿರುವೆ. ಸರ್ವಜಗದ್ರೂಪನಾಗಿರುವೆ. ಆದಿಶೇಷನನ್ನೇ ಹಾರವನ್ನಾಗಿ ಕಲ್ಪಿಸಿಕೊಂಡಿರುವೆ. ಪ್ರಕಾಶಮಾನವಾದ ದೇಹದಿಂದ ಕೂಡಿರುವೆ, ಇಂತಹ ನಿನಗೆ ಸದಾ ವಿಜಯವು ಲಭಿಸಲಿ. ॥೧೦೭-೧೦೮॥

ನೀಲವಾದ ಮತ್ತು ಚಂಚಲವಾದ ಮುಂಗುರುಳುಳ್ಳವನೇ, ನೀನು ದೀನ ಜನರಲ್ಲಿ ವಾತ್ಸಲ್ಯವುಳ್ಳವನು. ನಿನ್ನ ವೈಭವವು ಬಹಳ ಪ್ರಸಿದ್ಧವಾಗಿರುವುದು. ಪ್ರೀತರಾದ ನಿನ್ನ ಭಕ್ತರಿಂದ ಸ್ತುತ್ಯನಾಗಿರುವೆ. ಸರ್ವಜ್ಞನೂ, ಸರ್ವೇಶ್ವರನೂ ಆದ ಮಹಾದೇವನೇ, ನೀನು ಗೌರೀದೇವಿಯನ್ನು ತೊಡೆಯಮೇಲೆ ಕುಳ್ಳಿರಿಸಿ ಕೊಂಡಿರುವೆ. ರತ್ನಾಭರಣಗಳಿಂದ ಅಲಂಕೃತನಾಗಿ ಹಾಲಾಹಲವಿಷವನ್ನು ಆಭರಣ ವನ್ನಾಗಿ ಮಾಡಿಕೊಂಡಿರುವೆ. ಮಹಾದೇವನೇ, ನಿನಗೆ ಜಯವಾಗಲಿ. ॥೧೦೯-೧೧೦॥

ದಿಕ್ಕುಗಳನ್ನೇ ಅಂಬರವನ್ನಾಗಿ ಮಾಡಿಕೊಂಡ ಮಹಾನುಭಾವನೇ, ನೀನು ಸಾಹಸಿಗಳಲ್ಲಿ ಪ್ರಖ್ಯಾತನೆನಿಸಿರುವೆ. ಮೇಘವಾಹನನಾಗಿ, ಆಕಾರವನ್ನು ತಾಳಿ ಮಹಾವಿಷವನ್ನೇ ಕಂಠದಲ್ಲಿ ಧರಿಸಿದೆ. ಪಾರ್ವತೀರೂಪದಿಂದ ಪಿಂಗಳವರ್ಣ ದಲ್ಲಿಯೂ, ಪರಶಿವರೂಪದಿಂದ ಕೃಷ್ಣವರ್ಣದಲ್ಲಿಯೂ ಶೋಭಿಸುವೆ. ಸರ್ವ ಸುರರಿಗೂ ಅಧ್ಯಕ್ಷನಾಗಿ, ವಿಶ್ವವನ್ನೇ ಕಣ್ಣನ್ನಾಗಿ ಅಡಗಿಸಿ ಹೊಂದಿರುವವನೇ, ನಿನಗೆ ಜಯವಾಗಲಿ. ॥೧೧೧-೧೧೨॥

॥ ಶ್ರೀ ಸ್ಕಂದ ಉವಾಚ ॥

ಇತ್ಯೇವಂ ಮದನಾರಾತೇಃ ಸ್ತೋತ್ರಂ ಯಸ್ತು ಪಠೇನ್ನರಃ ।
ವಿಮುಚ್ಯತೇ ಜನ್ಮಬಂಧೈಃ ಪ್ರಾಪ್ಯತೇ ಭೋಗ ಉತ್ತಮಃ ॥೧೧೩॥

ಜಯ ಸ್ತೋತ್ರಮಿದಂ ಪುಣ್ಯಂ ಪೂಜಾಂತೇ ಕೀರ್ತನೀಯಕಂ ।
ಶಿವಸ್ಯ ಸನ್ನಿಧೌ ಜಪ್ತ್ವಾ ಶಿವಲೋಕಂ ಸ ಗಚ್ಛತಿ ॥೧೧೪॥

ಜಯ ಜಯ ವಿಶ್ವವಿಧಾನದಕ್ಷಶಿಕ್ಷ
ಜಯ ಜಯ ಕಾರಣೇಷು ತ್ರ್ಯಕ್ಷ ।
ಜಯ ಜಯ ಸರ್ವಸುರಾಸುರಾಗಸಿಂಧೋ
ಜಯ ಜಯ ಭಕ್ತಜನಾವನೈಕಬಂಧೋ ॥೧೧೫॥

ಜಯ ಜಯ ಪುಣ್ಯಪವಿತ್ರಚಾರುಕೀರ್ತೇ
ಜಯ ಜಯ ಭಕ್ತಕದಂಬದಾರಿತಾರ್ತೇ ।
ಜಯ ಜಯ ನಿಗಮಾಂತಘೋಷಿತಾದ್ಯ
ಜಯ ಜಯ ಸಂಸೃತಿರುಗ್ವಿನಾಶವೈದ್ಯ ॥೧೧೬॥

---

ಮೇಲೆ ಹೇಳಿದ ಮದನಾರಾತಿಯಾದ ಪರಶಿವನ ಸ್ತೋತ್ರವನ್ನು ಯಾವನು ಭಕ್ತಿಯಿಂದ ಪಠಿಸುವನೋ ಅವನಿಗೆ ಜನನ ಮರಣಾದಿ ಸಮಸ್ತ ದುಃಖಗಳೂ ನಿವಾರಣೆಯಾಗುವುವು. ಶಿವಪೂಜಾನಂತರ ಶಿವಸನ್ನಿಧಿಯಲ್ಲಿ ಕುಳಿತು ಯಾರು ಈ ಜಯಸ್ತೋತ್ರವನ್ನು ಪಠಿಸುವರೋ, ಅವರು ಆ ಜನ್ಮವನ್ನು ಸುಖದಿಂದ ಕಳೆದು ಶಿವಸನ್ನಿಧಿಗೆ ಬಿಜಯಮಾಡುವರು. ॥೧೧೩-೧೧೪॥

ಪ್ರಪಂಚವನ್ನು ನಡೆಸುವಂತಹ ತ್ರಿಮೂರ್ತಿಗಳನ್ನೂ ಶಿಕ್ಷಿಸಬಲ್ಲ ಪರಶಿವನೇ, ನೀನು ಸಕಲ ಜಗತ್ಕಾರಣಗಳಿಗೂ ಕಾರಣನಾದವನು. ಸಮಸ್ತ ದೇವತೆಗಳನ್ನೂ ಪ್ರೀತಿಸುವ ದಯಾಸಮುದ್ರನೇ, ಯಾರು ನಿನ್ನನ್ನು ಪ್ರೇಮದಿಂದ ಭಜಿಸುವರೋ ಅವರನ್ನು ಬಂಧುವಿನಂತೆ ನೀನು ಸಂರಕ್ಷಿಸುವೆ. ॥೧೧೫॥

ಪುಣ್ಯಪ್ರದವೂ, ಪವಿತ್ರತಮವೂ ಆದ ಕೀರ್ತಿಶಾಲಿಯೇ, ನೀನು ಭಕ್ತರ ಸಮೂಹದ ಸಕಲ ಪೀಡಾದಿಗಳನ್ನೂ ಪರಿಹರಿಸುವವನು. ನೀನು ಉಪನಿಷತ್ತುಗಳಿಂದ ಸ್ತುತಿಸಲ್ಪಡುವವನು. ಸಂಸಾರವೆಂಬ ಮಹಾವ್ಯಾಧಿಯನ್ನು ನಿವಾರಿಸಬಲ್ಲ ವೈದ್ಯನು. ಇಂತಹ ಮಹಾಮಹಿಮನಾದ ನೀನು ಜಯಶಾಲಿಯಾಗಿರು. ॥೧೧೬॥

ಜಯ ಜಯ ಸರ್ವಸುರೋರುಸರ್ವನಾಥ
ಜಯ ಜಯ ಪರ್ವತೇಂದ್ರಜಾಸನಾಥ ।
ಜಯ ಜಯ ಚಾರುಶಶಾಂಕಶೋಭಿತಮೌಲೇ
ಜಯ ಜಯ ಪಾಪಗಿರೀಂದ್ರಭೇದದಂಭೋಲೇ (?) ॥೧೧೭॥

ಜಯ ಜಯ ಕಾಲಕಲಾವಿನಾಶಶೀಲ
ಜಯ ಜಯ ಕುಂಡಲ ಕುಂಡಲೀಶಮಾಲ
ಜಯ ಜಯ ಭಸ್ಮವಿಭೂಷಣಾಂಗ ಸಂಗ
ಜಯ ಜಯ ಭಕ್ತಹೃದಬ್ಜಪಾಪಭಂಗ ॥೧೧೮॥

ಜಯ ಜಯ ಕೃತ್ತಿವಸಾನ ವಿಶ್ವಭಾನ
ಜಯ ಜಯ ಸರ್ವಜನಾವನೈಕದಾನ
ಜಯ ಜಯ ಹೇಮಸಮಾನದೇಹಧಾಮ
ಜಯ ಜಯ ದೃಗ್ವಿನಾಶಿಚಾರುಕಾಮ ॥೧೧೯॥

---

ಸಕಲ ದೇವತೆಗಳಿಗೂ ಒಡೆಯನೆನಿಸಿರುವವನೇ, ಪಾರ್ವತೀಪತಿಯೇ, ಚಂದ್ರಮಂಡಲವನ್ನೇ ಶಿರಸ್ಸಿನಲ್ಲಿ ಅಲಂಕರಿಸಿಕೊಂಡಿರುವವನೇ, ನೀನು ಭಕ್ತರ ಪಾಪರಾಶಿಯೆಂಬ ಮಹಾಗಿರಿಯನ್ನು ಭೇದಿಸುವುದರಲ್ಲಿ ವಜ್ರಾಯುಧದಂತಿರುವೆ. ಇಂತಹ ಮಹಾಮಹಿಮನಾದ ನಿನಗೆ ವಂದನೆಗಳು. ನೀನು ಸರ್ವೋತ್ಕೃಷ್ಟನೆನಿಸಿ ಜಯಶಾಲಿಯಾಗಿರು. ॥೧೧೭॥

ಯಮನ ಶಕ್ತಿಯನ್ನು ನಾಶಗೊಳಿಸುವ ಮಹಾಮಹಿಮನೇ, ನೀನು ಆದಿಶೇಷನನ್ನೇ ಕರ್ಣಕುಂಡಲವನ್ನಾಗಿಯೂ ಮಾಲೆಯನ್ನಾಗಿಯೂ ಮಾಡಿಕೊಂಡಿರುವೆ. ನೀನು ಭಸ್ಮಭೂಷಿತನು ಭಕ್ತರ ಹೃದಯ ಕವಾಟದಲ್ಲಿದ್ದು ಅವರ ಪಾಪರಾಶಿಯನ್ನೆಲ್ಲಾ ನಿರ್ಮೂಲಗೊಳಿಸುವವನು. ಇಂತಹ ನೀನು ವಿಜಯಿಯಾಗಿ ಸರ್ವೋತ್ಕೃಷ್ಟನಾಗಿರು. ॥೧೧೮॥

ಚರ್ಮವನ್ನೇ ವಸ್ತ್ರವನ್ನಾಗಿ ಮಾಡಿಕೊಂಡು ಜಗತ್ತನ್ನು ಪ್ರಕಾಶಿಸುವ ಮಹಾದೇವನೇ, ನೀನು ಸರ್ವರನ್ನೂ ಕಾಪಾಡುವುದರಲ್ಲಿ ಉದ್ಯುಕ್ತನಾಗಿರುವೆ. ನಿನ್ನ ದೇಹವು ಸುವರ್ಣಸದೃಶವಾಗಿ ಶೋಭಿಸುತ್ತಿರುವುದು. ನಿನ್ನ ಕೇವಲ ದೃಷ್ಟಿನಿಕ್ಷೇಪದಿಂದಲೇ ಮನ್ಮಥನನ್ನು ನಾಶಗೊಳಿಸಿರುವೆ. ಮಹಾದೇವನೇ, ನಿನಗೆ ನಮಸ್ಕಾರ. ನೀನು ವಿಜಯಿಯಾಗು. ॥೧೧೯॥

ಜಯ ಜಯ ದೇಹವರಾರ್ಧಶೋಭಿಕಾಂತ
ಜಯ ಜಯ ಭಕ್ತಜನೈಕಭೂಷಿತಾಂತ ।
ಜಯ ಜಯ ದೇವವರೇಡ್ಯಹಾರಿಜಾಡ್ಯ
ಜಯ ಜಯ ಭಕ್ತಹೃದಜ್ಞನಾಶಮಾಢ್ಯ ॥೧೨೦॥

ಜಯ ಜಯ ಪಂಕಜಮಿತ್ರ ಚಾರುನೇತ್ರ
ಜಯ ಜಯ ಪರ್ವತನಾಥಜಾಕಲತ್ರ ।
ಜಯ ಜಯ ಭಸ್ಮವಿಭೂಷಬಾಲಪೋಷ
ಜಯ ಜಯ ಕಂಠವಿಚಿತ್ರಶೋಭಿಶೇಷ ॥೧೨೧॥

ಜಯ ಜಯ ಗಾಂಗತರಂಗಶೋಭಿಜೂಟ ।
ಜಯ ಜಯ ವಿಶ್ರುತವೇದಜಾಲಘೋಟ ॥೧೨೨॥

ಕಾರುಣ್ಯಾಮೃತಸಾರಪೂರಿತಲಸನ್ನೇತ್ರಾಂತಸಂಪೂಜಿತಂ
ತ್ರೈಲೋಕ್ಯಾವನದೀಕ್ಷಿತಂ ಜಪವಟೀ ರಾಜತ್ಕರಾಂಭೋರುಹಂ ।

---

ಮಹಾದೇವನೇ, ನಿನ್ನ ಅರ್ಧದೇಹದಲ್ಲಿ ನಿನ್ನ ಹೆಂಡತಿಯನ್ನು ಹೊಂದಿರುವೆ. ಭಕ್ತಜನರಿಂದ ಅಲಂಕೃತವಾದ ಹೃದಯಾಂತರಾಳವುಳ್ಳವನು. ದೇವಶ್ರೇಷ್ಠರಿಂದ ಪೂಜಿತನಾದವನು. ಅವರ ಅಜ್ಞಾನವನ್ನೆಲ್ಲಾ ನಾಶಗೈದವನು. ನೀನು ನಿನ್ನ ಭಕ್ತರ ಹೃದಯಗತವಾಗಿರುವ ಅಜ್ಞಾನವನ್ನೆಲ್ಲಾ ನಾಶಗೊಳಿಸುವೆ. ಇಂತಹ ನಿನಗೆ ಸದಾ ವಿಜಯವಿರಲಿ. ॥೧೨೦॥

ಸೂರ್ಯನನ್ನೇ ಲೋಚನವನ್ನಾಗಿ ಮಾಡಿಕೊಂಡು, ಪಾರ್ವತಿಯನ್ನು ಪತ್ನಿಯನ್ನಾಗಿ ಹೊಂದಿರುವ ಮಹಾದೇವನೇ, ನೀನು ಭಸ್ಮಾಂಗಿಯಾಗಿದ್ದ ಮಾರ್ಕಂಡೇಯನನ್ನು ಪ್ರೀತಿಯಿಂದ ಸಲಹಿದೆಯಲ್ಲವೆ! ಆದಿಶೇಷನನ್ನೇ ಕಂಠದಲ್ಲಿ ಆಭರಣವನ್ನಾಗಿ ಧರಿಸಿರುವವನೇ, ನಿನಗೆ ಸದಾ ಜಯವು ಲಭಿಸುತ್ತಿರಲಿ. ॥೧೨೧॥

ಗಂಗಾನದಿಯ ಅಲೆಗಳಿಂದ ಶೋಭಿಸುವ ಜಟಾಕಲಾಪವುಳ್ಳ ಮಹಾದೇವನೇ, ನೀನು ತ್ರಿಪುರಾಸುರದಹನಕಾಲದಲ್ಲಿ ಚತುರ್ವೇದಗಳನ್ನೇ ನಾಲ್ಕು ಕುದುರೆಗಳನ್ನಾಗಿ ಮಾಡಿಕೊಂಡಿರುವೆಯಲ್ಲವೆ! ಇಂತಹ ಮಹಾತ್ಮನಾದ ನಿನಗೆ ಸದಾ ವಂದನೆಗಳು. ಮತ್ತು ನಿನಗೆ ಸರ್ವದಾ ಜಯವಿರಲಿ. ॥೧೨೨॥

ಸಾಂಬಂ ನಿರ್ಜರದೀರ್ಘಿಕಾಪ್ರವಿಲಸತ್ಸಂಫುಲ್ಲಪದ್ಮಾವಲೀ
ಧೂಲೀಧೂಸರಕರ್ಬುರೋಜ್ಜ್ವಲಜಟಾರೇಖಂ ಭಜೇ ಶಂಕರಂ ॥೧೨೩॥

ತ್ವಯ್ಯಾಸಜ್ಜಮನಾಸ್ತ್ವದೇಕಶರಣಃ ವರ್ತೇ ಪುನಸ್ತ್ವಾಂವಿನಾ
ಸ್ವಾಮಿನ್ ಪರ್ವತಸಾರ್ವಭೌಮತನುಭೂಜಾನೇ ನಜಾನೇ ಪರಂ ।
ಸತ್ವಂ ಚೇದಿಹ ನ ಪ್ರಸೀದಸಿ ತತಃ ಕಂ ಪ್ರಾರ್ಥಯೇಯಂ ಪ್ರಭೋ.
ಜಾತಂ ವಿಶ್ವಮಿದಂ ಚ ಶರ್ವನಿಭೃತಾದ್ವೈತೈಕದುರ್ಭಿಕ್ಷಭಾಕ್ ॥೧೨೪॥

ತತಶ್ಚೇತಶ್ಚೇತೋ ಭ್ರಮತಿ ನಿಮಿಷಂ ನೋಪರಮತೇ
ಕಿಮು ದೃಪ್ತಂ ಚೇದಪ್ಯಯತಿ ನವಶಕ್ತಿಂ ನು ಕರವೈ ।
ವ್ಯಸೇರಾಕ್ರಮ್ಯೇದಂ ಯದಿ ಗಿರಿಜಯಾ ತನ್ಮಮ ಭವೇತ್
ಪ್ರಸಾದಪ್ರಾಸಾದಸ್ತವ ಚ ಭವಿತಾಯಂ ಸುರುಚಿರಃ ॥೧೨೫॥

---

ಕರುಣೆಯೆಂಬ ಅಮೃತಪ್ರವಾಹವನ್ನು ಸುರಿಸುತ್ತಾ ಪ್ರಕಾಶಿಸುವ ಕಟಾಕ್ಷವುಳ್ಳ ಪರಶಿವನು ತನ್ನ ಅಸಾಧಾರಣವಾದ ಮಹಿಮೆಯಿಂದ ಮೂರುಲೋಕಗಳನ್ನೇ ರಕ್ಷಿಸುತ್ತಿರುವನು. ತನ್ನ ಜಟಾಕಲಾಪದಲ್ಲಿ ಅಡಗಿರುವ ಗಂಗಾನದಿಯಲ್ಲಿ ಬೆಳೆದ ಶುದ್ಧವಾದ ಕಮಲಗಳ ಪರಾಗದಿಂದ ಜಟಾಜೂಟವೇ ಒಂದು ವಿಚಿತ್ರವರ್ಣವುಳ್ಳದ್ದಾಗಿರುವುದು. ಇಂತಹ ಮಹಾಮಹಿಮನಾದ ಶಂಕರನನ್ನು ನಾನು ಸರ್ವದಾ ಧ್ಯಾನಮಾಡುತ್ತಿರುವೆನು. ॥೧೨೩॥

ಪಾರ್ವತೀಪತಿಯೇ, ಸ್ವಾಮಿಯೇ, ನಾನು ಸರ್ವದಾ ನಿನ್ನಲ್ಲಿಯೇ ಭಕ್ತಿಯಿಟ್ಟವನಾಗಿ, ನಿನ್ನನ್ನೇ ಮರೆಹೊಕ್ಕು ಮತ್ತಾವದೇವತೆಯನ್ನೂ ಲಕ್ಷ್ಯಮಾಡದೆ ನಿಂತಿರುವೆನು. ಇಂತಹ ನನ್ನಮೇಲೆ ನೀನು ದಯೆತೋರದೆ ಹೋದರೆ ನಾನು ಮತ್ತಾರನ್ನು ನನ್ನ ಇಷ್ಟಾರ್ಥಸಿದ್ಧಿಗಾಗಿ ಪ್ರಾರ್ಥಿಸಲಿ. ಏಕೆಂದರೆ ಈ ಪ್ರಪಂಚವೆಲ್ಲವೂ, ಅದ್ವೈತರೂಪಿಯಾದ ನಿನ್ನೊಬ್ಬನಲ್ಲಿಯೇ ಅಡಗಿರುವುದರಿಂದ, ನಾನು ಇನ್ನಾವದೇವರನ್ನು ನಿನಗಿಂತ ಬೇರೆಯಾಗಿ ಕಾಣುವುದು? ಮಹೇಶ್ವರನೇ, ನೀನೊಬ್ಬನೇ ನನಗೆ ಗತಿ. ನಿನಗೆ ಸದಾ ನಮಸ್ಕಾರ. ॥೧೨೪॥

ಪರಮೇಶ್ವರನೇ, ನನ್ನ ಮನಸ್ಸು ಕ್ಷಣಕಾಲವೂ ಒಂದುಕಡೆ ನಿಲ್ಲದೆ ಅಲ್ಲಿಂದಿಲ್ಲಿಗೆ ಚಲಿಸುತ್ತಲೇ ಇರುವುದು. ಇನ್ನೂ ಅದಕ್ಕೆ ಗರ್ವವೊಂದು ಒದಗುವುದಾದರೆ ಇನ್ನು ಹೇಳುವುದೇನಿದೆ? ಆದ್ದರಿಂದ ಮಹಾದೇವನೇ, ನೀನು ದಯೆಯಿಟ್ಟು

ವಂದೇ ಸಿಂದೂರವರ್ಣಂ ಸುರಸರಿತ ಜಟಾಚಾರುಚಂದ್ರಾವತಂಸಂ
ಫಾಲೋದ್ಯನ್ನೇತ್ರಮೀಶಂ ಸ್ಮಿತಮುಖಕಮಲಂ ದಿವ್ಯಭೂಷಾಂಗರಾಗಂ ।
ವಾಮೋರುನ್ಯಸ್ತಪಾಣಿಂ ತರುಣಕುವಲಯಂ ಸಂದಧಂತ್ಯಾ ಉಮಾಯಾಃ
ವೃತ್ತೋತ್ತುಂಗಸ್ತನಾಗ್ರೇ ನಿಹಿತಕರತಲಂ ವೇದಟಂಕೇಷ್ಟಹಸ್ತಂ ॥೧೨೬॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಷಣ್ಮುಖಕೃತ ಜಯಸ್ತುತಿ ನಿರೂಪಣಂ ನಾಮ ಚತುಸ್ತ್ರಿಂಶೋಽಧ್ಯಾಯಃ

---

ಪಾರ್ವತಿಯೊಡಗೂಡಿ ಆ ನನ್ನ ಮನಸ್ಸನ್ನು ಆಕ್ರಮಿಸಿ ಅದರಲ್ಲಿಯೇ ವಾಸ ಮಾಡುವೆನಾದರೆ ಆಗ ಈ ಚಂಚಲವಾದ ನನ್ನ ಮನಸ್ಸು ನಿನಗೆ ದಿವ್ಯವಾದ ಪ್ರಾಸಾದದಂತಾಗುವುದು. ನಾನೂ ಸಹ ನಿನ್ನ ಪೂರ್ಣಾನುಗ್ರಹಕ್ಕೆ ಪಾತ್ರನಾಗುವೆನು. ಇದು ನಿಜ. ಈ ವಿಷಯದಲ್ಲಿ ನನ್ನ ಮೇಲೆ ಕೃಪೆಮಾಡು. ॥೧೨೫॥

ಮಹೇಶ್ವರನು ಸಿಂದೂರವರ್ಣದಿಂದ ರಂಜಿಸುವವನು. ದೇವಗಂಗೆಯಿಂದ ಪ್ರಕಾಶಿತವಾದ ಜಟಾಕಲಾಪವುಳ್ಳವನು. ಚಂದ್ರನಿಂದ ಅಲಂಕೃತವಾದ ಶಿರೋಭಾಗವುಳ್ಳವನು. ಎಡಭಾಗದ ತೊಡೆಯಮೇಲೆ ಪತ್ನಿಯನ್ನು ಕೂರಿಸಿಕೊಂಡಿರುವವನು. ಹಾಗೆಯೇ ಕಮಲವನ್ನು ಹಿಡಿದಿರುವ ಪಾರ್ವತಿಯ ಎತ್ತರವಾದ ಸ್ತನಗಳ ಮೇಲೆ ತನ್ನ ಕೈಯನ್ನಿಟ್ಟು ಆನಂದಮೂರ್ತಿಯಾಗಿ ಕುಳಿತಿರುವವನು. ಇಂತಹ ಮಹಾದೇವನನ್ನು ನಾನು ತಪ್ಪದೆ ಧ್ಯಾನಮಾಡುತ್ತಾ ನಮಸ್ಕರಿಸುವೆನು ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳೊಂದಿಗೆ ಶಿವಮಹಿಮೆಯನ್ನು ವಿವರಿಸಿ ಹೀಗೆ ನುಡಿದನು. ॥೧೨೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ
ಮೂವತ್ತು ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಪಂಚತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಮಾಮಾಹ ಶಂಕರಸ್ತತ್ರ ರಹಸ್ಯಂ ಶೈವಮುತ್ತಮಂ ।
ದ್ವಾದಶಾಂಶಸಮಾಯುಕ್ತಂ ಇದಮೇವ ಮಹಾರ್ಥದಂ ॥೧॥

ಶಿವಜ್ಞಾನಮಹಾಸಾರಂ ಧರ್ಮಕಾಮಾರ್ಥಮೋಕ್ಷದಂ ।
ಶಿವಭಕ್ತಿಕರಂ ಪುಂಸಾಂ ಕಥಾರತ್ನಮಹೋದಧಿಂ ॥೨॥

ಶ್ರಾವ್ಯಂ ನವ್ಯಮಿದಂ ಭವ್ಯಂ ಗೌರ್ಯೈ ದಿವ್ಯಂ ಶಿವೋದಿತಂ ।
ಮಯಾ ತದಂಕಸಂಸ್ಥೇನ ಶ್ರುತಮೇತನ್ಮಹೋದಯಂ ॥೩॥

---

## ಮೂವತ್ತೈದನೆಯ ಅಧ್ಯಾಯ

ಬಳಿಕ ಷಣ್ಮುಖನು ಇಂತೆಂದನು—ಹೀಗೆ ಸ್ತುತಿಸಿ ನಾನು ಪರಶಿವನನ್ನು ಪೂಜಿಸಿ ನಮಿಸಲು, ಶಿವನು ನನಗೆ ಪ್ರಸನ್ನನಾಗಿ ಹನ್ನೆರಡು ಅಂಶಗಳಿಂದ ಕೂಡಿದ ವಿಸ್ತಾರವಾದ ಮತ್ತು ಪರಮಪುರುಷಾರ್ಥಸಾಧಕವಾದ ಈ ಶಿವರಹಸ್ಯವನ್ನು ನನಗೆ ತಿಳಿಯಪಡಿಸಿದನು. ॥೧॥

ನಾನು ಆ ಪರಶಿವನ ತೊಡೆಯ ಮೇಲೆಯೇ ಕುಳಿತು, ನಿರ್ಮಲವಾದ ವಿಜ್ಞಾನವನ್ನು ದಯಪಾಲಿಸುವುದೂ, ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಿಗೆ ಸಾಧಕವೂ, ಈಶ್ವರಭಕ್ತಿಯನ್ನು ಉಂಟುಮಾಡುವುದೂ, ನಾನಾ ಬಗೆಯ ಕಥಾಸಮೂಹಗಳಿಂದ ಕೂಡಿರುವುದೂ ಸುಶ್ರಾವ್ಯವೂ ನೂತನವೂ ಆದ

ಪುಣ್ಯಂ ಶಿವರಹಸ್ಯಾಖ್ಯಮಿತಿಹಾಸಮಹೋದಯಂ ।
ಶೃಣ್ವತಾಂ ಪಠತಾಂ ವಾಪಿ ಸರ್ವಪಾಪಪ್ರಣಾಶನಂ ॥೪॥

ಶಿವಪ್ರಸಾದಕರಣಂ ಸ್ವರ್ಗ್ಯಂ ಪುತ್ರ್ಯಂ ಮಹಾಘಭಿತ್ ।
ಆಯುರಾರೋಗ್ಯದಂ ಪುಂಸಾಂ ಶಾಂಭವಾನಾಂ ಮಹಾತ್ಮನಾಂ ॥೫॥

ಭಕ್ತಿಭಾಗ್ಯಪ್ರದಂ ಶಂಭೋಃ ಸರ್ವರೋಗವಿನಾಶನಂ ।
ಮಾನಾಹ ಶಂಕರೋಽಸ್ಯೈವ ಫಲಂ ಶ್ರವಣಸಂಭವಂ ॥೬॥

ಅಪಾತ್ರಂ ಪಾತ್ರಮಪಿ ಚ ಶ್ರವಣೇ ಧಾರಣೇ ವಿಭುಃ ।
ಕಾಲವಾಚಕಪೂಜಾಯಾಃ ಮಹಿಮಾ ಪರಮೋದಯಂ ॥೭॥

ಮತ್ತಃ ಶೃಣು ಶಿವೋಕ್ತಂ ತ್ವಂ ರಹಸ್ಯಮಿದಮುದ್ಭುತಂ ।
ಗೌರ್ಯೈ ಪ್ರೋಕ್ತಂ ಶಿವೇನೈವ ಮಯಾ ತಚ್ಛ್ರುತಮಾದರಾತ್ ॥೮॥

---

ಈ ಶಿವರಹಸ್ಯವನ್ನು ಪರಶಿವನು ಪ್ರೇಯಸಿಯಾದ ಪಾರ್ವತಿಗೆ ಹೇಳುತ್ತಿರುವಾಗ ಅದನ್ನು ನಾನೂ ಸಹ ಕೇಳಿದೆನು. ॥೨-೩॥

ಪುಣ್ಯಕರವಾದ ಈ ಶಿವರಹಸ್ಯವೆಂಬ ಇತಿಹಾಸವನ್ನು ಕೇಳುವವರ ಅಥವಾ ಪಠಿಸುವವರ ಸಕಲ ಪಾಪಗಳೂ ಶೀಘ್ರವಾಗಿ ನಾಶವನ್ನೈದುವುವು. ॥೪॥

ಈ ಶಿವರಹಸ್ಯವು ಈಶ್ವರಾನುಗ್ರಹಕ್ಕೆ ಸಾಧಕವೂ, ಇಹಪರಗಳಲ್ಲಿ ಸತ್ಸಂತಾನವನ್ನೂ ಮತ್ತು ಪುಣ್ಯಲೋಕವನ್ನೂ ದಯಪಾಲಿಸುವುದಾಗಿರುವುದಲ್ಲದೆ, ಈಶ್ವರ ಭಕ್ತಾಗ್ರೇಸರರಾದ ಜನರಿಗೆ ದೀರ್ಘವಾದ ಆಯುರಾರೋಗ್ಯಗಳನ್ನು ದಯಪಾಲಿಸುವುದು. ॥೫॥

ಭಕ್ತಿಭಾಗ್ಯಗಳನ್ನು ದಯಪಾಲಿಸುವ ಮತ್ತು ಸಕಲ ರೋಗಗಳನ್ನೂ ನಿರ್ಮೂಲಗೊಳಿಸುವ ಈ ಶಿವರಹಸ್ಯದ ಶ್ರವಣದಿಂದ ಸಂಭವಿಸುವ ಫಲವನ್ನು ಶಿವನೇ ಹೇಳಿರುವನಲ್ಲದೆ, ಇದರ ಶ್ರವಣ ಧಾರಣೆಗಳಲ್ಲಿ ಯಾರು ಪಾತ್ರರು ಮತ್ತು ಯಾರು ಅಪಾತ್ರರು ಎಂಬುದನ್ನೂ ಮತ್ತು ಸಕಾಲದಲ್ಲಿ ಆಚರಿಸಿದ ಶಿವಪೂಜೆಯ ಮಹಿಮೆಯನ್ನೂ ಸಹ ಶಿವನೇ ಹೇಳಿರುವನು. ॥೬-೭॥

ಆದುದರಿಂದ ನೀನು ನನ್ನ ಮುಖದಿಂದ ಈ ಶಿವರಹಸ್ಯವನ್ನು ಲಾಲಿಸು. ಇದನ್ನು ಈ ಹಿಂದೆ ಶಿವನು ಪಾರ್ವತಿಗೆ ಹೇಳುತ್ತಿರುವಾಗಲೇ ನಾನೂ ಸಹ

ಸಹೈಭಿರ್ಗಣಮುಖ್ಯೈಶ್ಚ ಶೃಣು ತ್ವಂ ಭೂಸುರೈಃ ಸುರೈಃ ॥೯॥

॥ ಶ್ರೀ ಈಶ್ವರ ಉವಾಚ ॥

ನಿಗಮಾಗಮಸಾರಮೇತದಾದ್ಯಂ
ಸುಗಮಂ ಭಕ್ತಿಮತಾಂ ಸುಗದ್ಯಪದ್ಯಂ।
ವರವಿದ್ಯಾಪ್ರದಮೇತದಾದ್ಯಹೃದ್ಯಂ
ಶಿವಶಾಸ್ತ್ರಂ ಕಿಲ ಪಾಪಭೇದಶಸ್ತ್ರಂ ॥೧೦॥

ಶಬ್ದೈರಬ್ದಶತೇಽಪಿ ಕರ್ಕಶಮಹಾತರ್ಕೈಶ್ಚ ಮೀಮಾಂಸಕಾ
ಯಾಸೈರ್ಘಾಸಮಯೈಃ ಪ್ರಬೋಧ ಇಷವೋ ವೇದಾಂತದಾಂತಾಶ್ಚಯೇ।
ಶ್ರಾವ್ಯೇ ಕಾವ್ಯಶತೇಽಪಿ ನ ವ್ಯಯಮಮೋ ಪಾಪಸ್ಯ ಕಿಂ ಮುಕ್ತಿದಂ
ವ್ಯರ್ಥಾನರ್ಥಕಥಾಸುಬೋಧರಸಿಕಾಃ ಯೇ ತೇ ನರಾಃ ಪಾಮರಾಃ ॥೧೧॥

---

ಅದನ್ನು ಕೇಳಿರುವೆನು. ಆದ್ದರಿಂದ ಇದೀಗ ನೀನು ಈ ಬ್ರಾಹ್ಮಣೋತ್ತಮರಿಂದಲೂ ಮತ್ತು ಪ್ರಮಥಗಣಗಳಿಂದಲೂ ಸಮೇತನಾಗಿ ಪವಿತ್ರವಾದ ಆ ಶಿವರಹಸ್ಯವನ್ನು ಕೇಳು. ॥೮-೯॥

ಈ ಶಿವರಹಸ್ಯದ ಮಹಿಮೆಯನ್ನು ವರ್ಣಿಸುವಾಗ ಆ ಪರಶಿವನು ಪಾರ್ವತೀದೇವಿಗೆ ಹೀಗೆಂದಿರುವನು — ವೇದ ಮತ್ತು ಆಗಮಶಾಸ್ತ್ರಗಳಲ್ಲಿ ಮೊಟ್ಟಮೊದಲನೆಯದೆನಿಸಿ ಸುಲಭವೂ, ಹೃದಯಂಗಮವಾದ ಗದ್ಯಪದ್ಯಗಳಿಂದ ಒಳಗೊಂಡು ವಿಶುದ್ಧವಾದ ಜ್ಞಾನವನ್ನುಂಟುಮಾಡುವ ಈ ಶಿವರಹಸ್ಯವು ಭಕ್ತರ ಪಾಪಗಳನ್ನು ಭೇದಿಸುವುದರಲ್ಲಿ ಹರಿತವಾದ ಶಸ್ತ್ರದಂತಿರುವುದು. ಶಿವತತ್ತ್ವವನ್ನು ಸುಲಭವಾಗಿ ತಿಳಿಸುವುದೆಂದರೆ ಈ ಶಿವರಹಸ್ಯವೊಂದೇ. ॥೧೦॥

ಎಲೌ ಗಿರಿಜೆಯೇ ಕೇಳು— ನಿರಂತರವಾಗಿ ಕರ್ಣಕಠೋರವಾದ ಶಬ್ದಜಾಲಗಳನ್ನು ಉಚ್ಚರಿಸುವುದರಿಂದಾಗಲಿ, ಕರ್ಣಕಠೋರವಾದ ಶುಷ್ಕತರ್ಕಗಳನ್ನು ಹೂಡುವುದರಿಂದಾಗಲಿ, ಕರ್ಮಕಾಂಡ ವಿಚಾರಗಳಿಂದಾಗಲಿ, ವೇದಾಂತಗಳ ಪಾರಾಯಣದಿಂದಾಗಲಿ ಇಂದ್ರಿಯನಿಗ್ರಹವನ್ನು ಪಡೆದುದರಿಂದಲೇ ಆಗಲಿ ಸರ್ವಥಾ ಪಾಪವು ಕ್ಷಯಿಸಲಾರದು. ಹೀಗಿರುವಲ್ಲಿ ಅವುಗಳೆಲ್ಲಾ ಮುಕ್ತಿಯನ್ನು ಕೊಡಬಲ್ಲವೇ. ಆದುದರಿಂದ ಅನರ್ಥಕಾರಿಗಳೂ ವ್ಯರ್ಥವೂ ಆದ ಕಾವ್ಯಾದಿ ವಿಷಯಗಳಲ್ಲಿ

ಶ್ರುತ್ವೇದಂ ನಿಗಮಾಂತಸಾರಸುಮಧುಪ್ರಾಪ್ಯಂ ಕಿಮನ್ಯತ್ಫಲಂ
ಶ್ರೀವಿಶ್ವೇಶ್ವರಪಾದಪದ್ಮಭಜನೈರ್ಮುಕ್ತಿಃ ಪರಾ ಶಾಂಭವೈಃ ।
ಲಭ್ಯಾ ದೇವ ಶಿವೈಕಸಕ್ತಮತಿಭಿಃ ಪಾಪೌಘಸಂಹಾರಿಭಿಃ
ನಾನ್ಯಚ್ಛ್ರಾವ್ಯಮುಶಂತಿ ಕೋಕಿಲಗಿರಂ ಶ್ರುತ್ವೈವ ಕಾಕಸ್ವರಂ ॥೧೨॥

ಬತ ಹತವಿಧಿನಾದ್ಯವಂಚಿತಾಸ್ತೇ
ಸುರತಿರ್ಯಙ್ನರರಾಸಭಾ ಭುವೋ ಭಾರಾಃ ।
ಪರಿಹಾಯ ರಹಸ್ಯಶೈವಸಾರಂ
ಪರಿಖಿದ್ಯಂತಿ ಮುಧಾನ್ಯಶಾಸ್ತ್ರಲೋಕಾಃ ॥೧೩॥

ಲಾಸ್ಯಾಲಸ್ಯಾದಿಹಾಸ್ಯೈರ್ನಯತಿ ದಿನಮುಮೇ ಸ್ವಸ್ಯ ನಾನ್ಯತ್ಫಲಂ ಸೋ
ಮನ್ಯೇದನ್ಯಸುದಾರುಭೋಗಭರಿತಶ್ವಾಭಕ್ಷ್ಯಭಕ್ಷ್ಯೇ ರತಃ ।

---

ಮಗ್ನರಾದ ಜನರು ಪಾಪವನ್ನೇ ಗಳಿಸುವರಲ್ಲದೇ ಅವರಿಗೆ ಎಂದಿಗೂ ಮುಕ್ತಿಯು ದೊರೆಯಲಾರದು. ॥೧೧॥

ಅಮೃತದಂತಿರುವ ಈ ಶಿವರಹಸ್ಯವೆಂಬ ವೇದಾಂತಸಾರವನ್ನು ಕೇಳಿದವನು ಮುಕ್ತಿಯನ್ನಲ್ಲದೆ ಇನ್ನಾವ ಫಲವನ್ನು ತಾನೇ ಬಯಸುವನು? ಪರಶಿವನಲ್ಲಿಯೇ ಆಸಕ್ತರಾಗಿ ಶ್ರೀವಿಶ್ವೇಶ್ವರನ ಅಡಿದಾವರೆಗಳನ್ನು ಸದಾ ಸೇವಿಸುವ ಈಶ್ವರಭಕ್ತಾಗ್ರೇಸರರಿಗೆ ಮುಕ್ತಿಯು ಅನಾಯಾಸವಾಗಿ ಲಭಿಸುವುದು. ಈಶ್ವರಭಕ್ತರಾದವರು ಶಿವರಹಸ್ಯವನ್ನಲ್ಲದೆ ಇನ್ನಾವುದನ್ನೂ ಕೇಳಲಾರರು. ಕರ್ಣಮಧುರವಾದ ಕೋಗಿಲೆಯ ಸ್ವರವನ್ನು ಕೇಳಿದವರು, ಅಸಹ್ಯವಾದ ಕಾಗೆಯ ಧ್ವನಿಯನ್ನು ಎಂದಾದರೂ ಕೇಳಬಯಸುವರೇ! ॥೧೨॥

ಅಯ್ಯೋ, ಈ ಶಿವರಹಸ್ಯವನ್ನು ಪಠಿಸದಿರುವ ಅಥವಾ ಕೇಳದಿರುವ, ತಿರ್ಯಕ್ಪ್ರಾಣಿಗಳು, ಮನುಷ್ಯರು ಇವರು ಕತ್ತೆಗಳಂತೆ ಆ ವಿಧಿಹತಕನಿಂದ ವಂಚಿತರಾಗಿ ಭೂಭಾರಕ್ಕೋಸ್ಕರವೇ ಜನ್ಮವನ್ನು ತಾಳಿರುವರಲ್ಲವೇ! ಲೋಕದಲ್ಲಿ ಈ ಶಿವರಹಸ್ಯವನ್ನು ಬಿಟ್ಟು, ಇತರ ಶಾಸ್ತ್ರಗಳಲ್ಲಿ ಮಗ್ನರಾಗಿರುವ ಜನರು ವ್ಯರ್ಥವಾಗಿ ದುಃಖವನ್ನನುಭವಿಸುವರೇ ಹೊರತು ಎಂದೂ ಸುಖಿಗಳೆನಿಸರು. ॥೧೩॥

ಎಲೌ ಪಾರ್ವತಿಯೇ! ಲೋಕದಲ್ಲಿ ಮನುಜನು ಅನವರತವೂ, ನೃತ್ಯ, ನಾಟ್ಯ, ಹಾಸ್ಯ ಇವುಗಳಿಂದ ತನ್ನ ಮನಸ್ಸನ್ನು ಆನಂದಗೊಳಿಸಿ ದಿನಗಳನ್ನು ಕಳೆ

ದುಷ್ಟಾಲಾಪದುರನ್ನಭಕ್ಷಣರತಃ ಕಾಮೇನ ಯೋಷೇಕ್ಷಣೈಃ
ಕ್ಷೀಣಾಯುಃ ಕಿಲ ಕಾಲಲೋಲಸುಮಹಾಘೋಷೇಣ ಸಂದಾರಿತಃ ॥೧೪॥

ಯಜ್ಞಾಭಿಜ್ಞಾ ಕಿಲ ಜ್ಞಾಃ ಸತತಪರಿಚಿತಾಶ್ಶಾದಿಶೀಕ್ಷಾಸುವೀಕ್ಷಾಃ
ನಿದ್ರಾತಂದ್ರಾ ದರಿದ್ರಕ್ಷುಭಿತಹತಧಿಯೋಽಪ್ಯಾಪಿಸಂಖ್ಯಾಸು ಸೌಖ್ಯಾಃ।
ದುಷ್ಪೂರೋದರಪೂರಣೋದನ ಸದಾ ತದ್ರೋದನೇನಾಸ್ತಧೀಃ
ಕಿಂ ವಾಸ್ಯ ಕ್ಷಣವೀಕ್ಷಣಾಯ ಯತತೇ ನೋ ಕೋ ವರಾಕಃ ಪರಂ ॥೧೫॥

ಲಾಸ್ಯಾಲಸ್ಯಾದಿಹಾಸ್ಯಪ್ರಿಯಸುರತರತಾ ಯೋಷಿತಾಂ ಭಾವಭೂಷಾ।
ಘೋಷಾವರ್ಣಾಭದೇಹಾ ಸುರನರಮುನಯಸ್ತ್ವಸ್ಯ ವೀಕ್ಷಾಸುಲೀಕ್ಷಾ ॥೧೬॥

ಕೋ ವಾ ಪರಂ ಶಿವರಹಸ್ಯಶಿವೈಕಸಾರಂ
ತತ್ರತ್ಯಚಿತ್ರಸುಪವಿತ್ರತರಾರ್ಥಶಬ್ದಂ।

---

ಯುವನು. ಅವನು ಈ ವಿಷಯೋಪಭೋಗಗಳಿಂದುಂಟಾಗುವ ಫಲವನ್ನು ಬಿಟ್ಟು ಇನ್ನಾವ ಫಲವೂ ತನಗೆ ಇರುವುದಿಲ್ಲವೆಂದು ತಿಳಿದು ಸುಂದರಿಯಾದ ಕಾಮಿನಿಯರನ್ನು ಭೋಗಿಸುತ್ತಾ, ಅಭಕ್ಷ್ಯಭಕ್ಷಣದಲ್ಲಿ ಆಸಕ್ತನಾಗಿ ಅನವರತವೂ, ಕೆಟ್ಟ ಕೆಟ್ಟ ಮಾತುಗಳನ್ನಾಡುತ್ತಾ ಕದನ್ನ ಭಕ್ಷಣದಲ್ಲಿಯೇ ತತ್ಪರನಾಗಿ ಕಾಲವನ್ನು ಕಳೆಯುವನು. ಅವನ ಆಯುರ್ದಾಯವು ಹೀಗೆಯೇ ಕ್ಷಯಿಸಿ ಅಂತ್ಯದಲ್ಲಿ, ಮೃತ್ಯುವಿನ ಬಾಯಿಗೆ ತುತ್ತಾಗುವನು. ॥೧೪॥

ಯಜ್ಞಾದಿ ಕರ್ಮಗಳಲ್ಲಿ ನಿರತರಾದವರೂ, ಸಮಸ್ತ ಶಾಸ್ತ್ರ ಜ್ಞಾನವನ್ನೂ ಸಂಪಾದಿಸಿ ಅದರಲ್ಲಿ ಸಮರ್ಥರೆನಿಸಿದವರೂ, ನಿದ್ರಾ ತಂದ್ರಾದಿ ಸಕಲ ಕಾರ್ಯಗಳಲ್ಲಿಯೂ ಸಿಲುಕಿ ನರಳುತ್ತಿರುವವರೂ, ಆಗಿ ಅನೇಕ ಸಹಸ್ರಾರು ಸಂಖ್ಯೆಯ ಮಾನವರೂ ಯಾವುದೋ ರೀತಿಯಲ್ಲಿ ಕಾಲಕಳೆಯುತ್ತಿರುವರು. ಮೂಢನಾದ ಮಾನವನು ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುವ ಪ್ರಯತ್ನದಲ್ಲಿಯೇ ನಿರತನಾಗಿ, ಅದರಲ್ಲಿಯೇ ಓಡಾಡುತ್ತಾ, ತನ್ನ ಬುದ್ಧಿಯನ್ನು ಮಂಕುಗೊಳಿಸಿಕೊಂಡು, ಕ್ಷಣಕಾಲವಾದರೂ ಈ ಶಿವರಹಸ್ಯವನ್ನು ನೋಡಿ ಆನಂದಪಡಲಾರದೆ ಕಾಲಕಳೆಯುವನು. ॥೧೫॥

ಸ್ತ್ರೀಯರ ಹಾವಭಾವ ವಿಲಾಸಾದಿಗಳಿಗೆ ಮರುಳಾಗಿ, ಅವರೊಡನೆ ಸುರತ ಸೌಖ್ಯವನ್ನನುಭವಿಸುತ್ತಾ ಕಾಲಕಳೆಯುವ ಮಾನವರೂ, ಹಾಗೆಯೇ, ನಾನಾರೀತಿಯ

ಅಬ್ದೈಶ್ಚ ಕೋಟಿಭಿರಪಿ ಪ್ರಮಥಾಧಿನಾಥ
ಭಕ್ತಸ್ಯ ಶುದ್ಧಮನಸಃ ಪ್ರಸರತ್ಯವಶ್ಯಂ ॥೧೭॥

ವಿದಗ್ಧೋಽಪಿ ಮುಗ್ಧೋ ಭವೇಚ್ಚೇವ ದಗ್ಧೋ
ನ ದುಗ್ಧಾಂಬುಧೇಃ ಪಾನಕೃತಶ್ವಾನಜನ್ಮ ।
ಕನಿಷ್ಠೋಽಪಿ ಶಿಷ್ಟಾದ್ವಿಶಿಷ್ಟೋಽಸ್ಯ ಭಕ್ತಃ
ಕಿಲಾಸ್ಯಾರ್ಥವೇತ್ತಾ (?) ॥೧೮॥

ವರ್ಣೋಽಪರ್ಣವದಸ್ಯ ಧಾರಣವಿಧೌ ಸ್ವಸ್ಥೋ ಗೃಹಸ್ಥೋ ನ ವೈ
ಅನ್ಯಾಯಾರ್ಜನಕುಕ್ಷಿಪೂರಣರತೋ ವನ್ಯೋಽಪಿ ಸಂನ್ಯಾಸ್ಯಪಿ ।
ಕಿಂ ವಾಸ್ಯಾರ್ಥವಿಚಿತ್ರಶಬ್ದಸುಗತೀ ಸಾಹಿತ್ಯರೀತಿಶ್ಚಿವೇ
ಜ್ಞಾತುಂ ವೀಕ್ಷಿತುಮಸ್ಯಭಕ್ತಿಹೃದಯಾ ಘೂರ್ಣಂತಿ ತೂರ್ಣಂ ಬುಧಾಃ ॥೧೯॥

---

ಸುಂದರವಾದ ದೇಹವುಳ್ಳ ಸುರರೂ, ಮುನಿಗಳೂ, ಪರಶಿವನ ದೃಷ್ಟಿಯಲ್ಲಿ ಕೇವಲ ಸೊಳ್ಳೆಗಳಂತೆ ಕಾಲಕಳೆಯುವರಾಗುವರು. ॥೧೬॥

ಪ್ರಮಥಾಧಿಪತಿಯಾದ ಪರಶಿವನ ಭಕ್ತರೆನಿಸಿದವರಿಗೆ ಸುಲಭವಾಗಿ ತೋರುವ ಶಿವರಹಸ್ಯವೆಂಬ ಈ ಪವಿತ್ರಗ್ರಂಥದಲ್ಲಿ ಅತ್ಯಂತ ಪವಿತ್ರವೂ, ಶುದ್ಧವೂ ಆದ ಪದಗಳ ಅರ್ಥವು ಕೋಟಿ ವರ್ಷಗಳಾದರೂ ಮತ್ತಾರಿಗೂ ಹೊಳೆಯಲಾರದು. ಈಶ್ವರಭಕ್ತನೊಬ್ಬನಿಗೆ ಮಾತ್ರ ಈ ಪವಿತ್ರಗ್ರಂಥವು ಸ್ವಾಧೀನವಾಗುವುದೇ ಹೊರತು ಮತ್ತಾರಿಗೂ ಸ್ಫುರಿಸಲಾರದು. ॥೧೭॥

ಪಾಪಿಯಾದವನು ಎಷ್ಟೇ ಪಂಡಿತನಾಗಿದ್ದರೂ ಮೂಢನೆನಿಸುವನು. ಅವನಿಗೆ ಕ್ಷೀರಸಮುದ್ರ ಪಾನವೂ ನಾಯಿಯ ಜನ್ಮವನ್ನು ಕೊಡುವುದಾಗುವುದು. ಈ ಶಿವರಹಸ್ಯದ ಅರ್ಥವನ್ನು ಯಾವನು ಸಂಪೂರ್ಣವಾಗಿ ಅರಿಯುವನೋ, ಆವನು ಎಷ್ಟೇ ಕನಿಷ್ಠನಾದರೂ; ಶಿಷ್ಯರಿಗಿಂತ ಉತ್ತಮನೆನಿಸುವನು. ಅವನೇ ನಿಜವಾದ ಸುಕೃತಿಯು. ॥೧೮॥

ಬ್ರಹ್ಮಚಾರಿಯಾದವನು ಪಲಾಶದಂಡವನ್ನು ಹಿಡಿದು ಅಗ್ನಿಕಾರ್ಯಾದಿಗಳಲ್ಲಿ ಆಸಕ್ತನಾಗುವನು. ಗೃಹಸ್ಥನೂ, ವಾನಪ್ರಸ್ಥನೂ, ಸಂನ್ಯಾಸಿಯೂ ತಮ್ಮ ಉದರ ಪೂರಣಮಾಡಿಕೊಳ್ಳುವ ಕಾರ್ಯದಲ್ಲಿಯೂ, ಅರ್ಥಾರ್ಜನೆಯಲ್ಲಿಯೂ ಮನಸ್ಸಿಡು

ದ್ವಿಜಾಪ್ಯಜಾಭಾಃ ಕಿಲ ಬಾಹುಜಾತಾ
ಜಿತಾಕ್ರುಧಾ ಸರ್ವಪರಾಹತಾಃ ಸದಾ ।
ವೇಶ್ಯಾಸು ವಶ್ಯಾಕಿಲ ವೈಶ್ಯವರ್ಗಾ
ನಿಸರ್ಗತಃ ಶೂದ್ರಗಣಾ ದರಿದ್ರಾಃ ॥೨೦॥

ಸಂಕೀರ್ಣಜಾತಾ ಕಿಲ ನಾತ್ರ ಭಕ್ತಾಃ ॥೨೧॥

ಕಿಂ ಮತ್ತೇಭಸಮೋ ಮಲಾಶನಕಿಟಿಃ ಕಿಂ ವಾ ದ್ವಿಜೋಪ್ಯಂತ್ಯಜೋ
ಭೂಯಾತ್ತದ್ವದುಮೇ ಪುರಾಣನಿಚಯಂ ಶಾಸ್ತ್ರಾಣಿ ಕಾವ್ಯಂ ಜಪಂ ।
ಹಾಸ್ಯಂ ಯಾಸ್ಯತಿ ಕೀಶಲಾಸ್ಯಮಿವ ತತ್ಸನ್ನರ್ತಕೀನಾಂ ಪುರಾ
ಚಾನ್ಯಚ್ಛೈವರಹಸ್ಯಶಾಂಭವಕಥಾ ಕೋಟ್ಯಂಶತೋಪ್ಯೋ ಸಮಃ ॥೨೨॥

---

ವರು. ಇಂತಹವರು ಈ ಶಿವರಹಸ್ಯದ ಅರ್ಥವನ್ನು ಅರಿಯುವ ಬಗೆ ಹೇಗೆ? ಇದರ ಪದವಿನ್ಯಾಸ, ಶಬ್ದಚಮತ್ಕಾರ, ಸಾಹಿತ್ಯ ಸಂಪತ್ತು ಇವುಗಳನ್ನು ವಿದ್ವಾಂಸರಾದರೂ ಸಹ ಸರಿಯಾಗಿ ಅರಿಯಲಾರದೆ, ಇದನ್ನು ನೋಡಿದೊಡನೆ ಭ್ರಾಂತರಾಗಿ ಬಿಡುವರು. ಅಷ್ಟು ರಸಭರಿತವಾದ ಗ್ರಂಥವಿದು. ॥೧೯॥

ಬ್ರಾಹ್ಮಣರು ಆಡಿನಂತೆ ಕೇವಲ ಸ್ವೋದರಪೂರಣಾರ್ಥವಾಗಿ ಸಂಚರಿಸುವರು. ಕ್ಷತ್ರಿಯರು ಕೋಪಾವೇಶಪರವಶರಾಗಿ, ಶತ್ರುಗಳಿಂದ ಪರಾಜಿತರಾಗುವರು. ವೈಶ್ಯರು ವೇಶ್ಯಾಲಂಪಟರಾಗಿ ಕಾಲಕಳೆಯುವರು. ಶೂದ್ರರು ಸ್ವಭಾವವಾಗಿಯೇ ದರಿದ್ರರಾಗಿರುವರು. ಸಂಕೀರ್ಣಜಾತಿಯವರಾದರೋ ಈಶ್ವರನಿಗೆ ಭಕ್ತರೇ ಆಗುವುದಿಲ್ಲ. ॥೨೦॥

ಮಲವನ್ನು ತಿಂದು ಜೀವಿಸುವ ಹಂದಿಯು ಎಂದಾದರೂ ಮದ್ದಾನೆಗೆ ಸಮನಾಗುವುದೇ? ನರ್ತಕಿಯ ನಾಟ್ಯದ ಮುಂದೆ ಕುಂಟನ ಕುಣಿತವು ಶೋಭೆಗಟ್ಟುವುದೇ? ಅದೇ ರೀತಿ ಪವಿತ್ರವಾದ ಶ್ರೀ ಶಿವರಹಸ್ಯದ ಮುಂದೆ ಉಳಿದ ಎಲ್ಲ ಪುರಾಣಗಳೂ, ಶಾಸ್ತ್ರಗಳೂ, ಕಾವ್ಯಗಳೂ ಜಪ್ಯಮಂತ್ರಗಳೂ ಹಾಸ್ಯಕ್ಕೆ ಪಾತ್ರವಾಗುವುವು. ಮಹಿಮೆಯಲ್ಲಿ, ವಿಸ್ತಾರದಲ್ಲಿ ಮೇಲೆ ಹೇಳಿದ ಸಕಲ ಪುರಾಣಗಳೂ ಕೋಟ್ಯಂಶಕ್ಕೂ ಸಮಾನವಾಗಲಾರವು. ॥೨೧-೨೨॥

ಗಿರಿಜಾಜಾನಿಕಥಾ ಸುಧಾ ಸುವಿನಿಧ್ಯೈಃ
ಪರಿನಿಘ್ನಂತಿ ದುರುತ್ತರೋರುವಾಗ್ಭಿಃ ।
ದ್ವಿಜಜಾತಾ ಅಪಿ ತೇ ಹಿ ಜಾರಜಾತಾಃ
ವಿರಜಾ ನೈವ ಭವಂತಿ ಘೋರರರೂಪಾಃ ॥೨೩॥

ದುಃಖೈಸ್ಸಾಸ್ರಾವಿಲಾಕ್ಷಾ ಶ್ವಸನನಿರಶನಾ ಶೈವಧರ್ಮೋಜ್ಝಿತಾ ಯೇ
ತೇ ಭಸ್ತ್ರಾ ತುಲ್ಯದೇಹಾ ರತಿಪತಿಶರಜಾಸಾರಧಾರಾಭಿತಪ್ತಾಃ ।
ಉಸ್ರಾವದ್ವಿಧಿವರ್ಜಿತಾ ನರಖರಾ ಸ್ವಸ್ರಾ ದುಹಿತ್ರಾ ರತಾಃ
ನ ಕ್ವಾಪೀಶ್ವರಚಿಂತಕಾ ನರಕಗಾಸ್ತೇ ವಂಚಕಾಃ ಕೇವಲಂ ॥೨೪॥

ರಟತ್ಸರಟವನ್ಮೌಲಿವತ್ಕರಟಿಕುಂಭಜಾಂದೋಲವತ್
ವೃಥಾರ್ಥರಹಿತಾಃ ಪರೇ ಪರಿಪತಂತಿ ಶಂಭೋಃ ಕಥಾಂ ।

---

ಯಾರು ಪರಮೇಶ್ವರನ ಕಥಾಮೃತಪರಂಪರೆಯನ್ನು ದುಷ್ಟವಾದ ಉಕ್ತಿಪ್ರತ್ಯುಕ್ತಿಗಳಿಂದ ದೂಷಿಸುವರೋ, ಅವರು ಬ್ರಾಹ್ಮಣ ವಂಶದವರಾದರೂ, ವ್ಯಭಿಚಾರದಿಂದ ಜನಿಸಿದವರೆಂದು ತಿಳಿಯಬೇಕು. ಅವರು ಎಷ್ಟೇ ಸಾತ್ವಿಕರಾಗಿದ್ದರೂ, ಘೋರಾಕಾರವುಳ್ಳವರೂ ಪರಮ ಪಾಪಿಗಳೂ ಎನಿಸುವರು. ಇದು ನಿಜ. ॥೨೩॥

ಲೋಕದಲ್ಲಿ ಮಾನವರು ಸದಾ ದುಃಖವನ್ನನುಭವಿಸುತ್ತಾ ಶೈವಧರ್ಮವನ್ನವಲಂಬಿಸದೆ, ಕೇವಲ ವಾಯುಸೇವನೆಯಿಂದಲೇ ಉಸಿರಾಡುತ್ತಾ ಬದುಕಿರುವರು. ಅಂತಹವರು ಅಕ್ಕಸಾಲೆಯ ತಿದಿಯಂತೆ ಜೀವಿಸುವರಲ್ಲದೆ ಯಾವ ಕಾರ್ಯಕ್ಕೂ ಸಮರ್ಥರೆನಿಸಲಾರರು. ವಿಧಿಪೂರ್ವಕವಾದ ಜೀವನವಿಲ್ಲದೆ, ಕತ್ತೆಗಳಂತೆ ಕೇವಲ ಕಾಮಪರವಶರಾಗಿ, ತಂಗಿ, ಮಗಳು ಮುಂತಾದ ಭೇದವಿಲ್ಲದೆ ಎಲ್ಲರಲ್ಲಿಯೂ ಸುರತಸುಖವನ್ನನುಭವಿಸುತ್ತಾ ಪಾಪರಾಶಿಯನ್ನು ಗಳಿಸಿ ಕೊನೆಗೆ ನರಕಕ್ಕೆ ತುತ್ತಾಗುವರು. ಅವರು ಕೇವಲ ವಂಚಕರೇ ಹೊರತು ಎಂದಿಗೂ ಸಾತ್ವಿಕರೆನಿಸಲಾರರು. ॥೨೪॥

ಇನ್ನು ಕೆಲವರು ಶಿವಕಥೆಯನ್ನು ಕೇಳಿ ಅದರ ಸರಿಯಾದ ಮಹಿಮೆಯನ್ನರಿಯದೆ, ಹೆಂಟೆಗೊದ್ದವು ಕತ್ತುಹಾಕುವಂತೆಯೂ, ಮದ್ದಾನೆಯು ತಲೆದೂಗುವಂತೆಯೂ ಕತ್ತನ್ನಲ್ಲಾಡಿಸುವರು. ಅದರಿಂದ ಏನೂ ಪ್ರಯೋಜನವಿಲ್ಲ. ವಿಷ್ಣುವಿನ

ಕಥಾಬ್ಧಿಮಹರೀರಸಂ ಶಿವರಹಸ್ಯರತ್ನಾಕರಂ
ಬಿಡಾಲಕಸಮಾ ನರಾಃ ಪರಿಲಿಹಂತಿ ಕಿಂ ತೃಪ್ತಯೇ ॥೨೫॥

ಯೇ ಮತ್ಕಥಾಸುವಿಮುಖಾಃ ತ ಇಹೈವ ಲೋಕೇ
ಲೇಖಾಪಿ ದುರ್ಮುಖತರಾಃ ಖರಶೇಫಜಾತಾಃ ।
ತೇ ಸನ್ಮುಖಾ ಮಮ ಭವಂತಿ ಕಥಾಸುಧೀರಾಃ
ಯೇ ಮನ್ಮುಖಾಬ್ಜಪರಿನಿಸ್ಸೃತಪಾನಪೀನಾಃ ॥೨೬॥

ಯೇ ಶಾಂಕರಾಃ ಶಿವರಹಸ್ಯಮಧುಪ್ರಕೃಷ್ಟಂ
ಪೇಪೀಯುಷಡ್ವದನಪಂಕಜಜಾಶಮಿಷ್ಟಂ ।
ತುಷ್ಟಾ ಭವಂತಿ ಗಿರಿಜೇ ತ ಇಹ ಪ್ರಕೃಷ್ಟಾ
ಅನ್ಯೇ ತು ದುಷ್ಟಮತಯಃ ಪ್ರಭವಂತಿ ಕಷ್ಟಾಃ ॥೨೭॥

---

ಕಥೆಗೆ ಸಂಬಂಧಪಡದ ಈ ಶಿವರಹಸ್ಯವೆಂಬ ರತ್ನಾಕರವನ್ನು ಹಾಲಿಲ್ಲದ ನೀರನ್ನು ಬೆಕ್ಕುಗಳು ದೂರಮಾಡುವಂತೆ ದೂರೀಕರಿಸುವರು. ವಿಷ್ಣುವಿನ ಕಥೆಯಲ್ಲಿ ಜನರು ಮೋಹವಿಡುವಂತೆ ಪರಮೇಶ್ವರನ ಪವಿತ್ರವಾದ ಈ ಗ್ರಂಥದಲ್ಲಿ ಅಜ್ಞಾನದಿಂದ ಅನಾದರವನ್ನಿಡುವರು. ಇದು ಶುದ್ಧ ತಪ್ಪಲ್ಲವೆ? ॥೨೫॥

ಯಾರು ನನ್ನ ಪವಿತ್ರವಾದ ಕಥೆಯನ್ನು ಕೇಳದೆ ಅದರಲ್ಲಿ ಉದಾಸೀನಭಾವವನ್ನು ತಾಳುವರೋ ಅಂತಹವರು ಗರ್ದಭವೀರ್ಯಕ್ಕೆ ಜನಿಸಿದವರೆಂದು ತಿಳಿಯಬೇಕು. ಸದಾ ನನ್ನ ಮುಖಕಮಲವನ್ನೇ ದೃಷ್ಟಿಸಿ ನೋಡುತ್ತಾ ಯಾರು ಆನಂದಭರಿತರಾಗಿರುವರೋ ಅಂತಹವರು ನನಗೆ ಪ್ರೀತಿಪಾತ್ರರಾಗಿ ನನ್ನ ಕಥಾಶ್ರವಣದಲ್ಲಿಯೇ ಆಸಕ್ತಿಯುಳ್ಳವರಾಗುವರು. ॥೨೬॥

ಗಿರಿಜೆಯೇ ಕೇಳು. ಕುಮಾರಸ್ವಾಮಿಯಿಂದ ಪ್ರೋಕ್ತವಾದ ಈ ಶಿವರಹಸ್ಯವೆಂಬ ಮಧುವನ್ನು ಯಾರು ಭಕ್ತಿಯಿಂದ ಪಾನಮಾಡುವರೋ, ಅಂತಹವರು ನಿಜವಾಗಿಯೂ ಪ್ರಕೃಷ್ಟರೆನಿಸಿ ಶಿವಾನುಗ್ರಹವನ್ನು ಪಡೆಯುವರು. ಉಳಿದವರು ಶಿವಾನುಗ್ರಹವನ್ನು ಎಂದೂ ಪಡೆಯಲಾರದೆ, ದುಷ್ಟಮತಿಗಳೆನಿಸಿಕೊಂಡು ಸಾಂಸಾರಿಕವಾದ ಕಷ್ಟಕ್ಕೀಡಾಗುವರು. ॥೨೭॥

ಯೇ ನಿಂದಂತಿ ಪದಾರ್ಥಬೋಧರಹಿತಾ ದುಸ್ತರ್ಕಶಬ್ದೇರತಾಃ
ರೇತಃಪಾನರತಾಃ ಪರೇತಭವನೇ ತೇ ವಾನರಾಭಾ ನರಾಃ ।
ವಿದ್ವಾಂಸೋಪಿ ಬಹುಶ್ರುತಾ ಅಪಿ ಶಿವೇ ತೇ ದುಷ್ಟನಿಷ್ಠಾಶನಾಃ
ಕಷ್ಟಾಯ ಪ್ರಭವಂತಿ ದುಷ್ಟಜನುಷಸ್ತೇ ಮಾನುಷಾಃ ಪಾಪಿನಃ ॥೨೮॥

ಯೇ ವಾ ವರಂ ಶಿವರಹಸ್ಯಮಿದಂ ಪ್ರಕೃಷ್ಟಂ
ನಿಂದಂತಿ ಹಾಸ್ಯಮತಯೋ ಮತಯೋಪಿ ಮಂದಾಃ ।
ತೇ ಕಷ್ಟಾನಿ ಸಮಾಪ್ನುವಂತಿ ನಿಯತಂ ದುಷ್ಟಾಶ್ಚ ವಿಷ್ಠಾಶನಾಃ ।
ತಿಷ್ಠಂತ್ಯೇವ ಪರೇತಸಂಸದಿ ಚಿರಂ ದುಷ್ಟಾಸ್ತತಃ ಕುಷ್ಠಿನಃ ॥೨೯॥

ಶಿಷ್ಟಾಸ್ತ ಏವ ಜಗತಿ ತ್ರಿಜಗತ್ಪ್ರತಿಷ್ಠಾ
ನಿಷ್ಠಾವತಾದ್ಯ ಸುಹೃದೇನ ತಥಾಷ್ಟಮೂರ್ತಿಂ ।
ಸಂಪೂಜಯಂತ್ಯನಿಶಮೇವ ರಹಸ್ಯಮೇತತ್
ಸಂಲೇಖ್ಯ ಪುಸ್ತಕವರಂ ಪರಿಪೂಜಯಂತಿ ॥೩೦॥

---

ಪದಾರ್ಥಸ್ವರೂಪವನ್ನರಿಯದೆ ಯಾರು ದುರಾಗ್ರಹದಿಂದ ಶಬ್ದಛಲವನ್ನು ಹಿಡಿದೆ ನನ್ನನ್ನು ನಿಂದಿಸುವರೋ, ಅವರು ವಾನರಸದೃಶರಾಗಿ ರೇತಃಪಾನಮಾಡುತ್ತಾ ನರಕದಲ್ಲಿ ಚಿಕ್ರಹಿಂಸೆಗೊಳಗಾಗುವರು. ಸ್ವಯಂ ವಿದ್ವಾಂಸರಾದರೂ, ಅನೇಕ ಶಾಸ್ತ್ರ ಗ್ರಂಥಗಳನ್ನು ಅಭ್ಯಾಸಮಾಡಿದ್ಧರೂ, ಅವರು ಪರಮಪಾಪಿಗಳೆನಿಸಿ, ನನ್ನ ಸ್ವರೂಪ ವನ್ನರಿಯದೆ ದುಷ್ಟಯೋನಿಗಳಲ್ಲಿ ಜನಿಸಿ ಕಷ್ಟಕ್ಕೊಳಗಾಗುವರು. ಇದು ನಿಜ.॥೨೮॥

ಯಾರು ಪ್ರಕೃಷ್ಟವಾದ ಈ ಶಿವರಹಸ್ಯವನ್ನು ನಿಂದಿಸುವರೋ, ಅಂತಹವರು ಮಂದಮತಿಗಳೆನಿಸಿ ಅನೇಕ ಕಷ್ಟಪರಂಪರೆಗಳಿಗೆ ಈಡಾಗುವರು. ಮತ್ತು ದುರಾಹಾರನಿರತರಾದ ಅವರು ಕುಷ್ಠಾದಿ ಮಹಾರೋಗಪೀಡಿತರಾಗಿ ಪ್ರೇತಭವನದಲ್ಲಿಯೇ ಸರ್ವದಾ ವಾಸಿಸುತ್ತಾ, ನಾನಾದುಃಖಗಳಿಂದ ನರಳುವರು. ॥೨೯॥

ಭಕ್ತಿಪೂರ್ವಕವಾಗಿ ಅಷ್ಟಮೂರ್ತಿಯೆನಿಸಿದ ನನ್ನನ್ನೇ ಅಹೋರಾತ್ರಿಯೂ ಪೂಜಿಸುತ್ತಾ, ನನ್ನಿಂದ ಹೇಳಲ್ಪಟ್ಟ ಈ ಶಿವರಹಸ್ಯ ಗ್ರಂಥವನ್ನು ಬರೆದು, ಆ ಪುಸ್ತಕವನ್ನು ಯಾರು ಪೂಜಿಸುವರೋ ಅವರೇ ನಿಷ್ಠರು. ಅವರೇ ಜಗದ್ವಿಖ್ಯಾತರಾಗುವ ಮಹಿಮೆಯುಳ್ಳವರು. ಅವರೇ ನನಗೆ ಭಕ್ತರೆನಿಸುವರು. ॥೩೦॥

ಯೋ ವಾ ರಹಸ್ಯಮಿದಮೇವ ಶಿವೈಕಸಾರಂ
ಹಾರಾಯ ಪರ್ವಣಿ ದದಾತಿ ಶಿವಸ್ಯ ಭಕ್ತೇಃ ।
ಮುಕ್ತಿಂ ಪರಾಂ ವ್ರಜತಿ ಚಾರು ಶಶಾಂಕಮೌಲಿ
ಲಿಂಗಾಲಯಂ ವ್ರಜತಿ ರುದ್ರಗಣೋ ಗಿರೀಶಂ ॥೩೧॥

ಭಸ್ಮತ್ರಿಪುಂಡ್ರಾಕ್ಷಧರೈರ್ನರೈರ್ವರೈಃ
ಹಾರೈಃ ಶಿವಾಚಾರರತೈರಕಾತರೈಃ ।
ಶ್ರಾವ್ಯಂ ಚ ಭವ್ಯಂ ತ್ರಿದಮೇವ ನಿತ್ಯಂ
ಮಮೇತಿಹಾಸಂ ತ್ವಘಹವ್ಯವಾಹಂ ॥೩೨॥

ನಿರ್ವೃತ್ತವೃತ್ತ್ಯೈರಿದಮೇವ ದಿವ್ಯಂ
ಶ್ರಾವ್ಯಂ ಯಶಸ್ಯಂ ಗಿರಿಜೇ ಸುಭವ್ಯಂ ।
ಶಾಂತೈಶ್ಚ ವೇದಾಂತರತೈಶ್ಚ ದಾಂತೈ
ರ್ನಿತ್ಯಂ ಶಿವಾಕಾಂತ ಪದಾಬ್ಜಸ್ವಾಂತೈಃ ॥೩೩॥

---

ಯಾರು ಶಿವಭಕ್ತಿಸಾರವೆನಿಸಿದ ಈ ಶಿವರಹಸ್ಯವನ್ನು ಪರ್ವದಿನದಲ್ಲಿ ಈಶ್ವರಭಕ್ತನಿಗೆ ವಿಧಿಪೂರ್ವಕವಾಗಿ ದಾನಮಾಡುವರೋ, ಅಂತಹವರು ಚಂದ್ರಶೇಖರನೆನಿಸಿದ ಪರಶಿವನ ಸಮೀಪದಲ್ಲಿ ರುದ್ರಗಣಗಳೆನಿಸಿ ಸದಾ ಶಿವಸನ್ನಿಧಿಯಲ್ಲಿಯೇ ವಾಸಿಸುವರು. ಇದು ನಿಶ್ಚಯ. ॥೩೧॥

ಭಸ್ಮತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಮಾಲೆಗಳಿಂದಲಂಕೃತರಾಗಿ ಸ್ಥಿರಮನಸ್ಸಿನಿಂದ ಶಿವಧರ್ಮದಲ್ಲಿಯೇ ನಡೆಯುವವರಾಗಿ, ಜೀವಿಸುವವರು. ಈ ನನ್ನ ಇತಿಹಾಸವೂ, ಪಾಪರಾಶಿಗೆ ಅಗ್ನಿಸ್ವರೂಪದಂತಿರುವುದೂ ಆದ ಶಿವರಹಸ್ಯವನ್ನು ಪ್ರತಿನಿತ್ಯವೂ ತಪ್ಪದೆ ಕೇಳುತ್ತಿರಬೇಕು. ಅವರೇ ಇದನ್ನು ಕೇಳಲು ಅಧಿಕಾರಿಗಳು. ॥೩೨॥

ಶಿವಾಪತಿಯಾದ ಪರಶಿವನ ಪಾದಕಮಲವನ್ನೇ ಸದಾ ಧ್ಯಾನಮಾಡುತ್ತಾ, ವೇದಾಂತದಲ್ಲಿ ನಿಷ್ಣಾತರಾಗಿ ಶಮದಮಾದಿಗಳಿಂದ ಕೂಡಿದ ಪುಣ್ಯಾತ್ಮರು ವೈರಾಗ್ಯವನ್ನು ಪಡೆದು ಯಶಸ್ಕರವೂ ಮಂಗಳಕರವೂ ಆದ ಈ ಶಿವರಹಸ್ಯ ಗ್ರಂಥವನ್ನು ತಪ್ಪದೆ ಕೇಳಬೇಕು. ಅದರಿಂದ ಅವರಿಗೆ ಮುಕ್ತಿಯು ದೊರಕುವುದು. ॥೩೩॥

ಚಕ್ಷುಶ್ಶ್ರೋತ್ರನಿಕಾಸಿಗದ್ಗದಗಲ್ಯೈರಾನಂದ ಧಾರಾಶ್ರುಭಿಃ
ಸಿಂಚಂತೋಂಗಮುಕ್ತೈತವೇನ ಸುಹೃದಾ ಉತ್ಫುಲ್ಲರೋಮಾಂಚಕಾಃ ।
ಯೇ ಭಕ್ತಾಃ ಶಿವಭಕ್ತಿಸಾರಸರಸಾಸ್ತೇ ಸರ್ವದಾಶರ್ವಪ್ರ
ಕ್ಲಾರಾವಾರವಿಕಾರಸಾಗರಭವಂ ಶೀಘ್ರಂ ತರಂತಿ ಧ್ರುವಂ ॥೩೪॥

ಸದಾಶಿವೋದಾರವಚೋ ಮಹೇಶೀ
ಶ್ರುತ್ವಾಭಿತುಷ್ಟಾವ ಸದಾ ಗಿರೀಶಂ ।
ಮುದಾ ತದಾಲಿಂಗ್ಯ ಶಿವಂ ಶಿವಾ ಸಾ
ರಹಸ್ಯಸಾರಶ್ರವಣೇನ ಹರ್ಷಿತಾ ॥೩೫॥

ಶಾಂಗಂ ಸಂಗಹರಂ ಕುರಂಗವಿಲಸಚ್ಚಾಪಹುಂ ತುರಂಗಾಗಮಂ
ಗಂಗಾತುಂಗತರಂಗಸಂಗತಜಟಾಚಂದ್ರೋತ್ತಮಾಂಗಂ ಭಜೇ ।
ನೇತ್ರೀಭೂತಪತಂಗ ರಂಗಿತಮಹಾಘಾಲಸ್ಫುಲಿಂಗೋಲ್ಲಸ
ಜ್ಜ್ವಾಲಾಲೀಢ ಸುಮನ್ಮಥಾಂಗಜಮಹಾಭಸ್ಮಾಂಗರಾಗಂ ಶಿವಂ ॥೩೬॥

---

ಶಿವರಹಸ್ಯವನ್ನು ಕಿವಿಯಿಂದ ಕೇಳಿ, ಪರಶಿವಲಿಂಗವನ್ನು ಕಣ್ಣಿನಿಂದ ನೋಡಿ ಆನಂದ ಬಾಷ್ಪವನ್ನು ಸುರಿಸುತ್ತಾ, ಭಕ್ತ್ಯತಿರೇಕದಿಂದ ರೋಮಾಂಚವನ್ನು ಪಡೆಯುತ್ತಾ ಯಾರು ಶಿವಭಕ್ತಿಪರವಶರಾಗಿರುವರೋ, ಅಂತಹವರು ಪರಶಿವನ ದಯಾಸಾಗರಕ್ಕೆ ಪಾತ್ರರಾಗಿ, ಸಂಸಾರವೆಂಬ ಮಹಾಸಾಗರವನ್ನು ಸುಲಭವಾಗಿ ದಾಟುವರು. ॥೩೪॥

ಈ ರೀತಿ ಮಾತನಾಡಿದ ಶಿವನ ಅಮೃತವಾಣಿಯನ್ನು ಪಾರ್ವತಿಯು ಕೇಳಿ ಬಹಳ ಸಂತುಷ್ಟಳಾಗಿ, ಶಿವರಹಸ್ಯವೆಂಬ ಅಮೃತಪಾನದಿಂದ ತೃಪ್ತಳಾಗಿ ಲೋಕೈಕ ಶಂಕರನಾದ ತನ್ನ ಪತಿಯನ್ನು ಆಲಿಂಗಿಸಿಕೊಂಡು ಆನಂದಪಟ್ಟಳು. ಮತ್ತು ಈ ರೀತಿ ಪರಶಿವನ ಸ್ವರೂಪವನ್ನರಿತು ಧ್ಯಾನಿಸಿದಳು. ॥೩೫॥

ಮಹೇಶ್ವರನು ಸರ್ವರಿಗೂ ಸುಖಪ್ರದನು. ಕೈಯಲ್ಲಿ ಜಿಂಕೆಯ ಮರಿಯನ್ನು ಹಿಡಿದಿರುವವನು. ವೇದಗಳನ್ನೇ ತನ್ನ ರಥಕ್ಕೆ ಕುದುರೆಗಳನ್ನಾಗಿ ಮಾಡಿಕೊಂಡಿದ್ದವನು. ಗಂಗಾನದಿಯ ಅಲೆಗಳಿಂದ ಕೂಡಿದ ಜಟಾಕಲಾಪದಿಂದಲೂ, ಅರ್ಧಚಂದ್ರ ಕಲೆಯಿಂದಲೂ, ಅಲಂಕೃತನಾಗಿರುವವನು. ಸೂರ್ಯನನ್ನೇ ಒಂದು ನೇತ್ರವನ್ನಾಗಿ

ಹೇ ವೀತಿಹೋತ್ರಕೃತನೇತ್ರ ಕಲತ್ರಗಾತ್ರ
ಸತ್ರಾತಿರಾತ್ರ ಪರಿತೋಷಿತದೃಷ್ಟಿಪಾತ್ರಾನ್ ।
ಪುತ್ರಾನಿಪಾಹ್ಯ ಪರಿಪಾಹಿ ಮುನೀನ್ ಗಣೇಶಾ
ನತ್ರಾಪ್ಯಮುತ್ರ ಭಗವನ್ ದಯಯಾ ತ್ರಿನೇತ್ರ ॥೩೭॥

ಸರ್ವಾಮರಾದ್ಯ ಭವರೋಗಹರಾದ್ಯವೈದ್ಯ
ಆಖಿದ್ಯತೇ ಪಶುಪತೇ ಶಿವ ಪರ್ಣಶದ್ಯ ।
ವೇದಾಂತವೇದ್ಯ ನಿಗಮಾಗಮಪದ್ಯಗದ್ಯ
ಸಂವೇದ್ಯ ಮಾಮವ ದೃಶಾದ್ಯಖಿಲೇಷ್ವಭೇದ್ಯ ॥೩೮॥

---

ಮಾಡಿಕೊಂಡು, ತನ್ನ ಫಾಲನೇತ್ರ ಜ್ವಾಲೆಯಿಂದ ಮಹಾಬಲಿಷ್ಠನಾಗಿದ್ದ ಮನ್ಮಥ ನನ್ನು ಧ್ವಂಸಮಾಡಿದವನು. ಅವನ ಬೂದಿಯನ್ನು ತನ್ನ ದೇಹಕ್ಕೆಲ್ಲಾ ಬಳಿದು ಕೊಂಡಿರುವವನು. ಇಂತಹ ಮಹಾಮಹಿಮನಾದ ಪರಮೇಶ್ವರನನ್ನು ನಾನು ಸದಾ ಧ್ಯಾನಮಾಡುವೆನು. ॥೩೬॥

ಅಗ್ನಿಯನ್ನೇ ಹಣೆಗಣ್ಣನ್ನಾಗಿಯೂ, ಪತ್ನಿಯನ್ನೇ ಅರ್ಧದೇಹವನ್ನಾಗಿಯೂ ಮಾಡಿಕೊಂಡಿರುವ ಮಹಾದೇವನೇ, ಸತ್ರ, ಅತಿರಾತ್ರ ಮುಂತಾದ ಮಹಾ ಮಹಾ ಯಾಗಗಳನ್ನು ನಡೆಸಿ ನಿನ್ನನ್ನೇ ಭಜಿಸುತ್ತಿರುವ ಮಹರ್ಷಿಗಳನ್ನೂ, ನಿನ್ನ ಪುತ್ರ ರಂತಿರುವ ಗಣನಾಯಕರನ್ನೂ ರಕ್ಷಿಸುತ್ತಾ ಅವರ ಇಷ್ಟಾರ್ಥವನ್ನೆಲ್ಲಾ ಪೂರ್ಣಗೊ ಳಿಸು. ಮಹೇಶ್ವರನೇ, ತ್ರಿಣೇತ್ರನೆ, ನೀನು ಹಾಗೆಯೇ ನಿನ್ನ ಭಕ್ತರನ್ನೆಲ್ಲಾ ಪಾಲಿ ಸುತ್ತಿರು. ॥೩೭॥

ದೇವಾದಿದೇವನೇ, ಸಂಸಾರವೆಂಬ ಮಹಾವ್ಯಾಧಿಗೆ ಆದಿವೈದ್ಯನಂತಿರುವವನೇ, ಪಶುಪತಿಯೇ, ವೃಕ್ಷಗಳ ಎಲೆಗಳಲ್ಲಿ ನೆಲಸಿರುವವನೇ, ವೇದಾಂತಗಳಿಂದ ಅರಿಯಲ್ಪ ಡುವವನೇ, ನೀನು ವೇದವೇದಾಂತಗಳಿಂದ ಸುಲಭವಾಗಿ ತಿಳಿಯಲ್ಪಡುವೆ. ಪದ್ಯ ಗದ್ಯಾತ್ಮಕಗಳಾದ ಸಕಲ ಗ್ರಂಥಗಳಿಂದಲೂ ನೀನು ಸ್ತುತಿಸಲ್ಪಡುವೆ. ಸಮಸ್ತ ಇಂದ್ರಿಯಗಳಲ್ಲಿಯೂ ಎಲ್ಲಾ ವಸ್ತುಗಳಲ್ಲಿಯೂ ಅಡಗಿರುವವನೇ, ನೀನು ಯಾವುದರಿಂದಲೂ ಭೇದಿಸಲ್ಪಡುವವನಲ್ಲ. ಮಹಾದೇವನೇ, ಇಂತಹ ಮಹಿಮ ನಾದ ನೀನು ನನ್ನನ್ನು ಕಾಪಾಡು. ॥೩೮॥

॥ ಶ್ರೀ ಸ್ಕಂದ ಉವಾಚ ॥

ಇತಿ ದೇವ್ಯಾಸ್ತುತೋ ದೇವೋ ವಿಶ್ವೇಶೋಥ ಮಹೇಶ್ವರಃ ।
ಮಯಾ ಸ್ತುತೋ ನಮಸ್ಕೃತ್ಯ ತದಾ ವಿಘ್ನಾಧಿಪೇನ ಚ ॥೩೯॥

॥ ಕುಮಾರ ಉವಾಚ ॥

ವಿಧಿಸ್ತೇ ಯಂತಾಭೂನ್ನಯನಹುತಭುಗ್ಗೋಧಿಫಲಕ
ನಿಧಿರ್ವೇದಾಂತಾನಾಂ ತ್ವಮಸಿ ಸಕಲಾಧಿಂ ಜರಯತಿ ।
ಭವೋರುವ್ಯಾಧೀನಾಂ ಹರಹರ ಮಹಾಬ್ಧಿಸ್ಸ್ವಶರಧಿ
ರ್ಮಹಾತಾಪೋಚ್ಛೇದ್ಯೈಶ್ಶಿವ ತವ ಮಹಾಸಂನಿಧಿಚರಃ ॥೪೦॥

॥ ಶ್ರೀ ಗಜಾನನ ಉವಾಚ ॥

ಹರಿಂ ಹರಂತಂ ತಮುಮಾಸುಕಾಂತಂ
ವೇದಾಂತಭಾಂತಂ ಶಶಿಕಾಂತಿಕಾಂತಂ ।
ತಾಂತೇಷು ವಿಶ್ರಾಂತಿದಮಂತಕಾಂತಕಂ
ಸ್ಮರ ಸ್ಮರಾಂತಂ ಹೃದಯೇ ನಿತಾಂತಂ ॥೪೧॥

---

ಹೀಗೆ ಪಾರ್ವತಿಯಿಂದ ಸ್ತುತಿಸಲ್ಪಟ್ಟ ಮಹಾದೇವನು ಅನಂತರ ನನ್ನಿಂದಲೂ (ಕುಮಾರಸ್ವಾಮಿಯಿಂದ) ವಿಘ್ನೇಶ್ವರನಿಂದಲೂ ಈರೀತಿಯಾಗಿ ಶ್ಲಾಘಿಸಲ್ಪಟ್ಟನು. ॥೩೯॥

" ಮಹಾದೇವನೇ, ನಿನಗೆ ತ್ರಿಪುರದಹನ ಕಾಲದಲ್ಲಿ ಬ್ರಹ್ಮನೇ ಸಾಕ್ಷಾತ್ತಾಗಿ ಸಾರಥಿಯಾದನು. ಹಣೆಯಲ್ಲಿದ್ದ ಅಗ್ನಿಯೇ ರಥದ ಮಧ್ಯದ ಹಲಗೆಯಾದನು. ನೀನು ವೇದಾಂತಗಳೆನಿಸಿದ ಉಪನಿಷತ್ತಿನಿಂದ ಸ್ತುತಿಸಲ್ಪಡುವವನು. ಭಕ್ತರ ಸಕಲ ಮನೋವ್ಯಥೆಗಳನ್ನು ನಾಶಮಾಡುವವನು. ಭಕ್ತರ ಸಾಂಸಾರಿಕವಾದ ಅನೇಕ ದುಃಖಗಳನ್ನೂ ತಾಪಗಳನ್ನೂ ನಾಶಗೊಳಿಸುವವನು. ದೇವದೇವನಾದ ಮಹಾದೇವನೇ, ನಾನು ನಿತ್ಯವೂ ನಿನ್ನ ಸನ್ನಿಧಿಯಲ್ಲಿಯೇ ಸಂಚರಿಸುವಂತೆ ಅನುಗ್ರಹಿಸು. ಇದೇ ನನ್ನ ಪ್ರಾರ್ಥನೆ." ॥೪೦॥

ಗಣಪತಿಯು ಈ ರೀತಿ ಪರಮೇಶ್ವರನನ್ನು ಪ್ರಾರ್ಥಿಸಿದನು :— ಉಮಾ ಪರಮೇಶ್ವರನು ಸರ್ವರ ಪಾಪವನ್ನೂ ನಾಶಗೊಳಿಸತಕ್ಕವನು.

ಪಾಪಂ ಜಹಾಮಿ ನ ಸಹಾಮಿ ಭವೋರುದುಃಖಂ
ತ್ವಾಮೇವ ಯಾಮಿ ಹರ ಸಾಮಿಲಲಾಮಸೋಮಂ ।
ಸೀಮಾನಮೇವ ಭಗವಂಛ್ರುತಿಧಾಮಭೂಮ
ವ್ಯೋಮಾನಮೇವ ಶರಣಂ ತರಣಾಯ ಯಾಮಿ ॥೪೨॥

॥ ಸೂತ ಉವಾಚ ॥

ತ್ರಿಣೇತ್ರಪೂಜಾ ಸುವಿಹೀನಮಾನಸಾ
ಘರ್ಮಾಂಶುತಪ್ತಾ ಇವ ಮೀನಸಂಘಾಃ ।
ನಿರ್ವೇದವಿಪ್ರಾ ಇವ ತೇ ಪರತ್ರ
ನಿರ್ವೇದಭಾಜೋತ್ರ ಭವಂತಿ ಸತ್ಯಂ ॥೪೩॥

---

ಪತಿಯು ಉಪನಿಷತ್ತುಗಳಿಂದ ಪ್ರಕಾಶಿಸಲ್ಪಟ್ಟವನು. ಚಂದ್ರನ ಕಾಂತಿಯಂತೆ ಪ್ರಕಾಶಿಸಲ್ಪಡುವವನು. ಆಯಾಸಪಟ್ಟವರಿಗೆ ಶಾಂತಿಯನ್ನು ಕರುಣಿಸುವವನು. ಇಂತಹ ಪರಮಪುರುಷನನ್ನು, ಎಲೈ ಚಂಚಲವಾದ ಮನಸ್ಸೇ, ನಿತ್ಯವೂ ಸ್ಮರಿಸುತ್ತಿರು. ಆದರಿಂದ ನಿನಗೆ ಮುಕ್ತಿ ಸಾಮ್ರಾಜ್ಯವು ಲಭಿಸುವುದು. ॥೪೧॥

ಭಗವಂತನೇ, ನೀನು ಅರ್ಧಚಂದ್ರಧಾರಿಯು. ಸಂಸಾರದುಃಖವನ್ನು ನಾಶಗೊಳಿಸುವವನು. ನಿನ್ನನ್ನು ಧ್ಯಾನಿಸುವುದರಿಂದ ನಾನು ಸಮಸ್ತಪಾಪರಾಶಿಯನ್ನೂ ಕಳೆದುಕೊಳ್ಳುವೆನು. ನೀನು ವೇದವೇದಾಂತಗಳಲ್ಲಿ ಪ್ರಸಿದ್ಧನಾಗಿರುವವನು, ಆಕಾಶದಂತೆ ಸರ್ವವ್ಯಾಪಿಯು. ಇಂತಹ ನಿನ್ನನ್ನು ಧ್ಯಾನಿಸಿ ನಾನು ಸಂಸಾರ ದುಃಖದಿಂದ ಪಾರಾಗುವೆನು. ನಿನಗೆ ನಮಸ್ಕರಿಸಿ ನಾನು ಪವಿತ್ರನಾಗುವೆನು, ಎಂದು ವಿಘ್ನೇಶ್ವರನು ಪ್ರಾರ್ಥಿಸಿದನು. ॥೪೨॥

ಇಂತಹ ಪರಮೇಶ್ವರನನ್ನು ಪೂಜಿಸದೆ ಧ್ಯಾನಿಸದೆ ಕಾಲಕಳೆಯುವ ಮಾನವರು ನೀರನ್ನುಬಿಟ್ಟು ಬಿರುಬಿಸಿಲಿನಿಂದ ಬಳಲುವ ಮೀನುಗಳಂತೆಯೂ, ದುಃಖಕ್ಕೊಳಗಾದ ವಿಪ್ರರಂತೆಯೂ ದುಃಖಕ್ಕೀಡಾಗಿ, ಐಹಿಕ ಮತ್ತು ಆಮುಷ್ಮಿಕವಾದ ಸಕಲ ಸುಖಗಳಿಂದಲೂ ದೂರವಾಗುವರು. ಇದು ನಿಜ. ಇದನ್ನು ಎಲ್ಲರೂ ನಂಬಬೇಕು. ಎಂದು ಸೂತರು ಸಕಲ ಮಹರ್ಷಿಗಳಿಗೂ ಶಿವಪಾರಮ್ಯವನ್ನು ಈ ರೀತಿ ವಿವರಿಸತೊಡಗಿದರು. ॥೪೩॥

ಪರೀವೃಢಹೃದಂತರೇ ಚಿರತರಂ ನ್ಮೃಡಃ ಕ್ರೀಡತೇ
ವಿಗೂಢತಮಸಃ ಪರೋಽಪ್ಯತಿಸುಗಾಢಹೃತ್ತಾಪಹಾ ।
ವಿಮೂಢಮತಿದೂರಗಃ ಶ್ರುತಿಶಿಖಾಸುಗೂಢಪ್ರಭಃ
ಸುಗೂಢವರಪಾದ್ಧರಃ ಸಕಲಲೋಕವೀಢ್ಯಾ ಹರಃ ॥೪೪॥

ಗೌರೀಯಲ್ಲಕಲಿಂಗಪೂಜಕರತಾಃ ಸಾಯಂತನೋ ನಿದ್ರಿತೈ
ರ್ಮಲ್ಲೀಮುಲ್ಲಿಮತಲ್ಲಿಕಾದಿನಿವಹೈರುತ್ಫುಲ್ಲಹಲ್ಲೋತ್ಪಲೈಃ ।
ಗಂಧಾಢೀಕೃತಕುಂದವೃಂದಕುಟಜೈರ್ಮಂದಾರಸಚ್ಚಂಪಕೈ
ರ್ಬಿಲ್ವಾನೋದಸುಮೈರ್ದಲೈಶ್ಚ ಸುಮಹಾಲಿಂಗಂ ವಿಮುಕ್ತಾಸ್ಸದಾ ॥೪೫॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಶಿವರಹಸ್ಯ ಪಠಣ ಶ್ರವಣ ಫಲಮಹಿಮಾನುವರ್ಣನಂ
ನಾಮ ಪಂಚತ್ರಿಂಶೋಽಧ್ಯಾಯಃ

---

ಜಿತೇಂದ್ರಿಯರಾದವರ ಹೃದಯಾಂತರಾಳದಲ್ಲಿ ಪರಶಿವನು ನಿತ್ಯವೂ ಕ್ರೀಡಿಸುತ್ತಿರುವನು. ಸ್ವಯಂ ತಮೋಜ್ಞಾನವಿದೂರನು. ಸಾತ್ವಿಕರಾದ ತನ್ನ ಭಕ್ತರ ಹೃದಯತಾಪವನ್ನು ನಿವಾರಿಸಬಲ್ಲವನು. ಅಜ್ಞಾನಿಗಳಿಗೆ ಸುಲಭನಾಗಿ ದೊರೆಯತಕ್ಕವನಲ್ಲ. ಉಪನಿಷತ್ತುಗಳಲ್ಲಿ ಪೂರ್ಣವಾಗಿ ಅಡಗಿರುವವನು. ಗೂಢಪಾದಗಳೆನಿಸಿದ ಆದಿಶೇಷನನ್ನೇ ಹಾರವನ್ನಾಗಿ ಹೊಂದಿರುವವನು. ಸಕಲ ಲೋಕರಕ್ಷಕನು. ಇಂತಹ ಮಹಾದೇವನನ್ನು ನೀವೆಲ್ಲರೂ ಭಕ್ತಿಯಿಂದ ಭಜಿಸಿರಿ. ||೪೪||

ಮಲ್ಲಿಗೆ, ಕಲ್ಹಾರ, ಕಮಲ, ಉತ್ಪಲ ಮುಂತಾದ ಸುಗಂಧಮಯವಾದ ಹೂವುಗಳಿಂದಲೂ, ಕುಂದ, ಕುಟಜ, ಮಂದಾರ, ಸಂಪಿಗೆ ಮುಂತಾದ ಪುಷ್ಪ ಮಾಲೆಗಳಿಂದಲೂ, ಬಿಲ್ವಪತ್ರೆಗಳಿಂದಲೂ, ನಾನಾವಿಧಗಳಾದ ಇತರ ಪುಷ್ಪಗಳಿಂ ದಲೂ ಗೌರೀಪತಿಯಾದ ಶ್ರೀ ಮಹಾದೇವನನ್ನು ಶಿವಲಿಂಗದಲ್ಲಿ ಪೂಜಿಸಿ, ಮನಃಪೂರ್ವಕವಾಗಿ ಧ್ಯಾನಿಸಿದವರು ಮುಕ್ತರಾಗುವರು. ಅದರಲ್ಲಿ ಸಂಶಯವಿಲ್ಲ. ಮಹಾಮಹಿಮರಾದ ಋಷಿಗಳಿರಾ, ಇನ್ನು ನೀವು ತಪ್ಪದೆ ಪರಮೇಶ್ವರನನ್ನೇ ಸದಾ ಪೂಜಿಸುತ್ತಾ ಅವನ ಪೂರ್ಣಾನುಗ್ರಹಕ್ಕೆ ಪಾತ್ರರಾಗಿ ಮುಕ್ತರಾಗಿರಿ ಎಂದು

ಸೂತಮಹಾಮುನಿಗಳು ವಾಜಶ್ರವಸಾದಿ ಸಕಲ ಮುನಿಗಳ ಗುಂಪಿಗೂ ಶಿವರಹಸ್ಯ ವನ್ನು ಉಪದೇಶಿಸಿದನು. ॥೪೫॥

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶವಲ್ಲಿ
ಮೂವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಷಟ್ತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಅನುಕ್ರಮಣಿಕಾಧ್ಯಾಯಮಂಶಾನಾಂ ಕಥನಂ ದ್ವಿಜ ।
ತತ್ರ ತತ್ರ ಮಹೇಶಸ್ಯ ಕಥಾಖ್ಯಾನಮನುತ್ತಮಂ ॥೧॥

ಮಾಹೇಶಾಂಶಃ ಪ್ರಥಮತೋ ನಾಮತಶ್ಚಾತ್ರ ವಿಶ್ರುತಃ ।
ಜೈಗೀಷವ್ಯಪ್ರಸಾದಾರ್ಥಂ ಮಹಾದೇವಸ್ಯ ಚಾಗಮಃ ॥೨॥

ಗಣಾನಾಂ ದೇವಸಂಘಾನಾಂ ಮನು ಸಂವಾದಕೀರ್ತನಂ ।
ಕೈಲಾಸವರ್ಣನಂ ಚೈವ ದ್ವಾರಗೋಪುರವರ್ಣನಂ ॥೩॥

---

## ಮೂವತ್ತಾರನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಾನು ಹಿಂದೆ ಉಪದೇಶಿಸಿದ ಶಿವರಹಸ್ಯಗ್ರಂಥದ ವಿಷಯಾನುಕ್ರಮಣಿಕೆಯನ್ನು ಈರೀತಿ ವಿವರಿಸಲಾರಂಭಿಸಿದನು :— ಜೈಗೀಷವ್ಯಮಹರ್ಷಿಯೇ ಕೇಳು. ಮಹೇಶ್ವರನ ಕಥಾನಿಧಿಯಾದ ಈ ಶಿವರಹಸ್ಯದ ಅನುಕ್ರಮಣಿಕಾಧ್ಯಾಯವನ್ನು ಈಗ ಹೇಳುವೆನು. ಕೇಳು. ಶಿವರಹಸ್ಯದ ಹನ್ನೆರಡು ಅಂಶಗಳಲ್ಲಿ ಮೊದಲನೆಯದು ಮಾಹೇಶಾಂಶ. ಅದರಲ್ಲಿ ಮೊದಲು ಮಹಾದೇವನು ಜೈಗೀಷವ್ಯನ ಸಮೀಪಕ್ಕೆ ಅವನನ್ನು ಅನುಗ್ರಹಿಸಲು ಬರುವನು. ॥೧-೨॥

ಅಲ್ಲಿಗೆ ಪರಶಿವನೊಡನೆ ದೇವತಾಸಮೂಹನೇ ಬರುವುದು. ನಾನು ಜೈಗೀಷವ್ಯನಿಗೆ ಶಿವರಹಸ್ಯವನ್ನು ಉಪದೇಶಿಸಲು ಆರಂಭಿಸುವುದು- ॥೩॥

ಕೈಲಾಸೇಶ್ವರಪೂಜಾ ಚ ಲಿಂಗಾಧ್ಯಾಯಾನುಕೀರ್ತನಂ ।
ಕೈಲಾಸಸ್ಯ ತಪಶ್ಚರ್ಯಾ ಗಾಣಾಪತ್ಯಪ್ರಸಾದತಃ ॥೪॥

ತನ್ಮೌಲಾವಸತಿಃ ಶಂಭೋಃ ಜಿಜ್ಞಾಸಾಮರಸತ್ತಮೇ ।
ಜ್ಞಾನಾರ್ಥಕಥನಂ ಚೈವ ಆತ್ಮಲಿಂಗಸ್ಯ ಪೂಜನಂ ॥೫॥

ಪ್ರಥಮೋಂಶೇ ಕಥಾಖ್ಯಾನಮುಕ್ತಂ ದೇವ್ಯೈ ಶಿವೇನ ಹಿ ।
ಅಷ್ಟೌ ಶ್ಲೋಕಸಹಸ್ರಾಣಿ ಶಿವೇನೋಕ್ತೋಯಮುದ್ಭೃತಃ ॥೬॥

ದ್ವಿತೀಯಃ ಶಾಂಭವೋ ನಾಮ್ನಾ ಕಥಿತಃ ಶಿವೇನ ಹಿ ।
ದೇವ್ಯಾಸ್ತಪಃ ಪ್ರಸಾದಂ ಚ ಮಣಿದ್ವೀಪೋಪವರ್ಣನಂ ॥೭॥

ಚಿಂತಾಮಣಿಗೃಹಸ್ಯಾಗ್ರವರ್ಣನಂ ಶ್ರೀ ಪುರಸ್ಯ ಚ ।
ತಸ್ಮಾತ್ಕೈಲಾಸಗಮನಂ ಕಾಮಕಾಮೇಶ್ವರಾತ್ಮಕಂ ॥೮॥

ವಿಗ್ರಹಂ ದೇವದೇವಸ್ಯ ಹಿಮಾಚಲಸಮಾದ್ರುಮಃ ।
ಹಿಮಾಚಲಾಲೋಕನಂ ಚ ಕೈಲಾಸಸ್ಯ ಶಿವಸ್ಯ ತು ॥೯॥

---

ಕೈಲಾಸಪರ್ವತದ ವರ್ಣನೆ, ಕೈಲಾಸದ್ವಾರ ಮತ್ತು ಗೋಪುರಗಳ ವರ್ಣನೆ ಕೈಲಾಸೇಶ್ವರಪೂಜೆ, ಕೈಲಾಸಸ್ಥ ಶಿವಲಿಂಗಗಳ ವರ್ಣನೆ, ಕೈಲಾಸವು ಪರಶಿವನನ್ನು ಕುರಿತು ತಪಸ್ಸುಮಾಡುವುದು, ಅವನಿಗೆ ಶಂಕರನು ಗಾಣಾಪತ್ಯವನ್ನು ಕೊಡುವುದು. ಕೈಲಾಸ ಶಿಖರದ ಮೇಲೆ ಶಂಕರನು ವಾಸಮಾಡುವುದು, ಆತ್ಮಜ್ಞಾನಾರ್ಥವಾಗಿ ಆತ್ಮಲಿಂಗವನ್ನು ಪೂಜಿಸುವುದು. ||೪-೫||

ಇಷ್ಟು ಪ್ರಥಮಾಂಶದ ವಿಷಯಗಳು. ಅದು ಪರಶಿವನಿಂದ ಪಾರ್ವತಿಗೆ ಹೇಳಲ್ಪಟ್ಟಿರುವುದು. ಅದರಲ್ಲಿ ಎಂಟು ಸಾವಿರ ಶ್ಲೋಕಗಳಿವೆ. ಎರಡನೆಯದು ಶಾಂಭವಾಂಶ. ಅದರಲ್ಲಿ ದೇವಿಯು ಮಾಡಿದ ತಪಸ್ಸಿನ ವರ್ಣನೆ, ಮಣಿದ್ವೀಪದ ಉಪವನ, ಚಿಂತಾಮಣಿಗೃಹ, ಶ್ರೀಪುರ, ಇವುಗಳ ವರ್ಣನೆ, ಅಲ್ಲಿಂದ ದೇವಿಯು ಕೈಲಾಸಕ್ಕೆ ಹೋಗುವುದು, ಕಾಮೇಶ್ವರ, ಕಾಮೇಶ್ವರಿಯರಾಗಿ ಶಿವಪಾರ್ವತಿಯರು ವಿಹರಿಸುವುದು. ||೬-೭-೮||

ಹಿಮವಂತನು ಕೈಲಾಸಕ್ಕೆ ಬರುವುದು, ಅಲ್ಲಿ ಪರಶಿವನನ್ನು ಕಂಡು ಸ್ತುತಿಸಿ ಪಾರ್ವತಿಯನ್ನು ಕಳುಹಿಸಿಕೊಡುವಂತೆ ಪ್ರಾರ್ಥಿಸುವುದು, ಪಾರ್ವತಿಯು ಶಂಕರನ

ದೇವ್ಯಾ ಚ ಪ್ರೇಷಣಂ ತತ್ರ ಮನೋನ್ಮನ್ಯಾಃ ಸಮುದ್ಭವಃ ।
ದೂರ್ವಾಸಸೋ ಮಹಿಮ್ನಸ್ಯ ಕಥನಂ ತತ್ಪ್ರಸಾದನಂ ॥೧೦॥

ದ್ವಿತೀಯಾಂಶೇ ಪ್ರಕಥಿತಂ ಮಹಾದೇವೇನ ತತ್ರ ಹಿ ।
ಶ್ಲೋಕಾನಾಂ ತ್ರಿಸಹಸ್ರೇಣ ಗೌರ್ಯೈ ತತ್ರ ಮಹಾಮುನೇ ॥೧೧॥

ತೃತೀಯೋ ಹರಸಂಜ್ಞೋತ್ರ ತ್ರಿನೇತ್ರೇನೈವ ಚಾಕಥಿ ।
ಕೇದಾರದರ್ಶನಂ ಚಾತ್ರ ವ್ಯಾಸಸ್ಯಾಪಿ ದ್ವಿಜೈಸ್ಸಹ ॥೧೨॥

ಗಾಯತ್ರ್ಯಾಸ್ತಪಸಸ್ಸಿದ್ಧಿಃ ದೇವ್ಯಾನಯನಕೀರ್ತನಂ ।
ಗಣಾನಾಂ ಪ್ರೇಷಣಂ ಚೈವ ರುದ್ರಸ್ತವನ ಕೀರ್ತನಂ ॥೧೩॥

ವೇದಪಾದಸ್ತವಶ್ಚಾಪಿ ಚಮಕಪ್ರಾರ್ಥನಂ ತಥಾ ।
ತೀರ್ಥೇಶಚಂದನಸ್ಯಾಪಿ ಮಾಹಾತ್ಮ್ಯಂ ಮಾನಸಾರ್ಚನಂ ॥೧೪॥

ಶ್ರೀಶೈಲಕೀರ್ತನಂ ಚೈವ ಜನಕಸ್ಯ ಮುನೇಸ್ತಥಾ ।
ಸಂವಾದೋ ವೈ ರತ್ನನಿಧೇಃ ಪದ್ಮಾವತ್ಯಾಃ ಪ್ರಕೀರ್ತಿತಂ ॥೧೫॥

---

ವಿಹಾರಾರ್ಥವಾಗಿ ಮನಸಾ ಮನೋನ್ಮನೀದೇವಿಯನ್ನು ಸೃಷ್ಟಿಸಿ ಶಿವನ ಸಮೀಪದಲ್ಲಿಟ್ಟು ತಾನು ತಂದೆಯ ಮನೆಗೆ ಹಿಂದಿರುಗುವುದು, ದೂರ್ವಾಸ ಮಹರ್ಷಿಗಳು ದೇವಿಯನ್ನು ಮಹಿಮ್ನಸ್ತೋತ್ರದಿಂದ ಪ್ರಾರ್ಥಿಸುವುದು, ಇದು ದ್ವಿತೀಯಾಂಶದ ಸಾರಾಂಶ. ಇದರಲ್ಲಿ ಮೂರು ಸಾವಿರ ಶ್ಲೋಕಗಳಿರುವುವು. ॥೯-೧೦-೧೧॥

ಮೂರನೆಯದು ಹರಾಂಶ, ಆದರಲ್ಲಿ ಮೊದಲು ವ್ಯಾಸಮಹರ್ಷಿಗಳು ಸಮಸ್ತ ಋಷಿಗಳೊಡನೆ ಕೇದಾರೇಶ್ವರ ದರ್ಶನಾರ್ಥವಾಗಿ ಬದರಿಗೆ ಆಗಮಿಸುವರು. ಗಾಯತ್ರಿಯ ತಪಸ್ಸು ಅಲ್ಲಿ ಸಿದ್ಧಿಸುವಿಕೆ, ಗಾಯತ್ರೀದೇವಿಯು ಶಿವಮಂತ್ರಮಹಿಮೆಯನ್ನರಿಯುವುದು, ನಂದಿಕೇಶಾದಿಗಳು ಪಾರ್ವತಿಯನ್ನು ಕರೆತರಲು ಕೈಲಾಸದಿಂದ ಹಿಮಗಿರಿಗೆ ಬರುವುದು, ಜೊತೆಯಲ್ಲಿ ಸಮಸ್ತ ಶಿವಗಣಗಳೂ ಅಲ್ಲಿಗೆ ಬರುವುದು, ಗಣೇಶಕೃತವಾದ ರುದ್ರಾಧ್ಯಾಯ ಸ್ತುತಿ. ॥೧೨-೧೩॥

ಅಗಸ್ತ್ಯಕೃತ ವೇದಪಾದಸ್ತುತಿ, ಶಿಲಾದನಂದ ಚಮಕಸ್ತುತಿ, ತೀರ್ಥೇಶ್ವರ ಮಹಿಮೆ, ಶಿವನಿರ್ಮಾಲ್ಯಗಳ ಪ್ರಾಶಸ್ತ್ಯ, ಶಿವಮಾನಸಪೂಜಾವಿಧಿ, ಶ್ರೀಶೈಲದ ಮಹಿಮೆ, ಶಿವನಿರ್ಮಾಲ್ಯಗಳ ಪ್ರಾಶಸ್ತ್ಯ, ಸಭೆಗೆ ಯಾಜ್ಞವಲ್ಕ್ಯಮಹರ್ಷಿಯ ಆಗಮನ, ವರ್ಣನೆ, ಜನಕಮಹಾರಾಜನ

ಯಮಲೋಕಸ್ಯ ವೃತ್ತಾಂತಂ ನರ್ಮದಾಗಂಗಯೋರ್ವರಂ ।
ಭಸ್ಮರುದ್ರಾಕ್ಷಮಾಹಾತ್ಮ್ಯಂ ವ್ರತಸ್ಯ ಪರಿಕೀರ್ತನಂ ॥೧೬॥

ರಾಜ್ಞೋ ಯಮಸ್ಯ ಪುತ್ರೈಶ್ಚ ಶಿವಾರ್ಚನಕಥಾನಕಂ ।
ಶಿವಧುಂಡಿಚರಿತ್ರಂ ಚ ಭಾಗದ್ವಯಮಿದಂ ದ್ವಿಜಾಃ ॥೧೭॥

ತ್ರಯಸ್ತ್ರಿಂಶತ್ಸಹಸ್ರೇಣ ಶ್ಲೋಕೇನಾಂಶಃ ಪ್ರಕೀರ್ತಿತಃ ।
ಚತುರ್ಥಃ ಶಿವಸಂಜ್ಞೋತ್ರ ಕಥಿತೋಸ್ತಿ ಶಿವೇನ ಹಿ ॥೧೮॥

ನಂದೀಭೃಂಗ್ಯುಪಮನ್ಯೂನಾಂ ಗಾಣಾಪತ್ಯಸ್ತುತಿಕ್ರಮಃ ।
ಚತುಸ್ಸಹಸ್ರತಃ ಪ್ರೋಕ್ತ ಅಂಶೋ ಗೌರ್ಯೈ ಪಿನಾಕಿನಾ ॥೧೯॥

ಪಂಚಮೋ ಭರ್ಗಸಂಜ್ಞೋಹಿ ಲಿಂಗದ್ವಾದಶವರ್ಣನಂ ।
ವಾಮದೇವಸ್ತುತಿಶ್ಚೈವ ನಾಮಸಾಹಸ್ರಕೀರ್ತನಂ ॥೨೦॥

ಗಂಗಾದ್ವಾರಪ್ರಭಾಸಸ್ಯ ಪುಷ್ಕರಸ್ಯ ಪ್ರಭಾವಕೃತ್ ।
ಷಟ್ಸಹಸ್ರೇಣ ಕಥಿತೋ ದೇವ್ಯೈ ದೇವೇನ ಶಂಭುನಾ ॥೨೧॥

---

ಪರಪುರಂಜಯರಾಜನ ಪತ್ನಿಯಾದ ಪದ್ಮಾವತಿಯ ಇತಿಹಾಸ, ಯಮಲೋಕದ ವರ್ಣನೆ ಮತ್ತು ಅದರ ಇತಿಹಾಸ, ನರ್ಮದಾ ಮತ್ತು ಗಂಗಾನದಿಗಳಲ್ಲಿ ನರ್ಮದಾ ಪ್ರಾಶಸ್ತ್ಯ, ಭಸ್ಮರುದ್ರಾಕ್ಷಗಳ ಮಹಿಮೆ, ರಾಜ ಮತ್ತು ಅವನ ಪುತ್ರರೊಡನೆ ಯಮನು ಸಂಭಾಷಿಸುವುದು. ಶಿವಧುಂಡಿಯ ಚರಿತ್ರೆ. ಈ ರೀತಿ ಮೂರನೆಯ ಅಂಶವು ಅನೇಕ ವಿಷಯಗಳನ್ನೊಳಗೊಂಡು ಮೂವತ್ತುಮೂರುಸಾವಿರ ಶ್ಲೋಕಗಳುಳ್ಳದ್ದಾಗಿ ಪೂರ್ವಾರ್ಧ ಉತ್ತರಾರ್ಧಗಳೆಂದು ಎರಡುಭಾಗವಾಗಿ ವಿಂಗಡಿಸಲ್ಪಟ್ಟಿದೆ. ॥೧೪-೧೫-೧೬-೧೭॥

ನಾಲ್ಕುಸಹಸ್ರ ಶ್ಲೋಕಗಳಿಂದ ಕೂಡಿದ ನಾಲ್ಕನೆಯ ಶಿವನಾಮಕವಾದ ಅಂಶದಲ್ಲಿ ನಂದಿ, ಭೃಂಗಿ, ಉಪಮನ್ಯು ಮುಂತಾದ ಗಾಣಾಪತ್ಯಪದವಿಯನ್ನು ಪಡೆದವರು ವಿಸ್ತಾರವಾಗಿ ಶಂಕರನನ್ನು ಸ್ತುತಿಸುವ ಕ್ರಮವು ವಿಸ್ತಾರವಾಗಿ ವರ್ಣಿತವಾಗಿದೆ. ॥೧೭-೧೮॥

ಭರ್ಗನಾಮಕವಾದ ಐದನೆಯ ಅಂಶದಲ್ಲಿ ದ್ವಾದಶಲಿಂಗಸ್ತೋತ್ರಗಳು, ವಾಮದೇವಸ್ತುತಿ ಮತ್ತು ಶಿವಸಹಸ್ರನಾಮಸ್ತೋತ್ರ, ಗಂಗಾದ್ವಾರ, ಪ್ರಭಾಸಕ್ಷೇತ್ರ,

ಶಂಕರಾಖ್ಯೋಽಂಶಕಃ ಷಷ್ಠೋ ವ್ಯಾಸ ಸೂತ್ರಾದಿಕೀರ್ತನಂ ।
ಶ್ರುತಿಸಿದ್ಧಾಂತರಾದ್ಧಾಂತೋ ಜ್ಞಾನಯೋಗಪ್ರಕಾಶನಂ ॥೨೨॥

ನಿದಾಘಋಭುಸಂವಾದಮವಿಮುಕ್ತಾನುವರ್ಣನಂ ।
ಪಂಚಸಾಹಸ್ರತಃ ಪ್ರೋಕ್ತಃ ಶಿವಾಯೈ ಶ್ರೀ ಶಿವೇನ ಹಿ ॥೨೩॥

ಉಗ್ರನಾಮ್ನಾ ಸಪ್ತಮೋಽಂಶಃ ಕಥಿತಃ ಕಾಶಿಕಾಶಕೃತ್ ।
ಸಹಸ್ರನಾಮಕಥನಂ ವೈಷ್ಣವಂ ತು ಮಹಿಮ್ನಕಂ ॥೨೪॥

ಪುಷ್ಪದಂತ ಮಹಿಮ್ನಂ ಚ ನಾಮ್ನಾಮಷ್ಟೋತ್ತರಂ ಶತಂ ।
ಶ್ರೀಮದ್ದಕ್ಷಿಣಕೈಲಾಸೇ ಶೋಣವೃದ್ಧಾಚಲಪ್ರಭಾ ॥೨೫॥

ಶ್ರೀಮದ್ದಭ್ರಸಭಾಯಾಶ್ಚ ಕಾಂಚೀ ಕುಂಭೇಶ್ವರಸ್ಯ ಚ ।
ಮಧ್ಯಾರ್ಜುನಪ್ರಭಾವಸ್ಯ ಕೀರ್ತನಂ ತತ್ರ ವಿಸ್ತರಾತ್ ॥೨೬॥

---

ಪುಷ್ಕರಕ್ಷೇತ್ರ ಇವುಗಳ ಮಹಿಮಾವರ್ಣನೆ. ಇವು ಆರುಸಾವಿರ ಶ್ಲೋಕ ಸಂಖ್ಯೆಯಿಂದ ಪಾರ್ವತಿಗೆ ಪರಶಿವನಿಂದ ವರ್ಣಿತವಾಗಿವೆ. ॥೨೦-೨೧॥

ಶಂಕರನಾಮಕವಾದ ಆರನೆಯ ಅಂಶದಲ್ಲಿ ಐದುಸಾವಿರ ಶ್ಲೋಕಗಳಿವೆ. ಅದರಲ್ಲಿ ವ್ಯಾಸಮಹರ್ಷಿಗಳಿಂದ ರಚಿತವಾದ ಬ್ರಹ್ಮಸೂತ್ರಗಳ ಮತ್ತು ಶ್ರುತಿಪ್ರತಿಪಾದಿತವಾದ ಶಿವಸ್ವರೂಪದ ವರ್ಣನೆ, ಜ್ಞಾನಯೋಗಪ್ರಕಾಶ, ನಿದಾಘಮುನಿಗೆ ಋಭುಮಹಾಮುನಿಯು ಜ್ಞಾನೋಪದೇಶಮಾಡುವುದು. ಸರ್ವವೂ ಬ್ರಹ್ಮವಸ್ತುವೆಂದು ನಿರೂಪಿಸುವುದು. ಇವು ಶಿವನಿಂದ ಪಾರ್ವತಿಗೆ ಉಪದೇಶಿಸಲ್ಪಟ್ಟವೆ. ॥೨೨-೨೩॥

ಏಳನೆಯ ಅಂಶಕ್ಕೆ ಉಗ್ರಾಂಶವೆಂದು ಹೆಸರು. ಅದರ ಪ್ರಾರಂಭದಲ್ಲಿ ಶಿವಸಹಸ್ರನಾಮಸ್ತುತಿ, ಪುಷ್ಪದಂತವಿರಚಿತ ಶಿವಮಹಿಮ್ನಸ್ತುತಿ. ಶಿವಾಷ್ಟೋತ್ತರಶತನಾಮಸ್ತುತಿ. ದಕ್ಷಿಣಕೈಲಾಸವರ್ಣನಂ. ಶೋಣಾಚಲ, ವೃದ್ಧಾಚಲ ಇವುಗಳ ಮಹಿಮೆ. ದಭ್ರಸಭೆ. ಕಾಶೀ ಕಾಂಚೀ, ಕುಂಭಕೋಣ, ಮಧ್ಯಾರ್ಜುನಕ್ಷೇತ್ರ ಇವುಗಳ ಮಹಿಮೆ. ಈ ವಿಷಯಗಳು ಹದಿನಾಲ್ಕುಸಹಸ್ರ ಶ್ಲೋಕಗಳಿಂದ ವರ್ಣಿತವಾಗಿವೆ. ॥೨೫-೨೬॥

ಚತುರ್ದಶಸಹಸ್ರೇಣ ಶ್ಲೋಕಾನಾಂ ತತ್ರ ಶಂಕರಃ ।
ಭೀಮಾಖ್ಯಯಾಷ್ಟಮಾಂಶೋತ್ರ ಕಥಿತಃ ಶಂಕರೇಣ ಹಿ ॥೨೭॥

ಕದ್ರೂರ್ಸುಪರ್ಣೀ ಸಂವಾದಃ ಕಾಶ್ಯಪಸ್ಯ ಪ್ರಸಾದನಂ ।
ಅಮೃತಾಪಹರಣಂ ತತ್ರ ನಾಗಭೂಷತ್ವಮೀಶಿತುಃ ॥೨೮॥

ಪಾತಾಲಲಿಂಗಮಹಿಮಾ ಬಿಲ್ವೋತ್ಪತ್ತಿಃ ಪ್ರಕೀರ್ತಿತಾ ।
ಚತುಸ್ಸಹಸ್ರತಃ ಶ್ಲೋಕೈಃ ಪ್ರೋಕ್ತೋ ದೇವೇನ ತತ್ರ ಹಿ ॥೨೯॥

ಸದಾಶಿವಾಖ್ಯೋ ನವಮಃ ಕಲಿಧರ್ಮಪ್ರಬೋಧಕಃ ।
ಭೂತಭವ್ಯಾದಿಭಕ್ತಾನಾಂ ಸುಚರಿತ್ರಕಥಾಶ್ರಯಃ ॥೩೦॥

ಸಹಸ್ರಸಪ್ತಶ್ಲೋಕೇನ ಸೋಽಯಂ ಪ್ರೋಕ್ತಶ್ಶಿವೇನ ಹಿ ।
ಈಶ್ವರಾಖ್ಯೋತ್ರ ದಶಮೋ ಭಸ್ಮರುದ್ರಾಕ್ಷಧಾರಣಾತ್ ॥೩೧॥

ರುದ್ರಪಂಚಾಕ್ಷರಸ್ಯಾಪಿ ಶಿವಲಿಂಗಮಹೋದಯಃ ।
ಶಿವಧರ್ಮಪ್ರಶಂಸಾರ್ಥಃ ಶಿವಭಕ್ತಾರ್ಚನೇ ಫಲಂ ॥೩೨॥

---

ನಾಲ್ಕುಸಹಸ್ರ ಶ್ಲೋಕಗಳಿಂದ ಕೂಡಿದ ಭೀಮನಾಮಕವಾದ ಎಂಟನೆಯ ಅಂಶವು ಕದ್ರೂ ಮತ್ತು ಸುಪರ್ಣೀದೇವಿಯರ ಸಂಭಾಷಣೆಯಿಂದ ಆರಂಭವಾಗುವುದು. ಕಾಶ್ಯಪರು ಅನುಗ್ರಹಮಾಡುವುದು. ಅಮೃತವನ್ನು ತರುವುದು. ಪರಶಿವನು ನಾಗಭೂಷಣನೆನಿಸುವುದು. ಪಾತಾಲಲಿಂಗಮಹಿಮೆ. ಬಿಲ್ವೋತ್ಪತ್ತಿ ಪ್ರಕರಣ. ಇವುಗಳನ್ನು ವಿಶೇಷವಾಗಿ ವಿವರಿಸುವುದು. ॥೨೭-೨೮-೨೯॥

ಸದಾಶಿವನಾಮಕವಾದ ಒಂಬತ್ತನೆಯ ಅಂಶದಲ್ಲಿ ಕಲಿಯುಗಧರ್ಮ, ಭೂತ ಮತ್ತು ಭವಿಷ್ಯತ್ಕಾಲದ ಈಶ್ವರಭಕ್ತರ ಇತಿಹಾಸಾದಿಗಳು ವಿಸ್ತಾರವಾಗಿ ಏಳುಸಾವಿರ ಶ್ಲೋಕಗಳಿಂದ ವರ್ಣಿತವಾಗಿವೆ. ॥೩೦॥

ಈಶ್ವರನಾಮಕವಾದ ಹತ್ತನೆಯ ಅಂಶದಲ್ಲಿ ಎಂಟುಸಾವಿರ ಶ್ಲೋಕಗಳಿವೆ. ಅದರಲ್ಲಿ ಭಸ್ಮರುದ್ರಾಕ್ಷಧಾರಣಮಹಿಮೆ, ರುದ್ರಪಂಚಾಕ್ಷರೀಮಂತ್ರಮಹಿಮೆ, ಶಿವಲಿಂಗೋತ್ಪತ್ತಿ, ಶಿವಧರ್ಮಪ್ರಶಂಸೆ, ಶಿವಾರ್ಚಕರನ್ನು ಅರ್ಚಿಸುವುದರ ಫಲ, ಇವೆಲ್ಲವೂ ವಿಸ್ತಾರವಾಗಿ ವರ್ಣಿತವಾಗಿವೆ. ॥೩೧-೩೨॥

ಅಷ್ಟೌ ಶ್ಲೋಕಸಹಸ್ರೇಣ ಕಥಿತೋಽಸ್ತಿ ಪಿನಾಕಿನಾ ।
ಏಕಾದಶೋ ಮಹಾದೇವಃ ಪ್ರೋಕ್ತೋಽಯಂ ನಾಮತೋ ಮುನೇ ॥೩೩॥

ಅಭಿಷೇಚನಿಕಾನಾಂ ತು ಕಾಲಂ ಪುಷ್ಪೇಷು ವೈ ಫಲಂ ।
ಮಾಸಿ ಮಾಸ್ಯರ್ಚನಸ್ಯಾಪಿ ಸೋಮವಾರಾಷ್ಟಮೀಷು ಚ ॥೩೪॥

ಪ್ರದೋಷೇ ಚ ಚತುರ್ದಶ್ಯಾಂ ಪೂಜನೇನ ಫಲಂ ದ್ವಿಜ ।
ಷಟ್ಪಂಚಾಶದ್ದೇಶಮಧ್ಯೇ ತು ಶಿವಕ್ಷೇತ್ರಾನುಕೀರ್ತನಂ ॥೩೫॥

ಷಟ್ಸಹಸ್ರೇಣ ಕಥಿತಃ ಶ್ಲೋಕೇನಾತ್ರ ಶಿವೇನ ಹಿ ।
ಈಶಾಖ್ಯೋ ದ್ವಾದಶಾಂಶೋಽಯಂ ಸತ್ಯರ್ಥಂ ದಕ್ಷನಾಶನಂ ॥೩೬॥

ಉದ್ವಾಹಶ್ಚ ತಥಾ ಶಂಭೋಃ ಸ್ಕಂದೋತ್ಪತ್ತ್ಯಸುರಾರ್ದನಂ ।
ಸ್ಕಂದಸ್ಯ ಚ ಶಿವಸ್ಯೈವಂ ನಾಮ ಸಾಹಸ್ರಕೀರ್ತನಂ ॥೩೭॥

ರುದ್ರಸ್ತುತಿರ್ವೇದವಾದಃ ಜಯಸ್ತುತ್ಯುಪವರ್ಣನಂ ।
ಅವಿಮುಕ್ತಪ್ರವೇಶಂ ಚ ಜೈಗೀಷವ್ಯಸ್ಯ ಸತ್ತಮಾಃ ॥೩೮॥

ಅನುಕ್ರಮೇಣಕಥನಂ ಶ್ರವಣೇ ಮಹಿಮಾಸ್ಯ ಹಿ ।
ತಥಾ ಪಂಚಸಹಸ್ರೇಣ ಶ್ಲೋಕೇನಾಯಂ ಶಿವೋದಿತಃ ॥೩೯॥

---

ಮಹಾದೇವನಾಮಕವಾದ ಏಕಾದಶಾಂಶವು ಆರುಸಹಸ್ರ ಶ್ಲೋಕಗಳಿಂದ ವಿಸ್ತೃತವಾಗಿವೆ. ಶಿವಲಿಂಗಾಭಿಷೇಕದ ಫಲ, ಋತುಗಳಿಗನುಸಾರವಾಗಿ ಬೇರೆ ಬೇರೆ ಪುಷ್ಪಗಳನ್ನು ಅರ್ಚಿಸುವುದರ ಫಲ, ಮಾಸಶಿವರಾತ್ರಿಯೇ ಮೊದಲಾದ ಪ್ರತಿತಿಂಗಳ ಶೈವವ್ರತ, ಸೋಮವಾರ, ಅಷ್ಟಮಿ, ಪ್ರದೋಷ, ಚತುರ್ದಶೀ ಈ ತಿಥಿಗಳಲ್ಲಿ ಶಿವ ಪೂಜೆ ನಡೆಸುವುದರ ಫಲ. ಐವತ್ತಾರು ದೇಶಗಳಲ್ಲಿಯೂ ಇರುವ ಶಿವಕ್ಷೇತ್ರಗಳ ವರ್ಣನೆ. ಇವು ಅಲ್ಲಿರುವ ವಿಷಯಗಳು. ॥೩೩-೩೪-೩೫॥

ಜೈಗೀಷವ್ಯಮಹಾಮುನಿಯೇ, ಈಗ ನಾನು ಹೇಳುತ್ತಿರುವುದೇ ಈಶನಾಮಕವಾದ ದ್ವಾದಶಾಂಶ. ಇದರಲ್ಲಿ ಸತೀದೇವಿಗಾಗಿ ಶಂಕರನು ದಕ್ಷನನ್ನು ನಾಶಗೊಳಿಸುವುದು, ಪಾರ್ವತೀ ಶಂಕರರ ಪುನರ್ವಿವಾಹ, ಕುಮಾರೋತ್ಪತ್ತಿಯ ಕಥೆ, ತಾರಕಾಸುರ ವಿನಾಶ, ಸ್ಕಂದಕೃತವಾದ ಶಿವಸಹಸ್ರನಾಮಸ್ತುತಿ, ರುದ್ರಸ್ತುತಿ, ವೇದಪಾದಸ್ತವ,

ಶಿವಸ್ಯೈವಂ ರಹಸ್ಯಾರ್ಥರತ್ನಾಕರಮಿದಂ ಮುನೇ ।
ಪ್ರಥಮಷ್ಷಷ್ಟಿಕಾಧ್ಯಾಯೋ ದ್ವಿತೀಯೋ ತ್ರಿಂಶತಾನ್ವಿತಃ ॥೪೦॥

ತೃತೀಯಸ್ತ್ರಿಂಶತಂ ಮಾನಂ ದ್ವಿಧಾಭೂತೋಽಯಮುತ್ತಮಃ ।
ಚತುರ್ಥಃ ಪಂಚತ್ರಿಂಶಚ್ಚ ಚತ್ವಾರಿಂಶಚ್ಚ ಪಂಚಮಃ ॥೪೧॥

ಷಷ್ಠಃ ಪಂಚಾಶತಾ ಪ್ರೋಕ್ತಃ ಸಪ್ತಮಃ ಪಂಚವಿಂಶತಿಃ ।
ಶಿವಸ್ಥಾನಾನುಕಥನಂ ಸಪ್ತಾಂಶೇ ದ್ವಿಶತಸ್ತಥಾ ॥೪೨॥

ಅಷ್ಟಮಸ್ತ್ರಿಂಶದಧ್ಯಾಯಃ ಷಟ್‌ಷಷ್ಟಿನವಮೋ ದ್ವಿಜ ।
ದಶಮಂ ತ್ರಿಶತಂ ಪ್ರೋಕ್ತಂ ಮುನೇ ಏಕಾದಶೋಽಪಿ ಹಿ ॥೪೩॥

ಪಂಚಾಶದ್ದ್ವಾದಶಾಂಶೋ ದ್ವಿವಿಂಶತೀ ಪರಿಕೀರ್ತಿತಃ ।
ಏವಮಧ್ಯಾಯಸಾಹಸ್ರರಹಸ್ಯಮಿದಮುತ್ತಮಂ ॥೪೪॥

---

ಜಯಸ್ತುತಿ, ಅವಿಮುಕ್ತಕ್ಷೇತ್ರವೆನಿಸಿದ ಕಾಶಿಗೆ ಸ್ಕಂದನು ಪ್ರಯಾಣಮಾಡುವುದು, ಅಂಶಗಳ ವಿಷಯಾನುಕ್ರಮಣಿಕೆ, ಶಿವರಹಸ್ಯ ಶ್ರವಣಫಲ ಇವು ಐದುಸಾವಿರ ಶ್ಲೋಕಗಳಿಂದ ಉಕ್ತವಾಗಿವೆ. ॥೩೬-೩೭-೩೮-೩೯॥

ರತ್ನಾಕರದಂತಿರುವ ಈ ಶಿವರಹಸ್ಯದ ಮೊದಲನೆಯ ಅಂಶದಲ್ಲಿ ಅರುವತ್ತು, ಎರಡನೆಯ ಅಂಶದಲ್ಲಿ ಮೂವತ್ತು, ಮೂರರ ಪೂರ್ವಾರ್ಧ ಮತ್ತು ಉತ್ತರಾರ್ಧಗಳಲ್ಲಿ ಒಟ್ಟು ಮುನ್ನೂರು ಅಧ್ಯಾಯಗಳೂ ನಾಲ್ಕನೆಯ ಅಂಶದಲ್ಲಿ ಮೂವತ್ತೈದು ಅಧ್ಯಾಯಗಳೂ, ಐದು ಮತ್ತು ಆರನೆಯ ಅಂಶಗಳಲ್ಲಿ ಕ್ರಮವಾಗಿ ನಲವತ್ತು ಮತ್ತು ಐವತ್ತು ಅಧ್ಯಾಯಗಳೂ, ಏಳನೆಯ ಅಂಶದಲ್ಲಿ ಪೂರ್ವ ಮತ್ತು ಉತ್ತರಾರ್ಧಗಳಲ್ಲಿ ಇಪ್ಪತ್ತೈದು ಮತ್ತು ಇನ್ನೂರು ಅಧ್ಯಾಯಗಳೂ ಇವೆ. ॥೪೦-೪೧-೪೨॥

ಎಂಟನೆಯ ಅಧ್ಯಾಯದಲ್ಲಿ ಮೂವತ್ತು ಅಧ್ಯಾಯಗಳೂ, ನವಮಾಂಶದಲ್ಲಿ ಅರುವತ್ತಾರು ಅಧ್ಯಾಯಗಳೂ, ಹತ್ತನೆಯ ಅಂಶದಲ್ಲಿ ಮುನ್ನೂರು ಅಧ್ಯಾಯಗಳೂ, ಹನ್ನೊಂದನೆಯ ಅಂಶದಲ್ಲಿ ಐವತ್ತು ಅಧ್ಯಾಯಗಳೂ, ದ್ವಾದಶಾಂಶದಲ್ಲಿ ನಲವತ್ತು ಅಧ್ಯಾಯಗಳೂ ಇರುವುವು. ಹೀಗೆ ದ್ವಾದಶಾಂಶಗಳೂ ಸ್ವಲ್ಪ ಹೆಚ್ಚುಕಮ್ಮಿಯಾಗಿ ಸಾವಿರ ಅಧ್ಯಾಯಗಳೂ ಇರುತ್ತವೆ. ॥೪೩-೪೪॥

|| ಶ್ರೀ ಸ್ಕಂದ ಉವಾಚ ||

ಶಮಾಯುತತಪೋಧನಾಃ ಶಿವಪದಾಬ್ಜಬೋಧಾಯನಾಃ
ಸನಂದನಸನಾತನಾಃ ಭೃಗುವಸಿಷ್ಠಬೋಧಾಯನಾಃ ।
ಶಿವಾರ್ಚಕಜನಾವನಾಃ ಶಿವಕಥಾಶ್ರವಾತ್ಪಾವನಾ
ಭವಂತು ಮಮ ಹೃಜ್ಜನಾಃ ಭವಪದಾಬ್ಜಸಂಸೇವನಾಃ ||೪೫||

ಭವ್ಯದಿವ್ಯವರಹವ್ಯವಾಹಭಾಃ
ಸ್ತ್ವಮನ್ಯಯತಪಃ ಪರಮಸ್ತ್ವಂ ।
ಜೈಗೀಷವ್ಯ ತವ ಕಾವ್ಯಮವ್ಯಯಂ
ಹೃದ್ಗತಂ ಸುಗತಮೇವ ಘನಾಢ್ಯಂ ||೪೬||

ಸದಾ ಮಹೇಶಾನಕಥಾನಿಧಾನ
ನಿಧಾನಲಾಭಾಯ ಯತೇತ ಸತ್ತಮಾಃ ।
ತದ್ಯೈವ ಸರ್ವಾಘಮಹೌಘಹೃತ್ತನೋ
ನಿವಾರ್ಯ ಚಾರ್ಯಾಃ ಪ್ರಭವಂತಿ ಚೋತ್ತಮಾಃ ||೪೭||

---

ಶಮದಮಾದಿಗಳಿಂದ ಕೂಡಿ ತಪಸ್ಸನ್ನೇ ಧನವನ್ನಾಗಿ ಉಳ್ಳ ಸನಂದನ, ಸನಾತನ, ಭೃಗು, ವಸಿಷ್ಠ, ಬೋಧಾಯನ ಮುಂತಾದ ಮಹರ್ಷಿಗಳು ಶಿವಪಾದ ಕಮಲವನ್ನು ಅರಿಯುವವರಾಗಿ, ಶಿವಾರ್ಚಕರನ್ನು ಮರ್ಯಾದಿಸುತ್ತಾ, ಈ ಶಿವರಹಸ್ಯ ವನ್ನು ಸಂಪೂರ್ಣವಾಗಿ ತಿಳಿದು, ತನ್ಮೂಲಕ ಪವಿತ್ರರೂ, ನನ್ನ ಪರಮ ಸ್ನೇಹಿತರೂ ಆಗಿ ಸಂತೋಷದಿಂದ ಕಾಲ ಕಳೆಯಲಿ. ಹೀಗೆ ಶಿವರಹಸ್ಯವು ಸರ್ವರಿಗೂ ಸಂತೋ ಷಪ್ರದವಾಗಲಿ, ||೪೫||

ಸುಂದರನೂ, ಹವ್ಯವಾಹಸದೃಶನೂ ಆದ ನೀನು ಅಸದೃಶವಾದ ತಪಸ್ಸಿ ನಿಂದ ಶ್ರೇಷ್ಠನೆನಿಸಿ ನೀನು ಮಹಾತ್ಮನೆನಿಸಿರುವೆ. ಜೈಗೀಷವ್ಯಮಹರ್ಷಿಯೇ, ಇಂತಹ ನಿನಗಾಗಿ ಹೇಳಿದ ಈ ಕಾವ್ಯವು ಅರ್ಥಗರ್ಭಿತವೂ, ಮನೋಹರವೂ ಸ್ಥಿರ ವಾದದ್ದೂ ಆಗಿ ಲೋಕೋಪಕಾರಕವಾಗಲಿ. ||೪೬||

ಸದಾಶಿವನ ಕಥೆಯನ್ನು ಕೇಳುವುದರಲ್ಲಿಯೇ ಆಸಕ್ತರಾದ ಮಹಾತ್ಮರು ಇಂತಹ ಐಶ್ವರ್ಯಪ್ರದವಾದ ಕಾವ್ಯವನ್ನು ಕುತೂಹಲದಿಂದ ಕೇಳುವರು. ಆದರಿಂದ

ವಂಧ್ಯಂ ನ ಕುರ್ಯಾದ್ದಿವಸಂ ತು ವಿಂಧ್ಯಹೃ
ತ್ಸಂಧ್ಯಾತಪಾದಾಬ್ಜಕಥಾಭಿವೃದ್ಧ್ಯಾ ।
ವಿಧ್ಯೈವ ಬುದ್ಧ್ಯಾ ಪ್ರಸಮೀಕ್ಷ್ಯಸಿದ್ಧೈಃ
ಅಧ್ಯಾಯಮಸ್ಯ ಶೃಣುಯಾತ್ಪಠೇದ್ವಾ ॥೪೮॥

ತುರಂಗಮಾತಂಗಶತಾಂಗಧಾತ್ರೀಂ
ಪವಿತ್ರಪಾತ್ರೇ ಪ್ರದದಾತಿ ಗಾಂ ವಸು ।
ಸತ್ರಾತಿರಾತ್ರೈರ್ಯಜತೇ ಸ ವೇದಾ
ನಧೀಯತೇ ತೀರ್ಥಜಲಾಪ್ಲುತಸ್ಸಃ ॥೪೯॥

ತತೋಧಿಕಂ ಪುಣ್ಯಮವಾಪ್ಯ ಮೋದತೇ
ಕಿಂ ನಾಕಪೃಷ್ಠಂ ಸುಕೃತಾಮುಧಾಳಕಂ ।
ಸದಾಶಿವಸ್ಯಾಸ್ಯ ರಹಸ್ಯಸಂಶ್ರವಾತ್
ಕೈಲಾಸಮೌಲೌ ನಿವಸನ್ ಗಣೋ ಭವೇತ್ ॥೫೦॥

---

ತಮ್ಮ ಅನಾದಿಯಾದ ಪಾಪರಾಶಿಯನ್ನು ಕಳೆದುಕೊಂಡು, ತಮ್ಮ ಅಜ್ಞಾನವನ್ನು ನಿವಾರಿಸಿಕೊಂಡು ಅವರು ಲೋಕಾಚಾರ್ಯರೆನಿಸುವರು. ॥೪೭॥

ಮಾನವನು ವ್ಯರ್ಥವಾಗಿ ಎಂದೂ ಕಾಲಕಳೆಯಬಾರದು. ಅಗಸ್ತ್ಯಮಹರ್ಷಿಯಿಂದ ಪೂಜಿತನಾದ ಪರಶಿವನ ಕಥಾಶ್ರವಣದಿಂದ ವಿದ್ಯಾಬುದ್ಧಿಗಳನ್ನು ಹೆಚ್ಚಿಸಿಕೊಂಡು, ಪವಿತ್ರರೆನಿಸುವರು. ಇದರಲ್ಲಿ ಒಂದಧ್ಯಾಯವನ್ನು ಕೇಳಿದವರೂ ಅಥವಾ ಓದಿದವರೂ ಪರಮಪವಿತ್ರರಾಗುವರು. ॥೪೮॥

ಶಿವರಹಸ್ಯವನ್ನು ಭಕ್ತಿಯಿಂದ ಓದಿದವರೂ ಅಥವಾ ಕೇಳಿದವರೂ, ಆನೆ, ಕುದುರೆ, ರಥ, ಭೂಮಿ, ಗೋವು, ದ್ರವ್ಯ ಇವುಗಳನ್ನು ಸತ್ಪಾತ್ರರಿಗೆ ದಾನಮಾಡುವುದರಿಂದ ಲಭಿಸುವಷ್ಟು ಸುಕೃತವನ್ನು ಅನಾಯಾಸವಾಗಿ ಸಂಪಾದಿಸುವರು. ಅಲ್ಲದೆ ಸತ್ರ, ಅತಿರಾತ್ರ ಮುಂತಾದ ಯಾಗಗಳನ್ನಾಚರಿಸಿ, ವೇದಾಧ್ಯಯನಮಾಡಿ, ಸಮಸ್ತ ತೀರ್ಥಜಲದಲ್ಲಿ ಮುಳುಗಿದವರಿಗೆ ಸರಿಸಮಾನರೆನಿಸಿ ಮುಕ್ತಿಮಾರ್ಗವನ್ನಾಶ್ರಯಿಸುವರು. ॥೪೯॥

ಈ ಶಿವರಹಸ್ಯವನ್ನು ಪಠಿಸಿದವರಿಗೆ ಹಿಂದೆ ಹೇಳಿದಷ್ಟಕ್ಕಿಂತಲೂ ಅಧಿಕವಾದ ಸುಕೃತವು ಲಭಿಸುವುದು. ಅವರು ದೇವತೆಗಳ ವಾಸಸ್ಥಾನವಾದ ಸ್ವರ್ಗಲೋಕ

ಯೇ ವಾ ಪುರಾಣನಿಚಯಂ ಶಿವಧರ್ಮಸಾರಂ
ಶಾಸ್ತ್ರೋಪಮೇನ ಕುಧಿಯಾ ಖಲು ಶಬ್ದತರ್ಕೈಃ ।
ಶರ್ವೋಕ್ತಶೈವಸುರಹಸ್ಯಮಿದಂ ಶಿವಾಯೈ
ನಿಘ್ನಂತಿ ವಿಘ್ನನಿಕರೈರ್ದ್ವಿಜಜಾಂತ್ಯಜಾಸ್ತೇ ॥೫೧॥

ನ ಕರ್ಕಶಕರ್ಕಶರ್ಕರಾಪ್ರತಿಭತರ್ಕಹೃದ್ಧ್ವಾಂತಭಿತ್
ಭವೇತ ಕಿಮುತಾರ್ಕವಚ್ಛಿವರಹಸ್ಯರತ್ನಾಂಶುಮಾನ್ ।
ನ ಪಾಣಿನಿಫಣಾಧಿಕೈಃ ಫಣಿತಶಬ್ದಮುಖ್ಯೈಃ ಶತೈಃ
ವಿಚಾರಕೃದಿಹಾಂಧಹೃಧ್ವನತಿಹಾಸಮೀಮಾಂಸಕಃ ॥೫೨॥

ಸಾಂಖ್ಯವ್ಯಾಖ್ಯಾನಸೌಖ್ಯಪ್ರದಮುದಮುಹಿಮಾ ಸೌಖ್ಯಹೇತೌ ನ ಜೀವೇ
ಯೋಗೋ ರೋಗೈಕಭೋಗೋ ಭವತಿ ಜನಿಮತಾಂ ರಾಗಿನೋ ನೋ ವಿರಾಗಃ ।
ಸಂಜಾಯೇತ ಭವೇಷು ಭಾಗ್ಯಜನುಷಾಂ ವೈರಾಗ್ಯಭಾಗ್ಯೋದಯ
ಸ್ತ್ವಾರೋಗ್ಯಂ ಕಿಲ ಶಾಂಕರಾಂಘ್ರಿಭಜನಾಚ್ಛೈವೈಃ ಪರಂ ಲಭ್ಯತೇ ॥೫೩॥

---

ವನ್ನೂ ಗಣಿಸುವುದಿಲ್ಲ. ಸದಾಶಿವನ ಕಥಾಶ್ರವಣದಿಂದ ಆತನು ಕೈಲಾಸವಾಸವನ್ನು ಪಡೆದು ಕೊನೆಗೆ ಶಿವಗಣಗಳಲ್ಲಿ ತಾನೂ ಒಬ್ಬನಾಗುವನು. ॥೫೦॥

ಯಾರು ಪುರಾಣಗಳ ಸಮೂಹಗಳೂ, ಶಿವಧರ್ಮಸಾರವೆನಿಸಿದ ಈ ಶಿವ ರಹಸ್ಯವನ್ನೂ, ಕೇವಲ ಶಾಸ್ತ್ರವೆಂದು ತಿಳಿದು ಶಬ್ದತರ್ಕಾದಿಗಳಿಂದಲೂ, ದುರ್ಬುದ್ಧಿ ಯಿಂದಲೂ ನಾನಾರೀತಿ ಅರ್ಥಮಾಡುವರೋ ಅವರು ಪಾಪಿಗಳೆನಿಸುವರು. ಪಾರ್ವತಿಗೆ ಪರಶಿವನೇ ಸಾಕ್ಷಾತ್ತಾಗಿ ಹೇಳಿದ ಈ ಗ್ರಂಥವನ್ನು ತಿರಸ್ಕರಿಸುವವರು ಬ್ರಾಹ್ಮಣರಾದರೂ ಅವರು ಚಂಡಾಲರಿಗೆ ಸಮನೆನಿಸುವರು. ॥೫೧॥

ಕಠಿನತರವಾದ ಶಬ್ದಜಾಲಗಳಿಂದ ಕೂಡಿ ವಾದಿಸುವ ತರ್ಕಶಾಸ್ತ್ರವೂ ಸೂರ್ಯ ನಂತೆ ಸದಾ ಉರಿಯುವ ಈ ಶಿವರಹಸ್ಯದ ಮುಂದೆ ಏನೂ ಕೆಲಸ ಮಾಡಲಾರದು. ಪಾಣಿನಿಮಹರ್ಷಿಯಿಂದ ಕಲ್ಪಿತವಾದ ಶಬ್ದಶಾಸ್ತ್ರವೂ, ಮೀಮಾಂಸಾಶಾಸ್ತ್ರವೂ ಈ ಇತಿಹಾಸದ ಮುಂದೆ ಕುರುಡರಂತೆ ವ್ಯರ್ಥವಾಗಿ ಹೋಗುವುವು ಅಲ್ಲವೆ? ॥೫೨॥

ಮನುಷ್ಯರಿಗೆ ಸಾಂಖ್ಯಮತವೇ ಮೊದಲಾದ ಅನೇಕ ಮತತತ್ತ್ವಗಳು ಜೀವನದಲ್ಲಿ ಸುಖಾಪೇಕ್ಷೆಯನ್ನುಂಟುಮಾಡಿ, ಮದ ಮಾತ್ಸರ್ಯಾದಿಗಳನ್ನು

ಕಾಯಂ ಸಾಧುಮುಮಾಸಹಾಯಚರಣಾಂಭೋಜಾರ್ಚನಾಜ್ಞಾಯತೇ
ಸೋಪಾಯಂ ನ ಉಪಾಯ ಸಾಧ್ಯಗದಯುಕ್ ಕೋಯಂ ನ ಜಾನಾ
ತ್ಯಮುಂ ।
ಹಾಯಂ ಪಾಪಮವಶ್ಯಮವ್ಯಯಮಜಂ ಶಾಂತಂ ತುರೀಯಂ ಶಿವಂ
ಧ್ಯಾತ್ವಾ ಹೃತ್ಕಮಲೇ ವಸ್ಯೈವ ನಿಯತಂ ಕೈಲಾಸವಾಸಾದರಃ ॥೫೪॥

ಕೇದಾರಗೋಕರ್ಣಕುರುಪ್ರಭಾಸ
ಸನ್ನೈಮಿಷಂ ಚ ಬದರ್ಯಮರಕಂಟಕಂ ಚ ।
ಶ್ವೇತೇ ವನೇ ಬ್ರಹ್ಮವನೇ ಚ ಕಾಂಚ್ಯಾಂ
ಶ್ರೀ ಕಾಲಹಸ್ತ್ಯಾವರುಣಾಚಲೇ ವಾ ॥೫೫॥

---

ಹುಟ್ಟಿಸುವುವು. ಯೋಗಶಾಸ್ತ್ರವು ರೋಗಕ್ಕೆ ಕಾರಣವೆನಿಸುವುದು. ಅಂತೂ ಇವಾವುವೂ ವೈರಾಗ್ಯವನ್ನು ದೊರಕಿಸಲಾರವು. ಶಿವನನ್ನೇ ಸರ್ವದಾ ನಂಬಿ ಅವನ ಪಾದವನ್ನೇ ಸರ್ವದಾ ಸೇವಿಸುವ ಮಾನವರಿಗೆ ಮಾತ್ರ, ವೈರಾಗ್ಯವೂ, ಸಕಲೈಶ್ವರ್ಯವೂ, ಆರೋಗ್ಯವೂ, ಅನಾಯಾಸವಾಗಿ ಲಭಿಸುವುವು. ಇದರಲ್ಲಿ ಸಂಶಯವಿಲ್ಲ. ॥೫೩॥

ಪ್ರದೋಷಕಾಲದಲ್ಲಿ ಉಮಾಪತಿಯ ಪಾದವನ್ನು ಪೂಜಿಸುವುದರಿಂದ ಮಾನವರ ದೇಹವು ನಾನಾವಿಧವಾದ 'ಮೋಕ್ಷೋಪಾಯವುಳ್ಳದ್ದಾಗಿ ಶ್ರೇಷ್ಠವೆನಿಸುವುದು. ಅಂತಹ ಮುಕ್ತ್ಯುಪಾಯವನ್ನು ಮತ್ತಾವನು ಬೋಧಿಸಬಲ್ಲನು? ನಾಶರಹಿತನೂ, ಉತ್ಪತ್ತಿಶೂನ್ಯನೂ, ಶಾಂತನೂ, ತುರೀಯನೂ ಆದ ಶಿವನನ್ನು ಯಾವನು ನಿತ್ಯವೂ ತಪ್ಪದೆ ಧ್ಯಾನಮಾಡುವನೋ ಅವನು ನಿಜವಾಗಿಯೂ ಕೈಲಾಸವಾಸವನ್ನು ಸಂಪಾದಿಸುವನೆಂಬುದರಲ್ಲಿ ಸಂದೇಹವೇ ಇಲ್ಲ. ಆದಕ್ಕಾಗಿ ನಿತ್ಯವೂ ಪರಶಿವನನ್ನೇ ಧ್ಯಾನಿಸುತ್ತಿರಬೇಕು. ॥೫೪॥

ಕೇದಾರಕ್ಷೇತ್ರ, ಗೋಕರ್ಣ, ಕುರುಕ್ಷೇತ್ರ, ಪ್ರಭಾಸಕ್ಷೇತ್ರ, ನೈಮಿಷಾರಣ್ಯ ಬದರೀಕ್ಷೇತ್ರ, ಅಮರಕಂಟಕ, ಶ್ವೇತವನ, ಬ್ರಹ್ಮವನ, ಕಾಂಚೀ, ಕಾಲಹಸ್ತೀ, ಅರುಣಾಚಲ, ವೃದ್ಧಾಚಲ, ಅಭ್ರಸಭೆ, ವೃಷಾದ್ರಿ, ವೇದವನ, ಸೇತುವನ, ಹಾಲಾಸ್ಯಕ್ಷೇತ್ರ, ವೇಣುವನ ಈ ಕ್ಷೇತ್ರಗಳಲ್ಲಿಯೂ, ತಾಮ್ರಪರ್ಣೀ, ಕಾವೇರೀ, ಗಂಗಾ, ನರ್ಮದಾ, ಗೋದಾವರೀ, ಕೃಷ್ಣಾ, ಯಮುನಾ, ತುಂಗಾ ಮುಂತಾದ

ವೃದ್ಧಾಚಲೇ ವಾಭ್ರಸಭಾಸು ಗೋನಗೇ
ಶ್ರುತೀವನೇ ಸೇತುವನೇ ಸುಪುಣ್ಯೇ ।
ಹಾಲಾಸ್ಯಕೇ ವೇಣುವನೇ ಚ ತಾಮ್ರಾ
ಕವೇರಜಾಗಾಂಗಸುಸರ್ಮದಾವರೇ ॥೫೬॥

ಗೋದಾವರೀ ಕೃಷ್ಣಭವಾ ಚ ಯಾಮುನಾ
ತುಂಗಾ ಸುಸಂಭೇದವರೇ ಚ ಮಜ್ಜನಃ ।
ಸೋಽಸಾವಥಾತ್ರಾಪ್ಯವಿಮುಕ್ತವಾಸ
ಯೋಗ್ಯಃ ಶಿವಪ್ರೀತತಸುರ್ಭವೇತ ॥೫೭॥

ತತ್ರಾವಿಮುಕ್ತೇಽಪಿ ವಸನ್ನಥೇಶ
ಕೃಪಾವಶಾದ್ವಾಸಮುಹೋ ಲಭೇತ ।
ಕೈಲಾಸವಾಸೋಽಪ್ಯವಿಮುಕ್ತವಾಸಿಭಿಃ
ಪ್ರಾಪ್ಯೇತ ಶಂಭೋಃ ಕಿಲ ಭಕ್ತಿಯೋಗೈಃ ॥೫೮॥

ಯೋ ಶಂಕರಾಸ್ಯಕಮಲಾನ್ ನಿಗಮಾಗಮಾಂತ
ಪುಷ್ಪೋತ್ಥಸುಂದರಮರಂದರಸೇರ್ಥವಾದಂ ।

---

ಪುಣ್ಯನದಿಗಳಲ್ಲಿಯೂ ವಾಸ ಮತ್ತು ಸ್ನಾನಮಾಡುವುದರಿಂದ ಎಂತಹ ಸುಕೃತವು ಲಭಿಸುವುದೋ, ಅವಿಮುಕ್ತಕ್ಷೇತ್ರದಲ್ಲಿ ನೆಲಸಲು ಎಷ್ಟು ಪುಣ್ಯವು ಇರಬೇಕಾಗುವುದೋ, ಅಷ್ಟೇ ಸುಕೃತರಾಶಿಯು ಈ ಶಿವರಹಸ್ಯವನ್ನು ಓದುವುದರಿಂದ ಮತ್ತು ಕೇಳುವುದರಿಂದ ಉಂಟಾಗುವುದು. ಮತ್ತು ಶಿವನಿಗೆ ಪ್ರೀತಪಾತ್ರನೆನಿಸಿ ಅವನ ಅನುಗ್ರಹವನ್ನೂ ಪಡೆಯುವನು. ಇದು ನಿಶ್ಚಯ. ಸಕಲ ಪುಣ್ಯಸ್ಥಳಗಳ ದರ್ಶನ, ವಾಸ ಇವುಗಳ ಫಲವೆಲ್ಲಾ ಇದರಿಂದ ಸಿದ್ಧಿಸುವುದು. ||೫೫-೫೬||

ಇತರ ಕಡೆಗಳಲ್ಲಿ ವಾಸಮಾಡುವವರು ಕಾಶಿಯಲ್ಲಿ ನೆಲಸುವ ಪುಣ್ಯವನ್ನೂ, ಕಾಶೀವಾಸಿಗಳು ಕೈಲಾಸವನ್ನು ಹೊಂದುವ ಸುಕೃತವನ್ನೂ ಪಡೆಯುವುದಕ್ಕಾಗಿ ಅವಶ್ಯಕವಾಗಿ ಎಲ್ಲರೂ ಭಕ್ತಿಯೋಗದಿಂದ ಈ ಶಿವರಹಸ್ಯವನ್ನು ಪಠಿಸಬೇಕು. ||೫೭-೫೮||

ವೇದವೇದಾಂತಗಳಲ್ಲಿ ಹೇಳುವ ಶಿವಪಾದಪೂಜಾದಿಗಳನ್ನೂ ಅದರಿಂದ ಲಭಿಸುವ ಫಲವನ್ನೂ ಯಾರು ಅರ್ಥವಾದವೆಂದು ತಿಳಿಯುವರೋ ಅಂತಹವರು

ತೇ ಮನ್ವತೇ ಖಲು ನರಾಃ ಖರಸೂಕರಾದಿ
ಯೋನೀಷು ಜಾರಜಭವಾ ಭವದುಃಖಭಾಜಃ ॥೫೯॥

ಶಿವರಹಸ್ಯಮಿದಂ ಶಿವವಶ್ಯಕೃತ್
ಯದಿ ಸಕೃತ್ಪಠತೇ ಭುವಿ ಭಕ್ತಿತಃ।
ತಾವದ್ಯಮೇಷು ನ ಭವೇದ್ಭವವೀಕ್ಷಣೇನ
ಭಾವೇಷು ಘೋರಭವಜಂ ವಿಭವಂ ಭಜೇನ್ನ ॥೬೦॥

ಯಸ್ತೂರ್ಧ್ವಪುಂಡ್ರಮಲಿಕೇ ವಿದಧನ್ನಲೀಕೇ
ನಾಲೀಕಜಾಸನಶತಂ ನಿರಯೇ ಪಚೇದ್ಯಃ।
ಯೋ ವಿಷ್ಣುಸಾಮ್ಯಕಧಿಯಾ ಹೃದಯೇ ಭವೇದ್ಯೋ
ವಿಶ್ವಾಧಿಕೇಶ್ವಗಣಯೋನಿಷು ಸಂಭವೇತ್ಸಃ ॥೬೧॥

ಭಸ್ಮತ್ರಿಪುಂಡ್ರರಹಿತಃ ಶಿವಲಿಂಗಮಾತ್ರ
ಸಂಪೂಜನೋಜ್ಝಿತಮತಿಃ ಶೃಣುಮದ್ರಹಸ್ಯಂ।

---

ಕತ್ತೆ, ಹಂದಿ ಮುಂತಾದ ಪ್ರಾಣಿಗಳ ಯೋನಿಯಲ್ಲಿ ಜನಿಸುವರು. ಅಥವಾ ವ್ಯಭಿಚಾರದಿಂದ ಜನಿಸಿ ಸಾಂಸಾರಿಕವಾದ ನಾನಾ ದುಃಖಗಳಲ್ಲಿ ತೊಳಲುವಂತಾಗುವರು. ಅವರಿಗೆ ಎಂದೂ ಸುಖವು ಲಭಿಸಲಾರದು. ॥೫೯॥

ಈ ಶಿವರಹಸ್ಯವು ಪರಶಿವನನ್ನು ವಶವನ್ನಾಗಿ ಮಾಡಿಕೊಡುವುದು. ಇದನ್ನು ಪಠಿಸುವವರಿಗೆ ಶಿವಾನುಗ್ರಹವೊದಗಿ, ಯಮದೂತರ ಭಯವೂ ಸಾಂಸಾರಿಕವಾದ ತೊಂದರೆಯೂ ಎಂದೂ ಉಂಟಾಗಲಾರದು. ಇದರಲ್ಲಿ ಸಂಶಯವಿಲ್ಲ. ॥೬೦॥

ಯಾರು ಹಣೆಗೆ ಊರ್ಧ್ವಪುಂಡ್ರವನ್ನೂ, ಕಮಲದಂತಿರುವ ನೂರಾರು ಚಿಹ್ನೆಗಳನ್ನೂ ಧರಿಸುವರೋ, ಅಂತಹವರು ಅನೇಕವರ್ಷಪರ್ಯಂತ ನರಕಲೋಕದಲ್ಲಿ ನಾನಾದುಃಖಗಳನ್ನನುಭವಿಸುವರು. ಮತ್ತು ಲೋಕಾತೀತ ಪರಮೇಶ್ವರನನ್ನು ಯಾರು ವಿಷ್ಣುವಿಗೆ ಸಮನೆಂದು ತಿಳಿದು ಹೃದಯದಲ್ಲಿ ಧ್ಯಾನಿಸುವರೋ, ಅಂತಹವರು ನಾಯಿಯ ಜನ್ಮದಲ್ಲಿ ಜನಿಸುವರು. ಇದು ನಿಜ. ॥೬೧॥

ಭಸ್ಮತ್ರಿಪುಂಡ್ರರಹಿತನಾಗಿ ಶಿವಲಿಂಗವನ್ನು ಪೂಜಿಸದೆ, ಶಿವರಹಸ್ಯಾದಿಗಳನ್ನು ಕೇಳದೆ, ಶೈವನನ್ನು ಬುದ್ಧಿಪೂರ್ವಕವಾಗಿ ನಿಂದಿಸುವವನು ಅನೇಕ ಕಾಲ

ಶೈವಂ ವಿನಿಂದತಿ ನ ನಂದತಿ ಬುದ್ಧಿಪೂರ್ವಂ
ಬೌದ್ಧೇಷು ಜಾಯತಿ (?) ಚಿರಂ ನಿರಯಾಗತೋಽಪಿ ॥೬೨॥

ಯೋಽರ್ಥಾಶಯಾ ಶಿವರಹಸ್ಯಮಿದಂ ತ್ವಶೈವೇ
ಸಂಶ್ರಾವ್ಯ ಭವ್ಯಪದವೀಂ ನ ಸ ಜಾತು ವಿಂದೇತ್ ।
ಲಾಲಾಮುಖೇ ಚ ನಿರಯೇ ಕ್ರಿಮಿಭುಕ್ಸ ತಿಷ್ಠೇತ್
ನಿಷ್ಠಾಸು ತಿಷ್ಠತಿ ಸುನಿಷ್ಠುರಕಶಾಗ್ರವಿಕೀರ್ಣದೇಹಃ ॥೬೩॥

ತಸ್ಮಾದಿದಂ ಶಿವರಹಸ್ಯಮಿದಂ ಮಹಾರ್ಥಂ
ಶ್ರಾವ್ಯಂ ಶಿವಾರ್ಚಕಜನೈರ್ದ್ವಿಜಶಾಂಭವಾತ್ಸ್ಯಾತ್ ।
ಭಸ್ಮಾಕ್ಷಧಾರಿಭಿರಹರ್ನಿಶಮೇತದೇವ
ಪಾಠ್ಯಂ ನ ಶಾಠ್ಯಮತಿಭಿರ್ಯತಿಭಿಶ್ಚ ನಿತ್ಯಂ ॥೬೪॥

ಗೋಭೂಹಿರಣ್ಯಕನಕಾಂಬರ ರೌಪ್ಯಕೂಪ್ಯ
ಧಾನ್ಯೈರ್ಧನೈರ್ಗಜತುರಂಗಶತಾಂಗಸಂಘೈಃ ।

---

ನರಕದಲ್ಲಿ ವಾಸಮಾಡಿಯೂ ಅನಂತರ ನಾಸ್ತಿಕನೆನಿಸಿ ನೀಚವಂಶದಲ್ಲಿ ಜನಿಸುವನು. ಇದು ನಿಜ. ಶಿವಧರ್ಮವಿರಹಿತನಾದವನೇ ನಿಜವಾದ ನಾಸ್ತಿಕನು. ||೬೨||

ಯಾರು ದುಡ್ಡಿನ ಆಸೆಯಿಂದ ಶಿವರಹಸ್ಯವನ್ನು ಅನಧಿಕಾರಿಯಾದವನಿಗೆ ಹೇಳುವನೋ, ಅವನು ಪರಮಪಾಪಿಯೆನಿಸುವನು. ಅವನಿಗೆ ಎಂದಿಗೂ ಮುಕ್ತಿಯು ಲಭಿಸಲಾರದು. ಅಂತಹವರು ನರಕದಲ್ಲಿ ಸರ್ವದಾ ಕ್ರಿಮಿಯನ್ನು ತಿನ್ನುತ್ತಾ ನಿಷ್ಠುರವಾದ ಚಾವಟಿಯ ಏಟನ್ನು ತಿಂದು ನಾನಾವಿಧಗಳಾದ ದುಃಖಕ್ಕೀಡಾಗುವರು. ||೬೩||

ಅರ್ಥಗರ್ಭಿತವಾದ ಈ ಶಿವರಹಸ್ಯವನ್ನು ಶೈವಬ್ರಾಹ್ಮಣನು ಶಿವಪೂಜೆಯಿಂದಲೇ ಕಾಲಕಳೆಯುವಂತಹ ಶೈವರಿಗೆ ವಿಸ್ತಾರವಾಗಿ ಪ್ರೀತಿಯಿಂದ ಬೋಧಿಸಬೇಕು. ಅದೂ ಅಲ್ಲದೆ ಭಸ್ಮರುದ್ರಾಕ್ಷಮಾಲಾಧಾರಿಗಳಾದ ಯತಿಗಳೂ, ನಿಷ್ಕಪಟಹೃದಯುದವರೂ ನಿತ್ಯವೂ ಈ ಶಿವರಹಸ್ಯವನ್ನು ತಪ್ಪದೆ ಓದುತ್ತಿರಬೇಕು. ಮತ್ತು ಬಂದವರಿಗೆ ಇದರ ಅರ್ಥವನ್ನೂ ವಿವರಿಸಿ ಹೇಳುತ್ತಿರಬೇಕು. ||೬೪||

ಈ ಶಿವರಹಸ್ಯಾರ್ಥವನ್ನು ಯಾರು ಸಂಪೂರ್ಣವಾಗಿ ತಿಳಿದಿರುವರೋ, ಅಂತಹ ಶಾಂಭವಶ್ರೇಷ್ಠನಿಗೆ ಗೋವು, ಭೂಮಿ, ಸುವರ್ಣ, ಬೆಳ್ಳಿ, ಲೋಹ, ಮನೆ,

ಸಂಪೂಜಯೇದ್ಗೃಹವರ್ಯೈರ್ವರಶಾಂಭವಂ ಹಿ
ಯೋಽಸ್ಯಾರ್ಥಪಾರಗವರಂ ಸ ಶಿವಂ ಯಜೇಚ್ಚ ॥೬೫॥

ಪ್ರತ್ಯಂಶಂ ಪರಿಪೂಜ್ಯ ಶಾಂಭವವರಂ ಚಾಸ್ಯೈವ ಸಂವಾಚಕಂ
ಭಾವಾನ್ ಭೋಜ್ಯ ಸುಭೋಜ್ಯ ಷಡ್ರಸವರ್ಯೈಃ ಸ್ರಕ್ಚಂದನಾದ್ಯರ್ಹಣೈಃ ।
ತಾಂಬೂಲೈರ್ವರಗೋ ಸುದಕ್ಷಿಣಧನೈರ್ಯೋಽವಾ ಸಹಸ್ರಂ ಶತಂ ।
ಏಕಂ ದ್ವಾದಶ ವಾ ಸುಶಾಂಭವವರಾನ್ ವಿಶ್ವೇಶಸಂತುಷ್ಟಯೇ ॥೬೬॥

ತಸ್ಮಿನ್ ಪ್ರಸಾದಸುಮುಖಃ ಪ್ರಭವೇನ್ಮಹೇಶೋ
ವಿಘ್ನೇಶಷಣ್ಮುಖಸಮಂ ಪ್ರವಿಭಾವಯೇತ್ತಂ ।
ನಿತ್ಯರ್ಧಿಧಾನ್ಯಧನಭೂಮಿಗವಾಂಚ ಸಂಘ
ಮಾತಂಗಪುತ್ರಸುಕಲತ್ರಯುತಂ ಕರೋತಿ ॥೬೭॥

---

ಆನೆ, ಕುದುರೆ, ರಥ ಮುಂತಾದ ವಸ್ತುಗಳನ್ನು ದಾನವಾಗಿ ಕೊಡುತ್ತಾ ಅವನನ್ನು ತೃಪ್ತಿಪಡಿಸಿದರೆ, ಸಾಕ್ಷಾತ್ಪರಮೇಶ್ವರನನ್ನೇ ತೃಪ್ತಿಪಡಿಸಿದಂತಾಗುವುದು. ॥೬೫॥

ಈ ಶಿವರಹಸ್ಯದಲ್ಲಿ ಒಂದೊಂದು ಅಂಶವನ್ನೂ ಓದಿಮುಗಿಸಿದ ಮೇಲೆ ಇದನ್ನು ಓದಿದವನಿಗೂ ಮತ್ತು ಒಂದು, ಹನ್ನೆರಡು, ನೂರು, ಸಾವಿರ ಈ ಸಂಖ್ಯೆಯಲ್ಲಿ ಅತ್ಯುತ್ತಮರೆನಿಸಿದ ಶಾಂಭವರಿಗೂ, ಭಕ್ಷ್ಯಭೋಜ್ಯಭರಿತವಾದ ಭೋಜನಗಳನ್ನೇರ್ಪಡಿಸಿ, ಅವರಿಗೆ ಭೋಜನಾನಂತರ ತಾಂಬೂಲ, ದಕ್ಷಿಣ, ಗೋದಾನ ಮೊದಲಾದುವುಗಳನ್ನು ಕೊಟ್ಟು ಈಶ್ವರತೃಪ್ತ್ಯರ್ಥವಾಗಿ ಅವರನ್ನು ಸನ್ಮಾನಿಸಬೇಕು. ॥೬೬॥

ಆ ರೀತಿ ಶಿವರಹಸ್ಯವನ್ನು ಭಕ್ತಿಯಿಂದ ಓದಿದವಂಗೆ ಮಹಾದೇವನು ಪ್ರಸನ್ನನಾಗುವನು. ಮತ್ತು ಹಾಗೆ ಶಿವರಹಸ್ಯವನ್ನು ಓದಿದವನನ್ನು ವಿಘ್ನೇಶ್ವರ ಮತ್ತು ಷಣ್ಮುಖ ಇವರಿಗೆ ಸಮನನ್ನಾಗಿ ಭಾವಿಸಬೇಕು. ಹೀಗೆ ಅವನನ್ನು ಪೂಜಿಸಿ ಮಹೇಶ್ವರನನ್ನು ತೃಪ್ತಿಪಡಿಸುವುದಾದರೆ, ಆತನಿಗೆ ನಿತ್ಯವು ಧನಧಾನ್ಯಾದಿ ಸಕಲ ಸಂಪತ್ತನ್ನೂ, ಗೋ ಭೂಮಿಯೇ ಮೊದಲಾದುವುಗಳಿಂದ ಕೂಡಿದ ಐಶ್ವರ್ಯವನ್ನೂ ಕರುಣಿಸಿ ಪುತ್ರಪೌತ್ರಾದಿಗಳ ಸಮೇತ [illegible]ನು. ॥೬೭॥

ಪ್ರಾಜ್ಯಂ ರಾಜ್ಯಮುಮಾಪತಿಃ ಪ್ರದಿಶತಿ ಪ್ರಾಸಾದಮತ್ಯುಜ್ಜ್ವಲಂ
ಯೋಗಂ ಭೋಗಮಪಿ ಪ್ರಸಾದಸುಮುಖೋ ಭಕ್ತೇಷು ಮುಕ್ತಿಂ ಸದಾ ।
ಮುಕ್ತಿಂ ಭುಕ್ತಿಮಮುತ್ರಪುತ್ರರಹಿತಂ ಪಾರುಷ್ಯಹೀನಂ ವಚೋ
ಪ್ರಾಯುಷ್ಯಂ ಪ್ರದದಾತಿ ಪುಣ್ಯಮಪರಂ ಜೋಘುಷ್ಯತೇ ತದ್ಯಶಃ ॥೬೮॥

ಯೇ ವೈ ಲಿಖಂತಿ ಸುಮುಖಾಃ ಮುಖಜಾತಪುಣ್ಯಂ
ತೇ ವೈ ಲಭಂತಿ ಚ ಭವಂತಿ ಮಹೇಂದ್ರಲೇಖಾಃ ।
ತೇ ಸನ್ಮುಖಾ ಶಿವರಹಸ್ಯರಹಸ್ಯಸಾರಂ
ತೇ ಷಣ್ಮುಖೋಪಮಧಿಯೋ ನಹಿ ದುಃಖಭಾಜಃ ॥೬೯॥

ಯೋಽಸ್ಯಾಕ್ಷರಶ್ರವಣಕೃತ್ ಕ್ಷರಯತ್ಯಘೌಘಂ
ಸುಶ್ಲೋಕ ಏವ ಸ ಭವೇತ್ಕಿಲ ಶ್ಲೋಕಪಾಠೀ ।
ಅಧ್ಯಾಯಮಾತ್ರಪಠಣಾಚ್ಛ್ರವಣಾದಿಮುಕ್ತೋ
ಯೋಽಸ್ಯಾರ್ಥವಿತ್ಪ್ರತಿಪದಂ ಸ ಭವೇದ್ವಿಮುಕ್ತಃ ॥೭೦॥

---

ಮಹಾದೇವನು ಪ್ರಸನ್ನನಾಗಿ ತನ್ನ ಭಕ್ತರಿಗೆ ಇಷ್ಟಾರ್ಥಗಳನ್ನು ಸಲ್ಲಿಸುವುದಾದರೆ, ವಿಶೇಷವಾದ ರಾಜ್ಯಾಧಿಪತ್ಯವನ್ನೂ, ದಿವ್ಯವಾದ ಅರಮನೆಯನ್ನೂ, ಇತರಗಳಾದ ಭೋಗಭಾಗ್ಯಗಳನ್ನೂ, ಪುತ್ರಸಂಪತ್ತನ್ನೂ ಶಾಂತೋಕ್ತಿಯನ್ನೂ, ಸ್ಥಿರಯಶಸ್ಸನ್ನೂ, ಶಾಶ್ವತವಾಗುವ ಸುಕೃತವನ್ನೂ ಕರುಣಿಸಿ ರಕ್ಷಿಸುವನು. ॥೬೮॥

ಯಾರು ಪ್ರಸನ್ನಹೃದಯರಾಗಿ ಈ ಶಿವರಹಸ್ಯವನ್ನು ಬರೆಯುವರೋ ಅವರು ಯಾಗಾದಿಗಳನ್ನು ಆಚರಿಸಿದಷ್ಟು ಸುಕೃತವನ್ನು ಸಂಪಾದಿಸುವರು. ಅವರು ಗುಣಗಳಲ್ಲಿ ಇಂದ್ರಾದಿದೇವತೆಗಳಂತಾಗುವರು. ಶಿವರಹಸ್ಯದ ಸಾರವನ್ನು ಅರಿತು, ಷಣ್ಮುಖಾದಿಗಳಿಗೆ ಸಮಾನರೆನಿಸಿ ಎಂದೂ ದುಃಖವನ್ನೇ ಕಾಣದೆ ಆನಂದದಿಂದ ಜೀವಿಸುವರು. ಇದರಲ್ಲಿ ಸಂಶಯವಿಲ್ಲ. ॥೬೯॥

ಈ ಶಿವರಹಸ್ಯದಲ್ಲಿರುವ ಒಂದು ಅಕ್ಷರವನ್ನು ಯಾವನು ಭಕ್ತಿಯಿಂದ ಕೇಳುವನೋ ಅವನು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದುವನು. ಒಂದು ಶ್ಲೋಕವನ್ನು ಓದಿದವನು ಚಿರಯಶಸ್ವಿಯಾಗುವನು. ಒಂದು ಅಧ್ಯಾಯವನ್ನಾದರೂ ಪೂರ್ತಿ ಪಠನೆಮಾಡಿದವನು ಇಂದ್ರಿಯಗಳ ಹಿಡಿತದಿಂದ ಬಿಡುಗಡೆ

ಭಿನ್ನಾ ಯೇ ಹೃದಯೇನ ದುಃಖನಿಕರೈಃ ಸನ್ನಾ ಜರಾದ್ಯೈರ್ಗದೈ
ರನ್ನಾನಾಂ ಪತಿಮೀಶ್ವರಂ ಚ ಜಗತಾಂ ಶೀಘ್ರಂ ಪ್ರಸನ್ನಂ ಕುರು ।
ಕೈಲಾಸಾಚಲವಾಸನೋದಸುಮನಃಸಾರ್ಥಾಯ ಕಾಶೀಂ ವ್ರಜೇತ್
ಏವಂ ಭೂಸುರಸತ್ತಮೈಶ್ಚ ಗಣಪೈರ್ಯುಕ್ತೋ ವಿಮುಕ್ತಿಂ ವ್ರಜ ॥೭೦॥

ಯದುಲ್ಲಾಭಾನ್ನ ಪರಂ ಚ ಲಾಭಮಧಿಕಂ ಹೃಲ್ಲಾಸಮುಸ್ಮನ್ಮನೇ ।
ಉಲ್ಲಾಸಾಯ ಮನಃ ಸ್ವಸನ್ನಿಭಕಥಾಸಾಮ್ಯಂ ನ ಚೋಲ್ಲಸ್ಯತಿ ॥೭೧॥

ಸದಾ ಮುದಾಹೃದಾ ಭಿದಾ ಕದಾಚಿದೀಶ್ವರಾಜ್ಜಗ
ನ್ನಯಾಮಿ ಸಾಮಿಸೋಮಶೇಖರಂ ಭಜಾಮಿ ಹಾಮಿ ದುಃಖಜಂ ।
ಮುನೇ ಸುಪಾರದಾತಿಚಂಚಲಂ ಮನೋ ಹಿ ವಾರಿದಾದಪಿ
ಬಲಾನ್ನಿವಾರ್ಯ ಸರ್ವತಃ ಶಿವಂ ಭಜಾಮ್ಯಖಂಡಮೋತಂ ॥೭೩॥

---

ಹೊಂದುವನು. ಒಟ್ಟು ಈ ಶಿವರಹಸ್ಯವನ್ನು ಅರ್ಥವತ್ತಾಗಿ ಅರಿತವನು ಪೂರ್ಣ ಮುಕ್ತನೇ ಆಗುವನು. ॥೭೦॥

ಹೃದಯದಲ್ಲಿ ನಾನಾವಿಧವಾದ ದುಃಖಗಳೂ, ಬಗೆಬಗೆಯ ವ್ಯಾಧಿಗಳೂ ಸೇರಿ ಪೀಡಿಸುವುದಾದರೆ ಕೂಡಲೇ ನೀನು ಅನ್ನಪತಿಯಾದ ಪರಶಿವನನ್ನು ಭಕ್ತಿಯಿಂದ ಪೂಜಿಸು. ಆದರಿಂದ ಕೈಲಾಸವನ್ನು ಸುಲಭವಾಗಿ ದೊರಕಿಸುವ ಕಾಶೀವಾಸವನ್ನೂ ಪಡೆಯಬಹುದು. ಎಲೈ ಜೈಗೀಷವ್ಯನೇ, ನೀನೂ ಸಹ ಆ ರೀತಿ ಶಿವನನ್ನು ಭಜಿಸಿ, ಈ ಭೂಸುರರ ಗುಂಪಿನಿಂದ ಕೂಡಿ ಗಣನಾಥರೊಡನೆ ಕಾಶೀನಗರವನ್ನು ಈಗಲೇ ಸೇರುವವನಾಗು. ಮನುಷ್ಯರಿಗೆ ಮನಸ್ಸಿನ ಹರ್ಷಕ್ಕಿಂತ ಹೆಚ್ಚಾದ ಸಂತೋಷವಿಲ್ಲ. ಅಂತಹ ಮನಸ್ಸು ನಿಜವಾಗಿ ಆನಂದಗೊಳ್ಳಬೇಕಾದರೆ ಈ ಶಿವರಹಸ್ಯಕ್ಕಿಂತ ಬೇರೆಯದಾದ ಯಾವ ಕಾವ್ಯವನ್ನು ಓದಿದರೂ ಅದು ಲಭಿಸಲಾರದು. ಆದುದರಿಂದಲೇ ನಾನು ಯಾವಾಗಲೂ ಜಗದೀಶ್ವರನೂ, ಅರ್ಧಚಂದ್ರಧಾರಿಯೂ ಆದ ಪರಶಿವನನ್ನು ಬಿಟ್ಟು ಮತ್ತೆ ಯಾರನ್ನೂ ನೋಡುವುದೂ ಇಲ್ಲ. ಭಜಿಸುವುದೂ ಇಲ್ಲ. ಎಲೈ ಜೈಗೀಷವ್ಯನೇ, ನಾನು ಶಿವಭಕ್ತಿಯೊಂದರಿಂದಲೇ ಮಾನಸಿಕವಾದ ಸಕಲ ದುಃಖವನ್ನೂ ಕಳೆದುಕೊಳ್ಳುವೆನು. ಮನಸ್ಸು ಸ್ವಭಾವವಾಗಿ ಪಾದರಸದಷ್ಟು ಚಂಚಲವಾದದ್ದು. ಮೋಡಗಳಿಗಿಂತಲೂ ಕ್ಷಣಿಕವಾದುದು. ಆ ಮನಸ್ಸೋಗತವಾದ ಸಮಸ್ತ

ನಮಾಮಿ ಶಿವಪೂರ್ವಜೈರ್ದಿವಸಮೀಶತೋಽನ್ಯಂ ಸುರಂ
ನಯಾಮಿ ಶರಣಾಂತರಂ ಪ್ರವಿಜಹಾಮಿ ಪಾಪಂ ಸದಾ।
ಭಜಾಮಿ ಶಿವಮುನ್ನಹಂ ಪ್ರತಿಯಜಾಮಿ ಯಜ್ಞೈರಹಂ
ಪ್ರಯಾಮಿ ಮನಸಾ ಹರಂ ಪ್ರತಿಹರಾಮಿ ಚಿತ್ತಂ ಮುದಾ ॥೭೪॥

॥ ಶ್ರೀಸ್ಕಂದ ಉವಾಚ ॥

ಭವ ಭವದೀಯಕಥಾಸುಧಾಬ್ಧಿವೀಚೀಪರಿ
ಮೃಜ್ಯ ಜನುತಾಪಿ ಸೌಖ್ಯಭಾಕ್ಸ್ಯಾತ್।
ಇತಿ ಕಿಲ ಸುರತಾ ವಿಚಾರತಾಂತಾ
ವನಿತಾ ಭೋಗರತಾ ಪಿನಾಕಪೃಷ್ಠೇ ॥೭೫॥

ವಿರತಾ ನಿರತಾಧುನಾ ಕಥಾಯಾಂ
ಶರಣಾಯ ಪ್ರಭವೇತ ತೇ ಪದಾಬ್ಜೇ ॥೭೬॥

---

ಕಶ್ಮಲವನ್ನೂ ದೂರಮಾಡಿ ಅಖಂಡಾನಂದವನ್ನು ಪಡೆಯಲು ಸದಾ ಶಿವಧ್ಯಾನವನ್ನೇ ಮಾಡುತ್ತಿರುವೆನು. ॥೭೨-೭೩॥

ಶಿವಾನುಗ್ರಹದಿಂದ ಯಾರು ಲೋಕಾಧಿಪತಿಗಳಾಗಿರುವರೋ, ಅವರನ್ನೂ ಸಹ ಲಕ್ಷ್ಯಮಾಡದೆ ಶಿವನೊಬ್ಬನನ್ನೇ ನಮಸ್ಕರಿಸುವೆನು. ಶಿವನೊಬ್ಬನೇ ನನಗೆ ಶರಣನು. ಅವನನ್ನೇ ಸ್ಮರಿಸುತ್ತಾ ನಾನು ಸಕಲ ಪಾಪರಾಶಿಯನ್ನೂ ಕಳೆದುಕೊಳ್ಳುತ್ತೇನೆ. ಪಂಚಯಜ್ಞಗಳಿಂದಲೂ ನಾನು ಸರ್ವದಾ ಶಿವನನ್ನೇ ತೃಪ್ತಿಪಡಿಸುವುದಕ್ಕೆ ಪ್ರಯತ್ನಿಸುವೆನು. ಬುದ್ಧಿಪೂರ್ವಕವಾಗಿ ಮಹಾದೇವನನ್ನೇ ಮೊರೆಹೊಕ್ಕು ಇತರ ದೇವತೆಗಳ ಗೋಜಿಗೇ ನಾನು ಮನಸ್ಸಿಡುವವನಲ್ಲ. ॥೭೪॥

ಮಹೇಶ್ವರನೇ, ನಿನ್ನ ಕಥೆಯೆಂಬ ಅಮೃತಸಮುದ್ರದ ಅಲೆಯೊಂದರಲ್ಲಿ ಮುಳುಗಿದವರಿಗೂ ನಿತ್ಯಸುಖವಿರುತ್ತದೆ. ಹೀಗಿರುವಾಗ ನಾವು ಎಂತಹ ಸುಖಿಗಳು ಎಂದು ದೇವತೆಗಳು ನಿತ್ಯವೂ ಯೋಚನೆಮಾಡುತ್ತಾ ತಮ್ಮ ಸುಖವನ್ನು ಅಷ್ಟಾಗಿ ಪರಿಗಣಿಸುತ್ತಿಲ್ಲ. ಇರುವವರೆಗಾದರೂ ಹೆಚ್ಚು ಸುಖಪಡೋಣವೆಂದು ಭಾವಿಸಿ ತಮ್ಮ ತಮ್ಮ ದೇವತಾಸ್ತ್ರೀಯರೊಡನೆ ತಮ್ಮ ಮೇಲೆ ಯಾವಾಗಲೂ ಶಿವಧನುಸ್ಸಿನಂತೇ ಇರುವುದೆಂದು ಯೋಚಿಸುತ್ತಲೇ ಸುರತಸೌಖ್ಯವನ್ನು ಅನುಭವಿಸುತ್ತಿರುವರು. ಅಂದರೆ ದೇವತೆಗಳಿಗೂ ದುರ್ಲಭವಾದ ಸುಖಸಾಮ್ರಾಜ್ಯವು ಈ ಶಿವರಹಸ್ಯವನ್ನು

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ
ಅನುಕ್ರಮಣಿಕಾಧ್ಯಾಯ ಶಿವರಹಸ್ಯಶ್ರವಣಮನನಪಠನಲೇಖನ
ದಾನಾದಿಫಲಕಥನಂ ನಾಮ ಷಟ್ತ್ರಿಂಶೋಽಧ್ಯಾಯಃ

---

ಪಠಿಸಿದವರಿಗೆ ಸಿಗುವುದು. ಹೀಗಿರುವಾಗ ಇಂತಹ ಪವಿತ್ರವಾದ ಈಶ್ವರಕಥೆಯಲ್ಲಿ ಮನಸ್ಸಿಡದವರಿಗೆ ನಿಜವಾದ ರಕ್ಷಕರು ಯಾರುತಾನೇ ದೊರೆತಾರು ? ಮಹೇಶ್ವರನೇ, ಇದನ್ನರಿತೇ ನಾವೆಲ್ಲರೂ ಸರ್ವದಾ ನಿನ್ನ ಪಾದಕಮಲದ್ವಯುಗಳನ್ನೇ ಭಜಿಸುತ್ತಿರುವೆವು. ಪಾರ್ವತೀವಲ್ಲಭನೇ, ನಮ್ಮನ್ನು ಬಿಡದೆ ನೀನೊಬ್ಬನು ಸಲಹಿದರೆ ಸಾಕು. ಎಂದು ಕುಮಾರಸ್ವಾಮಿಯು ಶಿವನನ್ನು ಸ್ತುತಿಸುತ್ತಾ ಶಿವರಹಸ್ಯದ ವಿಶೇಷ ಮಹಿಮೆಯನ್ನು ಜೈಗೀಷವ್ಯಾದಿಗಳಿಗೆ ವಿವರಿಸಿ ಹೇಳಿದನು. ||೭೬||

ಇಲ್ಲಿಗೆ ಶ್ರೀಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಧ್ಯಾಯದಲ್ಲಿ ಶಿವಗೌರೀ
ಸಂವಾದರೂಪವಾದ ಅನುಕ್ರಮಣಿಕೆಯನ್ನೂ, ಶಿವರಹಸ್ಯಶ್ರವಣಾದಿಗಳ
ಫಲವನ್ನು ತಿಳಿಸುವ ಮೂವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಸಪ್ತತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಜೈಗೀಷವ್ಯಸ್ತದಾ ಶ್ರುತ್ವಾ ಷಣ್ಮುಖಾತ್ಸುರಸಾಯನಂ ।
ದ್ವಾದಶಾಂಶಸಮಾಯುಕ್ತಂ ಯದ್ಗೌರ್ಯೈ ಶಂಕರೋದಿತಂ ॥೧॥

ಶೈವಂ ಶಿವರಹಸ್ಯಾಖ್ಯಂ ಇತಿಹಾಸವರಂ ಮುದಾ ।
ಶಿವಾನಂದಕಥಾಸಾರಂ ತಾರಕಂ ಪಾಪವಾರಕಂ ॥೨॥

ಪುಣ್ಯಂ ಸ್ವಸ್ತ್ಯಯನಂ ಪುಂಸಾಂ ಶ್ರವಣಾತ್ಸರ್ವಕಾಮದಂ ।
ಭವ್ಯಂ ದಿವ್ಯಂ ಯಶಸ್ಯಂ ಚ ಪುತ್ರ್ಯಮಾರೋಗ್ಯವರ್ಧನಂ ॥೩॥

---

## ಮೂವತ್ತೇಳನೆಯ ಅಧ್ಯಾಯ

ಸೂತಮಹರ್ಷಿಗಳು ವಾಜಶ್ರವಸಾದಿ ಸಕಲ ಮಹರ್ಷಿಗಳನ್ನೂ ಕುರಿತು ಹೀಗೆ ನುಡಿದರು—ಋಷಿವರ್ಯರೇ, ಈ ರೀತಿ ಜೈಗೀಷವ್ಯಮಹಾಮುನಿಯು ಕುಮಾರ ಸ್ವಾಮಿಯಿಂದ ಕೇಳಲು ಅತ್ಯಂತ ಹಿತಕರವಾದ, ಪಾರ್ವತಿಗೆ ಸಾಕ್ಷಾತ್ಪರಶಿವನೇ ದ್ವಾದಶಾಂಶಸಮಾಯುಕ್ತವಾಗಿ ಹೇಳಿದ, ಶಿವರಹಸ್ಯವನ್ನು ಸಂತೋಷದಿಂದ ಕೇಳಿದನು. ಆ ಶಿವರಹಸ್ಯವು ಇತಿಹಾಸಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವೆನಿಸಿದುದು. ಶಿವಾನಂದವನ್ನು ಒದಗಿಸಿ ಸಮಸ್ತ ಪಾಪವನ್ನೂ ನಾಶಗೊಳಿಸಬಲ್ಲುದು. ॥೧-೨॥

ಅದು ಮಂಗಳಪ್ರದವೂ ಪುಣ್ಯಪ್ರದವೂ ಆಗಿರುವುದು. ಅದನ್ನು ಕೇಳುವವರ ಸಕಲೇಷ್ಟಾರ್ಥಗಳೂ ಸುಲಭವಾಗಿ ಸಿದ್ಧಿಸುವುವು. ಪುತ್ರ, ಯಶಸ್ಸು, ಆರೋಗ್ಯ,

ಸನಾತನಮಿದಂ ಧರ್ಮ್ಯಂ ಶಿವಧರ್ಮಕಥಾಶ್ರಯಂ ।
ಪಶುಪಾಶವಿಮುಕ್ತ್ಯರ್ಥಂ ಸರ್ವೇಷಾಂ ಶಂಕರೋದಿತಂ ॥೪॥

ಗೌರ್ಯೈ ಸ್ವಹೃದಯಂ ಗೋಪ್ಯಂ ನಾಭಕ್ತೇ ಪ್ರತಿಪಾದಯೇತ್ ।
ಆಯುರಾರೋಗ್ಯದಂ ಹ್ಯೇತದಿತಿಹಾಸಂ ಶಿವೋದಿತಂ ॥೫॥

ಭಸ್ಮಧಾರಿಭಿರೇವೈತಚ್ಛ್ರಾವ್ಯಂ ಭವ್ಯಂ ತು ಶಾಂಭವೈಃ ।
ತ್ರಿಪುಂಡ್ರಧಾರಿಭಿರ್ನಿತ್ಯಂ ತಥಾ ರುದ್ರಾಕ್ಷಧಾರಿಭಿಃ ॥೬॥

ಪಂಚಾಕ್ಷರಜಪಾಸಕ್ತೈಃ ರುದ್ರಾವೃತ್ತಿಪರೈರ್ದ್ವಿಜೈಃ ।
ಶಿವಲಿಂಗಾರ್ಚನಪರೈಃ ಶಾಂತೈರ್ಭಕ್ತೈಶ್ಶಿವಾರ್ಥಿಭಿಃ ॥೭॥

ಗೃಹಸ್ಥೈರ್ವರ್ಣಿಭಿಶ್ಚೈವ ವನಸ್ಥೈರ್ಯತಿಭಿಸ್ತಥಾ ।
ಭಸ್ಮರುದ್ರಾಕ್ಷದೃಗ್ಭಿಶ್ಚ ನಿಯತೈಶ್ಶಿವಯೋಗಿಭಿಃ ॥೮॥

---

ಧರ್ಮ ಇವುಗಳನ್ನು ಭಕ್ತಿಯಿಂದ ಕೇಳಿದವರಿಗೆ ಕೊಡುವಷ್ಟು ಮಹಿಮೆಯುಳ್ಳದ್ದು ಅತ್ಯಂತ ಪ್ರಾಚೀನವೂ, ಅಜ್ಞಾನಿಗಳ ಸಂಸಾರಬಂಧನವನ್ನು ಹೋಗಲಾಡಿಸಬಲ್ಲುದೂ ಆಗಿ ಶಿವನಿಂದಲೇ ಹೇಳಲ್ಪಟ್ಟಿರುವುದು. ||೩-೪||

ಪರಮೇಶ್ವರನು ತನ್ನ ರಹಸ್ಯವನ್ನು ಪಾರ್ವತಿಗೆ ಮಾತ್ರ ಹೇಳಿದ ಕಥಾ ಭಾಗವೇ ಇದು. ಆದ್ದರಿಂದಲೇ ಇದನ್ನು ಈಶ್ವರಭಕ್ತರಲ್ಲದವರಿಗೆ ಹೇಳಬಾರದು. ಇದನ್ನು ಹೇಳಿದವರಿಗೂ, ಕೇಳಿದವರಿಗೂ ಆಯುಸ್ಸು, ಆರೋಗ್ಯ ಇವುಗಳನ್ನು ಶಂಕರನು ಕೊಡುವನು. ಇದನ್ನು ಭಸ್ಮತ್ರಿಪುಂಡ್ರವನ್ನೂ ರುದ್ರಾಕ್ಷಮಾಲೆಯನ್ನೂ ಧರಿಸಿಕೊಂಡಿರುವ ಶಾಂಭವರೇ ಕೇಳಬೇಕು. ಉಳಿದವರು ಇದನ್ನು ಹೇಳಲು ಅಥವಾ ಓದಲು ಅನಧಿಕಾರಿಗಳೆನಿಸುವರು. ||೫-೬||

ಶಿವಪಂಚಾಕ್ಷರೀಮಂತ್ರಜಪದಲ್ಲಿಯೂ, ರುದ್ರಾಧ್ಯಾಯ ಪಾರಾಯಣದಲ್ಲಿಯೂ, ಶಿವಲಿಂಗಾರ್ಚನೆಯಲ್ಲಿಯೂ ನಿರತರಾಗಿ, ಶಾಂತರೂ ದಾಂತರೂ ಶಿವಭಕ್ತಿ ಪರಾಯಣರೂ ಈ ಶಿವರಹಸ್ಯವನ್ನು ಕೇಳಬಹುದು. ಗೃಹಸ್ಥರೂ, ಬ್ರಹ್ಮಚಾರಿಗಳೂ, ವಾನಪ್ರಸ್ಥರೂ, ಸಂನ್ಯಾಸಿಗಳೂ ಎಂಬ ಭೇದವಿಲ್ಲದೆ ಶಿವಭಕ್ತಿಶೀಲರಾದ ಯಾರುಬೇಕಾದರೂ ಮೇಲಿನ ನಿಯಮದಿಂದ ಕೂಡಿ ಶಿವರಹಸ್ಯಗ್ರಂಥವನ್ನು ಓದಬಹುದು. ||೭-೮||

ನಿವೃತ್ತತರ್ಷೈರ್ಯತಿಭಿಃ ಶಿವಸ್ಯೋತ್ಕರ್ಷವಾದಿಭಿಃ ।
ವೇದವೇದಾಂತಸಾರಜ್ಞೈಃ ಶಾಂಭವೈರ್ಭಸ್ಮಧಾರಿಭಿಃ ॥೯॥

ನಿಯಮಾಚ್ಛಾಂಭವವರಾಚ್ಛ್ರೋತವ್ಯಂ ಚಾನ್ಯವರ್ಣಕೈಃ ।
ಕ್ಷತ್ರಿಯೈರ್ವೈಶ್ಯ ಶೂದ್ರೈಶ್ಚ ಶ್ರಾವ್ಯಂ ಶೈವರಹಸ್ಯಕಂ ॥೧೦॥

ಭಸ್ಮಧೃಗ್ಭಿಸ್ತು ನಿಯತಂ ಶಿವಬುದ್ಧ್ಯಾ ಪ್ರಪೂಜನಂ ।
ಶಾಂಭವಂ ವಾಚಕಂ ಕುರ್ಯಾತ್ ಭಸ್ಮರುದ್ರಾಕ್ಷಧಾರಿಣಂ ॥೧೧॥

ನೋರ್ಧ್ವಪುಂಡ್ರಧರಂ ಕುರ್ಯಾತ್ ವಾಚಕಂ ಚಾಸ್ಯ ಸತ್ತಮಾಃ ।
ತಸ್ಮಾಚ್ಛೃತ್ವಾ ನರಾ ಯಾಂತಿ ನರಕಂ ಸ್ವಪಿತಾಮಹೈಃ ॥೧೨॥

ಶಿವಜ್ಞಾನಂ ನ ಜಾಯೇತ ತಸ್ಮಾಚ್ಛ್ರುತ್ವಾಪಿ ಶಾಂಕರಾಃ ।
ಕಿಮಂಧಮಂಧೋ ನಯತೇ ಕೂಪಮಧ್ಯಸ್ಥಿತೋಽನಘಾಃ ॥೧೩॥

ಯಥಾ ಶಿವಸಮೋ ದೇವೋ ನ ಭೂತೋ ನ ಭವಿಷ್ಯತಿ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೧೪॥

---

ಶಿವೋತ್ಕರ್ಷವನ್ನು ವಾದಿಸಿ ಅದನ್ನೇ ನಂಬಿರುವ ಶಿವಯೋಗಿಗಳೂ, ವೇದ ವೇದಾಂತ ಸಾರವನ್ನು ತಿಳಿದಿರುವ ಶಾಂಭವರೂ ಇದನ್ನು ಕೇಳಬೇಕು. ಕ್ಷತ್ರಿಯ, ವೈಶ್ಯ, ಶೂದ್ರರೆನಿಸಿದ ಇತರ ವರ್ಣದವರು ಶೈವತತ್ತ್ವವನ್ನು ಚೆನ್ನಾಗಿ ಅರಿತಿರುವ ಶಾಂಭವನಿಂದ ಇದನ್ನು ಓದಿಸಿ ತಾವು ಕೇಳಬೇಕು. ॥೯-೧೦॥

ಭಸ್ಮರುದ್ರಾಕ್ಷಧಾರಿಯಾಗಿ ಶಿವರಹಸ್ಯವನ್ನೋದಿದ ಶಾಂಭವನನ್ನು ಸಾಕ್ಷಾತ್ಪರಶಿವನೆಂದೇ ತಿಳಿದು ಪೂಜಿಸಬೇಕು. ಊರ್ಧ್ವಪುಂಡ್ರವನ್ನಿಡುವವನಿಂದ ಎಂದಿಗೂ ಶಿವರಹಸ್ಯವನ್ನು ಓದಿಸಬಾರದು. ಅವನಿಂದ ಓದಿಸಿ ಕೇಳುವವರು ತಮ್ಮ ಪಿತೃವರ್ಗದವರೊಡನೆ ನರಕಕ್ಕೆ ಹೋಗಿ ಬೀಳುವರು. ॥೧೧-೧೨॥

ಕುರುಡನು ತಾನು ಬಾವಿಯ ಮಧ್ಯದಲ್ಲಿ ಬಿದ್ದು, ಮೇಲಿದ್ದ ಬೇರೆ ಕುರುಡರನ್ನು ಸುರಕ್ಷಿತವಾಗಿ ಒಯ್ಯಲು ಸಾಧ್ಯವಾದೀತೆ? ಹಾಗೆ ಅಜ್ಞಾನಿಯಾಗಿರುವ ಊರ್ಧ್ವಪುಂಡ್ರಧಾರಿಯು ಇತರ ಅಜ್ಞಾನಿಗಳನ್ನು ಉದ್ಧರಿಸಲು ಶಕ್ತನಾಗಬಲ್ಲನೆ? ಊರ್ಧ್ವಪುಂಡ್ರಧಾರಿಯು ಇತರ ಅಜ್ಞಾನಿಗಳನ್ನು ಉದ್ಧರಿಸಲು ಶಕ್ತನಾಗಬಲ್ಲನೆ? ಲೋಕದಲ್ಲಿ ಶಿವನಿಗೆ ಸಮನಾದ ಬೇರೊಬ್ಬ ದೇವತೆಯು ಹೇಗೆ ಇಲ್ಲವೋ

ವಿಭೂಷಣಂ ಭಸ್ಮನೋಽನ್ಯನ್ನಾಸ್ತಿ ನ ಶ್ರೂಯತೇ ಶ್ರುತೌ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೧೫॥

ಯಥಾ ತ್ರಿಪುಂಡ್ರಾತ್ಪರಮಂ ಪಾವನಂ ನೈವ ವಿದ್ಯತೇ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೧೬॥

ಯಥಾ ಪಂಚಾಕ್ಷರಜಪಾನ್ನಾಸ್ತಿ ಪಾತಕಶೋಧನಂ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೧೭॥

ಯಥಾ ರುದ್ರಜಪಾದನ್ಯನ್ನಾಸ್ತಿ ಪ್ರೀತಿಕರಂ ವಿಭೋಃ ।
ತಥಾ ಶಿವರಹಸ್ಯಾಸ್ಯ ತುಲ್ಯಮನ್ಯನ್ನವಿದ್ಯತೇ ॥೧೮॥

ಯಥಾ ಲಿಂಗಾರ್ಚನಾಚ್ಛ್ರೇಷ್ಠಂ ನಾಸ್ತಿ ವೇದಾಂತಸಂಸ್ತುತಂ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೧೯॥

ಯಥೋತ್ತಮಂ ಶಿವಕ್ಷೇತ್ರಮವಿಮುಕ್ತಂ ಶ್ರುತೀರಿತಂ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೨೦॥

ಪ್ರದೋಷಕಾಲಕಾಲೇಷು ಯಥಾ ಶರ್ವಾರ್ಚನಂ ವರಂ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೨೧॥

---

ಹಿಂದಿರಲಿಲ್ಲವೊ, ಮುಂದೆ ಹುಟ್ಟುವುದಿಲ್ಲವೋ ಅದರಂತೆ ಈ ಶಿವರಹಸ್ಯಕ್ಕೆ ಸದೃಶವಾದ ಬೇರೊಂದು ಗ್ರಂಥವು ಹಿಂದೆ ಇಲ್ಲ. ಮುಂದಿರುವುದೂ ಇಲ್ಲ. ॥೧೩-೧೪॥

ಭಸ್ಮಕ್ಕಿಂತ ಬೇರೆಯಾದ ಅಲಂಕಾರವಸ್ತುವಿಲ್ಲ. ಭಸ್ಮತ್ರಿಪುಂಡ್ರಧಾರಣೆಗಿಂತ ಪವಿತ್ರವಾದ ಕಾರ್ಯವಿಲ್ಲ. ಪಂಚಾಕ್ಷರೀ ಮಂತ್ರಕ್ಕಿಂತ ಉತ್ತಮವಾದ ಗ್ರಂಥವೇ ಇರುವುದಿಲ್ಲ. ॥೧೫-೧೬-೧೭॥

ಶ್ರೀರುದ್ರಪಾರಾಯಣಕ್ಕಿಂತ ಶಿವನಿಗೆ ಹೆಚ್ಚಿನ ಪ್ರೀತಿಕರವಾದ ಕಾರ್ಯವಿಲ್ಲ. ಶಿವಾರ್ಚನೆಗಿಂತ ಉತ್ತಮವಾದ ಮತ್ತೊಂದು ಕರ್ಮವು ಉಪನಿಷತ್ತಿನಲ್ಲಿ ಉಕ್ತವಾಗಿಲ್ಲ. ಅವಿಮುಕ್ತಕ್ಷೇತ್ರವೆನಿಸಿದ ಕಾಶಿಗಿಂತ ಶ್ರೇಷ್ಠವಾದ ಮತ್ತೊಂದು ಕ್ಷೇತ್ರವು ಶ್ರುತ್ಯುಕ್ತವಾಗಿಲ್ಲ. ಅದರಂತೆ ಶಿವರಹಸ್ಯಕ್ಕಿಂತ ಪವಿತ್ರವಾದ ಬೇರೊಂದು ಗ್ರಂಥವೇ ಲೋಕದಲ್ಲಿ ಕಂಡುಬರುವುದಿಲ್ಲ. ॥೧೮-೧೯-೨೦॥

ಪ್ರದೋಷಕಾಲಗಳಲ್ಲಿ ಹೇಗೆ ಶಿವಾರ್ಚನೆ ಶ್ರೇಷ್ಠವೆನಿಸಿದೆಯೋ, ಪ್ರತ

ವ್ರತಾನಾಂ ತು ಯಥಾಶ್ರೇಷ್ಠಂ ಶಿವರಾತ್ರಿಶ್ಶಿವಾರ್ಚನೇ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೨೨॥

ವಾರವ್ರತೇ ಯಥಾಶ್ರೇಷ್ಠಂ ಸೋಮವಾರಾರ್ಚನಂ ದ್ವಿಜಾಃ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೨೩॥

ತಿಥ್ಯರ್ಚನೇ ಯಥಾಶ್ರೇಷ್ಠಾ ಶಂಭೋಃ ಕಾಲಾಷ್ಟಮೀ ವರಾ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೨೪॥

ಪರ್ವಾರ್ಚನೇ ಯಥಾ ಶ್ರೇಷ್ಠಾ ಶಂಭೋರ್ನಿತ್ಯಂ ಚತುರ್ದಶೀ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೨೫॥

ತ್ರೀನೇತ್ರಪ್ರೀತಿಕೃನ್ನಿತ್ಯಂ ಯಥಾಹ್ಯಾದ್ರಾರ್ಕ್ಷಮೀಶ್ವರೇ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೨೬॥

ಪತ್ರೇಷು ಚ ಯಥಾಮುಖ್ಯಂ ಬಿಲ್ವಪತ್ರಾಂ ಶಿವಾರ್ಚನೇ ।
ತಥಾ ಶಿವರಹಸ್ಯಸ್ಯ ತುಲ್ಯಮನ್ಯನ್ನವಿದ್ಯತೇ ॥೨೭॥

ಶ್ರುತ್ವೈತದ್ಭಕ್ತಿಮಾಪ್ನೋತಿ ಶಂಭೋರ್ನಿತ್ಯಂ ವಿಮುಕ್ತಯೇ ।
ತಥಾ ಭಸ್ಮನಿ ರುದ್ರಾಕ್ಷೇ ಶಿವಲಿಂಗಾರ್ಚನೇ ದ್ವಿಜಾಃ ॥೨೮॥

---

ಗಳಲ್ಲಿ ಶಿವರಾತ್ರಿವ್ರತವೇ ಹೇಗೆ ಮುಖ್ಯವೆನಿಸಿದೆಯೋ, ವಾರವ್ರತಗಳಲ್ಲಿ ಸೋಮವಾರ ವ್ರತಕ್ಕೆ ಎಂತಹ ಪ್ರಾಶಸ್ತ್ಯವಿರುವುದೋ ಅಂತಹ ಶ್ರೇಷ್ಠತೆಯೇ ಇತರ ಗ್ರಂಥಗಳಲ್ಲಿ ಈ ಶಿವರಹಸ್ಯಕ್ಕಿರುವುದು. ॥೨೧-೨೨-೨೩॥

ತಿಥಿಪ್ರಯುಕ್ತವಾದ ವ್ರತಗಳಲ್ಲಿ ಈಶ್ವರನ ಕೃಷ್ಣಾಷ್ಟಮಿ ವ್ರತವೇ ಶ್ರೇಷ್ಠವಾದುದು. ಪರ್ವಕಾಲದ ಅರ್ಚನೆಗಳಲ್ಲಿ ಶಿವಚತುರ್ದಶಿಯ ಪೂಜೆಯೇ ಅತ್ಯುತ್ತಮವಾದುದು. ನಕ್ಷತ್ರನಿಮಿತ್ತಕವಾದ ಆರಾಧನೆಗಳಲ್ಲಿ ಆರಿದ್ರಾನಕ್ಷತ್ರದ ದಿನ ಮಾಡುವ ಶಿವಾರ್ಚನೆಯೇ ಶಿವಪ್ರೀತಿಕರವಾದದುದು. ಹಾಗೆಯೇ ಇತರ ಎಲ್ಲ ಗ್ರಂಥಗಳಿಗಿಂತ ಈ ಶಿವರಹಸ್ಯವೇ ಶಂಕರನಿಗೆ ಪ್ರೀತಿಕರವಾದುದು. ॥೨೪-೨೫-೨೬॥

ಶಿವಾರ್ಚನೆಯಲ್ಲಿ ಎಲ್ಲ ಪತ್ರೆಗಳಿಗಿಂತ ಬಿಲ್ವಪತ್ರೆಯೇ ಶ್ರೇಷ್ಠವಾಗಿರುವಂತೆ ಎಲ್ಲ ಗ್ರಂಥಗಳಲ್ಲಿಯೂ ಶಿವರಹಸ್ಯವೇ ಅತ್ಯುತ್ತಮವಾದುದು. ಈ ಗ್ರಂಥವನ್ನು

ಪಂಚಾಕ್ಷರೇ ರುದ್ರಜಪೇ ಸೋಮವಾರಾರ್ಚನೇ ತಥಾ ।
ಕಾಲಾಷ್ಟಮ್ಯಾಂ ಚತುರ್ದಶ್ಯಾಂ ಬಿಲ್ವಪತ್ರಾರ್ಚನೇ ತಥಾ ॥೨೯॥

ಶಿವಕ್ಷೇತ್ರನಿವಾಸೇಷು ಅವಿಮುಕ್ತೇ ವಿಶೇಷತಃ ।
ಶಿವನಾಮ್ನಿ ಸದಾ ಭೂಯಾದ್ಭಕ್ತಿರಸ್ಯತ್ರಪಾದ್ದ್ವಿಜಾಃ ॥೩೦॥

ತಯಾ ಭಕ್ತ್ಯಾ ವಿಮುಚ್ಯಂತೇ ಸಸುರಾಸುರಮಾನವಾಃ ।
ಭಕ್ತಿಪ್ರದಮಿದಂ ಪುಣ್ಯಮಿತಿಹಾಸೋತ್ತಮಂ ವರಂ ॥೩೧॥

ದಿವ್ಯಂ ಶಿವರಹಸ್ಯಾಖ್ಯಂ ದ್ವಾದಶಾಂಶವಿಮಂಡಿತಂ ।
ಯಸ್ಯ ತುಲ್ಯಂ ನ ಹಿ ಶ್ರೇಷ್ಠಂ ಪುರಾಣಂ ಭಾರತಂ ತಥಾ ॥೩೨॥

ಕಾವ್ಯಂ ರಾಮಾಯಣಂ ವಾಪಿ ಸಂಸಾರವರದುಃಖಹಂ ।
ನ ತಾನಿ ಭಕ್ತಿದಾನ್ಯಾನಿ ಶಂಭೋಶ್ಯಾಂಭವಸತ್ತಮಾಃ ॥೩೩॥

ಭಕ್ತಿದಂ ಕೇವಲಂ ಹ್ಯೇತಚ್ಛಂಭುನೋಕ್ತಮಿದಂ ಶುಭಂ ।
ಪುಣ್ಯಂ ಶಿವರಹಸ್ಯಾಖ್ಯಂ ಭಕ್ತಿಸಾರಮಹೋದಯಂ ॥೩೪॥

---

ಆದ್ಯಂತವಾಗಿ ಭಕ್ತಿಯಿಂದ ಕೇಳುವವರಿಗೆ, ಭಸ್ಮ, ರುದ್ರಾಕ್ಷಿ, ಶಿವಪಂಚಾಕ್ಷರೀ ಮಂತ್ರ, ಶ್ರೀರುದ್ರಮಂತ್ರ, ಸೋಮವಾರವ್ರತ, ಕಾಲಾಷ್ಟಮೀವ್ರತ, ಚತುರ್ದಶೀ ವ್ರತ, ಬಿಲ್ವಪತ್ರಾರ್ಚನೆ, ಶಿವಕ್ಷೇತ್ರಗಳು, ಕಾಶೀಕ್ಷೇತ್ರ, ಶಿವನಾಮಗಳು ಇವುಗಳಲ್ಲಿ ಅತಿಶಯವಾದ ಭಕ್ತಿಭಾವವುದಯಿಸುವುದು. ॥೨೮-೨೯-೩೦॥

ಹೀಗೆ ಉಂಟಾದ ಶೈವಭಕ್ತಿಯಿಂದ, ದೇವತೆಗಳೂ, ಮಾನವರೂ, ರಾಕ್ಷಸರೂ ಮುಕ್ತರಾಗುವರು. ವಿಶೇಷಪುಣ್ಯಪ್ರದವಾದ ಮತ್ತು ಉತ್ತಮೋತ್ತಮವಾದ ಗ್ರಂಥವೆಂದರೆ ಈ ಶಿವರಹಸ್ಯವೇ. ಇದು ದ್ವಾದಶಾಂಶಗಳಿಂದ ಕೂಡಿದ್ದಾಗಿ ಎಲ್ಲಾ ಪುರಾಣಗಳಿಗಿಂತಲೂ ಮಹಾಭಾರತಕ್ಕಿಂತಲೂ ಪಾವಿತ್ರ್ಯದಲ್ಲಿ ಅತ್ಯಂತ ಶ್ರೇಷ್ಠವೆನಿಸಿಕೊಂಡಿದೆ. ಎಲ್ಲಕ್ಕಿಂತಲೂ ಇದು ಪರಮ ಪವಿತ್ರವಾದುದು. ॥೩೧-೩೨॥

ರಾಮಾಯಣಾದಿಗಳ ಪಠನೆಯಿಂದಲೂ ಸಾಂಸಾರಿಕವಾದ ಹಲವಾರು ದುಃಖಗಳು ನಾಶವಾಗುವುವು. ಆದರೆ ರಾಮಾಯಣ ಮಹಾಭಾರತಗಳು ಈಶ್ವರನಲ್ಲಿ ಭಕ್ತಿಯನ್ನು ಹುಟ್ಟಿಸಲಾರವು. ಶಿವಪ್ರೋಕ್ತವೂ, ಭಕ್ತಿಸಾರವೂ ಆದ ಈ ಶಿವರಹಸ್ಯವೊಂದೇ ಭಕ್ತಿಮುಕ್ತಿಪ್ರದವಾದುದು. ಇದರಲ್ಲಿ ಸಂಶಯವಿಲ್ಲ ॥೩೩-೩೪॥

ಭಕ್ತ್ಯೈರೇವ ಸದಾ ಶ್ರಾವ್ಯಂ ಅಭಕ್ತ್ಯೈರ್ನ ಕದಾಚನ ।
ಸತ್ಯಂ ಸತ್ಯಮಿದಂ ಸತ್ಯಂ ಏವಂ ಗೌರ್ಯ್ಯೈವದತ್ತ್ರದಾ ॥೩೫॥

ಸಾವಧಾನೇನ ಯುಷ್ಮಾಸು ಸುಭಕ್ತೇಷು ಪ್ರತಿಪಾದಿತಂ ।
ಯಥಾ ಮತ್ತೇಭಸದೃಶೋ ಮಲಾಶೀ ಸಕಿಟೇರ್ಭವೇತ್ ॥೩೬॥

ತಥಾ ಶಿವರಹಸ್ಯಸ್ಯ ಸಾಮ್ಯಮನ್ಯನ್ನವಿದ್ಯತೇ ॥೩೭॥

ಯಥಾ ಮೃಗೇಂದ್ರಸಂಕಾಶೋ ಜಂಬುಕಃ ಕಿಂ ಭವಿಷ್ಯತಿ ।
ತಥಾ ಶಿವರಹಸ್ಯಸ್ಯ ಸಾಮ್ಯಮನ್ಯನ್ನವಿದ್ಯತೇ ॥೩೮॥

ಪದ್ಮರಾಗಸಮಂ ರತ್ನಂ ಕಾಚಖಂಡೋ ಭವೇತ್ಕಿಮು ।
ತಥಾ ಶಿವರಹಸ್ಯಸ್ಯ ಸಾಮ್ಯಮನ್ಯನ್ನವಿದ್ಯತೇ ॥೩೯॥

ಯಥಾ ಚಂದನಸಂಕಾಶಃ ಪಾರಿಭದ್ರೋ ಭವಿಷ್ಯತಿ ।
ತಥಾ ಶಿವರಹಸ್ಯಸ್ಯ ಸಾಮ್ಯಮನ್ಯನ್ನವಿದ್ಯತೇ ॥೪೦॥

ಉದ್ಯದ್ದ್ಯುಮಣಿಸಂಕಾಶಃ ಖದ್ಯೋತೋದ್ಯೋತತೇ ಕಿಮು ।
ತಥಾ ಶಿವರಹಸ್ಯಸ್ಯ ಸಾಮ್ಯಮನ್ಯನ್ನವಿದ್ಯತೇ ॥೪೧॥

---

ಯಾರು ಈಶ್ವರನಲ್ಲಿ ಅನನ್ಯಸಾಧಾರಣವಾದ ಭಕ್ತಿಯುಳ್ಳವರೋ, ಅವರೇ ಇದನ್ನು ಕೇಳಬೇಕು. ಈಶ್ವರ ಭಕ್ತರಲ್ಲದವರಿಗೆ ಇದನ್ನು ಕೇಳಲು ಅಧಿಕಾರವಿಲ್ಲ. ಇದು ನಿಜ. ಶಪಥಪೂರ್ವಕವಾಗಿ ಹೇಳುತ್ತೇನೆ. ಹೀಗೆಯೇ ಪರಶಿವನೂ ಪಾರ್ವತಿಗೆ ತಿಳಿಯಹೇಳಿರುವನು. ಅದರಿಂದಲೇ ನಾನು ಅತ್ಯಂತ ಶೈವಶ್ರೇಷ್ಠರಾದ ನಿಮಗೆ ಮಾತ್ರ ಇದನ್ನು ಹೇಳಿರುವೆನು. ಮದ್ದಾನೆಗೆ ಮಲವನ್ನು ತಿನ್ನುವ ಹಂದಿಯು ಹೇಗೆ ಸಮವೆನಿಸಲಾರದೋ ಹಾಗೆ ಶಿವರಹಸ್ಯಕ್ಕೆ ಇತರ ಗ್ರಂಥಗಳು ಎಂದೂ ಸರಿಸಮವಾಗಲಾರವು. ॥೩೫-೩೬॥

ಆನೆಗೆ ನರಿಯು ಸಮವೆ? ಪದ್ಮರಾಗಮಣಿಯಂತೆ ಗಾಜು ಎಂದಾದರೂ ಅಮೂಲ್ಯವಸ್ತುವಾಗುವುದೆ? ಗಂಧದಮರದಂತೆ ಪಾರಿಭದ್ರ (ದೇವದಾರುವೃಕ್ಷ) ಮರವು ಸುವಾಸನೆ ಕೊಟ್ಟೀತೆ? ಅದರಂತೆ ಶಿವರಹಸ್ಯದಷ್ಟು ಪವಿತ್ರವಾದ ಗ್ರಂಥ ಮತ್ತೊಂದಿರುವುದೆ? ॥೩೯-೪೦॥

ಕತ್ತಲೆಯಲ್ಲಿ ಮಿಂಚುಹುಳುವು ಎಂದಾದರೂ ಸೂರ್ಯನಂತೆ ಪ್ರಕಾಶಿಸೀತೆ? ಕತ್ತಿಯು

ಕಿಂ ರಾಸಭೋಽಶ್ವಸಂಕಾಶೋ ಭವೇದ್ವೇಷಪ್ರದೋಷಭಾಕ್ ।
ತಥಾ ಶಿವರಹಸ್ಯಸ್ಯ ಸಾಮ್ಯಮನ್ಯನ್ನ ವಿದ್ಯತೇ ॥೪೨॥

ಕನಕಾಚಲಸಂಕಾಶಃ ಪಾಂಸುಪಿಂಡೋ ಭವಿಷ್ಯತಿ ।
ತಥಾ ಶಿವರಹಸ್ಯಸ್ಯ ಸಾಮ್ಯಮನ್ಯನ್ನ ವಿದ್ಯತೇ ॥೪೩॥

ಕೋಕಿಲಾ ಕಾಕಲೀಲಾಪಂ ಕುರ್ಯಾದ್ಧ್ವಾಂಕ್ಷೋತಿರೂಕ್ಷವಾಕ್ ।
ತಥಾ ಶಿವರಹಸ್ಯಸ್ಯ ಸಾಮ್ಯಮನ್ಯನ್ನ ವಿದ್ಯತೇ ॥೪೪॥

ಶ್ರುತ್ವಾಯಂ ಷಣ್ಮುಖಾದ್ವಿಪ್ರೋ ಜೈಗೀಷವ್ಯಸ್ಸುರೈರ್ಗಣೈಃ ।
ನತ್ವಾ ತುಷ್ಟಾವ ತಂ ಸ್ಕಂದಂ ಅಷ್ಟಮೂರ್ತಿತನೂಭವಂ ॥೪೫॥

ವಿನಯಾವನತೋ ಭೂತ್ವಾ ಬ್ರಹ್ಮವಿಷ್ಣ್ವಾದಿಭಿರ್ಗಣೈಃ ।
ಜೈಗೀಷವ್ಯೋ ಮಹಾಯೋಗೀ ಹವ್ಯವಾಹಪ್ರಭೋ ಮುನಿಃ ॥೪೬॥

॥ ಜೈಗೀಷವ್ಯ ಉವಾಚ ॥

ಸಿಂದೂರಾರುಣ ಸಿಂಧುರೇಂದ್ರವದನಂ ಸಾಂದ್ರಾಂಬುದಾಸೋತ್ಕಟಂ ।
ಜಾತಾನಂದ ಸುಬೃಂಹಿತಾಂತರವಲದ್ದಂತಸ್ಥಶುಂಡಂ ಮುಹಃ ।

---

ಎಂದೂ ಯಾವವೇಷದಿಂದಲೂ ಕುದುರೆಯೆನಿಸಲಾರದು. ಹಾಗೆಯೇ ಮೇರು ಪರ್ವತವು ಮಣ್ಣಿನಮುದ್ದೆ ಯಾವಾಗಲೂ ಆಗಲಾರದು. ಕೋಗಿಲೆಯ ಇಂಪಾದ ನಾದವು ಕಾಗೆಯ ಕಟುಶಬ್ದದಂತೆ ಎಂದಾದರೂ ಕರ್ಣಕಠೋರವಾದೀತೆ? ಅದರಂತೆ ಶಿವರಹಸ್ಯವು ಇತರ ಗ್ರಂಥಗಳಾವುದಕ್ಕೂ ಸಮವೆನಿಸಲಾರದು. ॥೪೧-೪೨-೪೩-೪೪॥

ಹೀಗೆ ಹೇಳಿದ ಶಿವರಹಸ್ಯಮಹಿಮೆಯನ್ನು ಜೈಗೀಷವ್ಯ ಮಹರ್ಷಿಯು ಕುಮಾರಸ್ವಾಮಿಯ ಮುಖಕಮಲದಿಂದ ಕೇಳಿ, ಆನಂದಪರವಶನಾಗಿ, ಕುಮಾರಸ್ವಾಮಿಯನ್ನು ಸ್ತುತಿಸಲಾರಂಭಿಸಿದನು. ಆ ಸ್ತೋತ್ರದಲ್ಲಿ ಭಾಗವಹಿಸಿ. ಅಗ್ನಿಯಂತೆ ತೇಜಸ್ಸಿನಿಂದ ಪ್ರಕಾಶಿಸುವ ಜೈಗೀಷವ್ಯಮಹರ್ಷಿಯೊಡನೆ ಬ್ರಹ್ಮವಿಷ್ಣ್ವಾದಿ ಸಕಲ ದೇವತೆಗಳೂ ಕುಮಾರಸ್ವಾಮಿಯನ್ನು ಸ್ತುತಿಸಲಾರಂಭಿಸಿದರು. ॥೪೬॥

ಮಹಾಗಣಪತಿಯೇ, ನೀನು ಚಂದ್ರದ ವರ್ಣದಂತೆ ರಂಜಿಸುವ ಆನೆಯ ಮುಖವುಳ್ಳವನು. ನಿನ್ನ [illegible] ಪ್ರದೇಶದಿಂದ ಸದಾ ಮದೋದಕವು ಸುರಿಯುತ್ತಿರು

ಮೌಲ್ಯಾಂದೋಲನ ಕರ್ಣತಾಲಸುಶಿವಧ್ಯಾನೋನ್ಮಿಷೋನ್ಮೇಷಣ್ಯೈ ।
ರಂತರ್ಬಾಹ್ಯಗತಂ ಶಿವಂ ಸ್ವಕಹೃದಾ ಸಕ್ತ್ಯಂತಮೀಕ್ಷೇ ಸದಾ ॥೪೭॥

ಶಿಖಿವಾಹ ಶಿಖಾಸ್ಮಲೇಖ ಸುಮುಖಃ ಶ್ರೀಷಣ್ಮುಖಸ್ತ್ವಂಸಭಾ ।
ಭ್ರಾತಾ ಬಂಧುವರಸ್ತ್ವಯಾದ್ಯ ಪಿತೃನಾಂಭಂಭುಃ ಪಿತಾ ಚಾಸಿ ಮೇ ।
ಜ್ಞಾನಾಂಭೋಧಿ ಸುಧಾಕರಸ್ತ್ವಮಧುನಾ ವಿಜ್ಞಾನದಸ್ತ್ವಂಗುರುಃ ।
ತ್ವತ್ಪಾದಾರ್ಕಕರೋರುದಾರಿತಹೃದಾಶಾಶಾಂಧಕಾರಃ ಪರಂ ॥೪೮॥

ಭಾರಂ ಮೇ ಭವಸಾಗರಂ ಸುಖಕರಂ ಕರ್ತುಂ ಪುನರ್ಗೋಷ್ಪದಂ ॥೪೯॥

ಸಂಕ್ರಂದನಾನಂದನ ಚಂದನಾರ್ದ್ರ
ಗಾತ್ರತ್ರಿನೇತ್ರಪ್ರವರಪುತ್ರ ನಮೋ ನಮಸ್ತೇ ।

---

ವುದು. ಕರಿಗರ್ಜನೆಯಿಂದ ಸರ್ವರಿಗೂ ಆನಂದವನ್ನುಂಟುಮಾಡುವವನು. ನಿನ್ನ ದಂತಗಳ ಮಧ್ಯೆ ಸೊಂಡಿಲು ಅಲುಗಾಡುತ್ತಿರುವುದು. ನೀನು ತೇಜೋರೂಪಿಯು. ನಿನ್ನ ವಿಶಾಲವಾದ ಕಿವಿಗಳು ತಲೆಯ ಪರ್ಯಂತವಾಗಿ ಚಲಿಸುತ್ತಾ ಸುಂದರವಾಗಿ ಕಾಣುತ್ತಿರುವುವು. ಹೃದಯದಲ್ಲಿ ಸದಾ ಶಿವಧ್ಯಾನಮಾಡುತ್ತಿರುವ ನಿನ್ನ ಕಣ್ಣುಗಳು ಮುಚ್ಚಿ ತೆಗೆದು ಮತ್ತೆ ಮುಚ್ಚುತ್ತಲಿರುವುವು. ಹೀಗೆ ಸರ್ವದಾ ಸದಾ ಶಿವಧ್ಯಾನಾಸಕ್ತನಾಗಿರುವ ನಿನ್ನನ್ನು ನಾನು ಸರ್ವದಾ ಧ್ಯಾನಮಾಡುವೆನು. ॥೪೭॥

ನವಿಲನ್ನೇ ವಾಹನವನ್ನಾಗಿ ಉಳ್ಳ ಕುಮಾರಸ್ವಾಮಿಯೇ, ನೀನು ಸರ್ವರಿಗೂ ಸುಮುಖನಾಗಿ ಕಾಣುವವನು. ಆರು ಮುಖಗಳಿಂದ ಕೂಡಿದವನು, ನನಗೆ ನೀನು ಸ್ನೇಹಿತನು, ಅಣ್ಣನು, ಬಂಧುವು, ನಿನ್ನಿಂದಲೇ ಪರಶಿವನು ಸುಪುತ್ರನುಳ್ಳವನು ಎನಿಸಿರುವನು. ನಿನ್ನ ದಯೆಯಿಂದ ನನಗೆ ಸುಜ್ಞಾನಸುಧಾವಾರಿಧಿಯು ದೊರೆಯಿತು. ಭಕ್ತರಿಗೆ ವಿಜ್ಞಾನಪ್ರದನೆನಿಸಿರುವವನು ನೀನು. ನೀನೇ ನಮಗೆ ಗುರುವು. ನಿನ್ನ ಪಾದಗಳೆಂಬ ಸೂರ್ಯನ ಪ್ರಭೆಯಿಂದ ನನ್ನ ಹೃದಯಾಂಧಕಾರವೆಲ್ಲಾ ನಿರ್ಮೂಲವಾಯಿತು. ನಿನ್ನ ಕೃಪಾಕಟಾಕ್ಷಬಲದಿಂದ ಈಗ ನಾನು ಸಂಸಾರವೆಂಬ ವಿಶಾಲವಾದ ಸಮುದ್ರವನ್ನು ಹಸುವಿನ ಹೆಜ್ಜೆಯಗಲದಷ್ಟನ್ನಾಗಿ ತಿಳಿದು ಸುಖವಾಗಿ ದಾಟಬಿಡುವೆನು. ಇಂತಹ ವಿಜ್ಞಾನಿಯಾದ ನಿನಗೆ ನಮಸ್ಕಾರ. ॥೪೮-೪೯॥

ಇಂದ್ರನಿಗೂ ಆನಂದವನ್ನುಂಟುಮಾಡುವಂತಹ ಚಂದನ ವಿಶೇಷದಿಂದ ಲಿಪ್ತವಾದ ಗಾತ್ರವುಳ್ಳವನೇ, ನೀನು ತ್ರಿಣೇತ್ರನೆನಿಸಿದ ಪರಮೇಶ್ವರನ ಪ್ರಿಯ

ಕ್ರೌಂಚಾದ್ರಿಸೂದನ ಸನಾತನವಂದ್ಯಪಾದ
ವೃಂದಾರವಂದ್ಯ ಪರಿಪಾಹಿ ಮುನೀನ್ ನಮಸ್ತೇ ||೫೦||

ಅಪಿತಾಮಹದೇವ ಶಕ್ರಬಂಧೋ
ಗಿರಿಮಾತಾಮಹದಾರಿ ದೈತ್ಯಬಂಧೋ ।
ಪ್ರಣವಾರ್ಥಪದಾದಿಬೋಧಹೇತುಂ
ವಿಧಯೇ ತ್ವಂ ಪ್ರದದಾಸಿ ಹೇ ನಮಸ್ತೇ ||೫೧||

ಶರವಣಭವಚರಣಂ ನ ಯೇಷಾಂ
ನ ಹಿ ತೇಷಾಂ ತರಣಂ ಭವೋರುಸಾಗರಸ್ಯ ।
ಮರಣಪ್ರಭವಂ ಭವೇ ಭವೇತ್
ಮದಸುಬ್ರಹ್ಮಣ್ಯದಯಾರಸಾಲಸಾನಾಂ ||೫೨||

---

ಪುತ್ರನು. ಕ್ರೌಂಚಪರ್ವತವನ್ನು ಸುಲಭವಾಗಿ ಭೇದಿಸಿದವನು. ಸನಾತನರಾದ ಮಹರ್ಷಿಗಳಿಂದ ಪೂಜಿಸಲ್ಪಟ್ಟ ಪಾದವುಳ್ಳವನು. ದೇವತೆಗಳಿಂದಲೂ ಪೂಜಿಸಲ್ಪಟ್ಟವನು. ಇಷ್ಟು ಮಹಿಮಾಸ್ಪದನಾದ ಕುಮಾರಸ್ವಾಮಿಯೇ ನಿನಗೆ ನಮಸ್ಕಾರ. ನಮ್ಮಂತಹ ಋಷಿಜನರನ್ನು ಸರ್ವದಾ ರಕ್ಷಿಸುತ್ತಿರು. ||೫೦||

ಇಂದ್ರನಿಗೆ ಬಂಧುವಾದ ಷಣ್ಮುಖಸ್ವಾಮಿಯೇ, ನಿನಗೆ ತಂದೆಯಾದ ಈಶ್ವರನಿರುವನೇ ಹೊರತು, ತಂದೆಗೆ ತಂದೆಯೆನಿಸಿದವನು ನಿನಗೆ ಲೋಕದಲ್ಲಿ ಯಾರೂ ಇಲ್ಲ. ಕೈಲಾಸಗಿರಿಯ ಮಾತಾಮಹನೆನಿಸಿದ ಕ್ರೌಂಚಪರ್ವತವನ್ನು ನೀನು ಭೇದಿಸಿರುವೆ. ಪ್ರಣವಮಂತ್ರದ ಅರ್ಥವನ್ನು ಸುಲಭವಾಗಿ ತಿಳಿಸಬಲ್ಲ ಸಮರ್ಥನು ನೀನು. ಮಹಾದೇವಪುತ್ರನೇ, ನೀನು ಪರಬ್ರಹ್ಮನಿಗೂ ಜ್ಞಾನಪ್ರದನಾಗಿರುವೆ. ಇಂತಹ ನಿನಗೆ ನಮಸ್ಕಾರ. ||೫೧||

ಯಾರಿಗೆ ಶರವಣಭವನಾದ ಸುಬ್ರಹ್ಮಣ್ಯಸ್ವಾಮಿಯ ಪಾದಸೇವನೆಯು ಸುಲಭವಾಗಿ ದೊರೆಯುಲಾರದೋ, ಅಂತಹವರಿಗೆ ಈ ಸಂಸಾರವೆಂಬ ಮಹಾಸಾಗರದಿಂದ ಉದ್ಧರಿಸುವ ಯಾವ ವಸ್ತುವೂ ಲಭಿಸಲಾರದು. ಮತ್ತು ಸುಬ್ರಹ್ಮಣ್ಯಸ್ವಾಮಿಯ ದಯಾರಸಪಾತ್ರರಲ್ಲದವರಿಗೆ ಪ್ರತಿಜನ್ಮದಲ್ಲಿಯೂ ಮರಣವು ಸಂಭವಿಸುವುದೇ ಹೊರತು ಸ್ಥಿರವಾದ ಮುಕ್ತಿಯು ಎಂದೂ ದೊರೆಯಲಾರದು. ||೫೨||

ಸುಬ್ರಹ್ಮಣ್ಯೋ ಬ್ರಾಹ್ಮಣಾನಾಂ ಹಿ ದೇವೋ
ಅಬ್ರಹ್ಮಣ್ಯೋ ಹಂತಿ ಪಾತಿ ದ್ವಿಜಾನ್ನಃ ।
ತ್ರಾತಾ ದೇವಾನಾಂ ವಿಜಯಸ್ಯ ಪ್ರದಾತಾ
ಗಾಂಗೇಯಸ್ತ್ವಂ ನಂದಿತಾತ್ಮಾಸಿ ಭಕ್ತೇ ॥೫೩॥

ಭವತಾ ಭವತಾಪಹಾರಿಣಾ
ಭವಸಿಂಧುಗತಾ ಸಮುದ್ಧೃತಾ ।
ಸುರತಾ ವಿರತಾ ದುಃಖಮಾರ್ಗೈ
ರಮರತಾಂ ಪ್ರಾಪ ಕಥಾಮೃತೋತ್ಥವರ್ಷೈಃ ॥೫೪॥

ಸಪರ್ಾಂಗಹಾರಚರಣಂ ಪ್ರಸನ್ನಾ
ಸ್ತೇಷು ಪ್ರಸರ್ಪಕಗಣಾ ಇವ ಯಾಜಿಶಾಲಾಂ ।
ಸರ್ಪಂತಿ ಪುಣ್ಯಾನ್ಯಘಸಂಚಯಾನಿ
ಭೀತಾನ್ಯಪಾಸರ್ಪಂತಿ ತತ್ರ ಚಿತ್ರಂ ॥೫೫॥

---

ಬ್ರಾಹ್ಮಣರಿಗೆ ನಿಜವಾಗಿಯೂ ಆರಾಧ್ಯದೇವನೆಂದರೆ ಸುಬ್ರಹ್ಮಣ್ಯಸ್ವಾಮಿಯೇ. ಅವನು ಬ್ರಾಹ್ಮಣರಿಗೆ ಒದಗುವ ಸಮಸ್ತ ಪಾಪಶೇಷವನ್ನೂ ನಾಶಮಾಡಬಲ್ಲನು. ಅಂತಹ ಬ್ರಾಹ್ಮಣರಾದ ನಮ್ಮನ್ನು ರಕ್ಷಿಸು. ಕುಮಾರಸ್ವಾಮಿಯೇ, ನೀನೇ ಸಮಸ್ತ ದೇವತೆಗಳನ್ನೂ ರಕ್ಷಿಸುವವನು. ನೀನು ಗಂಗಾಪುತ್ರನು. ನೀನು ನಿನ್ನ ಭಕ್ತರನ್ನು ಅತ್ಯಂತ ಸಂತುಷ್ಟರನ್ನಾಗಿ ಮಾಡುವೆ. ಬ್ರಹ್ಮಮಾರ್ಗವಿಮುಖರನ್ನು ನಾಶಗೊಳಿಸುವೆ. ॥೫೩॥

ಕುಮಾರದೇವನೇ, ನೀನು ಸಂಸಾರಗತವಾದ ಸಮಸ್ತ ತಾಪವನ್ನೂ ಅಪಹರಿಸುವವನು. ದೇವತೆಗಳ ಸಮೂಹವೆಲ್ಲಾ ನಿನ್ನನ್ನು ಆಶ್ರಯಿಸಿಯೇ, ತಮಗೆ ಒದಗಿದ್ದ ಸಮಸ್ತದುಃಖವನ್ನೆಲ್ಲಾ ಕಳೆದುಕೊಂಡಿತು. ನಿನ್ನ ಕಥಾಮೃತಪಾನದಿಂದ ಎಲ್ಲರೂ ಸುಲಭವಾಗಿ ದೇವತ್ವವನ್ನು ಪಡೆಯುವರು. ಇಂತಹ ಮಹಾದೇವನೇ, ನಿನಗೆ ನಮಸ್ಕಾರ. ನೀನು ನನ್ನಲ್ಲಿ ಸುಪ್ರೀತನಾಗು. ॥೫೪॥

ಸರ್ಪವನ್ನೇ ಪಾದಾಭರಣವನ್ನಾಗಿ ಮಾಡಿಕೊಂಡಿರುವ ಕುಮಾರಸ್ವಾಮಿಯ ಪಾದವನ್ನು ಯಾರು ಆಶ್ರಯಿಸುವರೋ, ಅವರು ಸರ್ಪಗಳು ಪಾತಾಳಲೋಕವನ್ನು

ಯತ್ರ ತ್ರಿನೇತ್ರಪದಪಂಕಜಮಿತ್ರಭಾವಾಃ
ಪತ್ರೈರ್ಹಿ ಬಿಲ್ವತರುಜೈಃ ಸತತಂ ಪವಿತ್ರೈಃ ।
ಚಿತ್ರಂ ಕಿಮತ್ರ ಯಜತಾಂ ಜಗತಾಂ ಮಹೇಶಃ
ಪಾತ್ರಂ ಕರೋತಿ ಕರುಣಾರಸದೃಷ್ಟ್ಯಮುತ್ರ ॥೫೬॥

ನ ಬ್ರಾಹ್ಮನ್ಯೈಕುಂಠವಿಕುಂಠಕಾಮೋ
ನೋತ್ಕಂಠಭಾವೇನ ಚ ನೀಲಕಂಠಂ ।
ಅಪಾಯದೇ ಕಿಂ ವಿಬುಧಾಧಿಸತ್ಪದೇ
ಮುದೇ ವಿನೋದೇಪಿ ನ ಚಿತ್ರಸಕ್ತಿಃ ॥೫೭॥

ಯಥಾ ಶಾಂಗಲಿಂಗಾರ್ಚನೇಷ್ವಂತರಂಗಂ
ಮನೋ ನ ಪಾಪೌಘಸಂಗಾದ್ಬಿಭೇತಿ ।

---

ಪ್ರವೇಶಿಸುವಂತೆ ಸರ್ವತ್ರ ವ್ಯಾಪಿಸುವರು. ಮತ್ತು ಅವರ ಪಾಪರಾಶಿಗಳು ಸರ್ಪದಂತೆ ದೂರ ಓಡಿಹೋಗುತ್ತವೆ. ಹೆದರಿದ ಸಮಸ್ತ ಪಾಪರಾಶಿಯು ಸ್ವಲ್ಪ ಹೊತ್ತೂ ಅಲ್ಲಿ ನಿಲ್ಲದೆ ದೂರ ಓಡಿಹೋಗುವುವು. ॥೫೫॥

ಯಾರು ಪರಶಿವನ ಪಾದಪದ್ಮಗಳಲ್ಲಿ ಭಕ್ತಿಯಿಟ್ಟು ಪವಿತ್ರಗಳಾದ ಬಿಲ್ವ ಪತ್ರೆಗಳಿಂದ ಸರ್ವದಾ ಪೂಜೆಯನ್ನು ಸಲ್ಲಿಸುವರೋ, ಅಂತಹವರಿಗೆ ಮಹೇಶ್ವರನು ತನ್ನ ಕರುಣಾರಸವನ್ನು ಒದಗಿಸಿ ಅವರ ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುವನೆಂಬುದರಲ್ಲಿ ಆಶ್ಚರ್ಯವೇನಿದೆ? ಅದು ಸ್ವಭಾವಸಿದ್ಧವಾದ ಪರಶಿವನ ಗುಣವಲ್ಲವೆ? ॥೫೬॥

ಬ್ರಹ್ಮನ ಮತ್ತು ವಿಷ್ಣುವಿನ ಸ್ಥಾನಪ್ರಾಪ್ತಿಯ ವಿಷಯದಲ್ಲಿಯೂ ನಮಗೆ ಅಷ್ಟು ಆಸಕ್ತಿಯಿಲ್ಲ. ನೀಲಕಂಠನೆನಿಸಿದ ಪರಶಿವನ ಸ್ಥಾನವನ್ನು ಮಾತ್ರ ನೀನು ಅಪೇಕ್ಷಿಸದೆ ಬಿಡುವವನಲ್ಲ. ಏಕೆಂದರೆ ದೇವತೆಗಳಲ್ಲಿ ಯಾರ ಸ್ಥಾನವೂ ಸ್ಥಿರವಾದುದಲ್ಲ. ಎಲ್ಲರ ಸ್ಥಾನಮಾನಗಳೂ ಅಪಾಯಪ್ರದಗಳೇ. ಅದ್ದರಿಂದಲೇ ನಾನು ವಿನೋದಾರ್ಥವಾಗಿಯೂ ಅವರ ಸ್ಥಾನಗಳನ್ನು ಅಪೇಕ್ಷಿಸುವನಲ್ಲ. ಶಿವಸನ್ನಿಧಿಯೊಂದೇ ನನಗೆ ಬೇಕಾಗಿರುವುದು. ॥೫೭॥

ಗಂಗಾ ಮತ್ತು ತುಂಗಾ ಈ ನದಿಗಳಲ್ಲಿ ಮಾಡುವ ಸ್ನಾನಪಾನಗಳಿಂದ ಮಾನವನ ಮನಸ್ಸು ಪರಿಶುದ್ಧವಾಗುವುದಿಲ್ಲ. ಮತ್ತು ಜೀವನ ಪಾಪರಾಶಿಯು

ನ ತುಂಗಾ ನ ಗಂಗಾಂಭಸಾ ಸ್ನಾನಪಾನೈಃ
ಪುನೀತೇ ಯಥಾ ಭಾವಸಂಗೋಘಭಂಗಃ ॥೫೮॥

ಮರಿಷ್ಯಂತಿ ಸರ್ವೇ ಪ್ರಣಶ್ಯಂತಿ ಭೋಗೈ
ರ್ನರಿಶ್ಯಂತಿ ಪೂರ್ವಾಃ ಸುಘುಣ್ಯದ್ಯಶಾಯೇ । (?)
ಪರಿತ್ಯಜ್ಯ ಪೃಥ್ವೀಂ ಧನಞ್ಚ ಬಂಧುವರ್ಗಂ
ಕ್ವ ಯಾತಾ ಗತಾಃ ತೈಶ್ಚ ಸಾಕಂ ನ ವಾಸಃ ॥೫೯॥

ಸಹಾಯಮನ್ಯನ್ನವಿಹಾಯ ಯಾಸ್ಯತಾ
ಮುಮಾಸಹಾಯೋವತಿ ಭಕ್ತವರ್ಗಾನ್ ।
ಅಪಾಯಕಾಯಪ್ರವಿನಾಶಕಾಲೇ
ಉಪಾಯಮನ್ಯಂ ನ ವಸಾಮಿ ಕಾಶೀಂ ॥೬೦॥

---

ಕ್ಷಯಿಸುವುದಿಲ್ಲ. ಶಿವಲಿಂಗವನ್ನು ಯಾರು ಭಕ್ತಿಪೂರ್ವಕವಾಗಿ ಅರ್ಚನೆಮಾಡು ವರೋ ಅವರು ಪಾಪರಾಶಿಗೆ ಎಂದೂ ಹೆದರುವುದಿಲ್ಲ. ಲೋಕದಲ್ಲಿ ಶಿವಾರ್ಚನೆ ಯೊಂದೇ ಮಾನವರನ್ನು ಪಾಪದಿಂದ ಉದ್ಧರಿಸಬಲ್ಲ ಕರ್ಮ. ॥೫೮॥

ತಮ್ಮ ಆಯುಃಪರಿಮಿತಿಯು ತೀರಿದೊಡನೆ ಎಲ್ಲರೂ ಸಾಯುತ್ತಾರೆ. ಎಲ್ಲರ ಭೋಗವೂ ನಷ್ಟವಾಗುತ್ತದೆ. ಭೂಮಿ, ಹಣ, ನೆಂಟರಿಷ್ಟರು ಇವೆಲ್ಲವೂ ದೂರವಾಗು ತ್ತವೆ. ಅವೆಲ್ಲವೂ ಎಲ್ಲಿಗೆ ಹೋದುವು? ಅವರೊಡನೆ ಏಕೆ ಮತ್ತೆ ವಾಸಿಸುವುದಿಲ್ಲ? ಇದೆಲ್ಲವನ್ನೂ ಪರಿಶೀಲಿಸಿದರೆ ಮಾನವ ಜೀವನವು ನಿಜವಾಗಿಯೂ ಕ್ಷಣಿಕವಾದು ದಲ್ಲವೆ ಎಂದೆನ್ನಿಸುವುದು. ॥೫೯॥

ಇಂತಹ ಅಪಾಯಸಹಿತವಾದ ದೇಹವು ಹೋಗುವಾಗ ಇದನ್ನು ಯಾರೂ ಕಾಪಾಡಲಾರರು. ಎಲೈ ದೇವತೆಗಳಿರಾ, ನೀವೂ ಸಹ ಇದೇ ರೀತಿ ಯೋಚಿಸಿರಿ. ಉಮಾಪತಿಯಾದ ಶಂಕರನೊಬ್ಬನೇ ತನ್ನ ಭಕ್ತರ ವೃಂದವನ್ನು ಕಾಪಾಡುವವನು. ಅವನನ್ನೇ ನೀವೆಲ್ಲರೂ ಮೊರೆಹೋಗಿರಿ. ಮುಕ್ತಿಯನ್ನು ಸಂಪಾದಿಸಲು ನನಗೆ ಯಾವ ಉಪಾಯವೂ ಸರಿಯಾಗಿ ಹೊಳೆದಿಲ್ಲ. ಈಗಲೇ ಕಾಶೀಕ್ಷೇತ್ರಕ್ಕೆ ಪ್ರಯಾಣ ಮಾಡುತ್ತೇನೆ. ನೀವೂ ಅದೇ ರೀತಿ ಮಾಡಿರಿ ಎಂದು ಜೈಗೀಷವ್ಯಮಹರ್ಷಿಯು ನುಡಿದನು. ॥೬೦॥

|| ಸುರಾ ಊಚುಃ ||

ಶ್ರೀಮಾರಮಾರಸುಕುಮಾರಕರಾತ್ತಶಕ್ತೇ
ಶಕ್ತಿಪ್ರಿಯಾತ್ಮಜ ಸುರಾಸುರಜೈತ್ರಶಕ್ತೇ ।
ಶೂರಾದಿತಾರಕಹರಾಮರವೃಂದಸೇನಾ
ಧೀಶಾಶು ನಾಶಯ ಸದ್ಯಾ ಭವದುಃಖಜಾಲಂ ||೬೧||

ಮೂಷಾವೈರಿವಹಪ್ರಿಯಾತ್ಮಜ ಹರ ಹಾರಾಂಗ ಆಹಾರಕೃತ್ ।
ಸಂಸ್ಥಾಗೇಂದ್ರಕಪೌತ್ರ ಹಸ್ತಸುಮಹಾಶಕ್ತೇ ನಮಸ್ತೇ ಸದಾ ।
ಶೂರಾಪಾರ ಸುದೈತ್ಯತಾರಕ ಮಹಾದರ್ಪಘ್ನ ಕಂದರ್ಪತಃ ।
ಸಾಹಸ್ರಾಧಿಕ ಕಾಂತಿಸುಂದರ ಮಹಾಮಾರಾರಿಹೃತ್ಪಂಕಜ ||೬೨||

ದ್ವಾರಾಕಾರಸುಮಾರಧೀರಸುರತಾ ।
ಸೇನಾಪತೇ ಪಾಹಿ ನಃ ||೬೩||

---

ಆಗ "ಮನ್ಮಥನ ನಾಶಕನೆನಿಸಿದ ಪರಮೇಶ್ವರನ ಪ್ರಿಯಸುತನೇ, ಶಕ್ತ್ಯಾಯುಧವನ್ನು ಧರಿಸಿದವನೇ, ಸುರಾಸುರರನ್ನು ಸುಲಭವಾಗಿ ಜಯಿಸುವ ಶಕ್ತಿಯುಳ್ಳವನೇ, ಶೂರರಾದ ತಾರಕಾಸುರನೇ ಮೊದಲಾದ ರಾಕ್ಷಸರನ್ನು ಕೊಂದವನೇ, ನೀನು ದೇವಸೇನಾಧೀಶನಲ್ಲವೆ! ನೀನು ದಯೆಯಿಂದ ನಮ್ಮ ದುಃಖಜಾಲವನ್ನೆಲ್ಲಾ ಹೋಗಲಾಡಿಸಿ ಸಲಹು" ಎಂದು ಸಮಸ್ತ ದೇವತೆಗಳೂ ಕುಮಾರಸ್ವಾಮಿಯನ್ನು ವಿಧವಿಧವಾದ ಸ್ತುತಿವಚನಗಳಿಂದ ಶ್ಲಾಘಿಸಲಾರಂಭಿಸಿದರು. ||೬೧||

ಇಲಿಗೆ ವೈರಿಯಾದ ಹಾವನ್ನೇ ಧರಿಸಿರುವ ವಿಘ್ನೇಶ್ವರನಿಗೆ ಪ್ರಿಯನೆನಿಸಿದ ಮಹೇಶ್ವರನ ಪುತ್ರನೆನಿಸಿದ ಕುಮಾರಸ್ವಾಮಿಯೇ, ನೀನು ಸರ್ಪಭಕ್ಷಕವಾದ ನವಿಲಿನ ಮೇಲೆ ಮಂಡಿಸಿರುವವನು. ಹಿಮಗಿರಿಯ ಮಗಳಾದ ಪಾರ್ವತಿಗೆ ಮಗನೆನಿಸಿದ ನೀನು ಮಹಾಶಕ್ತ್ಯಾಯುಧವನ್ನೇ ಯಾವಾಗಲೂ ಕೈಯಲ್ಲಿ ಹಿಡಿದಿರುವೆ? ಶೂರರೂ ಅಸಂಖ್ಯಾತರೂ ಆದ ದೈತ್ಯರ ತಂಡವನ್ನೆಲ್ಲಾ ನೀನು ನಾಶಮಾಡಿರುವೆ. ಸಾವಿರಾರು ಜನ ಮನ್ಮಥರಿಗಿಂತ ನೀನು ಹೆಚ್ಚಿನ ಸೌಂದರ್ಯಶಾಲಿಯೆನಿಸಿರುವೆ! ವಿಶಾಲವಾದ ಆಕಾರವುಳ್ಳ ಮನ್ಮಥನಂತೆ ಸುಂದರರಾದ ದೇವತೆಗಳ ಗುಂಪಿಗೆ ನೀನು ಸೇನಾಪತಿಯೆನಿಸಿರುವೆ. ಸಕಲ ದೇವತಾರಕ್ಷಕನೇ, ಮಹೇಶ್ವರಪುತ್ರನೇ, ನಮ್ಮನ್ನು ದಯೆಯಿಂದ ರಕ್ಷಿಸುತ್ತಿರು. ||೬೨-೬೩||

ನೋಽಚೀಕಮದಾಚೀಕಮ ನ ಚಾರುವಾಚಾ
ಪಂಚಾನನೋ ಯತ್ಕಥಯತ್ ಷಡಾನನಂ ।
ಸನಾತನಂ ಪುಣ್ಯರಹಸ್ಯಮೇತತ್
ರಸಾಯನಂ ನಃ ಶ್ರವಣೋರ್ಭವಾಯ ನಮಃ ॥೬೪॥

॥ ಗಣಾ ಊಚುಃ ॥

ಕುಂಜರಮುಖಾನುಕೂಲಃ
ಪಂಚಮುಖಸ್ಯೈವ ಸ್ವಯಂ ಕಿಶೋರೋಽಪಿ ।
ಶ್ರೀತಾರಕೋಽಪಿ ಸತತಂ
ತಾರಕವೈರೀ ನಿಜೇಷ್ಯತಾ ದೇವಃ ॥೬೫॥

ಷೋಢಾ ಮುಖಸ್ಸುರಾಣಾಂ
ವ್ಯೋಢಾನೀಕಸ್ಯ ಪಾತು ಮೃಡಪುತ್ರಃ
ದ್ರೋಢಾ ದನುಜಕುಲೇಭ್ಯೋ
ಲೇಢಾ ವಲ್ಲೀ ಶುಭಾಧರಸುಧಾಯಾಃ ॥೬೬॥

---

ಮೃದುಮಧುರವಾದ ವಾಣಿಯಿಂದ ಶಿವರಹಸ್ಯವನ್ನು ನಮಗೆಲ್ಲರಿಗೂ ಉಪದೇಶಿಸಿದ ಷಡಾನನನೇ, ನೀನು ಸನಾತನವೂ ಪುಣ್ಯಪ್ರದವೂ ರಹಸ್ಯವೂ ಆದ ಶಿವರಹಸ್ಯವೆಂಬ ಬಾಳೇಹಣ್ಣಿನ ರಸಾಯನವನ್ನು ನಮ್ಮ ಕಿವಿಗಳಿಗೆ ಒದಗಿಸಿ ನಮ್ಮನ್ನು ಆನಂದಗೊಳಿಸಿದೆಯಲ್ಲವೆ! ಹೀಗೆ ಭಕ್ತರ ಸಂಸಾರದುಃಖನಾಶಕನಾದ ನಿನಗೆ ನಮಸ್ಕಾರಗಳು. ॥೬೪॥

ಅನಂತರ ಸಮಸ್ತ ಪ್ರಮಥಗಣಗಳೂ ಕುಮಾರಸ್ವಾಮಿಯನ್ನು ಈರೀತಿ ಸ್ತುತಿಸಿದರು :—ಗಜಮುಖನೆನಿಸಿದ ವಿಘ್ನೇಶ್ವರನಿಗೆ ಪ್ರಿಯಸ್ನೇಹಿತನಾದವನೇ, ನೀನು ಪಂಚಮುಖನಾದ ಪರಶಿವನ ಪ್ರಿಯಪುತ್ರನಲ್ಲವೆ; ಸಂಪತ್ತನ್ನು ಭಕ್ತರಿಗೆ ಯಾವಾಗಲೂ ಒದಗಿಸುವವನಾದರೂ ನೀನು ತಾರಕಾಸುರನನ್ನು ಲಕ್ಷ್ಯಮಾಡದೆ ಕೊಂದಿರುವೆಯಲ್ಲವೆ! ಮಹಾದೇವಪುತ್ರನೇ, ನಿನಗೆ ಸರ್ವತ್ರ ವಿಜಯವುಂಟಾಗಲಿ. ॥೬೫॥

ಆರುಮುಖಗಳಿಂದ ಕೂಡಿ ದೇವತೆಗಳ ಗುಂಪನ್ನೇ ಪರಿಪಾಲಿಸುತ್ತಿರುವ ಕುಮಾರಸ್ವಾಮಿಯೇ, ನೀನು ಸಾಕ್ಷಾತ್ಪರಶಿವಪುತ್ರನು. ರಾಕ್ಷಸಕುಲವ

॥ ಮುನಯ ಊಚುः ॥

ಸ್ವರ್ನಾರೀಜನವೃಂದವೇಣೀ ವಿಲಸನ್ಮಲ್ಲೀ ಸುಮಪ್ರೋದ್ಗಲನ್
ಮಾಧ್ವೀಪೂರ ತರಂಗಮೇದುರ ಪದದ್ವಂದ್ವಾರವಿಂದ ಪ್ರಭೋ ।
ಸ್ವಾಮಿನ್ ಪ್ರೋನ್ನತಶೈಲವಾಸ ನಮತಾಂ ಕಷ್ಟಾಪದಾಂ ವಾರಕ
ಶಕ್ತಸ್ತ್ವಂ ಖಲು ಶಕ್ತಿಮಾನಿತಿ ಗಿರಂ ಜಲ್ಪಂತಿ ಲೋಕೇ ಜನಾಃ ॥೬೭॥

ಶಾಂಗಾಂಗಸಂಗಾತ್ಕಿಲ ಪಾಪಭಂಗ
ಸ್ತವಾಭಿಷಂಗೋಽಪಿ ಸುಮಂಗಲಾಯ ನಃ ।
ಗಣಾಭಿಸಂಗೋಽಪಿ ಕುತಸ್ಸುರಾಣಾಂ
ಮುನೀಶ್ವರಾಣಾಂ ವನಶೈಲವಾಸಿನಾಂ ॥೬೮॥

---

ನ್ನೆಲ್ಲಾ ಧ್ವಂಸಮಾಡುವವನು. ನಿನ್ನ ಪತ್ನಿಯಾದ ವಲ್ಲೀದೇವಿಯ ಅಧರಪಾನದ ಸವಿಯನ್ನರಿತವನು. ಇಂತಹ ಮಹಿಮಾಶಾಲಿಯಾದ ಷಣ್ಮುಖನೇ, ನಿನಗೆ ವಂದನೆಗಳು' ॥೬೬॥

ಅನಂತರ ಸಮಸ್ತ ಮುನಿಗಳೂ ಈರೀತಿ ಕುಮಾರಸ್ವಾಮಿಯನ್ನು ಸ್ತುತಿಸಲಾರಂಭಿಸಿದರು :—ಮಹೇಶಪುತ್ರನೆ, ಸುಗಂಧವಾದ ಮಲ್ಲಿಗೆಯ ಹೂಗಳನ್ನು ಮುಡಿದಿರುವ ಸಮಸ್ತ ದೇವಲೋಕದ ಸ್ತ್ರೀಯರು ನಿನ್ನ ಪಾದಕಮಲಗಳಿಗೆ ವಂದಿಸುತ್ತಾ, ತಮ್ಮ ಮುಡಿಗಳಲ್ಲಿರುವ ಪುಷ್ಪಸುಗಂಧವನ್ನು ನಿನ್ನ ಪಾದಕ್ಕೆ ಅರ್ಪಿಸುತ್ತಿರುವರು. ಮಹಾವೀರನೇ, ನೀನು ಎತ್ತರವಾದ ಗಿರಿಶಿಖರದಲ್ಲಿ ಸರ್ವದಾ ವಾಸಿಸುತ್ತಿರುವೆ. ನಿನಗೆ ವಿಧೇಯರಾಗಿ ವಂದಿಸುತ್ತಿರುವವರ ಕಷ್ಟಗಳನ್ನೆಲ್ಲಾ ಪರಿಹರಿಸುವೆ. ಶಕ್ತ್ಯಾಯುಧವನ್ನು ಧರಿಸಿ ಅಸಾಧ್ಯವಾದ ಅನೇಕಕಾರ್ಯಗಳನ್ನೆಸಗಿರುವುದರಿಂದ ನಿನ್ನನ್ನು ಶಕ್ತಿಮಾನ್ ಎಂದು ಸರ್ವರೂ ಶ್ಲಾಘಿಸುತ್ತಿರುವರು. ಈಶಪುತ್ರನೇ, ನಿನಗೆ ವಂದನೆಗಳು. ॥೬೭॥

ಈಶ್ವರಭಕ್ತರ ಸಂಪರ್ಕದಿಂದಲೇ ಸಮಸ್ತಪಾಪರಾಶಿಯೂ ನಿರ್ಮೂಲವಾಗುವುದು. ಆದ್ದರಿಂದಲೇ ನಿನ್ನ ಸಂಬಂಧವೂ ಸ್ನೇಹವೂ ಇಲ್ಲಿನವರೆಗೆ ನಮಗಿದ್ದುದರಿಂದ ನಾವು ಈಗ ಧನ್ಯರಾದೆವು. ಪಾಪಮುಕ್ತರಾದೆವು. ಅನೇಕಸಂಖ್ಯೆಯ ದೇವತೆಗಳ, ಮುನಿಗಳ, ತಪಸ್ವಿಗಳ, ಶೈಲವಾಸಿಗಳ ಸಂಪರ್ಕವು ಎಷ್ಟಿದ್ದರೆ ತಾನೆ ಏನು ? ನಿನ್ನ ಅಲ್ಪಸ್ನೇಹದಿಂದಲೇ ನಾವೆಲ್ಲರೂ ಧನ್ಯರಾದೆವು. ॥೬೮॥

ಜೈಗೀಷವ್ಯತಪಃಪ್ರಸಾದನವಶಾದ್ವಿಶ್ವೇಶಸಂದರ್ಶನಂ
ಈಶಾಜ್ಞಾವಶತಸ್ತ್ವದಾಂಬುಜಮುಖಸುಸ್ಪಂದಿಭೃಂಗಾ ವಯಂ ।
ಜಾತಾ ಭಕ್ತಿರಸಾರ್ದ್ರಸಾರಹೃದಯಾಃ ಕಿಂ ನೋತ್ರ ಸಂಪ್ರಾರ್ಥ್ಯಮ-
ಪ್ಯಾಸ್ತೇ ಶಿವ ಸೈವವಾಸಮಧುನಾ ವಾಸಾಯ ಕಾಶ್ಯಾಂ ನಮಃ ॥೧೯॥

ತತ್ರಾಲಿಂಗನವಂದನೇನ ಗಣಸಾಸ್ತೇವೈ ಸುರಾ ಭೂಸುರಾಃ
ಜೈಗೀಷವ್ಯಯುತಾ ಕುಮಾರಸುಕುಮಾರಾಭಂ ಪದಾಬ್ಜಂ ತದಾ ।
ನೇಮುರ್ಹೃಷ್ಟಹೃದಾ ವಿಭಾಸಿತಪಥಾ ಯಾತಾರ್ಕಬಿಂಬೋಪಮಾಃ
ಕಾಶೀಂ ತೇ ಶಿವಶೈಲವಾಸರಸಿಕಾ ದ್ರಷ್ಟುಂ ಚ ವಿಶ್ವೇಶ್ವರಂ ॥೨೦॥

॥ ಸೂತ ಉವಾಚ ॥

ಭವಾಜ್ಞಯಾ ಭಾವುಕದರ್ಶನೇನ
ಭವಾಂಗಸಂಗೋ ಮಮಾಭೂತ್ಸುಹರ್ಷದಃ ।

---

ಕುಮಾರಸ್ವಾಮಿಯೇ, ಜೈಗೀಷವ್ಯಮಹರ್ಷಿಯು ಮಾಡಿದ ತಪಃಪ್ರಭಾವದಿಂದ ನಮಗೆಲ್ಲರಿಗೂ ಪರಮೇಶ್ವರನ ದರ್ಶನವು ಲಭಿಸಿತು. ತತ್ಫಲವಾಗಿ ನಿನ್ನ ಮುಖಕಮಲದಿಂದ ಹೊರಟ ಶಿವರಹಸ್ಯಾಮೃತವನ್ನು ಭೃಂಗಗಳಂತೆ ನಾವು ಪಾನ ಮಾಡಿದೆವು. ಭಕ್ತಿರಸದಿಂದ ಆರ್ದ್ರವಾದ ಹೃದಯವುಳ್ಳ ನಾವು ಈಗ ಮತ್ತೇನನ್ನು ಪ್ರಾರ್ಥಿಸುವಂತಿದೆ? ಶಿವನ ಮತ್ತು ಶೈವಶ್ರೇಷ್ಠರೊಡನೆ ಸಂಭಾಷಿಸಿದ ನಮಗೆ ಇನ್ನುಮುಂದೆ ಪವಿತ್ರವಾದ ಕಾಶೀವಾಸವು ಲಭಿಸಿದರೆ ಸಾಕು. ಮತ್ತೇನೂ ನಮಗೆ ಬೇಡ. ॥೧೯॥

ಕಾಶೀಕ್ಷೇತ್ರದಲ್ಲಿ ಶಿವಲಿಂಗದ ಆಲಿಂಗನವನ್ನೂ ವಂದನೆಯನ್ನೂ ಮಾಡಿದ ದೇವತೆಗಳೂ, ಬ್ರಾಹ್ಮಣರೂ ಕೂಡಲೇ ಶಿವಗಣಗಳಲ್ಲಿ ಸೇರಿಬಿಡುವರು. ಈಗ ಜೈಗೀಷವ್ಯ ಮಹರ್ಷಿಯೊಡಗೂಡಿ ನಾವೆಲ್ಲರೂ ಮೊದಲು ನಿನ್ನ ಸುಕುಮಾರಗಳಾದ ಪಾದಗಳಿಗೆ ವಂದಿಸಿ, ಸಂತುಷ್ಟಾಂತರಂಗವುಳ್ಳವರಾಗಿ, ಸೂರ್ಯಬಿಂಬದಂತೆ ಕಾಂತಿಯನ್ನು ಪಡೆದು ಶಿವಶೈಲದಲ್ಲಿ ವಾಸಮಾಡುವ ಅಭಿಲಾಷೆಯಿಂದ ಈಗಲೇ ಕಾಶೀಕ್ಷೇತ್ರಕ್ಕೆ ತೆರಳುವೆವು. ಅಲ್ಲಿ ವಿಶ್ವೇಶ್ವರಲಿಂಗವನ್ನು ದರ್ಶನಮಾಡಿ ಧನ್ಯರೆನಿಸುವೆವು." ॥೨೦॥

ಎಂದು ಹೇಳುತ್ತಾ ಋಷಿಗಳೆಲ್ಲರೂ ಆನಂದತುಂದಿಲರಾದರು. ಕುಮಾರಸ್ವಾಮಿಯು "ದೇವರ್ಷಿ

ಹೀಗೆ ಎಲ್ಲರೂ ಸ್ತುತಿಸಿದುದನ್ನು ಕೇಳಿ ಕುಮಾರಸ್ವಾಮಿಯು "ದೇವರ್ಷಿಗಳೇ, ಈಶ್ವರಾಜ್ಞೆಯಿಂದಲೂ, ಪುಣ್ಯವಿಶೇಷದಿಂದಲೂ ನನಗೆ ನಿಮ್ಮೆಲ್ಲರ ಸ್ನೇಹ

ತೇನೈವ ವಃ ಶೈವರಹಸ್ಯಸಂಶ್ರವಾತ್
ಮುಕ್ತಾಸ್ಸ್ಥ ಯೂಯಂ ಪುನರಸ್ತು ದರ್ಶನಮ್ ॥೭೧॥

ಇತಿ ತಾನನುಶಾಸ್ಯ ಶಂಭುಸೂನುಃ
ನನಾಮ ವಿಘ್ನೇಶ್ವರಮೀಶ್ವರಂ ಶಿವಾಂ ।
ಮುದಾ ತದಾ ತತ್ರ ವಿಮುಚ್ಯತಾ ಗಿರಾ
ಗಣೈರತೋ ಮೋದಮವಾಪ ಹರ್ಷಿತಃ ॥೭೨॥

ಇತಿ ಪ್ರಯಾತಾ ಮುನಯಶ್ಚ ತೇ ಸುರಾ
ಗಣಾ ಮುನೀಂದ್ರೇಣ ಪ್ರಣಮ್ಯ ಸನ್ಮುಖಂ ।
ನಿದಾಘಕಾಲಾನಲತಾಪಿತೋ ಯಥಾ
ತಥಾ ಚ ಕಾಶೀಂ ವಿವಿಶುಶ್ಚ ಮುಕ್ತಯೇ ॥೭೩॥

---

ವುಂಟಾಯಿತು. ಇದರಿಂದ ನಾನು ತೃಪ್ತನಾಗಿರುವೆನು. ಅದೂ ಅಲ್ಲದೆ ನೀವು ಈಗ ನನ್ನಿಂದ ಉಕ್ತವಾದ ಶಿವರಹಸ್ಯವನ್ನು ಕೇಳಿ ಪಾಪಮುಕ್ತರಾಗಿರುವಿರಿ. ಬಹಳ ಸಂತೋಷ. ಇದೇರೀತಿ ಮತ್ತೊಮ್ಮೆ ನನಗೆ ನಿಮ್ಮ ದರ್ಶನಲಾಭವೊದಗಲಿ.'' ॥೭೧॥

ಹೀಗೆ ಅವರನ್ನೆಲ್ಲಾ ಸಮಾಧಾನಪಡಿಸಿ ಕುಮಾರಸ್ವಾಮಿಯು ತನ್ನ ಅಗ್ರಜನಾದ ವಿಘ್ನೇಶ್ವರನಿಗೂ, ಮಾತಾಪಿತೃಗಳಾದ ಶಿವಪಾರ್ವತಿಯರಿಗೂ ಪದೇ ಪದೇ ವಂದಿಸುತ್ತಾ, ಗಣಗಣಗಳನ್ನು ನೋಡಿ ಸಂತುಷ್ಟನಾಗಿ ಮೌನತಾಳಿದನು. ॥೭೨॥

ಹೀಗೆ ಷಣ್ಮುಖನಿಂದ ಬೀಳ್ಕೊಟ್ಟ ದೇವತೆಗಳೂ, ಮುನಿಗಳೂ, ಋಷಿವರ್ಯರೂ ಆನಂದಪರವಶರಾಗಿ ಒಟ್ಟಿಗೆ ಕಾಶೀಕ್ಷೇತ್ರವನ್ನು ಕುರಿತು ಪ್ರಯಾಣಮಾಡಿದರು. ಉರಿಬಿಸಿಲಿನಿಂದ ಬಳಲಿದವರು ಗಂಗಾತೀರಕ್ಕೆ ಓಡಿಬರುವಂತೆ, ಈಶ್ವರ ದರ್ಶನ ಕುತೂಹಲಿಗಳಾದ ಅವರು ಅತ್ಯಂತ ಸಂಭ್ರಮದಿಂದ ಕಾಶೀಕ್ಷೇತ್ರಕ್ಕೆ ಪ್ರವೇಶಮಾಡಿದರು. ॥೭೩॥

ಕಾಶೀನಗರವು ಪಾಪನಾಶಕವಾದದ್ದು. ಈಶ್ವರನ ಕೃಪಾಕಟಾಕ್ಷಕ್ಕೆ ಪಾತ್ರವಾದುದು. ಇಂತಹ ದಿವ್ಯಕ್ಷೇತ್ರವನ್ನು ನೋಡಿ ಸಮಸ್ತ ಮುನಿಗಳೂ ಆನಂದಭರಿತರಾದರು. ಮತ್ತು ಅಲ್ಲಿಯೇ ಆಜೀವವೂ ವಾಸಮಾಡಬೇಕೆಂದು ನಿಶ್ಚಯಮಾಡಿಕೊಂಡರು. ಮೊದಲು ಕ್ಷೇತ್ರದಲ್ಲಿ ಗಣಪತಿಯನ್ನು, ಭೈರವನನ್ನೂ

ಕಾಶೀಂ ನಾಶಿತಪಾಪರಾಶಿಶಿವದೃಕ್ಕಾರುಣ್ಯ ವಾರಾಂ ನಿಧಿಂ
ತಾಂ ವಾತಾಶಿವರಾಃ ಸುರಾ ಗಣವರಾಃ ದೃಷ್ಟ್ವಾ ಪ್ರಹೃಷ್ಟಾಂತರಾಃ ।
ವಾಸಾಯೈವ ಮುದಂ ದಧುಃ ಸುಮನಸೋ ನತ್ವಾ ಚ ವಿಶ್ವೇಶ್ವರಂ
ಸ್ತುತ್ವಾಂಬಾಂ ಗಣಪಂಚ ಭೈರವಮುಖೋ ಸ್ನಾತ್ವಾ ಸುಗಾಂಗಾಂಭಸಿ ॥೭೪॥

ಉತ್ತುಂಗಲಿಂಗ ವಿಲಸದಹಿಫಣಾಸಂಗಸೋವನೋತ್ತಮಾಂಗಂ ।
ನೇತ್ರೀಭೂತಪತಂಗಮಂಗರಹಿತಾನಂಗಾಂಗಭಸ್ಮಪ್ರಭಾ
ವ್ಯಾಕೀರ್ಣಾಂಗಮನಂಗಕೃತ್ತಿವಸನಂ ಫಾಲಸ್ಫುಲಿಂಗಂ ಶಿವಂ ॥೭೫॥

ತಟನೀ ಜಟಿಲಾಲಕಂ ಮಹೇಶಂ
ನಿಟಿಲಾಕ್ಷಂ ವಟಮೂಲಚಾರುಗೇಹಂ
ಕರಟಿತ್ವಕ್ಪಟನೋವ ಕಾಟ್ಯಮೀಶಂ ।
ಪ್ರಭಜಂತಿ ಸ್ತುತಿಭಿಃ ಸುರಾಗಣಾಶ್ಚ ॥೭೬॥

---

ದರ್ಶನಮಾಡಿ, ಗಂಗಾಸ್ನಾನಮಾಡಿ, ಅಂಬಾಸಹಿತನಾದ ವಿಶ್ವೇಶ್ವರಸ್ವಾಮಿಯ ದರ್ಶನದಿಂದಲೂ ಧ್ಯಾನದಿಂದಲೂ ಕಾಲಕಳೆಯಲಾರಂಭಿಸಿದರು. ॥೭೪॥

ಎತ್ತರವಾದ ಶಿವಲಿಂಗಾಕಾರದಲ್ಲಿರುವವನೂ, ನಾಗಾಭರಣದಿಂದ ಭೂಷಿತವಾದ ಶಿರೋಭಾಗವುಳ್ಳವನೂ, ಸೂರ್ಯನನ್ನೇ ನೇತ್ರವನ್ನಾಗಿ ಮಾಡಿಕೊಂಡಿರುವವನೂ, ಅನಂಗನನ್ನು ಭಸ್ಮವನ್ನಾಗಿ ಮಾಡಿದವನೂ ಆದ ಪರಮೇಶ್ವರನು, ಗಜಚರ್ಮಾಂಬರಧಾರಿಯು. ಫಾಲದಲ್ಲಿ ಅಗ್ನಿನೇತ್ರವುಳ್ಳವನು. ದೇವಗಂಗಾನದಿಯನ್ನು ಜಟಾಕಲಾಪದಲ್ಲಿ ಧರಿಸಿರುವವನು. ವಟವೃಕ್ಷದ ಬುಡದಲ್ಲಿ ದಕ್ಷಿಣಾಮೂರ್ತಿಯ ಆಕಾರದಿಂದ ಶೋಭಿಸುವವನು. ಗಜಚರ್ಮವನ್ನೇ ಮುಖ್ಯಾಂಬರವನ್ನಾಗಿ ಉಳ್ಳವನು. ಇಂತಹ ಮಹಾಮಹಿಮನನ್ನು ಸಮಸ್ತ ದೇವತೆಗಳೂ, ಮುನಿಗಳೂ, ಪ್ರಮಥಗಣಗಳೂ ಕಾಶಿಯಲ್ಲಿ ಧ್ಯಾನಿಸುತ್ತಾ ಅರ್ಚಿಸುತ್ತಾ ಕಾಲಕಳೆಯುತ್ತಿದ್ದರು. ॥೭೫-೭೬॥

ಭೂಮಂಡಲದಲ್ಲಿ ಅತ್ಯಂತ ಪವಿತ್ರವೆನಿಸಿದ ವಿಶ್ವೇಶ್ವರಲಿಂಗವನ್ನು ನೋಡಿ ಸಮಸ್ತ ಸುರನರಮುನಿಗಳೂ ಪರಶಿವಲಿಂಗಕ್ಕೆ ಬಿಲ್ವಪತ್ರೆ, ಕಮಲ ಮುಂತಾದುವುಗಳನ್ನರ್ಪಿಸಿ, ಅನ್ನಪೂರ್ಣಾದೇವಿಯನ್ನೂ, ಧುಂಡಿರಾಜಗಣಪತಿಯನ್ನೂ, ಕಾಲಭೈರವನನ್ನೂ, ದಂಡಪಾಣೀಶ್ವರನನ್ನೂ ಭಕ್ತಿಯಿಂದ ಪೂಜಿಸಿ, ಶರವಣಭವನಾದ

ತತ್ರತ್ಯೋತ್ತಮ ಲಿಂಗಮಂಡಲಮಿದಂ ಭೂಮಂಡಲೇ ಪಾವನಂ ।
ದೃಷ್ಟ್ವಾ ಪೂಜ್ಯಸುಬಿಲ್ವಪಂಕಜಸುಮೈಸ್ತತ್ರಾಸ್ನ ಪೂರ್ಣಾಮಪಿ ।
ಧುಂಡಿಂ ಭೈರವದಂಡಪಾಣಿಮಪಿ ತೇ ಸಂಪೂಜ್ಯ ಹೃಷ್ಟಾಸ್ತದಾ ।
ದೇವಾಸ್ತೇ ಮುನಯೋ ಗಣಾಶ್ಯರವಣಾಜ್ಞಾತಾಜ್ಞಯಾ ಸಂಸ್ಥಿತಾಃ ॥೭೭॥

ಜೈಗೀಷವ್ಯೋ ವಿಯೋಗಪ್ರಬಲಗತಿಮತಾಂ ಪ್ರಾಪ್ಯಗೇಹಂ ಗುಹಾಯಾಃ ।
ಕೈಲಾಸಾಚಲವಾಸ ನಿಶ್ಚಯಮತಿಃ ತಪ್ಸ್ಯತ್ಯಯಂ ಶಂಭುಹೃತ್ ।
ದೃಷ್ಟ್ವಾ ತಸ್ಯ ಗುಹಾಂ ವಿಗರ್ಭಗರ್ಭಜಗುಹಾಂ ಯಾತ್ಯೇವ ತನ್ಮಾನವೋ ।
ಲಿಂಗಂ ತತ್ಪರಿಪೂಜಿತಂ ಚ ಮನುಜಾಃ ಪಶ್ಯಂತು ಕಾಶ್ಯಾಂ ಚಿರಂ ॥೭೮॥

ದೇವಾಶ್ಚಾಪಿ ಗಣೇಶ್ವರಾ ಮುನಿವರಾಃ ಸಮ್ಯಕ್ಪ್ರತಿಷ್ಠಾಪ್ಯತೇ ।
ಲಿಂಗಾನ್ಯತ್ರ ಸ್ವನಾಮಕಾನಿ ಕೃಪಯಾ ವಿಶ್ವೇಶ್ವರಸ್ಯಾಜ್ಞಯಾ ।
ತಪ್ತ್ವಾತೇ ವಿಪುಲಂ ತಪಃ ಸುವಿಪುಲಂ ಚೈಕೇನ ಜನ್ಮಾರ್ಜಿತಂ ।
ಕೈಲಾಸಾಚಲವಾಸದುರ್ಘಟಮಿದಂ ಘ್ನುಸ್ನಂತರೇ ಸಂಯಯುಃ ॥೭೯॥

---

ಕುಮಾರಸ್ವಾಮಿಯ ಅಪ್ಪಣೆಯಂತೆ ಅಲ್ಲಿಯೇ ಸ್ಥಿರಮನಸ್ಸಿನಿಂದ ವಾಸಮಾಡ ತೊಡಗಿದರು. ॥೭೭॥

ಹೀಗೆ ಕೆಲವುಕಾಲ ಜೈಗೀಷವ್ಯ ಮಹಾಮುನಿಯು ಶಿವಾರಾಧನೆ ಮಾಡುತ್ತಿದ್ದು, ಕೊನೆಗೆ ಕೈಲಾಸದಲ್ಲಿಯೇ ವಾಸಮಾಡಬೇಕೆಂಬ ಆಸೆಯಿಂದ ಕಾಶಿಯಲ್ಲಿಯೇ ಒಂದು ಗುಹೆಯನ್ನು ಹುಡುಕಿ ಅಲ್ಲಿ ತಪಸ್ಸಿಗೆ ಕುಳಿತು, ತನ್ನ ಇಷ್ಟದಂತೆಯೇ ಕೈಲಾಸವನ್ನು ಸೇರಿದನು. ಹಾಗೆ ಜೈಗೀಷವ್ಯಮಹಾಮುನಿಯು ತಾನು ಭಕ್ತಿಯಿಂದ ಶಿವಲಿಂಗವನ್ನು ಪೂಜಿಸಿದ ಪವಿತ್ರವಾದ ಗುಹೆಯು ಇನ್ನೂ ಅಲ್ಲಿಯೇ ಇರುವುದು. ಶಿವಭಕ್ತಿಯುತರಾದ ಸಕಲ ಮಾನವರೂ ಆ ಗುಹೆಯನ್ನು ದರ್ಶನಮಾಡಿ ಪವಿತ್ರಾತ್ಮರೆನಿಸಲಿ. ॥೭೮॥

ಉಳಿದ ದೇವತೆಗಳೂ, ಮುನಿಗಳೂ, ಗಣನಾಯಕರೂ ಬಹುಕಾಲ ಅಲ್ಲಿಯೇ ತಪಸ್ಸುಮಾಡಿ ಕೊನೆಗೆ ತಮ್ಮ ತಮ್ಮ ಹೆಸರಿನಿಂದ ಒಂದೊಂದು ಶಿವಲಿಂಗವನ್ನು ಅಲ್ಲಿ ಪ್ರತಿಷ್ಠಾಪಿಸಿ ವಿಶ್ವೇಶ್ವರಾಜ್ಞೆಯನ್ನು ಪಡೆದು ಒಂದೇ ಒಂದು ಜನ್ಮದಿಂದಲೇ ಕೈಲಾಸವಾಸವನ್ನು ಸಂಪಾದಿಸಿದರು. ಆ ಕೈಲಾಸವಾಸವು ಎಲ್ಲರಿಗೂ ಸುಲಭವಾಗಿ

ಕೈಲಾಸಮೌಲಿಂ ಪ್ರಯಯುರ್ಗಣಾಸ್ತದಾ
ಸುರಾ ಯಯುರ್ಲೋಕಮಥಾಪುರಾಶ್ರಮಂ ।
ತದಾ ದ್ವಿಜಾಸ್ತೇ ಗಣಪಾ ವರಂ ಹರಂ
ನತ್ವಾರ್ಚ್ಯ ಗೌರೀಂ ಚ ಜಗುಸ್ತದಾಗಮಂ ॥೮೦॥

ಸಂವಾದಮೇಷಾಂ ಚ ತದಾ ಮುದಾ ಹರಃ
ಶ್ರುತ್ವಾ ಗಣೈಃ ಕೀರ್ತಿತಮೇವ ಸತ್ಯಂ ।
ಕುಮಾರವಕ್ತ್ರಾನ್ಮುದಿತಶ್ಚ ಶಂಕರಃ
ಸ್ವಾಜ್ಞಾವಶಾತ್ತತ್ರ ಗತಾವಿಮುಕ್ತಂ ॥೮೧॥

ತತಃ ಪುನಃ ಕಾಲವಶೇನ ತಂ ಮುನೇ
ರ್ಜೈಗೀಷತಾಂತರ್ಹೃದಯೇನ ಶಂಕರಃ ।

---

ದೊರೆಯತಕ್ಕುದಲ್ಲ. ಹಾಗೆ ಅವರು ಸುಲಭವಾಗಿ ಕೈಲಾಸವನ್ನು ಸೇರಿ ಇಲ್ಲಿಗೆ ಎಷ್ಟೋ ಮನ್ವಂತರಗಳು ಕಳೆದುಹೋದುವು ||೭೯||

ಶಿವಗಣಗಳಾದರೋ, ಶಿವಾಜ್ಞೆಯಂತೆ ಕೈಲಾಸಶಿಖರಕ್ಕೆ ಹಿಂದಿರುಗಿದರು ಇಂದ್ರಾದಿ ಸಮಸ್ತ ದೇವತೆಗಳೂ, ತಮ್ಮ ತಮ್ಮ ಲೋಕಗಳಿಗೆ ಪ್ರಯಾಣ ಬೆಳಸಿದರು. ಋಷಿಜನರು ಅವರವರಿಗಾಗಿದ್ದ ಆಶ್ರಮದಲ್ಲಿ ನೆಲಸಿದರು. ಗಣಶ್ರೇಷ್ಠರು ಗೌರೀದೇವಿಯನ್ನೂ ಪರಶಿವನನ್ನೂ ಪೂಜಿಸುತ್ತಾ ವೇದಪಠನೆ ಮಾಡಿದರು. ||೮೦||

ಶಿವಗಣಗಳು ಕುಮಾರಸ್ವಾಮಿಗೂ ಜೈಗೀಷವ್ಯಾದಿಗಳಿಗೂ ನಡೆದ ಸಂಭಾಷಣೆಯನ್ನೂ, ಪ್ರಶ್ನೋತ್ತರಗಳನ್ನೂ ಪರಶಿವನಲ್ಲಿ ವಿವರವಾಗಿ ಅರಿಕೆಮಾಡಿದರು. ಆರೀತಿ ತನ್ನ ಅಪ್ಪಣೆಯಂತೆ ತನ್ನ ಕುಮಾರನಾದ ಷಣ್ಮುಖಸ್ವಾಮಿಯು ಜೈಗೀಷವ್ಯಾದಿಗಳಿಗೆ ಶಿವರಹಸ್ಯವನ್ನುಸುರಿ, ಅವರಿಗೆ ಕಾಶಿಯಲ್ಲಿ ನೆಲಸುವಂತೆ ಉಪದೇಶಮಾಡಿದ್ದಕ್ಕಾಗಿ ಪರಮೇಶ್ವರನು ಅತ್ಯಾನಂದಪಟ್ಟು ಅವರೆಲ್ಲರಿಗೂ ಶುಭವನ್ನು ಕೋರಿದನು. ||೮೧||

ಅನಂತರ ಕಾಲಕ್ರಮದಲ್ಲಿ ತಪಸ್ಸುಮಾಡುತ್ತಿದ್ದ ಜೈಗೀಷವ್ಯ ಮಹಾಮುನಿಯ ಹೃದಯಾಂತರಾಳದಲ್ಲಿ ಪರಶಿವನು ಸ್ಥಿರವಾಗಿ ನೆಲಸಲಾರಂಭಿಸಿದನು. ಹಾಗೆ ಉದಾರನೂ, ಆತ್ಮಜ್ಞಾನಿಯೂ ಆದ ಜೈಗೀಷವ್ಯಮಹಾಮುನಿಗೆ ನಿರ್ದಿಷ್ಟವಾದ ಜ್ಞಾನಸ್ವರೂಪವನ್ನು ಕರುಣಿಸಿ, ಅವನು ಸಾಕ್ಷಾತ್ತಾಗಿ ಶಿವಸಾರೂಪ್ಯವನ್ನು

ಧ್ಯಾನೇನ ಚಾತ್ಮಸ್ಥಮುದಾರಸತ್ವಂ
ಮುನಿಂ ವಿಮುಕ್ತಂ ತ್ವಥ ಕರ್ತುಮೀಹತೇ ॥೮೨॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ ಶಿವರಹಸ್ಯಸಾರವರ್ಣನೇ ಕಥಾಸಮಾಪ್ತೌ ಋಷಿಗಣಾದಿನಿರ್ಗಮನ ಕಾಶೀಪ್ರವೇಶೋ ನಾಮ ಸಪ್ತತ್ರಿಂಶೋಽಧ್ಯಾಯಃ

---

ಪಡೆಯುವಂತೆ ಕರುಣಿಸಿದನು. ಪರಮಕಾರುಣಿಕನಾದ ಮಹಾದೇವನು ತನ್ನ ಭಕ್ತರ ವಿಷಯದಲ್ಲಿ ಪೂರ್ಣಾನುಗ್ರಹವಿಟ್ಟು ಅವರಿಗೆ ಕ್ರಮಕ್ರಮವಾಗಿ ಚಿತ್ತಶುದ್ಧಿಯನ್ನೂ, ದಿವ್ಯಜ್ಞಾನವನ್ನೂ ಕರುಣಿಸಿ ತನ್ನ ಸಾರೂಪ್ಯವನ್ನಿತ್ತು ಅವನಿಗೆ ನಿರಂತರವೂ, ಅಚ್ಛೇದವೂ, ಅಭೇದ್ಯವೂ ಆದ ಆನಂದಸ್ವರೂಪವನ್ನು ಅನುಗ್ರಹಿಸುವನೆಂಬುದಕ್ಕೆ ಈ ಜೈಗೀಷವ್ಯಮಹರ್ಷಿಯ ಇತಿಹಾಸವೇ ನಿದರ್ಶನವೆಂದು ಸೂತ ಮಹಾಮುನಿಗಳು ವಾಜಶ್ರವಸಾದಿ ಸಕಲ ಮುನಿವೃಂದಕ್ಕೂ ಬೋಧಿಸಿದರು. ॥೮೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ದ್ವಾದಶಾಂಶದಲ್ಲಿ ಶಿವಪಾರ್ವತಿಯರ ಸಂವಾದರೂಪವಾಗಿ ಶಿವರಹಸ್ಯಸಾರವರ್ಣನೆಯೆಂಬ ಕಥಾಸಮಾಪ್ತಿವಿಷಯಕವಾದ ಋಷಿಗಣಾದಿಗಳು ಕಾಶೀಕ್ಷೇತ್ರವನ್ನು ಪ್ರವೇಶಿಸಿ ಅನಂತರ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದ ಕಥಾಸಮಾರಂಭವನ್ನು ತಿಳಿಸುವ ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಅಷ್ಟತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ತುಷ್ಟುವುಃ ಸುರಸಂಘಾಸ್ತೇ ಸ್ಕಂದಂ ಸೇನಾಪತಿಂ ಮುದಾ ।
ನಾಮಭಿಸ್ತತ್ರ ಮುದಿತಾಃ ಸಹಸ್ರಾಷ್ಟಶತೈರ್ಮುದಾ ॥೧॥

ಸ್ತುತ್ವಾ ಚ ಸ್ತೋತ್ರವರ್ಯೇಣ ದೇವಾಸ್ತತ್ರ ಷಡಾನನಂ ।
ಕವಚೇನ ತದಾ ದೇವಾಃ ಸ್ತೋತ್ರವರ್ಯೇಣ ಸತ್ತಮಾಃ ॥೨॥

॥ ದೇವಾ ಊಚುಃ ॥

ಓಂ ಸ್ಕಂದ ನಾಮಸಹಸ್ರಸ್ಯ ಋಷಿಶ್ಚ ಪರಮೇಶ್ವರಃ ।
ಅನುಷ್ಟುಪ್ ಛಂದ ಏವಾಸ್ಯ ಸುಬ್ರಹ್ಮಣ್ಯಾಧಿದೇವತಾ ॥೩॥

---

## ಮೂವತ್ತೆಂಟನೆಯ ಅಧ್ಯಾಯ

ಈ ರೀತಿ ಕುಮಾರಸ್ವಾಮಿಯು ಶಿವರಹಸ್ಯವನ್ನು ಅನುರಾಗದಿಂದ ದೇವತೆಗಳ ಗುಂಪಿಗೆ ವಿವರಿಸಿ ಹೇಳಲು, ಅದನ್ನು ಕೇಳಿ ಆನುದಪಟ್ಟ ಸಮಸ್ತ ದೇವತೆಗಳೂ ಕುಮಾರಸ್ವಾಮಿಯನ್ನು ಅಷ್ಟೋತ್ತರಶತಸಹಸ್ರನಾಮಗಳಿಂದ ಅರ್ಚಿಸಿದರು. ಮತ್ತು ವಿಧವಿಧವಾದ ಸ್ತುತಿವಚನಗಳಿಂದಲೂ ಸುಬ್ರಹ್ಮಣ್ಯಕವಚದಿಂದಲೂ ಕುಮಾರಸ್ವಾಮಿಯನ್ನು ತೃಪ್ತಿಪಡಿಸಿದರು. ॥೧-೨॥

ಈ ಸ್ಕಂದ ಸಹಸ್ರನಾಮ ಸ್ತೋತ್ರಕ್ಕೆ ಪರಮೇಶ್ವರನೇ ಋಷಿಯು. ಸುಬ್ರಹ್ಮಣ್ಯದೇವರೇ ಅಧಿದೇವತೆ. ಅನುಷ್ಟುಪ್ ಛಂದಸ್ಸು. ಸೌಂ ಎಂಬುದೇ ಬೀಜ.

ಸೌಂ ಬೀಜಂ ಶಕ್ತಿರೇವಾಸ್ಯ ಶಕ್ತಿಃ ಪರತರಾ ಸ್ಮೃತಾ ।
ಕ್ಲೌಂಕೀಲಕಂ ಸರ್ವಕಾಮಸಿಧ್ಯರ್ಥಂ ಜಪ ಈರಿತಃ ॥೪॥

ಗಾಂಗೇಯಂ ವಹ್ನಿಗರ್ಭಂ ಶರವಣಜನಿತಂ ಶಕ್ತಿಹಸ್ತಂ ಕುಮಾರಂ ।
ಬ್ರಹ್ಮಣ್ಯಂ ಸ್ಕಂದದೇವಂ ಗುಹಮಚಲಭಿದಂ ಮಂತ್ರತೇಜಃಸ್ವರೂಪಂ ।
ಸೇನಾನೀಂ ತಾರಕಘ್ನಂ ಗಣಗಣಸಹಿತಂ ಕಾರ್ತಿಕೇಯಂ ಷಡಾಸ್ಯಂ ।
ಸುಬ್ರಹ್ಮಣ್ಯಂ ಮಯೂರಧ್ವಜರಥಸಹಿತಂ ಕಾರ್ತಿಕೇಯಂ ನಮಾಮಿ ॥೫॥

ಓಂ ನಮೋ ಭಗವತೇ ಷಡಾನನಾಯ
ಲಮಿತ್ಯಾದಿ ಪಂಚೋಪಚಾರಪೂಜಾಂ ಕುರ್ಯಾತ್ ।

॥ ಶ್ರೀರಸ್ತು ॥

ಅಥ ಶ್ರೀ ಸುಬ್ರಹ್ಮಣ್ಯಸಹಸ್ರನಾಮ ಸ್ತೋತ್ರಾರಂಭಃ

ಓಂ ಸುಬ್ರಹ್ಮಣ್ಯಃ ಸುರೇಶಾನಃ ಸುರಾರಿಕುಲನಾಶನಃ ।
ಬ್ರಹ್ಮಣ್ಯೋ ಬ್ರಹ್ಮವಿದ್ಬ್ರಹ್ಮ ಬ್ರಹ್ಮವಿದ್ಯೋ ಗುರುರ್ಗುರುಃ ॥೬॥

---

ಶಕ್ತಿದೇವತೆಯೇ ಶಕ್ತಿ. ಕ್ಲೌಂ ಕೀಲಕಂ. ಸಕಲೇಷ್ಟಾರ್ಥಸಿದ್ಧ್ಯರ್ಥವಾಗಿಯೇ ಜಪಮಾಡಬೇಕು. ಸಹಸ್ರನಾಮ ಸ್ತೋತ್ರಾರಂಭದಲ್ಲಿ ಈ ರೀತಿ ಧ್ಯಾನಮಾಡಬೇಕು. ||೩-೪||

ಗಂಗಾನದಿಯಲ್ಲಿ ಹುಟ್ಟಿ, ಕೃತ್ತಿಕಾರೂಪಗಳಾದ ಅಗ್ನಿಗರ್ಭದಲ್ಲಿ ಬೆಳೆದು ಶರವಣದಲ್ಲಿ ಜನಿಸಿದ ಕುಮಾರಸ್ವಾಮಿಯು ಶಕ್ತ್ಯಾಯುಧವನ್ನೇ ಕೈಯ್ಯಲ್ಲಿ ಹಿಡಿದಿರುವವನು. ಅವನು ಬ್ರಹ್ಮಜ್ಞಾನಪ್ರದನು, ಕ್ರೌಂಚಾಚಲವನ್ನು ಭೇದಿಸಿದವನು, ಮಂತ್ರ, ತೇಜಸ್ಸು ಇವುಗಳ ಸ್ವರೂಪನು. ತಾರಕಾಸುರರನ್ನು ಕೊಂದ ದೇವಸೇನಾಪತಿಯೇ ಈತನು. ಆರು ಕೃತ್ತಿಕಾನಕ್ಷತ್ರಗಳಿಂದ ರಕ್ಷಿಸಿದವನಾದುದರಿಂದ ಷಣ್ಮುಖನೆನಿಸಿಕೊಂಡಿರುವವನು. ಮಯೂರಧ್ವಜವಾದ ದೇವರಥದಲ್ಲಿ ಕುಳಿತು ಸಂಚರಿಸುವ ಇಂತಹ ಸುಬ್ರಹ್ಮಣ್ಯಸ್ವಾಮಿಗೆ ಶಿರಸಾ ವಂದಿಸುವೆನು. ||೫||

ಸುಬ್ರಹ್ಮಣ್ಯಸ್ವಾಮಿಯು ಶ್ರೇಷ್ಠವಾದ ಬ್ರಹ್ಮಮಾರ್ಗಾನುಯಾಯಿಯು. ದೇವತೆಗಳಿಗೆ ಒಡೆಯನು. ದೇವಶತ್ರುಗಳಾದ ರಾಕ್ಷಸರ ಕುಲವನ್ನು ಧ್ವಂಸಮಾಡಿದವನು. ಬ್ರಹ್ಮಮಾರ್ಗವನ್ನರಿತವನು. ಬ್ರಹ್ಮಸ್ವರೂಪಜ್ಞನು. ಬ್ರಹ್ಮರೂಪಿಯು.

ಈಶಾನಗುರುರವ್ಯಕ್ತೋ ವ್ಯಕ್ತರೂಪಸ್ಸನಾತನಃ ।
ಪ್ರಧಾನಃ ಪುರುಷಃ ಕರ್ತಾ ಕರ್ಮಕಾರ್ಯಂ ಚ ಕಾರಣಂ ॥೭॥

ಶ್ರೀಕುಮಾರೋ ಅಧಿಷ್ಠಾನಂ ಭೋಕ್ತಾ ಭೋಗಶ್ಚ ಕೇವಲಃ ।
ಅನಾದಿನಿಧನಃ ಸಾಕ್ಷೀ ನಿಯಂತಾ ನಿಯಮೋ ಯಮಃ ॥೮॥

ವಾಕ್ಪತಿರ್ವಾಕ್ಪ್ರದೋ ವಾಗ್ಮೀ ವಾಚೋ ವಕ್ತಾ ಚ ವಾಚಕಃ ।
ಪಿತಾಮಹಗುರುರ್ಲೋಕಗುರುಸ್ತತ್ವಾರ್ಥಬೋಧಕಃ ॥೯॥

ಪ್ರಣವಾರ್ಥೋಪದೇಷ್ಟಾ ಚ ಅಜೋ ಬ್ರಹ್ಮಾ ಸನಾತನಃ ।
ವೇದಾಂತವೇದ್ಯೋ ವೇದಾತ್ಮಾ ವೇದಾದಿರ್ವೇದಬೋಧಕಃ ॥೧೦॥

ವೇದಾಂತೋ ವೇದಗುಹ್ಯಶ್ಚ ವೇದಶಾಸ್ತ್ರಪ್ರಭೇದಕಃ ।
ಸರ್ವವಿದ್ಯಾತ್ಮಕಃ ಶಾಂತಶ್ಚತುಃಷಷ್ಟಿಕಲಾಗುರುಃ ॥೧೧॥

---

ಬ್ರಹ್ಮವಿದ್ಯಾರೂಪಿಯು. ಜ್ಞಾನಿಗಳಿಗೆ ಜ್ಞಾನಿಯು. ಲೋಕಾಧಿಪತಿಗಳಿಗೆ ಗುರುವೆನಿಸಿದವನು. ವ್ಯಕ್ತರೂಪವಿಲ್ಲದವನು. ಉಪಾಧಿವಶದಿಂದ ವ್ಯಕ್ತವಾಗಿ ಕಾಣುವವನು. ಅನಾದಿಪುರುಷನು. ಪ್ರಕೃತಿರೂಪಿಯು. ಪುರುಷರೂಪಿಯು. ಸರ್ವ ಕಾರ್ಯಕರ್ತನು. ಕರ್ಮರೂಪಿಯು. ಕಾರ್ಯರೂಪಿಯು. ಕಾರಣವಾಗುವವನು. ||೬-೭||

ಪರಶಿವನ ಸಂಪತ್ಕುಮಾರನು. ಸಕಲ ವಸ್ತುಗಳಿಗೂ ಆಶ್ರಯನು. ಫಲವನ್ನು ಅನುಭವಿಸುವವನು. ಭೋಗರೂಪಿಯು. ಆದ್ಯಂತವಿಲ್ಲದವನು. ಸರ್ವವನ್ನೂ ಕಣ್ಣಿನಿಂದ ನೋಡುವವನು. ಎಲ್ಲಕ್ಕೂ ನಿಯಾಮಕನು. ನಿಯಮರೂಪಿಯು. ಜಿತೇಂದ್ರಿಯನು. ಮಾತುಗಳಿಗೆ ಅಧಿಪತಿಯು. ವಾಕ್ಕನ್ನು ಅನುಗ್ರಹಿಸುವವನು. ವಾಚಾಳಿಯು. ವಾಗ್ರೂಪಿಯು. ಮಾತನಾಡುವವನು. ಸರ್ವವಸ್ತುಗಳಿಗೂ ವಾಚಕನೆನಿಸಿದವನು. ಬ್ರಹ್ಮನಿಗೂ ಗುರುವಾಗಿರುವವನು. ಲೋಕಕ್ಕೆಲ್ಲಾ ಗುರುವೆನಿಸಿದವನು. ತತ್ವಾರ್ಥವನ್ನು ಬೋಧಿಸುವವನು. ||೮-೯||

ಪ್ರಣವಮಂತ್ರವನ್ನುಪದೇಶಿಸುವವನು. ನಾಶರಹಿತನು. ಬ್ರಹ್ಮರೂಪಿಯು. ಸನಾತನನು. ಉಪನಿಷತ್ಪ್ರತಿಪಾದ್ಯನು. ವೇದಸ್ವರೂಪಿಯು. ವೇದಾದಿಯಾದ ಪ್ರಣವರೂಪಿಯು. ವೇದದಿಂದ ಬೋಧಿಸಲ್ಪಡುವವನು. ವೇದಾಂತರೂಪನು. ವೇದದಿಂದ ಗುಟ್ಟಾಗಿ ತಿಳಿದುಬರುವವನು. ವೇದಶಾಸ್ತ್ರಗಳನ್ನು ವಿಂಗಡಿಸಿದವನು.

ಮಂತ್ರಾರ್ಥೋ ಮಂತ್ರಮೂರ್ತಿಶ್ಚ ಮಂತ್ರತಂತ್ರಪ್ರವರ್ತಕಃ ।
ಮಂತ್ರೀ ಮಂತ್ರೋ ಮಂತ್ರಬೀಜೋ ಮಹಾಮಂತ್ರೋಪದೇಶಕಃ ॥೧೨॥

ಮಹೋತ್ಸಾಹೋ ಮಹಾಶಕ್ತಿರ್ಮಹಾಶಕ್ತಿಧರಃ ಪ್ರಭುಃ ।
ಜಗತ್ಸ್ರಷ್ಟಾ ಜಗತ್ಪಾತಾ ಜಗನ್ಮೂರ್ತಿರ್ಜಗನ್ಮಯಃ ॥೧೩॥

ಜಗದಾದಿರನಾದಿಶ್ಚ ಜಗದ್ಬೀಜೋ ಜಗದ್ಗುರುಃ ।
ಜ್ಯೋತಿರ್ಮಯಃ ಪ್ರಶಾಂತಾತ್ಮಾ ಸಚ್ಚಿದಾನಂದವಿಗ್ರಹಃ ॥೧೪॥

ಸುಖಮೂರ್ತಿಃ ಸುಖಕರೋ ಸುಖೀ ಸುರವರಾಕೃತಿಃ ।
ಜ್ಞಾತಾ ಜ್ಞಾನಂ ಜ್ಞೇಯರೂಪೋ ಜ್ಞಪ್ತಾ ಜ್ಞಾನಫಲಂ ಬುಧಃ ॥೧೫॥

ವಿಷ್ಣುರ್ಜಿಷ್ಣುರ್ಗ್ರಸಿಷ್ಣುಶ್ಚ ಪ್ರಭವಿಷ್ಣುಃ ಸಹಿಷ್ಣುಜಃ ।
ತಿತಿಕ್ಷುರ್ಭ್ರಾಜಿಷ್ಣುರಜಿರೋ ವರ್ಧಿಷ್ಣುಃ ಶಾಂತವಿಗ್ರಹಃ ॥೧೬॥

---

ಮಂತ್ರಾರ್ಥರೂಪಿಯು, ಮಂತ್ರಮೂರ್ತಿಯು, ಮಂತ್ರತಂತ್ರ ಇವುಗಳಲ್ಲಿ ಪ್ರವರ್ತಿಸುವವನು, ಮಂತ್ರಜ್ಞನು, ಮಂತ್ರರೂಪನು, ಮಂತ್ರಗಳಿಗೆ ಮೂಲಕಾರಣನು, ಮಹಾಮಂತ್ರವನ್ನು ಉಪದೇಶಿಸುವವನು. ॥೧೧-೧೨॥

ಹೆಚ್ಚಿನ ಉತ್ಸಾಹಶಾಲಿಯು, ಮಹಾಶಕ್ತಿರೂಪನು, ಶಕ್ತ್ಯಾಯುಧಧಾರಿಯು, ಜಗತ್ತನ್ನು ಸೃಷ್ಟಿಸಿದವನು, ಲೋಕಪಾಲಕನು, ಜಗನ್ಮೂರ್ತಿರೂಪನು, ಜಗದಾತ್ಮನಾ ಪರಿಣತನು, ಜಗತ್ತಿಗೆ ಆದಿಭೂತನು, ಆದಿರಹಿತನು, ಜಗತ್ತಿಗೆ ಮೂಲಕಾರಣನು, ಜಗತ್ತಿಗೆ ಗುರುವು, ಜ್ಯೋತೀರೂಪನು, ಶಾಂತರೂಪಿಯು, ಸಚ್ಚಿದಾನಂದ ವಿಗ್ರಹನು. ॥೧೩-೧೪॥

ಸುಖಮೂರ್ತಿಯು, ಸುಖಕರನು, ಸುಖಶಾಲಿಯು, ಸುರವರನ ಆಕಾರದವನು. ತಿಳಿದವನು, ತಿಳಿವಳಿಕೆಯುಳ್ಳವನು, ಜ್ಞಾನರೂಪನು, ಜ್ಞಾನಕೊಡುವವನು, ಜ್ಞಾನಕ್ಕೆ ಫಲದಂತಿರುವವನು, ಬುಧನು, ವ್ಯಾಪಕನು, ಜಯಶಾಲಿಯು, ಲೋಕವನ್ನೇ ನುಂಗುವವನು, ಸಮರ್ಥನು, ಸರ್ವವನ್ನೂ ಸಹಿಸುವ ಪರಶಿವ ಪುತ್ರನು, ಕಷ್ಟವನ್ನು ಸಹಿಸುವವನು, ಸಮರ್ಥನು, ಜರಾರಹಿತನು, ವೃದ್ಧಿ ಹೊಂದುವವನು, ಶಾಂತದೇಹಿಯು. ॥೧೫-೧೬॥

ಋಜುಃ ಸುಗುಹ್ಯಃ ಸುಲಭೋ ದುರ್ಲಭೋ ಲೋಭವರ್ಜಿತಃ ।
ಭಿಜ್ಞೋ ವಿಜ್ಞಾನಯಜ್ಞಾತ್ಮಾ ಶಿವಜ್ಞಾನಪ್ರದೋ ಗುಹಃ ॥೧೭॥

ಹೃದಯಾದಿರಹಂಕಾರೋ ಭೂತಾದಿರ್ಭೂತಭಾವಿತಃ ।
ಭೂತಂ ಭವ್ಯಂ ಭವದ್ಭೂತೋ ಭೂತಭವ್ಯಭವತ್ಪ್ರಭುಃ ॥೧೮॥

ದೇವಸೇನಾಪತಿರ್ನೇತಾ ಕುಮಾರೋ ದೇವನಾಯಕಃ ।
ತಾರಕಾರಿರ್ಮಹಾವೀರಃ ಶೂರಪದ್ಮಶಿರೋ ಹರಃ ॥೧೯॥

ಅನೇಕಕೋಟಿಬ್ರಹ್ಮಾಂಡಪರಿಪೂರ್ಣೋಽಸುರಾಂತಕಃ ।
ಸುರಾನಂದಕರಃ ಶ್ರೀಮಾನ್ ಸುರಾರಾತಿಭಯಂಕರಃ ॥೨೦॥

ಅಸುರಾಂತಃಪುರಾಕ್ರಾಂತವರ್ಗರಭೇರೀನಿನಾದಕಃ ।
ಸುರವಂದಿಜನಾನಂದಕರಃ ಶಿಂಜಾಗುಣಧ್ವನಿಃ ॥೨೧॥

---

ಸನ್ಮಾರ್ಗಗಾಮಿಯು, ಗುಟ್ಟಾದ ರೂಪವುಳ್ಳವನು. ಸುಲಭನು, ಪಾಪಿಗಳಿಗೆ ದುರ್ಲಭನು, ಲೋಭರಹಿತನು, ಭೇದವನ್ನರಿತವನು, ವಿಜ್ಞಾನವನ್ನು ತಿಳಿದವನು, ಯಜ್ಞರೂಪಿಯು, ಶಿವಜ್ಞಾನವನ್ನು ಕರುಣಿಸುವವನು, ಶತ್ರುಸೈನ್ಯದಿಂದ ಆತ್ಮಬಲವನ್ನು ರಕ್ಷಿಸಿಕೊಳ್ಳುವವನು, ಹೃದಯಗ್ರಂಥಿರೂಪಿಯು, ಅಹಂಕಾರವಿಶಿಷ್ಟನು, ಸಮಸ್ತಪ್ರಾಣಿಗಳಿಗೂ ಆದಿಭೂತನು, ಪ್ರಾಣಿಗಳಿಂದ ಪೂಜಿತನಾದವನು, ಭೂತಕಾಲದಲ್ಲಿ ಭವಿಷ್ಯತ್ಕಾಲದಲ್ಲಿ ವರ್ತಮಾನಕಾಲದಲ್ಲಿಯೂ ಪ್ರಭುವಿನಂತಿರುವವನು, ಸಕಲ ಕಾಲದಲ್ಲಿಯೂ ಜಗತ್ತನ್ನು ಕಾಪಾಡುವವನು. ॥೧೭-೧೮॥

ದೇವಸೈನ್ಯಕ್ಕೆ ಅಧಿಪತಿಯು, ಸಕಲ ಸೈನ್ಯವನ್ನೂ ನಡೆಸುವವನು, ಕುಮಾರಸ್ವಾಮಿಯು, ದೇವನಾಯಕನು, ತಾರಕಾಸುರರನ್ನು ಕೊಂದವನು, ಮಹಾವೀರನು, ಶೂರನಾದ ಪದ್ಮನ ಶಿರಸ್ಸನ್ನು ಕೊಂದವನು, ಅನೇಕ ಕೋಟಿಬ್ರಹ್ಮಾಂಡದಲ್ಲಿ ಅವರಿಸಿರುವವನು, ದಾನವನಾಶಕನು, ಸುರರಿಗೆ ಆನಂದವನ್ನುಂಟುಮಾಡುವವನು, ಸಂಪದ್ಯುಕ್ತನು, ದೇವತೆಗಳ ಶತ್ರುಗಳಾದ ರಾಕ್ಷಸರಿಗೆ ಭಯವನ್ನುಂಟುಮಾಡುವವನು. ॥೧೯-೨೦॥

ರಾಕ್ಷಸನಾಶಕನು, ತ್ರಿಪುರಗಳನ್ನು ಆಕ್ರಮಿಸುವಂತೆ ಧ್ವನಿಮಾಡುವ ಭೇರೀಧ್ವನಿಯುಳ್ಳವನು, ರಾಕ್ಷಸರಿಗೆ ಬಂದಿಯಾಗಿ ಹೋಗಿದ್ದ ದೇವತೆಗಳಿಗೆ ಆನಂದ

ಸ್ಫುಟಾಟ್ಟಹಾಸಸಂಕ್ಷುಬ್ಧ ತಾರಕಾಸುರಮಾನಸಃ ।
ಮಹಾಕ್ರೋಧೋ ಮಹೋತ್ಸಾಹೋ ಮಹಾಬಲಪರಾಕ್ರಮಃ ॥೨೨॥

ಮಹಾಬುದ್ಧಿರ್ಮಹಾಬುದ್ಧಿರ್ಮಹಾಮಾಯೋ ಮಹಾಭುಜಃ ।
ರಣಭೀಮಃ ಶತ್ರುಹರೋ ಧೀರೋದಾಂತೋ ಗುಣೋತ್ತರಃ ।
ಮಹಾಧನುರ್ಮಹಾಬಾಣೋ ಮಹಾದೇವಪ್ರಿಯಾತ್ಮಜಃ ।
ಮಹಾಭುಜೋ ಮಹಾಪಾದೋ ಮಹಾತಂದ್ರೋ ಮಹಾದ್ಯುತಿಃ ॥೨೪॥

ಮಹರ್ಧಿರ್ಮಹನೀಯಾಂಗೋ ಮಯೂರವರವಾಹನಃ ।
ಮಯೂರಬರ್ಹಾತಪತ್ರೋ ಮಯೂರನಟನಪ್ರಿಯಃ ॥೨೫॥

ಮಹಾನುಭಾವೋ ಮೇಯಶ್ರೀರಮೇಯಾತ್ಮಾ ಮಹಾಪ್ರಭುಃ ।
ಸುಗುಣೋ ದುರ್ಗುಣದ್ವೇಷೀ ನಿರ್ಗುಣೋ ನಿರ್ಮಲಾಮಲಃ ॥೨೬॥

---

ವನ್ನುಂಟುಮಾಡುವವನು, ಧನುಷ್ಟಂಕಾರಧ್ವನಿಯುಳ್ಳವನು, ಅಟ್ಟಹಾಸದಿಂದ ಮೆರೆಯುವವನು. ತಾರಕಾಸುರನ ಮನಸ್ಸಿನಲ್ಲಿ ಪ್ರತಿಫಲಿಸುವವನು, ಮಹಾಕ್ರೋಶವುಳ್ಳವನು, ಹೆಚ್ಚಿನ ಉತ್ಸಾಹಿಯು, ಮಹಾಬಲಪರಾಕ್ರಮಿಯು. ॥೨೧-೨೨॥

ಹೆಚ್ಚು ಬುದ್ಧಿಶಾಲಿಯು, ಅತಿಶಯವಾದ ಏಳಿಗೆಯುಳ್ಳವನು- ಮಾಯಾ ರೂಪಿಯು, ಬಲಿಷ್ಠವಾದ ಬಾಹುಬಲವುಳ್ಳವನು, ಬಲಿಷ್ಠವಾದ ಧನುರ್ಧಾರಿಯು, ವಿಶೇಷಶಕ್ತಿಯುಳ್ಳ ಬಾಣಹೊಂದಿದವನು, ಮಹಾದೇವನ ಪ್ರಿಯಪುತ್ರನು, ಬಲಿಷ್ಠವಾದ ಬಾಹುಬಲವುಳ್ಳವನು, ದೊಡ್ಡ ಪಾದವುಳ್ಳವನು. ಅತಿಶಯವಾದ ಆಯಾಸವುಳ್ಳವನು. ಮಿತಿಮೀರಿದ ತೇಜಸ್ಸುಳ್ಳವನು. ॥೨೩-೨೪॥

ಹೆಚ್ಚು ವೃದ್ಧಿಯಿಂದಿರುವವನು. ಪೂಜ್ಯವಾದ ಅಂಗವುಳ್ಳವನು. ಶ್ರೇಷ್ಠವಾದ ನವಿಲಿನಮೇಲೆ ಕುಳಿತಿರುವವನು. ನವಿಲುಗರಿಗಳ ಛತ್ರಿಯುಳ್ಳವನು. ನವಿಲಿನ ನಾಟ್ಯದಲ್ಲಿ ಹೆಚ್ಚು ಪ್ರೀತಿಯುಳ್ಳವನು. ಮಹಿಮೆಯುಳ್ಳ ಮನಸ್ಸಿನವನು. ಪ್ರಪಂಚವನ್ನೇ ಅಳೆಯುವ ಸಂಪತ್ತುಳ್ಳವನು. ಅಳತೆಗೆ ಸಿಕ್ಕದವನು. ಮಹಾತ್ಮನಾದ ಪ್ರಭುವು. ಸದ್ಗುಣಶಾಲಿಯು. ದುಷ್ಟರನ್ನು ದ್ವೇಷಿಸುವವನು. ಸ್ವಯಂ ಗುಣರಹಿತನು. ನಿರ್ಮಲನು. ಮಲಶೂನ್ಯನು. ॥೨೫-೨೬॥

ಚಂಚಲೋ ವಿಮಲಃ ಕಾಂತಃ ಕಮಲಾಸನಪೂಜಿತಃ ।
ಕಾಲಃ ಕಮಲಪತ್ರಾಕ್ಷಃ ಕಲಿಕಲ್ಮಶನಾಶನಃ ॥೨೭॥

ಮಹಾರಣೋ ಮಹಾಯೋಧಾ ಮಹಾಬುದ್ಧಿಪ್ರದೋದಯಃ ।
ಮಹಾರಥೋ ಮಹಾಭೋಗೋ ಭಕ್ತಾಭೀಷ್ಟಫಲಪ್ರದಃ ॥೨೮॥

ಭಕ್ತಪ್ರಿಯಃ ಪ್ರಿಯಪ್ರೇಮಃ ಪ್ರೇಯಾನ್ ಪ್ರೀತಿಧರಃ ಸಖಾ ।
ಗೌರೀಕರಸರೋಜಾಗ್ರಲಾಲನೀಯಮುಖಾಂಬುಜಃ ॥೨೯॥

ಕೃತ್ತಿಕಾಸ್ತನ್ಯಪಾನೈಕ ವ್ಯಗ್ರಷಡ್ವದನಾಂಬುಜಃ ।
ಚಂದ್ರಚೂಡಾಂಗಭೂಭಾಗ ವಿಹಾರಣ ವಿಶಾರದಃ ॥೩೦॥

ಚಂದ್ರಪೀಡಾಕರಾಂಭೋಜ ಪರಿಮೃಷ್ಟ ಭುಜಾವಲಿಃ ।
ಈಶಾನನಯನಾನಂದಕಂದೋ ಲಾವಣ್ಯಶೇವಧಿಃ ॥೩೧॥

---

ಚಂಚಲಸ್ವಭಾವದವನು. ಮಲರಹಿತನು. ಸುಂದರನು. ಬ್ರಹ್ಮನಿಂದ ಪೂಜಿತನಾದವನು. ಯಮಸ್ವರೂಪನು. ಕಮಲದ ಎಸಳಿನಂತೆ ಕಣ್ಣುಗಳುಳ್ಳವನು. ಕಲಿಗಾಲದ ಕಲ್ಮಶವನ್ನು ನಾಶಗೊಳಿಸುವವನು. ಮಹಾಯುದ್ಧವನ್ನು ಎದುರಿಸುವವನು. ಮಹಾರಥಿಕನು. ಸೂಕ್ಷ್ಮಬುದ್ಧಿಯನ್ನು ಕರುಣಿಸುವವನು. ದೊಡ್ಡ ರಥವುಳ್ಳವನು. ಅತಿಯಾಗಿ ಸುಖಪಡುವವನು. ಭಕ್ತರ ಇಷ್ಟಾರ್ಥವನ್ನು ಸಲ್ಲಿಸುವವನು. ॥೨೭-೨೮॥

ಭಕ್ತರನ್ನು ಪ್ರೀತಿಸುವವನು. ಪ್ರಿಯರಾದವರಲ್ಲಿ ಪ್ರೇಮವಿಡುವವನು. ಶ್ರೇಷ್ಠನು. ಸರ್ವರಲ್ಲಿಯೂ ಪ್ರೀತಿಯುಳ್ಳವನು. ಸರ್ವರಿಗೂ ಗೆಳೆಯನು. ಗೌರೀದೇವಿಯ ಕೈಯಿಂದಲೇ ಲಾಲಿತವಾದ ಮುಖವುಳ್ಳವನು. ಕೃತ್ತಿಕಾದೇವಿಯರ (ಅಗ್ನಿಪತ್ನಿಯರ) ಸ್ತನ್ಯಪಾನದಲ್ಲಿ ಆತುರವಾದ ಆರು ಮುಖಗಳುಳ್ಳವನು. ಚಂದ್ರಶೇಖರನೆನಿಸಿದ ಮಹಾದೇವನ ಸುಂದರವಾದ ಅಂಗಗಳಲ್ಲಿ ವಿಹರಿಸುವ ಶಕ್ತಿಯುಳ್ಳವನು. ॥೨೯-೩೦॥

ಚಂದ್ರನನ್ನೇ ಹಿಡಿದೆಳೆಯುವಂತಹ ಕರಕಮಲಗಳುಳ್ಳ ಭುಜಗಳಿಂದ ವಿರಾಜಿಸುವವನು. ಈಶ್ವರನ ಕಣ್ಣುಗಳಿಗೆ ಆನಂದವನ್ನುಂಟುಮಾಡುವವನು. ಶರವಣದಲ್ಲಿ ಸೌಂದರ್ಯನಿಧಿಯು. ಗಣಪತಿಯೊಡನೆ ಸದಾ ಆಟವಾಡಿದವನು.

ಲಂಬೋದರಸಹಕ್ರೀಡಾಲಂಪಟಃ ಶರಸಂಭವಃ ।
ಅಮರೀನಯನಾಲೀಕ ಚಕೋರೀ ಪೂರ್ಣಚಂದ್ರಮಾಃ ॥೩೨॥

ಸರ್ವಾಂಗಸುಂದರಶ್ಶ್ರೀಶಃ ಶ್ರೀಕರಃ ಶ್ರೀಪ್ರದಶ್ಶಿವಃ ।
ವಲ್ಲೀಸೇನಾಪತಿರ್ವೀರೋ ವಕ್ತಾ ವಾಚಸ್ಪತಿರ್ವರಃ ॥೩೩॥

ಚಂದ್ರಚೂಡಶಿಖೀ ಪಿಂಛಶೇಖರೋ ಮುಕುಟೋಜ್ಜ್ವಲಃ ।
ಗುಡಾಕೇಶಃ ಸುವೃತ್ತೋರುಶಿರೋ ಮಂದಾರಶೇಖರಃ ॥೩೪॥

ಬಿಂಬಾಧರಃ ಕುಂದಧರೋ ಜಪಾಶೋಣಾಗ್ರತಾಲುಕಃ ।
ಷಡ್ಜಮಧ್ಯಮಗಾಂಧಾರ ತಂತ್ರೀ ಸುಮಧುರಸ್ವರಃ ॥೩೫॥

ಮೇಘಗಂಭೀರನಿರ್ಘೋಷಃ ಪ್ರಿಯವಾಕ್ಪ್ರೀತನಿರ್ಜರಃ ।
ಸ್ಮಿತವಕ್ತ್ರೋತ್ಪಲಾಭಾಕ್ಷಶ್ಚಾರುಗಂಭೀರವೀಕ್ಷಣಃ ॥೩೬॥

---

ಜನಿಸಿದವನು. ದೇವತಾಸ್ತ್ರೀಯರ ಕಣ್ಣುಗಳೆಂಬ ಚಕ್ರವಾಕಪಕ್ಷಿಗಳಿಗೆ ಪೂರ್ಣ ಚಂದ್ರನಂತೆ ಆನಂದಗೊಳಿಸುವವನು. ॥೩೧-೩೨॥

ಸರ್ವಾವಯವದಲ್ಲಿಯೂ ಸೌಂದರ್ಯವುಳ್ಳವನು. ಲಕ್ಷ್ಮೀಪತಿಯು. ಸಂಪತ್ತನ್ನುಂಟುಮಾಡುವವನು. ಮಂಗಳರೂಪನು. ವಲ್ಲೀದೇವಿಯ ಪತಿಯು. ವೀರನು, ವಕ್ತೃವು, ವಾಚಸ್ಪತಿಯು, ಶ್ರೇಷ್ಠನೆನಿಸಿದವನು. ಚಂದ್ರಶೇಖರನು. ನವಿಲುಗರಿಯನ್ನು ಕಿರೀಟದಲ್ಲಿ ಧರಿಸಿದವನು. ಕಿರೀಟದಿಂದ ಶೋಭಿಸುವವನು. ಸರ್ವವ್ಯಾಪಕವಾದ ಕೇಶಪಾಶವುಳ್ಳವನು. ದುಂಡಾದ ಮತ್ತು ವಿಶಾಲವಾದ ಶಿರಸ್ಸು, ಭುಜ ಇವುಗಳುಳ್ಳವನು. ಮಂದಾರಮಾಲೆಯನ್ನು ಶಿರಸ್ಸಿನಲ್ಲಿ ಧರಿಸಿರುವವನು. ॥೩೩-೩೪॥

ತೊಂಡೆಯಹಣ್ಣಿನಂತಿರುವ ತುಟಿಯುಳ್ಳವನು. ಕುಂದಪುಷ್ಪವನ್ನು ಧರಿಸಿರುವವನು. ದಾಸವಾಳದಹೂವಿನಂತೆ ಕೆಂಪಾದ ದವಡೆಯುಳ್ಳವನು. ಷಡ್ಜ, ಮಧ್ಯಮ, ಗಾಂಧಾರ ಇವುಗಳಂತೆ ಮಧುರವಾದ ಧ್ವನಿಯುಳ್ಳವನು. ಕಿವಿಯವರೆಗೂ ಹರಡಿರುವ ನೇತ್ರವುಳ್ಳವನು. ಕರ್ಣಾಭರಣದಿಂದ ಭೂಷಿತನಾದವನು. ಕರ್ಣಕುಂಡಲದಿಂದ ಸುಂದರವಾದ ಕಪೋಲವುಳ್ಳವನು. ಶಂಖದಂತಿರುವ ಕತ್ತುಳ್ಳವನು. ದೊಡ್ಡದಾದ ದವಡೆಯುಳ್ಳವನು. ॥೩೫-೩೬॥

ಕರ್ಣಾಂತದೀರ್ಘನಯನಃ ಕರ್ಣಭೂಷಣಭೂಷಿತಃ ।
ಸುಕುಂಡಲಶ್ಚಾರುಗಂಡಃ ಕಂಬುಗ್ರೀವೋ ಮಹಾಹನುಃ ॥೩೭॥

ಪೀನಾಂಗೋ ಗೂಢಜತ್ರುಶ್ಚ ಪೀನವೃತ್ತಭುಜಾವಲಿಃ ।
ರತ್ನಾಂಗೋ ರತ್ನಕೇಯೂರ ಕಂಕಣೋ ರತ್ನಭೂಷಿತಃ ॥೩೮॥

ಜ್ಯಾಕಿಣವಿಲಸದ್ವಾಮ ಪ್ರಕೋಷ್ಠವಲಯೋಜ್ಜ್ವಲಃ ।
ರೇಖಾಂಕುಶಧ್ವಜಛತ್ರಪಾಣಿಪದ್ಮಮಹಾಯುಧಃ ॥೩೯॥

ಸುರಲೋಕಾಭಯೋದ್ಯಂತ ಬಾಲಾರುಣಕರಾಂತರಃ ।
ಅಂಗುಲೀಯಕ ರತ್ನಾಂಶು ದ್ವಿಗುಣೋದ್ಯನ್ನಖಾಂಕುರಃ ॥೪೦॥

ಪೀನವಕ್ಷೋ ಮಹಾಹಾರೋ ನವರತ್ನವಿಭೂಷಿತಃ ।
ಹಿರಣ್ಯಗರ್ಭೋ ಹೇಮಾಂಗೋ ಹಿರಣ್ಯಕವಚೋ ಹರಃ ॥೪೧॥

ಹಿರಣ್ಮಯಶಿರಸ್ತ್ರಾಣೋ ಹಿರಣ್ಯಾಕ್ಷೋ ಹಿರಣ್ಯದಃ ।
ಹಿರಣ್ಯನಾಭಿಸ್ತ್ರಿವಲೀ ಲಲಿತೋದರ ಸುಂದರಃ ॥೪೨॥

---

ಮೇಘಗಂಭೀರಧ್ವನಿಯುಳ್ಳವನು. ಪ್ರಿಯವಾಗಿ ಮಾತನಾಡುವವನು. ದೇವತೆಗಳನ್ನು ತೃಪ್ತಿಪಡಿಸಿದವನು. ಮುಗುಳ್ನಗೆಯ ಮುಖವುಳ್ಳವನು. ಕಮಲ ದಂತೆ ಕಣ್ಣುಳ್ಳವನು. ಸುಂದರವಾದ ಮತ್ತು ಗಂಭೀರವಾದ ದೃಷ್ಟಿಯುಳ್ಳವನು. ದಪ್ಪವಾದ ದೇಹವುಳ್ಳವನು. ಅಡಗಿದ ಮೂಳೆಗಳುಳ್ಳವನು. ದಪ್ಪವಾದ ಮತ್ತು ದುಂಡಾದ ಭುಜಗಳುಳ್ಳವನು. ರತ್ನದಂತೆ ಕಠಿನವಾದ ದೇಹವುಳ್ಳವನು. ರತ್ನಾಭರಣ ಗಳಿಂದಲೂ ಕೈಬಳೆಯಿಂದಲೂ ಅಲಂಕೃತನಾದವನು. ||೩೭-೩೮||

ಧನುಸ್ಸಿನ ಮೌರ್ವಿಯನ್ನು ಎಳೆಯುವುದರಿಂದ ಜಡ್ಡುಗಟ್ಟಿದ ಅಂಗೈಯುಳ್ಳ ವನು. ಅಂಕುಶ, ಧ್ವಜ, ಛತ್ರಿ, ಪದ್ಮ ಇವೇ ಮೊದಲಾದ ಆಕಾರದ ಗೆರೆಗಳುಳ್ಳ ವನು. ದೇವಲೋಕದವರಿಗೆ ಅಭಯವನ್ನು ನೀಡುವ ಕೆಂಪಾದ ಕರಕಮಲ ವುಳ್ಳವನು. ಉಂಗುರದಲ್ಲಿರುವ ರತ್ನಕಾಂತಿಯಿಂದ ದ್ವಿಗುಣಿತವಾದ ಉಗುರಿನ ಶೋಭೆಯುಳ್ಳವನು. ||೩೯-೪೦||

ದಪ್ಪವಾದ ಎದೆಯುಳ್ಳವನು. ದೊಡ್ಡದಾದ ಹಾರವುಳ್ಳವನು. ನವರತ್ನ ಗಳಿಂದ ವಿಭೂಷಿತನು. ಹಿರಣ್ಯವನ್ನೇ ಗರ್ಭದಲ್ಲಿ ಉಳ್ಳವನು. ಸುವರ್ಣದಂತೆ

ಸುವರ್ಣಸೂತ್ರ ವಿಲಸದ್ವಿಶಂಕಟೆಕಟೀತಟಃ ।
ಪೀತಾಂಬರಧರೋ ಮುಕ್ತಾ ಮೇಖಲೀವೃತಮಧ್ಯಮಃ ॥೪೩॥

ಪೀವರಾ ಲೋಮವೃತ್ತೋದ್ಯತ್ಸುಜಾನುಃ ಸುಪ್ರಗುಲ್ಫಕಃ ।
ಶಂಖಚಕ್ರಾಬ್ಜ ಕುಲಿಶಧ್ವಜರೇಖಾಪದಾಂಬುಜಃ ॥೪೪॥

ನವರತ್ನೋಜ್ಜ್ವಲದ್ಭಾಸ ಕಟಕೋಂಗುಲಿಭೂಷಣಃ ।
ಸುರೇಂದ್ರಮುಕುಟಪ್ರೋದ್ಯನ್ಮಣಿರಂಜಿತ ಪಾದುಕಃ ॥೪೫॥

ಪೂಜ್ಯಾಂಘ್ರಿಶ್ಚಾರುನಖರೋ ಸುರಾಲಿನತಪಾದುಕಃ ।
ಪಾರ್ವತೀಪತಿ ಕಮಲ ಪರಿಮೃಷ್ಟಪದಾಂಬುಜಃ ॥೪೬॥

ಮತ್ತಮಾತಂಗಗಮನೋ ಮಾನೋ ಮಾನ್ಯಗುಣಾಕರಃ ।
ಕ್ರೌಂಚದಾರಣವಕ್ಷೋಜಕಿಣಕ್ಷಣ ವಿತಾನಕೃತ್ ॥೪೭॥

---

ಹೊಳೆಯುವ ಅಂಗವುಳ್ಳವನು. ಹಿರಣ್ಯವನ್ನೇ ಕವಚವನ್ನಾಗಿ ಮಾಡಿಕೊಂಡಿರುವವನು. ಹಿರಣ್ಮಯವಾದ ಕಿರೀಟವುಳ್ಳವನು. ಹಿರಣ್ಯರೂಪವಾದ ಕಣ್ಣುಗಳುಳ್ಳವನು. ಹಿರಣ್ಯವನ್ನೇ ಪ್ರದಾನಮಾಡುವವನು. ಹಿರಣ್ಯದಿಂದ ತುಂಬಿದ ನಾಭಿಯುಳ್ಳವನು. ಲಲಿತವಾದ ತ್ರಿವಳಿಯಿಂದ ಶೋಭಿಸುವ ಉದರವುಳ್ಳವನು. ॥೪೧-೪೨॥

ಚಿನ್ನದ ಉಡಿದಾರದಿಂದ ಶೋಭಿಸುವ ಸೊಂಟವುಳ್ಳವನು. ಪೀತಾಂಬರದ ಮೇಲೆ ಬಿಗಿದು ನಿಂತಿರುವ ಸೊಂಟದ ಪಟ್ಟಿಯಿಂದ ವಿರಾಜಿಸುವ ಮಧ್ಯಭಾಗವುಳ್ಳವನು. ದಪ್ಪವಾಗಿ ರೋಮಗಳಿಂದ ತುಂಬಿದ ಮೊಣಕಾಲುಳ್ಳವನು. ಶಂಖ, ಚಕ್ರ, ಕಮಲ, ವಜ್ರಾಯುಧ, ಧ್ವಜ ಇವೇ ಮೊದಲಾದ ರೇಖೆಗಳಿಂದ ಕೂಡಿರುವ ಪಾದಕಮಲವುಳ್ಳವನು. ॥೪೩-೪೪॥

ನವರತ್ನಮಯವಾದ ಕಾಲುಂಗುರಗಳಿಂದ ಶೋಭಿಸುವ ಪಾದಗಳುಳ್ಳವನು. ದೇವೇಂದ್ರನ ಕಿರೀಟದಲ್ಲಿರುವ ನವರತ್ನಗಳಿಂದ ಶೋಭಿಸುವ ಪಾದುಕೆಗಳುಳ್ಳವನು. ಪೂಜ್ಯವಾದ ಪಾದಗಳುಳ್ಳವನು. ಸುಂದರವಾದ ಉಗುರುಗಳುಳ್ಳವನು. ದೇವತೆಗಳ ಗುಂಪಿನಿಂದ ನಮಸ್ಕಾರ ಹೊಂದಲ್ಪಟ್ಟ ಪಾದುಕೆಗಳುಳ್ಳವನು. ಪಾರ್ವತಿಯ ಕರಕಮಲದಿಂದ ಲಾಲಿಸಲ್ಪಟ್ಟ ಪಾದಕಮಲಗಳುಳ್ಳವನು. ॥೪೫-೪೬॥

ಮದ್ದಾನೆಯಂತೆ ನಡಗೆಯುಳ್ಳವನು. ಮಾನವುಳ್ಳವನು. ಮಾನ್ಯಗುಣಗಳಿಗೆ ನಿಧಿಯಂತಿರುವವನು. ಕ್ರೌಂಚಪರ್ವತವನ್ನು ಭೇದಿಸುವಾಗ ಎದೆಯ ಮೇಲಿನ

ಸುಗತೋ ದುರ್ಗಮೋ ದುರ್ಗೋ ದುರಾರೋಹೋರಿದುಸ್ಸಹಃ ।
ಸುಭಗಸ್ಸುಮುಖಸ್ಸೂರ್ಯಃ ಸೂರ್ಯಮಂಡಲಮಧ್ಯಗಃ ॥೪೮॥

ಸೃಷ್ಟಿಂಕರೋಪಸಂಹೃಷ್ಟಃ ಸೃಷ್ಟಿಸಂರಕ್ಷಿತಾಖಿಲಃ ।
ಜಗತ್ಸ್ರಷ್ಟಾ ಜಗದ್ಭರ್ಗೋ ಜಗತ್ಸಂಹಾರಕಾರಕಃ ॥೪೯॥

ಸ್ಥಾವರೋ ಜಂಗಮೋ ಜೇತಾ ವಿಜಯೋ ವಿಜಯಪ್ರದಃ ।
ಜಯಶೀಲೋ ಜಿತಾರಾತಿರ್ಜಿತಮಾನೋ ಜಿತಾಸುರಃ ॥೫೦॥

ಜಿತಕಾಮೋ ಜಿತಕ್ರೋಧೋ ಜಿತಮೋಹಮದೋ ಯುವಾ ।
ಕಾಮದಃ ಕಾಮಭೃತ್ಕಾಮೀ ಕಾಮಿಕಾದಿಕೃತಾಗಮಃ ॥೫೧॥

ಜಾತಕಲ್ಪಃ ಕಲಿಧ್ವಂಸೀ ಕಲ್ಹಾರಕುಸುಮಪ್ರಿಯಃ ।
ರಾಮೋ ರಮಯಿತಾ ರಮ್ಯೋ ರಮಣೀಜನವಲ್ಲಭಃ ॥೫೨॥

---

ಧನುಸ್ಸಿನ ಭಾರದಿಂದ ಜಡ್ಡುಗಟ್ಟಿದ ಎದೆಯುಳ್ಳವನು. ಸುಲಭವಾಗಿ ಪ್ರಯಾಣ ಮಾಡುವವನು. ದುಃಖದಿಂದ ನೋಡಲು ಸಾಧ್ಯನು. ಕಠಿನಸ್ವಭಾವದವನು. ಶತ್ರುಗಳಿಂದ ನೋಡಲು ಅಸಾಧ್ಯನಾದವನು. ಶತ್ರುಗಳಿಗೆ ಸುಲಭನಲ್ಲದವನು. ಸುಂದರನು. ಸೌಮ್ಯಮುಖವುಳ್ಳವನು. ಸೂರ್ಯರೂಪನು. ಸೂರ್ಯಮಂಡಲಮಧ್ಯ ವರ್ತಿಯು. ॥೪೭-೪೮॥

ಸೃಷ್ಟಿಮಾಡುವವನು. ಸಂತೋಷವುಳ್ಳವನು. ಸೃಷ್ಟವಾದ ವಸ್ತುಗಳನ್ನೆಲ್ಲಾ ರಕ್ಷಿಸುವವನು. ಸ್ಥಿರನಾದವನು. ಚಲನಾದವನು. ಜಯಶೀಲನು. ವಿಜಯ ರೂಪಿಯು. ವಿಜಯವನ್ನು ಕೊಡುವವನು. ಜಯಶಾಲಿಯು. ಶತ್ರುಗಳನ್ನು ಜಯಿಸುವವನು. ಹೆಚ್ಚಾದ ಕೋಪವುಳ್ಳವನು. ರಾಕ್ಷಸರನ್ನು ಗೆದ್ದವನು. ॥೪೯-೫೦॥

ಕಾಮನನ್ನು ಜಯಿಸಿದವನು. ಕೋಪವನ್ನು ಗೆದ್ದವನು. ಮೋಹಮದ ಗಳನ್ನು ಬಿಟ್ಟವನು. ಯುವಕನು. ಇಷ್ಟಾರ್ಥಗಳನ್ನು ಕರುಣಿಸುವವನು. ಮನ್ಮಥ ನನ್ನು ರಕ್ಷಿಸಿದವನು. ಸುಖಿಯು. ಕಾಮಿಕವೇ ಮೊದಲಾದ ಆಗಮಶಾಸ್ತ್ರಗಳನ್ನು ರಚಿಸಿದವನು. ಜನ್ಮತಾಳ್ದವನಂತೆ ತೋರುವವನು. ಕಲಿಧರ್ಮವನ್ನು ನಾಶಗೊಳಿಸಿ ದವನು. ಕಲ್ಹಾರಪುಷ್ಪದಲ್ಲಿ ಹೆಚ್ಚು ಆಸಕ್ತಿಯುಳ್ಳವನು. ಯೋಗಿಗಳ ಮನಸ್ಸನ್ನು ಆಹ್ಲಾದಗೊಳಿಸುವವನು. ಸಂತೋಷಪಡಿಸುವವನು. ಸುಂದರನು. ಸ್ತ್ರೀಜನರಿಗೆ ಮನೋಹರನಾದವನು. ॥೫೧-೫೨॥

ರಸಜ್ಞೋ ರಸಮೂರ್ತಿಶ್ಚ ರಸೋ ನವರಸಾತ್ಮಕಃ ।
ರತ್ಯಾತ್ಮಾ ರಸಿಕಾತ್ಮಾ ಚ ರಾಸಕ್ರೀಡಾಪರೋ ರತಿಃ ॥೫೩॥

ಕೋಟಿಸೂರ್ಯ ಪ್ರತೀಕಾಶಃ ಸೋಮಸೂರ್ಯಾಗ್ನಿಲೋಚನಃ ।
ಕಲಾಭಿಜ್ಞಃ ಕಲಾರೂಪಃ ಕಲಾವಿತ್ಸಕಲಪ್ರಭುಃ ॥೫೪॥

ಬಿಂದುನಾದಕಲಾಮೂರ್ತಿಃ ಕಾಲಾತೀತಃ ಕ್ಷರಾಕ್ಷರಃ ।
ಮಾತ್ರಾ ಸ್ವರಾಕೃತಿಶ್ಚೈಕ ಏಕಮಾತ್ರೋ ದ್ವಿಮಾತ್ರಿಕಃ ॥೫೫॥

ತ್ರಿಮಾತ್ರಕಶ್ಚತುರ್ಮಾತ್ರಾ ವೃತ್ತ ಸಂಧ್ಯಾದಿ ಮಾತ್ರಕಃ ।
ವ್ಯಂಜನಾತ್ಮಾ ವಿಯುಕ್ತಾತ್ಮಾ ಯುಕ್ತೋ ಮುಕ್ತಿಪ್ರದೋ ಗುರುಃ ॥೫೬॥

ವಿಸರ್ಜನೀಯೋನುಸ್ವಾರಃ ಸರ್ವವರ್ಣತನುರ್ಮಹತ್ ।
ಅಕಾರಾತ್ಮಾ ಉಕಾರಾತ್ಮಾ ಮಕಾರಾತ್ಮಾ ತ್ರಿವರ್ಗಕಃ ॥೫೭॥

---

ರಸವನ್ನು ತಿಳಿದವನು ರಸಸ್ವರೂಪನು. ರಸಮೂರ್ತಿಯು ನವರಸಾತ್ಮಕನು. ಪ್ರೀತಿಯುಕ್ತನು. ರಸಿಕನೆನಿಸಿದವನು. ರಾಸಕ್ರೀಡೆಯಲ್ಲಿ ನಿರತನಾದವನು. ರತಿ ರೂಪನು. ಕೋಟಿಸೂರ್ಯರಂತೆ ಹೊಳೆಯುವವನು. ಸೂರ್ಯ, ಚಂದ್ರ, ಅಗ್ನಿ ಇವರನ್ನೇ ಕಣ್ಣುಗಳನ್ನಾಗಿಯುಳ್ಳವನು. ಕಲೆಯಲ್ಲಿ ತಿಳಿವಳಿಕೆಯುಳ್ಳವನು. ಕಲಾರೂಪನು. ಕಲಾವಿದನು. ಕಲಾವಿತ್ತುಗಳ ರಕ್ಷಕನು. ॥೫೩-೫೪॥

ನಾದಬಿಂದು ಕಲಾರೂಪನು. ಕಾಲನಿಗೆ ಮಿತಿಮೀರಿದವನು. ನಾಶವಾಗುವ ಮತ್ತು ನಾಶವಾಗದ ವಸ್ತುರೂಪನು. ಮಾತ್ರಾಕಾಲ, ಸ್ವರ, ಏತದ್ರೂಪಿಯು. ಏಕ ಮಾತ್ರಾತ್ಮಕನು. ಮಾತ್ರಾದ್ವಯಾತ್ಮಕನು. ಮೂರುಮಾತ್ರಾಕಾಲದವನು. ನಾಲ್ಕು ಮಾತ್ರೆಗಳುಳ್ಳವನು. ವೃತ್ತರೂಪಿಯು. ಸಂಧ್ಯಾರೂಪನು. ವ್ಯಂಜನದಂತಿರುವವನು. ಯಾವ ವಸ್ತುವಿನಲ್ಲಿಯೂ ನಿಲ್ಲದವನು. ಎಲ್ಲವಸ್ತುಗಳನ್ನೂ ಅಧೀನದಲ್ಲಿಟ್ಟುಕೊಳ್ಳು ವವನು. ಮುಕ್ತಿಯನ್ನು ಕರುಣಿಸುವವನು. ಗುರುರೂಪನು. ॥೫೫-೫೬॥

ವಿಸರ್ಗರೂಪಿಯು. ಅನುಸ್ವಾರರೂಪಿಯು. ಸರ್ವವರ್ಣಸ್ವರೂಪನು. ಮಹ ದಾಕಾರನು. ಅಕಾರಾತ್ಮಕನು. ಉಕಾರರೂಪನು. ಮಕಾರಾತ್ಮಕನು. ತ್ರಿವರ್ಗಾತ್ಮ ಕವಾದ ಪ್ರಣವರೂಪಿಯು. ಓಂಕಾರಾತ್ಮಕನು. ವಷಟ್ಕಾರರೂಪನು. ಸ್ವಾಹಾಕಾ ರನು. ಸ್ವಧಾಕಾರನು. ಚರ್ಮರಹಿತನು. ಸ್ಥಿರರೂಪಿಯು ಹವೀರೂಪನು, ಹೋಮ

ಓಂಕಾರಶ್ಚ ವಟಟ್ಕಾರಃ ಸ್ವಾಹಾಕಾರ ಸ್ಸ್ವಧಾಕೃತಿಃ ।
ಆಕೃತ್ತಿರ್ಭವನೋ ಹವ್ಯಹೋತಾಧ್ವರ್ಯುರ್ಮಹಾಹವಿಃ ॥೫೮॥

ಬ್ರಹ್ಮೋದ್ಗಾತಾ ಸದಸ್ಯಾರ್ಥ ಬರ್ಹಿರಿಧ್ಮಃ ಸಮಿಚ್ಚರುಃ ।
ಗವ್ಯಃ ಪಶುಃ ಪುರೋಡಾಶಶ್ಚಾಮಿಕ್ಷಾ ವಾಜಿ ವಾಜಿನಃ ॥೫೯॥

ಪವನಃ ಪಾವನಃ ಪೂತಃ ಪವಮಾನಃ ಪರಾಕೃತಿಃ ।
ಪವಿತ್ರಃ ಪರಿಧಿಃ ಪೂರ್ಣಪಾತ್ರಃ ಪೂತಿರಥೇಂಧನಃ ॥೬೦॥

ವಿಶೋಧನಃ ಪಶುಪತಿಃ ಪಶುಪಾಶವಿಮೋಚನಃ ।
ಪಾಕಯಜ್ಞೋ ಮಹಾಯಜ್ಞೋ ಯಜ್ಞೋ ಯಜ್ಞಪತಿರ್ಯಜುಃ ॥೬೧॥

ಯಜ್ಞಾಂಗೋ ಯಜ್ಞಗಮ್ಯಶ್ಚ ಯಜ್ಞೋ ಯಜ್ಞಫಲಪ್ರದಃ।
ಯಜ್ಞಾಂಗಭೂದ್ಯಜ್ಞ ಭೂಮಿರ್ಯಜ್ಞಃ ಶ್ರೀರ್ಯಜ್ಞವಾಹನಃ ॥೬೨॥

---

ಕರ್ತೃವು. ಅಧ್ವರ್ಯುರೂಪನು. ಮಹಾ ಹವೀರೂಪನು. ಬ್ರಹ್ಮರೂಪನು. ಉದ್ಗಾತೃವು. ಸದಸ್ಯನಂತಿರುವವನು. ಅರ್ಥಾತ್ಮಕನು. ಬರ್ಹಿಸ್ಸು, ಇಧ್ಮ ಮುಂತಾದ ಯಜ್ಞಗಳ ಉಪಕರಣಾತ್ಮಕನು. ಸಮಿತ್, ಚರು ಎಂಬ ಹವಿಸ್ಸಿನರೂಪನು.॥೫೭-೫೮॥

ಗೋವಿಕಾರ ದ್ರವ್ಯರೂಪನು. ಪಶುರೂಪಿಯು. ಪುರೋಡಾಶ ಸ್ವರೂಪಿಯು. ಆಮೀಕ್ಷಾ, ವಾಜಿ ಮುಂತಾದ ಅಶ್ವಮೇಧ ಯಾಗಸ್ವರೂಪಿಯು. ವಾಯುರೂಪಿಯು. ಪವಿತ್ರನೆನಿಸಿದವನು. ಸ್ವಯಂಪರಿಶುದ್ಧನು. ಪವಮಾನರೂಪನು. ಶ್ರೇಷ್ಠವಾದ ಆಕಾರವುಳ್ಳವನು. ಪವಿತ್ರನು. ಪರಿಧಿಯಂತಿರುವವನು. ಪೂರ್ಣಪಾತ್ರರೂಪನು. ವಾಯುವನ್ನೇ ಆಹಾರವನ್ನಾಗಿ ಉಳ್ಳವನು. ॥೫೯-೬೦॥

ಜಗತ್ತನ್ನೆಲ್ಲಾ ಹುಡುಕುವವನು. ಪಶುಗಳಿಗೆ (ಅಜ್ಞಾನಿಗಳಿಗೆ) ಒಡೆಯನು. ಅಜ್ಞಾನಿಗಳ ಅಜ್ಞಾನವನ್ನು ಹೋಗಲಾಡಿಸುವವನು. ಪಾಕಯಜ್ಞ, ಮಹಾಯಜ್ಞ, ಇತರ ಯಜ್ಞಗಳು ಇವೆಲ್ಲಕ್ಕೂ ಅಧಿಪತಿಯು. ಸಾವಿರ ತೋಳುಗಳುಳ್ಳವನು. ವಿಶ್ವರೂಪಿಯು. ಸಾವಿರ ಕಣ್ಣುಗಳುಳ್ಳವನು. ಸಹಸ್ರ ಪಾದಗಳುಳ್ಳವನು. ಯಜ್ಞಗಳಿಗೆ ಮುಖ್ಯ ಸಾಧನನಾಗಿರುವವನು. ಯಜ್ಞದಿಂದ ಊಹಿಸಲ್ಪಡುವವನು. ಯಾಗ ನಡೆಸುವವನು. ಯಜ್ಞದ ಫಲವನ್ನು ಕೊಡುವವನು. ಯಜ್ಞಕ್ಕೆ ಸಾಧನವಾದ ಭೂಮಿಯು. ಯಜ್ಞಭೂಮಿಯು. ಯಜ್ಞರೂಪಿಯು. ಯಜ್ಞವಾಹನನು. ॥೬೧-೬೨॥

ಯಜ್ಞಾಶ್ಚ ಯಜ್ಞವಿಧ್ವಂಸೀ ಯಜ್ಞೇಶೋ ಯಜ್ಞರಕ್ಷಕಃ ।
ಸಹಸ್ರಬಾಹುರ್ವಿಶ್ವಾತ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥೬೩॥

ಸಹಸ್ರವದನೋ ನಿತ್ಯಃ ಸಹಸ್ರಾತ್ಮಾ ವಿರಾಟ್ ಸ್ವರಾಟ್ ।
ಸಹಸ್ರಶೀರ್ಷೋ ವಿಶ್ವಶ್ಚ ತೈಜಸಃ ಪ್ರಾಜ್ಞೋ ಹ್ಯಥಾತ್ಮವಾನ್ ॥೬೪॥

ಅಣುರ್ಬೃಹತ್ಕೃಶಃ ಸ್ಥೂಲೋ ದೀರ್ಘೋ ಹ್ರಸ್ವೋ ಲಘುರ್ಗುರುಃ ।
ಸೂಕ್ಷ್ಮಸ್ಸೂಕ್ಷ್ಮತರೋನಂತೋ ವಿಶ್ವರೂಪೋ ನಿರಂಜನಃ ॥೬೫॥

ಅಮೃತೇಶೋಮೃತಾಹಾರೋಮೃತದಾತಾಮೃತಾಂಗವಾನ್ ।
ಅಹೋರೂಪ ಸ್ತ್ರಿಯಾಮಾ ಚ ಸಂಧ್ಯಾರೂಪೋ ದಿನಾತ್ಮಕಃ ॥೬೬॥

ಮುಹೂರ್ತೋ ಘಟಿಕಾರೂಪೋ ಯುವರೂಪೋ ಯುವಾತ್ಮಕಃ ।
ಪೂರ್ವಾಹ್ಣರೂಪೋ ಮಧ್ಯಾಹ್ನರೂಪಃ ಸಾಯಾಹ್ನರೂಪಕಃ ॥೬೭॥

---

ಯಜ್ಞರೂಪಿಯು. ಯಜ್ಞನಾಶಕನು. ಯಜ್ಞಾಧಿಪತಿಯು. ಯಜ್ಞವನ್ನು ರಕ್ಷಿಸುವವನು. ಸಾವಿರ ತೋಳು, ಕಣ್ಣು, ಪಾದಗಳು, ಮುಖಗಳು, ಆತ್ಮಗಳು ಇವುಗಳಿಂದ ಕೂಡಿ ವಿರಾಜಿಸುವವನು. ನಿತ್ಯರೂಪನು. ವಿರಾಟ್ ಸ್ವರೂಪನು. ಸಹಸ್ರ ಶಿರಸ್ಸುಳ್ಳವನು. ವಿಶ್ವರೂಪಿಯು. ತೇಜೋರೂಪಿಯು. ವಿಶೇಷವಾದ ತಿಳಿವಳಿಕೆಯುಳ್ಳವನು. ಆತ್ಮರೂಪಿಯು. ॥೬೩-೬೪॥

ಅಣುರೂಪಿಯು. ಬೃಹದ್ರೂಪಿಯು. ಕೃಶದೇಹವುಳ್ಳವನು. ಸ್ಥೂಲದೇಹವುಳ್ಳವನು. ದೀರ್ಘಾಕಾರನು. ಹ್ರಸ್ವಾಕಾರನು. ಲಘುರೂಪಿಯು. ಗುರುವಾಗಿ ತೋರುವವನು. ಸೂಕ್ಷ್ಮರೂಪಿಯು. ಅತ್ಯಂತ ಸೂಕ್ಷ್ಮರೂಪನು. ಅಂತವಿಲ್ಲದವನು. ಪ್ರಪಂಚರೂಪಿಯು. ಪಾಪರಹಿತನು. ಅಮೃತಕ್ಕೆ ಒಡೆಯನು. ಅಮೃತವನ್ನೇ ಪಾನಮಾಡುವವನು. ಅಮೃತವನ್ನು ಕರುಣಿಸುವವನು. ಅಮೃತವಾದ ಅಂಗವುಳ್ಳವನು. ಹಗಲಿನಂತಿರುವವನು. ರಾತ್ರಿರೂಪನು. ಸಂಧ್ಯಾರೂಪನು. ದಿನಾತ್ಮಕನು. ಮುಹೂರ್ತರೂಪಿಯು. ಗಳಿಗೆಯ ಸ್ವರೂಪನು. ಯುವರೂಪನು. ಯುವಾತ್ಮಕನು. ॥೬೫-೬೬॥

ಪೂರ್ವಾಹ್ಣ, ಮಧ್ಯಾಹ್ನ, ಸಾಯಂಕಾಲ, ಅಪರಾಹ್ಣ ಮುಂತಾದ ದಿನವಿಭಾಗಾತ್ಮಕನು. ಅತ್ಯಂತ ನಿಪುಣನು. ಯಜ್ಞರೂಪನು. ಸದಾ ಜಾಗ್ರದವಸ್ಥೆಯಲ್ಲಿರು

ಅಪರಾಹ್ನೋತಿನಿಪುಣಃ ಸವನಾತ್ಮಾ ಪ್ರಜಾಗರಃ ।
ವಂದ್ಯೋ ವೇದಯಿತಾ ವೇದ್ಯೋ ವೇದದ್ರಷ್ಟಾ ವಿದಾಂವರಃ ॥೧೮॥

ನಿಯಮುಸ್ಸತ್ಯಸಂಧಶ್ಚ ವಿದ್ವಾನ್ ವಿದ್ವಜ್ಜನಪ್ರಿಯಃ ।
ವಿಶ್ವಗೋಪ್ತಾ ವಿಶ್ವಭೋಕ್ತಾ ವಿಶ್ವಕೃದ್ವಿಶ್ವಭೇಷಜಃ ॥೧೯॥

ವಿಶ್ವಂಭರೋ ವಿಶ್ವಪತಿರ್ವಿಶ್ವೇಶೋ ವಿಶ್ವತೋಮುಖಃ ।
ವಿಶ್ವಸಾಕ್ಷಿರ್ವಿಶ್ವಹಂತಾ ವೀರೋ ವಿಶ್ವಂಭರಾಧಿಪಃ ॥೨೦॥

ವೀರಬಾಹುರ್ವೀರಹಂತಾ ವೀರಾಗ್ರ್ಯೋ ವೀರಸೈನಿಕಃ ।
ವೀರವಾದಪ್ರಿಯಃ ಶೂರಃ ಶೂರಸೇನಃ ಸುರಾಧಿಪಃ ॥೨೧॥

ಶೂರಪದ್ಮಾಸುರದ್ವೇಷೀ ತಾರಕಾಸುರಭಂಜನಃ ।
ತಾರಾಧಿಪಸ್ತಾರಹಾರಃ ತಾರಹಂತಾ ಸುರಾರ್ಚಿತಃ . ॥೨೨॥

---

ವವನು. ವಂದನೆಗೆ ಯೋಗ್ಯನು. ವಿಷಯವನ್ನು ತಿಳಿಯಪಡಿಸುವವನು. ಸರ್ವರಿಗೂ ತಿಳಿಯುವ ಸ್ವರೂಪವುಳ್ಳವನು. ವೇದಗಳಿಗೆ ಗೋಚರನಾಗುವವನು. ಜ್ಞಾನಿಗಳಿಗೆ ಶ್ರೇಷ್ಠನೆನಿಸಿದವನು. ॥೧೭-೧೮॥

ನಿಯಮರೂಪಿಯು, ಸತ್ಯಸಂಧನು, ವಿದ್ವಾಂಸನು, ವಿದ್ವಾಂಸರಿಗೆ ಪ್ರಿಯ ನಾದವನು, ವಿಶ್ವವನ್ನು ರಕ್ಷಿಸುವವನು. ವಿಶ್ವವನ್ನೇ ನುಂಗುವವನು. ಪ್ರಪಂಚ ವನ್ನು ಸೃಷ್ಟಿಸುವವನು. ವಿಶ್ವಕ್ಕೇ ವೈದ್ಯನಂತಿರುವವನು. ಪ್ರಪಂಚವನ್ನೇ ಧರಿಸಿ ರುವವನು. ವಿಶ್ವಕ್ಕೇ ಒಡೆಯನು. ವಿಶ್ವಾಧಿಪತಿಯು. ಸರ್ವತ್ರ ಮುಖವುಳ್ಳವನು. ಪ್ರಪಂಚವನ್ನೇ ನೋಡುತ್ತಿರುವವನು. ಪ್ರಪಂಚವನ್ನು ಕೊಲ್ಲುವವನು. ವೀರನಾದ ವನು. ವಿಷ್ಣುವಿಗೂ ಅಧಿಪನೆನಿಸಿದವನು ॥೧೯-೨೦॥

ವೀರನಿಗಿರುವ ತೋಳುಗಳುಳ್ಳವನು. ವೀರರನ್ನು ಕೊಲ್ಲುವವನು. ವೀರರಿಗೆ ಮುಂದಾಳಾದವನು. ವೀರಸೈನಿಕರುಳ್ಳವನು. ವೀರವಾಣಿಯಲ್ಲಿ ಪ್ರೀತಿಯುಳ್ಳವನು. ಶೂರನು. ಶೂರಸೇನನು. ಸುರರಿಗೆ ಒಡೆಯನು. ಶೂರ, ಪದ್ಮ ಮುಂತಾದ ರಾಕ್ಷಸ ರಿಗೆ ದ್ವೇಷಿಯು. ತಾರಕಾಸುರರನ್ನು ನಾಶಗೊಳಿಸಿದವನು. ನಕ್ಷತ್ರಗಳಿಗೆ ಅಧಿಪತಿ ಯಂತಿರುವವನು. ನಕ್ಷತ್ರಗಳನ್ನೇ ಹಾರವನ್ನಾಗಿ ಉಳ್ಳವನು. ತಾರಕಾಸುರರನ್ನು ಕೊಂದವನು, ಸಮಸ್ತ ದೇವತೆಗಳಿಂದಲೂ ಪೂಜಿಸಲ್ಪಟ್ಟವನು. ॥೨೧-೨೨॥

ಶೂರವಾನ್ ಶರಸಂಭೂತಿಃ ಶಕ್ತಃ ಶರವಣೋದ್ಭವಃ ।
ಶಾಂಭವಶ್ಶಾಂಕರಶ್ಶಂಭುಃ ಸಾಧುಸ್ಸಾಧುಜನಪ್ರಿಯಃ ॥೭೩॥

ಸಾರಂಗಸ್ಸಾಗರಸ್ಸರ್ವಃ ಶರ್ವಃ ಸರ್ವಪ್ರಿಯಃ ಸ್ವರಾಟ್ ।
ಗಂಗಾಧರೋತಿಗಂಭೀರೋ ಗಂಭೀರಹೃದಯೋಽನಘಃ ॥೭೪॥

ಅನೋಘಘೋಷೋ ವಿಕ್ರಮ್ಯಃ ಶಕ್ತಿಭೂಃ ಶಕ್ರಪೂಜಿತಃ ।
ಚಕ್ರಪಾಣಿಶ್ಚಕ್ರಪತಿಶ್ಚಕ್ರವಾಲಾಂತಭೂಪತಿಃ ॥೭೫॥

ಸಾರ್ವಭೌಮಃ ಸುರಪತಿಃ ಸರ್ವಲೋಕಾಭಿರಕ್ಷಿತಃ ।
ಚಿದ್ರೂಪಃ ಸತ್ಯಸಂಕಲ್ಪಃ ಸತ್ಯಃ ಸತ್ಯವತಾಂ ವರಃ ॥೭೬॥

ಸತ್ಯಪ್ರಿಯಸ್ಸತ್ಯಗತಿಃ ಸತ್ಯಲೋಕಜನಪ್ರಿಯಃ ।
ಭೂತೋ ಭವ್ಯೋ ಭೂತನಾಥೋ ಭೂತಭವ್ಯಭವತ್ಪ್ರಭುಃ ॥೭೭॥

---

ಶೂರನು. ಶರವಣದಲ್ಲಿ ಜನಿಸಿದವನು. ಶಕ್ತನು. ಶರವಣದಲ್ಲಿಯೇ ಆವಿರ್ಭವಿಸಿದವನು. ಶಂಭುಪುತ್ರನು. ಶಾಂಕರನು. ಶಂಭುರೂಪಿಯು. ಸತ್ಪುರುಷನು. ಸತ್ಪುರುಷರನ್ನು ವಿಶೇಷವಾಗಿ ಪ್ರೀತಿಸುವವನು. ಸಾರವನ್ನು ಹೊಂದುವವನು. ಸಮುದ್ರರೂಪಿಯು. ಸರ್ವರೂಪಿಯು. ಸುಖಪ್ರದನು. ಸರ್ವರಿಗೂ ಪ್ರಿಯನಾದವನು. ಚಕ್ರವರ್ತಿರೂಪನು. ಗಂಗಾಧರನು. ಅತ್ಯಂತಗಂಭೀರನು. ಗಂಭೀರವಾದ ಮನಸ್ಸುಳ್ಳವನು. ಪಾಪರಹಿತನು. ॥೭೩-೭೪॥

ವ್ಯರ್ಥವಿಲ್ಲದ ಧ್ವನಿಯುಳ್ಳವನು. ವಿಕ್ರಮವುಳ್ಳವನು. ಶಿವಶಕ್ತಿಯಿಂದ ಜನಿಸಿದವನು. ಇಂದ್ರನಿಂದಲೂ ಪೂಜಿತನು. ಚಕ್ರವನ್ನು ಧರಿಸಿದವನು. ಚಕ್ರಗಳಿಗೆ ಒಡೆಯನು. ಚಕ್ರವಾಲಾಂತರ್ಗತನಾದ ಚಕ್ರವರ್ತಿಯು. ಸರ್ವಭೂಮಿಗೂ ಒಡೆಯನು. ದೇವತೆಗಳಿಗೆ ಪತಿಯು. ಸರ್ವಲೋಕಗಳಿಂದಲೂ ರಕ್ಷಿತನಾದವನು. ಜ್ಞಾನರೂಪಿಯು. ಸತ್ಯಸಂಕಲ್ಪವುಳ್ಳವನು. ಸತ್ಯಸ್ವರೂಪನು. ಸತ್ಯವಂತರಲ್ಲಿ ಶ್ರೇಷ್ಠನೆನಿಸಿದವನು. ॥೭೫.೭೬॥

ಸತ್ಯದಲ್ಲಿ ಪ್ರೀತಿಯುಳ್ಳವನು. ಸತ್ಯವಾದ ನಡಗೆಯುಳ್ಳವನು. ಬ್ರಹ್ಮನ ಸತ್ಯಲೋಕದಲ್ಲಿರುವವರಿಗೆ ಪ್ರಿಯನಾದವನು. ಅನಾದಿಕಾಲದಿಂದ ಬಂದವನು. ಮುಂದೆಯೂ ಇರುವವನು. ಸಮಸ್ತ ಪ್ರಾಣಿಗಳಿಗೂ ಒಡೆಯನು. ವರ್ತಮಾನ

ಭೂತಾದಿರ್ಭೂತಮಧ್ಯಸ್ಥೋ ಭೂತವಿಪ್ಲವಕಾರಕಃ ।
ಭೂತಪ್ರತಿಷ್ಠಾ ಕರ್ತಾರ್ಥೋ ಭೂತಾಧಿಷ್ಠಾನಕೋಽವ್ಯಯಃ ॥೭೮॥

ಬೀಜೋಽನಾದಿರ್ಗುಣನಿಧಿ ಸ್ತೇಜೋರಾಶಿರಕಲ್ಮಷಃ ।
ಕಲ್ಮಷಘ್ನಃ ಕಲಿಧ್ವಂಸೀ ಕಲೋ ವರದವಿಗ್ರಹಃ ॥೭೯॥

ಕಲ್ಯಾಣಮೂರ್ತಿಃ ಕಾಮಾತ್ಮಾ ಕಾಮಕ್ರೋಧವಿವರ್ಜಿತಃ ।
ಗೋಪ್ತಾ ಗೋಪಯಿತಾ ಗುಪ್ತಿರ್ಗುಣಾತೀತೋ ಗುಣಾಶ್ರಯಃ॥೮೦॥

ಸರ್ವಮೂರ್ತಿರಜೋಮೂರ್ತಿಸ್ತಮೋಮೂರ್ತಿಶ್ಚಿದಾತ್ಮಕಃ ।
ದೇವಸೇನಾಪತಿರ್ಭೌಮಾ ಮಹಿಮಾ ಮಹಿಮಾಕರಃ ॥೮೧॥

ಪ್ರಕಾರರೂಪಃ ಪಾಪಘ್ನಃ ಪವನಃ ಪಾವನೋಽನಲಃ ।
ಕೈಲಾಸನಿಲಯಃ ಕಾಂತಃ ಕನಕಾಚಲಸನ್ನಿಭಃ ॥೮೨॥

---

ಭೂತಭವಿಷ್ಯತ್ಕಾಲಗಳಿಗೂ ಒಡೆಯನೆನಿಸಿದವನು. ಪಂಚಭೂತಗಳಿಗೂ ಆದಿಯಾದವನು. ಭೂತಮಧ್ಯದಲ್ಲಿ ಅಡಗಿದವನು. ಸಮಸ್ತ ಪ್ರಾಣಿವರ್ಗವನ್ನೂ ಮುಳುಗಿಸುವವನು. ಪಂಚಭೂತಗಳನ್ನೂ ಕ್ರಮವರಿತು ನಿಲ್ಲಿಸುವವನು. ಶ್ರೀಮಂತನು. ಸಮಸ್ತಪ್ರಾಣಿಗಳಲ್ಲಿಯೂ ಅಡಗಿರುವವನು. ನಾಶರಹಿತನು. ॥೭೭-೭೮॥

ಸಕಲ ಪ್ರಪಂಚಕ್ಕೂ ಆದಿಭೂತನು. ಆದಿರಹಿತನು. ಗುಣನಿಧಿಯು. ತೇಜೋರಾಶಿಯು. ಕಲ್ಮಶವಿಲ್ಲದವನು. ಪಾಪನಾಶಕನು. ಕಲಿದೋಷವನ್ನು ನಿವಾರಿಸುವವನು. ಅವ್ಯಕ್ತಮಧುರಧ್ವನಿಯುಳ್ಳವನು. ವರವನ್ನು ಕರುಣಿಸುವ ಶರೀರವುಳ್ಳವನು. ಮಂಗಳಮೂರ್ತಿಯು. ಕಾಮರೂಪಿಯು. ಕಾಮಕ್ರೋಧಗಳಿಂದ ದೂರನಾದವನು. ರಕ್ಷಕನು. ಸಮಸ್ತ ಪ್ರಪಂಚವನ್ನೂ ರಕ್ಷಿಸುವವನು. ರಕ್ಷಣಾರೂಪನು. ಗುಣವಿಲ್ಲದವನು. ಸಮಸ್ತ ಗುಣಗಳಿಗೂ ಆಶ್ರಯನು. ॥೭೯-೮೦॥

ಸತ್ವ, ರಜಸ್ಸು, ತಮಸ್ಸು ಈ ಗುಣಗಳ ಆಕಾರನು. ಜ್ಞಾನರೂಪನು. ದೇವಸೈನ್ಯಕ್ಕೆ ಅಧಿಪತಿಯಾದವನು. ಭೂಮಿಪುತ್ರನು. ಮಹಿಮಾರೂಪನು. ಮಹಿಮೆಗೆ ಗಣಿಯಂತಿರುವವನು. ಪ್ರಕಾರರೂಪಿಯು. ಪಾಪನಾಶಕನು. ವಾಯುರೂಪಿಯು. ಪವಿತ್ರರೂಪನು. ಅಗ್ನಿರೂಪನು. ಕೈಲಾಸವನ್ನೇ ಮನೆಯನ್ನಾಗಿ ಉಳ್ಳವನು. ಮನೋಹರನು. ಸುವರ್ಣಾಚಲದಂತೆ ಹೊಳೆಯುವವನು. ॥೮೧-೮೨॥

ವಿದ್ರುಮೋ ವೇದಭೂತಿಶ್ಚ ಆಕೃತಿಃ ಕೃತಿರಕ್ಷಕಃ ।
ಉಪೇಂದ್ರ ಇಂದ್ರವಂದ್ಯಾಂಘ್ರೀ ರುರುಜಂಘ ಉರುಕ್ರಮಃ ॥೮೩॥

ವಿಕ್ರಾಂತೋ ವಿಜಯಕ್ರಾಂತೋ ವಿಜಯೀ ವಿನಯಪ್ರಿಯಃ ।
ಅವಿನೀತಜನಧ್ವಂಸೀ ಸರ್ವಾಪದ್ಗುಣವರ್ಜಿತಃ ॥೮೪॥

ಶೇಷಾಚಲೈಕನಿಲಯೋ ವಲ್ಲೀ ವಾಂಛಿತವಿಭ್ರಮಃ ।
ಶಾಂಭವಶ್ಶಂಭುತನಯಃ ಶಂಕರಾಂಕವಿಭೂಷಣಃ ॥೮೫॥

ಸ್ವಯಂಭೂಃ ಸ್ವವಶಃ ಸ್ವಸ್ಥಃ ಪುಷ್ಕರಃ ಪುರಭಿದ್ಭವಃ ।
ಮನುಮಾನವಗೋಪ್ತಾಪ್ತಃ ಸ್ವವಿಷ್ಟಸ್ಸ್ಥವಿರೋ ಯುವಾ ॥೮೬॥

ಬಾಲಃ ಶಿಶುರ್ನಿತ್ಯಯುವಾ ನಿತ್ಯಕೌಮಾರವಾನ್ ಮಹಾನ್ ।
ಅಗ್ರಾಹ್ಯರೂಪೋ ಗ್ರಾಹ್ಯಶ್ಚ ಸುಗ್ರಾಹ್ಯಃ ಸುಂದರಾಕೃತಿಃ ॥೮೭॥

---

ಹವಳದಂತಿರುವವನು. ವೇದಾಭರಣನು. ಆಕೃತಿಯಂತೆ ತೋರುವವನು. ಸೃಷ್ಟವಾದ ಜಗತ್ತನ್ನು ರಕ್ಷಿಸುವವನು. ಉಪೇಂದ್ರ, ಇಂದ್ರ ಮುಂತಾದವರಿಂದ ನಮಸ್ಕರಿಸಲ್ಪಟ್ಟವನು. ಜಿಂಕೆಯಂತೆ ವೇಗವಾದ ಮೊಣಕಾಲುಳ್ಳವನು. ವೇಗವಾದ ನಡಗೆಯುಳ್ಳವನು. ವಿಶೇಷವಾಗಿ ಆಕ್ರಮಿಸುವವನು. ವಿಜಯಶಾಲಿಯು. ವಿಜಯವುಳ್ಳವನು. ವಿನಯದಿಂದ ಕೂಡಿದವನು. ದುಷ್ಟಜನರನ್ನು ನಾಶಗೊಳಿಸುವವನು. ಸಮಸ್ತ ವಿಪತ್ತಿನಿಂದಲೂ ಪಾರಾಗಿರುವವನು. ||೮೩-೮೪||

ಶೇಷಾಚಲನಿವಾಸಿಯು. ವಲ್ಲೀದೇವಿಯ ಇಷ್ಟಾರ್ಥಗಳನ್ನು ನೆರವೇರಿಸುವವನು. ಶಂಕರಪುತ್ರನು. ಶಂಕರನ ತೊಡೆಯನ್ನು ಅಲಂಕರಿಸುವವನು. ಸ್ವಯಂ ಉತ್ಪತ್ತಿಯುಳ್ಳವನು. ಎಲ್ಲವನ್ನೂ ಅಧೀನಪಡಿಸಿಕೊಂಡಿರುವವನು. ಸ್ವರ್ಗಲೋಕದಲ್ಲಿರುವವನು. ಕಮಲರೂಪನು. ತ್ರಿಪುರಾರಿಯಾದ ಶಂಕರನಿಂದ ಜನಿಸಿದವನು. ಮಂತ್ರ, ಮನುಷ್ಯರು ಇವರನ್ನು ರಕ್ಷಿಸಿ ಅವರಿಗೆ ಆಪ್ತನಾಗಿರುವವನು. ಸ್ವರ್ಗವೇ ಆಸನವಾಗಿ ಉಳ್ಳವನು. ವೃದ್ಧನಂತಿರುವವನು. ಯುವಕನು. ||೮೫-೮೬||

ಬಾಲಕನು, ಶಿಶುವು, ನಿತ್ಯನು, ಯುವಕನು, ಸದಾ ಕುಮಾರಾವಸ್ಥೆಯಲ್ಲಿಯೇ ಇರುವವನು, ಮಹಾರೂಪನು. ತಿಳಿಯಲಾಗದ ರೂಪವುಳ್ಳವನು. ತಿಳಿಯಲು ಸಾಧ್ಯನು. ಸುಲಭವಾಗಿ ಗ್ರಹಿಸಲು ಯೋಗ್ಯನು. ಸುಂದರವಾದ

ಪ್ರಮರ್ದನಃ ಪ್ರಭೂತಶ್ರೀ ರ್ಲೋಹಿತಾಕ್ಷೋರಿಮರ್ದನಃ ।
ತ್ರಿಧಾಮಾ ತ್ರಿಕಕುಬ್ಭವ್ಯಸ್ತ್ರಿಲೋಕನಿಲಯೋಲಯಃ ॥೮೮॥

ಶರ್ಮದಃ ಶರ್ಮವಾನ್ ಶರ್ವಿ ಶರಣ್ಯಃ ಶರಣಾಲಯಃ ।
ಸ್ಥಾಣುಃ ಸ್ಥಿರತರಃ ಸ್ಥೇಯಃ ಸ್ಥಿರಶ್ರೀಸ್ಸ್ಥಿರವಿಕ್ರಮಃ ॥೮೯॥

ಸ್ಥಿರಪ್ರಜ್ಞಃ ಸ್ಥಿರಧೀಃ ವಿಶ್ವರೇತಾಃ ಪ್ರಜೋದ್ಭವಃ ।
ಅವ್ಯಯಃ ಪ್ರತ್ಯಯಃ ಪ್ರಷ್ಟಃ ಸರ್ವಜ್ಞಃ ಸರ್ವದರ್ಶನಃ ॥೯೦॥

ಸರ್ವವಾಗೀಶ್ವರಶ್ಶುದ್ಧಃ ಶಿವಯೋಗಃ ಶಿವಪ್ರಿಯಃ ।
ಮನಸ್ವೀ ಮಾನವೋ ಮಾನ್ಯೋ ಜೈಗೀಷವ್ಯಗುರುರ್ಬುಧಃ ॥೯೧॥

ಸಮಾತ್ಮಾ ಸಮದರ್ಶೀ ಚ ಸಮಂತಃ ಸಮದರ್ಶನಃ ।
ಭಸ್ಮತ್ರಿಪುಂಡ್ರಷಟ್ಕಾಲೋ ರುದ್ರಾಕ್ಷಕರಕಂಕಣಃ ॥೯೨॥

---

ಆಕಾರವುಳ್ಳವನು. ಶತ್ರುಗಳನ್ನು ನಾಶಗೊಳಿಸುವವನು. ಅತಿಶಯವಾದ ಸಂಪತ್ತುಳ್ಳವನು. ಕೆಂಪಾದ ಕಣ್ಣುಳ್ಳವನು. ಶತ್ರುನಾಶಕನು. ಲೋಕತ್ರಯವ್ಯಾಪಕನು. ಮೂರು ದಿಕ್ಕಿನಲ್ಲಿಯೂ ಜನಿಸಿದವನು. ಮೂರು ಲೋಕಗಳನ್ನೇ ಮನೆಯನ್ನಾಗಿ ಹೊಂದಿರುವವನು. ನಾಶರಹಿತನು. ॥೮೭-೮೮॥

ಸುಖಪ್ರದನು. ಸುಖಿಯು. ಸುಖಾನುಭವವುಳ್ಳವನು. ರಕ್ಷಣೆಕೊಡುವವನು. ರಕ್ಷ್ಯರಿಗೆ ಆಶ್ರಯನು. ಸ್ಥಾಣುರೂಪಿಯು. ಸ್ಥಿರನಾಗಿರುವವನು. ಸ್ಥಿರರಾಧವರಿಗೆ ಆಶ್ರಯವಿತ್ತವನು. ಸ್ಥಿರವಾದ ಸಂಪತ್ತುಳ್ಳವನು. ಸ್ಥಿರವಾದ ಪರಾಕ್ರಮವುಳ್ಳವನು. ಸ್ಥಿರಬುದ್ಧಿಯುಳ್ಳವನು. ಪ್ರಪಂಚವನ್ನೇ ಸೃಷ್ಟಿಸುವ ರೇತಸ್ಸುಳ್ಳವನು. ಪ್ರಜೆಗಳನ್ನು ಸೃಷ್ಟಿಸುವವನು. ನಾಶರಹಿತನು. ಪ್ರತ್ಯಯನು. ಪ್ರಶ್ನೆಮಾಡುವವನು. ಸರ್ವವನ್ನೂ ತಿಳಿದವನು. ಸರ್ವಶಾಸ್ತ್ರರೂಪನು. ॥೮೯-೯೦॥

ಸರ್ವವಿಧವಾದ ವಾಕ್ಕುಗಳಿಗೂ ಅಧಿಪತಿಯು. ಶುದ್ಧರೂಪನು. ಶಿವಸಂಬಂಧವುಳ್ಳವನು. ಈಶ್ವರನಿಗೆ ಪ್ರಿಯನೆನಿಸಿದವನು. ದೃಢಮನಸ್ಸಿನವನು. ಅಹಂಕಾರವನ್ನು ನಾಶಗೊಳಿಸುವವನು. ಪೂಜ್ಯನು. ಜೈಗೀಷವ್ಯನಿಗೆ ಜ್ಞಾನವನ್ನು ಉಪದೇಶಿಸಿದವನು. ಜ್ಞಾನಿಯು. ಸಂಪೂರ್ಣವಾದ ಆತ್ಮರೂಪಿಯು. ಶತ್ರುಮಿತ್ರರಿಬ್ಬರನ್ನೂ ಸಮವಾಗಿ ನೋಡುವವನು. ಸತ್ಪರಿಣಾಮವಾಗುವ ಅಂತ್ಯಭಾಗವುಳ್ಳವನು. ಸುಖ

ಶಿವಲಿಂಗಾರ್ಚನಪ್ರೀತಃ ಷಡಕ್ಷರಜಪಾದರಃ ।
ಶುಚಿಶ್ಶುಚಿಮನಾಶ್ಶುದ್ಧಃ ಶುಚಿಕೀರ್ತಿಃ ಶುಚಿಶ್ರವಾಃ ॥೯೩॥

ರೌದ್ರಕರ್ಮಾ ಮಹಾಕರ್ಮಾ ರುದ್ರಾಂಶೋ ರುದ್ರಸಂಭವಃ ।
ಅನೇಕಮೂರ್ಧಾ ವಿಶ್ವಾತ್ಮಾನೇಕಬಾಹುರರಿಂದಮಃ ॥೯೪॥

ವೀರಬಾಹುರ್ಗಣಾಧ್ಯಕ್ಷೋ ವಿಶ್ವಕ್ಸೇನೋ ವಿನೋದನಃ ।
ಸರ್ವಗಸ್ಸರ್ವದಸ್ಸರ್ವಃ ಸರ್ವವೇದಾಂತಗೋಚರಃ ॥೯೫॥

ಕವಿಃ ಪುರಾಣಶ್ಶಾಸ್ತಾ ಚ ಸುಬ್ರಹ್ಮಣ್ಯಾಲಯೋ ಅಹಿಃ ।
ಭ್ರಾಜಿಷ್ಣುರ್ವಿಷ್ಣುವಿನುತಃ ಕೃಷ್ಣಕೇಶಃ ಕಿಶೋರಗಃ ॥೯೬॥

---

ದುಃಖಗಳೆರಡರಲ್ಲಿಯೂ ಸಮವಾಗಿ ಕಾಣುವವನು. ಭಸ್ಮತ್ರಿಪುಂಡ್ರವನ್ನು ಧರಿಸಿದವನು. ಆರುವಿಧವಾದ ಕಾಲಗಳಲ್ಲಿಯೂ (ಪೂರ್ಣದಿನದಲ್ಲಿಯೂ) ಗೋಚರಿಸುವವನು. ರುದ್ರಾಕ್ಷಿಯ ಕೈಬಳೆಯನ್ನು ಧರಿಸಿರುವವನು. ॥೯೧-೯೨॥

ಶಿವಲಿಂಗಾರ್ಚನೆಯಲ್ಲಿ ತೃಪ್ತನಾಗುವವನು. ಷಡಕ್ಷರೀಮಂತ್ರಜಪದಲ್ಲಿ ಆದರವುಳ್ಳವನು. ಶುಚೀಭೂತನು. ಶುದ್ಧಮನಸ್ಕನು. ನಿಷ್ಕಳಂಕವಾದ ಕೀರ್ತಿಯುಳ್ಳವನು. ಶುಭ್ರವಾದ ಕಿವಿಗಳುಳ್ಳವನು. ಭಯಂಕರವಾದ ಕಾರ್ಯಗಳನ್ನೆಸಗುವವನು. ಮಹಾಕಾರ್ಯವುಳ್ಳವನು. ರುದ್ರಾಂಶಸಂಭೂತನು. ರುದ್ರನಿಂದಲೇ ಜನಿಸಿದವನು. ಅನೇಕ ಶಿರಸ್ಸುಳ್ಳವನು. ಪ್ರಪಂಚಸ್ವರೂಪನು. ಅನೇಕವಾದ ಬಾಹುಗಳುಳ್ಳವನು. ಶತ್ರುನಾಶಕನು. ॥೯೩-೯೪॥

ವೀರವಾದ ತೋಳುಗಳುಳ್ಳವನು. ಸಕಲ ಗಣಗಳಿಗೂ ಒಡೆಯನು. ಪ್ರಪಂಚದಷ್ಟು ವಿಶಾಲವಾದ ಸೈನ್ಯವುಳ್ಳವನು. ವಿಶೇಷವಾಗಿ ಸೈನ್ಯವನ್ನು ಪ್ರೇರಿಸುವವನು. ಸರ್ವವ್ಯಾಪಿಯು. ಸರ್ವಪ್ರದನು. ಸರ್ವರೂಪನು. ಸಕಲ ಉಪನಿಷತ್ತುಗಳಿಗೂ ಗೋಚರಿಸುವವನು. ಕವಿಯು. ಪ್ರಾಚೀನಕಾಲದವನು. ಶಿಕ್ಷಕನು. ಶೋಭನವಾದ ಬ್ರಹ್ಮಮಾರ್ಗಕ್ಕೆ ಆಶ್ರಯವಿತ್ತವನು. ಸರ್ಪರೂಪಿಯು. ತೇಜಶ್ಶಾಲಿಯು. ವಿಷ್ಣುವಿನಿಂದಲೂ ಸ್ತುತ್ಯನಾದವನು. ಕಪ್ಪಾದ ಕೂದಲುಳ್ಳವನು. ಶಿಶುರೂಪದಲ್ಲಿರುವವನು. ॥೯೫-೯೬॥

ಭೋಜನಂ ಭಾಜನಂ ಭೋಕ್ತಾ ವಿಶ್ವಭೋಕ್ತಾ ವಿಶಾಂಪತಿಃ ।
ವಿಶ್ವಯೋನಿರ್ವಿಶಾಲಾಕ್ಷೋ ವಿರಾಗೋ ವೀರಸೇವಿತಃ ।೯೭॥

ಪುಣ್ಯಃ ಪುರುಯಶಾಃ ಪೂಜ್ಯಃ ಪುರುಕೀರ್ತಿಃ ಪುನರ್ವಸುಃ ।
ಸುರೇಂದ್ರಃ ಸರ್ವಲೋಕೇಂದ್ರೋ ಮೃಗೇಂದ್ರೋಪೇಂದ್ರವಂದಿತಃ ॥೯೮॥

ವಿಶ್ವವೇದ್ಯೋ ವಿಶ್ವಪತಿರ್ವಿಶ್ವಭೃದ್ವಿಶ್ವಭೇಷಜಃ ।
ಮಧುರ್ಮಧುರಸಂಗೀತೋ ಮಾಧವಃ ಶುಚಿರೂಷ್ಮಲಃ ॥೯೯॥

ಶುಕ್ಲಃ ಶುಭ್ರಗುಣಃ ಶುಕ್ರಃ ಶೋಕಹರ್ತಾ ಶುಚಿಸ್ಮಿತಃ ।
ಮಹೇಶ್ವಾಸೋ ವಿಗುಪ್ತಿಶ್ಚ ಮಹೀಭರ್ತಾ ಮಹೀಪತಿಃ ॥೧೦೦॥

ಮರೀಚಿರ್ದಮನೋ ಮಾಯೀ ಮಾತಂಗಪತಿರದ್ಭುತಃ ।
ಹಂಸಃ ಸುಪರ್ಣಃ ಸುಮನಾಃ ಭುಜಂಗೇಶೋ ಭುಜಾವಲಿಃ ॥೧೦೧॥

---

ಆಹಾರಸ್ವರೂಪನು. ಸಮಸ್ತ ಜಗದಾಧಾರನು. ಜಗತ್ತನ್ನೆಲ್ಲಾ ಭಕ್ಷಿಸುವವನು. ವೈಶ್ಯಜಾತಿಯವರಿಗೆಲ್ಲಾ ಒಡೆಯನು. ಪ್ರಪಂಚಕ್ಕೆ ಮೂಲಭೂತನೆನಿಸಿದವನು. ವಿಶಾಲವಾದ ಕಣ್ಣುಳ್ಳವನು. ಆಶಾರಹಿತನು. ವೀರರಿಂದ ಸೇವಿತನಾದವನು. ಪುಣ್ಯರೂಪಿಯು. ಹೆಚ್ಚಾದಕೀರ್ತಿಶಾಲಿಯು, ಪೂಜ್ಯನು, ಸರ್ವವ್ಯಾಪಿಯಾದ ಕೀರ್ತಿಯುಳ್ಳವನು. ಹೆಚ್ಚಾದ ಐಶ್ವರ್ಯವುಳ್ಳವನು. ಸುರಾಧಿಪತಿಯು. ಸರ್ವಲೋಕಾಧಿಪನು. ಮೃಗರಾಜನು. ವಿಷ್ಣುವಿನಿಂದ ಪೂಜಿತನು. ವಿಶ್ವದಿಂದ ತಿಳಿಯಲ್ಪಡುವವನು. ವಿಶ್ವಕ್ಕೆ ಪತಿಯಾಗಿರುವವನು. ಪ್ರಪಂಚವನ್ನು ಧರಿಸಿಕೊಂಡಿರುವವನು. ಪ್ರಪಂಚಕ್ಕೇ ವೈದ್ಯನಾಗಿರುವವನು. ಮಧುರೂಪಿಯು. ಮಧುರವಾದ ಗಾನವುಳ್ಳವನು. ಲಕ್ಷ್ಮಿಗೂ ಯಜಮಾನನು. ಶುಚೀಭೂತನು. ಉಷ್ಣರೂಪಿಯು. ಶುಭ್ರರೂಪಿಯು. ಕಲ್ಮಶವಿಲ್ಲದ ಗುಣವುಳ್ಳವನು. ಶುಕ್ರರೂಪಿಯು. ಶೋಕವನ್ನು ಅಪಹರಿಸುವವನು. ಶುಭ್ರವಾದ ಮುಗುಳ್ನಗೆಯುಳ್ಳವನು. ಅತ್ಯಂತ ಬಲವುಳ್ಳವನು. ವಿಶೇಷವಾಗಿ ರಕ್ಷಣೆಗೆ ಯೋಗ್ಯನು. ಭೂಮಿಗೆ ಒಡೆಯನು. ಭೂಮಿಗೆ ರಕ್ಷಕನು. ॥೯೭-೯೮-೯೯-೧೦೦॥

ಕಿರಣರೂಪಿಯು. ಸರ್ವರನ್ನೂ ಅಡಗಿಸುವವನು. ಮಾಯಾವಿಶಿಷ್ಟನು. ಆನೆಗಳಿಗೆ ಯಜಮಾನನು. ಆಶ್ಚರ್ಯವಿಶಿಷ್ಟನು. ಹಂಸರೂಪಿಯು. ಗರುಡರೂಪಿಯು.

ಪದ್ಮನಾಭಃ ಪಶುಪತಿಃ ಪಾರಗ್ಯಃ ಪದಪಾರಗಃ ।
ಪಂಡಿತಃ ಪರವೀರಘ್ನಃ ಸ್ಕಂದಃ ಸೇನಾಪತಿರ್ಮಹಾನ್ ॥೧೦೨॥

ಅಮರ್ಷಣೋ ದುಷ್ಟಶಾಸ್ತಾ ದುರ್ಧರ್ಷೋ ಯುದ್ಧಹರ್ಷಣಃ ।
ವಿಶ್ವಾತ್ಮಾ ಸುವಿಧೇಯಾತ್ಮಾ ವಿಶ್ವಪ್ರಖ್ಯಾತವಿಕ್ರಮಃ ॥೧೦೩॥

ಸನ್ಮಾರ್ಗದರ್ಶಕೋ ಮಾರ್ಗಃ ರಕ್ಷಕೋ ಮಾರ್ಗದರ್ಶಕಃ ।
ಅನಿರುದ್ಧೋ ನಿರುದ್ಧಶ್ರೀರಾದಿತ್ಯೋ ದೈತ್ಯಮರ್ದನಃ ॥೧೦೪॥

ಅನಿಮೇಷೋ ನಿಮೇಷೇಢ್ಯಸ್ತ್ರಿಜಗದ್ಭ್ರಮಣೀ ಗುಣೀ ।
ಸಂವೃತಾತ್ಮಾ ನಿವೃತ್ತಾತ್ಮಾ ಸರ್ವಾತ್ಮಾ ಆತ್ಮವಿಕ್ರಯಃ ॥೧೦೫॥

ಅರ್ಚಿಷ್ಮಾನಚ್ಯುತಪ್ರೀತಃ ಪಾಶಭೃತ್ಪಾವಕೋ ಮರುತ್ ।
ಸೋಮಸ್ಸೌಮ್ಯಃ ಸೋಮನುತಃ ಸೋಮಯುಕ್ಸೋಮಭೂಷಣಃ ॥೧೦೬॥

---

ಪ್ರಶಸ್ತವಾದ ಮನಸ್ಸುಳ್ಳವನು. ಹಾವುಗಳಿಗೆ ಒಡೆಯನು. ಅನೇಕ ಭುಜಗಳುಳ್ಳವನು. ಪದ್ಮವನ್ನು ನಾಭಿಯಲ್ಲಿ ಹೊಂದಿರುವವನು. ಅಜ್ಞಾನಿಗಳಿಗೆ ಒಡೆಯನು. ಜ್ಞಾನದ ಪಾರವನ್ನು ಕಂಡವನು. ಪದಶಾಸ್ತ್ರದ ಕೊನೆಯನ್ನು ತಿಳಿದವನು. ಜ್ಞಾನಿಯು. ಪರಮವೀರರನ್ನು ಕೊಂದವನು.. ಪರಶಿವನ ವೀರ್ಯಸ್ಖಲನದಿಂದ ಜನಿಸಿದವನು. ಸೇನೆಗಳಿಗೆ ಅಧಿಪತಿಯು. ಮಹಿಮಾಶಾಲಿಯು. ||೧೦೧-೧೦೨||

ಕ್ರೋಧರಹಿತನು. ದುಷ್ಟರನ್ನು ಶಿಕ್ಷಿಸುವವನು ದುಷ್ಟರನ್ನು ಅಡಗಿಸುವವನು. ಯುದ್ಧದಲ್ಲಿ ಹರ್ಷಹೊಂದುವವನು. ವಿಶ್ವರೂಪಿಯು. ವಿಧೇಯಾತ್ಮನು. ಪ್ರಪಂಚದಲ್ಲಿ ಪ್ರಸಿದ್ಧವಾದ ಪರಾಕ್ರಮವುಳ್ಳವನು. ಸನ್ಮಾರ್ಗದರ್ಶಕನು. ಮಾರ್ಗರೂಪಿಯು. ರಕ್ಷಕನು. ಎಲ್ಲರಿಗೂ ಒಂದು ಜೀವನಮಾರ್ಗವನ್ನು ತೋರ್ಪಡಿಸುವವನು. ಯಾರಿಂದಲೂ ತಡೆಯಲಾಗದವನು. ಸಂಪತ್ತನ್ನೇ ತಡೆಗಟ್ಟಿರುವವನು. ಆದಿತ್ಯರೂಪನು. ದೈತ್ಯರನ್ನು ನಾಶಗೊಳಿಸಿದವನು. ||೧೦೩-೧೦೪||

ರೆಪ್ಪೆಯಿಲ್ಲದವನು. ರೆಪ್ಪೆಯುಳ್ಳಂತಹ ಜನರಿಂದ ಪೂಜಿತನಾದವನು. ಮೂರು ಲೋಕಗಳಲ್ಲಿಯೂ ಸಂಚರಿಸುವವನು. ಗುಣಶಾಲಿಯು. ಎಲ್ಲಾ ರೀತಿಯಿಂದಲೂ ಗೂಢವಾದ ಆತ್ಮವುಳ್ಳವನು. ವ್ಯತ್ಯಾಸವಾಗಿ ತಿರುಗಿಸಲ್ಪಟ್ಟ ಆತ್ಮರೂಪಿಯು. ಸರ್ವವ್ಯಾಪಕನು. ತನ್ನನ್ನೇ ಭಕ್ತರಿಗೆ ಅರ್ಪಿಸುವವನು. ತೇಜಶ್ಶಾಲಿಯು. ಮಹಾ

ಸರ್ವಸಾಮಪ್ರಿಯಃ ಸಾಮಃ ಸರ್ವಯಜ್ಞಸ್ತುತೋ ಗುಹಃ ।
ಉಪಶಾಂತಿರುಮಾಸೂನುರುತ್ಫುಲ್ಲಮುಖಪಂಕಜಃ ॥೧೦೭॥

ಅಮೃತ್ಯುರಸುರಾರಾತಿ ಮೂರ್ತಾಮೂರ್ತ್ಯುಪಯೋಜಿತಃ ।
ಮಂದಾರಕುಸುಮಾಪೀಡೋ ಮದನಾಂತಕವಲ್ಲಭಃ ॥೧೦೮॥

ಮಾಲ್ಯವಾನ್ಮದನಾಕಾರೋ ಮಾಲತೀಕುಸುಮಪ್ರಿಯಃ ।
ಸುಪ್ರಸಾದಃ ಸುರಾಧ್ಯಕ್ಷಃ ಸುಮುಖಃ ಸುಮಹಾಯಶಾಃ ॥೧೦೯॥

ವೃಷಪರ್ವಾ ವಿರೂಪಾಕ್ಷೋ ವೃಷಸೇನೋ ವೃಷೋದರಃ ।
ಮುಕ್ತೋ ಮುಕ್ತಗತಿರ್ಮೋಕ್ತಾ ಮುಕುಂದೋ ಮುದ್ಗರೋ
ಮುನಿಃ ॥೧೧೦॥

---

ವಿಷ್ಣುವಿನಿಂದ ಪ್ರೀತನಾಗಿರುವವನು. ಪಾಶಾಯುಧವನ್ನು ಹಿಡಿದಿರುವವನು. ಅಗ್ನಿರೂಪಿಯು. ವಾಯುರೂಪಿಯು. ಚಂದ್ರನಂತೆ ಕಾಂತಿಯುಳ್ಳವನು. ಸೌಮ್ಯರೂಪನು. ಚಂದ್ರನಿಂದ ಸ್ತುತ್ಯನಾದವನು. ಸೋಮನನ್ನು ಜೊತೆಯಲ್ಲಿ ಹೊಂದಿರುವವನು. ಚಂದ್ರನನ್ನೇ ಅಲಂಕಾರ ವಸ್ತುವನ್ನಾಗಿ ಪಡೆದಿರುವವನು. ॥೧೦೫-೧೦೬॥

ಸರ್ವ ವಿಧವಾದ ಸಾಮಗಾನದಿಂದಲೂ ಪ್ರೀತನಾಗುವವನು. ಸಾಮರೂಪಿಯು. ಸರ್ವ ಯಜ್ಞದಲ್ಲಿಯೂ ಪೂಜ್ಯನೆನಿಸಿದವನು. ಗೂಢಚರಿತ್ರೆಯುಳ್ಳವನು. ಶಾಂತಿರೂಪನು. ಪಾರ್ವತೀಪುತ್ರನು. ಅರಳಿದ ಮುಖಕಮಲವನ್ನುಳ್ಳವನು. ಮರಣರಹಿತನು. ರಾಕ್ಷಸರಿಗೆ ಶತ್ರುವೆನಿಸಿದವನು. ಮೂರ್ತ ದ್ರವ್ಯಗಳೆಂಬ ಮೂರ್ತಿಗಳಿಂದ ಸೇವಿಸಲ್ಪಡುವವನು. ಮಂದಾರ ಕುಸುಮಗಳಿಂದ ಅಲಂಕೃತನಾದವನು. ಮರಣಾಂತಕನಾದ ಪರಶಿವನಿಗೆ ಪ್ರಿಯಸುತನು. ॥೧೦೭-೧೦೮॥

ಪ್ರಶಸ್ತವಾದ ಮಾಲಿಕೆಯುಳ್ಳವನು. ಮನ್ಮಥನಂತೆ ಆಕಾರವುಳ್ಳವನು. ಮಾಲತೀ ಪುಷ್ಪದಲ್ಲಿ ಪ್ರೀತಿಯುಳ್ಳವನು. ಪ್ರಸನ್ನನಾದವನು. ದೇವತೆಗಳಿಗೆ ಅಧ್ಯಕ್ಷನು. ಪ್ರಸನ್ನವಾದ ಮುಖವುಳ್ಳವನು. ಕೀರ್ತಿಶಾಲಿಯು. ಧರ್ಮಚಾಲಕನು. ವಿಕಾರವಾದ ಕಣ್ಣುಳ್ಳವನು. ಧರ್ಮಧ್ವಜನು. ಧರ್ಮವನ್ನೇ ಉದರವನ್ನಾಗಿ ತಿಳಿದುಕೊಂಡಿರುವನು. ಮುಕ್ತನಾದವನು. ಮುಕ್ತಿ ಮಾರ್ಗವುಳ್ಳವನು. ಸ್ವಯಂ ಮುಕ್ತಿಯನ್ನು ಪಡೆದವನು. ಮೋಕ್ಷದಾತನು. ಮುದ್ಗರಾಯುಧ ರೂಪನು. ಋಷಿಸ್ವರೂಪಿಯು. ॥೧೦೯-೧೧೦॥

ಶ್ರುತವಾನ್ ಶ್ರುತಿಶಾಸ್ತ್ರಾತ್ಮಾ ಶ್ರುತಿಗಮ್ಯಃ ಶ್ರುತಿಸ್ತುತಃ ।
ವರ್ಧಮಾನೋ ವನರತಿರ್ವಾನಪ್ರಸ್ಥನಿಷೇವಿತಃ ॥೧೧೧॥

ವಾಗ್ಮಿದೋ ವಾವದೂಕಾತ್ಮಾ ವಾಸುದೇವೋ ವರಪ್ರದಃ ।
ಮಹೇಶ್ವರೋ ಮಯೂರಸ್ಥೋ ಶಕ್ತಿಹಸ್ತಸ್ತ್ರಿಶೂಲಧೃಕ್ ॥೧೧೨॥

ಓಜಸ್ತೇಜಶ್ಚ ತೇಜಸ್ವೀ ಪ್ರತಾಪಃ ಸುಪ್ರತಾಪವಾನ್ ।
ಋದ್ಧಿಃ ಸಮೃದ್ಧಿಃ ಸಂಸಿದ್ಧಿಃ ಸುಸಿದ್ಧಿಃ ಸಿದ್ಧಸೇವಿತಃ ॥೧೧೩॥

ಅಮೃತಾಂಶುಶ್ಚಾಮೃತಪ ಅಮೃತಶ್ಚಾಮೃತಪ್ರದಃ ।
ಚಂದ್ರಮಾಶ್ಚಂದ್ರವದನಶ್ಚಂದ್ರಕೃಚ್ಚಂದ್ರಶೀತಲಃ ॥೧೧೪॥

ಮತಿಮಾನ್ನೀತಿಮಾನ್ನೀತಿಃ ಕೀರ್ತಿಮಾನ್ ಕೀರ್ತಿವರ್ಧನಃ ।
ಔಷಧಶ್ಚೌಷಧೀನಾಥಃ ಪ್ರದೀಪೋ ಭವಮೋಚನಃ ॥೧೧೫॥

ಭಾಸ್ಕರೋ ಭಾಸ್ವರತರೋ ಭಾನುಃ ಪಾಶವಿಮೋಚನಃ ।
ಚತುರ್ಯುಗವ್ಯವಸ್ಥಾತಾ ಯುಗಧರ್ಮಪ್ರವರ್ತಕಃ ॥೧೧೬॥

---

ವಿದ್ಯಾವಂತನು. ವೇದಶಾಸ್ತ್ರಸ್ವರೂಪನು. ವೇದದಿಂದ ಊಹಿಸಲ್ಪಡುವವನು. ವೇದದಿಂದ ಸ್ತುತ್ಯನಾಗಿರುವವನು. ವೃದ್ಧಿಹೊಂದುವವನು. ಅರಣ್ಯದಲ್ಲಿ ಆಸಕ್ತನು. ವಾನಪ್ರಸ್ಥಾಶ್ರಮಿಗಳಿಂದ ಅರಣ್ಯದಲ್ಲಿ ಸತ್ಕಾರಹೊಂದಲ್ಪಟ್ಟವನು. ಮಹೇಶ್ವರ ರೂಪನು. ಮಯೂರವಾಹನನು. ಶಕ್ತ್ಯಾಯುಧವನ್ನು ಧರಿಸಿದವನು. ತ್ರಿಶೂಲ ಧಾರಿಯು. ॥೧೧೧-೧೧೨॥

ಓಜಸ್ವಿಯು. ತೇಜಶ್ಶಾಲಿಯು. ತೇಜೋರೂಪನು. ಪ್ರತಾಪಾತ್ಮಕನು. ಪ್ರತಾಪವುಳ್ಳವನು. ಏಳಿಗೆಯುಳ್ಳವನು. ಐಶ್ವರ್ಯವುಳ್ಳವನು. ಸಿದ್ಧರೂಪನು. ಶ್ರೇಷ್ಠ ವಾದ ಸಿದ್ಧಿಯುಳ್ಳವನು. ಸಿದ್ಧರಿಂದ ಸೇವಿತನಾದವನು. ಅಮೃತಕಿರಣನು. ಅಮೃತಕ್ಕೆ ಅಧಿಪತಿಯು. ಮರಣರಹಿತನು. ಅಮೃತವನ್ನು ಭಕ್ತರಿಗೆ ಕೊಡುವವನು. ಚಂದ್ರರೂಪನು. ಚಂದ್ರನಂತೆ ಮುಖವುಳ್ಳವನು. ಚಂದ್ರನಿರ್ಮಾಪಕನು. ಚಂದ್ರನಂತೆ ತಂಪಾಗಿರುವವನು. ॥೧೧೩-೧೧೪॥

ಬುದ್ಧಿವಂತನು. ನೀತಿವಂತನು. ನೀತಿರೂಪನು. ಕೀರ್ತಿಶಾಲಿಯು. ಕೀರ್ತಿಯಿಂದ ಹರಡುವವನು. ಔಷಧೀನಾಥನು. ಪ್ರಕಾಶಿಸುವ ದೀಪದಂತಿರುವವನು.

ಅಯುಜೋ ಮಿಥುನೋ ಯೋಗೋ ಯೋಗಜ್ಞೋ ಯೋಗಪಾರಗಃ ।
ಮಹಾಶನೋ ಮಹಾದಾತಾ ಮಹಾಘೋರಪರಾಕ್ರಮಃ ॥೧೧೭॥

ಯುಗಾಂತಕೃದ್ಯುಗಾವರ್ತೋ ದೃಶ್ಯಾದೃಶ್ಯಸ್ವರೂಪವಾನ್ ।
ಸಹಸ್ರಜಿತ್ಸಹಸ್ರಾತ್ಮಾ ಸಹಸ್ರಾಯುಧಮಂಡಿತಃ ॥೧೧೮॥

ಅನಂತಶೂರಸಂಹರ್ತಾ ಸುಪ್ರತಿಷ್ಠಃ ಸುಖಾಂಕರಃ ।
ಅಕ್ರೋಧಃ ಕ್ರೋಧಹಂತಾ ಚ ಶತ್ರುಕ್ರೋಧವಿವರ್ಧನಃ ॥೧೧೯॥

ವಿಶ್ವಮೂರ್ತಿರ್ವಿಶ್ವಬಾಹುರ್ವಿಶ್ವದೃಗ್ವಿಶ್ವತೋಮುಖಃ ।
ವಿಶ್ವಪೋ ವಿಶ್ವನೇತಾ ಚ ದ್ಯಾವಾಭೂಮ್ಯೋರ್ವಿವರ್ಧನಃ ॥೧೨೦॥

---

ಸಂಸಾರದುಃಖವನ್ನು ಕಳೆಯುವವನು. ಪ್ರಕಾಶಮಾನವಾದ ಕಿರಣವುಳ್ಳವನು. ವಿಶೇಷವಾಗಿ ಪ್ರಕಾಶಿಸುವವನು. ಕಾಂತಿರೂಪನು. ಸಂಸಾರಪಾಶವನ್ನು ಹೋಗಲಾಡಿಸುವವನು. ನಾಲ್ಕುಯುಗಗಳನ್ನೂ ವ್ಯವಸ್ಥೆಗೊಳಿಸುವವನು. ಯುಗಧರ್ಮವನ್ನು ಮುಂದುವರಿಸುವವನು. ॥೧೧೫-೧೧೬॥

ಯಾವವಸ್ತುವಿನಲ್ಲಿಯೂ ಸಂಬಂಧಪಡದವನು. ಪತ್ನಿಯೊಡನಿರುವವನು. ಸಂಬಂಧರೂಪನು. ಯೋಗಶಾಸ್ತ್ರವನ್ನರಿತವನು. ಯೋಗಶಾಸ್ತ್ರದ ಕೊನೆಗಂಡವನು. ವಿಶೇಷವಾದ ಆಹಾರವನ್ನು ಸ್ವೀಕರಿಸುವವನು. ವಿಶೇಷವಾಗಿ ದಾನಮಾಡುವವನು. ಭಯಂಕರವಾದ ಪರಾಕ್ರಮವುಳ್ಳವನು. ಯುಗವನ್ನೇ ಕೊನೆಗಾಣಿಸುವವನು. ಯುಗವನ್ನು ಮರಳಿಸುವವನು. ಕಣ್ಣಿಗೆ ಕಾಣುವ ಮತ್ತು ಕಾಣದಿರುವ ಆಕಾರವುಳ್ಳವನು. ಸಹಸ್ರಾರು ಸೈನಿಕರನ್ನು ಜಯಿಸುವವನು. ಸಹಸ್ರಾರು ಜನರನ್ನು ಅಡಗಿಸಿಕೊಂಡಿರುವವನು. ಅಸಂಖ್ಯಾತವಾದ ಆಯುಧಗಳನ್ನುಳ್ಳವನು. ॥೧೧೭-೧೧೮॥

ಅನೇಕ ಶೂರರನ್ನು ನಾಶಗೊಳಿಸಿದವನು. ಪ್ರಸಿದ್ಧನಾದವನು. ಶ್ರೇಷ್ಠನಾದ ಶಾಂಕರನು. ಕ್ರೋಧರಹಿತನು. ಕೋಪವನ್ನು ನಾಶಗೊಳಿಸುವವನು. ಶತ್ರುಗಳ ಕೋಪವನ್ನು ಹೆಚ್ಚಿಸುವವನು. ಪ್ರಪಂಚಾಕಾರನು. ಪ್ರಪಂಚವನ್ನೇ ವ್ಯಾಪಿಸಿಕೊಂಡಿರುವವನು. ಪ್ರಪಂಚವೇ ಕಣ್ಣಾಗಿ ಉಳ್ಳವನು. ಸರ್ವತ್ರಮುಖವುಳ್ಳವನು. ಪ್ರಪಂಚವನ್ನು ಪಾಲಿಸುವವನು. ಲೋಕವನ್ನೇ ನಡೆಸುವವನು. ಭೂಮ್ಯಂತರಿಕ್ಷಗಳನ್ನು ಬೆಳೆಸುವವನು. ॥೧೧೯-೧೨೦॥

ಅಪಾಂನಿಧಿರಕರ್ತಾ ಚ ಅನ್ನಾದೋ ವಿನಯೋಜ್ಜ್ವಲಃ ।
ಅಂಭೋಜಮಾತುರುಜ್ಜೀವಃ ಪ್ರಾಣದಃ ಪ್ರಾಣವರ್ಧನಃ ॥೧೨೧॥

ಸ್ಕಂದಃ ಸ್ಕಂದಧರೋ ಧುರ್ಯೋ ಧೈರ್ಯೋ ಧರ್ಮವಿವರ್ಧನಃ ।
ಜಿತಾರಾತಿರ್ಧನಾಧ್ಯಕ್ಷೋ ವೈದ್ಯನಾಥೋಽನಸೂಯಕಃ ॥೧೨೨॥

ದೇವದೇವೋ ಬೃಹದ್ಭಾನುಃ ಸ್ವರ್ಭಾನುಃ ಪದ್ಮವಲ್ಲಭಃ ।
ಅಕುಲಃ ಕುಲನೇತಾಚ ಕುಲಸ್ರಷ್ಟಾ ಕುಲೇಶ್ವರಃ ॥೧೨೩॥

ಕುಲಾಚಲಸುತಾಸೂನುರಸುಹೃಚ್ಚಾಸುರಾರ್ದನಃ ।
ನಿಧಿರ್ನಿಧಿಪತಿಃ ಪದ್ಮಶಂಖೋ ನಿಧಿಪತಿಃ ಪತಿಃ ॥೧೨೪॥

ಶತಾನಂದಶ್ಶತಾವರ್ತಃ ಶತಾಯುಶ್ಚ ಶತಾಯುಧಃ ।
ಪದ್ಮಾಸನಃ ಪದ್ಮನೇತ್ರಃ ಪದ್ಮಾಂಘ್ರಿಃ ಪದ್ಮಸಂಸ್ಥಿತಃ ॥೧೨೫॥

---

ಜಲರಾಶಿಯು. ಯಾವುದಕ್ಕೂ ತಾನು ಕರ್ತನಾಗದವನು. ಆಹಾರವನ್ನೆಲ್ಲಾ ತಿನ್ನುವವನು. ವಿನಯಗುಣದಿಂದ ಪ್ರಕಾಶಿಸುವವನು. ಕಮಲೋದ್ಭವನಾದ ಬ್ರಹ್ಮನಿಗೆ ಅಭಯವಿತ್ತವನು. ಪ್ರಾಣದಾನಮಾಡಿದವನು. ಶಕ್ತಿವರ್ಧಕನು. ಶಿವ ರೇತಃಸ್ಖಲನದಿಂದ ಜೀವಿಸಿದವನು. ಬಲಿಷ್ಠವಾದ ಹೆಗಲನ್ನುಳ್ಳವನು. ಭಾರವನ್ನು ಹೊರುವವನು. ಧೈರ್ಯಶಾಲಿಯು. ಧರ್ಮವನ್ನು ಬೆಳೆಸುವವನು. ಶತ್ರುನಾಶಕನು. ಧನಕ್ಕೆ ಅಧಿಪತಿಯು. ವೈದ್ಯರಿಗೆ ಒಡೆಯನು. ಅಸೂಯಾರಹಿತನು. ॥೧೨೧-೧೨೨॥ ದೇವದೇವನು. ಹೆಚ್ಚಾದಕಾಂತಿಯುಳ್ಳವನು. ಸ್ವರ್ಗಲೋಕದಲ್ಲಿ ಸೂರ್ಯನಂತೆ ಶೋಭಿಸುವವನು. ಕಮಲಗಳಲ್ಲಿ ಹೆಚ್ಚು ಪ್ರೀತಿಯುಳ್ಳವನು. ಜಾತಿಯಿಲ್ಲದವನು. ಸಮಸ್ತಜಾತಿಗೂ ಒಡೆಯನು. ಕುಲನಿರ್ಮಾಪಕನು. ಕುಲಗಳಿಗೆ ಅಧಿಪತಿಯು. ಹಿಮಗಿರಿಜಾತೆಯ ಪುತ್ರನು. ಯಾರಿಗೂ ಸ್ನೇಹಿತನಲ್ಲದವನು. ರಾಕ್ಷಸರನ್ನು ನಾಶ ಗೊಳಿಸಿದವನು. ನಿಧಿರೂಪನು. ಸಕಲನಿಧಿಗಳಿಗೂ ಒಡೆಯನು. ಪದ್ಮ, ಶಂಖ ಎಂಬ ನಿಧಿಗಳ ರೂಪದಲ್ಲಿರುವವನು. ಸರ್ವರಿಗೂ ಯಜಮಾನನು. ॥೧೨೩-೧೨೪॥

ಉಪನಿಷತ್ಪ್ರೋಕ್ತವಾದ ಸಮಸ್ತಆನಂದವುಳ್ಳವನು. ನೂರಾರು ವರ್ಷಗಳನ್ನು ಮರಳಿಸಿದವನು. ಅನೇಕ ವರ್ಷಪರ್ಯಂತ ಇರುವವನು. ನಾನಾವಿಧವಾದ ಆಯುಧ ಗಳುಳ್ಳವನು. ಕಮಲವೇ ಆಸನವಾಗಿಉಳ್ಳವನು. ಕಮಲನೇತ್ರನು. ಕಮಲದಂತಿ ರುವ ಪಾದವುಳ್ಳವನು. ಕಮಲದಲ್ಲಿ ನಿಂತಿರುವವನು. ಸಕಲಕ್ಕೂ ಮೂಲಕಾರಣನು.

ಕರಣಾತ್ಮಾ ಚ ಕಾರ್ಯಾತ್ಮಾ ಕಾಮಾತ್ಮಾ ಕಾಮವರ್ಧನಃ ।
ತ್ರಿಶರೀರಃ ಶರೀರೀ ಚ ಶರೀರಾರೋಗ್ಯವರ್ಧನಃ ॥೧೨೬॥

ಜಾಗ್ರತ್ಪ್ರಪಂಚಾಧಿಪತಿಃ ವಿಶ್ವಲೋಕೇಶ್ವರೇಶ್ವರಃ ।
ಸುಷುಪ್ತಿಸ್ಥೋ ಭೀಮಸೇನೋ ಮಹಾಸೇನಸ್ತುರೀಯಕಃ ॥೧೨೭॥

ಸ್ವಾಪನಸ್ಸ್ವಪ್ನನಿಲಯೋ ವಿಶ್ವಮೂರ್ತಿರ್ವಿರೋಚನಃ ।
ವೀರಾಯುಧೋ ವೀರವೇಷೋ ವೀರಾಯುಧಕರೋಜ್ಜ್ವಲಃ ॥೧೨೮॥

ಸರ್ವಲಕ್ಷಣಸಂಪನ್ನೋ ಲಕ್ಷ್ಮೀವಾಂತ್ಸರ್ವಲಕ್ಷಣಃ ।
ಸಮಯಜ್ಞೋ ಯಜ್ಞಸೇನೋ ಸಮಾಧಿಃ ಸಾಮವಲ್ಲಭಃ ॥೧೨೯॥

ಅಮಲೋ ಮಾಲ್ಯಸುಪ್ರೀತೋ ವಲ್ಲಭೋ ಭಲ್ಲವೋ ಬಲಃ ।
ಅಹೇತುರ್ಹೇತುಮಾನ್ ಹೇತುರ್ಹೇತಿಧೃಗ್ಧರ್ತುರಾಶ್ರಯಃ ॥೧೩೦॥

---

ಕಾರ್ಯರೂಪವಾಗಿತೋರುವವನು. ಇಷ್ಟಾರ್ಥಗಳನ್ನು ಸಲ್ಲಿಸುವವನು. ಇಷ್ಟಾರ್ಥ
ಗಳನ್ನು ಹೆಚ್ಚಿಸುವವನು. ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರವುಳ್ಳ
ವನು. ಔಪಾಧಿಕವಾದ ದೇಹವುಳ್ಳವನು. ದೇಹಾರೋಗ್ಯವನ್ನು ಹೆಚ್ಚಿಸುವವನು.
||೧೨೫-೧೨೬||

ಎಚ್ಚರದಿಂದಿರುವ ಪ್ರಪಂಚಕ್ಕೆ ಅಧಿಪತಿಯು, ಪ್ರಪಂಚಾಂತರ್ಗತವಾದ ಸರ್ವ
ಲೋಕಕ್ಕೂ ಒಡೆಯನು, ಸದಾ ಸ್ವಪ್ನಾವಸ್ಥೆಯಲ್ಲಿರುವವನು. ಪರಾಕ್ರಮಿಯು,
ದೊಡ್ಡಸೈನ್ಯವುಳ್ಳವನು, ತುರೀಯಾವಸ್ಥೆಯುಳ್ಳವನು, ಸ್ವಪ್ನಸುಖವನ್ನನುಭವಿಸು
ವವನು, ಸ್ವಪ್ನಾವಸ್ಥೆಯುಳ್ಳವನು. ಪ್ರಪಂಚ ಸ್ವರೂಪನು. ವಿಶೇಷವಾಗಿ ಶೋಭಿ
ಸುವವನು. ವೀರರ ಆಯುಧಗಳನ್ನು ಧರಿಸಿರುವವನು. ವೀರೋಚಿತವಾದ ವೇಷ
ವುಳ್ಳವನು. ವೀರಾಯುಧದಿಂದ ಶೋಭಿಸುವ ಕೈಯುಳ್ಳವನು. ||೧೨೭-೧೨೮||

ಎಲ್ಲಾ ಲಕ್ಷಣಗಳಿಂದ ಕೂಡಿದವನು. ಸಂಪದ್ಯುಕ್ತನು. ಸಂಪೂರ್ಣ ಲಕ್ಷಣ
ಗಳುಳ್ಳವನು. ಕಾಲವನ್ನರಿತವನು. ಯಜ್ಞದಲ್ಲಿ ತಿಲಕಪ್ರಾಯನು. ಸ್ಥಿರ ಬುದ್ಧಿಯು
ಳ್ಳವನು. ಸಾಮಗಾನ ಪ್ರೀತನು. ನಿರ್ಮಲನು. ಮಾಲಾಭರಣದಿಂದ ಸುಪ್ರೀತನಾ
ಗುವವನು. ಸಕಲರಿಗೂ ಪತಿಯೆನಿಸಿದವನು. ಮಹಾಬಲಿಷ್ಠನು. ಯಾವುದಕ್ಕೂ
ಕಾರಣನಲ್ಲದವನು. ಕಾರಣ ಸಹಿತವಾಗಿ ಕಾರ್ಯ ನಡೆಸುವವನು. ಕಾರಣ ಸ್ವರೂಪನು.
ಆಯುಧಧಾರಿಯು. ಶತ್ರುವಿಗೆ ಆಶ್ರಯ ಕೊಡುವವನು. ||೧೨೯-೧೩೦||

ನಿಕ್ಷರೋ ರೋಹಿತೋ ರಕ್ತೋ ವಿರಕ್ತೋ ವಿಜನಪ್ರಿಯಃ
ಮಹೀಧರೋ ಮಾತರಿಶ್ವಾ ಮಂಗಲ್ಯೋ ಮಕರಾಲಯಃ ॥೧೩೧॥

ಮಧ್ಯಃ ಶತಾದಿರಕ್ಷೋಭ್ಯೋ ರಕ್ಷೋ ದಾರಣವಿಕ್ರಮಃ ।
ಗುಹೋ ಗುಹಾಶಯೋ ಗೋಪ್ತಾ ಗುಹೇಶೋ ಗುಣವರ್ಧನಃ ॥೧೩೨॥

ನಿರುದ್ಯೋಗೋ ಮಹೋದ್ಯೋಗೋ ನಿರೀಹೋ ನಿರ್ಣಯೋ ಮಧುಃ ।
ಮಹಾವೇಗೋ ಮಹಾಕ್ರೋಧೋ ಮಹಾಪ್ರಾಣೋ ಮಹೇಶ್ವರಃ ॥೧೩೩॥

ಅಮೃತಾಸ್ಯಾಮೃತಾಹಾರೋ ಮಿತಭಾಷ್ಯೋ ಮಿತಾರ್ಥವಿತ್ ।
ಅಕ್ಷೋಭ್ಯಃ ಕ್ಷೋಭಕೃತ್ಕ್ಷೇಮೋ ಕ್ಷೇಮವಾನ್ ಕ್ಷಾಮನಾಶನಃ ॥೧೩೪॥

ರುದ್ರೋ ರುದ್ರಪ್ರಿಯೋ ಮತ್ತೋ ಮತ್ತಕೇಕೀವಹಃ ಪರಃ ।
ಧರ್ಮೋ ಧರ್ಮವಿದಾಂ ಶ್ರೇಷ್ಠೋ ವೈಕುಂಠೋ ವಾಸವಪ್ರಿಯಃ ॥೧೩೫॥

---

ನಾಶರಹಿತನು. ರಕ್ತವರ್ಣದವನು. ಪ್ರೀತಿಯುಕ್ತನು. ವೈರಾಗ್ಯಶಾಲಿಯು. ಏಕಾಂತಪ್ರಿಯನು. ಭೂಮಿಯನ್ನು ಧರಿಸಿರುವವನು. ವಾಯುರೂಪಿಯು. ಮಂಗಲಪ್ರದನು. ಸಮುದ್ರರೂಪನು. ಮಧ್ಯಲೋಕವನ್ನು ಅಲಂಕರಿಸುವವನು. ಆದಿಸಂಖ್ಯಾಕಾರಣನು. ಹಿಂಸೆ ಇಲ್ಲದವನು. ರಜೋಗುಣಾತ್ಮಕನು. ಭಯಂಕರವಾದ ಪರಾಕ್ರಮವುಳ್ಳವನು, ಶತ್ರುಗಳಿಂದ ತನ್ನ ಸೈನ್ಯವನ್ನು ರಕ್ಷಿಸುವವನು, ಹೃದಯ ಕುಹರದಲ್ಲಿ ಅಡಗಿರುವವನು, ಪ್ರಪಂಚರಕ್ಷಕನು, ಗುಹಾಧಿಪತಿಯು, ಗುಣಗಳನ್ನು ಹೆಚ್ಚಿಸುವವನು. ॥೧೩೧-೧೩೨॥

ಉದ್ಯೋಗವಿಲ್ಲದವನು, ಮಹತ್ತಾದ ಉದ್ಯೋಗವುಳ್ಳವನು, ಆಶಾರಹಿತನು, ನಿರ್ಣಯಸ್ವರೂಪನು, ಮಧುರಸಾತ್ಮಕನು, ಮಹಾವೇಗವುಳ್ಳವನು, ಅತಿಶಯವಾದ ಕ್ರೋಧವುಳ್ಳವನು, ಹೆಚ್ಚು ಬಲಿಷ್ಠನು, ಮಹೇಶ್ವರನು, ಅಮೃತಾಸ್ಯನು, ಅಮೃತಾಹಾರಿಯು, ಮಿತವಾಗಿ ಮಾತನಾಡುವವನು, ಅತಿಶಯವಾದ ಅರ್ಥವನ್ನರಿತವನು, ನಾಶರಹಿತನು, ಪ್ರಪಂಚವನ್ನೇ ಕ್ಷೋಭೆಗೊಳಿಸುವವನು, ಕ್ಷೇಮಸ್ವರೂಪನು, ಕ್ಷೇಮವುಳ್ಳವನು, ಕ್ಷಾಮವನ್ನು ನಾಶಗೈದವನು. ॥೧೩೩-೧೩೪॥

ಭಯಂಕರನು, ರುದ್ರನಿಗೆ ಪ್ರಿಯನೆನಿಸಿದವನು, ಮದಿಸಿದವನು, ಮದಿಸಿದ ನವಿಲಿನಮೇಲೆ ಕುಳಿತಿರುವವನು, ಪರಾತ್ಪರನು, ಧರ್ಮರೂಪಿಯು, ಧರ್ಮಜ್ಞರಲ್ಲಿ

ಪರಧೀರಪರಾಕ್ರಾಂತಃ ಪರಿತುಷ್ಟಃ ಪರಾಸುಕೃತ್ ।
ರಂಜನೋ ರಣಗೋ ದುಷ್ಟೋ ರಮಣೋ ರಾತ್ರಿವರ್ಧನಃ ॥೧೩೬॥

ವಿರಜೋ ವಿಕ್ರಮೋ ವಿದ್ವಾನ್ ವೀರಭದ್ರಪ್ರಿಯಃ ಕ್ರತುಃ ।
ವಿನಾಯಕಾನುಜೋ ಧಾತಾ ನಂದೀ ಪ್ರಿಯಸಖೋ ವಟುಃ ॥೧೩೭॥

ಸರ್ವಶಕ್ತಿಮತಾಂ ಶ್ರೇಷ್ಠಃ ಸರ್ವದೈತ್ಯಭಯಂಕರಃ ।
ಶತ್ರುಘ್ನಃ ಸರ್ವಲೋಕೇಶಃ ಶತ್ರುಭಿಃ ಶ್ಲಾಘ್ಯಪೌರುಷಃ ॥೧೩೮॥

ಶಿಶಿರೋ ವರ್ಷಕೋ ಗ್ರೀಷ್ಮೋ ವಸಂತೋ ಮಾಧವೋ ಮಧುಃ ।
ವಸಂತಕೇಲಿನಿರತೋ ವನಕೇಲೀ ವಿಶಾರದಃ ॥೧೩೯॥

---

ಶ್ರೇಷ್ಠನಾದವನು, ವೈಕುಂಠ (ವಿಷ್ಣು) ರೂಪನು, ಇಂದ್ರನಿಗೆ ಪ್ರಿಯನೆನಿಸಿದವನು. ಶತ್ರುಗಳಿಗೆ ಧೀರನು. ಶತ್ರುಗಳಿಂದ ಆಕ್ರಾಂತನು. ತೃಪ್ತನಾದವನು. ಶತ್ರುಗಳ ಪ್ರಾಣವನ್ನು ಅಪಹರಿಸುವವನು. ರಂಜನೆಗೊಳಿಸುವವನು. ರಣಮುಕ್ತನು. ಕೋಪವುಳ್ಳವನು. ಸರ್ವರಿಗೂ ಒಡೆಯನು. ರಾತ್ರಿಯನ್ನು ಬೆಳಗಿಸುವವನು. ॥೧೩೫-೧೩೬॥

ರಜೋಗುಣವಿಲ್ಲದವನು. ಪರಾಕ್ರಮಿಯು. ವಿದ್ವಾಂಸನು. ವೀರಭದ್ರನಿಗೆ ಪ್ರಿಯನೆನಿಸಿದವನು. ಯಾಗಸ್ವರೂಪನು. ವಿನಾಯಕನ ತಮ್ಮನು. ಬ್ರಹ್ಮ ರೂಪಿಯು. ನಂದಿರೂಪನು. ಆಪ್ತರಾದ ಸ್ನೇಹಿತರುಳ್ಳವನು. ಬ್ರಹ್ಮಚಾರಿಯು. ಸರ್ವಶಕ್ತಿಪಡೆದವರಲ್ಲಿ ಶ್ರೇಷ್ಠನೆನಿಸಿದವನು. ಸರ್ವದೈತ್ಯಭಯಂಕರನು. ಶತ್ರು ನಾಶಕನು. ಸರ್ವಲೋಕಾಧಿಪತಿಯು. ಶತ್ರುಗಳಿಂದಲೂ ಹೊಗಳಿಸಿಕೊಳ್ಳುವ ಪರಾಕ್ರಮವುಳ್ಳವನು. ॥೧೩೭-೧೩೮॥

ಶಿಶಿರ, ವರ್ಷ, ಗ್ರೀಷ್ಮ, ವಸಂತ, ವೈಶಾಖ, ಮಧುಮಾಸ, ಏತದ್ರೂಪಿ ಯಾದವನು. ವಸಂತೋತ್ಸವದಲ್ಲಿ ನಿರತನಾದವನು. ಉದ್ಯಾನದ ಕ್ರೀಡೆಯಲ್ಲಿ ನಿಪುಣನಾದವನು. ಪುಷ್ಪಧೂಳಿಯಿಂದ ಕೂಡಿದವನು. ಹೊಸಚಿಗುರನ್ನು ತಲೆಯಲ್ಲಿ ಧರಿಸಿದವನು. ಜಲಕ್ರೀಡಾಸಕ್ತನು. ಜಹ್ನುಪುತ್ರಿಯಾದ ಗಂಗಾ ದೇವಿಯಿಂದ ಪ್ರೀತಿಸಲ್ಪಟ್ಟವನು. ॥೧೩೯-೧೪೦॥

ಪುಷ್ಪಧೂಲೀಪರಿಚಿತೋ ನವಪಲ್ಲವಶೇಖರಃ ।
ಜಲಕೇಲೀಪರಿವೃತೋ ಜಹ್ನುಕನ್ಯೋಪಲಾಲಿತಃ ॥೧೪೦॥

ಗಾಂಗೇಯೋ ಗೀತಕುಶಲೋ ಗಂಗಾಪಾರವಿಹಾರಣಃ ।
ಗಂಗಾಧರೋ ಗಣಪತಿರ್ಗಣಾಯುತ ಸಮಾವೃತಃ ॥೧೪೧॥

ವಿಶ್ರಮೋ ವಿಕ್ರಮೋ ಧೂರ್ತೋ ವಿಶ್ವಭುಗ್ವಿಶ್ವದಕ್ಷಿಣಃ ।
ವಿಶ್ವಗೋ ವಿಶ್ರುತಪದೋ ವಿಶ್ವರಕ್ಷಣತತ್ಪರಃ ॥೧೪೨॥

ವಿವರ್ತಾನಂದಕಾರೀ ಚ ಪಾರ್ವತೀ ಪ್ರಾಣನಂದನಃ ।
ವಿಶಾಖಃ ಷಣ್ಮುಖಃ ಶಾಸ್ತಾ ಕಾರ್ತಿಕೇಯೋ ವರಪ್ರದಃ ॥೧೪೩॥

ಏವಂ ಸಹಸ್ರನಾಮ್ನೈವ ಸಂಪೂಜ್ಯ ಸುರಸತ್ತಮಾಃ ।
ಪುನಶ್ಚಾಷ್ಟನಾಮ್ನೈವ ತುಷ್ಟುವುರ್ಮುನಯಸ್ತದಾ ॥೧೪೪॥

---

ಗಂಗಾಪುತ್ರನು, ಸಂಗೀತದಲ್ಲಿ ನಿಪುಣನು. ಗಂಗಾತೀರದಲ್ಲಿ ಸಂಚರಿಸುವವನು. ಗಂಗೆಯನ್ನು ಧರಿಸಿದವನು. ಶಿವಗಣಗಳಿಗೆ ಅಧಿಪತಿಯು. ಹತ್ತು ಸಾವಿರ ಶಿವಗಣಗಳ ಸಮೂಹದಿಂದ ಕೂಡಿದವನು. ವಿಶೇಷವಾಗಿ ಶ್ರಮವಹಿಸುವವನು. ಪರಾಕ್ರಮಿಯು. ದುಷ್ಟನು. ಪ್ರಪಂಚವನ್ನೇ ಭಕ್ಷಿಸುವವನು. ವಿಶ್ವವನ್ನೇ ದಕ್ಷಿಣೆಯನ್ನಾಗಿ ಹೊಂದುವವನು. ವಿಶ್ವದಲ್ಲೆಲ್ಲಾ ಸಂಚರಿಸುವವನು. ವಿಶೇಷವಾದ ವಿದ್ಯೆಯುಳ್ಳವರಲ್ಲಿ ಪಕ್ಷಪಾತವಿಡುವವನು. ಪ್ರಪಂಚವನ್ನು ರಕ್ಷಿಸುವುದರಲ್ಲಿ ಆಸಕ್ತನು. ॥೧೪೧-೧೪೨॥

ತನ್ನನ್ನು ನಮಸ್ಕರಿಸಿದವರಿಗೆ ಆನಂದವನ್ನುಂಟುಮಾಡುವವನು. ಪಾರ್ವತಿಯನ್ನು ಆನಂದಗೊಳಿಸುವವನು. ವಿಶೇಷವಾದ ತೇಜಸ್ಸುಳ್ಳವನು. ಆರು ಮುಖಗಳುಳ್ಳವನು. ಶಿಕ್ಷಕನು. ಕೃತ್ತಿಕಾಪುತ್ರನು. ಭಕ್ತರಿಗೆ ವರವನ್ನು ಅನುಗ್ರಹಿಸುವವನು." ಈರೀತಿ ಕುಮಾರಸ್ವಾಮಿಯನ್ನು ಸಕಲ ಮಹರ್ಷಿಗಳೂ ಸಹಸ್ರನಾಮಗಳಿಂದ ಪೂಜಿಸಿ ಅಷ್ಟೋತ್ತರಶತನಾಮಗಳಿಂದಲೂ ಸಂತೋಷಗೊಳಿಸಿದರು ॥೧೪೩-೧೪೪॥

ದ್ವಿಷಡ್ಭುಜಂ ಷಣ್ಮುಖಮಂಬಿಕಾಸುತಂ ।
ಕುಮಾರಮಾದಿತ್ಯಸಮಾನತೇಜಸಂ ।
ವಂದೇ ಮಯೂರಾಸನಮಗ್ನಿಸಂಭವಂ
ಸೇನಾನಿಮೀಶಂ ಸಕಲೇಷ್ಟಭೀಷ್ಟದಂ ॥೪೫॥

ಸ್ಕಂದೋ ಗುಹಃ ಷಣ್ಮುಖಶ್ಚ ಫಾಲನೇತ್ರಸುತಃ ಪ್ರಭುಃ ।
ಪಿಂಗಲೋ ಕೃತ್ತಿಕಾಸೂನುಃ ಶಿಖಿವಾಹೋ ದ್ವಿಷಡ್ಭುಜಃ ॥೧೪೬॥

ದ್ವಿಷಣ್ಣೇತ್ರಃ ಕುಮಾರಶ್ಚ ಪಿಶಿತಾಶನಭಂಜನಃ ।
ತಾರಕಾಸುರಸಂಹರ್ತಾ ರಕ್ಷೋ ಬಲನಿಷೂದನಃ ॥೧೪೭॥

ಮತ್ತಃ ಪ್ರಮತ್ತ ಉನ್ಮತ್ತಃ ಸುರಸೈನ್ಯಸ್ಯ ರಕ್ಷಕಃ ।
ದೇವಸೇನಾಪತಿಃ ಪ್ರಾಜ್ಞಃ ಕೃಪಾಲುರ್ಭಕ್ತವತ್ಸಲಃ ॥೧೪೮॥

---

ಸಕಲ ಮುನಿಗಳೂ ಸಹಸ್ರನಾಮಸ್ತೋತ್ರದಿಂದ ಮೊದಲು ಷಣ್ಮುಖನನ್ನು ತೃಪ್ತಿಗೊಳಿಸಿ, ಮತ್ತೆ ಅಷ್ಟೋತ್ತರಶತನಾಮಗಳಿಂದ ಕುಮಾರಸ್ವಾಮಿಯನ್ನು ಪೂಜಿಸಲು ಈರೀತಿ ಮೊದಲು ಧ್ಯಾನಮಾಡಿದರು. “ಕುಮಾರಸ್ವಾಮಿಯೇ, ಹನ್ನೆರಡು ಭುಜಗಳಿಂದಲೂ ಆರು ಮುಖಗಳಿಂದಲೂ ಕೂಡಿರುವ ಗೌರೀಪುತ್ರನೇ, ನೀನು ಸೂರ್ಯಸಮಾನವಾದ ತೇಜಸ್ಸುಳ್ಳವನು. ಸುಂದರವಾದ ನವಿಲೇ ನಿನ್ನ ಆಸನವಾಗಿರುವುದು. ಅಗ್ನಿಯಿಂದ ನೀನು ಜನಿಸಿದವನು. ಸಕಲ ಶಿವಗಣ ಸೈನ್ಯಕ್ಕೂ ನೀನೇ ಅಧಿಪತಿಯು ಸಕಲರ ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುವವನು. ॥೧೪೫॥

ಶಿವರೇತಸ್ಸಿನಿಂದ ಜನಿಸಿದವನು. ಸ್ವಸೈನ್ಯವನ್ನು ಶತ್ರುಗಳಿಂದ ರಕ್ಷಿಸುವವನು. ಆರುಮುಖಗಳುಳ್ಳವನು. ಫಾಲನೇತ್ರನಾದ ಶಿವನ ಸುತನು. ಲೋಕದೊಡೆಯನು. ಪಿಂಗಲವರ್ಣದವನು. ಕೃತ್ತಿಕಾಪುತ್ರನು. ಮಯೂರವಾಹನನು. ಹನ್ನೆರಡು ಭುಜಗಳುಳ್ಳವನು. ಹನ್ನೆರಡು ಕಣ್ಣುಗಳಿಂದ ವಿರಾಜಿಸುವವನು. ಕುಮಾರಸ್ವಾಮಿಯು. ಮಾಂಸಭಕ್ಷಕರಾದ ರಾಕ್ಷಸರನ್ನು ನಾಶಗೈದವನು. ತಾರಕಾಸುರನನ್ನು ನಾಶಗೊಳಿಸಿದವನು. ರಜೋಗುಣವುಳ್ಳವನು. ಬಲಿಷ್ಠರಾದ ಶತ್ರುಗಳನ್ನು ಧ್ವಂಸಮಾಡಿದವನು. ॥೧೪೬-೧೪೭॥

ಮದಿಸಿದವನು. ವಿಶೇಷವಾದ ಮದದಿಂದ ಕೂಡಿದವನು. ಹುಚ್ಚನಂ

ಉಮಾಸುತೋ ಮಹಾಸೇನಃ ಕುಮಾರಃ ಕ್ರೌಂಚದಾರಣಃ ।
ಸೇನಾನಿರಗ್ನಿಜನ್ಮಾ ಚ ವಿಶಾಖಃ ಶಂಕರಾತ್ಮಜಃ ॥೧೪೯॥

ಶಿವಸ್ವಾಮೀ ಗಣಸ್ವಾಮೀ ಸರ್ವಸ್ವಾಮೀ ಸನಾತನಃ ।
ಅನಂತಶಕ್ತಿರಕ್ಷೋಭ್ಯಃ ಪಾರ್ವತೀಪ್ರಿಯನಂದನಃ ॥೧೫೦॥

ಗಂಗಾಸುತಃ ಶರೋದ್ಭೂತಃ ಆಹುತಃ ಪಾವಕಾತ್ಮಜಃ ।
ಜೃಂಭಃ ಪ್ರಜೃಂಭ ಉಜ್ಜೃಂಭಃ ಕಮಲಾಸನಸಂಸ್ತುತಃ ॥೧೫೧॥

ಏಕವರ್ಣೋ ದ್ವಿವರ್ಣಶ್ಚ ತ್ರಿವರ್ಣಃ ಸುಮನೋಹರಃ ।
ಚಾತುರ್ವರ್ಣಃ ಪಂಚವರ್ಣಃ ಪ್ರಜಾಪತಿಹರಃ ಪತಿಃ ॥೧೫೨॥

ಅಗ್ನಿಗರ್ಭಶ್ಶಮೀಗರ್ಭೋ ವಿಶ್ವರಕ್ಷಸ್ಸುರಾರಿಹಾ ।
ಹರಿದ್ವರ್ಣಃ ಶುಭಕರಃ ಪಟುಮಾನ್ಪಟುವೇಷಭೃತ್ ॥೧೫೩॥

---

ತಿರುವವನು. ಸುರಸೈನ್ಯವನ್ನು ಕಾಪಾಡುವವನು. ದೇವಸೈನ್ಯಕ್ಕೆ ಅಧಿಪತಿಯು. ವಿಶೇಷವಾಗಿ ತಿಳಿದವನು. ದಯಾಶಾಲಿಯು. ಭಕ್ತರಲ್ಲಿ ಪ್ರೀತಿಯುಳ್ಳವನು. ಪಾರ್ವತಿಯ ಪುತ್ರನು. ದೊಡ್ಡ ಸೈನ್ಯವುಳ್ಳವನು. ಕುಮಾರಸ್ವಾಮಿಯು. ಕ್ರೌಂಚ ಪರ್ವತವನ್ನು ನಾಶಗೈದವನು. ಸೇನಾಪತಿಯು. ಅಗ್ನಿಯಿಂದ ಜನಿಸಿದವನು. ಉಷ್ಣಗುಣವುಳ್ಳವನು. ಶಂಕರನ ಪ್ರಿಯಪುತ್ರನು. ಶಿವನಿಗೂ, ಶಿವಗಣಗಳಿಗೂ ನಿಯಾಮಕನಾಗಿರುವವನು. ಸರ್ವರಿಗೂ ಒಡೆಯನು. ಅನಾದಿಪುರುಷನು. ಅನಂತಶಕ್ತಿಯುಳ್ಳವನು. ನಾಶರಹಿತನು. ಪಾರ್ವತೀಪ್ರಿಯಪುತ್ರನು. ॥೧೪೯-೧೫೦॥

ಗಂಗಾಪುತ್ರನು. ಶರವನದಲ್ಲಿ ಹುಟ್ಟಿದವನು. ಅಗ್ನಿಯಿಂದ ಶುದ್ಧನಾದವನು. ಅಗ್ನಿಪುತ್ರನು. ಹೂಂಕರಿಸುವವನು. ಪ್ರಕೃಷ್ಟವಾದ ಆಕಳಿಕೆಯುಳ್ಳವನು. ಬ್ರಹ್ಮನಿಂದಲೂ ಸ್ತುತ್ಯನಾದವನು. ಒಂದೇ ವರ್ಣವುಳ್ಳವನು. ಎರಡಕ್ಷರದ ಮತ್ತು ಮೂರು ಅಕ್ಷರದ ನಾಮಗಳುಳ್ಳವನು. ಮನೋಹರನು ನಾಲ್ಕು ಜಾತಿಗಳುಳ್ಳವನು. ಐದು ವರ್ಣಗಳಿಂದ ವಿರಾಜಿಸುವವನು. ಪ್ರಜೆಗಳನ್ನು ರಕ್ಷಿಸುವವನು. ಹಗಲಿಗೆ ಒಡೆಯನೆನಿಸಿರುವವನು. ॥೧೫೧-೧೫೨॥

ಅಗ್ನಿಯನ್ನೇ ಗರ್ಭದಲ್ಲಿ ಉಳ್ಳವನು, ಶಮೀವೃಕ್ಷದ ಮಧ್ಯದಲ್ಲಿರುವ ಅಗ್ನಿ ರೂಪನು, ವಿಶ್ವವನ್ನು ರಕ್ಷಿಸುವವನು, ರಾಕ್ಷಸರನ್ನು ನಾಶಗೊಳಿಸುವವನು. ಹರಿ

ಪೂಷಾ ಗಭಸ್ತಿರ್ಗಹನಶ್ಚಂದ್ರವರ್ಣಃ ಕಲಾಧರಃ ।
ಮಾಯಾಧರೋ ಮಹಾಮಾಯೋ ಕೈಲಾಸಾವಸಥಶ್ಶಿಖೀ ॥೧೫೪॥

ವಿಶ್ವಯೋನಿರಮೇಯಾತ್ಮಾ ತೇಜೋನಿಧಿರನಾಮಯಃ ।
ಪರಮೇಷ್ಠೀ ಪರಂಬ್ರಹ್ಮ ವೇದಗರ್ಭೋ ವಿರಾಡ್ವಸುಃ ॥೧೫೫॥

ಪುಲಿಂದಕನ್ಯಾಭರ್ತಾ ಚ ಮಹಾಸಾರಸ್ವತಪ್ರದಃ ।
ಆಶ್ರಿತಾಖಿಲದಾತಾ ಚ ಚೋರಘ್ನೋ ರೋಗನಾಶನಃ ॥೧೫೬॥

ಅನಂತಶಕ್ತಿರಾನಂದಃ ಶಿಖಂಡೀ ಕೃತಕೇತನಃ ।
ಡಂಭಃ ಪರಮಡಂಭಶ್ಚ ಮಹಾಡಂಭೋ ವೃಷಾಕಪಿಃ ॥೧೫೭॥

ಕಾರಣಃ ಪಾತ್ರದೇಹಶ್ಚ ಕಾರಣಾತೀತವಿಗ್ರಹಃ ।
ಅಹಿರೂಪೋಽಮೃತವಪುಃ ಪ್ರಾಣಾಯಾಮಪರಾಯಣಃ ॥೧೫೮॥

---

ದ್ವರ್ಣವುಳ್ಳವನು, ಶುಭಕರನು, ಚಟುವಟಿಕೆಯುಳ್ಳವನು, ವಟುವೇಷವನ್ನು ಧರಿಸಿದವನು. ಸೂರ್ಯ ಕಿರಣಗಳಿಂದ ವ್ಯಾಪೃತನಾಗಿರುವವನು. ಚಂದ್ರಕಾಂತಿಯುಳ್ಳವನು. ಕಲಾಧಾರಿಯು. ಮಾಯಾಧಾರಿಯು. ವಿಶೇಷವಾದ ಮಾಯೆಯುಳ್ಳವನು. ಕೈಲಾಸ ಪರ್ವತದಲ್ಲಿ ವಾಸಮಾಡುವವನು. ಶಿಖೆಯುಳ್ಳವನು ॥೧೫೩-೧೫೪॥

ವಿಶ್ವಕ್ಕೆ ಮೂಲಕಾರಣನು. ಅಳತೆಗೆ ಸಿಕ್ಕದವನು. ತೇಜೋನಿಧಿಯು ರೋಗರುಜಿನಗಳಿಲ್ಲದವನು. ಪರಮಪದದಲ್ಲಿ ನಿಂತಿರುವವನು. ಪರಬ್ರಹ್ಮರೂಪಿಯು. ವೇದವನ್ನೇ ಗರ್ಭದಲ್ಲಿ ಉಳ್ಳವನು. ವಿರಾಡ್ರೂಪಿಯು. ಪುಲಿಂದಕನ್ಯಾಪತಿಯೆನಿಸಿದವನು. ಸರಸ್ವತಿಯ ವಿಶೇಷ ಸಂಪತ್ತನ್ನು ಹೊಂದಿರುವವನು. ಆಶ್ರಿತರನ್ನು ಸಂಪೂರ್ಣವಾಗಿ ರಕ್ಷಿಸುವವನು. ಚೋರರನ್ನು ನಾಶಗೊಳಿಸುವವನು. ರೋಗ ನಾಶಕನು. ॥೧೫೫-೧೫೬॥

ಅನಂತಶಕ್ತಿಯುಳ್ಳವನು. ಆನಂದರೂಪನು. ನವಿಲನ್ನೇ ಧ್ವಜದಲ್ಲಿಟ್ಟುಕೊಂಡಿರುವವನು. ಆಟಾಟೋಪವುಳ್ಳವನು. ಹೆಚ್ಚಿನ ಆಡಂಬರದವನು. ಆರ್ಭಟವುಳ್ಳವನು. ಧರ್ಮರಕ್ಷಕನು. ಸಕಲ ಕರ್ಮಕ್ಕೂ ಆದಿಕಾರಣನು. ಸತ್ಪಾತ್ರವಾದ ದೇಹವುಳ್ಳವನು. ಯಾವ ಕಾರಣಗಳಿಗೂ ಸಿಕ್ಕದ ದೇಹವುಳ್ಳವನು. ಸರ್ಪರೂಪಿಯು. ನಾಶವಿಲ್ಲದ ದೇಹವುಳ್ಳವನು. ಪ್ರಾಣಾಯಾಮಾದಿಗಳಲ್ಲಿ ನಿಪುಣನಾದವನು. ॥೧೫೭-೧೫೮॥

ವಿರುದ್ಧಹರ್ತಾ ವೀರಘ್ನೋ ರಕ್ತಶ್ಯಾಮಲಲೋಚನಃ ।
ಬಹುವರ್ಣೋ ಗಣಪತಿಃ ಸ್ವಭಕ್ತಾಭೀಷ್ಟದಾಯಕಃ ॥೧೫೯॥

ಸರ್ವೇಶ್ವರೋ ಲೋಕಗುರುರಸುರಾನೀಕನಾಶನಃ ।
ಸುಬ್ರಹ್ಮಣ್ಯೋ ಗುಹಃ ಸ್ಕಂದೋ ಬ್ರಹ್ಮಣ್ಯೋ ಬ್ರಾಹ್ಮಣಪ್ರಿಯಃ ॥೧೬೦॥

॥ ಗಣೇಶ್ವರಾ ಊಚುಃ ॥

ಏವಮಷ್ಟೋತ್ತರಶತನಾಮಭಿಃ ಸ್ತೌತಿ ಯೋ ನರಃ ।
ತಸ್ಯಾಭೀಷ್ಟಾನಿ ಸರ್ವಾಣಿ ಪ್ರಯಚ್ಛತಿ ಗುಹೋಮುಹುಃ ॥೧೬೧॥

ಕನಕಕುಂಡಲ ಮಂಡಿತ ಷಣ್ಮುಖಂ
ಸುವನರಾಜಿವಿರಾಜಿತಲೋಚನಂ ।
ನಿಶಿತಶಸ್ತ್ರಶರಾಸನಧಾರಿಣಂ
ಶರವಣೋದ್ಭವಮೀಶಸುತಂ ನಮಃ ॥೧೬೨॥

---

ತನಗೆ ವಿರುದ್ಧವಾಗಿರುವವರನ್ನು ನಾಶಗೊಳಿಸುವವನು. ವೀರರನ್ನು ಕೊಂದವನು. ರಕ್ತವರ್ಣದ ಮತ್ತು ಶ್ಯಾಮಲವರ್ಣದ ಕಣ್ಣುಗಳುಳ್ಳವನು. ಹೆಚ್ಚಾದ ವರ್ಣವುಳ್ಳವನು. ಗಣಗಳಿಗೆ ಅಧಿಪತಿಯು. ತನ್ನ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವವನು. ಸರ್ವೇಶ್ವರನು. ಲೋಕಗುರುವು. ರಾಕ್ಷಸಸೈನ್ಯವನ್ನು ನಾಶಗೊಳಿಸುವವನು. ಬ್ರಹ್ಮಮಾರ್ಗನಿರತನು. ಸ್ವಸೈನ್ಯವನ್ನು ಪರಸೈನ್ಯದಿಂದ ರಕ್ಷಿಸುವವನು. ಸೋರಿದ ಶಿವರೇತಸ್ಸಿನಿಂದ ಜನಿಸಿದವನು. ಬ್ರಹ್ಮಮಾರ್ಗದಲ್ಲಿ ಸಂಚರಿಸುವವನು. ಬ್ರಾಹ್ಮಣರಿಗೆ ಪ್ರಿಯನಾದವನು. ॥೧೫೯-೧೬೦॥

ಈ ರೀತಿ ಯಾವನು ಕುಮಾರಸ್ವಾಮಿಯನ್ನು ನೂರೆಂಟು ನಾಮಗಳಿಂದ ವಿಶೇಷವಾಗಿ ಸ್ತುತಿಸುವನೋ, ಅವನಿಗೆ ಪರಿಪೂರ್ಣವಾದ ಇಷ್ಟಾರ್ಥಸಿದ್ಧಿಯೂ, ಶಿವಾನುಗ್ರಹವೂ ಲಭಿಸುವುದು. ಇದರಲ್ಲಿ ಸಂಶಯವಿಲ್ಲ. ಹೀಗೆ ಹೇಳಿದ ಸಕಲ ಮುನಿಗಳ ಮಾತನ್ನು ಕೇಳಿ ಗಣನಾಯಕರು ಕುಮಾರಸ್ವಾಮಿಯನ್ನು ಈ ರೀತಿ ಭಯಭಕ್ತಿಯಿಂದ ಸ್ತುತಿಸ ತೊಡಗಿದರು. '' ಚಿನ್ನದ ಕರ್ಣಕುಂಡಲಗಳಿಂದ ವಿರಾಜಿತಗಳಾದ ಆರು ಮುಖಗಳುಳ್ಳವನೂ, ವನರಾಶಿಯಂತೆ ನೇರವಾಗಿ ವಿರಾಜಿಸುವ ಲೋಚನಗಳುಳ್ಳವನೂ, ಹರಿತವಾದ ಶಸ್ತ್ರಗಳೂ, ಬಲಿಷ್ಠವಾದ ಧನುಸ್ಸು ಇವು

ಸಿಂದೂರಾರುಣಮಿಂದುಕಾಂತಿವದನಂ ಕೇಯೂರಹಾರಾದಿಭಿ ।
ರ್ದಿವ್ಯೈರಾಭರಣೈರ್ವಿಭೂಷಿತತನುಂ ಸ್ವರ್ಗಸ್ಯ ಸೌಖ್ಯಪ್ರದಂ ।
ಅಂಭೋಜಾಭಯಶಕ್ತಿಕುಕ್ಕುಟಧರಂ ದಿವ್ಯಾಂಗರಾಗೋಜ್ಜ್ವಲಂ ।
ಸುಬ್ರಹ್ಮಣ್ಯಮುಪಾಸ್ಮಹೇ ಪ್ರಣಮತಾಂ ಸರ್ವಾರ್ಥಸಿದ್ಧಿಪ್ರದಂ ॥೧೬೩॥

॥ ಅಥ ಕವಚಂ ॥

ಓಂ ಶಿಖಾಂ ರಕ್ಷೇತ್ಕುಮಾರಸ್ತು ಕಾರ್ತಿಕೇಯಃ ಶಿರೋವತು ।
ಲಲಾಟಂ ಪಾರ್ವತೀಸೂನುರ್ವಿಶಾಖೋವತು ಭ್ರೂಯುಗಂ ॥೧೬೪॥

ನೇತ್ರೇವ್ಯಾತ್ಕ್ರೌಂಚಭೇದ್ಘ್ರಾಣ್ಯಾನ್ನಾಸಿಕಾಂ ಶಿಖಿವಾಹನಃ ।
ಕರ್ಣದ್ವಯಂ ಶಕ್ತಿಧರಃ ಕರ್ಣಮೂಲೇ ಷಡಾನನಃ ॥೧೬೫॥

---

ಗಳನ್ನು ಧರಿಸಿರುವವನೂ, ಶರವಣಸಂಜಾತನೂ ಆದ ಈಶಪುತ್ರನೇ, ಷಣ್ಮುಖ ಸ್ವಾಮಿಯೇ, ನಿನಗೆ ವಂದನೆಗಳು. ॥೧೬೧-೧೬೨॥

ಸಿಂದೂರಚೂರ್ಣದಂತೆ ಕೆಂಪಾಗಿಯೂ, ಚಂದ್ರಿಕೆಯಂತೆ ಆಹ್ಲಾದಕರವಾಗಿಯೂ ಇರುವ ಮುಖಕಾಂತಿಯುಳ್ಳ ಶಿವಕುಮಾರನೇ, ನೀನು ರತ್ನಹಾರಾದಿಗಳಿಂದಲೂ, ದಿವ್ಯಾಭರಣಗಳಿಂದಲೂ ಅಲಂಕೃತನಾಗಿರುವೆ. ಸ್ವರ್ಗಲೋಕದವರಿಗೂ ಸುಖಪ್ರದನೆನಿಸಿರುವೆ. ಕಮಲ, ಅಭಯಮುದ್ರೆ, ಶಕ್ತ್ಯಾಯುಧ, ನವಿಲು ಇವೇ ಮೊದಲಾದ ದಿವ್ಯವಸ್ತುಗಳನ್ನು ಕೈಯಲ್ಲಿ ಹಿಡಿದಿರುವೆ. ದಿವ್ಯವಾದ ಅಂಗರಾಗದಿಂದ ಶೋಭಿಸುತ್ತಿರುವೆ. ಮತ್ತು ನಿನ್ನಲ್ಲಿ ಭಕ್ತಿಯಿಂದಿರುವ ನಿನ್ನ ಭಕ್ತರ ಸರ್ವಾಭೀಷ್ಟಗಳನ್ನೂ ನೆರವೇರಿಸುವೆ. ಇಂತಹ ನಿನ್ನ ದಿವ್ಯಪಾದಗಳಿಗೆ ವಂದಿಸುತ್ತಾ ಸರ್ವದಾ ನಿನ್ನನ್ನೇ ಸ್ತೋತ್ರಮಾಡುವೆನು. ॥೧೬೩॥

ಕುಮಾರಸ್ವಾಮಿಯು ನಮ್ಮ ಶಿಖೆಯನ್ನೂ, ಕೃತ್ತಿಕಾಪುತ್ರನು ನಮ್ಮ ಶಿರಸ್ಸನ್ನೂ, ಪಾರ್ವತೀಪುತ್ರನು ಲಲಾಟವನ್ನೂ, ವಿಶಾಖನು ಹುಬ್ಬುಗಳನ್ನೂ, ಕ್ರೌಂಚಾಚಲ ಭೇದಕನಾದ ಕುಮಾರನು ನೇತ್ರಗಳನ್ನೂ, ಶಿಖಿವಾಹನನು, ಮೂಗನ್ನೂ ಶಕ್ತಿಧರನು ಎರಡು ಕಿವಿಗಳನ್ನೂ, ಷಣ್ಮುಖನು ಕರ್ಣಮೂಲಗಳನ್ನೂ ಸಂರಕ್ಷಿಸಲಿ. ॥೧೬೪-೧೬೫॥

ಮಹಾಸೇನನು ಗಂಡಯುಗಗಳನ್ನೂ, ತಾರಕಾರಿಯು ಕಪೋಲಪ್ರದೇಶಗಳನ್ನೂ, ಸೇನಾನಿಯು ತನ್ನ ಎರಡು ತುಟಿಗಳನ್ನೂ, ಶಿಖಿಕೇತನನು ನಾಲಿಗೆಯನ್ನೂ

ಗಂಡಯುಗ್ಮಂ ಮಹಾಸೇನಃ ಕಪೋಲೌ ತಾರಕಾಂತಕಃ ।
ಓಷ್ಠದ್ವಯಂ ಚ ಸೇನಾನೀ ರಸನಾಂ ಶಿಖಿಕೇತನಃ ॥೧೬೬॥

ತಾಲೂ ಕಲಾಧರಃ ಪಾತು ದಂಷ್ಟ್ರಾಂ ದೇವಶಿಖಾಮಣಿಃ ।
ಗಾಂಗೇಯಶ್ಚುಬುಕಂ ಪಾತು ಮುಖಂ ಪಾತು ಶಿಖೋದ್ಭವಃ ॥೧೬೭॥

ಹನುಂ ಹರಸುತಃ ಪಾತು ಪಾತು ಕಂಠಂ ಸದಾಗ್ನಿಭೂಃ ।
ಗ್ರೀವಾಂ ಗೌರೀಸುತಃ ಪಾತು ಕಕ್ಷೌ ಕಾರುಣ್ಯವಾರಿಧಿಃ ॥೧೬೮॥

ಸ್ಕಂಧೌ ಮಾನತಾಂ ಸ್ಕಂದೋ ಬಾಹುಲೇಯೋ ಭುಜೌ ಮಮ ।
ಬಾಹುಂ ಭವೋದ್ಭವಃ ಪಾತು ಕರೌ ಷಾಣ್ಮಾತುರೋಽವತು ॥೧೬೯॥

ಅಂಗುಲೀಃ ಪಿಂಗಲಃ ಪಾತು ಹೃದಯಂ ಮಧುಮಿತ್ರಜಿತ್ ।
ನಾಭಿಂ ಮನೋದರಂ ಚೈವ ಸುಬ್ರಹ್ಮಣ್ಯಃ ಸದಾವತು ॥೧೭೦॥

ಮಧ್ಯಂ ಜಗದ್ವಿಭುಃ ಪಾತು ನಾಭಿಂ ದ್ವಾದಶಲೋಚನಃ ।
ಕಟಿಂ ದ್ವಿಷಡ್ಭುಜಃ ಪಾತು ಗುಹ್ಯಂ ಪಾತು ಗುಹಸ್ಸದಾ ॥೧೭೧॥

---

ಕಲಾಧರನು ದವಡೆಗಳನ್ನೂ, ದೇವಶಿಖಾಮಣಿಯು ದವಡೇ ಹಲ್ಲುಗಳನ್ನೂ, ಗಂಗಾಪುತ್ರನು ಗಲ್ಲವನ್ನೂ, ಶಿಖೋದ್ಭವನು ಮುಖವನ್ನೂ ಕಾಪಾಡಲಿ. ॥೧೬೬-೧೬೭॥

ಹರಸುತನು ದವಡೆಯನ್ನೂ, ಅಗ್ನಿಜಾತನು ಕತ್ತನ್ನೂ, ಗೌರೀಸುತನು ಕುತ್ತಿಗೆಯನ್ನೂ, ಕರುಣಾಶಾಲಿಯು ಕಂಕುಳನ್ನೂ, ಸ್ಕಂದನು ಹೆಗಲುಗಳೆರಡನ್ನೂ, ಬಾಹುಲೇಯನು (ಕೃತ್ತಿಕಾಪುತ್ರನು) ಭುಜಗಳನ್ನೂ, ಭವಪುತ್ರನಾದ ಕುಮಾರನು ಬಾಹುಗಳನ್ನೂ, ಷಾಣ್ಮಾತುರನು ನನ್ನ ಎರಡು ಕೈಗಳನ್ನೂ ಕಾಪಾಡಲಿ. ॥೧೬೮-೧೬೯॥

ಪಿಂಗಲವರ್ಣದ ಗುಹನು ನನ್ನ ಅಂಗುಲಿಗಳನ್ನೂ, ಮಿತ್ರಜಿತ್ತುವು ಹೃದಯವನ್ನೂ, ಸುಬ್ರಹ್ಮಣ್ಯನು ನನ್ನ ನಾಭಿಯನ್ನೂ, ಜಗದ್ವ್ಯಾಪಕನು ಸೊಂಟವನ್ನೂ, ದ್ವಾದಶನೇತ್ರನು ನಾಭಿಯನ್ನೂ, ಬಲಿಷ್ಠವಾದ ಭುಜವುಳ್ಳವನು ಕಟಿಪ್ರದೇಶವನ್ನೂ, ಗುಹನು ಗುಹ್ಯಭಾಗವನ್ನೂ ಸಲಹಲಿ. ॥೧೭೦-೧೭೧॥

ಜಘನಂ ಜಾಹ್ನವೀಸೂನುಃ ಪೃಷ್ಠಭಾಗಂ ಕುಮಾರಧೃತ್ ।
ಊರೂ ಪಾಯಾದುಮಾಪುತ್ರೋ ಜಾನುಯುಗ್ಮಂ ಜಗತ್ಸ್ಥಿತಃ ॥೧೭೨॥

ಜಂಘೇ ಪಾತು ಜಗತ್ಪೂಜ್ಯಃ ಪಾತು ಗುಲ್ಫೌ ಮಹಾಬಲಃ ।
ಪಾದೌ ಪಾತು ಪರಂಜ್ಯೋತಿಃ ಸರ್ವಾಂಗಂ ಕುಕ್ಕುಟಧ್ವಜಃ ॥೧೭೩॥

ಊರ್ಧ್ವಂ ಪಾತು ಮಹೋದಾರ ಅಧಸ್ತಾತ್ಪಾತು ಶಾಂಕರಿಃ ।
ಪಾರ್ಶ್ವಂ ನಃ ಪಾತು ಪಾಪಘ್ನಃ ಸರ್ವತಃ ಪಾತು ಶಕ್ತಿಧೃಕ್ ॥೧೭೪॥

ಪ್ರಾಹ್ಣೇಽವತು ಪರಂ ಬ್ರಹ್ಮ ಮಧ್ಯಾಹ್ನೇಽವತು ತಾರಜಿತ್ ।
ಅಪರಾಹ್ಣೇ ಗುಹಃ ಪಾತು ರಾತ್ರೌ ದೈತ್ಯಾಂತಕೋಽವತು ॥೧೭೫॥

ತ್ರಿಸಂಧ್ಯಾಯಾಂ ಸುಧೀಃ ಪಾತು ಸರ್ವದಾ ಪಾತು ಬರ್ಹಿಗಃ ।
ಬಹಿಸ್ಥಂ ಷಣ್ಮುಖಃ ಪಾತು ಅಂತಸ್ಸ್ಥಂ ಕೃತ್ತಿಕಾಸುತಃ ॥೧೭೬॥

ವ್ರಜಂತಂ ಸುರಸೈನ್ಯೇಶಃ ಅಟಂತಂ ಪಾತು ಪಾಶಧೃಕ್ ।
ಶಯಾನಂ ಪಾತು ಮಾಂ ಶೂರೋ ಮಾರ್ಗೇ ಮಾಂ ಪಾತು ಶೂಲಭೃತ್ ॥೧೭೭॥

---

ಗಂಗಾಪುತ್ರನು ಜಘನಭಾಗವನ್ನೂ, ಕುಮಾರಸ್ವಾಮಿಯು ಪೃಷ್ಠಭಾಗವನ್ನೂ, ಉಮಾಪುತ್ರನು ಊರು ಭಾಗವನ್ನೂ, ಜಗದ್ವ್ಯಾಪಕನು ಎರಡು ಮೊಣಕಾಲುಗಳನ್ನೂ, ಜಗತ್ಪೂಜ್ಯನು ಮಂಡಿಗಳನ್ನೂ, ಮಹಾಬಲಶಾಲಿಯು ಹಿಮ್ಮಡಿಗಳನ್ನೂ, ಪರಂಜ್ಯೋತಿಯು ನನ್ನ ಎರಡು ಕಾಲುಗಳನ್ನೂ, ಕುಕ್ಕುಟಾಕಾರದ ಧ್ವಜವುಳ್ಳ ಷಣ್ಮುಖನು ಸರ್ವಾಂಗವನ್ನೂ ಕಾಪಾಡಲಿ. ॥೧೭೨-೧೭೩॥

ಮಹೋದಾರನು ಊರ್ಧ್ವಭಾಗದಲ್ಲಿಯೂ, ಶಂಕರ ಪುತ್ರನು ಅಧೋಭಾಗದಲ್ಲಿಯೂ, ಪಾಪನಾಶಕನಾದ ಕುಮಾರನು ಪಾರ್ಶ್ವಭಾಗದಲ್ಲಿಯೂ, ಶಕ್ತಿಧಾರಿಯು ಸಮಸ್ತ ಭಾಗದಲ್ಲಿಯೂ ರಕ್ಷಿಸಲಿ. ಪರಬ್ರಹ್ಮನು ಪೂರ್ವಾಹ್ಣದಲ್ಲಿಯೂ, ತಾರಕಾರಿಯು ಮಧ್ಯಾಹ್ನ ಕಾಲದಲ್ಲಿಯೂ, ಗುಹನು ಅಪರಾಹ್ಣದಲ್ಲಿಯೂ, ದೈತ್ಯನಾಶಕನು ರಾತ್ರಿವೇಳೆಯಲ್ಲಿಯೂ ಕಾಪಾಡಲಿ. ॥೧೭೪-೧೭೫॥

ಮೂರುಸಂಧ್ಯಾಕಾಲಗಳಲ್ಲಿ ಸುಧೀಯೆನಿಸಿದ ಷಣ್ಮುಖನೂ, ಮಯೂರವಾಹನನು ಸರ್ವಕಾಲದಲ್ಲಿಯೂ, ಆರುಮೊಗದವನು ನಾನು ಹೊರಗಿದ್ದಾಗಲೂ,

ವನೇ ರಣೇ ಗಿರಿಚರಃ ಸದಾ ರಕ್ಷತು ಮಾಂ ವಟುಃ ।
ಸುಬ್ರಹ್ಮಣ್ಯಸ್ಯ ಕವಚಂ ಧರ್ಮಕಾಮಾರ್ಥಮೋಕ್ಷದಂ ॥೧೭೮॥

ಮಂತ್ರಾಣಾಂ ಪರಮಂ ಮಂತ್ರಂ ರಹಸ್ಯಂ ರಕ್ಷಕಂ ಸದಾ ।
ಪಠಂಚ್ಛೃಣ್ವಂತ್ಸರ್ವಪಾಪರೋಗೈರ್ಮುಕ್ತೋ ಭವಿಷ್ಯತಿ ॥೧೭೯॥

ಪುತ್ರಪ್ರದಮಪುತ್ರಾಣಾಂ ಷಷ್ಠ್ಯಾಂ ಭಕ್ತ್ಯಾ ಸ್ತವಶ್ರವಾತ್ ॥೧೮೦॥

ವಕ್ತ್ರೈಃ ಷಡ್ಭಿಃ ಶರದಿಂದುಪ್ರಭಾಭಿ
ರುದ್ಯತ್ಫುಲ್ಲೈರ್ನೀರಜಾಕ್ಷೈರ್ಯುತೋಽವ್ಯಾತ್ ।
ತಾಭಿಃ ಪ್ರಸನ್ನರುಚಿಭಿಃ ಪ್ರಸುವರ್ಣಚಿತ್ರಃ
ಪಾಯಾದಸ್ಮಾನ್ ಕಾರ್ತಿಕೇಯಃ ಕುಮಾರಃ ॥೧೮೧॥

---

ಕೃತ್ತಿಕಾಪುತ್ರನು ಒಳಭಾಗದಲ್ಲಿದ್ದಾಗಲೂ ಕಾಪಾಡುತ್ತಿರಲಿ. ಸುರಸೈನ್ಯಾಧಿಪತಿಯು ಹೋಗುತ್ತಿರುವಾಗಲೂ, ಪಾಶಧಾರಿಯು ಅಲೆದಾಡುತ್ತಿರುವಾಗಲೂ, ಶೂರನಾದ ಕುಮಾರನು ಮಲಗಿರುವಾಗಲೂ, ಶೂಲಧಾರಿಯು ಮಾರ್ಗಮಧ್ಯದಲ್ಲಿರುವಾಗಲೂ ನನ್ನನ್ನು ಕಾಪಾಡಲಿ. ||೧೭೬-೧೭೭||

ಗಿರಿಚರನು ನಾನು ಅರಣ್ಯದಲ್ಲಿದ್ದಾಗಲೂ, ರಣಕಾರ್ಯದಲ್ಲಿದ್ದಾಗಲೂ ಸಲಹಲಿ. ವಟುವು ಸರ್ವದಾ ನನ್ನನ್ನು ರಕ್ಷಿಸುತ್ತಿರಲಿ." ಇಲ್ಲಿನವರೆಗೂ ಹೇಳಿದ ಈ ಸುಬ್ರಹ್ಮಣ್ಯ ಕವಚವು ಧರ್ಮಕಾಮಾರ್ಥಮೋಕ್ಷಗಳನ್ನು ಕೊಡಬಲ್ಲುದು. ಮಂತ್ರಗಳಲ್ಲೆಲ್ಲಾ ಇದು ಪರಮಮಂತ್ರವು. ಇದು ಬಹಳ ರಹಸ್ಯವಾದುದು. ಮತ್ತು ಸರ್ವಜನರಕ್ಷಕವಾದುದು. ಇದನ್ನು ಓದುವವರೂ ಕೇಳುವವರೂ ಸಮಸ್ತಪಾಪಗಳಿಂದಲೂ, ರೋಗರುಜಿನಗಳಿಂದಲೂ ಮುಕ್ತರಾಗುವರು. ಮಕ್ಕಳಿಲ್ಲದವರು ಇದನ್ನು ಷಷ್ಠೀತಿಥಿಯಲ್ಲಿ ಓದಿಕೇಳುವುದರಿಂದ ಪುತ್ರಪ್ರಾಪ್ತಿಯಾಗುವುದು. ||೧೭೮-೧೭೯-೧೮೦||

ಶರಚ್ಚಂದ್ರನಂತೆ ಮನೋಹರವಾಗಿರುವ ಆರುಮುಖಗಳಿಂದಲೂ, ಅರಳಿದ ಕಮಲಗಳಂತೆ ವಿಶಾಲವಾದ ಹನ್ನೆರಡು ಕಣ್ಣುಗಳಿಂದಲೂ ಕೂಡಿ, ಚಿತ್ರವಿಚಿತ್ರವಾಗಿ ರಂಜಿಸುವ ಕೃತ್ತಿಕಾಪುತ್ರನಾದ ಕುಮಾರಸ್ವಾಮಿಯು ನಮ್ಮನ್ನು ಸದಾ ರಕ್ಷಿಸಲಿ. ||೧೮೧||

ಬರ್ಹಿರ್ಧ್ವಜಶ್ಚಂದ್ರಕ ಚಿತ್ರಬರ್ಹಿ
ರ್ಬರ್ಹೀಂದ್ರವಾಹಃ ಕೃತಚೂಡಬರ್ಹಿಃ ।
ಬರ್ಹೀಂದ್ರಪಕ್ಷಕ್ಷಪಿತಾರಿಪಕ್ಷಂ
ಸೇನಾನಿಮೀಡೇಽಖಿಲಪಾತಕಘ್ನಂ ॥೧೮೨॥

ಕಾರುಣ್ಯಪೂರ್ಣನಯನಂ ಕಮಲಾಯತಾಕ್ಷಂ
ಕಸ್ತೂರಿಕಾತಿಲಕಶೋಭಿತಫಾಲದೇಶಂ ।
ಭಕ್ತಾರ್ತಿಭಂಜನ ವಿಶೋಭಿತ ಬಾಹುದಂಡಂ
ಡಿಂಭಂ ಮುದಾಶು ಶಿವಯೋಃ ಪ್ರಭಜಂತು ಸರ್ವೇ ॥೧೮೩॥

ದೇವಾ ಯುದ್ಧೇ ಯಾಗೇ ವಿಪ್ರಾಃ
ಹ್ವಾಯಂ ಹ್ವಾಯಂ ಸ್ವೀಯಾಂ ಸಿದ್ಧಿಂ ।
ಯಂ ಸಿದ್ಧ್ಯಂತಿ ಸ್ಕಂದಂ ವಂದೇ
ಸುಬ್ರಹ್ಮಣ್ಯೋಂ ಸುಬ್ರಹ್ಮಣ್ಯೋಂ ॥೧೮೪॥

---

ನವಿಲಿನಗುರುತಿನ ಧ್ವಜದಿಂದಲೂ, ಚಿತ್ರವಿಚಿತ್ರವಾದ ನವಿಲುಗರಿಗಳಿಂದಲೂ, ದಿವ್ಯಮಯೂರವಾಹನದಿಂದಲೂ, ಶಿಖೆಯಲ್ಲಿ ಕಟ್ಟಿರುವ ನವಿಲುಗರಿಯಿಂದಲೂ, ಕೂಡಿ ವಿರಾಜಿಸುತ್ತಾ ತನ್ನ ವಾಹನವಾದ ನವಿಲಿನಗರಿಗಳ ಹೊಡೆತದಿಂದಲೇ ಶತ್ರುಗಳನ್ನು ನಿರ್ಮೂಲಗೊಳಿಸುತ್ತಾ ಸಂಚರಿಸುವ ದೇವಸೇನಾಪತಿಯಾದ ಕುಮಾರಸ್ವಾಮಿಯನ್ನು ಸದಾ ಪೂಜಿಸುವೆನು. ॥೧೮೨॥

ಕರುಣಾಪೂರಿತವಾದ ದೃಷ್ಟಿಯಿಂದಲೂ, ಕಮಲದಂತೆ ಅರಳಿದ ಕಣ್ಣುಗಳಿಂದಲೂ, ಕಸ್ತೂರೀತಿಲಕದಿಂದ ಶೋಭಿಸುವ ಹಣೆಯಿಂದಲೂ, ಭಕ್ತರ ದುಃಖಸಾಗರವನ್ನು ಒಣಗಿಸುವ ಬಾಹುದಂಡದಿಂದಲೂ ಪ್ರಕಾಶಿಸುವ ಪಾರ್ವತೀಪರಶಿವರ ಮುದ್ದಿನ ಮಗುವಾದ ಸುಬ್ರಹ್ಮಣ್ಯಸ್ವಾಮಿಯನ್ನು ಸರ್ವರೂ ಭಜಿಸಲಿ. ॥೧೮೩॥

ದೇವತೆಗಳು ಯುದ್ಧದಲ್ಲಿಯೂ, ವಿಪ್ರರು ಯಾಗಮಂಟಪದಲ್ಲಿಯೂ, ಈ ಕುಮಾರಸ್ವಾಮಿಯನ್ನು ಆಹ್ವಾನಿಸಿ, ಧ್ಯಾನಿಸಿ, ತಂತಮ್ಮ ಇಷ್ಟಾರ್ಥಗಳನ್ನು ಪಡೆದಿರುವರು. ಯಾವ ಸುಬ್ರಹ್ಮಣ್ಯದೇವನ ಅನುಗ್ರಹದಿಂದ ಸರ್ವ ಕಾರ್ಯಗಳೂ ಸಿದ್ಧಿಸುವುವೋ ಅಂತಹ ಪರಾತ್ಪರ ದೇವರನ್ನು ನಾನು ತಪ್ಪದೆ ವಂದಿಸುತ್ತಿರುವೆನು. ॥೧೮೪॥

ಶ್ರೀಮಚ್ಚಂದ್ರಕಲಾಧರಾತ್ಮಜಮುಜಂ ಶೃಂಗಾರಶೋಭಾಕೃತಿಂ
ಗೌರೀಪೀನಘನಸ್ತನಾಮಿತಪಯಃಸಾರಜ್ಞಮಾಜ್ಞಾಸನಂ ।
ಬಾಲೇಶಪ್ರಕಟಾಭಿಮಾನ ಜಲದೋದಂಚತ್ಪ್ರಚಂಡಾನಿಲಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೮೫॥

ಕಾರಾವಾಸನಿವಾಸಖಿನ್ನವಿಧಿಹೃತ್ಕಂಜಾತಭಾನುಂ ಪುನ
ಸ್ತದ್ವಕ್ತ್ರಾಬ್ಜಚತುಷ್ಟಯುಸ್ತುತಮಹಾಕಲ್ಯಾಣಶೀಲಂ ವಿಭುಂ ।
ಕ್ರೌಂಚಾರಿಂ ಪಿತೃಪಾದವಂದಿತಪದಂ ಷಾಣ್ಮಾತುರಂ ಭ್ರಾತರಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೮೬॥

ಓಂಕಾರಾರ್ಥಂ ಸಮರ್ಥವಾಚಕವಚೋ ಭೂಷಾವಿಶೇಷಾನ್ವಿತಂ
ಯಂ ರೋಚಿಷ್ಣುಷಡಾನನಂ ಶಿಖಿಕುಲಾಧೀಶಾತ್ತತುಂಗಧ್ವಜಂ ।

---

ಅತಿಶಯವಾದ ಪುಣ್ಯ ಶರೀರವುಳ್ಳ ಸುಬ್ರಹ್ಮಣ್ಯಸ್ವಾಮಿಯು ಚಂದ್ರಶೇಖರ ನೆನಿಸಿದ ಪರಶಿವನ ಪುತ್ರನು. ಸುಂದರವಾದ ಆಕಾರವುಳ್ಳವನು. ಗೌರೀದೇವಿಯ ಸ್ತನ್ಯಪಾನದಿಂದ ಬೆಳೆದು ಅದರ ಸಾರವನ್ನು ಸಂಪೂರ್ಣವಾಗಿ ಅರಿತವನು. ಅಭಿಮಾನದಿಂದ ಮದಿಸಿದ ದುಷ್ಟರೆಂಬ ಮೇಘಗಳಿಗೆ ಬಿರುಗಾಳಿಯಂತಿರುವವನು. ಇಂತಹ ಅಗಣ್ಯಪುಣ್ಯಚರಿತನಾದ ಸುಬ್ರಹ್ಮಣ್ಯಸ್ವಾಮಿಯನ್ನು ನಾನು ಸದಾ ಸೇವಿಸುವೆನು. ॥೧೮೫॥

ತಾರಕಾಸುರನು ಬ್ರಹ್ಮನನ್ನು ಕಾರಾಗೃಹದಲ್ಲಿ ಬಂಧಿಸಿಟ್ಟಾಗ ಬ್ರಹ್ಮನ ಹೃದಯಕುಹರದಲ್ಲಡಗಿ ಅವನಿಗೆ ಆನಂದವನ್ನಿತ್ತು ಸಲಹಿದವನೂ, ತಾರಕಧ್ವಂಸವಾದ್ದನ್ನು ಕೇಳಿದ ಬ್ರಹ್ಮನ ನಾಲ್ಕು ಮುಖಗಳಿಂದಲೂ ವಿಶೇಷ ರೀತಿಯಲ್ಲಿ ಸ್ತುತ್ಯನಾಗಿರುವವನೂ, ಕ್ರೌಂಚಪರ್ವತದ ಭೇದಕನೂ, ತಂದೆಯಿಂದಲೂ ಪೂಜಿತನಾದವನೂ (ತ್ರಿಪುರಾಸುರದಹನಕಾಲದಲ್ಲಿ) ಆದ ಆರು ತಾಯಂದಿರ ಮಗನಾಗಿ ಕುಮಾರಸ್ವಾಮಿಯೆನಿಸಿದ ಸುಬ್ರಹ್ಮಣ್ಯ ಗುರುವನ್ನು ಸದಾ ಧ್ಯಾನಿಸುವೆನು.॥೧೮೬॥

ಕುಮಾರಸ್ವಾಮಿಯು ಪ್ರಣವಾರ್ಥಸಮರ್ಥಕವಾದ ಮಾತುಗಳುಳ್ಳವನು. ನಾನಾವಿಧವಾದ ಭೂಷಣಗಳಿಂದ ಅಲಂಕೃತನು. ಕಾಂತಿಯಿಂದ ಪ್ರಕಾಶಿಸುವ ಆರು ಮುಖಗಳುಳ್ಳವನು. ದಿವ್ಯವಾದ ನವಿಲಿನ ಗುರುತಿನಿಂದ ಹಾರಾಡುವ ಎತ್ತರವಾದ ಧ್ವಜವುಳ್ಳವನು. ಶುಭ್ರವಾದ ಕೋಲುಮಲ್ಲಿಗೆ ಹೂವಿನಂತೆ ಹೊಳೆಯುವ

ಸ್ಕಂದಂ ಸುಂದರಕುಂದದಂತಮನಘಂ ಶಂಭೋರ್ಗುರುಂ ಶಾಶ್ವತಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೮೭॥

ಬ್ರಹ್ಮಾಂಡೈಕಸಹಸ್ರಕಾಷ್ಠಭರಣಪ್ರಾಚುರ್ಯ ಧೈರ್ಯಸ್ಫುರತ್
ಕೋಪಾಟೋಪದುರಾಪಪಾಪಘಟಿತಾಹಂಕಾರಶೂರಾಂತಕಂ ।
ಸೇನಾನ್ಯಂ ಸುರಮಾನ್ಯಮುನ್ನತಭುಜಂ ಚಿಂತಾಬ್ಧಿಕುಂಭೋದ್ಭವಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೮೮॥

ಶರ್ವಾಣೀಪ್ರಣವೋಪದೇಶಚತುರಶ್ರೀಕಂಠ ಕಂಠೀರವ
ಶ್ರೋತಾರಂ ಜನನೀ ಶುಭಾಂಕವಿಲಸತ್ಸಿಂಹಾಸನಸ್ಥಂ ಗುಹಂ ।
ಭೂಯಸ್ತಚ್ಛ್ರವಣಾಕುಲೋಗ್ರಜನಿತಂ ಸ್ವರ್ಣಾಹಿರಾಜಾಕೃತಿಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೧೮೯॥

---

ದಂತಪಂಕ್ತಿಯುಳ್ಳವನು. ಶಂಭುವಿಗೂ ಗುರುವಿನಂತಿರುವವನು. ಇಂತಹ ಶಾಶ್ವತ ಮೂರ್ತಿಯಾದ ಕುಮಾರಸ್ವಾಮಿಯನ್ನು ನಾನು ತಪ್ಪದೆ ಧ್ಯಾನಮಾಡುವೆನು. ॥೧೮೭॥

ಬ್ರಹ್ಮಾಂಡವನ್ನೇ ಆಭರಣಾದಿಗಳಿಂದಲೂ, ಧೈರ್ಯಶೌರ್ಯಾದಿಗಳಿಂದಲೂ ಬೆರಗುಗೊಳಿಸಿ ಕೋಪಾಟೋಪದಿಂದ ಮೆರೆಯುತ್ತಿದ್ದ ಶೂರರ ತಂಡಕ್ಕೆ ಯಮನಂತೆ ವರ್ತಿಸಿ ವೀರಸೇನಾಪತಿಯೂ, ದೇವಪೂಜ್ಯನೂ ಎನಿಸಿದ ಷಣ್ಮುಖಸ್ವಾಮಿಯು ಭಕ್ತರ ಚಿಂತಾಸಮುದ್ರಕ್ಕೆ ಅಗಸ್ತ್ಯನಂತೆ ನಾಶಕನೆನಿಸಿರುವನು. ಇಂತಹ ಸುಬ್ರಹ್ಮಣ್ಯಸ್ವಾಮಿಯನ್ನು ನಾನು ಸದಾ ಧ್ಯಾನಿಸುವೆನು. ॥೧೮೮॥

ಪರಶಿವನು ಪಾರ್ವತಿಗೆ ಪ್ರಣವಮಂತ್ರೋಪದೇಶಮಾಡುವ ಗಂಭೀರ ಧ್ವನಿಯನ್ನು ಪಾರ್ವತಿಯ ಪವಿತ್ರವಾದ ತೊಡೆಯೆಂಬ ಸಿಂಹಾಸನದ ಮೇಲೆ ಕುಳಿತು ಆನಂದದಿಂದ ಕೇಳುತ್ತಾ, ಪದೇ ಪದೇ ಅದನ್ನೇ ಅನುಸಂಧಾನಮಾಡಿ, ಅದರಿಂದ ಸುವರ್ಣರಂಜಿತವಾದ ಆದಿಶೇಷನ ಆಕಾರವನ್ನು ಪಡೆದು ವಿರಾಜಿಸುವ ಸುಬ್ರಹ್ಮಣ್ಯಸ್ವಾಮಿಯನ್ನು ನಾನು ಸರ್ವದಾ ಧ್ಯಾನಮಾಡುವೆನು. ॥೧೮೯॥

ಮಾರ್ತಂಡಾಯುತಭಾಸಮಾನ ಮಣಿಭೃಲ್ಲಾವಣ್ಯತಾರುಣ್ಯಜಿತ್
ಕಾರುಣ್ಯೈಕಶರಣ್ಯಪಂಚಕಮಣಿಪ್ರೋದ್ಯತ್ಫಣಾಶಾಲಿನಂ ।
ದಿವ್ಯಾಂಗಂ ಭವಭಂಗ ಸಂಗತಕೃಪಾತುಂಗೋತ್ತರಂಗಾಲಯಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೯೦॥

ಸೇವಾತತ್ಪರಮಾನವಾರ್ಪಿತಬೃಹತ್ಕೂಷ್ಮಾಂಡಪಾದಾವನೀ
ತೂಲಸ್ಥೂಲಮರೀಚಿಸರ್ಷಪಸಮುಗ್ರೋಪಾಯಿನಂ ಮಾಯಿನಂ ।
ನಾನಾವಾದ್ಯಮೃದಂಗಶಂಖಪಟಲೀಘೋಷಾಂಕಪೂಜಾನ್ವಿತಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೯೧॥

ಪುತ್ರಸ್ನೇಹವಿಮೋಹವರ್ಧಿತಶಿವಾ ವಕ್ಷೋಜಕುಂಭಸ್ರವ
ನ್ನೀರಾಪೂರಕುಮಾರಪೂರ್ವವಿಲಸದ್ಧಾರಾತಟೀವಾಸಿನಂ ।
ವಿಷ್ಣುಬ್ರಹ್ಮಸುರಾರ್ಚಿತಮಣಿಸ್ವರ್ಣೋಜ್ಜ್ವಲತ್ಪಾದುಕಂ
ಸುಬ್ರಹ್ಮಣ್ಯಮಗಣ್ಯಪುಣ್ಯಚರಿತಂ ವಂದೇ ಪರಂ ದೇಶಿಕಂ ॥೯೨॥

---

ಹತ್ತುಸಾವಿರ ಸೂರ್ಯರಂತೆ ಹೊಳೆಯುತ್ತಲಿರುವ ದಿವ್ಯಮಣಿಗಳನ್ನು ತನ್ನ ಹೆಡೆಯಲ್ಲಿ ಪಡೆದು, ಕರುಣಾರಸಪೂರಿತವಾದ ದೃಷ್ಟಿಗಳಿಂದ ಕೂಡಿ ಐದು ಹೆಡೆಗಳಿಂದ ವಿರಾಜಿಸುವ ಸುಬ್ರಹ್ಮಣ್ಯದೇವನು ಸಂಸಾರಿಗಳ ಕಷ್ಟನಷ್ಟಗಳನ್ನೆಲ್ಲಾ ಕ್ಷಣಕಾಲದಲ್ಲಿ ನಿವಾರಣೆಮಾಡುವ ಶಕ್ತಿಯುಳ್ಳವನು. ಇಂತಹ ಸುಬ್ರಹ್ಮಣ್ಯ ದೇಶಿಕನನ್ನು ನಾನು ಸದಾ ಧ್ಯಾನಮಾಡುತ್ತಿರುವೆನು. ॥೯೦॥

ಸುಬ್ರಹ್ಮಣ್ಯಸ್ವಾಮಿಯು ತನ್ನ ಭಕ್ತರು ಭಕ್ತಿಯಿಂದ ಸೇವಾತತ್ಪರರಾಗಿ, ಕುಂಬಳಕಾಯಿ, ಹತ್ತಿ, ಮೆಣಸು, ಸಾಸವೆ ಮುಂತಾದ ವಸ್ತುಗಳನ್ನು ಕೈಗಾಣಿಕೆ ಯಾಗಿ ಕೊಟ್ಟರೂ ಅದನ್ನು ಪ್ರೀತಿಯಿಂದ ಸ್ವೀಕರಿಸುವನು. ನಾನಾವಿಧವಾದ ಮೃದಂಗ, ಶಂಖ, ತಮಟೆ ಮುಂತಾದ ವಾದ್ಯಘೋಷಗಳಿಂದ ಸದಾ ಆನಂದಿಸು ತ್ತಿರುವವನು. ಇಂತಹ ಪುಣ್ಯಚರಿತನಾದ ಸುಬ್ರಹ್ಮಣ್ಯಸ್ವಾಮಿಯನ್ನು ನಾನು ಸದಾ ಧ್ಯಾನಿಸುವೆನು. ॥೯೧॥

ತನ್ನ ಮಗನ ಮೇಲಿನ ವಾತ್ಸಲ್ಯದಿಂದ ಪಾರ್ವತಿಯು ಸ್ತನಕಲಶದಿಂದ ಸ್ತನ್ಯವು ಹೊರಗೆರಚುತ್ತಿರುವಾಗ ಕುಮಾರಸ್ವಾಮಿಯು ಅಲ್ಲಿಯೇ ಕುಳಿತು ಅದನ್ನು ಆಸ್ವಾದಿಸುವನು. ಬ್ರಹ್ಮ, ವಿಷ್ಣು ಇವರೇ ಮೊದಲಾದ ದೇವಶ್ರೇಷ್ಠರಿಂದ ಪೂಜಿಸ

ದೇವಂ ಶಕ್ತಿಧರಂ ಕುಮಾರಮತುಲಂ ದಿವ್ಯಾವತಾರಂ ವಟುಂ
ಭಾವಾತೀತಮತೀತಸಂಸೃತಿಮನಃಪದ್ಮಾಗ್ರಸದ್ಮಪ್ರಿಯಂ ।
ಭಕ್ತ್ಯಾ ಯೇ ಪ್ರಣಮಂತಿ ತೇ ಗತಭಯಾ ಕಾರುಣ್ಯಕಲ್ಯಾಣಗಾ
ಭುಕ್ತ್ವಾ ಭೋಗಸುಖಂ ತ್ವದೀಯಕೃಪಯಾ ಮುಕ್ತಾಭವಂತಿ ಧ್ರುವಂ ॥೯೩॥

ವೃಂದಾರವೃಂದಾ ಮುನಿವರ್ಯಸಂಘಾ
ಗಣೇಶ್ವರಾ ಸ್ಕಂದಸಹಸ್ರನಾಮಭಿಃ ।
ತಥಾಷ್ಟನಾಮ್ನಾಂ ಶತಕೇನ ತತ್ರ
ದೇವಂ ಮುದಾ ತಂ ಕವಚೇನ ತುಷ್ಟುವುಃ ॥೯೪॥

ಸ್ಕಂದೋ ಮುದಾ ತಾನನುಗೃಹ್ಯ ದೇವಾನ್
ಮುನೀನ್ ಗಣೇಶಾನ್ ಭಗಣೇಶಚೂಡಹೃತ್ ।
ಸಭಕ್ತವರ್ಯಾನಕರೋತ್ಸುರೋತ್ತಮಾನ್
ಕುಮಾರವರ್ಯೋಽಥ ಸಮರ್ಚಿತಾರ್ಯಃ ॥೯೫॥

---

ಲ್ಪಟ್ಟ ರತ್ನಪಾದುಕೆಗಳುಳ್ಳವನು. ಇಂತಹ ಪುಣ್ಯಸ್ವರೂಪನಾದ ಗುರುಸುಬ್ರಹ್ಮಣ್ಯ
ಸ್ವಾಮಿಯನ್ನು ಶಿರಸಾ ವಂದಿಸುವೆನು. ॥೯೨॥

ಶಕ್ತ್ಯಾಯುಧವನ್ನು ಧರಿಸಿ, ಭಾವಾತೀತನಾಗಿ, ಸಂಸಾರದ ಕಷ್ಟಸುಖ
ಗಳನ್ನು ಲಕ್ಷಿಸದೆ, ಸಂಸಾರಿಗಳ ಹೃದಯಕುಹರದಲ್ಲಿ ವಿಹರಿಸುತ್ತಾ ಸಂಚರಿಸುವ
ವಟುವಾದ ಸುಬ್ರಹ್ಮಣ್ಯಸ್ವಾಮಿಯನ್ನು ಯಾರು ಭಯಭಕ್ತಿಯಿಂದ ವಂದಿಸುವರೋ
ಅವರು ಸಮಸ್ತ ಭಯದಿಂದಲೂ ದೂರರಾಗಿ ಸಂಪೂರ್ಣವಾದ ಐಹಿಕಸುಖಸಮುದ್ರ
ದಲ್ಲಿ ತೇಲಾಡಿ ಸುಬ್ರಹ್ಮಣ್ಯಕೃಪೆಯಿಂದ ಧನ್ಯರಾಗುವರು. ॥೯೩॥

ಆಗ ದೇವತೆಗಳೂ, ಋಷಿಶ್ರೇಷ್ಠರೂ, ಗಣನಾಯಕರೂ ಒಟ್ಟುಗೂಡಿ,
ಸ್ಕಂದಸ್ವಾಮಿಯನ್ನು ಅಷ್ಟೋತ್ತರಶತಸಹಸ್ರನಾಮಸ್ತೋತ್ರಗಳಿಂದಲೂ, ಸ್ಕಂದ
ಕವಚದಿಂದಲೂ ಸ್ತುತಿಸಿ ಸಂತೋಷಪಡಿಸಿದರು ॥೯೪॥

ಆದರಿಂದ ತೃಪ್ತನಾದ ಕುಮಾರಸ್ವಾಮಿಯು ಸಂತೋಷದಿಂದ ಅವರನ್ನು
ಅನುಗ್ರಹಿಸಿ, ಈಶ್ವರಪ್ರಿಯಪುತ್ರನಾದ ಷಣ್ಮುಖನು ಎಲ್ಲರಿಂದಲೂ ಪೂಜಿತನಾಗಿ
ದೇವತೆಗಳನ್ನೆಲ್ಲಾ ತನ್ನ ಭಕ್ತರನಾಗಿ ಮಾಡಿಕೊಂಡು ಅವರಿಗೆ ಆನಂದವನ್ನುಂಟು
ಮಾಡಿದನು ॥೯೫॥

ಸ್ಕಂದಂ ಮುದಾ ಸ್ತೋತ್ರವರೈಃ ಸುಭಕ್ತಿತೋ
ಯಃಸ್ತೋಷ್ಯತಿ ಪ್ರೀತಮನಾಃ ಪ್ರಹರ್ಷತಃ ।
ತಸ್ಮಿನ್ ಪ್ರಹೃಷ್ಟೋ ವಿದಧಾತಿ ಕಾಮಾನ್
ಅಕಾಮಯುಕ್ತೋಽಪಿ ವಿಮುಕ್ತಿದೋ ಭವೇತ್ ॥೧೯೬॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀಸಂವಾದೇ ಸ್ಕಂದಸಹಸ್ರನಾಮ ಅಷ್ಟೋತ್ತರಶತನಾಮ ಕವಚಸ್ತೋತ್ರನಿರೂಪಣಂ ನಾಮ ಅಷ್ಟತ್ರಿಂಶೋಽಧ್ಯಾಯಃ

---

ಆದ್ದರಿಂದ ಯಾರು ಕುಮಾರಸ್ವಾಮಿಯನ್ನು ಹಿಂದೆ ಹೇಳಿದ ಅಷ್ಟೋತ್ತರ ಶತನಾಮಸ್ತೋತ್ರ, ಸಹಸ್ರನಾಮಸ್ತೋತ್ರ, ಸುಬ್ರಹ್ಮಣ್ಯಕವಚ ಇವೇ ಮುಂತಾದ ಸ್ತುತಿವಚನಗಳಿಂದ ಹೊಗಳಿ ತೃಪ್ತಿಪಡಿಸುವರೋ ಅಂತಹವರ ವಿಷಯದಲ್ಲಿ ಕುಮಾರಸ್ವಾಮಿಯು ಸಂತುಷ್ಟನಾಗಿ ಸಕಲ ವಿಧಗಳಾದ ಇಷ್ಟಾರ್ಥಗಳನ್ನೂ ಅವರಿಗೆ ಕರುಣಿಸುವನು. ಒಂದುವೇಳೆ ನಿಷ್ಕಾಮರಾಗಿ ಸುಬ್ರಹ್ಮಣ್ಯಸ್ವಾಮಿಯನ್ನು ಸೇವಿಸುವವನು ಶಿವ ಮತ್ತು ಕುಮಾರಸ್ವಾಮಿಯವರ ಅನುಗ್ರಹದಿಂದ ಶಾಶ್ವತವಾದ ಮುಕ್ತಿಯನ್ನು ಪಡೆಯುವರು. ಇದರಲ್ಲಿ ಸಂಶಯವಿಲ್ಲ. ಎಂದು ಸೂತಮಹರ್ಷಿಗಳು ಶಿವರಹಸ್ಯ ಶ್ರವಣ ಕುತೂಹಲಿಗಳಾದ ಇತರ ಮುನಿಗಳಿಗೆ ವಿವರವಾಗಿ ತಿಳಿಸಿದರು. ॥೧೯೬॥

ಇಲ್ಲಿಗೆ ಶ್ರೀಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ ಶಿವಗೌರೀ ಸಂವಾದರೂಪವಾಗಿ ಸುಬ್ರಹ್ಮಣ್ಯಸಹಸ್ರನಾಮ ಅಷ್ಟೋತ್ತರಶತನಾಮ, ಸುಬ್ರಹ್ಮಣ್ಯ ಕವಚಸ್ತೋತ್ರ ಇವುಗಳನ್ನು ವಿವರಿಸುವ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಏಕೋನ ಚತ್ವಾರಿಂಶೋಽಧ್ಯಾಯಃ

|| ಮುನಯ ಊಚುಃ ||

ವ್ರಜಾಮ ಕಿಲ ಕಾಶಿಕಾಮಘಕುಲಾದಿಸಂನಾಶಿಕಾಂ
ವಿಶಾಮ ಮಣಿಕರ್ಣಿಕಾಂ ದ್ವಿಜಭಜಾಮ ತಾಂ ಕಾಲಿಕಾಂ ।
ಪಶ್ಯೇಮ ವಿಶ್ವೇಶ್ವರಮೇವ ತತ್ರ
ಯಜೇಮ ಬಿಲ್ವೈಶ್ಚ ಸಮರ್ಚಯಾಮಃ ॥೧॥

ಸ್ನಾಸ್ಯಾಮ ಗಂಗಾಂಭಸಿ ಪಾಪಮುಕ್ತ್ಯೈ ।
ವ್ರಜೇಮ ಮುಕ್ತಿಂ ಪರಮಾಮಥಾಂತೇ ॥೨॥

---

## ಮೂವತ್ತೊಂಬತ್ತನೆಯ ಅಧ್ಯಾಯ

ಸೂತಮಹರ್ಷಿಯಿಂದ ಕಾಶೀಮಹಿಮೆಯನ್ನರಿತ ಸಕಲ ಮುನಿಗಳೂ ಕೊನೆಯಲ್ಲಿ ಈ ರೀತಿ ಪ್ರತಿಜ್ಞೆಮಾಡಿದರು. ಇನ್ನು ಮೇಲೆ ನಾವೆಲ್ಲರೂ ಸಮಸ್ತ ಪಾಪನಾಶಕವಾದ ಕಾಶೀಕ್ಷೇತ್ರದಲ್ಲಿಯೇ ವಾಸಮಾಡುತ್ತೇವೆ. ಮಣಿಕರ್ಣಿಕಾ ತೀರ್ಥದಲ್ಲಿಯೇ ಸ್ನಾನಮಾಡುತ್ತೇವೆ. ಕಾಲಿಕಾದೇವಿಯನ್ನು ಸೇವಿಸುತ್ತೇವೆ. ವಿಶ್ವೇಶ್ವರಲಿಂಗದ ದರ್ಶನವನ್ನು ತಪ್ಪದೆ ಮಾಡುತ್ತೇವೆ. ಬಿಲ್ವದಳಗಳಿಂದ ವಿಶ್ವೇಶ್ವರಮೂರ್ತಿಯನ್ನು ತಪ್ಪದೆ ಆರಾಧಿಸುತ್ತೇವೆ. ॥೧॥

ಗಂಗಾನದಿಯಲ್ಲಿ ಸ್ನಾನಮಾಡಿ ಪಾಪಮುಕ್ತರಾಗುತ್ತೇವೆ. ತನ್ಮೂಲಕ ಶಾಶ್ವತವಾದ ಮುಕ್ತಿಯನ್ನು ಗಳಿಸುತ್ತೇವೆ. ಹೀಗೆಂದು ದೃಢಪ್ರತಿಜ್ಞೆಮಾಡಿ, ಸಮಸ್ತ ಋಷಿಗಳೂ ನಿಯಮವಿನಯಸಂಪನ್ನರಾಗಿ ತಮ್ಮ ಪತ್ನೀಪುತ್ರಾದಿಗಳ

ಮುನಯೋ ವಿನಯೋಜ್ವಲಾಸ್ತದಾನೀಂ
ತನಯೈಃ ಸ್ವೈಃ ಸ್ವಕಲತ್ರಶಿಷ್ಯಸಂಘೈಃ ।
ಮುಥಿತಾಗ್ನಯ ಏವ ಭಗ್ನದುಃಖಾಃ
ಶಿವಮಾನರ್ಚ್ಯ ಯಯುಸ್ತದಾವಿಮುಕ್ತಂ ॥೩॥

ಸೂತೇನ ತೇನ ಮುನಯೋಽಪಿ ಚ ಭಸ್ಮಭೂಷಾ
ಯೋಷಾದಿರಕ್ತಹೃದಯಾ ಸದಯಾ ತದಾನೀಂ ।
ಕಾಷಾಯಮಾತ್ರವಸನಾ ಯಯುರೀಶಕಾಶೀಂ
ವಾಸಾಯ ಚಾರುತಪಸೇ ಧೃತನಿಶ್ಚಯಾಸ್ತೇ ॥೪॥

ಇತಿ ಹೋಚುರಚುಂಬಿತಾಕ್ಷರೋರುವಾಚಂ
ಕೃತಕೃತ್ಯಾ ಪ್ರಸಮಾಪಿತೋರುಸತ್ರಾಃ ।
ಸ್ತುತಿ ನಿತ್ಯಾ ಪ್ರತಿಪೂಜ್ಯ ಸೂತಮಿಷ್ಟಂ
ಶಿಪಿವಿಷ್ಟೋರುಕಥಾಮೃತಾಪ್ಲುತಂ ತದಾ ॥೫॥

॥ ಋಷಯ ಊಚುಃ ॥

ಕಿಂ ಸತ್ರೈರಖಿಲೈರ್ವ್ರತಾದಿಕರಣೈರ್ದಾನೈಶ್ಚ ದೀನಾವನೈಃ
ಕಿಂ ವಾ ಪಾವನತೀರ್ಥಗಾಹನಮಹಾಧನ್ಯೈರಲಂ ನಃ ಫಲಂ ।

---

ನ್ನೊಳಗೊಂಡು ಅಗ್ನಿಹೋತ್ರಾದಿಗಳನ್ನೂ ಶಿವಾರಾಧನೆಯನ್ನೂ ನೆರವೇರಿಸಿಕೊಂಡು ಸಂತುಷ್ಟಾಂತರಂಗವುಳ್ಳವರಾಗಿ ಕಾಶೀಕ್ಷೇತ್ರವನ್ನು ಕುರಿತು ತೆರಳಲು ಸಿದ್ಧರಾದರು. ॥೨-೩॥

ಜೊತೆಯಲ್ಲಿ ಸೂತಮಹಾಮುನಿಗಳೂ ಹೊರಟರು. ಒಟ್ಟಿನಲ್ಲಿ ಎಲ್ಲ ಋಷಿಗಳು ಭಸ್ಮಭೂಷಿತರಾಗಿ ಪತ್ನೀಪುತ್ರಾದಿಗಳಿಂದ ಕೂಡಿ ದಯಾರ್ದ್ರಚಿತ್ತರಾಗಿ ಕಾಷಾಯವಸ್ತ್ರಗಳನ್ನುಟ್ಟು, ದೃಢಮನಸ್ಸಿನಿಂದ ಕಾಶಿಯಲ್ಲಿ ನೆಲಸಿ ತಪಸ್ಸನ್ನು ಮುಂದುವರಿಸಲು ಪ್ರಯಾಣಸನ್ನದ್ಧರಾದರು. ॥೪॥

ಆಗ ಯಾಗ ಸಮಾಪ್ತಿಮಾಡಿ ಧನ್ಯರಾಗಿದ್ದ ಆ ಋಷಿಗಳ ತಂಡವು ಈಶ್ವರ ಕಥಾಮೃತಸೇಚನದಿಂದ ತಮ್ಮನ್ನು ಕೃತಕೃತ್ಯರನ್ನು ಮಾಡಿದ ಸೂತಮಹರ್ಷಿಯನ್ನು ಕುರಿತು ಈರೀತಿ ಪ್ರಾರ್ಥಿಸಿದರು. ॥೫॥

ಸೂತಮಹಾಮುನಿಯೇ, ಅತಿಕ್ಲೇಶಕರಗಳಾದ ವ್ರತ, ಯಜ್ಞ, ದಾನ

ಸ್ಪ್ರಾಪ್ಸ್ಯೈನಂ ಶ್ರುತಿರಾಶಿಶೇಖರಲಸತ್ಕೈಲಾಸವಾಸಂ ಕದಾ
ನೋದಾಯ್ಸೈವ ಸದಾಸ್ತು ಶಂಕರಕೃಪಾಪೀಯೂಷಕಂ ಕೇವಲಂ ॥೬॥

ಕಿಂ ತತ್ಪ್ರೀತಿಕರಂ ಮಹೇಂದ್ರಸದನಂ ಯತ್ರೈವ ತಪ್ಸ್ಯಾಮಹೇ
ಸ್ಯಾದೇಹಾಂತವಿಭೂತಿಧಾರಣಯುತಾ ಪುಂಡ್ರಾಕ್ಷಮಾಲಾಧರಾಃ ।
ದಿವ್ಯಶ್ರೀ ಶಿವಲಿಂಗಪೂಜನರತಾ ಬಿಲ್ವೈಶ್ಚ ನೀರೈಃ ಪರಂ
ನಿಶ್ರೇಯಸಾಯ ಸದಾವಿಮುಕ್ತಸದನೇ ವಾಸೋಸ್ತು ನಶ್ರೇಯಸೇ ।೭॥

॥ ಸೂತ ಉವಾಚ ॥

ನಮುತಾಮಧಿಪಾಯ ನೋ ನಮೋಸ್ತು
ನಮನಂ ನೋಸ್ತು ಗಿರೀಂದ್ರಜಾದ್ಯಪಾದೇ ।
ಪುನತಿರ್ನೋಸ್ತು ಸದೈವ ವಿಘ್ನರಾಜೇ
ನಮನಂ ನೋಸ್ತು ಹೃದೈವ ಷಣ್ಮುಖಾಯ ॥೮॥

---

ಧರ್ಮಗಳು, ತೀರ್ಥಸ್ನಾನಾದಿಗಳು ಇವುಗಳಿಂದ ನಮಗೆ ಒದಗುವ ಪ್ರಯೋಜನ ವೇನು ? ಚಂದ್ರಶೇಖರನೆನಿಸಿದ ಪರಶಿವನ ಸನ್ನಿಧಿಯಿಂದ ಮೆರೆಯುವ ಕೈಲಾಸ ವಾಸವೂ ಅಲ್ಲಿ ಶಂಕರಕೃಪಾಮೃತವೂ ನಮಗೆ ದೊರೆತರೆ ಸಾಕು. ಮತ್ತಾವುದೂ ನಮಗೆ ಹಿತಕಾರಿಯಲ್ಲ. ॥೬॥

ಯಜ್ಞಾಚರಣೆಯೇ ಮೊದಲಾದ ಧರ್ಮಕಾರ್ಯಗಳಿಂದ ನಮಗೆ ಇಂದ್ರ ಪದವಿಯು ದೊರಕುವುದಾದರೂ ಅದು ನಮಗೆ ಬೇಡ. ಏಕೆಂದರೆ ಅದೂ ಶಾಶ್ವತ ವಾದ ಸುಖಸ್ಥಾನವಲ್ಲ. ನಾವು ಮರಣಪರ್ಯಂತವಾಗಿ ದೇಹಕ್ಕೆ ಭಸ್ಮೋದ್ಧೂಲನ ಮಾಡಿಕೊಂಡು, ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲೆ ಇವನ್ನು ಧರಿಸಿ ಸದಾ ಕಾಶೀಕ್ಷೇತ್ರದಲ್ಲಿ ವಾಸಿಸುತ್ತಾ ಜಲಧಾರೆಯಿಂದಲೂ, ಬಿಲ್ವಪತ್ರೆಗಳಿಂದಲೂ ಪರಶಿವನನ್ನು ಪೂಜಿಸುತ್ತಾ ಕಾಲಕಳೆಯುವುದೇ ನಮಗೆ ಶ್ರೇಯಸ್ಸಾಧನವು. ಅಂತಹ ಕಾಶೀವಾಸವು ನಮಗೆ ಒದಗಿದರೆ ಸಾಕು. ಎಂದು ಹೇಳಲು ಆಗ ಸೂತಮಹಾಮುನಿಯು ಹೀಗೆಂದನು. ॥೭॥

ನಮಸ್ಕರಿಸಿ ಬೇಡಿದವರಿಗೆಲ್ಲಾ ಇಷ್ಟಾರ್ಥಪ್ರದನಾದ ಮಹಾದೇವನಿಗೂ, ಪಾರ್ವತಿಯ ಚರಣದ್ವಂದ್ವಗಳಿಗೂ, ವಿಘ್ನರಾಜನಾದ ಮಹಾಗಣಪತಿಗೂ, ಈಶ್ವರ ಪ್ರಿಯಪುತ್ರನಾದ ಷಣ್ಮುಖನಿಗೂ ಮೊದಲು ನಮಸ್ಕರಿಸುತ್ತೇನೆ ॥೮॥

ಯೂಯಂ ಮಾಯಾದಿಮೋಹಪ್ರಶಮಿತದುರಿತಾ ಭಸ್ಮರುದ್ರಾಕ್ಷಭಾಜಾ
ಶಾಂತಾ ದಾಂತಾ ಭವಂತಃ ಸುಕೃತಕೃತಿವರಾಃ ಸತ್ರಿಣೋ ಮಿತ್ರಪಾತ್ರಾಃ ।
ಶಾಂತಾ ಲಿಂಗಸಮರ್ಚನಾರ್ಜಿತಯಶಾ ತುಂಗಾಂಗಸಂಗಾಚ್ಚ ನೋ
ಭೂಯಾತ್ಪಾತಕಭಂಗಮೇವ ನಿಯತಂ ಶಂಭೋಃ ಸ್ವಲಿಂಗೇಕ್ಷಣಾತ್ ॥೯॥

॥ ಋಷಯ ಊಚುಃ ॥

ಧನ್ಯೋ ಮಾನ್ಯೋಽಸ್ತಿ ಕೋಽನ್ಯಸ್ತವ ಸದೃಶಗುಣಂ ನಾನ್ಯಮಾಕ್ಷ್ಮಾ ಮಹೇದ್ಯಂ
ವೈದ್ಯಂ ವೇದ್ಯಪದಾರ್ಥಬೋಧನರತಂ ಸಂಸಾರರುಜ್ನಾಶಕಂ ।
ತ್ವಾಮೇವಾತ್ಮಗುಣಪ್ರಧಾನಮಧುನಾ ಶಂಭೋಃ ಕಥಾಸಾದರಂ
ಸಂಸಾರಾಂಬುಧಿತಾರಕಂ ಹರಕೃಪಾಪನ್ನಂ ಸದಾ ನೋ ನಮಃ ॥೧೦॥

ಕೋ ವಾ ಪರಂ ಶಿವರಹಸ್ಯಮಧಃಪ್ರಕೃಷ್ಟಂ
ನಿಷ್ಠಾವತಾದ್ಯ ಸುಹೃದಾ ಶಿಪಿವಿಷ್ಟಮಿಷ್ಟಂ ।

---

ಮುನಿಗಳೇ, ನೀವು ಪುಣ್ಯಶಾಲಿಗಳು. ಭಸ್ಮರುದ್ರಾಕ್ಷಧಾರಣದಿಂದ ಮಾಯಾದಿಗಳನ್ನು ಜಯಿಸಿ ಪಾಪಮುಕ್ತರಾಗಿದ್ದೀರಿ. ನಿಮ್ಮಲ್ಲಿ ಶಾಂತಸ್ವಭಾವವೂ, ಸಹನಶಕ್ತಿಯೂ ಬಹಳವಾಗಿದೆ. ಯಜ್ಞಾಚರಣೆಯಿಂದ ಸುಕೃತಿಗಳಾಗಿರುವಿರಿ. ಶಿವಲಿಂಗಾರ್ಚನೆಯಿಂದ ಕೀರ್ತಿಯನ್ನು ಗಳಿಸಿರುವಿರಿ. ನನ್ನ ಉಪದೇಶದಿಂದ ಈಗ ನೀವು ಜ್ಞಾನಿಗಳಾಗಿರುವಿರಿ. ಈಗ ನಿಮ್ಮಿಷ್ಟದಂತೆ ಪರಮೇಶ್ವರನ ಕೃಪಾದೃಷ್ಟಿಯು ನಿಮಗೆ ಲಭಿಸಿ ಮತ್ತೂ ಸುಕೃತಿಗಳೆನಿಸಿರಿ. ಎಂದು ಸೂತಮಹಾಮುನಿಯು ಸಮಸ್ತ ಋಷಿವೃಂದವನ್ನು ಹೊಗಳಿ ಅವರ ದೃಢನಿಶ್ಚಯಕ್ಕೆ ಒತ್ತಾಸೆಯಿತ್ತನು. ॥೯॥

ಆಗ ಋಷಿಗಳು ಸೂತರನ್ನು ಕುರಿತು, "ಮಹರ್ಷಿಯೇ, ನಿನಗಿಂತ ಶ್ರೇಷ್ಠನಾದ ಆತ್ಮಜ್ಞಾನಿಯನ್ನು ನಾವು ಮತ್ತೆಲ್ಲಿ ನೋಡುವೆವು? ಅಜ್ಞಾನನಾಶಕವಾದ ಉಪನಿಷದರ್ಥವನ್ನೂ ಆತ್ಮಸ್ವರೂಪವನ್ನೂ ಬೋಧಿಸುವುದರಲ್ಲಿ ನಿನಗಿಂತ ಮೇಲಿನವರು ಯಾರೂ ಇಲ್ಲ. ಸಂಸಾರವೆಂಬ ರೋಗನಾಶಕವಾದ ಮತ್ತು ಸಂಸಾರಸಾಗರದಿಂದ ಉದ್ಧರಿಸುವ ಶಿವಕೃಪಾಪೂರ್ಣವಾದ ಈಶ್ವರಮಹಿಮೆಯನ್ನು ವಿವರಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಿದ ನೀನೇ ನಮಗೆ ಮಾನ್ಯನು. ಅಂತಹ ನಿನ್ನನ್ನೇ ಸದಾ ನಾವು ವಂದಿಸುವೆವು. ॥೧೦॥

ಈ ಶಿವರಹಸ್ಯವೆಂಬ ಮಧುವನ್ನು ಸ್ಪಷ್ಟವಾದ ಮಾತಿನಿಂದ ನಮಗೆಲ್ಲಾ

ವೇತ್ತುಂ ಚ ಭರ್ತುರ್ಮಹಿಮಾ ಕಿಮು ವಕ್ತುಮೇವಂ
ಶಿಷ್ಟೋ ವರಿಷ್ಠಮಹಿಮಾ ಭಗವಾಂಸ್ತ್ವಮೇವ ॥೧೧॥

ನಂದೀಶ ವಿಘ್ನೇಶಸಮೋಸಿ ಷಣ್ಮುಖ
ಪ್ರಭಾವತುಲ್ಯಪ್ರತಿಮಸ್ತ್ವಮೇವ ।
ತ್ವನ್ನೋ ಗುರುಃ ಶಿವಕಥಾಸುರಸಾಮೃತಸ್ಯ
ದಾತಾ ಹಿ ದೀನವದನಾ ನ ಭವಾಮ ಭಾವಾಃ ॥೧೨॥

ಸತ್ರಂ ಪವಿತ್ರಮಧುನಾ ಸತತಂ ತ್ರಿನೇತ್ರ
ಚಾರಿತ್ರಪಾತ್ರಮಧುವತ್ಪ್ರಪಿಬಾಮ ಶ್ರೋತ್ರೈಃ ।
ಚಿತ್ರಂ ವಿಚಿತ್ರಪದಯಂತ್ರಿಕ ತಂತ್ರಮಂತ್ರ
ಸಾರಾರ್ಥಸಿಂಧುಸುರಹಸ್ಯಮಮುತ್ರ ಪುತ್ರ್ಯಂ ॥೧೩॥

---

ತಿಳಿಯಪಡಿಸಿ, ಅದರ ಆನಂದಾನುಭವವನ್ನು ತಾನೂ ಸವಿದು, ನಿಜವಾದ ಶಿವಮಹಿಮೆಯನ್ನು ಅರಿತವರಲ್ಲಿ ನೀನೇ ಮೊದಲಿನವನಲ್ಲವೆ? ಪೂಜ್ಯನಾದ ಸೂತಮಹರ್ಷಿಯೇ, ಇಗೋ ನಿನಗೆ ವಂದಿಸುವೆವು. ॥೧೧॥

ಸೂತಮಹರ್ಷಿಯೇ, ನೀನು ನಂದೀಶ್ವರ, ವಿಘ್ನೇಶ್ವರ, ಕುಮಾರಸ್ವಾಮಿ ಇವರುಗಳಂತೆ ಈಶ್ವರನಿಗೆ ಪ್ರೀತಿಪಾತ್ರನೆನಿಸಿರುವೆ. ಮಹಿಮೆಯಲ್ಲಿಯೂ ನೀನು ಅವರಿಗೆ ಸರಿಸಮನೆನಿಸಿರುವೆ. ಶಿವಕಥಾಮೃತವನ್ನು ನಮಗೆ ಉಪದೇಶಿಸಿದ ಗುರುವೇ ನೀನು. ನೀನೇ ಈ ಕಥಾಮೃತದಾತನು. ನಾವಾದರೋ ದೀನಮುಖವುಳ್ಳವರು. ಇಂತಹ ನಾವು ಶಿವನನ್ನು ತೃಪ್ತಿಪಡಿಸುವುದಾದರೂ ಹೇಗೆ? ॥೧೨॥

ಮಹರ್ಷಿಯೇ, ಇಷ್ಟು ವರ್ಷ ಪರ್ಯಂತ ನಡೆಸಿದ ಈ ಸತ್ರಾತ್ಮಕವಾದ ಮಹಾಯಜ್ಞದಲ್ಲಿ ಈ ಶಿವಚರಿತೆಯೆಂಬ ಕಥಾಮೃತವನ್ನು ನಮ್ಮ ಕಿವಿಗಳ ಮೂಲಕ ಪಾನಮಾಡಿ ಧನ್ಯರಾದೆವು. ಈ ಶಿವರಹಸ್ಯವು ಅರ್ಥಗರ್ಭಿತಗಳಾದ ಪದಗಳಿಂದಲೂ, ಮಂತ್ರತಂತ್ರಗಳ ಸಾರಾಂಶದಿಂದಲೂ ಕೂಡಿ, ರಹಸ್ಯವಾದ ವಿಷಯುಗಳನ್ನೊಳಗೊಂಡು, ಪುತ್ರಪೌತ್ರಾದಿ ಸಂಪತ್ತುಗಳನ್ನು ಕೊಡುವುದಾಗಿದೆ. ಇಂತಹ ಪವಿತ್ರ ಗ್ರಂಥವನ್ನು ನಾವು ಪೂರ್ಣವಾಗಿ ನಿನ್ನ ದಯೆಯಿಂದ ಅರಿತಿದ್ದೇವೆ. ॥೧೩॥

ತತ್ರ ತ್ರಿನೇತ್ರಸುಪವಿತ್ರಕಥಾಕ್ಷವಾತ್ರ
ಸಂತ್ರಸ್ತ ಪಾತಕಭರಾಸ್ತಪಸಾರ್ಚಯಾಮಃ ।
ದೇಹಾಂತ ಏವ ಹಿ ಭವೇದವಿಮುಕ್ತವಾಸ
ಪುಣ್ಯೈಃ ಪಚೇಲಿಮಫಲೈರ್ಧವಲಾದ್ರಿವಾಸಃ ॥೧೪॥

ತತ್ರೈವ ಶಂಕರಗಣಾ ಪ್ರಭವಾಮ ಸಾಮಿಸೋಮ
ಪ್ರಕಾಮಶಿರಸೋ ಸಿತಭಸ್ಮಭೂಷಾಃ ।
ಯೋಷಾರ್ಧಗಾತ್ರಕಮನೀಯಪರಿಜ್ಞಟಾಲ
ಲೋಲಾಲಕಾಃ ಶಿವಪದಾಂಬುಜಸೇವಕಾಶ್ಚ ॥೧೫॥

ಕಿಂ ನೋ ಬ್ರಹ್ಮಪದೇಷು ವೈಷ್ಣವಯಶಸ್ಥಿತೇ ಪದೇ ವಾ ಪದಾಂ
ಪ್ರಾಪ್ಯೇನಾಪ್ಯಮಹೋ(?) ಮಹೇಂದ್ರಸದನೇ ದಿಕ್ಪಾಲಕಾನಾಂ ಪದೇ ।
ತತ್ರತ್ಯಾಕುಲ ಶಂಕರಾಚಲ ಮಹಾಕೈಲಾಸವಾಸಾಧಿಕಂ
ನಾಪ್ನೋತ್ಯೇವ ಫಲಂ ಸುಮುಕ್ತಿಷು ಪರಂ ವಾಂಛಾಪಿ ನಿಃಶ್ರೇಯಸೀ ॥೧೬॥

---

ಪರಶಿವನ ಪವಿತ್ರ ಕಥಾಮೃತಪಾನದಿಂದ ತೃಪ್ತರಾಗಿ ನಾವು ಈಗ ಪಾಪ ನಿವಾರಣೆಗಾಗಿ ಪರಶಿವನನ್ನು ತಪಸ್ಸಿನಿಂದ ಅರ್ಚಿಸುತ್ತೇವೆ. ದೇಹಾಂತ್ಯಕಾಲದಲ್ಲಿ ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ವಾಸಮಾಡುತ್ತಾ, ಅಲ್ಲಿ ಶಿವಾರ್ಚನಾದಿಗಳಿಂದ ಪುಣ್ಯರಾಶಿಯನ್ನು ಸಂಪಾದಿಸಿ ತತ್ಪ್ರಯುಕ್ತವಾದ ಕೈಲಾಸವಾಸವನ್ನು ಪಡೆಯಲು ಪ್ರಯತ್ನಿಸುತ್ತೇವೆ. ॥೧೪॥

ಕೈಲಾಸದಲ್ಲಿ ಅರ್ಧಚಂದ್ರಶೇಖರನಾದ ಪರಶಿವನ ಗಣಗಳಲ್ಲಿ ಸೇರಿ, ಶುಭ್ರವಾದ ಭಸ್ಮಭೂಷಿತಾಂಗರಾಗಿ, ಅರ್ಧನಾರೀಶ್ವರನೂ, ದೇವಗಂಗಾಧರನೂ ಆದ ಪರಮೇಶ್ವರನ ಪಾದಸೇವಕರಾಗಿ ಶಿವಾನಂದವನ್ನನುಭವಿಸುತ್ತಾ ವಾಸಿಸಲು ಇಷ್ಟಪಡುತ್ತೇವೆ. ॥೧೫॥

ಬ್ರಾಹ್ಮಪದವಿ, ವಿಷ್ಣುಸನ್ನಿಧಿ, ದೇವೇಂದ್ರಗೃಹ, ದಿಕ್ಪಾಲಕರ ಸ್ಥಾನ ಇವುಗಳನ್ನು ಸುಲಭವಾಗಿ ಪಡೆಯಬಹುದು. ಆದರೆ ಆಯಾ ಸ್ಥಾನಗಳಲ್ಲಿ ಯಾವ ವಿಧವಾದ ಆನಂದವೂ ಲಭಿಸಲಾರದು. ಕೈಲಾಸವಾಸದಿಂದ ಯಾವ ಆನಂದಾದಿಗಳು ದೊರೆಯುವುವೋ, ಅಂತಹ ಸುಖಸಮೃದ್ಧಿಯು ಮೇಲೆ ಹೇಳಿದ ಯಾವ ಸ್ಥಳ

ಕೈಲಾಸವಮೌಲಿ ತರವಃ ಪಶವೋಲ್ಪಕೀಟಾ
ನಿತ್ಯಾಶ್ಶಿವಸ್ಯ ಕೃಪಯಾ ಖಲು ಸರ್ವದಾಪಿ ।
ಲೋಕ್ಯಾ ಪುನರ್ದಿವಿಷದಃ ಪ್ರತಿಕಲ್ಪನಾಶಾ
ಬ್ರಹ್ಮೇಂದ್ರ ವಿಷ್ಣುಮರುತೋ ವಸವೋರ್ಕರುದ್ರಾಃ ॥೧೭॥

ಕೈಲಾಸವಾಸಾಯ ಶಿವಪ್ರಸಾದತಃ
ಕಾಶೀನಿವಾಸಾಯ ಲಭೇಮ ಪುಣ್ಯೈಃ ।
ಯಜ್ಞೈರಥಾಜ್ಞಾನವಿನಷ್ಟಮಾನಸಾ
ವ್ರಜಾಮ ಶೀಘ್ರಂ ಕಿಲ ಮುಕ್ತಿಸಿದ್ಧ್ಯೈ ॥೧೮॥

ಕೈವಲ್ಯವಲ್ಲೀಮಿವ ತಾಂ ಪುರೀಂ ತದಾ
ಮುದಾ ಪುರಾರೇರ್ವಿವಿಶುಃ ಪ್ರಹೃಷ್ಟಾಃ ।
ಭಿಲ್ಲಾಕೃತೇ ಶಂಕರಕಾರ್ಮುಕಪ್ರಭಾ
ತೇ ವಾಲಖಿಲ್ಯಾಃ ಶಿಥಿಲಾಘಸಂಘಾಃ ॥೧೯॥

---

ದಲ್ಲಿಯೂ ಯಾರಿಗೂ ಸಿಗಲಾರದು. ಮತ್ತು ಅಲ್ಲಿ ಸೇರಿದವರಿಗೆ ಮುಕ್ತಿಸ್ಥಾನವನ್ನು ಪಡೆಯಬೇಕೆಂಬ ಅಭಿಲಾಷೆಯು ತಪ್ಪುವುದೇಇಲ್ಲ. ॥೧೬॥

ಶಿವಾನುಗ್ರಹದಿಂದ ಕೈಲಾಸಗಿರಿಶಿಖರದಲ್ಲಿ ಜನ್ಮತಾಳುವ ಮರಗಳು, ಪಶುಗಳು, ಕ್ರಿಮಿಕೀಟಗಳು, ಇವೆಲ್ಲಕ್ಕೂ ಪುನರ್ಜನ್ಮವೇ ಇರುವುದಿಲ್ಲ. ಇವೆಲ್ಲಾ ಸ್ಥಿರಜೀವಿಗಳಾಗುವುವು. ಮತ್ತೆ ದೇವಲೋಕದವರು, ಬ್ರಹ್ಮ, ವಿಷ್ಣು, ಇಂದ್ರ, ಮರುದ್ಗಣಗಳು ಅಷ್ಟವಸುಗಳು ದ್ವಾದಶಾದಿತ್ಯರು ಏಕಾದಶರುದ್ರರು ಇವರೆಲ್ಲರಿಗೂ ಪುನರ್ಜನ್ಮವಿರುವುದಲ್ಲದೆ ಪ್ರತಿಕಲ್ಪವೂ ಬೇರೆ ಬೇರೆ ದೇಹಗಳನ್ನು ಪಡೆಯುವರು. ॥೧೭॥

ತಪೋಯಜ್ಞಾದಿಪುಣ್ಯಕರ್ಮಾಚರಣೆಗಳಿಂದ ಕಾಶೀವಾಸವನ್ನು ಪಡೆಯುತ್ತೇವೆ. ಅಲ್ಲಿ ಶಿವಾನುಗ್ರಹವನ್ನು ಸಂಪಾದಿಸಿ ಅಲ್ಲಿಂದ ಕೈಲಾಸದಲ್ಲಿ ವಾಸಮಾಡುವ ಯೋಗ್ಯತೆಯನ್ನು ಹೊಂದುತ್ತೇವೆ. ಅಲ್ಲಿಯೇ ನಮಗೆ ಆನಂದಾನುಭವ ರೂಪವಾದ ಮುಕ್ತಿಯು ಸುಲಭವಾಗಿ ದೊರೆಯುವುದಲ್ಲವೆ! ॥೧೮॥

ಹೀಗೆ ಹೇಳುತ್ತಾ ಆ ವಾಲಖಿಲ್ಯಾದಿ ಸಮಸ್ತ ಮುನಿವರ್ಗವೂ ಮೋಕ್ಷ ಫಲವನ್ನು ಕೊಡುವ ಲತೆಯಂತೆ ವಿಶಾಲವಾಗಿ ಸುಂದರವಾಗಿರುವ, ಶಂಕರನ ಆವಾಸ

ದದರ್ಶುರಾದರ್ಶತಲಸ್ಥಿತೇವ ತಾಂ
ಗಂಗಾಂ ದ್ವಿಜಾ ತುಂಗತರಂಗಭಂಗಾಂ ।
ಉತ್ತುಂಗಲಿಂಗಾವಲಿಸೌಧಕುಂಭಾ
ಮಂಭೋಧರಾಂಕಪ್ರತಿಮಾಂ ಚ ಕಾಂತಾಂ ॥೨೦॥

ಕೈಲಾಸಶೈಲಮಣಿಮೌಲಿಗ ದಿವ್ಯಮಾಲೀ
ವ್ಯಾಲೀವ ತುಂಗಾವಲಿಸೌಧಕೇಲೀಂ ।
ಸಸ್ನುಃ ಸಮಸ್ತಾಘಹರೇ ಪ್ರಶಸ್ತಾಂ
ದಿವ್ಯಾಂ ಚ ತಾಂ ಶ್ರೀ ಮಣಿಕರ್ಣಿಕಾಂ ದ್ವಿಜಾಃ ॥೨೧॥

ಸಂತರ್ಪ್ಯ ದೇವರ್ಷಿಪಿತೄಂಸ್ತದಾ ಮುದಾ
ಗಂಗಾತಟೇ ತೇ ಕೃತಭಸ್ಮಭೂಷಣಾಃ ।

---

ಸ್ಥಾನವಾದ, ಮತ್ತು ಬೇಡನ ಆಕಾರವನ್ನು ಪಡೆದ ಪರಶಿವನ ಧನುಸ್ಸಿನ ಪ್ರಭೆಯನ್ನು ಬೆಳಗಿಸುವ ಕಾಶೀಕ್ಷೇತ್ರವನ್ನು ಕುರಿತು ಪ್ರಯಾಣ ಮಾಡಿದರು. ॥೧೯॥

ಆ ಕಾಶೀಕ್ಷೇತ್ರವಾದರೋ ವಿಶಾಲವಾದ ಕನ್ನಡಿಯಂತೆ ಸಮಮಟ್ಟವಾದ ಭೂಭಾಗದಿಂದ ಪ್ರಕಾಶಿಸುತ್ತಿದ್ದಿತು. ಅಲ್ಲಿ ದೊಡ್ಡ ದೊಡ್ಡ ಅಲೆಗಳಿಂದಲೂ, ಪಕ್ಷಿಗಳ ಹಾರಾಟದಿಂದಲೂ, ಗಂಗಾನದಿಯು ಪ್ರವಹಿಸುತ್ತಿತ್ತು. ಎತ್ತರವಾದ ಶಿವಲಿಂಗಗಳೂ ಉನ್ನತಗಳಾದ ಉಪ್ಪರಿಗೆಯ ಮನೆಗಳೂ ವಿರಾಜಿಸುತ್ತಿದ್ದುವು. ಇಂತಹ ಸುಂದರವಾದ ಶಿವಕ್ಷೇತ್ರವು ಗಂಗಾಧರನಾದ ಶಿವನ ತೊಡೆಯಮೇಲೆ ಪ್ರಕಾಶಿಸುವ ಗೌರೀದೇವಿಯಂತೆ ಮನೋಹರವಾಗಿ ಕಾಣುತ್ತಿದ್ದಿತು. ॥೨೦॥

ಕಾಶಿಯಲ್ಲಿ ಗಂಗಾನದಿಯು ಹರಿಯುವ ಮಣಿಕರ್ಣಿಕೆಯೆಂಬ ತೀರ್ಥವು ಕೈಲಾಸ ಪರ್ವತವೆಂಬ ನಾಗಮಣಿಯನ್ನು ಹೊಂದಿರುವ ಸರ್ಪದೋಪಾದಿಯಲ್ಲಿ ವಿಶಾಲವಾಗಿ ವ್ಯಾಪಿಸಿದ್ದಿತು. ಅದರ ಸುತ್ತಲೂ ಎತ್ತರವಾದ ಸೌಧರಾಜಿಗಳಿದ್ದುವು. ಇಂತಹ ಸಂಪದ್ಭರಿತವಾದ ಮಣಿಕರ್ಣಿಕಾ ತೀರ್ಥದಲ್ಲಿ ಆ ಋಷಿಗಳೆಲ್ಲರೂ ಸ್ನಾನ ಮಾಡಿದರು. ॥೨೧॥

ಆ ಗಂಗಾತೀರದಲ್ಲಿ ದೇವ ಋಷಿ ಪಿತೃತರ್ಪಣಗಳನ್ನು ನೆರವೇರಿಸಿಕೊಂಡು, ಅಲ್ಲಿಯೇ ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲೆ ಇವುಗಳಿಂದ ಅಲಂಕೃತರಾಗಿ ಬಿಲ್ವಪತ್ರೆ

ಪುಂಡ್ರಾಕ್ಷಮಾಲಾ ಮುನಯೋಽಮರೇಶಂ
ಸಮರ್ಚಯಂಸ್ತೇ ಕಿಲ ಬಿಲ್ವಪತ್ರೈಃ ॥೨೨॥

ಗೃಹಸ್ಥಾ ವನಸ್ಥಾ ತಥಾನ್ಯೇ ಚ ಧನ್ಯಾಃ
ದ್ವಿಜಾಃ ಶಾಂತಸಂನ್ಯಾಸಿನೋಽಪ್ಯೇಕದಂಡಾಃ ।
ಜಟಾಲಾ ನಿಟಾಲೇಕ್ಷಣಾಸಕ್ತಚಿತ್ತಾ
ವಿರಕ್ತಾಸ್ತದಾ ಬ್ರಹ್ಮಚರ್ಯೇಷು ರಕ್ತಾಃ ॥೨೩॥

ತಥಾ ನಗ್ನಯಃ ಸಾಗ್ನಯೋ ಭಗ್ನಮಾನಾಃ
ಶ್ರುತೇ ಶ್ರದ್ಧಯಾ ಶ್ರಾದ್ಧದಾನೈಃ ಪಿತೄಂಸ್ತೇ ।
ತಥಾ ಹವ್ಯಕವ್ಯೈಃ ಸಮಭ್ಯರ್ಚ್ಯ ಲೇಖಾನ್
ಮುದಾಂತರ್ಗೃಹಂ ಚಕ್ರಮುಃ ಪ್ರಕ್ರಮೈಸ್ತೇ ॥೨೪॥

ವಿಶ್ವೇಶ ಭೈರವ ಷಡಾನನ ಧುಂಡಿರಾಜ
ಮಾತಾನ್ನಪೂರ್ಣಾಂ ಪ್ರಣಮಂಶ್ಚ ಹೃಷ್ಟಾಃ ।
ಶ್ರೀದಂಡಪಾಣಿಂ ಚ ತಥಾ ಪ್ರಣಮ್ಯ
ಸಂಪೂಜ್ಯ ಪೂಜಾದಿಭಿ ರೇಕಧೀಭಿಃ ॥೨೫॥

---

ಇವುಗಳನ್ನು ತಂದು ಅಲ್ಲಿ ಪರಶಿವಾರ್ಚನೆಯನ್ನು ಭಕ್ತಿಯಿಂದ ನೆರವೇರಿಸಿದರು. ॥೨೨॥

ಅಲ್ಲಿದ್ದ ಗೃಹಸ್ಥರೂ, ವಾನಪ್ರಸ್ಥರೂ, ಶಾಂತಚಿತ್ತರಾದ ಸಂನ್ಯಾಸಿಗಳೂ, ಏಕದಂಡ ಸಂನ್ಯಾಸಿಗಳೂ, (ನೈಷ್ಠಿಕ ಯೋಗಿ) ಜಟಾಧಾರಿಗಳೂ, ವಿರಕ್ತರೂ, ಬ್ರಹ್ಮಮಾರ್ಗಾನುಯಾಯಿಗಳೂ ಇವರೆಲ್ಲರೂ ಆ ನದೀದಡದಲ್ಲಿ ಶಿವಪೂಜಾಸಕ್ತರಾಗಿ ಕುಳಿತು ಯಥಾಶಕ್ತಿ ಶಿವಾರಾಧನೆಯನ್ನು ನೆರವೇರಿಸಿದರು. ॥೨೩॥

ನಗ್ನರಾದ ದಿಗಂಬರರು, ಅಗ್ನಿಸಹಿತರಾದ ಗೃಹಸ್ಥರು, ಅಹಂಕಾರ ವಿವರ್ಜಿತರು, ಶ್ರದ್ಧಾಳುಗಳು ಇವರೆಲ್ಲರೂ ಅಲ್ಲಿ ಶ್ರಾದ್ಧಾದಿಗಳಿಂದ ಪಿತೃದೇವತೆಗಳನ್ನೂ, ಹವಿರ್ದಾನಾದಿಗಳಿಂದ ದೇವತಾವರ್ಗವನ್ನೂ ತೃಪ್ತಿಪಡಿಸಿ, ಅನಂತರ ವಿಶ್ವೇಶ್ವರಾಂತರ್ಗೃಹ ದರ್ಶನಕ್ಕಾಗಿ ಅಲ್ಲಿಂದ ಹೊರಟರು. ॥೨೪॥

ವಿಶ್ವೇಶ್ವರಲಿಂಗ, ಕಾಲಭೈರವೇಶ್ವರ, ಕುಮಾರಸ್ವಾಮಿ, ಧುಂಡಿರಾಜ, ಗಣ

ಆಲಾಬು ದಾರುವೇಣು ಭೃಂಗಧಾತು ಕುಂಭಸಂಗತೈಃ
ಪ್ರಕೃಷ್ಟಗಾಂಗಜಾಂಭಸಾ ನಮೋಂತರುದ್ರಸೂಕ್ತತಃ ।
ಪ್ರಕೃಷ್ಟ ಪಂಚ ಪಾಪಹೃತ್ಸುಪಂಚವರ್ಣ ಮಂತ್ರತಃ
ಪ್ರಸಿಂಚ್ಯ ಲಿಂಗವೈಶ್ವರಂ ಸುಬಿಲ್ವಪಲ್ಲವೈಸ್ಸುಮೈಃ ॥೨೬॥

ತಥೈವ ಧೂಪದೀಪತೋ ನಿವೇದ್ಯ ಚಾಂಬುಭಿಃ ಫಲೈ
ರ್ವರಾನ್ನಭಕ್ಷ್ಯಭೋಜ್ಯಕೈಃ ಪ್ರಸಾದ್ಯ ಚ ಪ್ರತುಷ್ಟುವುಃ ॥೨೭॥

ವಿಶ್ವೇಶ್ವರೋಽಯಂ ಮದನಾಂತಕೋಽಯಂ
ಪುರಾಂತಕೋಽಯಂ ಹಿ ಭವಾಂತಕೋಽಯಂ ।
ಸುರಾಸುರೌಘಾನತ ಪಾದಪದ್ಮಃ
ಸಮಾಹಿತೋ ನೋಽಸ್ತು ಮುದಾ ಹೃದೀತಿ ॥೨೮॥

---

ಪತಿ, ಅನ್ನಪೂರ್ಣೇಶ್ವರಿ, ದಂಡಪಾಣೀಶ್ವರ ಮುಂತಾದ ಶಿವ ಸ್ವರೂಪರಾದ ದೇವತೆಗಳನ್ನು ವಿಧಿವತ್ತಾಗಿ ಪೂಜಿಸಿ, ನಾನಾವಿಧವಾಗಿ ಸ್ತೋತ್ರಮಾಡಿದರು. ॥೨೫॥

ಸೋರೆಬುರುಡೆ, ಮರದ ಮತ್ತು ಬಿದಿರಿನ ಅಂಡೆಗಳು, ಲೋಹದ ಕಮಂಡಲುಗಳು ಇವುಗಳಿಂದ ಗಂಗಾಜಲವನ್ನು ತಂದು, ಶ್ರೀ ರುದ್ರಾಧ್ಯಾಯ, ಪಾಪನಾಶಕರವಾದ ಶಿವಪಂಚಾಕ್ಷರೀಮಂತ್ರ ಇವುಗಳನ್ನು ಪಠನಮಾಡುತ್ತಾ ಶಿವಲಿಂಗಾಭಿಷೇಕವನ್ನು ನಡೆಸಿ, ಅನಂತರ ಕೋಮಲವಾದ ಬಿಲ್ವಾದಿದಳಗಳಿಂದಲೂ ಸುಗಂಧಮಯವಾದ ಪುಷ್ಪಗಳಿಂದಲೂ ಪೂಜಿಸಿ ಧನ್ಯರಾಗುತ್ತಿದ್ದರು. ॥೨೬॥

ಶಿವಲಿಂಗಗಳು ದೊರೆತ ಕಡೆಯಲ್ಲೆಲ್ಲಾ, ಗಂಗಾಭಿಷೇಕ, ಧೂಪದೀಪನೈವೇದ್ಯಾದ್ಯುಪಚಾರಗಳು, ಇವುಗಳಿಂದ ಈಶ್ವರನನ್ನು ತೃಪ್ತಿಗೊಳಿಸುತ್ತಾ ಆ ಮುನಿಗಳು ಆನಂದದಿಂದ ಈರೀತಿ ಸ್ತುತಿಸುತ್ತಿದ್ದರು. ॥೨೭॥

"ಮಹಾದೇವನೇ, ಈ ನಿನ್ನ ವಿಶ್ವೇಶ್ವರಲಿಂಗವು ಮನ್ಮಥ, ತ್ರಿಪುರಗಳು ಭಕ್ತರ ಸಂಸಾರ ದುಃಖ ಇವುಗಳಿಗೆ ಅಂತಕನಂತೆ ನಾಶಕವಾಗಿದೆ. ಮತ್ತು ದೇವರಾಕ್ಷಸರಿಂದ ಸೇವಿಸಲ್ಪಡುವ ಪಾದಪದ್ಮವುಳ್ಳದ್ದಾಗಿದೆ. ಇಂತಹ ನಿನ್ನ ಆಕಾರವು ಸದಾ ನಮ್ಮ ಹೃದಯ ಕುಹರದಲ್ಲಿದ್ದು ಧ್ಯಾನ ವಿಷಯವಾಗಿರಲಿ. ॥೨೮॥

ಏಷ ಬ್ರಹ್ಮೈಷ ಇಂದ್ರ ಶ್ರುತಿರಕುಲಬಲಾದ್ವಿಶ್ರುತಂ ತೇ ಸದಾಬ್ದಂ
ನಿರ್ವಕ್ತಿ ಪ್ರಮಥಾಧಿನಾಥ ಭಗವನ್ ಶ್ರೀ ವಿಶ್ವನಾಥ ಪ್ರಭೋ ।
ಕೋಶಾತೀತಮನಂತಮವ್ಯಯಮಜಂ ಕಾಶ್ಯಾಂ ಪ್ರಕಾಶಂ ಪರಂ
ವೇದಾ ವೇದ್ಯಪರಂ ವಿಶೋಕಮಜರಂ ಪಶ್ಯೇಮ ಲಿಂಗಂ ಹಿ ತೇ ॥೨೯॥

ನೋಪೇಕ್ಷಾಮಹಾಪಾಮ ನ ವೇದ ವಾಚೋ
ನಿವೃತ್ತಿಭಾವಾ ಮನಸಾ ಸಹೈವ ತೇ ।
ಭಜಾಮ ಲಿಂಗಂ ಸ್ಥಿತಮುಖ್ಯಲಿಂಗ
ಮುಮಾಸಹಾಯಂ ತಮಸಃ ಪರಂ ತ್ವಾಂ ॥೩೦॥

ದೇವ್ಯನ್ನಪೂರ್ಣೇ ಕೃಪಯಾ ಸುಪೂರ್ಣೇ
ತೂರ್ಣಂ ಹೃದಾಕಾಶಗತೇತ್ವಪರ್ಣೇ ।

---

ಪರಮೇಶ್ವರನೇ, ಈ ನಿನ್ನ ಶಿವಲಿಂಗವೇ ಬ್ರಹ್ಮ, ವಿಷ್ಣು, ಇಂದ್ರ ಈ ದೇವತೆಗಳ ಸ್ವರೂಪ ಎಂದು ಸಕಲ ವೇದಗಳೂ ಉಪನಿಷತ್ತುಗಳೂ ಪ್ರತಿಪಾದಿಸುತ್ತಲಿವೆ. ನೀನು ಪ್ರಮಥಗಣಗಳಿಗೆ ಒಡೆಯನು, ಪೂಜ್ಯನು, ವಿಶ್ವನಾಥನು. ಅನಾಮಯಾದಿ ಪಂಚಕೋಶರಹಿತನು, ಆದ್ಯಂತವಿಲ್ಲದವನು, ಕಾಶಿಯಲ್ಲಿ ವಿಶ್ವೇಶ್ವರರೂಪದಿಂದ ಪ್ರಕಾಶಿತನಾದವನು. ಇಂತಹ ಶೋಕರಹಿತವಾದ ವಿಶ್ವೇಶ್ವರಲಿಂಗರೂಪಿಯಾದ ನಿನ್ನನ್ನು ನಾವು ಸದಾ ಪ್ರಾರ್ಥಿಸುವೆವು. ॥೨೯॥

ನಿವೃತ್ತಿಮಾರ್ಗಪ್ರದರ್ಶಕಗಳಾದ ವೇದವಾಕ್ಯಗಳು ನಿನ್ನ ಅಖಂಡ ಪ್ರಪಂಚ ಸ್ವರೂಪವನ್ನು ವಿವರಿಸುತ್ತಲಿವೆ. ಅದನ್ನು ನಾವು ಎಂದೂ ಉಪೇಕ್ಷಿಸುವುದಿಲ್ಲ. ನಿಜವಾಗಿಯೂ ನೀನು ಲಿಂಗ ಶರೀರವಿಲ್ಲದವನು. ಅಂದರೆ ನಿರ್ಗುಣನು. ನಿರಾಕಾರನು. ಆದರೂ ಉಪಾಧಿವಶದಿಂದ ಉಮಾಪತಿ ಎಂಬ ನಾಮಾಂಕಿತದಿಂದ ಶಿವಲಿಂಗ ರೂಪಿಯಾಗಿರುವೆ. ಈ ಮಾಯಾ ಪ್ರಪಂಚಕ್ಕೆ ಎಂದೂ ನೀನು ವಶನಾಗತಕ್ಕವನಲ್ಲ. ಮಾಯಾತೀತನು. ಇಂತಹ ನಿನ್ನನ್ನು ನಾವು ಸದಾ ಧ್ಯಾನಿಸಿ ಮುಕ್ತರಾಗುವೆವು. ॥೩೦॥

ಕೃಪಾಪೂರ್ಣಳಾದ ಅನ್ನಪೂರ್ಣಾದೇವಿಯೇ, ಪರಶಿವನ ಹೃದಯಾಂತರ್ನಿವಾಸಿನಿಯಾದ ಅಪರ್ಣೆಯೇ, ನಿನ್ನ ಮಹಿಮೆಯನ್ನು ಏನೆಂದು ವರ್ಣಿಸಲಿ?

ಕಿಂ ವರ್ಣಯಾಮಸ್ತವ ಸುಪ್ರಭಾವಂ
ಭವಾರ್ಣವಾಂತಃಪತಿತಾನ್ ಸಮುದ್ಧರ ॥೩೧॥

ಶಿವೇ ವಿಶಾಲಾಕ್ಷಿ ಪದಾಂಬುಜಂ ತೇ
ಪ್ರದೇಹಿ ಭಿಕ್ಷಾಂ ನಿಖಿಲೇಷು ಸಾಕ್ಷಿಣೀಂ ।
ನೈಶ್ರೇಯಸೀಂ ನಃ ಶ್ರಮಕಷ್ಟನಾಶಿನೀಂ
ಭವಾಮ ಮುಕ್ತಾಶ್ಚ ಕಟಾಕ್ಷಿತಸ್ತವ ॥೩೨॥

ಶ್ರೀ ಢುಂಡಿರಾಜಶರಣಾಗತ ಕಾಶಿವಾಸ
ವಿಘ್ನೌಘಪಾತಕತತಿಂ ಪರಿನಿಘ್ನಯಾಶು ।
ಗಂಗಾಂಬುಪುಷ್ಪವರಮೋದಕತಃ ಪ್ರಪೂಜ್ಯ
ನಂದಾಮಹೇ ತವ ಪದಾಂಬುಜಭೃಂಗಭಾವಾಃ ॥೩೩॥

ಶ್ರೀ ಭೈರವಾರವಭರಶ್ರವಣಾಂತಯುಗ್ಮ
ತಿಗ್ಮೈಕಪಾತಕಭರೈರಭಿಪೂರಿತಾ ಯೇ ।

---

ಅತ್ಯಂತ ಮಹಿಮಾಪೂರ್ಣಳಾದ ನೀನು ಸಂಸಾರ ಸಮುದ್ರದಲ್ಲಿ ಮುಳುಗಿರುವ ನಮ್ಮನ್ನುದ್ಧರಿಸಿ ಕಾಪಾಡು. ॥೩೧॥

ವಿಶಾಲಾಕ್ಷೀದೇವಿಯೇ, ನೀನು ಸಕಲ ಲೋಕಸಾಕ್ಷಿಣಿಯು. ನಿನಗೆ ತಿಳಿಯದ ವಿಷಯವೇ ಇಲ್ಲ. ನಮಗೆ, ಮುಕ್ತಿಪ್ರದವಾದ ಮತ್ತು ಸಾಂಸಾರಿಕ ಶ್ರಮ ಕಷ್ಟಗಳನ್ನು ನಿವಾರಿಸುವಂತಹ ಭಿಕ್ಷೆಯನ್ನು ಅನುಗ್ರಹಿಸು. ನೀನಿತ್ತ ಭಿಕ್ಷಾನ್ನದಿಂದ ನಾವು ನಿನ್ನ ಅನುಗ್ರಹವನ್ನೂ ಪಡೆದು ಈ ಘೋರಸಂಸಾರದಿಂದ ಮುಕ್ತರಾಗುವೆವು. ॥೩೨॥

ಢುಂಡಿರಾಜ ಗಣಪತಿಯೇ, ನಾವು ನಿನ್ನಲ್ಲಿ ಶರಣಾಗತರಾಗಿ ಬಂದಿರುವೆವು. ಕಾಶೀವಾಸದಲ್ಲಿ ನಿರತರಾದವರ ಸಮಸ್ತ ಪಾಪರಾಶಿಯನ್ನೂ ನಿರ್ಮೂಲಗೊಳಿಸುವ ನೀನು ನಮ್ಮನ್ನು ಸಂರಕ್ಷಿಸು. ನಿನಗೆ ಗಂಗಾಭಿಷೇಕ, ಪುಷ್ಪಮಾಲೆ, ಕಡುಬು ಮುಂತಾದ ಸೇವೆಗಳಿಂದ ತೃಪ್ತಿಯನ್ನುಂಟುಮಾಡಿ ನಿನ್ನ ಪಾದಕಮಲಗಳಲ್ಲಿ ನಾವು ಸದಾ ದುಂಬಿಗಳಂತೆ ಹಾರಾಡುತ್ತಿರುವೆವು. ಮಹಾಗಣಪತಿಯೇ, ನಮ್ಮನ್ನು ಸಲಹು. ॥೩೩॥

ಕಾಲಭೈರವನೇ, ನಿನ್ನನ್ನು ನಾವು ಕೃಷ್ಣಾಷ್ಟಮಿಯ ದಿನದಲ್ಲಿ ಭಕ್ತಿಯಿಂ ದರ್ಶಿಸುವೆವು. ಸದಾ ನಿನ್ನ ಪಾದಕಮಲವನ್ನೇ ಸೇವಿಸುವೆವು. ನಿನ್ನ ಕೇವಲ

ಕಾಲಾಷ್ಟಮೀಷು ಪರಿಪೂಜ್ಯ ತವಾಬ್ಜಪಾದಂ
ವಿಪ್ರಾ ವಸೇಮ ನಿಯತಂ ಪಶುಪಾಶಮುಕ್ತ್ಯೈ ॥೩೪॥

ಶ್ರೀ ದಂಡಪಾಣಿಚರಣಸ್ಮರಣಾನುರಕ್ತಾನ್
ಮುಕ್ತಾನ್ ಕರೋತಿ ನಿಯತಾನಥ ಶಂಭುಭಕ್ತಾನ್ ।
ತಸ್ಮಾತ್ತ್ವದರ್ಚನವಿಧೌ ಖಲು ಜಾಗರೂಕಾಃ
ವಿಪ್ರಾ ವಸೇಮ ನಿಯತಾ ಹೃದಯೈರ್ವಿಶೋಕಾಃ ॥೩೫॥

ನಾಕರ್ಣಿ ಯೈಸ್ತವ ಕಥಾ ಮಣಿಕರ್ಣಿಕೇ ತೈ
ರ್ನಿರ್ಣೀಯತೇ ಯಮ ಗತೀಷು ಸುದುಃಖವಾರ್ತಾ ।
ತ್ವತ್ತೀರ್ಥಮಜ್ಜನವತಾಂ ನ ಹಿ ಜನ್ಮ ಪುಂಸಾಂ
ಮುಕ್ತಿಂ ದದಾಸಿ ಪರಮಾಂ ಶಿವಭಕ್ತಿನಿಷ್ಠಾಂ ॥೩೬॥

ಯೋ ಜ್ಞಾನವಾಪೀಮವಿಗಾಹತೋಽಪಿ
ನನಂದತೇ ಪಾಪಮಪಾಕರೋತಿ ।

---

ಘರ್ಜನೆಯಿಂದಲೇ ನಮ್ಮ ಸಮಸ್ತ ಪಾಪರಾಶಿಯೂ ನಿರ್ಮೂಲಗೊಳ್ಳುವುದು. ಪಶುಸದೃಶರಾದ ನಾವು ಪಾಶಬಂಧನಚ್ಯುತರಾಗಿ ಮೋಕ್ಷವನ್ನು ಪಡೆಯಲು ಸದಾ ನಿನ್ನ ಸೇವೆಯಲ್ಲಿಯೇ ನಿರತರಾಗುವೆ. ॥೩೪॥

ದಂಡಪಾಣೀಶ್ವರನೇ, ನಿನ್ನ ಚರಣಸ್ಮರಣೆಯಲ್ಲಿ ಅನುರಕ್ತರಾದ ಭಕ್ತರನ್ನು ಮುಕ್ತರಾಗಿರುವ ಶಕ್ತಿ ನಿನ್ನಲ್ಲಿದೆಯಲ್ಲವೆ! ಆದ್ದರಿಂದಲೇ ನಾವು ಜಾಗರೂಕರಾಗಿ ನಿನ್ನನ್ನೇ ಅರ್ಚಿಸುತ್ತಾ, ಜ್ಞಾನಿಗಳಾಗಿ ಶೋಕವಿರಹಿತರಾಗಿ ಸುಖದಿಂದ ವಾಸಿಸುತ್ತಿದ್ದೇವೆ. ಇಂತಹ ಮಹಾತ್ಮನಾದ ಶಿವಗಣನಾಯಕನಾದ ನಿನಗೆ ವಂದನೆ. ॥೩೫॥

ದಿವ್ಯವಾದ ಮಣಿಕರ್ಣಿಕಾಕ್ಷೇತ್ರವೆ; ಯಾರು ನಿನ್ನ ಸತ್ಕಥೆಯನ್ನು ಕೇಳಿ ಆನಂದಪಟ್ಟಿರುವರೋ ಅಂತಹವರು ಎಂದಿಗೂ ಯಮಲೋಕದ ದುಃಖವಾರ್ತೆಯನ್ನು ತಿಳಿಯಲಾರರು. ನಿನ್ನ ತೀರ್ಥದಲ್ಲಿ ಒಂದಾವರ್ತಿ ಸ್ನಾನಮಾಡಿದವರು ಮತ್ತೆ ಎಂದಿಗೂ ಜನ್ಮತಾಳದಂತಹ ಮುಕ್ತಿಕ್ಷೇತ್ರದಲ್ಲಿ ಸದಾನಂದಭರಿತರಾಗಿ ವಿಹರಿಸುವರು. ಇದು ನಿಜ. ॥೩೬॥

ಜ್ಞಾನವಾಪಿತೀರ್ಥವೇ, ಯಾವನು ನಿನ್ನಲ್ಲಿ ಮುಳುಗಿ ಸ್ನಾನಮಾಡದಿದ್ದರೂ ನಿನ್ನ ನಾಮಸ್ಮರಣೆಯಿಂದ ಜೀವನ ನಡೆಸಿದ್ದುದೇ ಆದರೆ ಅವನು ಸಮಸ್ತ

ಪಾಪೀಯಸೀಂ ನೈವ ಗತಿಂ ಪ್ರಯಾತಿ
ವಾತಾಪಿಭಕ್ಷಪ್ರತಿಮೋ ಭವೇದ್ಯಃ ॥೩೭॥

ಏವಂ ಸ್ತುತ್ವಾ ಚ ನತ್ವಾ ಚ ಪ್ರತಿದಿನಮಥ ತೇ ವಿಪ್ರವರ್ಯಾಸ್ಸಸೂತಾ
ದೇವಾಂತರ್ಗೃಹಮೇವ ತತ್ಸ್ವಶರಣಂ ಚಕ್ರುರ್ಮುದಾ ತತ್ರ ವೈ ।
ತನ್ಮುಕ್ತಿಪ್ರದಮಂಟಪೇಽತ್ರ ನಿಯತಂ ಸ್ಥಿತ್ವೈವ ಚಕ್ರುಃ ಕಥಾಃ
ಕಾಶೀವಾಸನಿವಾಸಹೃಷ್ಟಮನಸಃ ಶಿಷ್ಟಾಸ್ಸದಾಚಾರತಃ ॥೩೮॥

ಪ್ರವಿಶ್ಯ ಕೇಚಿದ್ವಿಶ್ವೇಶವರ್ಯ
ಸ್ತುತಿನತಿನಿಯುತಾಶ್ಚ ಭವಂತಿ ಮುಕ್ತಾಃ ।
ಸಿದ್ಧಾಸ್ತ್ವರೇಶನಿಷ್ಠಾಃ ಭವಭಯ
ಹರಣೋದ್ಯುಕ್ತಚಿತ್ತಾ ವಿರಾಗಾಃ ॥೩೯॥

---

ಪಾಪರಾಶಿಯಿಂದಲೂ ಮುಕ್ತನಾಗುವನು. ಮತ್ತು ಪಾಪಭೂಯಿಷ್ಠವಾದ ಮಾರ್ಗವನ್ನಂತೂ ಅವನು ಎಂದಿಗೂ ಮೆಟ್ಟುವುದಿಲ್ಲ. ಜ್ಞಾನವಾಪಿಯಲ್ಲಿ ಮಿಂದು ಪುಣ್ಯಶಾಲಿಯೆನಿಸಿದವನು, ವಾತಾಪಿ ಎಂಬ ರಾಕ್ಷಸನನ್ನು ಜೀರ್ಣಮಾಡಿದ ಅಗಸ್ತ್ಯ ಮಹಾಮುನಿಗೆ ಸರಿಸಮನಾಗುವನು. ॥೩೭॥

ಈರೀತಿ ಆ ಮುನಿಗಳೆಲ್ಲರೂ ಸೂತಮಹರ್ಷಿಯೊಡಗೂಡಿ, ಕಾಶಿಯಲ್ಲಿರುವ ಸಮಸ್ತ ಶಿವಗಣಗಳನ್ನೂ ಶಿವಲಿಂಗಗಳನ್ನೂ ದರ್ಶನಮಾಡುತ್ತಾ ವಿಧವಿಧವಾಗಿ ಸ್ತುತಿಸುತ್ತಾ, ವಿಶ್ವೇಶ್ವರನ ಅಂತರ್ಗೃಹವನ್ನು ಸೇರಿ ವಿಶ್ವೇಶ್ವರಮೂರ್ತಿಗೆ ಶರಣರಾಗುತ್ತಾ, ಮುಕ್ತಿಮಂಟಪದಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಮತ್ತು ಅಲ್ಲಿ ಎಲ್ಲರೂ ಒಟ್ಟುಗೂಡಿ ತಮಗೆ ಕಾಶೀವಾಸವು ಲಭಿಸಿದುದಕ್ಕಾಗಿ ಬಹಳ ಸಂತೋಷಪಡುತ್ತಾ, ಶಿವಧರ್ಮಾಧರ್ಮಗಳ ಚರ್ಚೆಯಿಂದಲೂ ಶಿವಕಥಾಶ್ರವಣದಿಂದಲೂ ಕಾಲಕಳೆಯುತ್ತಿದ್ದರು. ॥೩೮॥

ಅವರಲ್ಲಿ ಕೆಲವರು ವಿಶ್ವೇಶ್ವರಸ್ತೋತ್ರ, ವಿಶ್ವೇಶನಮಸ್ಕಾರ ಇವೇ ಮೊದಲಾದುವುಗಳಲ್ಲಿ ಆಸಕ್ತರಾಗಿದ್ದು ಮುಕ್ತಿಯನ್ನು ಪಡೆದರು. ಮತ್ತೆ ಕೆಲವರು ಚಿತ್ತಶುದ್ಧಿಯಿಂದ ವೈರಾಗ್ಯವನ್ನು ಪಡೆದು ಪರಶಿವನಲ್ಲಿಯೇ ದೃಢಭಕ್ತಿಯುಳ್ಳವರಾಗಿ ಸಂಸಾರದ ಯಾವ ಭಯವೂ ಇಲ್ಲದೆ ಸಿದ್ಧಪುರುಷರೆನಿಸಿದರು. ॥೩೯॥

ಕೇದಾರಾರ್ಚನತತ್ಪರಾ ಯತಿವರಾ ಶ್ರೀವ್ಯೋಮಕೇಶಾರ್ಚಕಾಃ
ಕೇಚಿತ್ತ್ರೇ ಶಿವಭಕ್ತಿಸಾರಸರಸಾಸ್ತತ್ರಾವಿಮುಕ್ತೇಶ್ವರಂ ।
ಓಂಕಾರೇಶ್ವರಮತ್ರ ತೇ ಸುನಿಯತಾಃ ಶ್ರೀ ಕೃತ್ತಿವಾಸೇಶ್ವರಂ ॥೪೦॥

ಶ್ರೀಮತ್ತ್ರಿಲೋಚನಪರಾ ನಿಯತಂ ಪ್ರದೋಷೇ
ಸಂನ್ಯಸ್ತದೋಷನಿಕರಾಃ ಪಶುಪಾಶನಿಷ್ಠಾಃ ।
ಮುಕ್ತ್ಯೈವಸಂತಿ ನಿಯತಾಫಲಪರ್ಣವಾತ
ನೀರಾದಿಪಾರಣಪರಾಶ್ಚ ತಥೋಷು ರೇವಂ ॥೪೧॥

ಕೇಚಿದ್ರುದ್ರಜಪಾದರಾಃ ಸಿತಮಹಾಭಸ್ಮತ್ರಿಪುಂಡ್ರಾದರಾಃ
ರುದ್ರಾಕ್ಷೋರು ಸದಾ ಮಹೇಶ್ವರಮಹಾಲಿಂಗಾನಿ ಗಂಗಾಂಭಸಾ ।
ಸಂಪೂಜ್ಯಾಮಲಬಿಲ್ವಪಲ್ಲವಸುಮ್ನೈಃ ಸಂಪೂಜ್ಯ ತಸ್ಥುಸ್ತದಾ
ಕೇಚಿತ್ಸ್ನಾಣುವದಾಸ್ಥಿತಾ ಯತಿವರಾಃ ಶ್ರೀ ತಾರಸಂಜಾಪಿನಃ ॥೪೨॥

---

ಕೆಲವರು ಕೇದಾರೇಶಕ್ಷೇತ್ರಕ್ಕೆ ಹೋಗಿ ಅಲ್ಲಿರುವ ಈಶ್ವರಲಿಂಗವನ್ನು ಅರ್ಚಿಸಿ ಧನ್ಯರಾದರು. ಹಲವರು ಅಲ್ಲಿಯೇ ಇದ್ದು ಶಿವಭಕ್ತಿಭರಿತರಾಗಿ, ಅವಿಮುಕ್ತೇಶ್ವರ, ಓಂಕಾರೇಶ್ವರ, ಕೃತ್ತಿವಾಸೇಶ್ವರ ಇವೇ ಮುಂತಾದ ಶಿವಲಿಂಗಗಳ ಆರಾಧನೆಯಿಂದ ಧನ್ಯರೆನಿಸಿ ಸುಲಭವಾಗಿ ಮುಕ್ತಿಮಾರ್ಗವನ್ನವಲಂಬಿಸಿದರು. ॥೪೦॥

ಮತ್ತೆ ಕೆಲವರು ಪ್ರದೋಷ ಕಾಲದಲ್ಲಿ ಪಶುಪತಿಯನ್ನೇ ಸೇವಿಸುತ್ತಾ, ಸಮಸ್ತ ದುರ್ಗುಣದುರಾಚಾರಗಳನ್ನು ದೂರಮಾಡಿ, ಶಿವಭಕ್ತಿನಿಷ್ಠರಾಗಿ, ಫಲ, ಪರ್ಣ, ಜಲ ಮುಂತಾದುವುಗಳನ್ನು ಭಕ್ಷಿಸುತ್ತಾ, ನಿಯಮಾಹಾರವುಳ್ಳವರಾಗಿ ಜೀವನವನ್ನು ಸಾಗಿಸುತ್ತಿದ್ದರು ॥೪೧॥

ಕೆಲವರು ಶುಭ್ರವಾದ ಭಸ್ಮತ್ರಿಪುಂಡ್ರಗಳನ್ನೂ ರುದ್ರಾಕ್ಷಮಾಲೆಗಳನ್ನೂ ಧರಿಸಿ, ರುದ್ರಾಧ್ಯಾಯವನ್ನು ಜಪಿಸುತ್ತಾ ಮಹೇಶ್ವರಲಿಂಗಗಳಿಗೆ ಗಂಗೋದಕದಿಂದ ಅಭಿಷೇಕಮಾಡಿ ಬಿಲ್ವಪತ್ರಾದಿಗಳಿಂದ ಅರ್ಚಿಸಿ, ಶಿವಾನುಗ್ರಹವನ್ನು ಸಂಪಾದಿಸುತ್ತಿದ್ದರು. ಮತ್ತು ಶಿವಪಂಚಾಕ್ಷರೀಮಂತ್ರವನ್ನು ಪ್ರಣವಸಹಿತವಾಗಿ ಜಪಿಸುತ್ತಾ ಧನ್ಯರಾಗಿ ಪಾಪಮುಕ್ತರಾದ ಸಂನ್ಯಾಸಿಗಳು ಸಾಕ್ಷಾಚ್ಛಿವಸ್ವರೂಪವನ್ನೇ ಪಡೆದು ಸಾಯುಜ್ಯವನ್ನು ಹೊಂದುತ್ತಿದ್ದರು. ॥೪೨॥

ಕಾಶ್ಯಾಂ ಪ್ರವಿಷ್ಟಾ ಯದಿ ತೇ ವಿಶಿಷ್ಟಾ
ಅನ್ಯತ್ರ ದೃಷ್ಟ್ಯಾಂತಗತಾಪಿ ತೇ ಪುನಃ ।
ನೋ ಯಾಮ್ಯಲೋಕಂ ಪ್ರವಿಶಂತಿ ಸೌಮ್ಯಾ
ಸ್ತೇ ಮುಕ್ತಿಮಂಟಪಮವಾಪ್ಯ ಮಖಾದಿಧರ್ಮೈಃ ॥೪೩॥

ಸಂಸಿದ್ಧಶುದ್ಧಮನಸಃ ಶಿಪಿವಿಷ್ಟನಿಷ್ಠಾ
ಸ್ತೇಪುಷ್ಟ ಜೇಪುರಪರೇ ಪ್ರಣವಂ ಚ ರುದ್ರಂ ।
ಪಂಚಾಕ್ಷರಂ ಪಾವನಮೇವ ತೇ ದ್ವಿಜಾಃ ॥೪೪॥

ಊಚುಸ್ತಥಾ ಪ್ರಾಂಜಲಯೋಥ ಸೂತಂ ।
ಕಾಶೀರಹಸ್ಯಾಗಮ ಧರ್ಮೇಣ ಶಿವಾರ್ಚನೋದ್ಯತಾಃ
ಉದ್ಯಂತಮಾದಿತ್ಯಮುಪಾಸಿತುಂ ಗತಾಃ ॥೪೫॥

ಇತಿ ಶ್ರೀಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಸಮಸ್ತಋಷಿಸಮೂಹ
ಕಾಶೀಕ್ಷೇತ್ರಪ್ರವೇಶಂ ತತ್ರ ತಪಶ್ಚರ್ಯಾವರ್ಣನಂ ನಾಮ
ಏಕೋನಚತ್ವಾರಿಂಶೋಽಧ್ಯಾಯಃ

---

ಕಾಶೀಕ್ಷೇತ್ರಕ್ಕೆ ಒಂದು ಬಾರಿ ಪ್ರವೇಶಿಸಿ, ಶಿವಧರ್ಮದಂತೆ ಅಲ್ಲಿ ಕೆಲವು ಕಾಲವಿದ್ದು ಮತ್ತೆ ಸ್ಥಳಾಂತರಕ್ಕೆ ಹೋಗಿ ಅಲ್ಲಿ ಮೃತರಾದವರಿಗೂ ಯಮಲೋಕ ಪ್ರಾಪ್ತಿಯಿರುವುದಿಲ್ಲ. ಮುಕ್ತಿಮಂಟಪದಲ್ಲಿ ಕುಳಿತು ಯಜ್ಞಾದಿಧರ್ಮಗಳನ್ನಾಚರಿಸಿದವರಿಗಂತೂ ಯಮಸದನದ ವಿಚಾರವೇ ಇರಲಾರದು. ಕಾಶೀಕ್ಷೇತ್ರದ ಮಹಿಮೆಯೇ ಇದಲ್ಲವೆ! ॥೪೩॥

ಆ ರೀತಿ ಕಾಶೀವಾಸದಿಂದ ಶುದ್ಧಮನಸ್ಕರಾದ ಆ ಋಷಿಗಳು ಸದಾ ಶಿವಪೂಜಾಧುರಂಧರರಾಗಿ ಪ್ರಣವಮಂತ್ರವನ್ನೂ ಶಿವಪಂಚಾಕ್ಷರಿಯನ್ನೂ ರುದ್ರಾಧ್ಯಾಯವನ್ನೂ ಜಪಿಸುತ್ತಾ, ಶಿವೋದ್ದೇಶಕವಾದ ತಪಶ್ಚರ್ಯೆಯಿಂದಲೇ ಕಾಲಕಳೆಯುತ್ತಿದ್ದರು. ಮತ್ತೆ ಆ ಮುನಿಗಳೆಲ್ಲರೂ ಸೂತಮಹರ್ಷಿಯೊಡಗೂಡಿ ಆಗಾಗ ಕಾಶೀಮಹಿಮೆ, ಶಿವರಹಸ್ಯ, ವೇದವೇದಾಂತಗಳ ಒಳತತ್ತ್ವ, ಕಾಶೀವಾಸದ ಫಲ ಇವೆಲ್ಲವನ್ನೂ ಪದೇ ಪದೇ ಚರ್ಚಿಸುತ್ತಾ ರಾತ್ರಿಯನ್ನೆಲ್ಲಾ ಸುಖದಿಂದ ಕಳೆದು

ಪ್ರಾತಃಕಾಲ ಸೂರ್ಯೋದಯಕ್ಕೆ ಮುಂಚೆಯೇ ಎದ್ದು ಪ್ರಾತಸ್ಸಂಧ್ಯಾದಿಕರ್ಮಗಳನ್ನು ನೆರವೇರಿಸಲು ಹೊರಟರು. ||೪೪-೪೫||

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ ಸಮಸ್ತ ಋಷಿಜನರು ಕಾಶೀಕ್ಷೇತ್ರವನ್ನು ಪ್ರವೇಶಿಸಿ ತಪಸ್ಸನ್ನಾಚರಿಸಿದ ಕಥಾವಿಷಯವನ್ನು ವಿವರಿಸುವ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದ್ವಾದಶಾಂಶೇ

## ಚತ್ವಾರಿಂಶೋಽಧ್ಯಾಯಃ

|| ಋಷಯ ಊಚುಃ ||

ಶ್ರೀ ವಿಶ್ವನಾಥ ವರಸನ್ನಿಧಿಗಾ ಸಮಗ್ರಾಃ
ಸರ್ವಾಘಪಾಪನಿಕರೈರಪಿ ವಿಪ್ರಮುಕ್ತಾಃ ।
ಮುಕ್ತಾ ವಿಮುಕ್ತಸದನೇ ಮದನಾಂತಕಾರ್ಚಾ
ಪೂಜಾವತಾದ್ಯ ಸುಹೃದಾ ವದ ವಾಸಧರ್ಮಾನ್ ||೧||

|| ಸೂತ ಉವಾಚ ||

ಕ್ಷೇತ್ರೇಷ್ವನ್ಯತ್ರ ಶಂಭೋರ್ಯಮಶಮನಿಯಮೈರ್ಭಸ್ಮರುದ್ರಾಕ್ಷಭಾಗ್ಭಿ
ರ್ಲಿಂಗಾರ್ಚಾಸುಸಮುದ್ಯತೈಃ ಶಿವಕಥಾಸಾರಾದರೈಃ ಶಾಂಭವೈಃ ।

---

## ನಲವತ್ತನೆಯ ಅಧ್ಯಾಯ

ಸಮಸ್ತಋಷಿಗಳೂ ಸೂತಮಹಾಮುನಿಯನ್ನು ಕುರಿತು "ಮಹರ್ಷಿವರ್ಯನೇ, ಕಾಶೀಕ್ಷೇತ್ರದಲ್ಲಿರುವ ವಿಶ್ವೇಶ್ವರನ ಸನ್ನಿಧಿಯಲ್ಲಿ ಸದಾ ನೆಲಸಿದವರು ಸಮಸ್ತಪಾಪ ರಾಶಿಯಿಂದಲೂ ಬಿಡುಗಡೆ ಹೊಂದುವರಷ್ಟೆ. ಹಾಗೆಯೇ ಅವರು ವಿಶ್ವೇಶ್ವರನ ಪೂಜಾಫಲದಿಂದ ಮುಕ್ತಿ ಸಾಮ್ರಾಜ್ಯವನ್ನೂ ಪಡೆಯುವರೆಂಬುದು ನಮಗೆ ತಿಳಿದಂತಾಯಿತು. ಮಹರ್ಷಿಯೇ, ಅಂತಹ ಪವಿತ್ರವಾದ ಕಾಶೀಕ್ಷೇತ್ರದಲ್ಲಿ ಯಾವ ರೀತಿ ವಾಸಮಾಡಬೇಕೆಂಬುದನ್ನು ದಯೆಯಿಂದ ತಿಳಿಸಬೇಕು" ಎಂದು ಪ್ರಾರ್ಥಿಸಲು ಆಗ ಸೂತಮಹಾಮುನಿಯು ಋಷಿಜನರನ್ನು ಕುರಿತು ಇಂತೆಂದನು ||೧||

ಇತರ ಶಿವಕ್ಷೇತ್ರಗಳಲ್ಲಿ ಬಹುಕಾಲ ನೆಲಸಿ, ಅಲ್ಲಿ ಯಮನಿಯಮಾದಿಗಳನ್ನು

ತತ್ರತ್ಯಕ್ಷೇತ್ರ ನಿವಾಸಸಂಭವಫಲೈಃ ಸಂಪ್ರಾಪ್ಯತೇ ಯಂ ದ್ವಿಜಾ
ಕಾಶೀನಾಶಿತಪಾಪಶೈಲನಿಕರಾ ವಿಶ್ವೇಶ್ವರಸ್ಯಾಜ್ಞಯಾ ॥೨॥

ಹೇ ವಿಶ್ವನಾಥ ಮಮ ನಾಥ ಸನಾಥಯಾದ್ಯ
ಹೇ ಮನ್ಮಥಾಂತಕ ವಿಭೋ ಪರಿಪಾಹಿ ಶಂಭೋ ।
ಆನಂದಕಾನನ ನಿವಾಸ ಪಿನಾಕಪಾಣೇ
ವಾಣೀಶವಂದ್ಯಮಹಿಮನ್ ಭಗವನ್ ನಮಸ್ತೇ ॥೩॥

ಅನ್ನಾಧಿಪ ತ್ರಿದಶವಂದ್ಯ ಶಿವಾದ್ಯವೇದ್ಯ
ವೇದಾಂತಗೇಯ ಗರಳಾಶನ ಕಾಲಕಾಲ ।
ಗಂಗಾಧರ ತ್ರಿಪುರಸೂದನ ಲೋಕನಾಥ
ವ್ಯಾಲೋರುಮಾಲ ಭಗವಂತ್ಸತತಂ ನಮಸ್ತೇ ॥೪॥

---

ಅನುಷ್ಠಾನಮಾಡುತ್ತಾ, ಪ್ರತಿನಿತ್ಯವೂ ಶಿವಲಿಂಗಾರ್ಚನೆ, ಭಸ್ಮರುದ್ರಾಕ್ಷಧಾರಣೆ, ಶಿವಕಥಾಶ್ರವಣ ಮುಂತಾದ ಶೈವಧರ್ಮಾಚರಣೆಯಿಂದ ವಿಶೇಷವಾದ ಸುಕೃತ ವನ್ನು ಗಳಿಸುವುದಾದರೆ ಆಗ ಪಾಪನಾಶಕವಾದ ಕಾಶೀವಾಸವು ದೊರೆಯುವುದು. ಹಾಗಿಲ್ಲದಿದ್ದರೆ ಕಾಶೀವಾಸವೇ ಲಭಿಸಲಾರರು. ಇದು ಶಿವಾಜ್ಞೆ ಎಂದು ಕಾಶೀವಾಸ ಮಹಿಮೆಯನ್ನು ಸೂತಮಹಾಮುನಿಯು ಋಷಿಜನರಿಗೆ ವಿವರಿಸತೊಡಗಿದರು. ॥೨॥

ವಿಶ್ವನಾಥನೇ, ಮನ್ಮಥನಾಶಕನೇ, ನನ್ನನ್ನು ರಕ್ಷಿಸು. ಆನಂದವನದಲ್ಲಿ ವಾಸಮಾಡುವ ಪಿನಾಕಪಾಣಿಯೇ, ಬ್ರಹ್ಮಾದಿಗಳಿಂದಲೂ ವಂದಿತನಾಗಿರುವವನೇ, ಶಂಭುವೇ, ಮಹಾದೇವನೇ, ನನ್ನನ್ನು ರಕ್ಷಿಸು. ನನಗೆ ದಿವ್ಯಮಾರ್ಗವನ್ನು ಕರುಣಿಸು. ॥೩॥

ಅನ್ನಾಧಿಪತಿಯೂ, ದೇವಾಧಿದೇವನೂ ಆದ ಮಹಾದೇವನೇ, ನೀನು ವೇದಾಂತಗಳಿಂದ ಸ್ತುತಿಸಲ್ಪಡುವವನು. ವಿಷವನ್ನೇ ಭಕ್ಷಿಸಿ, ಕಾಲಕಾಲನೆನಿಸಿರು ವವನು. ಗಂಗಾದೇವಿಯನ್ನು ಶಿರಸ್ಸಿನಲ್ಲಿ ಧರಿಸಿ ತ್ರಿಪುರರನ್ನು ನಾಶಗೊಳಿಸಿ, ಲೋಕಗಳಿಗೆ ಒಡೆಯನಾಗಿರುವ ನಾಗಾಭರಣನಾದ ಮಹಾದೇವನೇ, ನಿನಗೆ ನಮಸ್ಕಾರ. ॥೪॥

ಹೇ ಸಂಗಮೇಶ ರಮಣೇಶ್ವರ ಶೇಷಭೂಷ ।
ಪಾಹೀಶ ಮಾಮಕಧಿಯಾ ಪರಿಪಾಹಿ ದೀನಾನ್ ॥೫॥

ಕ್ಷಯದ್ವೀರ ಕಾಕೋದರಾನದ್ಧಹಾರ
ಸ್ಫುರತ್ಸ್ಫಾರ ಕರ್ಪೂರ ಗೌರ ಪ್ರಸೀದ ।
ವಿಭೋ ಧೀರವಿಶ್ವೇಶ ಭೂತೇಶ ಶಂಭೋ
ಮಹಾಘೋರವೈಶ್ವಾನರಾಕ್ಷ ಪ್ರಸೀದ ॥೬॥

ಶ್ರೀ ಸಂಗಮೇಶ ತವ ಲಿಂಗಸಮರ್ಚನೇನ
ಶಾಂಗಾಭಿಸಂಘತನವೋಽಪ್ಯಖಿಲಾಘಭಂಗಾಃ ।
ಗಂಗಾಂಭಸಾಪ್ಲುತಶರೀರ ಸಮಸ್ತ ಸಂಗಾಃ
ನಾಗಾ ಭವೇಮ ಹಿ ಪುನಸ್ತವ ಪಾದಸಂಗಾಃ ॥೭॥

ಶ್ರೀಮತ್ತ್ರಿಲೋಚನ ಸನಾತನ ದೇಹಹೀನ
ಪಂಚಾನನಾವನ ಹುತಾಶನನೇತ್ರ ಶಂಭೋ ॥೮॥

---

ನದೀ ಸಂಗಮದಲ್ಲಿ ನೆಲಸುವ ಪಾರ್ವತೀಪತಿಯೇ, ನಾಗಭೂಷಣನೇ, ದೀನನಾದ ನಮ್ಮನ್ನು ತನ್ನವರೆಂಬ ಮಮತೆಯಿಂದ ಪಾಲಿಸು. ದುಷ್ಟರಾದ ವೀರರನ್ನು ನಾಶಗೊಳಿಸಿ, ಸರ್ಪವನ್ನೇ ಆಭರಣವನ್ನಾಗಿ ಹೊಂದಿರುವ ಮಹಾದೇವನೇ, ನಿನ್ನ ದೇಹವು ಪ್ರಕಾಶಮಾನವಾದ ಕರ್ಪೂರರಾಶಿಯಂತೆ ಶುಭ್ರವಾಗಿರುವುದಲ್ಲವೆ? ಧೀರನೂ, ವಿಶ್ವೇಶ್ವರನೂ, ಭೂತೇಶ್ವರನೂ, ಪ್ರಲಯಾಗ್ನಿನೇತ್ರನೂ ಆಗಿರುವ ಶಂಕರನೇ, ನನ್ನಲ್ಲಿ ಪ್ರಸನ್ನನಾಗು. ನನಗೆ ಅನುಗ್ರಹಮಾಡು. ॥೫-೬॥

ಸಂಗಮೇಶ್ವರನೇ, ನಿನ್ನ ಅರ್ಚನೆಯಿಂದ ಸಮಸ್ತ ಶಾಂಭವರೂ ಪಾಪಮುಕ್ತರಾಗಿ ಸುಕೃತಿಗಳೆನಿಸುವರು. ಹಾಗೆಯೇ ಗಂಗಾನದಿಯಲ್ಲಿ ಮುಳುಗುವಿಕೆಯಿಂದಲೂ, ನಿನ್ನ ಅನುಗ್ರಹವಿಶೇಷದಿಂದಲೂ ನಿನ್ನ ಸನ್ನಿಧಿಯನ್ನು ಪಡೆದು, ಸದಾ ನಿನ್ನ ಪಾದಸೇವೆಯಲ್ಲಿಯೇ ಆಸಕ್ತರಾಗಿ ಪುನರ್ಜನ್ಮವನ್ನು ಪಡೆಯದೆ ಮುಕ್ತರಾಗುವೆವು. ॥೭॥

ತ್ರಿಲೋಚನನೆನಿಸಿ ಸನಾತನನಾಗಿರುವ ಮಹಾದೇವನೇ, ನಿನಗೆ ನಿಜವಾಗಿಯೂ ದೇಹವಿರುವುದಿಲ್ಲ. ನರಸಿಂಹನನ್ನು ರಕ್ಷಿಸಿ ಅಗ್ನಿನೇತ್ರನಾಗಿರುವ ಪರಶಿವನೇ, ನನ್ನನ್ನು ರಕ್ಷಿಸು. ಆನಂದವನದಲ್ಲಿ ವಾಸಮಾಡುತ್ತಾ ನಷ್ಟನಾಗುವ ವಿಪ್ರಸಮೂಹ

ವಾಸೀಕೃತಾನಂದವನ ಪ್ರಸೀದ
ಸೀದದ್ವಿಜಾತಿನಿವಹಂ ಸಹಮಾನ ಶಂಭೋ।
ಸಿದ್ಧೇಶ ವಿದ್ಯೇಶ ಕುರು ಪ್ರಸಿದ್ಧಂ
ಸಿದ್ಧಾಭಿನಂದ್ಯ ಮಹಿಮನ್ ಹರ ಶುದ್ಧದೇಹ ॥೯॥

ವಿಪ್ರಾನಥಪ್ರಾಪ್ತಸುಖಾನ್ ಕುರುಷ್ವ।
ಕ್ಷಿಪ್ರಂ ತ್ವಮದ್ಯೈವ ದಯಾವತಾ ದೃಶಾ ॥೧೦॥

ಕೇದಾರೇಶ್ವರ ಹಾರ ಭಾಸ್ವರ ಮಹಾಕಾಕೋದರಾಕಲ್ಪಕಾ
ನಲ್ಪಾಕಲ್ಪ ಭವತ್ಪಾಥೋಜ ಮಹಾಮುಂಡಾದಿಷಂಡಾಂಗಕ।
ನೇತ್ರಾಹಸ್ಕರ ತಸ್ಕರಾಂತಕ ಹರ ಸ್ವಾಮಿನ್ ಪ್ರಸೀದಾಶು ನಃ
ಸೋಮೋತ್ತಂಸಕಿರೀಟಕೋಟಿವಿಲಸದ್ದಿಗ್ವಾಸಹಾಸಾರುಣ ॥೧೧॥

ಭಾಸಾ ಭಾಸಿತಕೋಕ ಹೃತ್ಕಮಲಸಂವಾಸೈಕಕೃತ್ತಿಂ ವಸಾ
ಕಾಸಾ ತ್ವಾಂ ನಿಯಮೇನ ವೀಕ್ಷಣವತಾಂ ಮಾಯಾಭವೇತ್ಸಾಹಸಂ।
ಮಾಸೇನೈವ ಸಮಾಸಮೇಷ್ಯತಿ ವಿಭೋ ರಾಸಾಯ ದುಃಖಂ ಹಿ ನಃ ॥೧೨॥

---

ವನ್ನು ಉದ್ಧರಿಸುವ ಶಂಭುವೇ, ಸಿದ್ಧವಿದ್ಯಾಧರರಿಂದ ಸ್ತುತ್ಯನಾಗಿರುವ ಶುದ್ಧದೇಹಿಯೇ, ಮಹಾಮಹಿಮನೇ, ನನ್ನನ್ನು ರಕ್ಷಿಸು. ॥೮-೯॥

ಮಹಾದೇವನೇ, ದಯಾದೃಷ್ಟಿಯಿಂದ ನೀನು ನಿನ್ನನ್ನೇ ಶರಣುಹೊಂದುವ ವಿಪ್ರರನ್ನು ರಕ್ಷಿಸು. ಕೇದಾರೇಶ್ವರನೇ, ಪೂಜ್ಯ ಆದಿಶೇಷನ ದೇಹವನ್ನೇ ತನ್ನ ಹಾರವನ್ನಾಗಿ ಮಾಡಿಕೊಂಡಿರುವ ಮತ್ತು ಕಮಲಭವನಾದ ಬ್ರಹ್ಮನ ಶಿರಸ್ಸನ್ನೇ ಕಿತ್ತು ಕೈಯ್ಯಲ್ಲಿ ಹಿಡಿದಿರುವ ಪರಮೇಶ್ವರನೇ, ಸೂರ್ಯನನ್ನೇ ನೇತ್ರವನ್ನಾಗಿ ಮಾಡಿಕೊಂಡು, ಸಮಸ್ತವಿಧವಾದ ಕಳ್ಳರನ್ನೂ ನಾಶಗೊಳಿಸುವ ಪರಶಿವನೇ, ಚಂದ್ರಕಲೆಯನ್ನೇ ಕಿರೀಟದಲ್ಲಿಟ್ಟು ದಿಕ್ಕುಗಳಿಗೆಲ್ಲಾ ಕಿರೀಟಕಾಂತಿಯನ್ನು ಹರಡಿಸುವವನೇ, ನಮ್ಮನ್ನು ರಕ್ಷಿಸು. ॥೧೦-೧೧॥

ತಾವರೆಯ ಮೊಗ್ಗುಗಳನ್ನು ಅರಳಿಸುವ ಸೂರ್ಯತೇಜಸ್ಸಿನಿಂದ ಮೆರೆಯುವ ನಿನ್ನನ್ನು ಯಾರು ನಿಯಮದಿಂದ ದರ್ಶನಮಾಡುವರೋ, ಅವರು ನಿನ್ನ ಮಾಯೆಗೆ ವಶರಾಗದೆ, ಎಷ್ಟೇ ದುಃಖರಾಶಿಯಿದ್ದರೂ ಅದನ್ನೆಲ್ಲಾ ಒಂದು ತಿಂಗಳೊಳಗೆ ಕಳೆದುಕೊಂಡು ಸುಖಸಮುದ್ರದಲ್ಲಿ ಮುಳುಗುವರು. ॥೧೨॥

ಶಂಭೋ ವಿಭೋ ಪಶುಪತೀಶ್ವರ ಕಾಲಕಾಲ
ಹೇ ವ್ಯಾಲಮಾಲ ಗರಲಾಶನ ಹಸ್ತಶೂಲ ।
ದಕ್ಷೈಕಪಕ್ಷ ಸುರಪಕ್ಷ ಮಹೋಕ್ಷವಾಹ
ತ್ರ್ಯಕ್ಷಾಧುನಾ ಪರಮರಕ್ಷ ಕಟಾಕ್ಷ ಕೋಟ್ಯಾ ॥೧೩॥

ಸಂಸಾರಾಂಬುಧಿ ತಾರಕಾಂತಕ ಹರ ಸ್ವಾಮಿನ್ ಮೃಡಾನೀಪತೇ
ಮಾರಾಪಾರಶರಾಧಿಭಿನ್ನಹೃದಯಾನ್ ಸಂವೀಕ್ಷ್ಯ ವಿಶ್ವಾಧಿಕ ।
ಸ ತ್ವಂ ತಾರಕನಾಮಕೇಶ್ವರ ವಿಭೋ ಪಾಹಿ ಪ್ರಸನ್ನಾನ್ಮುನೀನ್
ಅಸ್ಮಾನುದ್ಧರಧೀರ ವೀರಭಗವನ್ ಸಂಹಾರಯಾಘಂ ಹಿ ನಃ ॥೧೪॥

ಹೇ ಮಧ್ಯಮೇಶ ಕರುಣಾಕರ ಶೂಲಪಾಣೇ
ಪಾಹೀಶ ಘಾಣಿತ ಸುಮೇಧ್ಯವಚೋಂತರಂಗ ।
ಅಧ್ಯೇಮ ವಿಧ್ಯೈವ ತವೋರುನಾಮ
ಯನ್ಮುಕ್ತಿಸಿದ್ಧ್ಯೈ ತವ ಸುಪ್ರಸಾದತಃ ॥೧೫॥

---

ಶಂಭುವೇ, ಮಹಾದೇವನೇ, ಪಶುಪತಿಯೇ, ಕಾಲಕಾಲನೇ, ನಾಗಭೂಷಣನೇ, ವಿಷಭಕ್ಷಕನೇ, ತ್ರಿಶೂಲಧಾರಿಯೇ, ದಕ್ಷಬ್ರಹ್ಮನನ್ನು ಅನುಸರಿಸಿದ್ದ ದೇವತೆಗಳ ತಪ್ಪನ್ನು ಕ್ಷಮಿಸಿದವನೇ, ವೃಷಭವಾಹನನೇ, ತ್ರಿಲೋಚನನೇ, ನಿನ್ನ ಕಟಾಕ್ಷದಿಂದ ನಮ್ಮನ್ನುದ್ಧರಿಸು. ಕಾಪಾಡು. ॥೧೩॥

ಸಂಸಾರವೆಂಬ ಸಮುದ್ರದಿಂದ ಉದ್ಧರಿಸುವ ಮಹಾದೇವನೇ, ಯಮನನ್ನು ನಿಗ್ರಹಿಸಿದ ಮಹೇಶ್ವರನೇ, ಪಾರ್ವತೀಪತಿಯೇ, ಕಾಮಬಾಣಗಳಿಂದ ಪೀಡಿತವಾದ ಮನಸ್ಸುಳ್ಳ ಈ ಮಾನವವರ್ಗವನ್ನು ಉದ್ಧರಿಸು. ತಾರಕೇಶ್ವರನೆಂದು ಹೇಳಿಸಿಕೊಳ್ಳುವ ಮಹೇಶ್ವರನೇ, ನಮ್ಮ ಜನ್ಮಾಂತರಾರ್ಜಿತವಾದ ಪಾಪವನ್ನು ನಾಶಗೊಳಿಸಿ ನಮ್ಮನ್ನು ಈ ಪಾಪಕೂಪದಿಂದ ಉದ್ಧರಿಸಿ ಸಲಹು. ॥೧೪॥

ಮಧ್ಯಮೇಶ್ವರನೇ, ಕರುಣಾಕರನೇ, ಶೂಲಪಾಣಿಯೇ, ಪವಿತ್ರವಾದ ಮಾತುಗಳಿಂದ ಸ್ತುತಿಸಲ್ಪಡುವವನೇ, ನಾವು ಯಾವಾಗಲೂ ನಿನ್ನ ನಾಮಗಳನ್ನೇ ಧ್ಯಾನಿಸುವೆವು. ಅನುಸಂಧಾನಗೊಳಿಸುವೆವು. ನಿನ್ನ ಅನುಗ್ರಹಬಲದಿಂದ ನಮಗೆ ಮುಕ್ತಿಯು ದೊರಕಲಿ. ॥೧೫॥

ಕದಾ ನ ಮುಕ್ತಂ ತ್ವನಿಮುಕ್ತಮೇತ
ದ್ಭುಕ್ತೇಷು ಮುಕ್ತಿಪ್ರಥನಾಯ ಯತ್ತ್ವಯಾ ।
ದೇವಾಪಿ ಮುಕ್ತೇಶ್ವರ ಮುಕ್ತಿಭಾಗ್ಯಂ
ವೈರಾಗ್ಯಮುಪ್ಯತ್ರ ಪದಸ್ಥ ನಸ್ಸದಾ ॥೧೬॥

ಹೇ ಸ್ವರ್ಣವರ್ಣಭಗವನ್ ಪರಿಪೂರ್ಣ ಶಂಭೋ
ಚಕ್ಷುಃಶ್ರವೋತ್ಕೀರ್ಣ ಸುಕರ್ಣ ಶಂಭೋ ।
ಹೇ ಅನ್ನಪೂರ್ಣಾ ಪತಯೇ ನಮಸ್ತೇ
ತತ್ರೇತ್ಥಮೇವ ನಿಯತಃ ಪ್ರವದಂತಿ ಶೈವಾಃ ॥೧೭॥

ಹೇ ವೀರೇಶ ಮಹೇಶ ಶಂಕರ ವಿಭೋ ಪಾಹೀಶ ವಿಶ್ವಾಧಿಕ
ಶಶ್ವನ್ನಶ್ವರ ವಿಶ್ವಪಾಲಕವಿಭೋ ಪಾಹಿ ಪ್ರಸೀದಾಧುನಾ ।
ಹೇ ವೃದ್ಧಕಾಲ ಕರುಣಾ ವರುಣಾಲಯಾದ್ಯ
ಪಾಹಿ ಪ್ರಸೀದ ಪರಮೇಶ್ವರ ಕಾಲಕಾಲ ॥೧೮॥

---

ಮಹಾದೇವನೇ, ಈ ಅವಿಮುಕ್ತಕ್ಷೇತ್ರವೆಂಬುದು ಭುಕ್ತಿಮುಕ್ತಿಪ್ರದವಾದುದರಿಂದಲೇ ನೀನು ಆದರಲ್ಲಿ ಬಿಡದೆ ನೆಲಸಿರುವೆ. ಇಲ್ಲಿ ದೇವತೆಗಳೂ ಸಹ ನಿನ್ನ ಸೇವೆಮಾಡಿ ಮುಕ್ತಿಸಂಪತ್ತನ್ನು ಪಡೆದಿರುವರು. ನಮಗೂ ಇಲ್ಲಿಯೇ ನೆಲಸುವಂತಹ ಒಂದು ಸ್ಥಿರಮನಸ್ಸನ್ನು ಕೊಡು. ॥೧೬॥

ಕಾಶೀವಾಸಿಗಳಾದ ಶೈವರೆಲ್ಲರೂ, ಪರಶಿವನನ್ನು 'ಹಿರಣ್ಯವರ್ಣದವನೂ ಸಚ್ಚಿದಾನಂದಪರಿಪೂರ್ಣನೂ, ನಾಗಭೂಷಣನೂ, ನಾಗಕುಂಡಲಧಾರಿಯೂ ಅನ್ನಪೂರ್ಣಾಪತಿಯೂ ಆದ ಪರಶಿವನೇ ನಿನಗೆ ನಮಸ್ಕಾರವು' ಎಂದು ಸದಾ ಶಿವಧ್ಯಾನದಲ್ಲಿಯೇ ಮಗ್ನರಾಗಿರುವರು. ॥೧೭॥

ವೀರೇಶ್ವರನೆಂದು ಖ್ಯಾತಿಪಡೆದಿರುವ ಮಹೇಶ್ವರನೇ, ನೀನು ವಿಶ್ವಾತೀತನು. ಈ ನಶ್ವರವಾದ ಲೋಕವನ್ನು ಕಾಪಾಡುವುದರಲ್ಲಿ ಸಮರ್ಥನೆನಿಸಿದವನು. ಯಮನಲ್ಲಿ ಕರುಣೆಯನ್ನು ಬೀರಿ ದಯಾಸಮುದ್ರನೆನಿಸಿದವನು. ಇಂತಹ ಪರಾತ್ಪರನಾದ ಕಾಲಕಾಲನಾದ ನೀನು ನನ್ನಲ್ಲಿ ದಯೆಯನ್ನಿಟ್ಟು ಅನುಗ್ರಹಿಸು. ॥೧೮॥

ಹೇ ಕೃತ್ತಿವಾಸ ಜನವಾಸ ಮಹೇಶ್ವರಾದ್ಯ
ಹೇ ಶ್ರೀನಿವಾಸನಯನಾರ್ಚಿತ ಪಾದಪದ್ಮ ।
ಹೇ ಸಂಗಮೇಶ ದುರಿತೌಘವಿಭಂಗಕೇಶ
ಶ್ರೀ ತಾರಕೇಶ ಶಶಿಮೌಲಿ ಕಲಾಲಲಾಮ ॥೧೯॥

ಹೇ ಸಿದ್ಧೇಶ ಪಾಹಿ ದಯಯಾ ವಿಧೀಶ ದೀನಂ
ಮಾಂ ಶ್ರೀಮತ್ತ್ರಿಲೋಚನ ಜನಾವನ ಪಾಹಿ ಶಂಭೋ ।
ಕುಂಭೋದ್ಭವಾದಿ ಮುನಿವಂದ್ಯ ಪದಾಬ್ಜಯುಗ್ಮ
ಪಾಹೀಶಶಂಭೋ ಕೃಪಯಾದ್ಯ ಮಾಂ ॥೨೦॥

ಹೇ ಮಧ್ಯಮೇಶ ಪರಿಪಾಹಿ ಸುಮೇಧ್ಯ ಶಂಭೋ
ಕೇದಾರನಾಯಕ ವಿಭೋ ಪರಿಪಾಹಿ ಶಂಭೋ ।
ಪುಣ್ಯಾವಿಮುಕ್ತೇಶ್ವರ ಭಕ್ತಸೌಖ್ಯಂ
ಶಕ್ತಿಂ ಪ್ರದೇಹಿ ತವ ಲಿಂಗಸಮರ್ಚನಾಯ ॥೨೧॥

ಪಾಹೀತಿ ಯೇ ಪ್ರಣತಿಪೂರ್ವಕಮಾದರೇಣ
ತತ್ರಾವಿಮುಕ್ತಿಸದನೇ ಪ್ರವದಂತಿ ಶೈವಾಃ ।

---

ಗಜಚರ್ಮಾಂಬರಧಾರಿಯೂ, ಶ್ರೀಪತಿಯ ನೇತ್ರದಿಂದ ಪೂಜಿಸಲ್ಪಟ್ಟ ಪಾದಪದ್ಮವುಳ್ಳವನೂ, ಸಂಗಮೇಶ್ವರನೂ ಆದ ಮಹಾದೇವನೇ, ನಿನಗೆ ವಂದನೆಗಳು. ನೀನು ದಯೆಯಿಂದ ನಮ್ಮನ್ನುದ್ಧರಿಸು. ॥೧೯॥

ಸಿದ್ಧೇಶ, ವಿಧೀಶ ಮುಂತಾದ ನಾಮಧೇಯಗಳಿಂದ ಪ್ರಸಿದ್ಧನಾಗಿರುವ ತ್ರಿಲೋಚನನೇ, ಜನರಕ್ಷಕನೇ, ಅಗಸ್ತ್ಯನೇ ಮೊದಲಾದ ಮಹರ್ಷಿಗಳಿಂದ ವಂದ್ಯವಾದ ಪಾದಪದ್ಮವುಳ್ಳವನೇ, ನೀನು ದಯೆಯಿಂದ ನಮ್ಮನ್ನು ಪಾಲಿಸು. ॥೨೦॥

ಪವಿತ್ರತಮನೆನಿಸಿದ ಮಧ್ಯಮೇಶ್ವರನೇ, ಕೇದಾರೇಶ್ವರನೇ, ಶಂಭುವೇ ನಮ್ಮನ್ನು ಪಾಲಿಸು. ಪುಣ್ಯಪ್ರದನಾದ ಅವಿಮುಕ್ತೇಶ್ವರನೇ, ಭಕ್ತರಾದ ನಮಗೆ ನಿನ್ನ ಶಿವಲಿಂಗವನ್ನು ಬಿಡದೆ ಪೂಜಿಸುವಂತಹ ಶಾಂತಿಯನ್ನೂ ಭಕ್ತಿಯನ್ನೂ ಅನುಗ್ರಹಿಸು. ॥೨೧॥

ಯಾರು ಕಾಶೀಕ್ಷೇತ್ರದಲ್ಲಿ ನೆಲಸಿ ನಿನಗೆ ನಮಸ್ಕಾರಮಾಡುತ್ತಾ ನಿನ್ನ ಕೃಪೆಯನ್ನು ಅಪೇಕ್ಷಿಸುವರೋ ಅವರೇ ನಿಜವಾದ ಮುಕ್ತಿಪ್ರದವಾದ ಜ್ಞಾನವಿಜ್ಞಾನ

ಜ್ಞಾನೇಶ ವಿಜ್ಞಾನದ ಕಾಲಕಾಲ
ಯಜ್ಞೇಶ ಪಾಹೀಶ ದಯಯಾ ಪರಿಪಾಹಿ ಶಂಭೋ ॥೨೨॥

ಓಂಕಾರೇಶ ಮಹೇಶ ಶಾಶ್ವತವಿಭೋ ।
ಪಾಹಿ ಪ್ರಸೀದಾಧುನಾ ॥೨೩॥

ಹೇ ಶಂಭೋ ಮಣಿಕರ್ಣಿಕೇಶ ಭಗವನ್ ರಾಮೇಶ ಲಕ್ಷ್ಮೀಶ್ವರ
ದಕ್ಷೇಶಾನ ದಯಾನಿಧಾನ ಭಗವನ್ ಶ್ರೀ ಭಾರಭೂತೇಶ್ವರ ।
ವ್ಯಾಸೇಶಾನ ಗದಾಶನೇಶ ಮಹತೇ ಚಂದ್ರೇಶ ಪಾಹ್ಯದ್ಯ ಮಾಂ
ಬ್ರಹ್ಮೇಶಾನ ಜಗದ್ವಿಧಾನ ಮಹಿಮನ್ ಪಾಹಿ ಪ್ರಸೀದಾಧುನಾ ॥೨೪॥

ಹೇ ಢುಂಡಿರಾಜ ಶರಣಾಗತ ವಿಘ್ನನಾಶ
ವೇತಂಡತುಂಡ ಭಗವನ್ ನವವಕ್ರತುಂಡ ।
ಪಾಹೀಶ ಪಾಹಿ ದಯಯಾ ಪರಿಪಾಹಿ ಶಂಭೋ ॥೨೫॥

ಹೇ ಮಂಗಲಾಗೌರಿ ಮಮಾದ್ಯ ಮಂಗಲಂ
ದಿಶಾಧುನಾ ಪಾಪಮಪಾಕುರುಷ್ವ ।
ಹೇ ಸಂಕಟಾನಿ ಮಮ ನಾಶಯ ಕಾಶಿವಿಘ್ನಂ
ನಿರ್ವಾಸಯಾದ್ಯ ಗಣನಾದಯಯಾಶು ದೇವಿ ॥೨೬॥

---

ಗಳಿಗೆ ಒಡೆಯನಾಗಿ ಕಾಲಕಾಲನೆನಿಸಿದ ಯಜ್ಞೇಶ್ವರನೇ, ಶಂಭುವೇ ನನ್ನನ್ನು ರಕ್ಷಿಸು. ॥೨೨॥

ಓಂಕಾರೇಶನೇ, ಮಹೇಶ್ವರನೇ ನಮ್ಮನ್ನು ರಕ್ಷಿಸು. ಮಣಿಕರ್ಣಿಕೇಶ್ವರನೇ, ರಾಮೇಶನೇ, ಲಕ್ಷ್ಮೀಶ್ವರನೇ, ದಯಾಸಮುದ್ರನೇ, ಭಾರಭೂತೇಶ್ವರನೇ, ವ್ಯಾಸೇಶ್ವರನೇ, ಗದಾಶನೇಶ್ವರನೇ, ಚಂದ್ರೇಶ್ವರನೇ, ಬ್ರಹ್ಮೇಶ್ವರನೇ, ಮಹಾಮಹಿಮನೇ, ನಮ್ಮನ್ನು ಅನುಗ್ರಹಿಸು. ನಮಗೆ ಮಂಗಳವನ್ನುಂಟುಮಾಡು. ॥೨೪॥

ಢುಂಡಿರಾಜಗಣಪತಿಯೇ, ಶರಣಾಗತ ರಕ್ಷಕನೇ, ವಿಘ್ನೇಶ್ವರನೇ, ಗಜಾನನೇಶ್ವರನೇ, ನಮ್ಮನ್ನು ದಯೆಯಿಂದ ಪರಿಪಾಲಿಸು. ॥೨೫॥

ಸರ್ವಮಂಗಳಾದೇವಿಯೇ, ನನಗೆ ಸನ್ಮಂಗಳವನ್ನು ಕರುಣಿಸು. ನಮ್ಮ ಪಾಪರಾಶಿಯನ್ನೆಲ್ಲಾ ನಿವಾರಣೆಮಾಡು. ಕಾಶೀವಾಸಕ್ಕೆ ಆಗಾಗ ಒದಗುವ ವಿಘ್ನ

ಹೇ ಸಂಕಟೇ ಭಗವತೀಶೆ ಹರಾಘಜಾಲಂ
ಪಾಹೀತಿ ತತ್ರ ನಿಯಮೇನ ವದಂತಿ ಶೈವಾಃ ।
ಅಕ್ಷಯ್ಯಭಕ್ಷ್ಯನಿಕರೈಃ ಪ್ರದದೇ ಹಿ ಭಿಕ್ಷಾಂ
ಕಾಶೀನಿವಾಸಜನುಷಾ ವರಪಾತ್ರಹಸ್ತೇ ॥೨೭॥

ದರ್ವೀಕರೇಣ ಸುರಸಾಯನಮುಕ್ತಿಸಾರ
ಮಾಹಾರಮೇವ ಹಿ ದದಸ್ವ ಕಿಮನ್ನಸಾರೈಃ ।
ವಂದೇ ವಿಶಾಲಾಕ್ಷಿ ಮಹೋಕ್ಷವಾಹ
ಪ್ರಿಯಾಂಗನೇ ಪಾಹಿ ದಯಾಕಟಾಕ್ಷೈಃ ॥೨೮॥

ಹೇ ಭೈರವಾಮರ ವರಪ್ರವರೋರುಘೋಷ
ಕಾಶೀನಿವಾಸ ಜನತಾಘಹರ ಪ್ರಸೀದ
ಮಾಷಾಪೂಪಭರೈರಪಾರವಿಭವೈಃ ।
ಪುಷ್ಪೋತ್ಕರೈಸ್ತ್ವಾಂ ಗುಡೈಃ
ಸಂಪೂಜ್ಯಾಪ್ಯಸಿತಾಷ್ಟಮೀಷು ನಿಯತಂ ನಿರ್ವಿಘ್ನತಃಪಾಹಿನಃ ॥೨೯॥

---

ಗಳನ್ನೆಲ್ಲಾ ಹೋಗಲಾಡಿಸು. ನಿನ್ನ ಕರುಣೆಯಿಂದ ನಮ್ಮ ತೊಂದರೆಗಳೆಲ್ಲಾ ದೂರವಾಗಲಿ. ॥೨೬॥

ಭಗವತಿಯೇ, ದೇವಿಯೇ, ನಮ್ಮ ಪಾಪರಾಶಿಯನ್ನು ನಿರ್ಮೂಲಗೊಳಿಸು. ನಾಶರಹಿತವಾದ ಭಕ್ಷ್ಯಭೋಜ್ಯಾದಿಗಳನ್ನು ಭಿಕ್ಷಾರೂಪದಿಂದ ಕರುಣಿಸುವ ಕಾಶೀ ನಿವಾಸಿನಿಯೇ, ದಿವ್ಯ ಅಕ್ಷಯಪಾತ್ರೆಯನ್ನು ಧರಿಸಿರುವ ಮಹಾದೇವಿಯೇ ಅನ್ನ ಪೂರ್ಣೆಯೇ, ನಮ್ಮನ್ನು ಪರಿಪಾಲಿಸು ಎಂದು ಶೈವರು ನಿತ್ಯವೂ ಧ್ಯಾನಿಸುವರು. ॥೨೭॥

ದೇವಿಯೇ, ನಿನ್ನ ಕೈಯ್ಯಲ್ಲಿರುವ ಸೌಟಿನಿಂದ ನಮಗೆ ಮುಕ್ತಿಸಾರವನ್ನು ಆಹಾರವನ್ನಾಗಿ ಕೊಡು. ಈ ಕ್ಷಣಿಕವಾದ ಅನ್ನಸಾರವು ನಮಗೆ ಬೇಡ. ವಿಶಾಲಾಕ್ಷಿಯೂ, ಮಹಾವೃಷಭಧ್ವಜನ ಪ್ರಿಯಪತ್ನಿಯೂ ಆದ ಅನ್ನಪೂರ್ಣಾದೇವಿಯೇ, ನಮ್ಮನ್ನು ರಕ್ಷಿಸು. ನಿನ್ನ ಕೃಪಾಕಟಾಕ್ಷದಿಂದ ಪರಿಪಾಲಿಸು. ॥೨೮॥

ಕಾಶೀಕ್ಷೇತ್ರದಲ್ಲಿರುವ ಭೈರವಸ್ವಾಮಿಯೇ, ಕಾಶೀಕ್ಷೇತ್ರದಲ್ಲಿರುವ ಸಮಸ್ತ ಜನರ ಪಾಪರಾಶಿಯನ್ನು ನಿವಾರಿಸುವ ಮಹೇಶ್ವರನೇ, ನಿನ್ನನ್ನು ಹೂವುಗಳ ರಾಶಿಯಿಂದಲೂ, ಬೆಲ್ಲದ ಭಕ್ಷ್ಯಗಳಿಂದಲೂ, ಕೃಷ್ಣಾಷ್ಟಮೀ ತಿಥಿಗಳಲ್ಲಿ ಭಕ್ತಿಯಿಂದ

ಹೇ ಷೋಡಶಪ್ರವರ ವಿಘ್ನಪ ಪಾದಪದ್ಮಂ
ಸಂಪೂಜ್ಯ ಮೋದಕನಿವೇದ್ಯಪುಲಡ್ಡುಕಾದ್ಯೈಃ ।
ಪುಷ್ಪೈಶ್ಚ ಸಿಂದೂರ ಸುಗಂಡಮುಂಡನ್ಯೈಃ
ಕಾಶ್ಯಾಂ ಚ ನಿರ್ವಿಘ್ನವಸಾ ಭವಂತಿ ॥೩೦॥

ಯೇ ಪಂಚಗಂಗಾತಟಸೀಮ್ನಿ ಕಾರ್ತಿಕೇ
ವೈಶಾಖಮಾಸೇ ಮಣಿಕರ್ಣಿಮಜ್ಜನಾಃ ।
ತೇ ಸಜ್ಜನಾಃ ಕಾಶಿನಿವಾಸಶೀಲಾ
ಆರೋಗ್ಯವೈರಾಗ್ಯಸುಭಾಗ್ಯಯುಕ್ತಾಃ ॥೩೧॥

ಯೇ ಚಂದ್ರಕೂಪಪರಿಮಜ್ಜನಧೂತಪಾಪಾ
ಸ್ತಾಪತ್ರಯೋಪಶಮನೇ ಋಣಮೋಚನೇ ಚ ।
ಯೇ ವೃದ್ಧಕಾಲೋದಕಕೂಪಪಾನಾ
ಪುಣ್ಯೇ ಪಿಶಾಚಹರವಾರಿ ಮಲಾಪಹಾರಿ ॥೩೨॥

---

ತಪ್ಪದೆ ತೃಪ್ತಿಪಡಿಸುವೆನು. ನಮಗೆ ಸಕಲ ವಿಘ್ನಗಳೂ ನಾಶವಾಗುವಂತೆ ಕರುಣಿಸು. ॥೨೯॥

'ಸುಮುಖಶ್ಚೈಕದಂತಶ್ಚ' ಎಂಬ ಹದಿನಾರು ನಾಮಾವಳಿಗಳಿಂದ ಪ್ರಸಿದ್ಧನಾಗಿರುವ ವಿಘ್ನೇಶ್ವರನೇ, ಪುಣ್ಯಾತ್ಮರೆನಿಸಿದವರು, ಕಾಶಿಯಲ್ಲಿ ನಿನ್ನ ಪಾದಪದ್ಮವನ್ನು ಭಕ್ತಿಯಿಂದ ಪೂಜಿಸಿ ಕಡುಬು, ಉಂಡೆ ಇವೇ ಮೊದಲಾದ ಭಕ್ಷ್ಯಭೋಜ್ಯಗಳನ್ನು ನಿನಗೆ ಅರ್ಪಿಸಿ, ಸುಗಂಧಮಯವಾದ ಪುಷ್ಪಗಳಿಂದಲೂ, ಸಿಂದೂರದಿಂದಲೂ ನಿನ್ನ ಮುಖವನ್ನು ಅಲಂಕರಿಸಿ ಕಾಶೀವಾಸಕ್ಕೆ ಬರುವ ವಿಘ್ನಗಳನ್ನು ಪರಿಹರಿಸಿಕೊಳ್ಳುತ್ತಾರೆ. ॥೩೦॥

ಕಾರ್ತಿಕಮಾಸದಲ್ಲಿ ಪಂಚಗಂಗಾತೀರದಲ್ಲಿಯೂ, ವೈಶಾಖಮಾಸದಲ್ಲಿ ಮಣಿಕರ್ಣಿಕಾ ತೀರದಲ್ಲಿಯೂ ಗಂಗೆಯಲ್ಲಿ ಸ್ನಾನಮಾಡುತ್ತಾ, ಕಾಶೀಕ್ಷೇತ್ರದಲ್ಲಿ ವಾಸಮಾಡುವ ಸತ್ಪುರುಷರು ಆರೋಗ್ಯ, ವೈರಾಗ್ಯ, ಐಶ್ವರ್ಯ ಇವುಗಳನ್ನು ಪಡೆದು ಬಹುಕಾಲ ಕಾಶಿಯಲ್ಲಿ ನೆಲಸುವರು. ॥೩೧॥

ಚಂದ್ರಕೂಪತೀರ್ಥದಲ್ಲಿ ಮುಳುಗುವ ಜನರಿಗೆ ತಾಪತ್ರಯಗಳೂ, ಋಣತ್ರಯಗಳೂ ನಿವೃತ್ತಿಯಾಗುವುವು. ಹಾಗೆಯೇ ವೃದ್ಧಕಾಲ ತೀರ್ಥವನ್ನು ಪಾನಮಾಡಿದವರಿಗೆ ಪಿಶಾಚಭಯವೂ, ಪಾಪಭಯವೂ ಎಂದಿಗೂ ಪೀಡಿಸಲಾರದು. ॥೩೨॥

ಯೇ ಸನ್ನಿಧೌ ಪಶುಪತೀಶ್ವರಕುಂಡನಾರಿ ।
ಪಾಪಪ್ರಚಂಡಹರಣಂ ಶರಣಂ ಪ್ರಪನ್ನಾಃ ॥೩೩॥

ಕಾಶ್ಯಾಂ ಜ್ಞಾನೋದಪಾನಾ ಯಮನಿಯಮಧನಾ ಪಾವನಾಃ ಸಾವಧಾನಾಃ
ವಿಪ್ರಾ ಯುಕ್ತಾ ನಿಯುಕ್ತಾ ಹರಭಜನರತಾ ಸ್ನಾನಪಾನೈರ್ವಿಶುದ್ಧಾಃ ।
ದ್ವಾದಶ್ಯಾಮಿಂದುವಾರೇ ಪ್ರಪಿಬತಿ ಜನತಾ ದುಃಖತಾಂತಾ ಕೃತಾಂತಾ
ದನ್ಯತ್ರಾಪಿ ವ್ಯಥಾ ನ ಯಾಂತಿ ದುರಿತಂ ಹೃಲ್ಲಿಂಗಮಿಷ್ಟಂ ಭವೇತ್ ॥೩೪॥

ಘಂಟಾಕರ್ಣಸರೋವರೋದಕಪರಾಃ ಸರ್ವಾಘಹಾರಾದರಾ
ಜೈಗೀಷವ್ಯ ಗುಹಾವಿಲೋಕನರತಾಸ್ತೇ ವೈ ಮಹಾಪಾಪಹಾಃ ।
ಪುಣ್ಯಾಂತರ್ಗೃಹ ಯಾತ್ರಿಣೋತ್ರ ನಿಯತಂ ಮುಕ್ತಾಶ್ಚ ಭಕ್ತಾ ಹಿ ತೇ॥೩೫॥

ಉಮಾಧವಾರ್ಚಾನಿರತಂ ಚ ಮಾಧವಂ
ಪ್ರಸಾದ್ಯ ವಾಸಾಯ ವಸಂತಿ ಸಾಧವಃ ।

---

ಪಶುಪತಿಕುಂಡದಲ್ಲಿ ಸ್ನಾನಮಾಡಿದವರಿಗೆ ಪ್ರಚಂಡವಾದ ಪಾಪರಾಶಿಯೆಲ್ಲಾ ನಿವಾರಣೆಯಾಗುವುದು. ಕಾಶಿಯಲ್ಲಿ ಯಮನಿಯಮ ನಿರತರಾಗಿ ಜ್ಞಾನೋದಕ ವಾಪಿಯಲ್ಲಿ ಸ್ನಾನಮಾಡಿ ಆ ತೀರ್ಥವನ್ನೇ ಪಾನಮಾಡಿದವರಿಗೆ, ಅದರಲ್ಲಿಯೂ, ದ್ವಾದಶೀ ಸೋಮವಾರ ಇಂತಹ ಶಿವಪ್ರೀತಿಕರವಾದ ತಿಥಿವಾರಗಳಲ್ಲಿ ಶಿವಾರಾಧನಾ ಪುರಸ್ಸರವಾಗಿ ತೀರ್ಥಪ್ರಾಶನಮಾಡಿದವರು ಎಂದಿಗೂ ಪಾಪಲೇಶವನ್ನು ಪಡೆಯಲಾರರು. ಅವರ ಹೃದಯವೇ ಒಂದು ಇಷ್ಟಲಿಂಗವಾಗುವುದು. ಅಂದರೆ ಅವರು ಶಿವಸ್ವರೂಪರೇ ಆಗುವರು. ॥೩೩-೩೪॥

ಘಂಟಾಕರ್ಣತೀರ್ಥ ಪ್ರಾಶನ ಮಾಡಿದವರಿಗೆ ಸರ್ವಪಾಪವೂ ನಾಶವಾಗುವುದು. ಹಾಗೆಯೇ ಜೈಗೀಷವ್ಯ ಮಹರ್ಷಿ, ಷಣ್ಮುಖಸ್ವಾಮಿ, ಇವರನ್ನು ದರ್ಶನ ಮಾಡುತ್ತಾ, ಪ್ರತಿನಿತ್ಯವೂ ಅಂತರ್ಗೃಹವೆನಿಸಿದ ವಿಶ್ವೇಶ್ವರಸ್ವಾಮಿಯ ದೇವಾಲಯವನ್ನೂ ಕಾಶೀಕ್ಷೇತ್ರವನ್ನೂ ನಿತ್ಯಪ್ರದಕ್ಷಿಣೆ ಮಾಡುವವರಿಗೆ ನಿಜವಾಗಿಯೂ ಮುಕ್ತಿ ಸಾಮ್ರಾಜ್ಯವೇ ದೊರೆಯುವುದು. ಇದರಲ್ಲಿ ಸಂಶಯವಿಲ್ಲ. ॥೩೫॥

ಕಾಶಿಯಲ್ಲಿ ಶಿವಾರ್ಚಾನಿರತರಾಗಿರುವ ಮಾಧವ ಸ್ವಾಮಿಯನ್ನೂ, ಕಾಶೀವಾಸದ ವಿಘ್ನನಿವಾರಣೆಗಾಗಿ ಸಾಧುಗಳು ಪೂಜಿಸುವರು. ಹಾಗೆಯೇ ಐದು ಕ್ರೋಶ

ಪಂಚಕ್ರೋಶ ಪರಾ ಭವಂತಿ ನಿಯತಾ ಪಕ್ಷೇಪಿ ಮಾಸೇಪಿ ವಾ
ಕಾಶ್ಯಾಂತರ್ಗೃಹ ತತ್ಪರಾಘನಿಲಯೋ ನಶ್ಯೇಚ್ಚ ತತ್ಪ್ರಕ್ರಿಸ್ನೈಃ ॥೩೬॥

ನಾಕ್ರಾಮೇತ ತನೂಷು ಪಾತಕಭರಂ ನೋ ವಾ ಗದಸ್ಸಂಕ್ರಮಃ
ನೈವಾಕ್ರೋಶಪರಾ ಭವಂತಿ ಗಣಪಾಸ್ತಸ್ಯಾತ್ರ ಸಂವಾಸಿನಃ ।
ಏವಂ ಯೇ ನಿವಸಂತಿ ಸಂತತಮುಮಾಕಾಂತಾರ್ಚಕಾಃ ಶಾಂಕರಾಃ
ಭಸ್ಮಾಕ್ಷಾಮಲ ಪುಂಡ್ರಫಾಲಜಟಿಲಾ ಕಾರ್ಪಣ್ಯಲೌಲ್ಯೋಜ್ಝಿತಾಃ ॥೩೭॥

ಪುಣ್ಯೇಷು ಪ್ರತಿಪರ್ವಶರ್ವಸುಮಹಾಯಾತ್ರಾರತಾಸ್ತೇಪರಂ
ಮುಕ್ತಾ ಏವ ಭವಂತಿ ತತ್ರ ಸದನೇ ವಿಶ್ವೇಶ್ವರಾಲೋಕಿನಃ ।
ಮಧ್ಯಾಷ್ಟಮೀ ಪ್ರಥಿತಸೋಮಸಮಾನಧಾಮ
ಸೀಮಾಲಲಾಮ ಪರಿಪೂಜನಕೃತ್ಸ ಧನ್ಯಃ ॥೩೮॥

ಯೇ ಸೋಮವಾಸರಪರಾ ನಿಶಿ ನಕ್ತಭುಕ್ತ
ಶಕ್ತಾಶ್ಚ ಭಕ್ತಿಪರಮಾತ್ರ ಭವಂತಿ ಮುಕ್ತಾಃ ।

---

ದೂರದ ಕಾಶೀಪ್ರದಕ್ಷಿಣೆಯನ್ನು ತಪ್ಪದೆ ಪಕ್ಷಕ್ಕೊಂದು ಸಾರಿಯಾಗಲಿ, ಮಾಸಕ್ಕೊಂದು ಸಾರಿಯಾಗಲಿ ನಡೆಸುವರು. ಇದರಿಂದ ಅವರ ಸಮಸ್ತ ಪಾಪರಾಶಿಯೂ ನಿವಾರಣೆಯಾಗುವುದಲ್ಲದೆ ಅವರಿಗೆ ಸತತ ಕಾಶೀವಾಸವು ಲಭಿಸುವುದು. ॥೩೬॥

ಕಾಶೀಕ್ಷೇತ್ರದಲ್ಲಿ ಸದಾ ಶಿವಲಿಂಗಾರ್ಚನೆ ಮಾಡುತ್ತಾ, ಭಸ್ಮರುದ್ರಾಕ್ಷಧಾರಿಗಳಾಗಿ, ಜಟಾವಲ್ಕಲಗಳಿಂದ ಕಾರ್ಪಣ್ಯ, ದುರಾಸೆ, ಚಾಂಚಲ್ಯ ಇವುಗಳನ್ನು ಬಿಟ್ಟು ಯಾರು ಕಾಲಕಳೆಯುವರೋ, ಅವರ ದೇಹದಲ್ಲಿ ಪಾಪಲೇಶವೂ ಹಿಂಸೆಕೊಡಲಾರದು. ಅವರಿಗೆ ಯಾವ ರೋಗವೂ ತೊಂದರೆ ಕೊಡಲಾರದು. ಅವರಿಗೆ ಕೋಪತಾಪಗಳು ಒದಗಲಾರವು. ಕೊನೆಗೆ ಅವರು ಶಿವಗಣದಲ್ಲಿ ಐಕ್ಯರಾಗಿ ಸದಾ ಶಿವಧ್ಯಾನದಲ್ಲಿಯೇ ಮುಳುಗಿಹೋಗುವರು. ॥೩೭॥

ಪುಣ್ಯಪ್ರದಗಳಾದ ಪರ್ವತಿಥಿಗಳಲ್ಲಿ ತಪ್ಪದೆ ಯಾರು ಕಾಶೀಯಾತ್ರೆ ಮಾಡಿ ವಿಶ್ವೇಶ್ವರಸ್ವಾಮಿಯ ದರ್ಶನಮಾಡುವರೋ ಅವರು ನಿಜವಾಗಿಯೂ ಮುಕ್ತರಾಗುವರು. ಕೃಷ್ಣಾಷ್ಟಮೀ ತಿಥಿ, ಸೋಮವಾರ, ಪ್ರದೋಷಕಾಲ ಇಂತಹ ಪುಣ್ಯಕರಗಳಾದ

ಯೇ ವಾ ಸ ದೋಷಾಃ ಪ್ರಥಿತೇ ಪ್ರದೋಷೇ
ಲಿಂಗೋತ್ತಮಾಂಗದೃಗನಂಗಪತಂಗಭಂಗಂ ॥೩೯॥

ಶ್ರೀಮತ್ತ್ರಿಲೋಚನ ಮಹೋತ್ತಮಲಿಂಗಮತ್ರ
ಸಂಪೂಜ್ಯ ಪಾತಕಭಯೈಃ ಪ್ರಭವಂತಿ ಮುಕ್ತಾಃ ।
ಭೂತಾಸು ಭೂತಪತಿಮೇವ ಯಜೇತ ಚಾತ್ರ
ಭಸ್ಮತ್ರಿಪುಂಡ್ರಾಕ್ಷಧರೋ ನರೋ ವೈ ॥೪೦॥

ಯೋ ವಾ ತ್ರಿನೇತ್ರಕೃಪಯಾ ವರ ಪಂಚವರ್ಣಂ
ರುದ್ರಾಧಿತಾರಜಪಕೃತ್ಸಭವೇದ್ವಿಮುಕ್ತಃ ।
ಯೋನ್ನಾನಿ ಶಾಂಭವವರೇ ಯತಿಷು ಪ್ರದದಾತಿ
ಪುಣ್ಯಲಿಂಗಪ್ರತಿಷ್ಠಾಂ ಚ ಮುದಾ ಕರೋತಿ ॥೪೧॥

ದಾನಾನಿ ಚೈವಾತ್ರ ದದಾತಿ ಪಾತ್ರೇ
ತಸ್ಯಾಘಸಂಘಮಖಿಲಂ ಕಿಲ ರೌತಿ ನಿತ್ಯಂ ।

---

ತಿಥಿವಾರಾದಿಗಳಲ್ಲಿ ಪರಶಿವನ ಲಿಂಗಪೂಜೆ, ಲಿಂಗಾಭಿಷೇಕ, ನಕ್ತವ್ರತಾಚರಣೆ, ಶಿವಲಿಂಗಕ್ಕೆ ಸಹಸ್ರನಾಮಾರ್ಚನೆ ಇವೇ ಮೊದಲಾದ ಶೈವಧರ್ಮಗಳಲ್ಲಿ ಯಾರು ನಿರತರಾಗಿ ಶಿವಾನುಗ್ರಹವನ್ನು ಪಡೆಯುವರೋ ಅವರು ಧನ್ಯರೆನಿಸುವರು. ಕ್ರಮಕ್ರಮವಾಗಿ ಅವರು ಶಿವಸಾರೂಪ್ಯವನ್ನೆ ಪಡೆಯುವರು. ಅದರಲ್ಲಿ ಸಂಶಯವಿಲ್ಲ. ॥೩೮-೩೯॥

ಚತುರ್ದಶೀತಿಥಿಯಲ್ಲಿ ಯಾರು ಕಾಶೀ ವಿಶ್ವೇಶ್ವರಲಿಂಗವನ್ನು ತಪ್ಪದೆ ಭಸ್ಮರುದ್ರಾಕ್ಷಧಾರಿಯಾಗಿ ಭಕ್ತಿಯಿಂದ ಪೂಜಿಸುವರೋ, ಅಂತಹ ಮಾನವನು ಸಮಸ್ತ ಪಾಪರಾಶಿಯಿಂದಲೂ ಬಿಡುಗಡೆ ಹೊಂದುವನು. ಇದರಲ್ಲಿ ಸಂಶಯವಿಲ್ಲ ॥೪೦॥

ಯಾರು ಕಾಶೀಕ್ಷೇತ್ರದಲ್ಲಿ ಪಂಚವರ್ಣಾತ್ಮಕವಾದ ಶಿವಪಂಚಾಕ್ಷರಿಯನ್ನು ತಪ್ಪದೆ ಪಠಿಸುವರೋ, ಯಾರು ಶಾಂಭವರಾದ ಯತಿಗಳಿಗೆ ಕಾಶಿಯಲ್ಲಿ ಅನ್ನದಾನ ಮಾಡುವರೋ, ಮತ್ತು ಅಲ್ಲಿ ಶಿವಲಿಂಗ ಪ್ರತಿಷ್ಠೆಯನ್ನು ನೆರವೇರಿಸುವರೊ ಅವರಿಗೆ ಶಂಕರಾನುಗ್ರಹವು ದೊರೆತು ಮುಕ್ತಿಯು ಲಭಿಸುವುದು. ॥೪೧॥

ಸತ್ಪಾತ್ರರಲ್ಲಿ ಯಾರು ದಾನಮಾಡುವರೋ ಅವರ ಪಾಪರಾಶಿಯೆಲ್ಲಾ ಆ ಕಾಶಿಯಲ್ಲಿ ನಿವೃತ್ತಿಯಾಗುವುದು. ಈ ರೀತಿ ಇರುವ ಕಾಶೀನಿವಾಸಿಗಳಿಗೆ ಪರಶಿವನು

ಏವಂ ನಿವಾಸರಸಿಕಸ್ಯ ಹರೋಂತಕಾಲೇ
ತಾರಂ ಷಡಂಚಾರ್ಣಮಹೋ ದದಾತಿ ॥೪೨॥

ತೇನೈವ ನಿಸ್ತೀರ್ಣಭವಾ ಭವಂತಿ
ಭಾವಾ ಪ್ರಭಾವತ ಇಮೇ ಶಶಿಖಂಡಮೌಲೇಃ ।
ಗಂಗಾಧರಾಃ ಶಶಿಧರಾ ವರಸರ್ಪಹಾರಾ
ಹಾರಾವಿಹಾರಪರಮಾರಜತಾದ್ರ್ಯಗಾರಾಃ ॥೪೩॥

ಯೇ ಯೇ ಕೈಲಾಸವಾಲಾ ನಿವಸನಹೃದಯಾ ಯಾಂತ್ಯಹೋ ತೇಽದ್ಯ ಕಾಶೀ ।
ವಾಸಾಯಾತ್ರ ಪವಿತ್ರಶೀಲನಿರತಾ ದುಃಖಾಘಸಂಘೋಜ್ಝಿತಾಃ ।
ವಿಶ್ವೇಶಸ್ಯ ಕೃಪಾಭರೈಕಸುದೃಶಾ ಮೂಢಾಸ್ತಥಾಪಂಡಿತಾ ।
ಸ್ತತ್ರ್ಯೈವಾಂತಿಮದೇಹಮಂಡನಮಿದಂ ತ್ವಿಂದೋಃ ವರಂ ಭೂಷಣಂ ॥೪೪॥

ತ್ರ್ಯಕ್ಷಪ್ರಸಾದೋನ್ನತ ಪಾಪಭಕ್ಷಂ
ಸಂವೀಕ್ಷ್ಯ ಯೇ ಸಾಕ್ಷಿವಿನಾಯಕಂ ಚ ।

---

ಅವರ ಮರಣಕಾಲದಲ್ಲಿ ಶಿವಪಂಚಾಕ್ಷರೀ ಮಂತ್ರವನ್ನು ತಾರಕಮಂತ್ರವನ್ನಾಗಿ ಉಪದೇಶಿಸುವನು. ಮತ್ತು ಶಾಶ್ವತಮುಕ್ತಿಯನ್ನು ಕರುಣಿಸುವನು. ॥೪೨॥

ಮರಣಕಾಲದಲ್ಲಿ ಪರಶಿವನಿಂದ ಶಿವಪಂಚಾಕ್ಷರೀ ಮಂತ್ರೋಪದೇಶವನ್ನು ಪಡೆದವರು ಮತ್ತೆ ಭೂಮಿಯಲ್ಲಿ ಜನ್ಮತಾಳಲಾರರು. ಅವರು ಗಂಗೆಯನ್ನೂ ಚಂದ್ರನನ್ನೂ ಶಿರದಲ್ಲಿ ಧರಿಸಿದವರಾಗಿ, ಸರ್ಪಹಾರದಿಂದಲೂ, ರಜತಾಚಲವೆನಿಸಿದ ಕೈಲಾಸದಲ್ಲಿ ವಿಹರಿಸುವುದರಿಂದಲೂ, ಶಿವಸನ್ನಿಧಿಯನ್ನೂ, ಶಿವಸಾರೂಪ್ಯವನ್ನು ಪಡೆದು ಸುಖಿಸುವರು. ॥೪೩॥

ಯಾರು ಕೈಲಾಸಗಿರಿಯಲ್ಲಿ ವಾಸಮಾಡಲು ಬಯಸುವರೊ, ಅವರು ಮೊದಲು ಕಾಶೀನಗರದಲ್ಲಿ ನೆಲಸಬೇಕು. ಅಲ್ಲಿ ಶಿವಧರ್ಮದಲ್ಲಿದ್ದು ಪಾಪರಾಶಿಯನ್ನು ಕಳೆದು ಕೊಳ್ಳಬೇಕು. ವಿಶ್ವೇಶ್ವರನನ್ನು ಭಕ್ತಿಯಿಂದಾರಾಧಿಸಿ ಶಿವಾನುಗ್ರಹವನ್ನು ಪಡೆಯಬೇಕು. ಹಾಗೆ ಯಾರು ಕಾಶೀವಾಸದಿಂದ ದೇಹತ್ಯಾಗಮಾಡಿ ಸುಕೃತಿಗಳೆನಿಸುವರೋ ಅವರು ಪಂಡಿತರಾಗಲಿ, ಪಾಮರರಾಗಲಿ, ತಪ್ಪದೆ ಶಿವಸನ್ನಿಧಿಯನ್ನು ಪಡೆಯುವರು. ಅವರಿಗೆ ಪ್ರಕಾಶಿಸುವ ಅರ್ಧಚಂದ್ರನೇ ಭೂಷಣನಾಗುವನು. ಇದರಲ್ಲಿ ಸಂಶಯವಿಲ್ಲ. ॥೪೪॥

ಈಶ್ವರ ಪ್ರಸಾದವನ್ನು ಪಡೆಯುವ ಶಿವಭಕ್ತರ ಪಾಪಗಳನ್ನು ಭಕ್ಷಿಸುತ್ತಿರುವ ಜನರ ಸಮಸ್ತ

ಯೇ ವಾತ್ರ ಕಾಶ್ಯಾಂ ನಿವಸಂತ್ಯಧರ್ಮತೋ
ನ ಶರ್ಮ ತೇಷಾಂ ಭವತೇ ಕದಾಪಿ ॥೪೫॥

ತೇ ಭೈರವಾಕ್ಷ್ನಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ।
ಯೇತ್ರಾವಿಮುಕ್ತೇ ಚ ಪರಾನ್ನಭೋಜನಾ
ದ್ದುರ್ಯಾಜನಾ ಯೇ ಗರಲಾಶನೈರ್ವೃತಾಃ ॥೪೬॥

ಹುತಾಶನಂ ದೀಪಯತಾ ಗೃಹೇಷು
ದುರ್ದ್ಯೂತದುರ್ದೇವನರೋದನೇ ರತಾಃ ।
ತೇ ಭೈರವಾಕ್ಷ್ನಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೪೭॥

ಯೇ ಕಾಶ್ಯಾಂ ವಸತಾಂ ಕ್ರುಧಾಹಿತಮುಹೋ ಕುರ್ವಂತಿ ನೈರಾಶ್ಯತೋ ।
ದಂಡ್ಯಾನ್ಯಾಚಕಪಾಚಕಾನ್ ಪ್ರತಿರುಷಾ ಸಂತೋ ಹಸಂತ್ಯನ್ವಹಂ ।

---

ಅಪರಾಧವನ್ನೂ ಈಕ್ಷಿಸುತ್ತಿರುವ ವಿನಾಯಕನನ್ನೂ ಲಕ್ಷ್ಯಮಾಡದೆ ಯಾರು ಕಾಶೀ ಕ್ಷೇತ್ರದಲ್ಲಿ ಅಧರ್ಮಮಾರ್ಗದಿಂದ ಜೀವಿಸುವರೋ, ಅವರಿಗೆ ಎಂದಿಗೂ ಸುಖವು ಲಭಿಸಲಾರದು. ನರಕವೇ ಅವರಿಗೆ ಗತಿಯೆನಿಸುವುದು. ॥೪೫॥

ಕಾಶೀಕ್ಷೇತ್ರದಲ್ಲಿ ವಾಸಮಾಡುತ್ತಾ, ಪರಾನ್ನವನ್ನೇ ಭುಂಜಿಸುತ್ತಾ, ದುಷ್ಟರಿಂದ ಯಾಗಾದಿಗಳನ್ನು ನಡೆಸುತ್ತಾ ಯಾರು ಜೀವಿಸುವರೋ, ಅಂತಹವರನ್ನೂ ಅಲ್ಲಿರುವ ಭೈರವನು ತನ್ನ ಕೋಪಾಗ್ನಿಯಿಂದ ಸುಟ್ಟು, ವಿಷವನ್ನು ಕುಡಿಸಿ, ಆದರಿಂದಲೂ ಅವರ ಪಾಪರಾಶಿಯನ್ನು ನಿರ್ಮೂಲಗೊಳಿಸಿ ಅವರನ್ನು ಮತ್ತೆ ಜನ್ಮವೆತ್ತದಂತೆ ಮಾಡುವನು. ॥೪೬॥

ಅಗ್ನ್ಯಾರಾಧನೆಯಿಂದ ಹೋಮಮಾಡುವ ಗೃಹಗಳಲ್ಲಿ ಯಾರು ಜೂಜು, ಪಂದ್ಯ, ರೋದನ ಇವೇ ಮೊದಲಾದ ಅಧರ್ಮ ಕಾರ್ಯಗಳನ್ನು ಎಸಗುವರೋ ಅವರನ್ನು ಕಾಲಭೈರವನು ತನ್ನ ಫಾಲಾಗ್ನಿಯಿಂದ ಸುಟ್ಟು ಪಾಪರಹಿತರನ್ನಾಗಿ ಮಾಡುವನು. ॥೪೭॥

ಕಾಶೀವಾಸಿಗಳಿಗೆ ನಿರಾಸೆಯನ್ನುಂಟುಮಾಡಿ ಅವರಿಗೆ ಅನ್ಯಾಯವನ್ನೆಸಗಿ, ಅಲ್ಲಿರುವ ಯಾಚಕರನ್ನೂ, ಪಾಚಕರನ್ನೂ ರೇಗಿಸಿ, ಅವರನ್ನು ನೋಡಿ ನಗುತ್ತಾ,

ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೪೮॥

ಯೇತ್ರಾನಂದವನೇ ದ್ವಿಜಾತಿಹನನೈಃ ಪಾನೈಶ್ಚ ಸನ್ನಿಂದನೈಃ
ಶೈವಾಸೂಯಾದಿ ಮಾಯಾಮಯವರಪರಧನಹೃದ್ಯೈರತಾಶ್ಚಾನ್ಯದಾರೇ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೪೯॥

ಮಹಾಶ್ಮಶಾನೇತ್ರ ವಸಂತ್ಯಸಾಧವೋ
ಯೇ ಮಾಧವಾರ್ಚಾವಿಮುಖಾ ಹಿ ದುರ್ಮುಖಾಃ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೫೦॥

ಮೂಕಾಂಧಪಂಗು ಬಧಿರಾನಧರೀಕರೋತಿ
ದೀನಾನ್ನಿಹೀನಾಂಶ್ಚ ಧನೈರ್ದ್ವಿಷಂತಿ ಯೇ ।

---

ದಂಡ್ಯರಿಗೆ ಪ್ರೋತ್ಸಾಹವೀಯುತ್ತಾ ಯಾರು ಜೀವಿಸುವರೋ ಅವರನ್ನು ಭೈರವನು ತನ್ನ ಕ್ರೋಧಾಗ್ನಿಯಿಂದ ಸುಟ್ಟು ಅವರನ್ನು ಪಾಪರಹಿತರನ್ನಾಗಿ ಮಾಡುವನು.॥೪೮॥

ಕಾಶಿಯಲ್ಲಿರುವ ಆನಂದವನದಲ್ಲಿ ಯಾರು ಬ್ರಾಹ್ಮಣಹನನ, ಅಪೇಯಪಾನ, ಸತ್ಪುರುಷರ ದೂಷಣ, ಶೈವರಲ್ಲಿ ಅಸೂಯೆ, ಪರಧನಾಪಹರಣ, ಪರಸ್ತ್ರೀಸಂಭೋಗ, ಮುಂತಾದ ದುಷ್ಕರ್ಮಗಳನ್ನಾಚರಿಸುವರೋ ಅಂತಹ ಪಾಪಿಗಳ ಪಾಪವನ್ನೆಲ್ಲಾ ಭೈರವನು ತನ್ನ ಕ್ರೋಧಾಗ್ನಿಯಿಂದ ಧ್ವಂಸಮಾಡುವನು. ॥೪೯॥

ಕಾಶಿಯ ಮಹಾಶ್ಮಶಾನದಲ್ಲಿ ವಾಸಮಾಡುತ್ತಾ ದುರ್ಮಾರ್ಗಿಗಳಾಗಿ ಸದಾ ಅಕಾರ್ಯವನ್ನೇ ನಡೆಸುತ್ತಾ, ಮಾಧವಾರ್ಚನೆಯಲ್ಲಿ ಉದಾಸೀನರಾಗಿ ಯಾರು ಕಾಲ ಕಳೆಯುವರೋ ಅಂತಹವರನ್ನು ಭೈರವನು ತನ್ನ ಕ್ರೋಧಾಗ್ನಿಯಿಂದ ಸುಟ್ಟು ಭಸ್ಮ ಮಾಡುವನು. ॥೫೦॥

ಕಾಶೀವಾಸಿಗಳು ಅಲ್ಲಿರುವ ಮೂಗರು, ಕುರುಡರು, ಕುಂಟರು, ದರಿದ್ರರು ಇವರನ್ನು ಅಲಕ್ಷಿಸಿ ಅವರಿಗೆ ಎಂದೂ ಹಿಂಸೆಕೊಡಬಾರದು. ಹಾಗೆ ಒಂದು ವೇಳೆ

ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೫೧॥

ಯೇ ವಿಶ್ವನಾಥನತಿದರ್ಶನತೋ ವಿಹೀನಾ
ವೀರೇಶ ಯಜ್ಞೇಶವಿನಿಂದನೇ ರತಾಃ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೫೨॥

ಯೇ ಚಾನ್ನಪೂರ್ಣಾನತಿದರ್ಶನೋಜ್ಝಿತಾ
ಮಾತಾಪಿತೄಣಾಂ ಗುರೂಣಾಂ ವಿನಿಂದಕಾಃ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೫೩॥

ಯೇತ್ರಾಂತರ್ಗೃಹವಿಭ್ರಮೋ ಭ್ರಮುಜುಷಃ ಶಂಭೋರ್ಧನಾಹಾರಿಣಃ
ಸ್ತೇನಾ ಯೇ ನಿರಪತ್ರಪಾಪಣತುಲಾವಿಕ್ರೇತರೋ(?) ಯೇ ಗವಾಂ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೫೪॥

---

ಅವರಿಗೆ ಹಿಂಸೆಕೊಡುವುದಾದರೆ, ಅವರನ್ನು ಭೈರವನು ತನ್ನ ಕ್ರೋಧಾಗ್ನಿಯಿಂದ ಸುಟ್ಟು ಧ್ವಂಸಮಾಡಿಬಿಡುವನು. ॥೫೧॥

ಕಾಶಿಯಲ್ಲಿದ್ದು, ವಿಶ್ವನಾಥನದರ್ಶನ ವಂದನಾದಿಗಳನ್ನು ಮಾಡದೆ, ವೀರೇಶ್ವರ ಯಜ್ಞೇಶ್ವರ ಲಿಂಗಗಳನ್ನು ದೂಷಣಮಾಡುವವರನ್ನು ಭೈರವನು ತನ್ನ ಕೋಪಾಗ್ನಿಯಿಂದ ಸುಟ್ಟು ಶುದ್ಧರನ್ನಾಗಿಮಾಡುವನು. ॥೫೨॥

ಅನ್ನಪೂರ್ಣಾದೇವಿಗೆ ವಂದನೆಮಾಡದೆ ತಾಯಿತಂದೆಗಳನ್ನೂ ಗುರುಹಿರಿಯರನ್ನೂ ಮರ್ಯಾದಿಸದ ಯಾರು ಕಾಶೀಕ್ಷೇತ್ರದಲ್ಲಿ ವಾಸಿಸುವರೋ ಅಂತಹವರನ್ನು ಭೈರವನು ಕ್ರೂರವಾಗಿ ಶಿಕ್ಷಿಸುವನು. ॥೫೩॥

ಕಾಶೀವಿಶ್ವೇಶ್ವರ ದೇವಾಲಯದಲ್ಲಿ ಓಡಾಡುತ್ತಾ ಶಿವಧನವನ್ನು ಅಪಹರಿಸಿ, ಕಳ್ಳರಂತೆ ವರ್ತಿಸಿ, ಅಲ್ಲಿನ ಪೂಜಾಸಾಮಗ್ರಿಗಳನ್ನು ಅನ್ಯಾಯರೀತಿಯಿಂದ

ಮಾಂಸಾನಾಂ ಪಶುಹಿಂಸಿನಾಂ ರಸಭವಂ ತೈಲಂ ತಿಲಂ ತಂಡುಲಾನ್
ಗೋಧೂಮಾನಥಮಾಷ್ಟ ಯೇ ಪದಕೃತೋ ಭಕ್ಷ್ಯಾಸ್ತಥಾ ಶರ್ಕರಾಃ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೫೫॥

ಯತ್ರೈವ ಗಂಗಾಂಭಸಿ ನೈವ ಮಜ್ಜನಾ
ತೇ ದುರ್ಜನಾ ಯೇ ಮಣಿಕರ್ಣಿನಿಂದಕಾಃ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೫೬॥

ಯತ್ರೈವ ಸಾಕ್ಷಾದ್ವರಧುಂಡಿನೋ ಜನಾಃ
ಪಾದಾರ್ಚನಾ ಹೀನನರಾಶ್ಚ ಪಾಮರಾಃ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೫೭॥

---

ಮಾರುತ್ತಾ ಗೋವ್ಯಾಪಾರದಲ್ಲಿ ನಿರತರಾದರೆ ಅಂತಹವರನ್ನು ಕ್ರೂರದೃಷ್ಟಿಯಿಂದ ಸುಟ್ಟು ಭೈರವನು ಬಹಳವಾಗಿ ಶಿಕ್ಷಿಸುವನು. ॥೫೪॥

ಕಾಶಿಯಲ್ಲಿ ಪಶುಗಳನ್ನು ಕೊಂದು ಅದರ ಮಾಂಸವನ್ನು ಅಥವಾ ರಸವಸ್ತುಗಳು, ಅಂದರೆ ಎಣ್ಣೆ ಬೆಣ್ಣೆ ಮುಂತಾದುವುಗಳು, ಹಾಗೆಯೇ, ಅಕ್ಕಿ, ಎಳ್ಳು, ಗೋಧಿ, ಮತ್ತು ಅವುಗಳ ಭಕ್ಷಗಳು, ಸಕ್ಕರೆ ಮುಂತಾದ ವಸ್ತುಗಳಲ್ಲಿ ಭಕ್ಷ್ಯಗಳನ್ನು ಮಾಡಿ ಅನ್ಯಾಯರೀತಿಯಿಂದ ಮಾರುವವರನ್ನು ಭೈರವನು ಕ್ರೂರರೀತಿಯಿಂಥ ದಂಡಿಸುವನು. ॥೫೫॥

ಕಾಶಿಯುಲ್ಲಿಯೇ ಇದ್ದು ಗಂಗಾನದಿಯುಲ್ಲಿ ಸ್ನಾನಮಾಡದೆ ಮಣಿಕರ್ಣಿಕೆಯೇ ಮೊದಲಾದ ಪವಿತ್ರತೀರಪ್ರದೇಶಗಳನ್ನು ನಿಂದಿಸುವವರನ್ನು ಕಾಲಭೈರವನು ತನ್ನ ಕ್ರೂರದೃಷ್ಟಿಯಿಂದ ಸುಟ್ಟು ಪಾಪರಹಿತರನ್ನಾಗಿ ಮಾಡುವನು. ॥೫೬॥

ಕಾಶಿಯಲ್ಲಿ ವಾಸಮಾಡುತ್ತಾ ಧುಂಡಿರಾಜಗಣಪತಿಯನ್ನು ಪಾದಾರ್ಚನೆಯಿಂದ ತೃಪ್ತಿಗೊಳಿಸದೆ ಅಜ್ಞಾನಿಗಳಾಗಿರುವವರು ಭೈರವನ ಕೋಪಾಗ್ನಿಗೆ ಸಿಕ್ಕಿ ವಿಶೇಷವಾಗಿ ಭಂಗಪಡುವರು. ॥೫೭॥

ಯೇऽತ್ರೈವ ಸತ್ರೈರ್ನ ಯಜತ್ಪದಾನಿ
ನೋ ಯೇ ಮಾನಿನೋ ಭಿಕ್ಷುಷು ಭೈಕ್ಷ್ಯವರ್ಜಿತಾಃ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೫೮॥

ಯೇऽತ್ರೈವ ನಿತ್ಯಂ ನಿವಸಂತ್ಯದಂಡಕಾಃ
ಪಾನೀಯಶಾಲಾ ಪ್ರತಿರೋಧಕಾ ಗವಾಂ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೫೯॥

ಯೋ ದಂಡಪಾಣಿಪದಪಂಕಜದರ್ಶನೇನ
ಹೀನಾಶ್ಚ ಕೇದಾರಸಮರ್ಚನೋಜ್ಝಿತಾಃ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೬೦॥

---

ಕಾಶೀವಾಸಿಗಳು ಯಥಾಶಕ್ತಿ ಅಲ್ಲಿ ಅನೇಕ ಯಾಗಾದಿಗಳನ್ನು ನಡೆಸಿ ಪರಶಿವನನ್ನು ತೃಪ್ತಿಪಡಿಸುವುದಲ್ಲದೆ, ಅತಿಥಿಗಳಿಗೆ ಸತ್ಕಾರ ಭಿಕ್ಷಾದಿಗಳನ್ನು ಅರ್ಪಿಸಿ ಅವರನ್ನು ತೃಪ್ತಿಗೊಳಿಸಬೇಕು. ಹಾಗೆ ಮಾಡದಿದ್ದರೆ ಅವರು ಭೈರವನ ಕೋಪಾಗ್ನಿಗೆ ಆಹುತಿಯಾಗುವರು. ॥೫೮॥

ಕಾಶಿಯಲ್ಲಿರುವ ಅರವಟ್ಟಿಗೆ ಮತ್ತು ಅವುಗಳಿಗೆ ಹಾಲು, ಮೊಸರನ್ನು ಒದಗಿಸುವ ಗೋವುಗಳು ಇವರಿಗೆ ಹಿಂಸೆಕೊಡುತ್ತಾ ಅಥವಾ ಅವುಗಳಿಗೆ ಹೆಚ್ಚು ತೊಂದರೆಕೊಡುವವರಿಗೆ ಪ್ರೋತ್ಸಾಹಿಸುತ್ತಾ ಜೀವನನಡೆಸುವವರಿಗೆ ಭೈರವನು ಉಗ್ರರೀತಿಯಿಂದ ಶಿಕ್ಷೆವಿಧಿಸುವನು ॥೫೯॥

ಕಾಶಿಯಲ್ಲಿದ್ದೂ ಯಾವನು ದಂಡಪಾಣೀಶ್ವರನನ್ನೂ, ಕೇದಾರೇಶ್ವರನನ್ನೂ ಅರ್ಚಿಸದೆ, ಅವರನ್ನು ದರ್ಶನಮಾಡದೆ ಕಾಲಕಳೆಯುತ್ತಿರುವನೋ ಅಂತಹವನನ್ನು ಕಾಲಭೈರವನು ಅತ್ಯಂತಕ್ರೂರವಾಗಿ ದಂಡಿಸುವನು. ॥೬೦॥

ಯತ್ರ ಪ್ರದೋಷೇಷು ಸದೋಷಮಾನಸಾ
ತ್ರಿಲೋಚನಾರ್ಚ್ಯಾ ಭಯವರ್ಜಿತಾ ಯೇ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೭೦॥

ಯೇ ಕೇಚಿದಜ್ಞಾ ದಿವಸೇನ್ನಭೋಜನಾಃ
ಕಾಲಾಷ್ಟಮೀಭೈರವಪೂಜನೋಜ್ಝಿತಾಃ ।
ತೇ ಭೈರವಾಕ್ಷಾನಲರೂಕ್ಷವೀಕ್ಷಣೈ
ರ್ನಿರ್ದಗ್ಧಪಾಪಾಃ ಪ್ರಭವಂತಿ ಸದ್ಯಃ ॥೭೨॥

ಚತುರ್ದಶ್ಯಾಂ ಕಾಶ್ಯಾಂ ಶಿವನತಿವಿಮುಖಾ ನಕ್ತಶಕ್ತಾನ್ನಭಕ್ತಾ
ನ ಮುಕ್ತಾಃ ಪ್ರಭವಂತಿ ಪಾಪಜನುಷೋ ಯೇ ಮಾನುಷಾಃ ಪಾಪಿನಃ ।
ಯೇ ಪರ್ವಣ್ಯತಿದೋಷಭಾಷಣಪರಾ ಯೇ ಶರ್ವಯಾತ್ರೋಜ್ಝಿತಾ
ಸ್ತೇ ಸರ್ವೇಪಿ ಮಹೋರುಭೈರವಮಹಾದಂಷ್ಟ್ರಾಗ್ರತಶ್ಚರ್ವಿತಾಃ ॥೭೩॥

---

ಪ್ರದೋಷಕಾಲದಲ್ಲಿ ಪರಶಿವನ ಪಾದಪೂಜೆಮಾಡದೆ, ಪರಶಿವನಲ್ಲಿ ಯಾವ ವಿಧವಾದ ಭಯಭಕ್ತಿಯನ್ನೂ ತೋರಿಸದೆ ಯಾರು ಕಾಲಕಳೆಯುವರೋ ಅವರನ್ನು ಭೈರವನು ತನ್ನ ಕೋಪಾಗ್ನಿಯಿಂದ ಸುಟ್ಟು ಅವರನ್ನು ಪಾಪರಹಿತರನ್ನಾಗಿ ಮಾಡುವನು. ॥೭೧॥

ಕೃಷ್ಣಾಷ್ಟಮೀ ತಿಥಿಯಲ್ಲಿ ಯಾರು ಕಾಲಭೈರವನನ್ನು ಪೂಜಿಸದೆ, ನಕ್ತವ್ರತ ಮಾಡದೆ ದಿವಾ ಭುಂಜಿಸುವರೋ ಅಂತಹವರನ್ನು ಕಾಲಭೈರವನು ತನ್ನ ಕ್ರೂರ ದೃಷ್ಟಿಯಿಂದ ಸುಟ್ಟು ಅವರ ಸಕಲ ಪಾಪರಾಶಿಯನ್ನು ತೊಳೆದುಬಿಡುವನು. ॥೭೨॥

ಚತುರ್ದಶೀತಿಥಿಯಲ್ಲಿ ಕಾಶೀವಿಶ್ವೇಶ್ವರನನ್ನು ಪೂಜಿಸದೆ, ಶಕ್ತಿಯಿದ್ದರೂ ನಕ್ತವ್ರತಮಾಡದೆ, ಕಾಲಕಳೆಯುವವರು ಮಹಾಪಾಪಿಗಳೆನಿಸುವರು. ಹಾಗೆಯೇ ಪರ್ವತಿಥಿಗಳಲ್ಲಿಯೂ ಶಿವಾರಾಧನೆಮಾಡದೆ, ಶಿವಯಾತ್ರೆಗೈಯ್ಯದೆ ಶಿವದ್ರೋಹ ವೆಸಗಿದವರು ಭೈರವನ ದವಡೆಯ ಹಲ್ಲಿಗೆ ಸಿಕ್ಕಿ ಅವನಿಗೆ ಆಹಾರದಂತಾಗುವರು. ॥೭೩॥

ಯೇ ತ್ರಿಪುಂಡ್ರರಹಿತಾ ವಿಧೃತೋರ್ಧ್ವಪುಂಡ್ರಾಃ
ರುದ್ರಾಕ್ಷಹಾರವಲಯೋಜ್ಝಿತಸರ್ವಗಾತ್ರಾಃ ।
ಅನ್ಯಾರ್ಥರುದ್ರಜಪಿನೋಽಪಿ ಚ ಯಂತ್ರಮಂತ್ರ
ವಿಭ್ರಾಂತಮತಃ ಸ್ಥಿತಿಪರಾಪರಭೈರವಾಶಾಃ ॥೬೪॥

ಪಂಚಾಕ್ಷರಂ ವೇದಗಣಂ ಚ ಶೂದ್ರೇ
ದದಾತಿ ಯೋಽತ್ರೈವ ತಿಲಸ್ಯ ಹೋಮಕೃತ್ ।
ಅರ್ಥಾರ್ಥಮೇವಾತ್ರ ಚ ಸಂತ್ಯಸಾಧವೋ
ಉಮಾಧವೋತ್ತುಂಗಸುಲಿಂಗಭಂಗಕಾಃ ॥೬೫॥

ಪ್ರಾಸಾದಪ್ರಕರಂ ಮಹೇಶಸದನಂ ವಿಪ್ರಸ್ಯ ವಾ ಭಂಗಕೃತ್
ಯೋಽತ್ರೈವಾರ್ತಕೃತಘ್ನತಸ್ಕರವರೋ ಹಾರೇಷು ನಿಂದಾಕರಃ ।
ಪುಣ್ಯಘ್ನೋ ಗರದಃ ಸುರಾಸವರತಃ ಸ್ತ್ರೀಬಾಲಹಾ ಗೋವಧಃ
ಸರ್ವೇ ತೇ ಪ್ರಭವಂತಿ ಭೈರವಕಶಾಘಾತೋಗ್ರಮಾತ್ರಾ ನರಾಃ ॥೬೬॥

---

ಯಾರು ಕಾಶೀವಾಸದಲ್ಲಿದ್ದೂ ಭಸ್ಮತ್ರಿಪುಂಡ್ರವನ್ನು ಧರಿಸದೆ ಊರ್ಧ್ವ ತ್ರಿಪುಂಡ್ರಧಾರಿಗಳಾಗಿ, ರುದ್ರಾಕ್ಷಮಾಲಾದಿಗಳನ್ನು ವಿಸರ್ಜಿಸಿ ಮತ್ತೊಬ್ಬರಿಗಾಗಿ ರುದ್ರಮಂತ್ರವನ್ನು ಜಪಿಸುತ್ತಾ, ಯಂತ್ರ ಮಂತ್ರ ಮುಂತಾದ ನೆಪದಿಂದ ಮತ್ತೊಬ್ಬರನ್ನು ಮೋಸಗೊಳಿಸುವುದರಲ್ಲಿ ಕಾಲಕಳೆಯುವರೋ ಅಂತಹವರು ನಿಜವಾಗಿಯೂ ಭೈರವನಿಗೆ ಆಹಾರವಾಗಿ ಪರಿಣಮಿಸುವರು. ॥೬೪॥

ಕಾಶೀಕ್ಷೇತ್ರದಲ್ಲಿ ಶಿವಪಂಚಾಕ್ಷರೀಮಂತ್ರವನ್ನೂ, ವೇದಪಾರಾಯಣವನ್ನೂ, ತಿಲಹೋಮವನ್ನೂ ಶೂದ್ರಾರ್ಥವಾಗಿ ಯಾರು ವಿಕ್ರಯಿಸುವರೋ, ಅಂದರೆ ದ್ರವ್ಯಾಸೆಯಿಂದ ಮಾಡುವರೋ, ಮತ್ತು ಶಿವಲಿಂಗಗಳನ್ನು ಯಾರು ಒಡೆದುಹಾಕುವರೋ, ಅಥವಾ ಶಿವಾಲಯ, ದ್ವಿಜಾಲಯ ಇವುಗಳನ್ನು ನಾಶಗೊಳಿಸುವರೋ, ಕಳ್ಳತನ, ಕೃತಘ್ನತೆ ಇವುಗಳಲ್ಲಿ ಮುಂದುವರಿದು, ಶಾಂಭವರನ್ನು ಯಾರು ದ್ವೇಷಿಸುವರೋ, ಪುಣ್ಯಾತ್ಮರನ್ನೂ, ಸ್ತ್ರೀಬಾಲರನ್ನೂ, ಗೋವುಗಳನ್ನೂ ಯಾರು ವಧಿಸುವರೋ, ಸುರಾಪಾನದಲ್ಲಿ ಯಾರು ಆಸಕ್ತರಾಗುವರೋ, ಅವರೆಲ್ಲರೂ ಭೈರವನ

ಯೇ ವಾ ಪಾಂಥನಿರೋಧಕಾಶ್ರಮ ಮಹಾಧರ್ಮೈರ್ವಿಹೀನಾನರಾ
ಘೋರಾಸ್ತೇ ಯಮಕಿಂಕರೈರಪಿ ಸದಾ ಸಂತಾಡಿತಾತ್ರ ಕ್ಷಣೈಃ ।
ಕಃ ಸೋಢಾ ಪರಭೈರವಾರ್ಭಟಿ ಕಶಾಘಾತಾದಿಭೀತಾಃ ಪರಂ
ನಿಷ್ಪಾಪಾತ್ರ ಭವಂತಿ ರುದ್ರಗಣಪಾ ನಾನಿಷ್ಕೃತಾಂಗಾಃ ಪರೇ ॥೬೭॥

ಕಿಂ ವಾತ್ರೈವ ರಹಸ್ಯಮಂತರಗೃಹೇ ಶಂಭೋರ್ನ ಮೂತ್ರಂ ಶಕೃತ್
ನಿಷ್ಠೀವೇನ್ನ ಚ ಕಿಲ್ಬಿಷೀನ್ ನಭವೇತ್ಪಾರುಷ್ಯವಾರುಷ್ಯಹೃತ್ ।
ನ ವ್ಯಾಹರೇತ್ಪರರುಜಂ ಪರಕಾಶಿಸಂಸ್ಥೋ
ಭೂತೇಷು ಚಾದ್ರೋಹಕೃದೇವ ಸಂವಸೇತ್ಪರಂ ॥೬೮॥

ಕುರ್ಯಾಚ್ಚೇನ್ಮಲಮೂತ್ರಮಂತರಗೃಹೇ ಲಿಂಗೋತ್ತಮಾಂಗೇಪತೇತ್
ತತ್ಕೇನಾಪಿ ನಿವಾರ್ಯ ಪಾತಕವರಂ ನಾನಿಷ್ಕೃತಂ ತದ್ಭವೇತ್ ।

---

ಚಾವಟಿಯ ಏಟಿಗೆ ಸಿಕ್ಕಿ ನರಳುವವರೇ ಆಗುತ್ತಾರೆ. ಇದರಲ್ಲಿ ಸಂಶಯವಿಲ್ಲ. ॥೬೫-೬೬॥

ಕಾಶೀಯಾತ್ರಿಕರನ್ನು ಹಿಂಸಿಸುವವರು, ವರ್ಣಾಶ್ರಮಧರ್ಮ ಬಾಹಿರರು, ಇಂತಹ ಪಾಪಿಗಳನ್ನು ಯಮಭಟರೂ ಸಹ ದಯೆಯಿಲ್ಲದೆ ತಮ್ಮ ಪಾಶಗಳಿಂದ ಹೊಡೆಯುವರು. ಅದಿರಲಿ, ಅಂತಹವರನ್ನು ಭೈರವನು ಆರ್ಭಟಿಸಿ ತನ್ನ ಚಾವಟಿಗಳಿಂದ ಹೊಡೆಯುವುದನ್ನು ನೋಡಲು ಯಾರಿಂದ ತಾನೆ ಸಾಧ್ಯವಾದೀತು? ಆ ಭೈರವನ ಕಶಾಘಾತದಿಂದ ನೊಂದು ಅದರಿಂದಲೇ ಅವರು ಪಾಪರಹಿತರಾಗಿ ಕೊನೆಗೆ ಶಿವಗಣಪದವಿಯನ್ನು ಹೊಂದುವರು. ಉಳಿದವರು ಅಂದರೆ ಕಾಶೀವಾಸಿಗಳಲ್ಲದವರಿಗೆ ಅಂತಹ ಸ್ಥಾನ ಸಹ ದೊರಕಲಾರದು. ॥೬೭॥

ಇನ್ನು ರಹಸ್ಯವೇನು? ಕಾಶಿಯಲ್ಲಿರುವ ಶಿವಾಲಯಗಳಲ್ಲಿ ಮೂತ್ರ, ಪುರೀಷ, ಎಂಜಲು, ಇವುಗಳನ್ನು ಹಾಕಬಾರದು. ಪಾಪಿಷ್ಠರ ವ್ಯವಹಾರಗಳನ್ನಾಗಲಿ, ಪೌರುಷವಾಣಿಯನ್ನಾಗಲಿ ಆಡಬಾರದು. ಮತ್ತೊಬ್ಬರಿಗೆ ಕೇಡುಂಟುಮಾಡುವ ಯಾವ ಮಾತನ್ನೂ ಅಲ್ಲಿ ಹೇಳಬಾರದು. ದ್ರೋಹಕರವಾದ ಯಾವ ವಚನಕ್ಕೂ ಮನಗೊಡಬಾರದು. ಈರೀತಿ ಎಚ್ಚರಿಕೆಯಿಂದ ಕಾಶಿಯಲ್ಲಿ, ವಾಸಮಾಡಬೇಕು. ॥೬೮॥

ಒಂದುವೇಳೆ ಶಿವಾಲಯದಲ್ಲಿ ಮಲಮೂತ್ರಾದಿಕಶ್ಮಲಗಳು ಬಿದ್ದು ಅದು ಶಿವಲಿಂಗದ ಮೇಲೆ ಸಿಡಿಯುವುದಾದರೆ, ಅಂತಹ ಮಲಮೂತ್ರಾದಿಗಳನ್ನು

ತಸ್ಮಾದಥಾಂತರ್ಗೃಹಮಧ್ಯಸಂಸ್ಥೋ
ನ ವೈ ಗೃಹಸ್ಥೋ ನ ಯತಿರ್ವಸೇನ್ನರಃ ॥೬೯॥

॥ ಸೂತ ಉವಾಚ ॥

ಈಶಾಖ್ಯಯಾ ಶಶಿಧರೇಣ ಮುದಾ ಶಿವಾಯೈ
ಪ್ರೋಕ್ತೋಂಶ ಏಷ ಮಥಿತಾಗ್ನಿ ಶಿವೋಪಮಾನಃ ।
ಸಾಪೌಘತೂಲದಹನೋ ಗಹನಾರ್ಥಪದ್ಯಃ
ಸದ್ಯೋ ವಿಮುಕ್ತಿಕೃದಂಶಕೃತಿಜನ್ಮದಾಯೀ ॥೭೦॥

ತೇ ಸತ್ರಿಣಸ್ತ್ರಿನಯನಾರ್ಚನಜಾತಪುಣ್ಯೈಃ
ಸತ್ಪುತ್ರಿಣೋತ್ರವಶಿನೋ ನಿಯತಾಗ್ನಿಹೋತ್ರಿಣಃ ।
ವನ್ಯಾಶ್ಚ ಸಂನ್ಯಾಸಿವರಾಕ್ಷಸೂತ್ರಾ
ತೇ ವರ್ಣಿನೋಪಿ ವಿವಿಶುಃ ಶಿವಮೇವ ಚಾಂತೇ ॥೭೧॥

---

ಬಿಟ್ಟವರು ಎಂತಹ ಪುಣ್ಯಕಾರ್ಯಗಳನ್ನೆಸಗಿದರೂ ಅವರ ಆ ಪಾಪರಾಶಿಯು ಎಂದೂ ನಿವಾರಣೆಯಾಗಲಾರದು. ಆದ್ದರಿಂದ ಕಾಶಿಯಲ್ಲಿ ಗೃಹಸ್ಥನೇ ಆಗಲಿ, ಸಂನ್ಯಾಸಿಯೇ ಆಗಲಿ ಎಂದೂ ಶಿವಾಲಯ ಮಧ್ಯದಲ್ಲಿ ವಾಸಮಾಡಲು ಯತ್ನಿಸಬಾರದು. ಅದು ಮಹಾಪಾಪಕಾರ್ಯವೆನಿಸುವುದು. ॥೬೯॥

ಹೀಗೆ ಕಾಶೀವಾಸಿಗಳ ಧರ್ಮವನ್ನು ವಿವರಿಸಿ ಹೇಳುತ್ತಾ ಸೂತಮಹರ್ಷಿಗಳು ಇತರ ವಾಜಶ್ರವಸಾದಿ ಋಷಿಗಳನ್ನು ಕುರಿತು ಶ್ರೀಶಿವರಹಸ್ಯ ಗ್ರಂಥದ ಪ್ರಾಶಸ್ತ್ಯವನ್ನು ಈ ರೀತಿ ನಿರೂಪಿಸಿದರು. ಈ ಈಶಾಖ್ಯವಾದ ಶಿವರಹಸ್ಯದ ಹನ್ನೆರಡನೆಯ ಅಂಶವು ಬಹುಪವಿತ್ರವಾದುದು. ಈ ಶಿವರಹಸ್ಯದ ಕಥಾಭಾಗವೆಲ್ಲಾ ಸಾಕ್ಷಾತ್ಪರಶಿವನಿಂದಲೇ ಪಾರ್ವತಿಗೆ ಹೇಳಲ್ಪಟ್ಟಿದೆ. ಈ ಭಾಗವು ಅಗ್ನಿಯಿಂದ ಶುದ್ಧಿಗೊಳಿಸಲ್ಪಟ್ಟ ಸುವರ್ಣದಂತೆ ಪರಿಶುದ್ಧವಾಗಿದೆ. ಅಲ್ಲದೆ ಮಹಾಪಾಪರಾಶಿಯನ್ನೆಲ್ಲಾ ಅಗ್ನಿಯು ಹತ್ತಿಯನ್ನು ದಹಿಸಿ ಭಸ್ಮಮಾಡುವಂತೆ ನಾಶಗೊಳಿಸುವುದು. ಅರ್ಥಗರ್ಭಿತವಾದ ಪದ್ಯರಾಶಿಯಿಂದ ತುಂಬಿದ ಈ ಅಂಶವನ್ನು ಯಾರು ಭಕ್ತಿಯಿಂದ ಓದುವರೋ ಅವರಿಗೆ ಸದ್ಯೋಮುಕ್ತಿಯು ಲಭಿಸುವುದಲ್ಲಿ ಸಂಶಯವಿಲ್ಲ. ॥೭೦॥

ಶಿವಾರ್ಚನೆಮಾಡಿ ಪುಣ್ಯಸಂಪಾದಿಸಿದವರೇ ಯಜ್ಞಾದಿಗಳನ್ನು ನಡೆಸುವುದರಲ್ಲಿ ಸಮರ್ಥರಾಗುವರು. ಅಲ್ಲದೆ ಅವರೇ ಸತ್ಪುತ್ರಶಾಲಿಗಳೆನಿಸುವರು. ಅಗ್ನಿಹೋ

ಶಿವಃ ಪಾದಾರವಿಂದಶ್ರಿಯಾ ಶ್ರಿಯಂ
ಶ್ರೀಪತಿಂ ವಿಧಿಂ ಉತ್ಪಾದಯತಿ ಯೋ ।
ನಿತ್ಯಂ ತಸ್ಮೈ ನಿತ್ಯಂ ನಮೋನಮಃ ॥೭೨॥

ಅಸ್ತು ಸ್ವಸ್ತಿ ಸಮಸ್ತವಸ್ತುಷು ಚಿರಂ ಭಾಗ್ಯಂ ಭವೇನ್ನಿಸ್ತುಲಂ
ನಿಸ್ತೋಕಂ ಪ್ರಭವಂತು ಕರ್ಮಗತಯೋ ವ್ಯತ್ಯಸ್ತಮಾರ್ಗಾ ನ ವೈ ।
ಆಸ್ತಾಂ ವಾಸ್ತವಮೇವ ಲೋಕಮಖಿಲಂ ನಾಸ್ತಂ ಹಿ ಸಂಗಚ್ಛತಾ
ನ್ಯಸ್ತಂ ಹಸ್ತಗತಂ ಭವೇತ ನಿಖಿಲಂ ಕಸ್ತಂ ಭಜೇ ನೋ ಹರಂ ॥೭೩॥

ಹಸ್ತನ್ಯಸ್ತಸಮಸ್ತಲೋಕಸುಮಹದ್ವಿಧ್ವಸ್ತಮಸ್ತಂವಿಧೇ
ರ್ವಸ್ತುಂ ನ್ಯಸ್ತಮಖಕ್ರಿಯಾದಿವಿಧುರಂ ಸಂನ್ಯಸ್ತದಕ್ಷಾಸುಹೃತ್ ।
ವಸ್ತಂ ತತ್ಕರಶಸ್ತಮಚ್ಯುತಶರಂ ಕಸ್ತೋತುಮೀಹೇನ್ನರೋ
ವಿತ್ರಸ್ತಾಖಿಲಲೋಕಜಾಲಮಗಜಾಕಾಂತಂ ಭಜೇ ಕೇವಲಂ ॥೭೪॥

---

ತ್ರಿಗಳೂ, ವಾನಪ್ರಸ್ಥಾಶ್ರಮಿಗಳೂ, ಸಂನ್ಯಾಸಿಗಳೂ, ಬ್ರಹ್ಮಚಾರಿಗಳೂ ಇವರೆಲ್ಲರೂ ಶಿವಾರಾಧನೆಯನ್ನು ಭಕ್ತಿಯುತರಾಗಿ ನಡೆಸಿದುದೇ ಆದರೆ, ಅವರಿಗೆ ನಿಜವಾಗಿಯೂ ಶಿವಸಾಮಿಪ್ಯವು ದೊರೆಯುವುದು. ಇದರಲ್ಲಿ ಸಂಶಯವಿಲ್ಲ. ॥೭೧॥

ಪರಶಿವನು ತನ್ನ ಪಾದಾರವಿಂದಗಳ ಕಾಂತಿಯಿಂದಲೇ ಲಕ್ಷ್ಮಿಯನ್ನೂ ಲಕ್ಷ್ಮೀಪತಿಯಾದ ವಿಷ್ಣುವನ್ನೂ, ಬ್ರಹ್ಮನನ್ನೂ ನಿರ್ಮಾಣ ಮಾಡಿಬಿಡುವನು. ಅಂತಹ ಮಹಾದೇವನಿಗೆ ನಿತ್ಯವೂ ವಂದನೆಗಳು. ಸಮಸ್ತ ವಸ್ತುಗಳಲ್ಲಿಯೂ ಶಿವಾನುಗ್ರಹದಿಂದ ಒಂದು ವಿಧವಾದ ಸೊಬಗು ಪ್ರಕಾಶಿಸುತ್ತಿರಲಿ. ವಿರುದ್ಧಮಾರ್ಗದಿಂದ ಫಲಕೊಡುವ ಕರ್ಮಫಲಗಳು ಜನರಿಗೆ ಸತ್ಫಲಪ್ರದಗಳಾಗಿ ಪರಿಣತವಾಗಲಿ. ನಶ್ವರವಾಗಿದ್ದರೂ ಪ್ರಪಂಚವು ಶಿವಾನುಗ್ರಹದಿಂದ ಸ್ಥಿರವಾಗಿ ಬೆಳಗುತ್ತಿರಲಿ. ಹಸ್ತಗತವಾದ ವಸ್ತುವೆಲ್ಲಾ ಪ್ರಶಸ್ತ ಫಲಪ್ರದಗಳಾಗಲಿ. ಇಷ್ಟು ಕಲಾಪವೆಲ್ಲವೂ ಶಿವಾನುಗ್ರಹದಿಂದಲೇ ನಡೆಯಬೇಕು. ಅಂತಹ ಶಿವಾನುಗ್ರಹವು ದೊರೆತರೆ ನಾನು ಶಿವನನ್ನೇಕೆ ಭಜಿಸದಿರಲಿ. ನಾನೇ ಶಿವಸ್ವರೂಪನಾಗುವೆನು. ॥೭೨-೭೩॥

ಕೈಯಲ್ಲಿ ಪ್ರಪಂಚವನ್ನೇ ನುಂಗುವಂತಿರುವ ಬ್ರಹ್ಮಕಪಾಲವನ್ನು ಹಿಡಿದು ಯಾವ ಯಾಗಕರ್ಮಾದಿಗಳಿಗೂ ಸುಲಭವಾಗಿ ಸಿಕ್ಕದೆ ದಕ್ಷಬ್ರಹ್ಮನ ಯಾಗವನ್ನು ನಾಶಗೊಳಿಸಿ, ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡು ಯುದ್ಧದಲ್ಲಿ ಸಿದ್ಧ

ಯಾವತ್ಪೂಷಾದಿಶೇಷಕ್ಷಿತಿರಿಯಮಖಿಲಾ ಸಾಗರಾಲೋಕಪಾಲಾ
ಚಂದ್ರೇಂದ್ರಾನಲವಾಯವೋ ವಿಧಿಹರೀಶಾನಾದಯಃ ಪರ್ವತಾಃ ।
ನದ್ಯಃ ಸದ್ಯೋಘಹೃದ್ಯೋ ಯಮನಿಯಮಪರಾ ವಿಪ್ರಜಾತಾಸು ವಿದ್ಯಾ
ವಿದ್ಯೋತಂತಾಂ ಗ್ರಹರ್ಕ್ಷಾ ಶಿವಸುದೃಶಕೃಪಾ ಪಾತ್ರಮಾತ್ರಾಃ ಪವಿತ್ರಾಃ ॥೭೫॥

ಸರ್ವಸ್ಮೈಶರ್ವಪ್ರಸಾದಾದ್ಭುವಿ ವಿಹಿತಯಶೋ ಖರ್ವವರ್ಗೈಕಭಕ್ತ್ಯಾ
ಅರ್ಚೋದ್ಯನ್ಮುಖಸನ್ಮುಖಾದಿಕರಣೈಃ ರಕ್ಷಂತು ಗಾಂ ಕ್ಷತ್ರಿಯಾಃ ।
ವಿಪ್ರಾಃ ಸತ್ಪ್ರದಿಶಾಲಾ ಯಮನಿಯಮಹಿತಾವಶ್ಯ ವೈಶ್ಯಾ ಭವಂತು
ಶೂದ್ರಾ ವಿದ್ರಾಪಿದುಃಖಾಃ ಪ್ರತಿದಿಶಮಮಲಾಃ ಸರ್ವ ಏವಂ ಸುಶೀಲಾಃ ॥೭೬॥

ಅನರ್ಗಲಂ ಮಂಗಳಮಸ್ತು ನಿತ್ಯಂ
ಯನ್ಮಂಗಳಾಯಾಃ ಪತಿಸುಪ್ರಸಾದತಃ ।

---

ವಾಗುವ, ಹಾಗೆಯೇ ತನ್ನ ಆರ್ಭಟದಿಂದ ಪ್ರಪಂಚವನ್ನೆ ನಡುಗಿಸುವ ಪಾರ್ವತೀ ಕಾಂತನಾದ ಪರಶಿವನನ್ನು ಮಾತ್ರವೇ ನಾನು ತಪ್ಪದೆ ಸೇವಿಸುವೆನು. ॥೭೪॥

ಸೂರ್ಯ, ಆದಿಶೇಷ, ಭೂಮಿ, ಸಮಸ್ತಸಾಗರಗಳು, ಲೋಕಪಾಲಕರು, ಚಂದ್ರ, ಅಗ್ನಿ, ವಾಯು, ಬ್ರಹ್ಮ, ವಿಷ್ಣು, ಈಶಾನ, ನದಿಗಳು, ಯಮನಿಯಮ ನಿರತರಾದ ವಿಪ್ರರು, ಸಮಸ್ತ ವಿದ್ಯೆಗಳು, ಗ್ರಹ ನಕ್ಷತ್ರಗಳು ಇವರೇ ಮೊದಲಾದ ಸಮಸ್ತ ವಸ್ತುಗಳೂ ಶಿವಾನುಗ್ರಹಬಲದಿಂದ ಪವಿತ್ರತಮಗಳೆನಿಸಿ ಲೋಕದಲ್ಲಿ ಬಹುಕಾಲ ಪ್ರಕಾಶಿಸುತ್ತಿರಲಿ. ಇದರಿಂದ ಶಿವಕೃಪಾಕಟಾಕ್ಷವು ಸಮಸ್ತ ಪ್ರಪಂಚಕ್ಕೂ ವ್ಯಾಪಿಸಲಿ. ॥೭೫॥

ಭೂಲೋಕದಲ್ಲಿ ಈಶ್ವರಾನುಗ್ರಹದಿಂದ ಬ್ರಾಹ್ಮಣರು ಕೀರ್ತಿಸಂಪನ್ನರಾಗಿ ಸ್ಥಿರವಾಗಿ ಜೀವಿಸಲಿ. ಕ್ಷತ್ರಿಯರು ಶಿವಾರ್ಚನೆಯೇ ಮೊದಲಾದ ಕರ್ಮಗಳಿಗೆ ಸಾಧನೆಗಳನ್ನೊದಗಿಸುತ್ತಾ ಭೂಮಿಯನ್ನು ರಕ್ಷಿಸಲಿ. ವೈಶ್ಯರು ಈಶ್ವರಾನುಗ್ರಹ ಪಡೆದು, ಯಮನಿಯಮಾದಿಗಳಿಗೆ ಹಿತಕಾರಿಗಳಾಗಿ ಸ್ಥಿರವಾಗಿ ಬಾಳಲಿ. ಶೂದ್ರರು ದುಃಖರಹಿತರಾಗಿ ಸುಶೀಲರಾಗಿ ಪ್ರತಿದಿಕ್ಕಿನಲ್ಲಿಯೂ, ವ್ಯಾಪಿಸುತ್ತಾ ಸ್ವತಂತ್ರರಾಗಿ ಬಾಳಲಿ. ॥೭೬॥

ಪ್ರಪಂಚದಲ್ಲಿ ಸರ್ವರಿಗೂ ಸರ್ವಮಂಗಳಾಪತಿಯಾದ ಪರಶಿವನ ಅನುಗ್ರಹದಿಂದ ಚಿರಕಾಲವಾಗಿ ಮಂಗಳವು ಲಭಿಸಲಿ. ಲೋಕದಲ್ಲಿ ಜನ್ಮತಾಳಿದ ಸಮಸ್ತ ಪ್ರಜೆ

ಸ್ವಸ್ತಿ ಪ್ರಜಾಭ್ಯೋ ದ್ವಿಪದಾಂ ಚತುಷ್ಪದಾಂ
ಸದಾ ವಿಪದಾಪಣಮಸ್ತು ಮಹ್ಯಂ ॥೭೭॥

ಇತಿ ಶ್ರೀ ಶಿವರಹಸ್ಯೇ ಈಶಾಖ್ಯೇ ದ್ವಾದಶಾಂಶೇ ಶಿವಗೌರೀ ಸಂವಾದೇ
ಶ್ರೀ ಕಾಶೀವಾಸ ಧರ್ಮಕಾಶ್ಯಂತಃಸ್ಥಿತಸಮಸ್ತದೇವತಾ ಪ್ರಾರ್ಥನ
ಕಥಾವರ್ಣನಂ ನಾಮ ಚತ್ವಾರಿಂಶೋಧ್ಯಾಯಃ

---

ಗಳಿಗೂ, ತಿರ್ಯಗ್ಜಂತುಗಳಿಗೂ ಸಮಸ್ತ ಪ್ರಾಣಿವೃಂದಕ್ಕೂ ಮಹಾದೇವನು ಆಯುರಾರೋಗ್ಯಾದಿಗಳನ್ನು ಕೊಟ್ಟು ರಕ್ಷಿಸಲಿ. ಸಮಸ್ತ ಪುರಾಣೇತಿಹಾಸವನ್ನೂ ವಿವರಿಸಲಪೇಕ್ಷೆಯುಳ್ಳ ನನಗೆ ಮಹೇಶ್ವರನು ಶಕ್ತಿಜ್ಞಾನಾದಿಗಳನ್ನು ಕರುಣಿಸಿ ನನ್ನ ಸಕಲ ಕಾರ್ಯಕ್ಕೂ ನಿರ್ವಿಘ್ನತೆಯುಂಟಾಗುವಂತೆ ಅನುಗ್ರಹಿಸಲಿ" ಎಂದು ಸೂತಮಹರ್ಷಿಗಳು ಸಮಸ್ತ ಮುನಿವೃಂದಕ್ಕೂ ತಿಳಿಯಪಡಿಸುತ್ತಾ ಪರಶಿವಧ್ಯಾನೋನ್ಮುಖರಾದರು. ॥೭೭॥

ಇಲ್ಲಿಗೆ ಶ್ರೀ ಶಿವರಹಸ್ಯದ ಈಶನಾಮಕವಾದ ಹನ್ನೆರಡನೆಯ ಅಂಶದಲ್ಲಿ
ಪಾರ್ವತೀಪರಮೇಶ್ವರ ಸಂವಾದ ರೂಪವಾಗಿ ತಿಳಿದುಬರುವ ಕಾಶೀವಾಸ ಧರ್ಮ,
ಮತ್ತು ಕಾಶೀಕ್ಷೇತ್ರಾಂತರ್ಗತವಾದ ಸಮಸ್ತ ದೇವತಾಪ್ರಾರ್ಥನೆಯನ್ನು
ತಿಳಿಸುವ ನಲವತ್ತನೆಯ ಅಧ್ಯಾಯವು ಮುಗಿದುದು.

# ಅನುವಾದಕ ಪ್ರಾರ್ಥನಾ

ಭಾರದ್ವಾಜಕುಲೋತ್ಪನ್ನೋ ವಿಪ್ರವಂಶಸಮುದ್ಭವಃ
ಗೈರ್ವಾಣ್ಯಾಮಥ ಕಾರ್ಣಾಟ್ಯಾಂ ದತ್ರವಿದ್ವತ್ಪರೀಕ್ಷಕಃ
ಗಂಗಾಧರಾಭಿಧಾನೋಹಂ ವೇಂಕಟೇಶತನೂಭವಃ
ಶ್ರೀಮಚ್ಛಿವರಹಸ್ಯಾಖ್ಯಂ ಪುರಾಣಂ ಸ್ಕಂದಬೋಧಿತಂ
ಸತ್ಕರ್ಣಾಟಕಭಾಷಾಯಾಂ ವ್ಯಾಖ್ಯಾಯ ವ್ಯಲಿಖಂ ಮುದಾ
ಪ್ರಮಾದಾದ್ಬಹವೋ ದೋಷಾಃ ವಿದ್ಯೇರನ್ ಲೇಖನಾದಿಷು
ತತ್ಸರ್ವಂ ಕ್ಷಂತುಮರ್ಹಂತಿ ದೋಷಜ್ಞಾ ಗುಣಿನೋ ಬುಧಾಃ
ಗ್ರಂಥಪ್ರಸಾರಕಾರ್ಯೇಷು ಕರ್ಣಾಟಕಮಹೀಪತಿಃ
ರಾಜಾ ಶ್ರೀ ಜಯಚಾಮೇಂದ್ರಃ ಸರ್ವಸಾಹಾಯ್ಯಮಾತನೋತ್
ಭಗವಾನಂಬಿಕಾಜಾನಿಃ ಪಾಯಾತ್ತಂ ಸಕುಟುಂಬಕಂ
ಶ್ರೀಕಂಠದತ್ತನೃಸಿಂಹರಾಜಾಖ್ಯೋ ರಾಜಬಾಲಕಃ
ಚಿರಂ ಜೀಯಾತ್ಸದಾ ಭೂಮೌ ವಿದ್ಯಾವಿನಯಸಂಪದಾ

# ಮಂಗಳಾಶಂಸನಂ

ಮಂಗಳಂ ಗಿರಿಜಾಧಿರಾಜಗೆ
ಮಂಗಳಂ ಗಣನಾಥಸ್ಕಂದಗೆ
ಮಂಗಳಂ ಹರಭಕ್ತರೆನಿಸಿದ ವ್ಯಾಸಮುನಿವರಗೆ
ಮಂಗಳಂ ಜಯಚಾಮಭೂಪಗೆ
ಮಂಗಳಂ ನೃಪ ಬಂಧುವರ್ಗಕೆ
ಮಂಗಳಂ ಜಗಕಕ್ಕೆ ಶ್ರೀಚಾಮುಂಡಿಯೊಲವಿಂದೆ



॥ ಶ್ರೀಃ ॥